ಶ್ರೀ ಹಾನಗಲ್ ಕುಮಾರ ಸ್ವಾಮಿಗಳು
ದಿ 19-2-1930 ರಂದು ಸಂಜೆ ೬ ಗಂಟೆಗೆ
ಶಿವಯೋಗ ಮಂದಿರದಲ್ಲಿ ಲಿಂಗೈಕ್ಯರಾದರು
ಶಿವಾನುಭವ ಸಂ 4, ಸಂಚಿ 11 ಪು 485 ಕ್ರಿ. 1930,

# ವಿಷಯಾನುಕ್ರಮಣಿಕೆ.



# ಶಿವಾನುಭವ.

ಇದು ವೀರಶೈವ ಧಾರ್ಮಿಕ ಉನ್ನತಿಯ ಬಗ್ಗೆ ಹೆಣಗಾಡುವ ಮೇಲ್ತರದ ಮಾಸಪತ್ರಿಕೆಯು. ಇದು ೬೪ ಪುಟಗಳುಳ್ಳದ್ದಿದ್ದು ಚಂದಾ ಮಾತ್ರ ನಾಲ್ಕೇ ರೂಪಾಯಿ. ಇದು ಪ್ರತಿತಿಂಗಳ ಮಧ್ಯಕ್ಕೆ ಹೊರಡುತ್ತದೆ. ಲೇಖಕರು ಚಿಕ್ಕ ಚಿಕ್ಕ ಲೇಖಗಳನ್ನು ಕಳಿಸಬೇಕು. ವೀರಶೈವರ ಉನ್ನತಿಯ ಪರವಾಗಿ ಯಾರು ಬೇಕಾದವರು ಬರೆದರೂ ಅವಕಾಶ ಸಿಗುವದು. ಕೆಲವರು ಇವರ ಹಿಂದಿನ ಸಂಚಿಕೆಗಳನ್ನು ಬೇಡುತ್ತಾರೆ. ಆದರೆ ೧-೨ ಸಂಚಿಕೆಗಳು ಸಿಗುವದೇ ಇಲ್ಲ. ೩ ರಿಂದ ೧೨ ರ ವರೆಗೆ ಮಾತ್ರ ಸಿಗುತ್ತವೆ. ಬೇಕಾದವರು ತೀವ್ರ ತರಿಸಿಕೊಳ್ಳಬಹುದು. ತಡವಾದರೆ ಪ್ರತಿಗಳು ಸಿಗಲಾರವು. ಯಾಕಂದರೆ ಪ್ರತಿಗಳು ಸ್ವಲ್ಪೇ ಉಳಿದಿವೆ. ಪ್ರತಿಯೊಂದು ಸಂಚಿಕೆಗೆ ೮ ಆಣೆ.

ಮ್ಯಾನೇಜರ.


ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೨ [ಅ] ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ

ವರ್ಷ ೪] ಏಪ್ರೇಲ ೧೯೩೯ [ಸಂಚಿಕೆ ೧

## ಆಂಧ್ರ ವೀರಶೈವರು.

(ಪಂಡಿತ, ಚಿದಿರೆ ಮಠದ, ವೀರಭದ್ರಶರ್ಮ ಹೈದರಾಬಾದ್.)

(ಕಾಶಿಯಿಂದ)




ಚಕ್ಷಣರಾದ ಮಹರ್ಷಿಗಳೂ ಆಚಾರ್ಯರೂ ಜಾತಿ ವಿಭಾಗವನ್ನೇರ್ಪಡಿಸಿ ಆಗಿನ ಸಮಯದಲ್ಲಿ ಮಾನವ ಸಮಾಜಕ್ಕೆ ಮಹದುಪಕೃತಿಗೈದರೆನ್ನುವುದು ಸರ್ವ ಸಮ್ಮತವು. ಈ ವರ್ಣವಿಭಾಗದಲ್ಲಿ ಒಂದು ಸೂಕ್ಷ್ಮತತ್ವವು ದೃಗ್ಗೋಚರವಾಗುವದು. ಪ್ರತಿಯೊಬ್ಬ ಮನುಷ್ಯನೂ ಇಡೀ ಪ್ರಪಂಚದಲ್ಲಿರುವ ಸಮಸ್ತ ಜನರೊಡನೆ ಸಂಬಂಧವನ್ನು ಕಲ್ಪಿಸಿಕೊಂಡು ಜೀವಿಸುವದೆಂದರೆ ಮಹಾ ಸಂಕಟ. ಆದುದರಿಂದ ಸ್ವಲ್ಪ ಸ್ವಲ್ಪ ಸಂಖ್ಯೆಯಿಂದ ಭಿನ್ನ ಭಿನ್ನ ಸಂಘ (ಜಾತಿ, ಅಥವಾ ವರ್ಣ) ಗಳನ್ನು ನಿರ್ಮಿಸಿಕೊಂಡನು. ತನ್ಮೂಲಕ ಅವನು ನನ್ನ ಮತ, ನನ್ನ ದೇವರು, ನನ್ನ ದೇಶ ಮುಂತಾಗಿ ಅಭಿಮಾನವನ್ನು ತಾಳಿ ಸ್ವಸಂಘಾಭಿವೃದ್ಧಿಗೆ ಕಾರಣೀಭೂತನಾಗುತ್ತಿದ್ದನು. ದುರ್ದೈವದಿಂದಲೋ ಸುದೈವದಿಂದಲೋ ಹೇಳಲಾರೆನಾಗಲಿ ಸಾಂಘಿಕಜೀವನವಿತ್ತೀಚಿಗೆ ಕೆಲವು ವರ್ಷಗಳಿಂದ ಕೆಟ್ಟು ಹೋಗಿರುವುದು. ಈ ಸಾಂಘಿಕ ಜೀವನವನ್ನು ಮತ್ತೊಂದು ರೀತಿಯಿಂದ ಪ್ರಸ್ತುತದಲ್ಲಿ ಸಂಘಟನೆ ಮಾಡಿ ಜಾಗೃತಿಯನ್ನು ಹುಟ್ಟಿಸುತ್ತಿರುವವರೆಂದರೆ ದೇಶ ನಾಯಕರು (*Leaders*), ಈ ಮಹಾನುಭಾವರಿಂದಲೇ ನಮ್ಮ ದೇಶವೀಗೀಗ ಸ್ವದೇಶ, ಸ್ವಜಾತಿ, ಸ್ವಭಾಷೆಗಳಿಗಾಗಿ ಹೋರಾಡುತ್ತಿರುವುದು.

ಈ ಮೇಲೆ ತೋರಿಸಿದಂತೆ ಒಂದು ಜಾತಿಯೆನಿಸಿದ ವೀರಶೈವ ಮತವೂ ಭಾರತದೇಶದ ದಕ್ಷಿಣ ದಿಕ್ಕಿನಲ್ಲಿ ವಿಶೇಷವಾಗಿ ವ್ಯಾಪಿಸಿರುವದು. ಈ ಮತವು ಯಾವ ಕಾಲದಲ್ಲಿ ಮಹಾವೈಭವವನ್ನನುಭವಿಸಿತೋ! ಬಲವಾದ ಆಧಾರಗಳಿನ್ನೂ ದೊರೆತಿಲ್ಲವು ಪರಂತು ಅರುವತ್ತು ವರ್ಷಗಳ ಹಿಂದೆ ಮಹಾ ದುಸ್ಥಿತಿಯಲ್ಲಿದ್ದಿತೆಂತಲೇ ಹೇಳಬಹುದು. ಆ ಮೇಲೆ ಒಬ್ಬೊಬ್ಬ ಕ್ರಾಂತಿಕಾರಿಗಳಾದ ಮಹಾನುಭಾವರುದ್ಭವಿಸಿ, ಮೆಲ್ಲ ಮೆಲ್ಲಗೆ ಸ್ವಜಾತಿ(ವೀರಶೈವ) ಜನಾಂಗದ ಸೇವೆಯನ್ನು ಮಾಡಲುಪಕ್ರಮಿಸಿ ನವೀನತೆಯನ್ನು ತೋರಿಸಿ ಕೊಟ್ಟರೆಂಬುವದರಲ್ಲಿ ಸಂದೇಹವಿಲ್ಲವು. ಆದರೆ ಆಂಧ್ರ (ತೆಲುಗು) ವೀರಶೈವರು ಕೇವಲ ಸಮೀಪ ಬಾಂಧವರಾದಾಗ್ಯೂ ಬರು ಬರುತ್ತ ಅವರ ಮಾಹಿತಿಯು ಕಡೆಗೆ ಕನ್ನಡ ವೀರಶೈವರ ದೃಷ್ಟಿ ಹಿಂದಿರುಗಲಾರಂಭಿಸಿದೆ. ಆಂಧ್ರ ವೀರಶೈವರ ಸರ್ವ ವಿಷಯಗಳನ್ನೂ ಸಂಕ್ಷೇಪದಿಂದ ತಿಳಿಸಲು ಯತ್ನಿಸುತ್ತೇನೆ. ಇದರಿಂದ 'ಶಿವಾನುಭವ' ಪಾಠಕರ ಅಭಿರುಚಿಯೂ, ನನ್ನ ಮುಂದಾಳುಗಳ ನಿರ್ಮಲ ದೃಷ್ಟಿಯೂ ಸ್ವಲ್ಪಾದರಿತ್ತ ಕಡೆ ಆಕರ್ಷಿತವಾದರೆ ನನ್ನ ಈ ಅಲ್ಪ ಶ್ರಮೆಯನ್ನು ಸಫಲವೆಂದು ಸಂಭಾವಿಸುವೆನು.

**ಜನಾಂಗದ ಸ್ವರೂಪ.—** ಆಂಧ್ರವೀರಶೈವರು ಅನೇಕ ವಿಷಯಗಳಿಂದ ಕನ್ನಡ ವೀರಶೈವರಿಗಿಂತಲೂ ಬಹಳ ಹಿಂದುಳಿದವರಾಗಿರುತ್ತಾರೆ. ಪರಂತು ಸದಾಚಾರ ಸೌಜನ್ಯಗಳಿಂದ ಸ್ವಲ್ಪ ಮುಂದೇ ಇರುವರು. ಪ್ರಾಯಃ ಇವರು ಒಟ್ಟಿನಮೇಲೆ ಕಡಿಮೆ ಗೌರವವುಳ್ಳವರಾದಾಗ್ಯೂ ಕೆಲವು ವಿಶೇಷ ಸ್ಥಳಗಳಲ್ಲಿ ಮಾತ್ರ ಬ್ರಾಹ್ಮಣ ತುಲ್ಯವಾದ ಮರ್ಯಾದೆಯಿಂದೊಡಗೂಡಿರುತ್ತಾರೆ. ಇವರಲ್ಲಿ ಕನ್ನಡ ವೀರಶೈವರಲ್ಲಿದ್ದಷ್ಟು ಭಿನ್ನ ಜಾತಿಗಳು ಸಿಗುವದಿಲ್ಲ. "ಜಂಗಮ, (ಮಾಹೇಶ್ವರ ಅಥವಾ ಅಯ್ಯನವರು) ಬಣಜಿಗ. ಶೀಲವಂತ" ರೆಂಬ ಸ್ವಲ್ಪ ಭೇದಗಳೇ ಮುಖ್ಯವಾಗಿ ಆಂಧ್ರ ವೀರಶೈವರ ಜನಾಂಗವೆಂದು ಹೇಳಬಹುದು. ಆದರಂತೆ ಉಚ್ಚ ವಿದ್ಯಾವಂತರೂ, ಹತ್ತುಲಕ್ಷ ರೂಪಾಯಿಗಳಿಗಿಂತಲೂ ಹೆಚ್ಚು ಆಸ್ತಿಯುಳ್ಳ ಶ್ರೀಮಂತರೂ ಇಲ್ಲವೆಂತಲೇ ನಿಶ್ಚಯಿಸಬೇಕಾಗುವದು. ಇದು ಸರ್ವ ಸಾಮಾನ್ಯ ವಿಷಯವೆಂದು ಪಾಠಕರು ಗ್ರಹಿಸಬೇಕು. ಸದ್ಯಃ ಚಳವಳಿಯಲ್ಲಿ ಬಹಳ ಮುಂದುವರಿದ ಆಂಧ್ರ ದೇಶದ ಅಸ್ಪೃಶ್ಯ (ಹೊಲೆಯ)ರು ಸಹ ಎಚ್ಚತ್ತು ಸ್ವಜಾತೀಯ ಮಹಾ ಸಭೆ ಮೊದಲಾದವುಗಳಿಂದ

ಉನ್ನತಿ ಮಾರ್ಗವನ್ನು ಹಿಡಿದಿದ್ದಾರೆ. ಪರಂತು ಆಂಧ್ರ ವೀರಶೈವರು ಮಾತ್ರ ಸಾಮಾಜಿಕ ಶೈಕ್ಷಣಿಕ ವಿಚಾರಗಳಲ್ಲಿ ಅಸ್ಪೃಶ್ಯರಿಗಿಂತಲೂ ಹಿಂದುಳಿದಿರುತ್ತಾರೆಂಬುದು ವಿಷಾದ! ವಿಷಾದ!!,

ಆಂಧ್ರವೀರಶೈವರು ನಿಜಾಂದೇಶದ "ಸಂಗರೆಡ್ಡಿ ಮಹಬೂಬನಗರ್, ನಿಜಾಮಾಬಾದ್, ನಲ್ಲಗೊಂಡ, ಅತ್ರಾಫಬಲ್ದಾ, ವರಂಗಲ್, ಮೆದಕ್, ಕರೀಂನಗರ," ಎಂಬ ಜಿಲ್ಲೆಗಳಲ್ಲಿಯೂ ಮದ್ರಾಸ ಪ್ರೆಸಿಡೆನ್ಸಿಯ," ಕೃಷ್ಣಾ ಗುಂಟೂರು, ಗೋದಾವರಿ, ವಿಶಾಖಪಟ್ಟಣಂ, ಗಂಜಾಂ, ನೆಲ್ಲೂರು, ಕಡಪ, ಕರ್ನೂಲ, ಅನಂತಪುರಂ" ಎಂಬ ಜಿಲ್ಲೆಗಳಲ್ಲಿಯೂ ಸ್ವಲ್ಪ ವಿಶೇಷವಾಗಿ ವಾಸಿಸುತ್ತಾರೆ. ಇವರ ಸಂಖ್ಯೆಯೆಷ್ಟಿರುವದೋ ತಿಳಿದುಕೊಳ್ಳಲು ಪ್ರತ್ಯೇಕವಾಗಿ ಯಾರೂ ಕಷ್ಟ ಪಟ್ಟಿಲ್ಲವು. ಆದರೆ ಮೂರು ಅಥವಾ ನಾಲ್ಕು ಲಕ್ಷ ಸಂಖ್ಯೆಯೆಂಬದಾಗಿ ಜನಶ್ರುತಿಯುಂಟು. ಇವರ ಭೇದಗಳನ್ನೀ ಕೆಳಗೆ ವಿವರಿಸುತ್ತೇನೆ.

**ಜಂಗಮರುಃ**— ಈ ಮೊದಲನೆಯ ವರ್ಣದವರಿಗೇನೇ ಮಠಸ್ಥರೆಂಬ ನಾಮವು ಬಹುಶಃ ರೂಢಿಯಲ್ಲಿರುತ್ತದೆ. ಲಿಂಗವಂತರಾದ ಬಣಜಿಗ, ಶೀಲವಂತರೂ, ಕೆಲವು ಕಡೆ ಅಲಿಂಗಿಗಳಾದ ಕುರುಬ, ಅಗಸ, ಹಜ್ಜಾಮ, ಕುಂಬಾರರೂ ಇವರ ಶಿಷ್ಯರಾಗಿರುತ್ತಾರೆ. ಇವರು ಬಣಜಿಗ ಶೀಲವಂತರೆಂಬವರಲ್ಲಿ ಹೊರತು ಮತ್ತಾರಲ್ಲಿಯೂ ಅನ್ನಪಾನಾದಿಗಳನ್ನು ಸ್ವೀಕರಿಸುವದಿಲ್ಲ. ಇವರಲ್ಲಿ 'ಮಠ, ಮಡಪತಿ, ಗಣಾಚಾರಿ' ಎಂಬ ಭೇದಗಳಿದ್ದರೂ ಪ್ರಾಯಃ ಪರಸ್ಪರ ಶರೀರಸಂಬಂಧವುಳ್ಳವರಾಗಿರುತ್ತಾರೆ. ಪರಂತು ಕೆಲವೆಡೆಯಲ್ಲಿ ಮಾತ್ರ ಪ್ರಾಮಾಣಿಕರಾದ ಮಠದವರು ಮಡಪತಿಯವರ ಕನ್ಯೆಯನ್ನು ಸ್ವೀಕರಿಸುವದಿಲ್ಲ. ಕೆಲವರು ದೀಕ್ಷೆಯನ್ನುಮಾಡಿ ಕನ್ಯೆಯನ್ನು ತೆಗೆದುಕೊಳ್ಳುತ್ತಾರೆ. ಇನ್ನು ಕೆಲವು ಪ್ರಾಂತದ ಮಾಹೇಶ್ವರ (ಜಂಗಮ) ರಲ್ಲಿ ಮಡಪತಿಯೆಂಬ ಪಂಗಡವೇ ಇಲ್ಲ. ಆಂಧ್ರ ಜಂಗಮರು ಬಹಳಮಾಡಿ ಕೇವಲ ಬಡವರಲ್ಲವಾದರೂ ಭಿಕ್ಷಾವೃತ್ತಿಯೇ ಸಂಪೂರ್ಣವಾಗಿ ಇವರ ಜೀವನಾಧಾರವಾಗಿದೆ. ಭೂಸ್ವಾಮಿಗಳು ಬಹಳ ಸ್ವಲ್ಪವಾಗಿ ಸಿಗುವರು. ಆದುದರಿಂದ ಒಕ್ಕಲತನವನ್ನಾಚರಿಸುವವರೂ ಬಹಳ ಕಡಿಮೆ. ಇನ್ನೊಂದು ವಿಶೇಷವೇನಂದರೆ ಆಂಧ್ರಮಹೇಶ್ವರರಲ್ಲಿ ವೈದ್ಯರು ವಿಶೇಷವಾಗಿರುತ್ತಾರೆ. ಇವರಲ್ಲೀ ವೃತ್ತಿ ಈಗಿನದೇನಲ್ಲವು. ಪ್ರಾಚೀನವಾದುದೆಂದೇ ನಿಸ್ಸಂದೇಹವಾಗಿ

ಯೊಪ್ಪಿಕೊಳ್ಳಬಹುದು. ಕೊಟ್ಟೂರು ಬಸವರಾಜನೆಂಬ ಕೊಲನುಪಾಕೆ (ಕೊಲ್ಲಿಪಾಕೆ)ಯು ಮಾಹೇಶ್ವರನು ದ್ವಿತೀಯಧನ್ವಂತರಿಯಂತೆ ಪ್ರಖ್ಯಾತನಾದನು. ಈತನ ವಿಷಯವಾಗಿಯೂ ಪ್ರಾಂತದಲ್ಲನೇಕ ದಂತಕಥೆಗಳು ಪ್ರಚಾರದಲ್ಲಿವೆ. ಈತನು ರಚಿಸಿದ "ಬಸವರಾಜೀಯ"ವೆಂಬ ಮಹೋತ್ಕೃಷ್ಟವೂ ಮತ್ತು ದೊಡ್ಡದೂ ಆದ ಸಂಸ್ಕೃತಾಂಧ್ರ ವೈದ್ಯಗ್ರಂಥವು ಆಂಧ್ರದೇಶದ ಸರ್ವಪಂಡಿತ ಮಾನ್ಯವಾಯಿತಲ್ಲದೆ ಈಗಿನ ಸಮಸ್ತ ವೈದ್ಯರಿಗೂ ಸುಪಾಠ್ಯವಾಗಿದೆ. ಅದೀಗ ಹತ್ತೆಂಟು ಮುದ್ರಣ(*Edition*)ಗಳನ್ನು ಹೊಂದಿ ಪ್ರಚಾರದಲ್ಲಿದೆ. ಈಗಲೂ ಸುಪ್ರಸಿದ್ಧರಾದ ಆಂಧ್ರ ಜಂಗಮ ವೈದ್ಯರು ಹೈದರಾಬಾದ, ಭುವನಗಿರಿ, ನಲ್ಲಗೊಂಡ, ವರಂಗಲ್ಲು, ಬೆಜವಾಡ, ಕಂದುಕೂರು, ಈಮುನ, ಕಾಕಿನಾಡ, ಮೊದಲಾದ ಪ್ರಾಂತಗಳಲ್ಲಿ ವಿಶೇಷವಾಗಿ ವಾಸಿಸುತ್ತಾರೆ. ಕನ್ನಡ ದೇಶದಲ್ಲಿ ಈಗೀಗ ವಿಶೇಷಜ್ಞರಾದ ಮಾಹೇಶ್ವರರ ಹೊರತು ಸಾಮಾನ್ಯಜಂಗಮರಿಗೆ "ಗಣಪತಿ ಪೂಜಾ" ಮಂತ್ರಗಳು ಸಹ ಬರುವದಿಲ್ಲ. ಈ ವಿಷಯದಲ್ಲಿ ಆಂಧ್ರ ಮಾಹೇಶ್ವರರು ವಿಶೇಷಜ್ಞರೆನ್ನುವದು ಬಹುಸತ್ಯ. ಪ್ರತಿಯೊಬ್ಬರಿಗೂ [ವಿಶೇಷವಾಗಿ ಮಠ ಮಠಪತಿಗಳಿಗೆ] ಲಿಂಗಧಾರಣ, ಗರ್ಭಾಧಾನ, ವಿವಾಹಾದಿ ಉಪಯುಕ್ತ ವಿಧಾನಮಂತ್ರಗಳು ತಪ್ಪದೆ ಕಂಠಸ್ಥವಾಗಿವೆ. ಮಂತ್ರಗಳಲ್ಲಿ ತಪ್ಪುಗಳೇ ಇರಲಿ ಒಪ್ಪುಗಳೇ ಇರಲಿ ಅದು ಬೇರೆ ಪ್ರಕರಣವಷ್ಟೆ. ಇವರು ನೂರಾರು ಮಂದಿದ್ದರಿಗೆ ಒಳ್ಳೆ ದರ್ಪದಿಂದ ತಮಗೆ ಬಂದ ವಿಧಾನಗಳನ್ನು ಮಾಡಿಸುತ್ತಾರೆ. ಸ್ವಲ್ಪಾದರೂ ಸಂಸ್ಕೃತ ವಿದ್ಯಾಗಂಧವನ್ನರಿಯದ ಆಂಧ್ರಮಾಹೇಶ್ವರರು ಇಷ್ಟರಮಟ್ಟಿಗೆ ಪ್ರತಿಭೆಯುಳ್ಳವರೆಂಬುದು ವಿಶೇಷವೇ ಸರಿ. ಹರಂತು ಇವರೊಳಗೆ ಶಾಸ್ತ್ರೋಕ್ತವಿಧಾನಗಳನ್ನು ಚನ್ನಾಗಿಬಲ್ಲ ವೈದಿಕವಿದ್ವಾಂಸ [ಪುರೋಹಿತ] ರಾರೂ ಈಗಿಲ್ಲನೆನ್ನುವದು ನಿಜವೇ! ಆದರೂ ನೂರಾರು ಬ್ರಾಹ್ಮಣ ಜನರು ಬೆರಗಾಗುವಂತೆ ವೈದಿಕ ವಿಧಾನಗಳನ್ನು ಆರ್ಭಟದಿಂದ ಮಾಡಿಸುತ್ತಿದ್ದ "ಚಂದಾಯಪೇಟ ಚಿಂತಾಮಣಯ್ಯ"ನವರು ಹೈದರಾಬಾದು ಪ್ರಾಂತದಲ್ಲೊಮ್ಮೆ ಹಾದೆನಿಸಿಕೊಳ್ಳಲಿಲ್ಲವೆ?

'ಶಿವಾನುಭವ'ದ ಹತ್ತನೆಯ ಸಂಚಿಕೆಯ 'ಮಲಬಾರು ವೀರಶೈವರಸ್ಥಿತಿಯೆಂ'ಬ ಲೇಖದಲ್ಲಿ 'ತೆಲುಗು ವೀರಶೈವರಿಗೆ ಪಂಡಾರಂ' ಅಯ್ಯರ್, ಎಂಬ ಹೆಸರುಗಳಿವೆಯೆಂದು ಬರೆದಿರುತ್ತದೆ. ಇದು ಏಕದೇಶದ ವಿಷ

ಯವಲ್ಲದೆ, ಈ ಶಬ್ದಗಳು ಕೂಡ ತಮಿಳು ಭಾಷೆಗೆ ಸೇರಿದವುಗಳಾಗಿರುತ್ತವೆ. ಆಂಧ್ರ (ತೆಲುಗು) ಮಾಹೇಶ್ವರರಿಗೆ ತಮ್ಮ ದೇಶದ ಸರ್ವತ್ರ "ಜಂಗಮಯ್ಯಲು ಜಂಗಾಲು ಜಂಗಮದೇವರಲು" ಎಂಬ ಹೆಸರುಗಳೇ ಪ್ರಚಾರದಲ್ಲಿವೆ. ಶಿಕ್ಷಿತ ಸಮಾಜಕ್ಕೆ 'ಮಾಹೇಶ್ವರ' ಎನ್ನುವ ನಾಮವು ಕೂಡ ಇವರದೇ ಎಂದು ಪರಿಚಯವುಂಟು.

**ಬಣಜಿಗರು:**— ಇವರಿಗೀದೇಶದಲ್ಲಿ "ಲಿಂಗಬಲಿಜೆಲು" ಎಂಬ ಹೆಸರೇ ಪ್ರಸಿದ್ಧವಾದುದು. (ಏಕಂದರೆ! ಬರೇ 'ಬಲಿಜಲು' ಅಂದರೆ ಲಿಂಗವಿಲ್ಲದ ಮತ್ತೊಂದು ಜಾತಿಗೆ ಬೋಧೆಯಾಗುತ್ತದೆ. ಆದುದರಿಂದ 'ಲಿಂಗ' ವನ್ನು 'ಬಲಿಜ' ದಹಿಂದೆ ಸೇರಿಸುತ್ತಾರೆ. ಆದರೂ ಪಶ್ಚಿಮಾಂಧ್ರರಲ್ಲಿ ಲಿಂಗವಂತ ಬಣಜಿಗರಿಗೆ "ಬಲಿಜಲು" ಎನ್ನುವ ರೂಢಿಯುಂಟು) ಆಂಧ್ರವೀರಶೈವರಲ್ಲಿ ಮುಖ್ಯಜನಾಂಗವೆಂದರೆ ಈ ಬಣಜಿಗರೇ! ಕನ್ನಡ ದೇಶದಲ್ಲಿರುವ "ಪಂಚಮಸಾಲಿ" ಯವರೆಂಬ ವರ್ಣವೇ ಜಂಗಮಜಾತಿಯವರ ತರುವಾಯ ಹುಟ್ಟಿರುವದೆಂತಲೂ, ಬಣಜಿಗರಿಗಿಂತ ಪ್ರಾಚೀನವೆಂತಲೂ, ಕನ್ನಡ ದೇಶದ ಕೆಲವು ಪಂಡಿತರೂಹಿಸುವದುಂಟು. ಆದರೆ ನಿಯಮಕ್ಕೆ ಬಲವತ್ತರವಾದ ಚರಿತ್ರೆಸಾಧನೆಯೇನೂ ಕಾಣುವದಿಲ್ಲ. ಆಂಧ್ರ ದೇಶದಲ್ಲಿ ಸರ್ವತ್ರ ಬಣಜಿಗರುಂಟು. ಇವರಲ್ಲಿಯೇ 'ಕೋರೆಶೆಟ್ಟಿ' 'ವಾಲೆಶೆಟ್ಟಿ' ಮುಂತಾದ ವಿಶಿಷ್ಟಹೆಸರುಗಳು ಪ್ರಮುಖವಂಶಗಳಿಗಿವೆ. ಈ ಹೆಸರುಗಳು 'ಮುಖಾರಿ' 'ಪುರಾರಿ' ಗಳೆಂಬ ಆಗಮೋಕ್ತ ಶಬ್ದಗಳ ಅನುಕರಣಗಳೆಂತಲೂ, ವೀರಶೈವರಲ್ಲಿ ಪ್ರಾಚೀನರಾದ "ಪಂಚಶೆಟ್ಟಿ" ರೂಪದ್ಯೋತಕಗಳೆಂತಲೂ, ನಮ್ಮ (ಆಂಧ್ರ) ದೇಶದಲ್ಲಿ ಪರಂಪರವಾಗಿ ಬಂದಿದೆ. (ಪ್ರಾಜ್ಞರಿದನ್ನು ಪರಿಶೋಧಿಸಬೇಕು) ವಿಶೇಷಾವಸರಗಳಲ್ಲಿ, ಮಾಹೇಶ್ವರರ ತರುವಾಯ ಮೇಲೆಕಾಣಿಸಿದ ಶೆಟ್ಟರಿಗೇನೇ ಅಗ್ರತಾಂಬೂಲವು ಸಿಗುವದು, ಪಶ್ಚಿಮಾಂಧ್ರದೇಶದ ಕೆಲವು ಗ್ರಾಮಗಳಲ್ಲಿ ಶೆಟ್ಟರಿಗೆ ಬಹಳ ಅಧಿಕಾರವಿದೆ. ಆಯಾ ಗ್ರಾಮಗಳ ಸಂತೆಗಳಲ್ಲಿ ವಿಶೇಷ ಪದಾರ್ಥಗಳು ಶೆಟ್ಟರು ನಿರ್ಣಯಿಸಿದ ಬೆಲೆಗೆ ವಿಕ್ರಯಿಸಲ್ಪಡಬೇಕಾಗುವದು. ವೈಶ್ಯರಾದಿಯಾಗಿ ಸಮಸ್ತವ್ಯಾಪಾರಿಗಳೂ ಶೆಟ್ಟರೊಡನೆ ಸಲಹೆಯನ್ನು ಹೊಂದುತ್ತಾರೆ. ಒಟ್ಟಿನಮೇಲೆ ಬಣಜಿಗರಲ್ಲಿ ವ್ಯಾಪಾರಿಗಳ ಸಂಖ್ಯೆ ಕಡಿಮೆಯಾಗಿಯೇ ಇರುತ್ತದೆ. ಇವರ ಮುಖ್ಯ ವೃತ್ತಿಯೊಕ್ಕಲತನವೇ! ಸಾಮಾನ್ಯವಾಗಿ ಉಳ್ಳಿಗಡ್ಡೆ, ಮೆಣಸಿನಕಾಯಿ, ಸೊದ

ಲಾದ ನಿತ್ಯೋಪಯುಕ್ತವಸ್ತುಗಳನ್ನು ಬೆಳೆಸುತ್ತಾರಾದುದರಿಂದ ಇವರನ್ನು ಇತರ ಮತದ ಮಿತ್ರರು. ಪರಿಹಾಸ್ಯಕ್ಕಾಗಿ 'ಉಳ್ಳಿಗಡ್ಡೆ ಬಣಜಿಗ'ರೆಂದು ಕರೆಯುವದುಂಟು. ಕನ್ನಡ ದೇಶದ ಬಣಜಿಗರಲ್ಲಿರುವ ಯಾವ ಚಾಕಚಕ್ಯಗಳೂ ಇವರಲ್ಲಿರುವದಿಲ್ಲ. ಸಾಮೂಹಿಕ ದೃಷ್ಟಿಯಿಂದ ಇವರು ಮಂದಮತಿಗಳೇ ಎಂಬುದು ಸತ್ಯದೂರವಲ್ಲ. ಇವರಲ್ಲಿಯೇ ಕೇವಲ ವೃತ್ತಿಯಿಂದಗಲಿದ 'ಬಳೆಗಾರ' (ಗಾಜುಲವಾ) ರೆಂಬ ಬೇರೊಂದು ಜಾತಿಯಿದೆ. ಬಹುಶಃ ಈಯುಭಯ ಜಾತಿಗಳಲ್ಲಿ ಪರಸ್ಪರ ಶರೀರಸಂಬಂಧವಿರುವುದರಿಂದ ಇವರ ಭೇದವಷ್ಟೇನೂಡೆದು ಕಾಣುವದಿಲ್ಲ. ಆದರೆ ಕೆಲವುಕಡೆ "ನಮ್ಮಗಿಂತಲೂ ಬಳೆಗಾರರು ಕಡಿಮೆ" ಎಂದು ತಿಳಿಯುವ ಬಣಜಿಗರುಂಟು. ಈಯುಭಯರ ಆಚಾರ ವಿಚಾರಗಳು ಮಧ್ಯಮ ತರಗತಿಯಲ್ಲಿದ್ದು ಕನಿಷ್ಠತರಗತಿಯನ್ನು ಕಾಣುತ್ತಿವೆ. ತಕ್ಕಮಟ್ಟಿಗೆ ಜಂಗಮಭಕ್ತಿಯುಕ್ತರಾಗಿರುವರಲ್ಲಡೆ ಮತ್ತಾವತರದ ಲಿಂಗವಂತಜಾತಿಯವರೊಡನೆ (ಜಂಗಮರ ಹೊರತು) ಪಙ್ಕ್ತಿ ಭೋಜನ ಮಾಡಲಾರರು. ಇವರ ಕೆಲವು ದೊಡ್ಡಮನುಷ್ಯರನ್ನು "ನೀವಾರಪ್ಪಾ" ಎಂದು ಕೇಳಿದರೆ "ನಾವು ದೀಕ್ಷಾವಂತರು" ಎಂದು ಒಳ್ಳೇ ದರ್ಪದಿಂದುತ್ತರವನ್ನು ಕೊಡುತ್ತಾರೆ. ದೀಕ್ಷೆಯೆಂಬ ಸಂಸ್ಕಾರವಿವರಪಿತಾಮಹನಿಗೆ ಸಹ ಗೊತ್ತಿಲ್ಲದಿದ್ದರೂ ಅಡ್ಡಿಯಿಲ್ಲ. ಬಾಯಿಯಿಂದಲಾದರೂ ಈ ತರದ ಶುದ್ಧ ಜಾತಿದ್ಯೋತಕ ಮಾತನ್ನಾಡುವದು ನನಗೆ ಅಭಿಮಾನವೆನಿಸುತ್ತದೆ. ಇವರಲ್ಲಿ ಅಕ್ಷರಾಸ್ಯರು ಸಂಪೂರ್ಣವಾಗಿ ಕಡಿಮೆ. ಕೆಲವು ಪಶ್ಚಿಮಾಂಧ್ರ ಬಣಿಜಿಗರಿಗೆ 'ಗೌಡಿಕೆ' ಯಿದೆ, ಆದರೂ ಆವಾೀವೃತ್ತಿಯಿಂದ ಯಾವ ಮಹಾ ಮಾನ ಮರ್ಯಾದೆಗಳನ್ನು ಸಂಪಾದಿಸಿಲ್ಲವು. ಬರುಬರುತ್ತ ಇವರು ತಮ್ಮ ಯುತ್ಕೃಷ್ಟತೆಯನ್ನು ಕಳೆದುಕೊಳ್ಳಹತ್ತಿದ್ದಾರೆ.

**ಶೀಲವಂತರು**:—ಆಂಧ್ರ ದೇಶದ ವೀರಶೈವರಲ್ಲಿ ಕಟ್ಟು ದಿಟ್ಟಗಳಾದ ಆಚಾರ(ಶೀಲ)ಗಳುಳ್ಳವರೆಂದರೆ ಇವರೇ! ಈ ವಿಷಯದಲ್ಲಿವರನ್ನು ಮಾಹೇಶ್ವರು ಕೂಡಾ ಸರಿಗಟ್ಟಲಾರರು. ಪಾಲ್ಕುರಿಕೆ ಸೋಮನಾರಾಧ್ಯರ ತರುವಾಯ ಅರುವತ್ತುಮೂರು ಶೀಲಗಳಲ್ಲಿ ಕೆಲವನ್ನಾದರೂ ದೀಕ್ಷೆಯಿಂದ ಉಳಿಸಿಕೊಂಡು ಬಂದಿರುತ್ತಾರೆ. ಇವರ ಸಂಖ್ಯೆ ಬಹಳ ಅಲ್ಪವಾದುದು. ಎಲ್ಲೋ ಒಂದೆರಡು ಮನೆಗಳು ಸಿಗುತ್ತವೆ. ಇವರನ್ನು

ಆಂಧ್ರ ಭಾಷಿಗಳು 'ಶೀಲವಂತುಲು' ಎಂದು ಕರೆಯುತ್ತಾರೆ. ಇವರೂ ಕೇವಲ ಮಾಹೇಶ್ವರರೊಡನೆ ಭುಂಜಿಸುತ್ತಾರಷ್ಟೆ. ಇವರ ಮುಖ್ಯ ವೃತ್ತಿ ನೆಯಿಗಾರಿಕೆ, ವಿದ್ಯಾಗಂಧರಹಿತರಾದಾಗ್ಯೂ ತಕ್ಕಮಟ್ಟಿಗೆ ವೀರಶೈವಮತದ ಪ್ರಾಶಸ್ತ್ಯವನ್ನೂ ಕೆಲವು ವಿಶೇಷ ವಿಷಯಗಳನ್ನೂ ತಿಳಿದವರಾಗಿರುತ್ತಾರೆ. ಬಣಿಜಿಗರಿಗೂ ಶೀಲವಂತರಿಗೂ ಪರಸ್ಪರವಾಗಿ ಮನಸ್ಪರ್ಧೆಗಳಿವೆ. ಆದು ದರಿಂದ ಇವರನ್ನವರೂ ಅವರನ್ನಿವರೂ ಕಡಿಮೆ ಕುಲದವರೆಂದು ತಿಳಿ ಯುವದುಂಟು. ಈ ಜಾತಿಯವರಲ್ಲಿ ವಿಶೇಷವಾಗಿಯರುಹಬೇಕಾದು ದಿಷ್ಟೇ!

**ಆರಾಧ್ಯರು:—** ಪ್ರಸಂಗವಶಾತ್ತು ಇವರ ವಿಷಯಗಳನ್ನೂ ಇಲ್ಲಿ ಬರೆಯಬೇಕಾಗಿ ಬಂದಿತು. ಭಾರತೀಯ ಮತಗಳಲ್ಲಿ ವೀರಶೈವ ಮತವೇ ಒಂದು ವಿಚಿತ್ರವಾದುದೆಂದರೆ ವೀರಶೈವರೊಡನೆ ಸಂಬಂಧ ಪಡುವ ಪಂಗಡಗಳಲ್ಲಿ ಆರಾಧ್ಯ ಶಾಖೆಯೂ ಬಹು ವಿಲಕ್ಷಣವಾದುದಾಗಿದೆ. ಈ ಜಾತಿಯ ಉತ್ಪತ್ತಿ ವಿಷಯದಲ್ಲಿ "ಇದಮಿತ್ಥ"ವೆಂದು ಹೇಳಿಕೊಳ್ಳುವ ಯಾವ ಮುಖ್ಯ ಪ್ರಮಾಣಗಳೂ ಇಲ್ಲಿಯ ವರೆಗೆ ಹೊರಬಿದ್ದಿಲ್ಲವು ಕೆಲವು ಶಾಸನ ಸಮಾಲೋಚನೆಯ ಊಹೆಗಳಿಂದ ಮಾತ್ರ ವಿಷಯ ಸಮರ್ಪಣವಾಗುತ್ತಿರುವುದು. ಕ್ರಿ. ಶ. ೧೨ನೆಯ ಶತಮಾನದಾಚೆಗೆ ಇವರು ಸ್ಮಾರ್ತಶೈವ ಬ್ರಾಹ್ಮಣರಾಗಿದ್ದು ಆ ಮೇಲೆ ಶ್ರೀ ಬಸವಬೋಧಾಮೃತದಿಂದ ಲಿಂಗಧಾರಿಗಳಾದರು. ಶ್ರೀ ಪಾಲ್ಕುರಿಕೆ ಸೋಮನಾರಾಧ್ಯ ಮೊದಲಾದವರ ಹೊರತು ಉಳಿದವರೆಲ್ಲರೂ ಬಸವೇಶ್ವರರು ಹೇಳುವ ವೈದಿಕ ಪ್ರತಿಘಟನೆಗಳನ್ನು ಅಂಗೀಕರಿಸಲಿಲ್ಲ. ಈ ವಿಷಯದಲ್ಲಿ ಮುಖ್ಯರು ಶ್ರೀಪತಿ ಮಲ್ಲಿಕಾರ್ಜುನ ಪಂಡಿತಾರಾಧ್ಯರಾಗಿರುವರು. ಇವರು ಶ್ರೀ ಬಸವೇಶ್ವರರೊಡನೆ "ಭಕ್ತಿಮೀದಿ ವಲಪು ಬ್ರಾಹ್ಮ್ಯಂಬುತೋ ಬೊತ್ತು ಬಾಯಲೇಮನೇನು ಬಸವಲಿಂಗ'' ಅಂದರೆ ಭಕ್ತಿಯಲ್ಲಿರುವ ಲಾಲಸವನ್ನೂ ಬ್ರಾಹ್ಮಣ್ಯದಲ್ಲಿರುವ ಭಾಗವನ್ನೂ' ಬಿಡಲಾರೆನೆಂದು ತರ್ಕಿಸಿ ಹೇಳಿಕೊಂಡರು. (ತೆಲುಗುಪಂಡಿತಾರಾಧ್ಯ ಚರಿತ್ರೆ) ಆದುದರಿಂದ ಇವರು ಶ್ರೌತಸ್ಮಾರ್ತಕರ್ಮಾನುಷ್ಠಾನ ನಿಷ್ಠೆಯುಳ್ಳವರಾದಾಗ್ಯೂ ಶ್ರೀ ಬಸವಣ್ಣನವರಲ್ಲಿ ಅಖಂಡಭಕ್ತಿಯುತರೆಂಬುವುದು ನಿಸ್ಸಂಶಯವು. ಬೇಕಾದವರು ಕನ್ನಡ ಪಾಲ್ಕುರಿಕೆ ಸೋಮೇಶ್ವರ ಪುರಾಣ ಸಿಂಗಿರಾಜ ಪುರಾಣಾದಿಗಳನ್ನು ನೋಡಬಹುದು.

ಆರಾಧ್ಯರು ಲಿಂಗ ಜನಿವಾರಗಳೆರಡನ್ನೂ ಧರಿಸುತ್ತಾರೆ. ಈಗ ವಿಶೇಷವಾಗಿ ಬ್ರಾಹ್ಮಣ್ಯವನ್ನಭಿಮಾನಿಸುವರು. ಲಿಂಗಧಾರಣವಿಲ್ಲದ ಆರಾಧ್ಯರು ಉಂಟು. ಇವರೆಲ್ಲರಿಗೆ ಪರಸ್ಪರವಾಗಿ ಶರೀರಸಂಬಂಧವಿದೆ. ಚಿಕ್ಕ ಮಕ್ಕಳಿಗೂ ಬಹುಶಃ ಲಿಂಗಗಳಿಲ್ಲ. ಉಪನಯನಕಾಲದಲ್ಲಿ ಮಾತ್ರ ಧರಿಸುತ್ತಾರಷ್ಟೆ ಸ್ಫಟಿಕಲಿಂಗವನ್ನು ಖರ್ಜೂರ ಫಲದಾಕೃತಿಯುಳ್ಳ ಸಣ್ಣ ಕರಡಿಗೆಯಲ್ಲಿಟ್ಟು ಕೊರಳಿನಲ್ಲಿ ಹಾಕುತ್ತಾರೆ. ಕೆಲವರು ಅರಿಶಣಬಣ್ಣದ ಬಟ್ಟೆಯಲ್ಲಿಯಾಗಲಿ ರೇಷ್ಮೆ ಬಟ್ಟೆಯಲ್ಲಾಗಲೀ ಕಟ್ಟಿ ಆ ಅಡಿಕೆಯಂತಹ ಲಿಂಗದ ಗಂಟನ್ನು ಜನಿವಾರಕ್ಕೆ ಕಟ್ಟಿಕೊಳ್ಳುತ್ತಾರೆ. ಜನನ ಸಂಸ್ಕಾರ ವಿಷಯದಲ್ಲಿ ಆರಾಧ್ಯ ಪಂಡಿತರು ಭಿನ್ನಾಭಿಪ್ರಾಯವುಳ್ಳವರಾದಾಗ್ಯೂ ದಹನ ಸಂಸ್ಕಾರವನ್ನಾಚರಿಸುವವರು ಎಲ್ಲೋ ಒಬ್ಬಿಬ್ಬರೇ! ಇವರ ವಾಸವು ವರಂಗಲ್, ಕೃಷ್ಣಾ, ಗುಂಟೂರು, ಗೋದಾವರಿ, ವಿಶಾಖಪಟ್ಟಣಂ ಜಿಲ್ಹೆಗಳಲ್ಲಿ ವಿಶೇಷವಾಗಿರುತ್ತದೆ. ಸಂಸ್ಕೃತ ವಿದ್ಯಾವಂತರಿದ್ದಲ್ಲಿ ಹೆಚ್ಚಾಗಿರುವರೆಂದು ಹೇಳಬಹುದು. ಹಾಗೆಯೇ ಒಬ್ಬಿಷ್ಟ ಚರಿತ್ರ ಪರಿಶೋಧಕರೂ ಗ್ರಂಥ ಕರ್ತೃಗಳೂ ದೇಶೀಯ ನಾಯಕರೂ ಒಳ್ಳೇ ಪ್ರಸಿದ್ಧಿಯನ್ನು ಹೊಂದಿರುವರು. ಆಂಧ್ರದೇಶದಲ್ಲಿರುವ ಶೈವರಾದ ಕೋಮಟಿಗರೂ ಜೀರರೂ ಲಿಂಗವಂತರಾದ ಗಾಣಿಗರೂ ಇವರ ಶಿಷ್ಯರಾಗಿರುತ್ತಾರೆ. ಆದುದರಿಂದ ಇವರ ಜೀವನಾಧಾರದ ಮುಖ್ಯ ವೃತ್ತಿಯು ಶಿಷ್ಯ ಸಂಚಾರ ಮೊದಲಾದವುಗಳೇ! ಒಟ್ಟನಮೇಲೆ ಸ್ವಲ್ಪ ಸಂಖ್ಯಾಕರಾದ ಆರಾಧ್ಯರು ಆಂಧ್ರ ದೇಶದಲ್ಲಿ ಯಥೋಚಿತ ಪ್ರತಿಪತ್ತಿಯುಳ್ಳವರಾಗಿಯೂ ಮೆರುಗಾಗಿಯೂ ಜೀವನವನ್ನು ಸಾಗಿಸುತ್ತಿರುವರು. ಈ ಜಾತಿಯ ವಿಷಯದಲ್ಲಿ ನನಗೆ ತೋಚಿದ ಒಂದೆರಡು ಮಾತುಗಳನ್ನಿಲ್ಲಿ ಬರೆಯುವೆನು.

ಶ್ರೀ ಬಸವೇಶ್ವರರಿಂದೀಚೆಗೆ ಲಿಂಗಧಾರಿಗಳಾದ ಬ್ರಾಹ್ಮಣರು ವೀರಶೈವ ಮತದ ಅಷ್ಟಾವರ್ಣಗಳನ್ನಾನೋದಿಸುತ್ತಿದ್ದರೂ ಬಹಳವಾಗಿ ಅವರು ತಮ್ಮ ಪೂರ್ವಾಶ್ರಮ ಬ್ರಾಹ್ಮಣ್ಯ ದ ತತ್ವಗಳನ್ನೇ ನಂಬುತ್ತ ಕ್ರಮೇಣ ಬ್ರಾಹ್ಮಣ ಜಾತಿಯವರೊಡನೆ ಸಂಬಂಧವನ್ನು ಹೆಚ್ಚಾಗಿ ಬೆಳಸಿಕೊಂಡರು. ಆದರಿಂದ ಅವರು ನಮ್ಮ ಪೂರ್ವಾಚಾರ್ಯರ ಹೆಸರುಗಳನ್ನು ಮಾತ್ರ ಉಪಯೋಗಿಸಿಕೊಳ್ಳುತ್ತ ಆರಾಧ್ಯರಾದುದಲ್ಲದೆ ವೀರಶೈವರನ್ನು ಮೂಲೆಗೊತ್ತಿ ನಾವೇ ವೀರಶೈವ ಮತದ ಆಚಾರ್ಯರೆಂದು ಹೇಳದೊಡಗಿದರು.

ಇದಕ್ಕೆ ಇವರಲ್ಲಿ ಆಗಿಹೋದ ವೇಮನಾರಾಧ್ಯ(?) ಉದ್ಭಟಾರಾಧ್ಯ ಪಂಡಿತಾರಾಧ್ಯ ಮುಂತಾದವರೇ ಸಾಕ್ಷಿಯಾಗಿರುವರು. ಸಂಪೂರ್ಣವಾಗಿ ಋಷಿ ಗೋತ್ರಗಳನ್ನೇ ಹೇಳಿಕೊಂಡು, ಶ್ರೀ ಪಂಚಾಚಾರ್ಯರನ್ನು ಕೇವಲ ಅಭಿಮಾನ ಪುರುಷರನ್ನಾಗಿ ಗಣಿಸುತ್ತಾರೆ. ಈತರಹದವರು ವೀರಶೈವರನ್ನೆಷ್ಟರಮಟ್ಟಿಗೆ ಹೋಲುತ್ತಾರೆಯೋ ನಿಪುಣರರಿಯುವರು. ಇವರು ತಮ್ಮೊಳಗೆ ತಾವು "ಮಾಹೇಶ್ವರ" ಎಂದು ಕರೆದುಕೊಳ್ಳುತ್ತಾರಾದರೂ ವೀರಶೈವರನ್ನು ಕಂಡರೆ ಸಹನ ಬುದ್ಧಿಯಿಂದ ನೋಡಲೊಲ್ಲರು. ಉದಾಹರಣಾರ್ಥವಾಗಿ ಹೈದರಾಬಾದಿನ ಗತಿಸಿದ ಪರಳೀ ಪ್ರಕರಣದಲ್ಲಿ ವೀರಶೈವರ ವಿರುದ್ಧವಾಗಿ ಸಾಕ್ಷಿಯನ್ನು ಕೊಟ್ಟ ಆರಾಧ್ಯರನ್ನು ನೆನಿಸಿದರೆ ಸಾಕು. ಆಂಧ್ರದೇಶದಲ್ಲೊಂದೆರಡು ವೇಳೆ ವೀರಶೈವರಿಗೂ, ಆರಾಧ್ಯರಿಗೂ, ಶಾಸ್ತ್ರ ವಾದಗಳು ನಡೆದು ವೀರಶೈವರಿಗೇನೆ ಜಯವಾಯಿತು. ಯಥಾರ್ಥವಾಗಿ ನೋಡಿದರೆ ಇತ್ತ ವೀರಶೈವರಿಗೂ ಅತ್ತ ಬ್ರಾಹ್ಮಣರಿಗೂ ಸಂಪೂರ್ಣವಾಗಿ ಆರಾಧ್ಯರು ಸಂಬಂಧ ಪಡುವದಿಲ್ಲ. ಅದು ಕಾರಣವೇ, ಇವರು ಕೆಲಕಾಲದವರೆಗೆ ವೀರಶೈವರನ್ನನುಸರಿಸಿದ್ದು ಈಗೀಗ ಸಂಪೂರ್ಣವಾಗಿ ಬ್ರಾಹ್ಮಣರನ್ನು ಸೇರಹತ್ತಿರುವರು. ಇಂತಹ ಸಮಯದಲ್ಲಿ ವೀರಶೈವರ ನಿಂದೆಯೇ ಇವರಿಗೆ ಪರಮಾನ್ನವಾಗುವದರಲ್ಲಿ ಆಶ್ಚರ್ಯವಿಲ್ಲ. ಆಗಿನ ಕಾಲ (ಕ್ರಿ. ಶ. ೧೨ನೆಯ ಶತಮಾನ)ದಲ್ಲಿ ವೀರಶೈವರೊಳಗೆ ಹೆಸರಾದ ವಿದ್ವಾಂಸರಿಲ್ಲವೆಂದು ಶ್ರೀ ಬಸವೇಶ್ವರರ ನೂತನ ಮತದ ಬಾಹುಳ್ಯದಿಂದ ಗೊತ್ತಾಗುವದು. ಶ್ರೀ ಪಂಚಾಚಾರ್ಯ ಪರಂಪರಾಗತವಂಶೀಯರು "ವೈದಿಕಂ ಕರ್ಮ ಕುರ್ವೀತ ಜ್ಞಾನೈಕಫಲಸಾಧನಂ" ಎಂಬ ಸೂತ್ರವನ್ನು ತಕ್ಕಮಟ್ಟಿಗೆ ಪಾಲಿಸತಕ್ಕವರಾಗಿದ್ದರೂ ಆಗಿನ ಮಹಾ ವಾತಾವರಣವನ್ನು ತಡೆಯಲು ಸಮರ್ಥರಾಗಿರಲಿಲ್ಲ. ಅಂತೆಯೇ ನೂತನ ಮತ ಪ್ರವಿಷ್ಟರಾದ ಬ್ರಾಹ್ಮಣರು ನಮ್ಮ ಹೆಸರುಗಳನ್ನು ಅನುಕರಿಸಿ ಆರಾಧ್ಯರೆಂಗಿ ಒಂದು ಜಾತಿಯನ್ನು ನಿರ್ಮಿಸಿಕೊಂಡರು. ಅವಿದ್ಯಾವಂತರಾದ ವೀರಶೈವರು ತಮ್ಮ ಯೌನ್ನತ್ಯವನ್ನು ಕಳೆದುಕೊಂಡರಲ್ಲದೆ ದಿನಾಲೂ ರೂಢಿಯಲ್ಲಿದ್ದ "ಆರಾಧ್ಯ" ಶಬ್ದದಿಂದ ಸಹ ಸಂಬಂಧರಹಿತರಾದರು. ಆದರೂ ಕೇವಲಾಭಿಮಾನಯುತರಾದ ಕೆಲವು ವೀರಶೈವರು, ಆರಾಧ್ಯ ನಾಮವನ್ನು ಬಿಡದೆ ಇಲ್ಲಿಯವರೆಗೂ ನಮ್ಮೊಳಗಿರುವರೆಂದರೆ ಅಸಮಂಜಸವಲ್ಲ. ಇದಕ್ಕೆ ವಿಷಯೀಭೂತರಾದವರು ಕನ್ನಡ (ಮೈಸೂರು) ದೇ

ಶದ ಆರಾಧ್ಯರೇ! ಇವರು ಒಂದು ಆರಾಧ್ಯ ಶಬ್ದದಿಂದ ಭಿನ್ನವಾಗಿ ಭಾಸವಾಗುತ್ತಿದ್ದರೂ ಸಮಸ್ತ ವಿಷಯಗಳಲ್ಲಿ ವೀರಶೈವರೊಡನೆ ಸಮಭಾಗಿಗಳೆಂಬುವದು ಕನ್ನಡಿಗರಿಗೆ ಚನ್ನಾಗಿ ಪರಿಚಯವುಂಟು. ಮುಗ್ಧರಾದ ಕನ್ನಡದೇಶದ ಆರಾಧ್ಯರೀಗೀಗ ಕೆಲವು ವಾಗ್ಜಾಲಿಗಳ ಬಲೆಗೆ ಸಿಕ್ಕು ಯಜ್ಞೋಪವೀತ(ಜನಿವಾರ) ವನ್ನು ಧರಿಸಿಕೊಂಡು ವೀರಶೈವ ಸಮೂಹದಿಂದ ದೂರಾಗಿ ಮೋಸ ಹೋಗುತ್ತಿರುವರು. ಅಲ್ಲದೆ ಕೆಲವರುದ್ಧಟರಾದ ಆರಾಧ್ಯರು ಆಂಧ್ರ ದೇಶದ ಆರಾಧ್ಯರೊಡನೆ ಸೇರಿಕೊಂಡು ವೀರಶೈವರನ್ನು ನಿಂದಿಸುತ್ತ ಪತ್ರಿಕೆಗಳಲ್ಲಿಯೂ ಗ್ರಂಥಗಳಲ್ಲಿಯೂ ಇಷ್ಟ ಬಂದಂತೆ ಬರೆಯುತ್ತಿರುವರು. ಆಂಧ್ರದೇಶದ ಆರಾಧ್ಯರು" ಶ್ರೀಶೈಲ ಉಜ್ಜಯನೀ ರಂಭಾಪುರಿ, ಕಾಶೀ, ಕೇದಾರ ಕ್ಷೇತ್ರಗಳಲ್ಲಿರುವ ಶ್ರೀ ಜಗದ್ಗುರು ಪಂಚ ಸಿಂಹಾಸನಗಳು ನಮ್ಮವೇ ಇದ್ದು ಅವುಗಳನ್ನು ವೀರಶೈವರು ಪ್ರಬಲರಾಗಿ ಆಕ್ರಮಿಸಿಕೊಂಡಿರುತ್ತಾರೆಂ"ದು ವಾದಿಸುವರು. ಇದು ಕೇವಲ ನೀರಸವಾದವಲ್ಲದೆ ಅವಿಚಾರಪೂರಿತವಾಗಿಯೂ ಇದೆ. "ನಿಮಗೆ ಗುರುಗಳಾರೆಂ"ದು ಕೇಳಿದ ಪ್ರಶ್ನಕ್ಕೆ ಜವಾಬನ್ನು ಹೇಳಲು ಮೇಲಿನ ವಾದವನ್ನು ಕೆಲವು ಧೂರ್ತಾರಾಧ್ಯರೆಬ್ಬಿಸಿದರೇ ಹೊರತು ಬುದ್ಧಿವಂತರಾದ ಯಾವ ಆರಾಧ್ಯರೂ ಇದನ್ನೊಪ್ಪುವದಿಲ್ಲ. "ಕ್ರಿಸ್ತ ಶಕದ ಹನ್ನೆರಡನೆಯ ಶತಮಾನದಾಚೆಗೆ ಲಿಂಗ ಜನಿವಾರವುಳ್ಳ ಈ ಯಾಂಧ್ರದೇಶದಾರಾಧ್ಯರು ನಿಶ್ಚಯವಾಗಿ ಲಿಂಗಧಾರಿಗಳಲ್ಲ.'' ವೆಂಬ ಸಿದ್ಧಾಂತದಲ್ಲಿಯ ಒಂದು 'ಚ' ಕಾರವನ್ನಾದರೂ ಖಂಡಿಸುವದಕ್ಕೆ ಆರಾಧ್ಯರಲ್ಲಿ ಈಗ ಯಾವ ಸಾಧನೆಯೂ ಇಲ್ಲವು. ವೀರಶೈವ ಗುರುಪೀಠಗಳಲ್ಲಿ ಸುಮಾರು ಎರಡು ಸಾವಿರ ವರ್ಷಗಳ ಶಿಲಾಲೇಖಗಳು ಸಿಕ್ಕಿವೆ. ಇದರಿಂದ ದುರ್ವಾದಿಗಳ ವಾಗ್ಬಂಧನವಾಗಿದೆ. ೨೦ ವರ್ಷಗಳ ಹಿಂದೆಯೇ ಆಂಧ್ರಾರಾಧ್ಯರು 'ಶೈವ ಮಹಾಸಭೆ' ಯೊಂದನ್ನು ಸ್ಥಾಪಿಸಿ ಅದರಿಂದ ತಕ್ಕಮಟ್ಟಿಗೆ ಲಾಭವನ್ನು ಹೊಂದುತ್ತಿರುವರು. ಆ ಸಭೆಯು ಹತ್ತೆಂಟು ವೇಳೆ ನೆರವೇರಿವರೂ, ಅದರಲ್ಲಿ ವೀರಶೈವರ ಸಂಬಂಧವಾಗಿ ಯಾವ ವಿಷಯವೂ ಚರ್ಚಿಸಲ್ಪಡಲಿಲ್ಲ. "ಶೈವ ಪ್ರಚಾರಿಣಿ ಶೈವ ರಹಸ್ಯ ಬೋಧಿನಿ" ಎಂಬ ಮತವಿಷಯಕ ಪತ್ರಿಕೆಗಳು ಆರಾಧ್ಯರಿಂದ ಹೊರಡಿಸಲ್ಪಡುತ್ತಿವೆ. ಮತ್ತು ಆಂಧ್ರದೇಶದಲ್ಲಿ ಹೆಚ್ಚಾಗಿ ಪ್ರಸಿದ್ಧಿಯನ್ನು ಪಡೆದ 'ಆಂಧ್ರಪತ್ರಿಕೆ' ಯೆಂಬುವದೂ ಇವರ ಸಾಯುಕರದಾಗಿರುವದು. ಇವರ ಸಂಘವು ಬಸವನಿಂದ ಬಸವ ಪೂಜಕರೆಂಬ ಉಭಯುತರಿಂದಲೂ ಕೂಡಿರುವದೆಂದು ಹೇಳಬಹುದು. ಉನ್ನ

ತಿಯು ಹೇಗೇ ಇರಲಿ ಗುರುರಹಿತರಾಗಿಯೂ ವೀರಶೈವ ಪ್ರತಿಕಕ್ಷಿಗಳಾಗಿಯೂ ಇರುವ ಆರಾಧ್ಯರು ಎಷ್ಟರವುಟ್ಟಿಗೆ ವೀರಶೈವರೊಡನೆ ಸಂಬಂಧ ಪಡುತ್ತಾರೆಯೋ! ಚನ್ನಾಗಿ ಚರ್ಚಿಸಿ ನಿರ್ಣಯಿಸಿಕೊಳ್ಳಬೇಕಾಗಿದೆ.

**ಗಾಣಿಗರು**:— ಇವರನ್ನೂ ವೀರಶೈವರನ್ನಾಗಿ ಗಣಿಸುವಷ್ಟು ಅನುಕೂಲತೆಯಿಲ್ಲವು. ಆದರೂ ಕೆಲವು ಕಾರಣಗಳಿಂದ ಹೌದೆನ್ನಬಹುದಾಗಿ ನನ್ನ ಯೂಹೆ. ಇವರ ಸಂಖ್ಯೆ ಬಹಳ ಅಲ್ಪ. ನಿಜಾವೂಂಧ್ರ ದೇಶದ ಎಲ್ಲಾಕಡೆಗೂ, ಅಲ್ಲಲ್ಲಿ ವಾಸವಾಡುತ್ತಾರೆ. ಬ್ರಿಟೀಷ ಆಂಧ್ರದೇಶದಲ್ಲಾದರೂ ಬಹಳ ಸ್ವಲ್ಪ. ಇವರು (ಗಂಡೂ ಹೆಣ್ಣೂ) ಕೇವಲ ಲಿಂಗವನ್ನೇ ಧರಿಸುತ್ತಾರೆ. ಯಜ್ಞೋಪವೀತವನ್ನು ಶ್ರಾದ್ಧಾದಿ ಕರ್ಮಗಳಲ್ಲಿ ನಿರ್ವಾಹಕ್ಕಾಗಿ ಹಾಕಿಕೊಂಡು ಅನಂತರದಲ್ಲಿ ತೆಗೆದುಬಿಡುತ್ತಾರೆ. ಇವರಿಗೆ ಪುರೋಹಿತರು ಬ್ರಾಹ್ಮಣರೂ ಗುರುಗಳು ಆರಾಧ್ಯರೂ ಆಗಿರುವರು. ಲಿಂಗಧಾರಿಗಳಾದ ಮೂಲಕ ವಾಹೇಶ್ವರ (ಜಂಗಮ) ರಲ್ಲಿಯೂ ಸ್ವಲ್ಪ ಭಕ್ತಿಯುಳ್ಳವರಾಗಿರುತ್ತಾರೆ. ಆಂಧ್ರದೇಶದ ವೀರಶೈವರಲ್ಲಿ ಹೆಚ್ಚಾಗಿ ಪ್ರಚಾರವನ್ನು ಹೊಂದಿದ ವೀರಭದ್ರೋತ್ಸವ (ದಕ್ಷಯಾಗ ಧ್ವಂಸ ಅಥವಾ, ಗೆಲುವು) ವನ್ನೂ ಈ ಗಾಣಿಗರು ಆಚರಿಸುತ್ತಾರೆ. ವಾಹೇಶ್ವರರಿಂದಲೇ ಈ ಕಾರ್ಯವು ಸಂಪೂರ್ಣವಾಗಿ ನೆರವೇರಿಸಲ್ಪಡಬೇಕಾಗುವದು. ಇಷ್ಟರಹೊರತು ಗಾಣಿಗರಿಗೂ ವೀರಶೈವರಿಗೂ ಯಾವ ಸಂಬಂಧವೂ ಇಲ್ಲ. ಇವರಿಗೆ ಲಿಂಗಗಳನ್ನು ಕೂಡ ಆರಾಧ್ಯರೇ ಅನುಗ್ರಹಿಸುತ್ತಾರೆ. ಇದು ಶುದ್ಧ ಮಧ್ಯಾಂಧ್ರದೇಶದ ವಿಷಯವಷ್ಟೆ. ಇನ್ನು ಹೈದರಾಬಾದು ಪ್ರಾಂತದಲ್ಲಿರುವ ಗಾಣಿಗರೀಮೇಲೆ ಹೇಳಿದವರಿಗಿಂತಲೂ ಭಿನ್ನರಾಗಿರುತ್ತಾರೆ. ಇವರ ಸರ್ವ ಕರ್ಮಗಳನ್ನೂ ವಾಹೇಶ್ವರರೇ ನೆರವೇರಿಸುವರಲ್ಲದೆ ಇವರಿಗೂ ವಾಹೇಶ್ವರರಿಗೂ ಏಕಪಙ್ತಿ ಭೋಜನವಿದೆ. ಮತ್ತು ಗುರುಗಳು ಸಹ ಮಾಹೇಶ್ವರರೇ! ಮಧ್ಯಾಂಧ್ರದೇಶದಲ್ಲಿರುವ ಗಾಣಿಗರೊಳಗೆ ಒಂದೆರಡು ಭೇದಗಳಿವೆ. ಅವು ಅಷ್ಟೇ ಸುವಿಪರೀತವಾದುವಲ್ಲ. ತೆಲುಗು ದೇಶದವರಿವರನ್ನು "ಗಾಂಡ್ಲವಾರು" ಎಂದು ಕರೆಯುತ್ತಾರೆ. ಈ ವಿಧವಾಗಿ ವಿಲಕ್ಷಣರಾದರೂ ಗಾಣಿಗರು ಆಚಾರ ವಿಚಾರಗಳಿಂದ ಬಹಳವಾಗಿ ವೀರಶೈವರಲ್ಲಿ ಕೂಡುತ್ತಾರೆ. ಕಾಲದುರ್ವಿಲಾಸದಿಂದ ಇವರು ವಿದ್ಯಾವಂತರಾದ ಆರಾಧ್ಯರ ಕೈಸೇರುವದಷ್ಟೇನು ವಿಚಿತ್ರವಲ್ಲ.

**ಸ್ಥಳಪತಿ ಜಂಗಮರು:—** ಯಾವ ವಿಷಯಗಳನ್ನು ವಿಚಾರಿಸದೆ ವೀರಶೈವರನ್ನು ಬ್ರಾಹ್ಮಣೇತರರೆಂಬದಾಗಿಯೂ ಪಾಷಂಡಾಚಾರಿಗಳೆಂಬದಾಗಿಯೂ ಸಿದ್ಧಗೊಳಿಸಲು ಪ್ರಯತ್ನಿಸುತ್ತಿರುವ ಬುದ್ಧಿವಂತರ ದುರ್ವಾದಕ್ಕೆ ಈ ತಡಪತಿ ಜಂಗಮ ಜಾತಿಯು ಪ್ರಬಲ ಸಹಾಯಕಾರಿಯೆಂದು ನಾನು ನಿಯಮಿತವಾಗಿ ಅಭಿಪ್ರಾಯ ಪಡುತ್ತೇನೆ. ಈ ದೇಶದಲ್ಲಿರುವ "ಸ್ಥಳಪತಿಜಂಗಮ ಸುರಿಗೆ ಜಂಗಮ, ವಸ್ತ್ರ ಜಂಗಮ" ಎಂಬ ಸಂಘಗಳು ಕೇವಲ ನಾಮಗಳಿಂದ ಭೇದ ಸೂಚಕಗಳಾಗಿವೆ ಹೊರತು ಆಚಾರ ವಿಚಾರಬಾಂಧವ್ಯಗಳಿಂದ ಒಂದೇ ವಿಧವಾದುದೆಂದು ನಿರ್ಣಯವಾಗುತ್ತದೆ. ಇವರಲ್ಲಿ ಕೆಲವರು ಸದಾಚಾರರೂ ನಿಷ್ಠಾವಂತರೂ ಇರುವದು ನಿಜವೇ. ಪರಂತು ಅಪೇಯಪಾನ ಅಭಕ್ಷ್ಯ ಭಕ್ಷಣ ಮಾಡುವ ಜನರೂ ಸರಿಯಾಗಿ ಸೇರಿರುತ್ತಾರೆ. ಇವರ ಚಿಕ್ಕ ಮಕ್ಕಳಿಗೂ, ಹೆಣ್ಣು ಮಕ್ಕಳಿಗೂ, ಬಹುಶಃ ಲಿಂಗಗಳಿರುವದಿಲ್ಲವು. ಆಂಧ್ರ ದೇಶದ ಇತರ ವೀರಶೈವ ಜಾತಿಗಳಿಗಿಂತಲೂ ಇವರಲ್ಲಿ ಕೆಲವರು ಹೆಸರಾದ ಶ್ರೀಮಂತರಿರುತ್ತಾರೆ. ಆದರೂ ಓದು ಬರಹ ಬಲ್ಲವರು ಬಹಳ ಕಡಿಮೆ. ಕ್ರಿ. ಶ. ೧೩ ನೆಯ ಶತಮಾನದಿಂದೀಚೆಗೆ ಹಾಡು (ಬೀಗತಿಯರ ಹಾಡು ಮೊದಲಾದ) ವಾಙ್ಮಯಕ್ಕಿಂತಲೂ ಸ್ವಲ್ಪ ಮೇಲಾದ "ಜಂಗಮ ಕಥೆಗಳೆ"ಂಬ ದ್ವಿಪದ ಕಾವ್ಯಗಳು ಈ ದೇಶದೊಳಗೆ ಪ್ರಚಾರಕ್ಕೆ ಬಂದಿವೆ. ಈ ಕಥೆಗಳನ್ನು ಹಳಬರಂತೆ ಸ್ಥಳಪತಿ ಜಂಗಮರು ಊರೂರಿಗೆ ಹೋಗಿ ಹೇಳಿ ದ್ರವ್ಯಾರ್ಜನೆಯನ್ನು ಮಾಡುವದುಂಟು. ಜಂಗಮ ಕಥಾ ವಿಭಾಗದಲ್ಲಿ ಸಾಮಾನ್ಯವಾಗಿ ಹರಿಶ್ಚಂದ್ರ, ಸಾವಿತ್ರಿ, ನಳ ಮೊದಲಾದ ಚರಿತ್ರೆಗಳು ಸೇರಿರುವದೇನೋ ನಿಜ. ಆದರೆ ಮುಖ್ಯವಾಗಿ ನಿಜಲಿಂಗಚಿಕ್ಕಯ್ಯ, ಶಂಕರದಾಸಮಯ್ಯ, ಉರುಲಿಂಗಪೆದ್ದಯ್ಯ, ಶಿವನಾಗಮಯ್ಯ ಮುಂತಾದ ವೀರಶೈವ ಸಂಬಂಧ ಕಥೆಗಳೇ ಅಂಗವಾಗಿವೆಂದು ಹೇಳಬಹುದು. ಈ ಜಂಗಮರಲ್ಲಿ ಕೆಲವರು ಅಲಿಂಗಿಗಳಾದ ಕೋಮಟಿಗ ಒಕ್ಕಲಿಗ ಜಾತಿಯವರ ಭೋಜನ ಪದಾರ್ಥಗಳನ್ನು ಸ್ವೀಕರಿಸುತ್ತಾರೆ. ಈ ಪ್ರಕಾರವಾಗಿ ಇವರಲ್ಲಿ ವೀರಶೈವರಿಗೆ ಕೇವಲ ವರ್ಜ್ಯಗಳಾದ ಆಚಾರಗಳು ಸೇರಿರುವದು ಬಹು ಆಶ್ಚರ್ಯವಾಗದಿರದು. ಈ ಜಾತಿಯ ಉತ್ಪತ್ತಿಯನ್ನು ಕುರಿತು ಕೈ. ವಾ. ನನ್ನ ಪಿತೃಶ್ರೀಗಳೊಮ್ಮೆ ಹೀಗೆ ಹೇಳಿದರು. "ಶ್ರೀ ಬಸವೇಶ್ವರರ ಅನಂತರದಲ್ಲಿ ಲಿಂಗಮತಾಭಿವೃಧಿಗಾಗಿ ಶ್ರಮೆಯನ್ನು ತಾಳಿದವರಲ್ಲಿ ಪಾಲ್ಕುರಿಕೆ ಸೋಮನಾರಾಧ್ಯರು ಪ್ರಮುಖರು. ಅವರು ಅನೇಕ ಜನ ಭವಿಗಳಿಗೆ ಲಿಂಗಧಾರ

ಣಮಾಡಿ ಅವರನ್ನೂ ಜಂಗಮರನ್ನಾಗಿ ಪರಿಗ್ರಹಿಸಿದರು. ಮಾಹೇಶ್ವರರಾದ ನಮ್ಮವ (ಜಂಗಮ) ರಾಜಾವಿಯುವರನ್ನು ಸೇರಬಲ್ಲ ಆರಾಧ್ಯರಾದ ಪಾಲ್ಕುರಿಕೆ ಸೋಮನಾರಾಧ್ಯರು ಮಾಡಿದ ಶುದ್ಧೀಕರಣವನ್ನು ನಮ್ಮ ಮಠಾಧಿಕಾರಿಗಳಾದರೂ ಸಮರ್ಥಿಸಲಿಲ್ಲ. ಆದುದರಿಂದ ನಮ್ಮ ಸಂಬಂಧ ರಹಿತರಾಗಿ ಈ ಸ್ಥಳಪತಿ ಜಂಗಮರು ಬರುಬರುತ್ತ ಬೇರೆ ಜಾತಿಯುವರಲ್ಲಿ ಸಮಸ್ತ ಪದಾರ್ಥಗಳನ್ನು ಸ್ವೀಕರಿಸುತ್ತ ಆಚಾರ ಹೀನರಾದರು." ಈ ವಿಷಯುವೆಷ್ಟು ಸತ್ಯಸಂಗತವಾದುದೋ ಪರಿಶೀಲಿಸಿ ತಿಳಿಯುಬೇಕು. ಇವರಿಗೆ 'ತಪಸಿ - ಸ್ಥಳಪತಿ ಮಠಪತಿ ಎಂಬ ರೂಢಿಯು ಸಾಮಾನ್ಯವಾಗಿದೆ. ಇವರು ವಿಶೇಷವಾಗಿ "ಸಿಂಪಿಗ (ದರ್ಜಿ) ಮಠಪತಿ ಭಿಕ್ಷುಕ" ವೃತ್ತಿಗಳನ್ನೇ ಅವಲಂಬಿಸಿರುತ್ತಾರೆ. ನಿಜಾಮು ದೇಶದ ಕಡೆಯು ಪ್ರದೇಶವೆನಿಸಿದ ವರಂಗಲ್ ಜಿಲ್ಹೆಯಿಂದ ಹಿಡಿದು ಗೋದಾವರಿ ಕೃಷ್ಣಾ ಗುಂಟೂರು ನೆಲ್ಲೂರು ವಿಶಾಖ ಪಟ್ಟಣ ಜಿಲ್ಹೆಗಳಲ್ಲಿವರು ವಿಶೇಷವಾಗಿ ವಾಸಿಸುತ್ತಾರೆ. ಇವರು ಚಪಲರೂ, ಪ್ರಾಗಲ್ಭಿಗಳೂ, ಆಗಿರುವರಲ್ಲದೆ ಯಾವ ಕಲೆಯುಲ್ಲಿಯೂ ನಿಪುಣರಲ್ಲ. ಇವರ ಗುರುಗಳು ಮೇಲೆ ಒಂದನೆಯ ಜಾತಿಯಲ್ಲಿ ವಿವರಿಸಲ್ಪಟ್ಟ ಮಾಹೇಶ್ವರರೇ!

**ದೇವಾಂಗರು:**— ಇವರು ನಿಶ್ಚಯುವಾಗಿಯೂ ವೀರಶೈವರಲ್ಲವೆಂದು ನನ್ನ ಅಭಿಪ್ರಾಯ. ಇವರಲ್ಲಿಯೂ ಲಿಂಗಧಾರಿಗಳಿರುವದರಿಂದ ಬರೆಯುಬೇಕಾಗಿ ಬಂದಿತು. ಇವರಲ್ಲಿ ಶೈವ ವೈಷ್ಣವ ಸ್ಮಾರ್ತ ಭೇದದಿಂದ ಮೂರು ಸಂಗಡಗಳಿವೆ. ಶೈವರೆಂಬುವರೇ ಲಿಂಗವಂತರು. ಉಳಿದವರಲ್ಲಿ ಕೆಲವರು ಜನಿವಾರವನ್ನು ಹಾಕಿ ತಿಲಕವಿಟ್ಟುಕೊಂಡು ಸ್ಮಾರ್ತರಾಗಿಯೂ ಮತ್ತೆ ಕೆಲವರು ಹಣೆಯುಮೇಲೆ ಮೂರು ಉದ್ದನ್ನ ಗೀಟು (ಊರ್ಧ್ವಪುಂಡ್ರ) ಗಳನ್ನು ಧರಿಸಿಕೊಂಡು ವೈಷ್ಣವರಾಗಿಯೂ ಕಾಣಿಸುತ್ತಾರೆ. ಲಿಂಗಧಾರಿಗಳ ಹವ್ಯಕವ್ಯಾದಿಗಳನ್ನು ಮಾಹೇಶ್ವರರು ನೆರವೇರಿಸುತ್ತಾರೆ. ವಿಶೇಷವಾಗಿ "ಸ್ಥಳಪತಿ ಜಂಗಮ" ರೊಡನೆ ಇವರಿಗೆ ಸಂಬಂಧವಿದೆ. ಆಚಾರ ವಿಚಾರಗಳಿಂದಲೂ ಇವರು ಸ್ಥಳಪತಿ ಜಂಗಮರನ್ನೇ ಹೋಲುತ್ತಾರೆ. ವೈಷ್ಣವರಿಗಿಂತಲೂ ಶೈವ ದೇವಾಂಗಿಗಳು ಸಂಖ್ಯೆಯಿಂದ ಹೆಚ್ಚಿರಬಹುದು. ಆದರೂ ವೈಷ್ಣವರಲ್ಲಿ ಉನ್ನತಿಯಧಿಕವಾಗಿರುವದರಿಂದ "ದೇವಾಂಗಮಹಾಸಭೆ" ಯು ವಿಶೇಷವಾಗಿ ವೈಷ್ಣವರನ್ನಭಿಮಾನಿಸುತ್ತದೆ. ದೇವಾಂಗಿಗಳಲ್ಲಿ ದೊಡ್ಡ ದೊಡ್ಡ ಶ್ರೀಮಂ

ತರೂ ತಕ್ಕಮಟ್ಟಿಗೆ ವಿದ್ಯಾವಂತರೂ ಇರುತ್ತಾರೆ. "ದೇವಾಂಗ ಜ್ಯೋತಿ" ಯೆಂಬ ಮತವಿಷಯಕ ಪತ್ರಿಕೆಯೀಗ ನಾಲ್ಕೈದು ವರ್ಷಗಳಿಂದ ಹೊರಡುತ್ತಿದೆ. ಜಾಗ್ರತಿಯೂ ಚನ್ನಾಗಿದೆ. ಪರಂತು ಶೈವರಲ್ಲಿ ಬಹಳ ಕಡಿಮೆ. ಗಂಜಾಂ, ಗೋದಾವರಿ, ಕೃಷ್ಣಾ, ಗುಂಟೂರು, ವಿಶಾಖಪಟ್ಟಣ ಜಿಲ್ಲೆಗಳು ಇವರಿಗೆ ಮುಖ್ಯ ವಾಸಸ್ಥಾನವು. ಆದರಂತೆ ಇವರ ಮುಖ್ಯ ವೃತ್ತಿ ನೆಯಿಗಾರಿಕೆಯೇ, ಆಂಧ್ರ ದೇಶದಲ್ಲಿಯುವರಿಗೆ ದೇವಾಂಗುಲು ಎಂದು ಹೆಸರುಂಟು. ಸಂಗೀತ ಸರಸ್ವತಿಯೆನಿಸಿದ 'ಶ್ರೀತ್ಯಾಗರಾಜ'ರು ದೇವಾಂಗಜಾತಿಗೆ ಸೇರಿದವರೆಂದು ಪ್ರತೀತಿ. ಇವರ ತೆಲುಗು ಕೃತಿ [ಪದ] ಗಳನ್ನು ಇಡೀ ದಕ್ಷಿಣ ಭಾರತ ದೇಶದ ಸಂಗೀತ ವಿದ್ವಾಂಸರೆಲ್ಲರೂ ಅವಶ್ಯವಾಗಿ ಅಭ್ಯಾಸಿಸುತ್ತಾರೆನ್ನುವುದು ವಿಜ್ಞರಿಗೆ ಪರಿಚಯುವೇ ಸರಿ.

ಲಿಂಗವಂತ ದೇವಾಂಗರಿಗೆ ಜಂಗಮರೇ ಗುರುಗಳಾಗಿರುತ್ತಾರೆ. ದೇವಾಂಗಿಗಳ ಮೂಲಪುರುಷನ ಉತ್ಪತ್ತಿಯನ್ನು ಕುರಿತು "ದೇವಾಂಗಪುರಾಣ" ದಲ್ಲಿ "ಈಶ್ವರನ ಶರೀರದಿಂದ ದೇವಲ [ದೇವಾಂಗ] ನೆಂಬ ಋಷಿ ಹುಟ್ಟಿ ಬ್ರಹ್ಮನಿಗೂ ಅಶಕ್ಯವಾದ ತಂತುಕಾರಕ ವಿದ್ಯೆಯನ್ನು ಸಂಪಾದಿಸಿ ವಸ್ತ್ರಗಳನ್ನು ಸಿದ್ಧಗೊಳಿಸಿ ದೇವತೆಗಳಿಗೆ ಕೊಟ್ಟನು. ಅಲ್ಲದೆ ಮತ್ತು ಶಂಕರನ ಅಪ್ಪಣೆಯ ಮೇರೆಗೆ ಆಮೋದಪುರಕ್ಕೆ ರಾಜನಾಗಿ ಶೇಷನ ಪುತ್ರಿಯಾದ ಚಂದ್ರರೇಖೆಯನ್ನೂ ಸೂರ್ಯನ ಸೋದರಿಯಾದ ದೇವದತ್ತೆಯನ್ನೂ ಲಗ್ನಮಾಡಿಕೊಂಡು **ದಿವ್ಯಾಂಗ, ವಿಮಲಾಂಗ, ಧವಳಾಂಗ** ರೆಂಬ ಮಕ್ಕಳನ್ನು ಪಡೆದನು. ಆಮೇಲೆ ರಂಭಾಶಾಪದಿಂದ ೫ ಸಾವಿರ ವರ್ಷಗಳವರೆಗೆ ಶೂದ್ರನಾಗಿಯೂ, ೫ ಸಾವಿರ ವರ್ಷಗಳವರೆಗೆ ಬ್ರಾಹ್ಮಣನಾಗಿಯೂ, ಜೀವಿಸಿದನು" ಎಂದು ವರ್ಣಿಸಲ್ಪಟ್ಟು ಕಡೆಗೆ ದೇವಾಂಗಿಗಳು ಅವನ ವಂಶದವರೇ ಎಂದು ನಿರೂಪಿಸಲ್ಪಟ್ಟಿದೆ. **'ಪಟ್ಟುಸಾಲೆ'** ವಾರೆಂಬ ಜಾತಿಯೂ, ಇವರೊಳಗೆ ಮತ್ತೊಂದಿದೆಯೆಂದು ತಿಳಿಯುಬರುತ್ತದೆ. ಇವರು ಪಶ್ಚಿಮಾಂಧ್ರದೇಶದಲ್ಲಿ ವಾಸಿಸಿರುತ್ತಾರೆ.

**ಕರ್ಣಿಭಕ್ತರು:—** ಇವರಲ್ಲಿ ಲಿಂಗಾಂಗಿಗಳು ಹೆಚ್ಚಿಗಿರುತ್ತಾರೆ. ಆಚಾರ ವಿಚಾರಗಳಿಂದ ಸಂಪೂರ್ಣವಾಗಿ ದೇವಾಂಗಿಗಳೊಡನೆ ಹೋಲುತ್ತಿದ್ದರೂ ಶಿವಭಕ್ತಿ, ಜಂಗಮ ಪ್ರೇಮಗಳಿಂದ ವೀರಶೈವರನ್ನು ಅನುಕ

ರಿಸುತ್ತಾರೆ. ಇವರ ಜಾತಿಯೆಲ್ಲವೂ ಶೈವ ಶಾಖೆಗೆ ಸೇರಿರುವದರಿಂದ ಜಂಗಮ (ಮಾಹೇಶ್ವರ) ರೇ ಇವರಿಗೆ ಗುರುಗಳಾಗಿರುತ್ತಾರೆ. ಪೂರ್ವಾಂಧ್ರ ದೇಶದ ಒಂದೆರಡು ಜಿಲ್ಹೆಗಳಲ್ಲಿ ಮಾತ್ರ ಇವರ ವಾಸವಿದೆ. ಇವರು ಹಿಂದಕ್ಕೆ ಯಾವದೋ ಒಂದು ವಿಶೇಷಾವಸರದಲ್ಲಿ ಸೋಮೇಶ್ವರನ ಕರ್ಣದಿಂದ ಹುಟ್ಟಿರುತ್ತಾರಂತೆ! ಅದುಕಾರಣವೇ ಇವರು ಕರ್ಣಭಕ್ತರಾದರಷ್ಟೇ? ಹೇಳಿಕೊಳ್ಳತಕ್ಕ ಯಾವ ಕೈಗಾರಿಕೆಯೂ ಇವರಲ್ಲಿ ನನಗೆ ಕಾಣಲಿಲ್ಲ.

**ವೀರಮುಷ್ಠಿಯವರು**:— ದೇವಾಂಗ ಸ್ಥಳಪತಿ ಜಂಗಮರಿಗಿಂತಲೂ 'ವೀರಮುಷ್ಠಿ' ಗಳು ಕಡಿಮೆಯಾದವರೆಂದು ಹೇಳಬಹುದು. ಇವರಿಗೆ ಲಿಂಗದ ಕರಡಿಗೆಗಳಿರುವದೇನೋ ನಿಜ. ಪರಂತು ಲಿಂಗಗಳು ಕಡಿಮೆ. ಅಪೇಯಪಾನ ಅಭಕ್ಷ್ಯ ಭಕ್ಷಣಮಾಡುವ ಜನರೂ ಈ ಜಾತಿಯಲ್ಲಿ ಸ್ವಲ್ಪಕಡಿಮೆಯುಂಟು. ಇವರು ಕಾಡುಸಿದ್ಧರಂತೆ ಅನೇಕ ಶೈವ ಚಿಹ್ನಗಳನ್ನು ಮೈತುಂಬ ಕಟ್ಟಿಕೊಂಡು ವೀರಭದ್ರೋತ್ಸವದಲ್ಲಿ ಆರ್ಭಟದಿಂದ ಕುಣಿಯುವದುಂಟು. ಒಂದು ವಿಧವಾಗಿ ಪ್ರಗಲ್ಭಿಗಳಾದರೂ ಮುಖ್ಯವಾಗಿ ಸೇವಕವೃತ್ತಿಯನ್ನೇ ಅವಲಂಬಿಸಿರುತ್ತಾರೆ. ಮಾಹೇಶ್ವರರ ಮತ್ತು ಬಣಿಜಿಗರ ಶುಭಾಶುಭ ವಾರ್ತೆಗಳನ್ನು ವಿಶೇಷಾವಸರಗಳಲ್ಲಿ ಊರಿಂದೂರಿಗೆ ಇವರು ತಲ್ಪಿಸಬೇಕಾಗುವದು. "ಇವರನ್ನು ದಕ್ಷಯಾಗ ಧ್ವಂಸದಲ್ಲಿ ವೀರಭದ್ರನು ಹುಟ್ಟಿಸಿರುತ್ತಾನಾದುದರಿಂದ ಇವರಿಗೆ ವೀರಭದ್ರ ಭಕ್ತಿಯೇ ಬಹಳವಾಗಿದೆ. ವೀರಭದ್ರನ ಮಕ್ಕಳೆಂದರೆ ನಿಜವಾಗಿಯಿವರೇ!" ಎಂದು ಆಂಧ್ರದೇಶದ ವೃದ್ಧಮಾಹೇಶ್ವರರು ಹೇಳುವದುಂಟು. ಇವರ ವಾಸವು ನಿಜಾಮಾಂಧ್ರದಲ್ಲಿಯೇ ಹೆಚ್ಚು. ಇವರನ್ನು ತೆಲುಗು ಭಾಷೆಯಿಂದ "ವೀರಮುಷ್ಠಿವಾರು" ಎನ್ನುತ್ತಾರೆ.

**ಹೊಲೆಯ ಜಂಗಮರು**:—[ಮಾಲಜಂಗಾಲು] ಇವರು ವೀರಶೈವರಲ್ಲಿ ನಿಕೃಷ್ಟ ಪಂಗಡಕ್ಕೆ ಸೇರಿದವರೆಂದು ಆಚಾರಾದಿಗಳಿಂದ ಊಹೆಯಾಗುತ್ತದೆ. ಇವರ ಉಪಜೀವನವೂ ಭಿಕ್ಷೆಯಿಂದಲೇ! ಇವರು ಲಿಂಗವಿಲ್ಲದ ಹೊಲೆಯ, ಮಾದಿಗ, ಡೋಹರ ಮುಂತಾದವರಲ್ಲಿ ತಿರುಗಾಡುತ್ತ "ನಿಮಗೆ ನಾವು ಗುರುಗಳೆಂದು ಹೇಳಿಕೊಳ್ಳುತ್ತ ಪ್ರಾಗಲ್ಭ್ಯದಿಂದಲೂ ಪ್ರತಿಬಂಧದಿಂದಲೂ ಅವರ ಕಡೆಯಿಂದ ರೊಕ್ಕವನ್ನು ವಸೂಲು ಮಾಡುತ್ತಾರೆ. ಇವರು ಹೆಸರಿಗೆ ಮಾತ್ರ ಲಿಂಗಧಾರಿಗಳಷ್ಟೆ! ಮೇಲೆ ಹೇಳಲ್ಪಟ್ಟ

ಯಾವ ಲಿಂಗಾಂಗಿಗಳೂ ಇವರನ್ನು ಮುಟ್ಟುವದಿಲ್ಲವು. ಪಶ್ಚಿಮಾಂಧ್ರ ದೇಶದಲ್ಲಿಯೇ ಇವರ ವಸತಿ ಸ್ವಲ್ಪ ಹೆಚ್ಚುಂಟು. ಅಲ್ಲದೆ ಕೋಲನುಪಾಕ, ಹೈದ್ರಾಬಾದ್ ಮೊದಲಾದ ಸ್ಥಳಗಳಲ್ಲಿ ಇವರ ಕೆಲವು ಮಠಗಳಿವೆ. ಇವರು ಅಶಿಕ್ಷಿತರೂ, ಅಲ್ಪ ಸಂಖ್ಯಾಕರೂ, ಆಗಿರುತ್ತಾರೆ. ಛಲವಾದಿ ಮುಂತಾದ ಇವರ ಭೇದಗಳು ಕನ್ನಡ ವೀರಶೈವರಿಗೆ ಪರಿಚಯವಿರುವ ಮೂಲಕ ವಿಸ್ತರಿಸಿ ಬರೆಯಲಾವಶ್ಯಕವಿಲ್ಲವೆಂದು ಭಾವಿಸುತ್ತೇನೆ.

ಮುಂದೆ ಸಾಗುವದು.



# ದೇವ ನ್ಮೈಮೆ.

ಲೇಖಕ:—ಈಶ್ವರ ಸಣಕಲ್ಲ ರಬಕವಿ.



ಕಣ್ಣು ಸಣ್ಣದಿಹುದು ದೇವ
ಕಣ್ಣಿನೊಳಗೆ ಕಾಣ್ವ ಶಕ್ತಿ
ಬಣ್ಣಣೆಯನು ಮೀರಿ ಜಗವ ತುಂಬಿಕೊಂಡಿದೆ
ಜಗವ ತುಂಬಿಕೊಂಡಿದೆ ॥೧॥

ಕಿವಿಯು ಚಿಕ್ಕದಿಹುದು ದೇವ
ಕಿವಿಯು ಪಡೆದುಕೊಂಡ ಶಕ್ತಿ
ಬುವಿಯೊಳಿರುತಿಹೆಲ್ಲ ದನಿಯು ಕೇಳುತಿರುವದು
ದನಿಯು ಕೇಳುತಿರುವದು ॥೨॥

ಮೂಗು ಸಣ್ಣದಿಹುದು ದೇವ
ಮೂಗು ಜಗದ ನಾತುಗಳನು
ಬೇಗದಿಂದ ಪಿಡಿವ ದೊಡ್ಡ ಗುಣವ ಪಡೆದಿದೆ
ದೊಡ್ಡಗುಣವ ಪಡೆದಿದೆ ॥೩॥

ರಸನೆ ದೊಡ್ಡದಿಲ್ಲ ದೇವ
ರಸನೆಯಲ್ಲಿ ಜಗದೊಳಿರುವ
ರಸಗಳನ್ನು ಕಂಡುಪಿಡಿವ ದೊಡ್ಡ ಗುಣವಿದೆ
ದೇವ ದೊಡ್ಡ ಗುಣವಿದೆ ॥೪॥

ತೊಗಲು ಏನು ದೊಡ್ಡದಿಹುದೆ?
ಜಗದ ಸೋಂಕನೆಲ್ಲ ತಿಳಿವ
ಮಿಗಿಲ ಗುಣವು ದಿಟದಿಯದರೊಳಿರುವದಲ್ಲವೇ?
ದೇವ ಇರುವದಲ್ಲವೇ ? ॥೫॥

ಎದೆಯು ಚಿಕ್ಕದಿಹುದು ದೇವ,
ಎದೆಯು ಜಗವ ವ್ಯಾಪಿಸಿರುವ

ಸದಮಲಾದ ನಿನ್ನ ತನ್ನೊಳಿರಿಸಬಲ್ಲದು
ತನ್ನೊಳಿರಿಸಬಲ್ಲದು ॥೬॥

ಕೂಸು ಕಿರಿದು ಇಹುದು ದೇವ,
ಕೂಸಿನಲ್ಲಿ ಜಗವ ಪ್ರೇಮ
ಪಾಶದಿಂದ ಕಟ್ಟುವಂಥ ದೊಡ್ಡ ಗುಣವಿದೆ
ದೇವ, ದೊಡ್ಡ ಗುಣವಿದೆ ॥೭॥

ಹೂವು ಚಿಕ್ಕದಿಹುದು ದೇವ,
ಹೂವಿನಲ್ಲಿ ಜಗದ ಜನರ
ಭಾವ ಪರಳಿಪಂಥ ಒಳ್ಳೆ ಪರಿಮಳಿರುವದು
ಒಳ್ಳೆ ಪರಿಮಳಿರುವದು ॥೮॥

ಚಿಕ್ಕ ಚಿಕ್ಕ ವಸ್ತುಗಳಲಿ
ಲೆಕ್ಕದಾಚೆ ಶಕ್ತಿಯಿಟ್ಟು,
ಅಕ್ಕರಿಂದೆ ದೇವ ನೀನು ಪೂಜ್ಯನಾಗಿಹೆ
ನೀನು ಪೂಜ್ಯನಾಗಿಹೆ ॥೯॥

ಇಳೆಯು ತುಂಬಿ ನಿಂತನೀನು
ಇಳಿಯುತಿಂಥ ಒಡವೆಗಳಲಿ
ಬೆಳಗಿ ಲೋಕವನ್ನು ದೇವ, ಮಹಿಮನೆನಿಸಿದಿ
ದೇವ, ಮಹಿಮನೆನಿಸಿದಿ ॥೧೦॥



# ಶಿವಶಕ್ತಿ ವಿಲಾಸವು.

ಲೇಖಕರು— ಶ್ರೀ ಶಂಭುಲಿಂಗ ಶಿವಾಚಾರ್ಯರ ಹಿರೇಮಠ ವಿಜಾಪುರ.



ಪ್ರತ್ಯೇಕ ದರ್ಶನಕಾರರ ಪಾರಿಭಾಷಿಕ ಸಂಜ್ಞೆಗಳು ಒಂದಕ್ಕೊಂದು ಭಿನ್ನಗಳಾಗಿರುವವು. ಕಪಿಲ ಮಹರ್ಷಿಯು ಮೊದಲಾದ ದರ್ಶನಕಾರರ ಒಂದು ಬಗೆಯ ವಿಶೇಷ ಸಂಪ್ರದಾಯವು ಕಂಡು ಬರುವುದು. ಅದೇನೆಂದರೆ, ಅವರು ತಮ್ಮ ವಿಚಾರಗಳನ್ನು ಜನರ ಮುಂದೆ ಇರಿಸುವುದಕ್ಕಾಗಿ ಯಾವ ಶಾಸ್ತ್ರಗಳನ್ನು ಬರೆಯುತ್ತಿರುವರೋ ಅವುಗಳಲ್ಲಿ ಭಾಷೆಯ ಮತ್ತು ವ್ಯಾಖ್ಯೆಗಳ ಉದ್ದುದ್ದವಾದ ವಾಕ್ಯಮಾಲೆಯು ಸೇರ್ಪಡೆಯು ಇರಬಾರದು ಎಂಬ ಉದ್ದೇಶದಿಂದ ಕೆಲವು ಪಾರಿಭಾಷಿಕ ಸಂಜ್ಞೆಗಳನ್ನು ಕಲ್ಪಿಸುವರು; ಮತ್ತು ವ್ಯುತ್ಪತ್ತಿಯು, ಭಾಷೆಯು, ರೂಢಿಯು ಎಂಬಿವುಗಳ ಅನುರೋಧದಿಂದಲೇ ಅವುಗಳ ಅರ್ಥವನ್ನು ನಿರ್ಣಯಗೊಳಿಸದೆ ತಮಗೆ ಅಭಿಪ್ರೇತವಾದುದನ್ನೇ ಆಯಾ ಪಾರಿಭಾಷಿಕ ಶಬ್ದಗಳ ಅರ್ಥಕಲ್ಪನೆ ಮಾಡುವರು. ಪ್ರಸಂಗೋಪಾತ್ತ ಆಯಾ ಶಬ್ದಗಳ ರೂಢಾರ್ಥಗಳನ್ನು ಒತ್ತಟ್ಟಿಗಿರಿಸಿ ತಾವು ಯೋಜಿಸಿದ ಅರ್ಥಗಳಿಂದಲೇ ತಮ್ಮ ದರ್ಶನಗಳಲ್ಲಿ ಆ ಶಬ್ದಗಳನ್ನು ಉಪಯೋಗಿಸುವರು. ಒಬ್ಬ ದರ್ಶನಕಾರನು ತನ್ನ ದರ್ಶನ ಗ್ರಂಥದಲ್ಲಿ ಒಂದು ಶಬ್ದವನ್ನು ಯಾವ ಅರ್ಥದಿಂದ ಉಪಯೋಗಿಸುವನೋ ಆ ಶಬ್ದವನ್ನೇ ಅದೇ ಅರ್ಥದಿಂದ ಅನ್ಯದರ್ಶನಕಾರರು ಉಪಯೋಗ ಮಾಡೇ ಮಾಡುವರೆಂಬ ನಿಯಮವಿಲ್ಲ. ಒಂದೊಂದು ಪ್ರಸಂಗದಲ್ಲಿ ಇಬ್ಬರು ದರ್ಶನಕಾರರ ಕೆಲವು ಪರಿಭಾಷೆಗಳು ಏಕಾರ್ಥವಾಚಕಗಳಾಗಿ ಇರಬಹುದು; ಆದರೆ ಇದು ಕೆಲವೆಡೆಗಳಲ್ಲಿಯೇ ಕಂಡುಬರುವುದು. ಒಟ್ಟಿನಮೇಲೆ ಇಲ್ಲವೆಂದೂ ಹೇಳಲಿಕ್ಕೆ ಬರುವಹಾಗಿದೆ. ಆದರೆ ಒಬ್ಬ ದರ್ಶನಕಾರನು ಒಂದು ಪಾರಿಭಾಷಿಕ ಸಂಜ್ಞೆಯ ಶಬ್ದವನ್ನು ಒಂದು ಅರ್ಥದ ಗುರಿಯಿಟ್ಟು ಉಪಯೋಗಿಸಿದುದಾದರೆ ಬೇರೆ ದರ್ಶನಕಾರನು ಅದೇ ಶಬ್ದವನ್ನು ತನ್ನ ಪರಿಭಾಷೆಯನ್ನಾಗಿಟ್ಟುಕೊಂಡು ತನ್ನ ದರ್ಶನದಲ್ಲಿ ಇತರರಿಗಿಂತ ಬೇರೆ

ಯಾದ ಅರ್ಥದಲ್ಲಿಯೂ, ಕೆಲವು ಪ್ರಸಂಗಗಳಲ್ಲಿಯಾದರೊ ವಿಪರೀತಾರ್ಥಗಳಲ್ಲಿಯೂ ಉಪಯೋಗಿಸಿರುವ ಉದಾಹರಣೆಗಳು ಬಹುವಾಗಿ ಸಿಕ್ಕುತ್ತವೆ. ಅವುಗಳಲ್ಲಿ ಕೆಲವನ್ನು ಉದಾಹರಣೆಗಾಗಿ ಈ ಕೆಳಗೆ ಬರೆಯುವೆವು.

'ಪ್ರತ್ಯಕ್ಷ' 'ಅನುಮಾನ' ಎಂಬಿವೆರಡು ಪಾರಿಭಾಷಿಕ ಶಬ್ದಗಳನ್ನೇ ಯಾವ ಯಾವ ಬಗೆಯಿಂದ ಉಪಯೋಗಿಸಿರುವರೆಂಬುದನ್ನು ನೋಡುವಾ; ನ್ಯಾಯದರ್ಶನಕಾರರು ಈ ಶಬ್ದಗಳನ್ನು ಅನುಕ್ರಮವಾಗಿ ಇಂದ್ರಿಯ ಮತ್ತು ವಿಷಯ ಇವುಗಳ ಸಂಬಂಧದಿಂದ ಉಂಟಾಗುವ ಜ್ಞಾನಕ್ಕೆ ಸಾಧನವೆಂದೂ, ಪರಾಮರ್ಶ ಜನ್ಯಜ್ಞಾನಸಾಧನವೆಂದೂ ಈ ತೆರದ ಅರ್ಥದಿಂದ ತಮ್ಮ ದರ್ಶನದಲ್ಲಿ ಉಪಯೋಗಿಸುತ್ತಾರೆ.

ಇಂದ್ರಿಯಗಳು ಪದಾರ್ಥಗಳೊಡನೆ ಸಂಬಂಧವಾಗುವ ಮೂಲಕ ಯಾವ ಜ್ಞಾನವುಂಟಾಗುವುದೊ ಅದಕ್ಕೆ 'ಪ್ರತ್ಯಕ್ಷ' ವೆನ್ನತಕ್ಕದ್ದು. ಹೊಗೆಯುಳ್ಳ ಬೆಟ್ಟವನ್ನು ನೋಡಿ, ಬೆಂಕಿ ಹೊಗೆ ಇವುಗಳ ಸಾಹಚರ್ಯಜ್ಞಾನದಿಂದ ಹೊಗೆಯಮೇಲಿಂದ ಬೆಂಕಿಯನ್ನು ಊಹಿಸಿ ತಿಳಿವುದೇ ಅನುಮಿತಿಯು ಅದಕ್ಕೆ ಸಾಧನವಾದುದು ಅನುಮಾನವೆನಿಸುವುದು. ಶ್ರೀವ್ಯಾಸನು ಶ್ರೀಶಂಕರನು ಇವರು ಮೊದಲಾದ ಉತ್ತರ ಮೀಮಾಂಸಕರು ಈ 'ಪ್ರತ್ಯಕ್ಷ' 'ಅನುಮಾನ' ಶಬ್ದಗಳನ್ನು ಪರಿಪಿಡಿದು ಶ್ರುತಿಯೂ ಸ್ಮೃತಿಯೂ ಎಂಬ ಅರ್ಥದಿಂದ ಪರಿಗ್ರಹಿಸಿ, ಹಾಗೇ ಅವುಗಳನ್ನು ತಮ್ಮ ದರ್ಶನ ಗ್ರಂಥಗಳಲ್ಲಿ ಉಪಯೋಗಿಸುತ್ತಾರೆ.

"ಅಪಿಸಂರಾಧನೆ ಪ್ರತ್ಯಕ್ಷಾನುಮಾನಾಭ್ಯಾಮ್" – ಚಿತ್ತವು ಲಯವಾಗುತ್ತಿರಲಾಗಿ, ಅಧ್ಯಾತ್ಮವೀರರೆನಿಸುವ (ವೀರಶೈವ) ಯೋಗಿಗಳೇ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳುವರೆಂಬುದು ಪ್ರತ್ಯಕ್ಷ ಮತ್ತು ಅನುಮಾನ ಇವುಗಳಮೇಲಿಂದ ಸಿದ್ಧವಾಗುತ್ತದೆ. (ಬ್ರ. ಸೂ. ೩-೨-೧೪) ಎಂಬ ಈ ಸೂತ್ರದಲ್ಲಿ 'ಪ್ರತ್ಯಕ್ಷಾನುಮಾನಾಭ್ಯಾಂ' ಶ್ರುತಿ ಸ್ಮೃತಿಭ್ಯಾಮಿತ್ಯರ್ಥಃ—ಪ್ರತ್ಯಕ್ಷ ಮತ್ತು ಅನುಮಾನ ಇವುಗಳಮೇಲಿಂದ ಎಂದರೆ ಶ್ರುತಿ ಸ್ಮೃತಿಗಳ ಮೂಲಕವು; ಎಂಬುದಾಗಿ ಈ ಪ್ರತ್ಯಕ್ಷ ಅನುಮಾನ ಎಂಬ ಶಬ್ದಗಳ ಅರ್ಥವಿರುವುದನ್ನು ಶಂಕರಾಚಾರ್ಯರು ಹೇಳುತ್ತಾರೆ.

'ಪ್ರಧಾನ' ಎಂಬ ಶಬ್ದ ಸಂಬಂಧವಾಗಿಯೂ ಇದೇ ಸ್ಥಿತಿಯು ಬೇರೆ ಬೇರೆ ದರ್ಶನಕಾರರಲ್ಲಿ ಕಂಡುಬರುವದು. ಸಾಂಖ್ಯ ದರ್ಶನಕಾರರು, ಸ್ವತಂತ್ರವೂ ಅಚೇತನವೂ ಆದ ಜಗತ್ಕಾರಣ ರೂಪವಾದ ಪ್ರಕೃ

ತಿಗೆ 'ಪ್ರಧಾನ' ಎಂಬ ಸಂಜ್ಞೆಯನ್ನು ಕೊಡುತ್ತಾರೆ. 'ಪುರುಷಸ್ಯ ದರ್ಶನಾರ್ಥಂ ಕೈವಲ್ಯಾರ್ಥಂ ಪ್ರಧಾನಸ್ಯ' — ಪುರುಷನ ದರ್ಶನಕ್ಕೋಸ್ಕರವೂ ಕೇವಲೀ ಭಾವಕ್ಕಾಗಿಯೂ ಪ್ರಧಾನದ, (ಸಾಂಖ್ಯಕಾರಿಕಾ ೨೧) ಎಂಬ ವಾಕ್ಯವು ಪ್ರಧಾನದ ಲಕ್ಷಣವನ್ನು ನಿರೂಪಿಸುವದು.

'ಪ್ರಕಾಶನ ಶೀಲಂ ಸತ್ವಂ, ಕ್ರಿಯಾಶೀಲಂ ರಜಃ, ಸ್ಥಿತಿಶೀಲಂ ತಮಃ ಇತ್ಯೇತೆ ಗುಣಾಃ ಪ್ರಧಾನ ಶಬ್ದವಾಚ್ಯಾಭವನ್ತಿ' — ಪ್ರಕಾಶಗೊಳಿಸುವಿಕೆಯು ಸತ್ವ ಸ್ವಭಾವ (ಧರ್ಮ)ವು, ರಜೋ ಗುಣದ ಸ್ವಭಾವವು ಯತ್ನ ಮತ್ತು ಚಲನ ವಲನೆಗಳು, ತಮದ ಸ್ವಭಾವವು ಸ್ಥಿತಿಯು, ಎಂದರೆ ಪ್ರಕಾಶವೂ ಯತ್ನ ಚಲನೆಗಳೂ ಇಲ್ಲದಿರುವಿಕೆ; ಈ ಬಗೆಯಾಗಿ ಈ ಸತ್ವಾದಿ ಗುಣತ್ರಯವು 'ಪ್ರಧಾನ' ಎಂಬೀ ಶಬ್ದದಿಂದ ಪ್ರಸಿದ್ಧವಾಗಿರುವುದು. (ಯೋಗ ಭಾಷ್ಯ, ೨-೧೮).

ಆ 'ಪ್ರಧಾನ' ಶಬ್ದವೇ ಉತ್ತರ ಮೀಮಾಂಸಕರಿಂದ ಪರಮಾತ್ಮ ಚೇತನ (ಬ್ರಹ್ಮ) ವೆಂಬ ಅರ್ಥದಲ್ಲಿಯೇ ಯೋಜಿಸಲ್ಪಡುವುದು. ಅದು ಹೇಗೆಂದರೆ— "ಆನಂದಾದಯಃ ಪ್ರಧಾನಸ್ಯ' —ಪ್ರಧಾನವು ನಿರ್ದಿಷ್ಟವಾಗಿರುವೆಡೆಗಳಲ್ಲೆಲ್ಲಾ ಅದು (ಪರಮಾತ್ಮ ಚೇತನವು) ಆನಂದಾದಿ ಧರ್ಮಗಳಿಂದ ಕೂಡಿರತಕ್ಕದ್ದನ್ನಾಗಿ ತಿಳಿಯತಕ್ಕದ್ದು. 'ಬ್ರಹ್ಮಣೊ ಧರ್ಮಾಃ ಸರ್ವೆ ಸರ್ವತ್ರ ಪ್ರತಿಪತ್ತವ್ಯಾಃ। ಕಸ್ಮಾತ್। ಸರ್ವಾಭೇದಾದೇವ, ಸರ್ವತ್ರ ಹಿ ತದೇವೈಕಂ ಪ್ರಧಾನಂ ವಿಶೇಷ್ಯಂ ಬ್ರಹ್ಮನ ಭಿದ್ಯತೆ '— ಪ್ರಧಾನವೆನಿಸುವ ಬ್ರಹ್ಮದ ಆನಂದಾದಿ ಧರ್ಮಗಳನ್ನು ಎಲ್ಲ ಕಡೆಯಲ್ಲಿಯೂ ಅರಿಯಬೇಕು; ಯಾವ ಕಾರಣದದೆಸೆಯಿಂದ? ಎಂದರೆ ಸರ್ವತ್ರ ಆ ಬ್ರಹ್ಮದ ನಿರ್ದೇಶವೇ ಇರುವುದರಿಂದ, ಕಾರಣ ಪ್ರಧಾನ (ಮುಖ್ಯ) ವಾದ ವಿಶೇಷ್ಯ ಬ್ರಹ್ಮವು ಎಲ್ಲ ಠಾವಿನಲ್ಲಿಯೂ ಒಂದೇ ಇದೆ ಭಿನ್ನವಿಲ್ಲ. (ಬ್ರಹ್ಮಸೂತ್ರ. ಶಾಂ-ಭಾ ೩-೩-೧೧). ಇಲ್ಲಿ ಉತ್ತರ ಮೀಮಾಂಸಕರ ಸಂಕೇತದಂತೆ 'ಪ್ರಧಾನ' ವೆಂಬ ಪಾರಿಭಾಷಿಕ ಸಂಜ್ಞೆಯು ಬ್ರಹ್ಮವೆಂಬ ಅರ್ಥವನ್ನು ಸೂಚಿಸುತ್ತದೆ. ಇದಲ್ಲದೆ, 'ಪ್ರಧಾನ' ಎಂದರೆ 'ಮುಖ್ಯ' ವೆಂಬ ಅರ್ಥದಿಂದಲೂ ಶಾರೀರಕ ಭಾಷ್ಯದಲ್ಲಿ ಪ್ರಧಾನ ಶಬ್ದವು ಕೆಲವೆಡೆಯಲ್ಲಿ ಉಪಯೋಗಿಸಲ್ಪಟ್ಟದ್ದಾಗಿ ತೋರಿಬರುವುದು.

"ಕಾರ್ಯಕಾರಣಾನಾಮಾತ್ಮಾನಾಂ ಚ ಚೇತನತ್ವಾವಿಶೇಷೇಽಪಿ ಗುಣಪ್ರಧಾನ ಭಾವೋ ನವಿರೋತ್ಸ್ಯತೆ"— ಕಾರ್ಯಕಾರಣರೂಪ ಆತ್ಮ

ರಲ್ಲಿ ಚೈತನ್ಯ ಭೇದವಿಲ್ಲದಿದ್ದರೂ ಒಂದು ಗೌಣ ಒಂದು ಮುಖ್ಯವೆಂಬ ತೆರನಿರುವುದು ವಿರುದ್ಧವಲ್ಲ. (ಬ್ರಹ್ಮಸೂ. ಶಾಂ-ಭಾ. ೨-೧-೪) ಇಲ್ಲಿ ಮುಖ್ಯವು ಅಥವಾ ಹೆಚ್ಚಿನದು ಎಂಬ ಅರ್ಥದಿಂದ 'ಪ್ರಧಾನ' ಶಬ್ದವು ಉಪಯೋಗಿಸಲ್ಪಟ್ಟಿದೆ.

ಈ ರೀತಿಯಾಗಿ ಆಗಮಿಕರು ಮೊದಲಾದ ಬೇರೆ ಬೇರೆ ದರ್ಶನ ಕಾರರು ಒಂದೇ ಶಬ್ದವನ್ನು ತೆಗೆದುಕೊಂಡು ತಮ್ಮ ತಮ್ಮ ಮತಾನು ಸಾರವಾಗಿ ತಮ್ಮ ತಮ್ಮ ಪರಿಭಾಷೆಗಳನ್ನು ನಿಶ್ಚಯಿಸಿ ಆ ಶಬ್ದದ ಸ್ವೇಚ್ಛಾನುರೂಪಗಳಾದ ಸಾಂಕೇತಿಕ ಅರ್ಥಗಳನ್ನು ಕಲ್ಪಿಸುವುದಲ್ಲದೆ ತಮ್ಮ ದರ್ಶನ ಗ್ರಥಗಳಲ್ಲಿ ಆ ಶಬ್ದವನ್ನು ಬಳಿಕೆಯಲ್ಲಿ ತರುತ್ತಿರುವದೂ ಕಂಡುಬರುವುದು.

ಈ ನೋರಿಗೆ ಭಿನ್ನ ಭಿನ್ನ ದರ್ಶನಕಾರರಿಂದ ಕಲ್ಪಿಸಲ್ಪಟ್ಟ ಒಂದೇ ಶಬ್ದದ ಅರ್ಥಗಳಾದರೊ ಪರಸ್ಪರ ಅತೀವ ಭಿನ್ನಗಳಾಗಿರುವುವು. ಒಟ್ಟಿನ ಮೇಲೆ, ಒಬ್ಬ ದರ್ಶನಕಾರನು ತನ್ನ ಪಾರಿಭಾಷಿಕ ಸಂಜ್ಞೆಯನ್ನಾಗಿ ಕಲ್ಪಿಸಿದ ಒಂದಾನೊಂದು ಶಬ್ದವನ್ನು ತನ್ನ ಗ್ರಂಥದಲ್ಲಿ ಯಾವ ಅರ್ಥ ದಿಂದ ಉಪಯೋಗಿಸುವನೋ ಅದೇ ಅರ್ಥದಿಂದ ಆ ಶಬ್ದವನ್ನು ಮತ್ತೊಬ್ಬ ದರ್ಶನಕಾರನು ಯೋಜಿಸುವನೆಂಬ ಕಟ್ಟಳೆಯುಂಟೆಂದು ಹೇಳಲಾಗುವುದಿಲ್ಲ.

ಶಂಕರಾಚಾರ್ಯರು ಪ್ರಕೃತಿಯ ವ್ಯಾಖ್ಯೆಯನ್ನು ಮಾಡಿರುವುದು ಹೇಗೆಂದರೆ— 'ಇತೀಯಂ ಯಥೋಕ್ತಾ (ಭೂಮಿರಾಪೋನಲೊ ವಾಯು ರಿತಿ) ಪ್ರಕೃತಿರ್ಮ ಮೈಶ್ವರೀ ಮಾಯಾಶಕ್ತಿಃ'– ಈ ಪ್ರಕಾರವಾಗಿ, ಪೂ ರ್ವೋಕ್ತ ಪ್ರಕೃತಿಯು — ನನ್ನ (ಈಶ್ವರನ) ಸಂಬಂಧಿಯಾದ ಮಾಯಾ ಶಕ್ತಿಯು ಎಂಟು ವಿಧವಾಗಿ ಭಿನ್ನವಾಗಿದೆ; (ಗೀತಾ ಭಾಷ್ಯ ಅ.೭). 'ನಹಿತಯಾ ವಿನಾ ಪರಮೇಶ್ವರಸ್ಯ ಸ್ರಷ್ಟೃತ್ವಂ ಸಿದ್ಧ್ಯತಿ, ಶಕ್ತಿ ರಹಿತಸ್ಯ ತಸ್ಯ ಪ್ರವೃತ್ತ್ಯನುಪ ಪತ್ತೇಃ। ಅವಿದ್ಯಾತ್ಮಿಕಾಹಿ ಬೀಜ ಶಕ್ತಿರವ್ಯಕ್ತ ಶಬ್ದ ನಿರ್ದೇಶ್ಯಾ ಪರಮೇಶ್ವರಾಶ್ರಯಾ ಮಾಯಾಮಯೀ'– ಆ ಶಕ್ತಿಯು ಇಲ್ಲದೇ ಪರಮೇಶ್ವರನ ಜಗದುತ್ಪಾದಕತ್ವವೆಂಬ ಕಾರ್ಯವು ಸಿದ್ಧಿಸದು. ಅವ ನಲ್ಲಿ ಶಕ್ತಿಯೇ ಇಲ್ಲವಾದರೆ, ಅವನು ಸೃಷ್ಟಿ ಸಂಬಂಧವಾಗಿ ಉದ್ಯುಕ್ತ ನಾಗುವುದು ಶಕ್ಯವೇ ಇಲ್ಲ; ಅವ್ಯಕ್ತ ಶಬ್ದದಿಂದ ನಿರ್ದೇಶಿಸಲ್ಪಟ್ಟ ಅವಿ ದ್ಯಾತ್ಮಕ ಬೀಜ ಶಕ್ತಿಯು ಪರಮೇಶ್ವರನನ್ನು ಆಶ್ರಯಿಸಿರುವ ಮಾಯಾ

ಮಾಯೆಯೆನಿಸುವ ಮಹಾ ನಿದ್ರೆಯೇ ಆಗಿದೆ. (ಬ್ರ. ಸೂ ಶಾಂ-ಭಾ. ೧-೪-೩).

'ಈಶ್ವರನ ಆತ್ಮಭೂತಗಳಾಗಿರುವ ಹಾಗೆಯೂ, ಆದರೆ ಈಶ್ವರ ರೂಪವೆಂದಾಗಲಿ ಈಶ್ವರ ರೂಪಕ್ಕೆ ಬೇರೆಯೆಂದಾಗಲಿ ಹೇಳಲಿಕ್ಕೆ ಬಾರದೇ ಇರುವುದರಿಂದಲೂ, ಅವಿದ್ಯೆಯಿಂದ ಕಲ್ಪಿತವಾದವುಗಳೆಂದೇ ಹೇಳಲ್ಪಡುವ ಸಂಸಾರ ವಿಸ್ತಾರಕ್ಕೆ ಬೀಜ ಭೂತಗಳಾದ ನಾಮರೂಪಗಳು ಶ್ರುತಿ ಸ್ಮೃತಿಗಳಲ್ಲಿ ಈಶ್ವರನ ಮಾಯಾಶಕ್ತಿಯು ಅಥವಾ ಪ್ರಕೃತಿಯು ಸ್ವರೂಪ ಭೂತಗಳೇ ಎಂದು ನಿರ್ದಿಷ್ಟವಾಗಿವೆ.' (ಬ್ರ. ಸೂ. ಶಾಂ-ಭಾ. ೨-೧-೧೪).

ಮತ್ತು ಆ ಶಂಕರಾಚಾರ್ಯರೇ ಪುರುಷನ ವ್ಯಾಖ್ಯೆಯನ್ನು ಹೀಗೆ ಮಾಡುವರು.- ,ಪುರುಷೋ ಜೀವಃ ಕ್ಷೇತ್ರಜ್ಞೋ ಭೋಕ್ತೇತಿ ಪರ್ಯಾಯಃ। ಪುರುಷನು ಎಂದರೆ ಇಲ್ಲಿ ನಿರುಪಾಧಿಕ ಪರಮಾತ್ಮನಲ್ಲ; ಆದರೆ ಜೀವ-ಕ್ಷೇತ್ರಜ್ಞ-ಭೋಕ್ತಾ ಎಂಬ ಪರ್ಯಾಯ ನಾಮಗಳುಳ್ಳವನೇ ಪುರುಷ ಶಬ್ದ ವಾಚ್ಯನು. (ಗೀತಾ ಭಾಷ್ಯ ೧೩-೨೦).

ಬ್ರಹ್ಮವು ಒಂದೇ ಆದರೂ ಉಪಾಧಿಯ ಸಂಬಂಧದ ಆಪೇಕ್ಷಿತ ಮೂಲಕ ಉಪಾಸ್ಯವೆಂತಲೂ ಉಪಾಧಿಯ ಸಂಬಂಧವಿಲ್ಲದುದಾಗಿ ಜ್ಞೇಯವೆಂತಲೂ ಉಪನಿಷತ್ತುಗಳಲ್ಲಿ ಹೇಳಲ್ಪಟ್ಟಿದೆ (ಬ್ರ ಸೂ. ಶಾಂ ಭಾ. ೧ ೧-೧೨)

ಅವಿದ್ಯೆಯಿಂದ ಮಾಡಲ್ಪಟ್ಟ ನಾಮರೂಪಗಳೆಂಬ ಉಪಾಧಿಗಳನ್ನು ಅನುಸರಿಸಿ ಈಶ್ವರನಿರುವನು; ಹೀಗೆ ಈಶ್ವರನ ಈಶ್ವರತ್ವ ಸರ್ವಜ್ಞತ್ವ ಸರ್ವಶಕ್ತಿತ್ವಗಳು ಅವಿದ್ಯಾತ್ಮಕ ಉಪಾಧಿಯಿಂದುಂಟಾದ ಪರಿಚ್ಛೇದವನ್ನು ಅವಲಂಬಿಸಿಯೇ ಇರುತ್ತವೆ; ವಸ್ತುತ: ಇರುವುದಿಲ್ಲ. (ಬ್ರ) ಸೂ ಶಾಂ ಭಾ. ೨-೧-೧೪

ಶಾಂಕರೀಯಮತದಲ್ಲಿ ಪುರುಷನು ಪರಮಾರ್ಥತ: ತಾತ್ವಿಕ ದೃಷ್ಟಿಯಿಂದ ನಿರುಪಾಧಿಕನಿರುವನಾದರೂ ಈಶ್ವರನೆಂಬ ಸಂಜ್ಞೆಗೆ ಪಾತ್ರನಾದರೆ ಅವನು ಮಾಯೆಯೆಂಬ ಉಪಾಧಿಯುಕ್ತನಾಗಿರುವನಲ್ಲದೆ 'ಪುರುಷ 'ಹಿರಣ್ಯಗರ್ಭ' 'ಜೀವ' ಎಂಬ ಮೊದಲಾದ ಸಂಜ್ಞೆಗಳನ್ನು ಪಡೆಯುತ್ತಾನೆ. ಜೀವಭಾವವನ್ನು ತಳೆದ ಉಪಾಧಿ ವಿಶಿಷ್ಟ ತತ್ವಕ್ಕೆ (ಪುರುಷ

ನಿಗೆ) ಸೋಪಾಧಿಕವೆನ್ನುವುದು ಶಾಂಕರೀಯ ದೃಷ್ಟ್ಯಾ ಯುಕ್ತವೇ ಸರಿ ಇದರಿಂದ ಜಗತ್ಕರ್ತನಾದ ಪರಮಾತ್ಮನು ಜಗತ್ತನ್ನು ನಿರ್ಮಿಸುವ ಅಧಿಕಾರಕಾಲದಲ್ಲಿ ಸೋಪಾಧಿಕನೇ ಆಗಿರುವುದು ಆವಶ್ಯಕವು; ಮತ್ತು ಅವನು ಹಾಗೆಯೇ ಇರುತ್ತಾನೆಂದು ಶಂಕರಾಚಾರ್ಯರ ಅಭಿಪ್ರಾಯ ವಿದೆ. ಎಂಬುದು ಈ ಮೇಲೆ ಉದಾಹೃತ ಭಾಷ್ಯಪಂಕ್ತಿಯಿಂದ ತಿಳಿದು ಬರುವುದು. ಇದು ವರೆಗೆ ಜಗತ್ಕರ್ತನಾದ ಪುರುಷನು ಶಾಂಕರೀಯ ದರ್ಶನದಲ್ಲಿ ಸೋಪಾಧಿಕನೆಂದು ಅಂಗೀಕರಿಸಲ್ಪಟ್ಟಿರುವನೆಂಬುದನ್ನು ತೋರಿಸಿದೆವು. ಆ ಪುರುಷನನ್ನು ಆಶ್ರಯಿಸಿರುವ ಪ್ರಕೃತಿಯಾದರೂ ಅಧ್ಯಸ್ತವೂ ಪರಾವಲಂಬಿಯೂ ಅನಿರ್ವಚನೀಯವೂ ಆಗಿರುವುದಲ್ಲದೆ ಉಪಾಧಿರೂಪವೂ ಆಗಿದೆ ಎಂದು ಶಾಂಕರದರ್ಶನದ ಹೇಳಿಕೆಯಿದೆ ಎಂಬುದೂ ಮೇಲಿನ ವಾಕ್ಯಗಳಿಂದ ಸ್ಪಷ್ಟವಾಗುವುದು.

ಶಾಂಕರೀಯ ಸಿದ್ಧಾಂತದಲ್ಲಿ ಪುರುಷನು ವಿಷಯಿಯಾ (ಪ್ರಕಾಶಕನು) ಎಂದೂ ಪ್ರಕೃತಿಯು ವಿಷಯ (ಪ್ರಕಾಶ್ಯ) ವೆಂದೂ ಒಡಂಬಡಿಕೆಯುಂಟು ಅಧ್ಯಾಸ ಭಾಷ್ಯದಲ್ಲಿಯಾದರೂ 'ಈ ಆತ್ಮನು ಅಸ್ಮತ್ಪ್ರತ್ಯಯ ವಿಷಯನಾದಕಾರಣ, ನಿಯಮವಾಗಿ ಅವಿಷಯನೇ ಆಗಿದ್ದಾನೆಂದೂ ಹೇಳಲಾಗುವುದಿಲ್ಲ; ಎಂದು ಪ್ರತಿಪಾದಿಸಲ್ಪಟ್ಟಿದೆ.

ಶಂಕರಾಚಾರ್ಯರು ತಮ್ಮ ಶಾರೀರಕದಲ್ಲಿ ಉಪಾಧಿಯ ಸ್ವತಂತ್ರ ವ್ಯಾಖ್ಯೆಮಾಡಿದುದು ಎಲ್ಲಿಯೂ ಕಂಡುಬರುವದಿಲ್ಲ. ಆ ಗ್ರಂಥದಲ್ಲಿ ಅವರು ಉಪಾದಿ ಶಬ್ದವನ್ನು ಮಾತ್ರ ಬಹು ಸ್ಥಳಗಳಲ್ಲಿ ಉಪಯೋಗಿಸಿದ್ದಾರೆ. ಅದರ ಮೇಲಿಂದ ಶಂಕರಾಚಾರ್ಯರಿಗೆ ಆ ಉಪಾಧಿ ಶಬ್ದದಿಂದ ಏನು ಅಭಿಪ್ರೇತವಾಗಿದ್ದಿತೆಂಬುದರಬಗ್ಗೆ ಸ್ಪಷ್ಟವಾದ ಕಲ್ಪನೆಯು ಮಾಡಲಿಕ್ಕೆ ಬರುವಹಾಗಿದೆ; ಆ ಕಲ್ಪನೆಗಾಗಿ ಈ ಕೆಳಗೆ ಕೆಲವು ವಾಕ್ಯಗಳನ್ನು ಉದ್ಧರಿಸುವೆವು.

'ಶರೀರವು' ಇಂದ್ರಿಯಗಳು, ಮನಸ್ಸು, ಬುದ್ಧಿಯು, ವಿಷಯಗಳು, ಹರ್ಷ ಶೋಕಾದಿ ವೇದನೆಗಳು ಎಂಬ ಈ ಉಪಾಧಿಗಳಿಂದ ಜೀವನ ಸ್ವರೂಪವು ಅವಿವಿಕ್ತವಾಗಿರುಹಾಗೆ ಪ್ರತೀತಿಯಾಗುವುದು; ಹಸನಾಗಿ ಬೆಳ್ಳಗಿರುವುದು ಸ್ಫಟಿಕದ ಸ್ವರೂಪವು, ಆದರೆ ಅದರ ಹತ್ತಿರದಲ್ಲಿ ಕೆಂಪು ಮತ್ತು ನೀಲಿಬಣ್ಣದ ಹೂಗಳನ್ನಿರಿಸಿದರೆ ಆ ಉಪಾಧಿಯಿಂದ ಸ್ಫಟಿಕವು ಆ ಬಣ್ಣಗಳ ಆಕಾರವಾಗಿ ತೋರುವುದು (ಬ್ರ. ಸೂ. ಶಾಂ. ಭಾ ೧-೩-೧೯

'ಉಪಾಧಿಯುದೆಸೆಯಿಂದ ಶಾರೀರ(ಜೀವ), ಅಂತರ್ಯಾಮಿ(ಈಶ್ವರ) ಇವರ ಭೇದವಿರುವುದೆಂದು ನಿರ್ದೇಶಿಸಲ್ಪಡುವುದು. ಒಂದೇ ಆಕಾಶದಲ್ಲಿ ಘಟಾಕಾಶ (ಕೊಡದೊಳಗಿನ ಬಯಲು), ಮಹಾಕಾಶ (ಎಲ್ಲಕಡೆಯಲ್ಲಿರುವ ಬಯಲು) ಎಂಬ ಭೇದದ ಹೇಳಿಕೆಯಂತೆ ಒಬ್ಬ ಆತ್ಮನಲ್ಲಿಯೇ ಜೀವ ಮತ್ತು ಈಶ್ವರ ಎಂಬ ಭೇದವ್ಯವಹಾರವಿದೆ' (ಬ್ರ. ಸೂ. ಶಾಂ. ಭಾ. ೧--೨--೨೦)

ಈ ವಿವೇಚನೆಯ ಮೇಲಿಂದ ನೋಡಿದರೆ, ತನ್ನ ಧರ್ಮವನ್ನು ಎರಡನೆಯದರ ಮೇಲೆ ಆರೋಪಿಸಿ ಅದನ್ನು ಬೇರೆ ಬಗೆಯಾಗಿ ಮಾಡಿ ತೋರಿಸುವ ಯಾವ ತತ್ವವಿದೆಯೊ ಅದು ಉಪಾಧಿಯು; ಎಂದು ಶಂಕರಾಚಾರ್ಯರ ಹೇಳಿಕೆಯಿರುವುದು ತಿಳಿದುಬರುತ್ತದೆ. 'ಉಪಾಧಿ' ಎಂದರೆ ಘಟದಂತೆ ಇರುತ್ತಿರುವ ದೇಹಾದಿ ಪ್ರಪಂಚವು, ಎಂಬುದಾಗಿ ಅವರು ಶಾರೀರಕದ ಕೆಲಕೆಲವು ಸಂದರ್ಭಗಳಲ್ಲಿ ಹೇಳಿದ್ದಾರೆ.

'ದೇಹಾದಿ ಸಮೂಹರೂಪ ಉಪಾಧಿಯ ಮೂಲಕವಾದ ಯಾವ ಅವಿವೇಕವಿದೆಯೋ ಅದರಿಂದಲೇ ಈಶ್ವರನು ಮತ್ತು ಸಂಸಾರಿಯು(ಜೀವನು) ಎಂಬ ಈ ಭೇದವನ್ನು ಮಾಡಿತೋರಿಸುವ ಮಿಥ್ಯಾ ಬುದ್ಧಿಯುಂಟಾಗಿದೆಯಲ್ಲದೇ ವಸ್ತುತಃ ಇಲ್ಲದುದಾದರೂ ಪ್ರತೀಯಮಾನಗಳಾದ ಪಂಚಭೇದಗಳಾದರೊ ಉಪಾಧಿಯ ಕಾರ್ಯಗಳಾಗಿವೆ' [ಬ್ರ. ಸೂ. ಶಾಂ ಭಾ. ೧--೧--೫

'ಭೇದವೆಂಬುದು ಉಪಾಧಿನಿಮಿತ್ತವಾದ ಮಿಥ್ಯಾಜ್ಞಾನದಿಂದ ಕಲ್ಪಿತವಾಗಿದೆ, ವಾಸ್ತವವಾಗಿ ಭೇದವೆಂಬುದೇ ಇಲ್ಲ;

ಎಂಬೀ ಮೊದಲಾದ ಅವರ ಸ್ವತಃ ಉದ್ಗಾರಗಳಮೇಲಿಂದ –'ಸ್ವರೂಪದಲ್ಲಿ ಪ್ರವೇಶಿಸದೆ ಯಾವುದು ವ್ಯಾವರ್ತಕವಾಗಿರುವುದೋ ಅದುವೇ ಅವರ ಉಪಾಧಿಯ ಕಲ್ಪನೆಯೆಂದು 'ನಿಶ್ಚಲದಾಸನನ್ನು' ಅನುಸರಿಸಿ ನಿಶ್ಚಯವಾಗಿ ಹೇಳಬಹುದು.

ಇನ್ನು, ಶಬ್ದಶಾಸ್ತ್ರದ ಆಶ್ರಯದಿಂದ ನಿಜವಾದ ಯಾವ ಅರ್ಥವು ಹೊರಡುವುದೆಂಬುದನ್ನು ನೋಡುವಾ; 'ಉಪ' ಎಂಬ ಉಪಸರ್ಗದ ಅರ್ಥವು 'ಸಮೀಪ' ಎಂದಿದೆ, 'ಧಾ' ಎಂಬೀ ಧಾತುವಿನ ಮೂಲ ಅರ್ಥವು 'ಇಡು'-'ಹಾಕು' ಎಂದಿದೆ; ಉಪ+ಧಾ ಎಂಬಿವೆರಡರಿಂದಲೇ

'ಉಪಾಧಿ' ಎಂಬ ಶಬ್ದನಿಷ್ಪತ್ತಿಯು; 'ಉಪಾಧಿಸ್ತು' ಧರ್ಮಧ್ಯಾನೆ ವಿಶೇಷಣೆ ಕುಟುಂಬ ವ್ಯಾಪೃತೆ ಛದ್ಮನಿ' [ವಿಶ್ವಃ] ಎಂದು ಕೋಶಕಾರರು ಉಪಾಧಿಯು ಶಬ್ದವನ್ನು ಧರ್ಮಚಿಂತನ, ವಿಶೇಷಣ, ಕುಟುಂಬಪೋಷಣಾಸಕ್ತಿ, ಕಪಟ; ಎಂಬ ಇಷ್ಟು ಅರ್ಥಗಳಲ್ಲಿ ಯೋಜಿಸುತ್ತಾರೆ.

ಒಟ್ಟಿನ ಮೇಲೆ, 'ಉಪಾಧಿ' ಎಂಬ ಈ ಶಬ್ದದ ಸಾಮಾನ್ಯವಾದ ಅರ್ಥವು ಆವುದೆಂದರೆ, ಹೊರಗಿನ ಕಾರಣವು ಇಲ್ಲವೆ ಸಾಹಾಯ್ಯಕವೆಂದು ಹೇಳಬಹುದು. ಶಂಕರಾಚಾರ್ಯರು ಶಾರೀರಕದಲ್ಲಿ ಉಪಾಧಿ ಶಬ್ದವನ್ನು ಮುಂದುವರಿಸುವದೇನೋ ನಿಜ; ಆದರೆ ಆದಕ್ಕೆ ಸ್ವತಂತ್ರವಾದ ವ್ಯಾಖ್ಯೆಯನ್ನು ನಿರೂಪಿಸಿದುದು ಎಲ್ಲಿಯೂ ಕಂಡು ಬರುವದಿಲ್ಲ. ಇದರಿಂದ, ಶಾಂಕರ ಮತದಲ್ಲಿ ಈಶ, ಜೀವ, ಜಗತ್ತು ಎಂಬ ಪದಾರ್ಥತ್ರಯದ ಸಮರ್ಪಕವಾದ ವಿವೇಚನೆಯು ಕೊರತೆಯಿರುವುದೆಂದು ಊಹಿಸಬಹುದಾಗಿದೆ. ಅದ್ದರಿಂದ, ಉತ್ತರ ಮೀಮಾಂಸೆಯು ತೀರುಳೇ ಶಾಂಕರ ಮತದಲ್ಲಿ ಅಡಗಿರುವದೆಂದು ಭಾವಿಸುವುದು ನಿರ್ವಿವಾದವಾದ ಸಂಗತಿಗೊಳಪಟ್ಟಿದ್ದಲ್ಲ. ವೇದದಲ್ಲಿಯ ಉತ್ತರ ವಿಚಾರದ ನಿರ್ಣೀತಾರ್ಥವನ್ನು 'ಸಿದ್ಧಾನ್ತ ಏವ ಸಿದ್ಧಾನ್ತಃ ಪೂರ್ವಪಕ್ಷಾಸ್ತಥಾಪರೆ' ಎಂಬ ವ್ಯಾಸಮಹರ್ಷಿಯ ನುಡಿಯಂತೆ, ಸಿದ್ಧಾಂತವೆಂದು ಕರೆಯಲ್ಪಡುವ ಶೈವಾಗಮದರ್ಶನದಲ್ಲಿಯೇ ಅರಿತುಕೊಳ್ಳತಕ್ಕದ್ದೆಂದು ಸಿದ್ಧವಾಗುವುದು. ಸ್ವತಂತ್ರವೂ ಅದ್ವಿತೀಯವೂ ಆದ ಬ್ರಹ್ಮವು ತ್ರಿಪುಟಿ ರೂಪವಾದ ವಿಶ್ವತೋರಿಕೆಗಾಗಿ 'ಉಪಾಧಿ' ಯೋ ಇಲ್ಲವೆ ಬೇರೆ ಯಾವದಾದರೊಂದು ಸಾಧನದ ಹಂಗು ಉಳ್ಳದ್ದಾಗಿರುವದೆಂಬ ಬಗೆಯಾದರೋ, ಉತ್ತರಮೀಮಾಂಸೆಯ ಉಗಮಸ್ಥಳವೆನಿಸುವ ಉಪನಿಷದ್ಭಾಗದಲ್ಲಿಯೇ ಕಂಡು ಬರುವದಿಲ್ಲ. ಶಿವಶಕ್ತಿ ವಿಲಾಸದ ಅಲಂಕಾರಿಕ ವರ್ಣನೆಯು ಬೃಹದಾರಣ್ಯಕದಲ್ಲಿ ಬಲು ಸೊಗಸಾಗಿದೆ. 'ಆತ್ಮೈವೇದಮಗ್ರ ಆಸೀತ್ ಪುರುಷವಿಧಃ'— ಇದೆಲ್ಲವೂ ಆರಂಭದಲ್ಲಿ ಕೇವಲ ಆತ್ಮನೇ ಆಗಿದ್ದಿತು; ಈ ಆತ್ಮನು ಪುರುಷನೆನಿಸಿಕೊಳ್ಳುವನು. (೧-೪-೧) 'ಸ ವೈ ನೈವರೇಮೇ, ತಸ್ಮಾದೇಕಾಕೀ ನ ರಮತೆ ಸದ್ವಿತೀಯ ಮೈಚ್ಛತ್, ಸ ಹೈತಾವಾನಾಸ ಯಥಾ ಸ್ತ್ರೀ ಪುಮಾಂಸೌ ಸಂಪರಿಷ್ವಕ್ತೌ ಸ ಇಮಮೇವಾತ್ಮಾನ ದ್ವೇಧಾಪಾತಯತ್, ತತಃ ಪತಿಶ್ಚ ಪತ್ನೀಚಾಭವತಾಂ, ತಸ್ಮಾದಿದಮರ್ಧ ಬೃಗಲಮಿವ ಸ್ವ ಇತಿ ಹ ಸ್ಮಾಹ ...

(೧ ೪-೩) ........... ಯದಿದಂ ಕಿಂಚ ಮಿಥುನಮಾಪಿಪೀಲಿಕಾಭ್ಯ ಸ್ತತ್ಸರ್ವಮಸೃಜತ್"-- ಅವನು ರಮಿಸುವವನಾಗಲಿಲ್ಲ. ಅದು ಕಾರಣವೇ ಈಗಲೂ ಒಂದೇ ಪ್ರಾಣಿಯು ರಮಿಸಲಾರದು. ಅವನು ಮತ್ತೊಂದು ವಸ್ತುವನ್ನು ಬಯಸಿದನು. ಆಗ ಪರಸ್ಪರ ಸಂಬದ್ಧವಾದ ಸ್ತ್ರೀಪುರುಷ ಪರಿಮಾಣತೆಯನ್ನು ತಳೆದನು; ಅವನು ಈ ತನ್ನ ಇರುವನ್ನು ಇತ್ತೆರನಾಗಿ ವಿಂಗಡಿಸಿದನು. ಅದರಿಂದ ಗಂಡ ಹೆಂಡಿರೆಂಬ ದಾಂಪತ್ಯವುಂಟಾಯಿತು. ಆ ಕಾರಣದ ದೆಸೆಯಿಂದ, ತನ್ನ ಈ ಶರೀರವನ್ನೇ ಬಿದುರಿನ ಕಂಬಿಯಂತಿರುವುದೆಂದು ಹೇಳಿದನು ಈ ಪುರುಷಾರ್ಧವಾದರೊ ಸ್ತ್ರೀಯಿಂದ ಪೂರ್ಣಗೊಳಿಸಲ್ಪಡುವುದು. (೧-೪-೩) ಈ ರೀತಿಯಾಗಿ, ಇರುವೆ ಮೊದಲಾಗಿ ತೀರ ದೊಡ್ಡ ಪ್ರಾಣಿಗಳ ವರೆಗಿನ ಸರ್ವ ಪ್ರಾಣಿಗಳ ಮಿಥುನವು[ಹೆಣ್ಣು ಗಂಡು ಜೋಡು], ಶಿವಶಕ್ತಿ ವಿಲಾಸವೇ [೧-೪-೪] 'ಸೊ ವೇದಾಹಂ ವಾವ ಸೃಷ್ಟಿರಸ್ಮಿ'- ನಾನೇ ಸೃಷ್ಟಿಯಾಗಿದ್ದೇನೆಂದು ತಿಳಿಯುವವನಾದನು [೧-೪-೫]

ಈ ಮೇಲಿನ ಬೃಹದಾರಣ್ಯದ ವಚನಗಳ ತಾತ್ಪರ್ಯವೇನೆಂದರೆ—ಈ ಸಕಲ ಜಗತ್ತು ಮೊಟ್ಟಮೊದಲು ಕೇವಲ ಅದ್ವಿತೀಯ ಚೈತನ್ಯಾತ್ಮನೇ ಆಗಿದ್ದಿತು, ಈ ಆತ್ಮನು ಪುರುಷಪ್ರಕಾರಕನಾಗಿದ್ದನು; ಅವನು ಸರ್ವತ್ರ ನೋಡತೊಡಗಿದನು, ಆದರೆ ಅವನಿಗೆ ತನ್ನ ಹೊರತು ಮತ್ತೊಂದು ಏನೂ ತೋರಲೇ ಇಲ್ಲ, ಆಗ ಅವನು ಮೊದಲಿನ ಇದ್ದಕ್ಕಿದ್ದಂತೆ ಸರ್ವಾತ್ಮನು 'ನಾನಿದ್ದೇನೆ' ಎಂದನು; ಇದರಿಂದ ಅವನ ಹೆಸರು 'ಅಹಂ' ಎಂದುಂಟಾಯಿತು. ಈಗಲಾದರೂ ಯಾವನಾದರೊಬ್ಬನನ್ನು ಕುರಿತು 'ನೀನು ಯಾವನಿದ್ದೀಯೆ? ಎಂದು ಕೇಳಲು ಅವನು 'ಅಹಂ'--ನಾನು, ಎಂದು ಮೊದಲು ಹೇಳಿ ಬಳಿಕ ತನಗಿಟ್ಟಿರುವ ಹೆಸರನ್ನು ಹೇಳುವನು. ಯಾವಕಾರಣದೆಶೆಯಿಂದ ಇವನು ಎಲ್ಲಕ್ಕೂ ಮೊದಲಿದ್ದನೊ, ಯಾವ ಇವನಿಂದ ಸರ್ವಪಾಪವೂ ದಹಿಸಲ್ಪಟ್ಟಿತೊ: ಆ ಕಾರಣದ ದೆಶೆಯಿಂದ ಇವನಿಗೆ ಪುರುಷ 'ಪೂರ್ವಂ ಓಷತಿ' ಎನ್ನುವರು [ಬೃ. ೧ ೪--೧] ಈ ಅವಸ್ಥೆಯಲ್ಲಿ ಆ ಪುರುಷ ಪ್ರಜಾಪತಿಗೆ [ಒಬ್ಬನೇ ಆಗಿದ್ದುದರಿಂದ] ರಮಿಸಲು ಬರದಂತಾಯಿತು [ದ್ವೈತಭಾನವಿಲ್ಲದೇ ವಿನಾ ವಿನೋದವು ಸಂಭವಿಸದು.] ಅದು ಕಾರಣವೇ ಈಗಲಾದರೂ ಒಬ್ಬನೇ ಒಬ್ಬನಿರುವ ಮನುಷ್ಯನಿಗೆ ರಮಿಸಲಾಗುವುದಿಲ್ಲ; ಮುಂದೆ ಅವನಿಗೆ ಜೋಡಿಯ ಬಯಕೆಯುಂಟಾಯಿತು, ಒಬ್ಬರನ್ನೊಬ್ಬರು ಆಲಿಂಗಿಸಿರುವ ಸ್ತ್ರೀ ಪುರು

ಪರ ತೋರಿಕೆಯ ಆಕಾರವನ್ನು ಆ ಪರಮಾತ್ಮನೇ ತಳೆದನು. ಅವನು ಒಬ್ಬನೇ ಆದರೂ ದಿವ್ಯರೂಪ [ಪತಿಪತ್ನಿಯರೂಪ] ನಾದನು. ಆದ್ದರಿಂದ ಹೆಂಗಸು ಗಂಡಸಿನ ಅರ್ಧ ದಲವಾಗಿದ್ದಾಳೆಂದು ಯಾಜ್ಞವಲ್ಕ್ಯನ ಮತವು. ಈ ಕಾರಣದ ದೆಸೆಯಿಂದಲೇ ಪುರುಷನೆಂಬ ಆಕಾಶವು ಸ್ತ್ರೀಯಳ ಅರ್ಧದಿಂದ ತುಂಬಿರುವುದು; ಪುರುಷನು ಸ್ತ್ರೀಯಳೊಂದಿಗೆ ರಮಿಸಿದ್ದರಿಂದ ಮನುಷ್ಯರು ಹುಟ್ಟಿದರು; ಎಂಬುದು ಈ ಉಪನಿಷತ್ತಿನ ಮತವು.

ಈ ಪತಿಪತ್ನೀ ಭಾವವೇ 'ಶಿವಶಕ್ತಿ'-'ದೇವದೇವಿ' ಎಂಬ ಹೆಸರುಗಳಿಂದ ಕರೆಯಲ್ಪಡುವುದು ಚೈತನ್ಯವು ತಾನು ತನ್ನ ಪತಿತ್ವವನ್ನು ಹಾಗೆಯೇ ಅಬಾಧಿತವಾಗಿಟ್ಟು, ತಾನೇ ಪತ್ನಿಯಾಗುವುದು ಚೈತನ್ಯಕ್ಕೆ ವಿಶ್ವನಿರ್ಮಾಣದಲ್ಲಿ ತನ್ನಶಕ್ತಿಯೆಂಬ ಕರಣದ ವ್ಯತಿರಿಕ್ತವಾಗಿ ಬೇರೊಂದು ಬಾಹ್ಯಸಾಧನದ ಹಂಗಿರುವುದಿಲ್ಲ. ಈ ಅಭಿಪ್ರಾಯವು ಶೈವಾಗಮದರ್ಶನದಲ್ಲಿ ವಿಶದೀಕರಿಸಲ್ಪಟ್ಟಿರುವ ಹಾಗೆ ಮತ್ತಾವ ದರ್ಶನಗಳಲ್ಲಿಯೂ ಕಂಡುಬರುವುದಿಲ್ಲ. ಕಾಮಿಕೋಪಾಗಮವೆನಿಸುವ ಶ್ರೀಮೃಗೇಂದ್ರದ ವಿದ್ಯಾಪಾದಾಂತರ್ಗತವಾದ ಪತಿಲಕ್ಷಣ ಪರೀಕ್ಷಾ ಪ್ರಕರಣದಲ್ಲಿ—'ಕರಣಂಚ ಶಕ್ತ್ಯನ್ಯತ್'-ವಿಶ್ವನಿರ್ಮಾಣಾದಿಕಾರ್ಯಗಳಲ್ಲಿ ಶಿವನಿಗೆ ಅವನ ಶಕ್ತಿಯೇ ಕರಣವಾಗಿ ಆಯಾಯ ಕ್ರಿಯೆಗಳನ್ನು ಸಿದ್ಧಗೊಳಿಸುವುದು ಎಂದೂ ಶ್ರೀ ಶಿವಸೂತ್ರದಲ್ಲಿ-'ಸ್ವಶಕ್ತಿ ಪ್ರಚಯೋಽಸ್ಯ ವಿಶ್ವಮ್'-ವಿಶ್ವವು ಶಿವನ ಸಂವಿದಾತ್ಮಕವಾದ ಶಕ್ತಿಯ ಸ್ಫುರಣರೂಪವಾದ ವಿಕಾಸವು[ಶಿವ ಸೂ. ೩-೩೦] ಎಂದೂ ಶ್ರೀ ಸರ್ವಮಂಗಲಾಶಾಸ್ತ್ರದಲ್ಲಿ —

ಶಕ್ತಿಶ್ಚ ಶಕ್ತಿಮಾಂಶ್ಚೈವ ಪದಾರ್ಥದ್ವಯಮುಚ್ಯತೆ।
ಶಕ್ತಯೋಽಸ್ಯ ಜಗತ್ಕೃತ್ಸ್ನಂ ಶಕ್ತಿಮಾಂಸ್ತು ಮಹೇಶ್ವರಃ॥

ಶಕ್ತಿಯೂ ಶಕ್ತಿಯುಳ್ಳವನೂ ಎಂಬುದಾಗಿ ಎರಡು ಪದಾರ್ಥಗಳು ಹೇಳಲ್ಪಡುತ್ತವೆ; ಶಕ್ತಿಯುಳ್ಳವನು ಮಹೇಶ್ವರನು, ಸರ್ವ ಜಗತ್ತು ಈ ಮಹೇಶ್ವರನ ಶಕ್ತಿವಿಕಾಸವು, ಎಂದೂ ಹೇಳಲ್ಪಟ್ಟಿದೆ

ಈ ಸಿದ್ಧಾಂತವನ್ನು ಶಾಂಕರ ಮತಾನುಯಾಯಿಗಳೂ ಶಿರಸಾ ವಂದ್ಯವಾದುದನ್ನಾಗಿ ತಿಳಿಯಬೇಕಾಗಿದೆ. ಪರಬ್ರಹ್ಮಾಭಿಧ ಪರಶಿವ ಚೈತನ್ಯದಲ್ಲಿ ಜಗನ್ನಿರ್ಮಾಣ ಕರಣವಾದ ಅಲೌಕಿಕ ಶಕ್ತಿಯೊಂದು ಉಂಟೆಂದು ಶಂಕರಾಚಾರ್ಯರೂ— 'ಚೇತನಮಪಿ ಬ್ರಹ್ಮ ಅನಪೇಕ್ಷ್ಯ ಬಾಹ್ಯಂ ಸಾಧನಂ ಸ್ವತಏವ ಜಗತ್ಸೃಕ್ಷ್ಯತಿ'— ಚೇತನ ಬ್ರಹ್ಮವೇ ಬಾಹ್ಯ

ಸಾಧನವನ್ನು ಅಪೇಕ್ಷಿಸದೆ ತಾನೇ ಜಗತ್ತನ್ನು ಹುಟ್ಟಿಸುವುದು. (ಬ್ರ. ಸೂ. ಶಾಂ-ಭಾ. ೨-೧-೨೫). ಎಂದು ಪ್ರಾಂಜಲತನದಿಂದ ಹೇಳು ತ್ತಾರೆ.

ಒಂದೇ ನಾಣ್ಯವು ಒಪ್ಪಚ್ಚಿ ಪತಿಯೆನಿಸಿಯೂ ಒಪ್ಪಚ್ಚಿ ಪತ್ನಿಯೆ ನಿಸಿಯೂ ತೋರುವ ಮೂಲಕ, ಆ ಒಂದು ನಾಣ್ಯವೇ ತನ್ನ ಅಂಗದ ಮೇಲೆ ಈ ಸೊಬಗಿನ ದಿಟವಾದ ಆಟವನ್ನು ತೋರಿಸಿತು. ಈ ಬಗೆ ಯೇ ಬೃಹದಾರಣ್ಯದಲ್ಲಿ (೧—೪—೩) ಅರ್ಧ ಬೃಗಲ ನ್ಯಾಯದಿಂದ ಬಣ್ಣಿಸಲ್ಪಟ್ಟದೆ. ಶಿವನು [ದೇವನು] ಪ್ರಕಾಶಕ [ವಿಷಯಿ] ನಾಗಿರುವಂತೆ, ಅವನ ಅವಿನಾಭಾವಶಕ್ತಿ [ದೇವಿ] ಯಾದರೂ ಪ್ರಕಾಶಕಳಾಗಿದ್ದಾಳೆ. ಇವರಿಬ್ಬರೂ ಲೀಲೆಗೋಸುಗ ತಮ್ಮ ವಿಶ್ವತೋರಿಕೆಯ ಸಾಮರ್ಥ್ಯದಿಂದ ಒಬ್ಬರನ್ನೊಬ್ಬರು ವಿಷಯೀಕರಿಸುವ ಬಗೆಯು ಉಂಟಾದುದೂ ಅಚ್ಚ ರಿಯಲ್ಲ. ಒಂದೇ ಅಂಗದಮೇಲೆ ಚಿಗಿತಿರುವ ಎರಡು ಕೈಗಳಲ್ಲಿ ಬಲ ಗೈ ಎಡಗೈಗೆ ಹಣಕೊಟ್ಟು ಸಾವುಕಾರನಾಗುವುದೂ ಎಡಗೈ ಆ ಹಣ ವನ್ನು ಇಸಿದುಕೊಳ್ಳುವ ಬಡವನೆನಿಸುವುದೂ ಎಂಬ ವಿಷಯ ವಿಷ ಯಿತ್ವಗಳು ಒಂದೇ ಅಂಗದಲ್ಲಿ ತೋರಿಬರುವುವು.

ಕಣ್ಣುಮುಂದೆ ಕಾಣಬರುವ ಸರ್ವ ಪದಾರ್ಥಗಳೂ ಅವುಗಳನ್ನು ತನ್ನಲ್ಲಿಯೇ ಸಮಾವೇಶಮಾಡಿಕೊಳ್ಳುವ ಈ ಸರ್ವ ದೃಶ್ಯಾದೃಶ್ಯ ಪ್ರಪಂಚ ವೂ ಒಂದು ಚೈತನ್ಯವೇ ಆಗಿದೆ. ಶ್ರೀ ರೇಣುಕಭಗವತ್ಪಾದರು.

ಪತ್ರಶಾಖಾದಿರೂಪೇಣ ಯಥಾತಿಷ್ಠತಿಪಾದಪಃ।
ತಥಾಭೂಮಾದಿರೂಪೇಣ ಶಿವಏಕೋ ವಿರಾಜತೆ॥

'ವೃಕ್ಷವೇ ಪತ್ರಶಾಖಾದಿ ರೂಪದಿಂದಿರುವ ಹಾಗೆ, ಶಿವನು ಒಬ್ಬನೇ ತನ್ನ ಶಕ್ತಿವಿಕಾಸದಿಂದ ಭೂಮಿ ಮೊದಲಾದ ವಿಶ್ವರೂಪನಾಗಿ ತೋರುತ್ತಾನೆ' ಎಂದು ನಿರೂಪಿಸಿದ್ದಾರೆ.

ಆ ಒಂದು ಚೈತನ್ಯವೇ ತನಗಿಂತಲೂ ವಿಜಾತೀಯವಾದ ಯಾವ ಬಗೆಯ ಬೇರೊಂದು ತತ್ವದ ನೆರವಿಲ್ಲದೆ ತನ್ನ ನೈಸರ್ಗಿಕವಾದ ಬಹು ಭವನ ನಿರ್ಮಾಣದಲ್ಲಿ ಕರಣವೆನಿಸುವ ಶಕ್ತಿಯಿಂದ ತಾನು ತನ್ನ ಏಕ ತ್ವವನ್ನು ಕಾಯ್ದಿಟ್ಟುಕೊಂಡೇ ಒಂದಕ್ಕೆರಡು, ಎರಡಕ್ಕೆ ಮೂರು ಹೀಗೆಯೇ ಕೊನೆಗೆ ಬಹು ರೂಪವಾಗಿರುವುದು. ಸೇಂಗಾದ (ನೆಲಗಡ

ಲೆಯು) ಒಂದೇ ಕಾಳು ತನ್ನ ಸೇಂಗಾತನವನ್ನು ಅಗಲದೆ ಹೊಳಕೆ[ಬೇಳೆ] ಯಾದುದಾದರೂ ಸೇಂಗಾಕ್ಕಿಂತಲೂ ಬೇರೊಂದು ತತ್ವವೇ ನಿರ್ವಾಣವಾಯಿತೆನ್ನಬಹುದೇ? ಮತ್ತು ಹೊಳಕೆಗಳು ಎರಡು, ಸೇಂಗಾ ಒಂದು, ಅಂತು ಮೂರು ಎಂದು ನುಡಿಯಲೂ ಬಾರದು. ಹೊಳಕೆಗಳಲ್ಲಿ ಸೇಂಗಾ ಇಲ್ಲವೆಂದೂ, ಸೇಂಗಾದಲ್ಲಿ ಹೊಳಕೆಗಳಿಲ್ಲವೆಂದೂ, ಹೇಳಲಾಗದು. ಪರಶಿವ ಚೈತನ್ಯವೊಂದೇ ಸೇಂಗಾಕಾಳಿನಂತಿರುವುದು, ಅದೂ ಅದರ ಸಂವಿಚ್ಛಕ್ತಿಯು ಎಂಬಿವೆರಡೂ ಆ ಸೇಂಗಾಕಾಳಿನ [ನೆಲಗಡಲೆಯ] ಎರಡು ಹೊಳಕೆಗಳು, ಅವೆರಡರಿಂದ ಉಂಟಾದ ವಿಸ್ತಾರವಾದರೂ ಸೇಂಗಾಕಾಳೇ. ಹಾಗೆಯೇ ಪರಶಿವ ಚೈತನ್ಯದಿಂದುಂಟಾದ ವಿಶ್ವವಾದರೂ ಆ ಪರಶಿವ ಚೈತನ್ಯವೇ. ಚರಾಚರಾತ್ಮಕವಾದ ಈ ವಿಶ್ವವು ಇಂದ್ರ ಜಾಲವಲ್ಲ; ಅದಕ್ಕಾಗಿ ಬ್ರಹ್ಮಕ್ಕೆ ವಿಜಾತೀಯವಾದ ಮಾಯೆಯ ಸಾಹಾಯ್ಯದ ಅಪೇಕ್ಷೆಯಿರುವುದಿಲ್ಲ. ಈ ಚೈತನ್ಯವು ಸರ್ವವನ್ನೂ ನಿರ್ಮಿಸುವ ಶಕ್ತಿಯುಳ್ಳದ್ದಾಗಿದೆ. ಬಹು ರೂಪವಾಗಿ ತೋರುವುದೆಲ್ಲವೂ ಚೈತನ್ಯವು ತಾನೊಂದೇ. ಸೇಂಗಾ ಕಾಳಿನ ಎರಡು ಹೊಳಕೆಗಳು ಕೂಡಿ ಒಂದೇ ಸೇಂಗಾ ಕಾಳು. ಹಾಗೆಯೇ ಶಿವ ಶಕ್ತಿಗಳೆಂಬ ಎರಡು ಹೊಳಕೆಗಳು, ಒಂದು ಚೈತನ್ಯವೆಂಬ ಸೇಂಗಾ ಕಾಳೇ. ಶೈವಾಗಮದರ್ಶನದಲ್ಲಿ ಶಿವಶಕ್ತಿಗಳ ಸ್ವರೂಪವು, ಬೆಂಕಿಯು ಅದರ ಸುಡುವತನವೂ ಬೆಲ್ಲವು ಅದರ ಸವಿಯೂ ಎಂಬ ಮುಂತಾದವುಗಳಿಗೆ ಹೋಲಿಸಿ ನಿರ್ದೇಶ ಮಾಡಲ್ಪಟ್ಟದೆ. ಹಲಾಯುಧನು ಈ ಶಿವಶಕ್ತಿಯುಗ್ಮದ ಸ್ವರೂಪವನ್ನು.—

ಏಕೋದೇವ: ಸಜಯತಿಶಿವ: ಕೇವಲ ಜ್ಞಾನಮೂರ್ತಿಃ ।
ದೇವೀ ಸಾಚ ತ್ರಿಭುವನಮಿದಂ ಯದ್ವಿಭೂತಿ ಪ್ರಸಂಚಮ್ ॥
ಯತ್ಕೂಟಸ್ಥಂ ಮಿಥುನಮವಿನಾ ಭಾವ ಸಂಬಂಧಯೋಗಾ ।
ನ್ಮಿ ಶ್ರೀ ಭೂತಂ ತದಖಿಲಜಗಜ್ಜನ್ಮ ಬೀಜಂ ನಮಾಮಿ ॥

'ದೇವನು [ಶಿವನು] ಸ್ವಪ್ರಕಾಶನೂ, ಅದ್ವಿತೀಯನೂ, ಆಗಿರುವಂತೆ ದೇವಿ [ಶಿವಶಕ್ತಿ] ಯಾದರೂ ಸ್ವಪ್ರಕಾಶಳೂ, ಅದ್ವಿತೀಯಳೂ, ಆಗಿದ್ದಾಳೆ. ಈ ತ್ರಿಭುವನವು ಯಾವ ಶಿವಶಕ್ತಿ ವಿಕಾಸವೇ ಆಗಿದೆಯೊ ಯಾವ ಶಿವಶಕ್ತಿಯುಗ್ಮವು ಅವಿನಾಭಾವ ಸಂಬಂಧವುಳ್ಳದ್ದಾಗಿರುವುದೊ ವಿಶ್ವದ ಉತ್ಪತ್ತಿಗೆ ಬೀಜವಾದ ಆ ಶಿವಶಕ್ತಿಯುಗ್ಮಕ್ಕೆ ಪೊಡಮಡುತ್ತೇನೆ.' ಎಂದು ಹೊಗಳಿದ್ದಾನೆ. ಕಾಳಿದಾಸನ— 'ವಾಗರ್ಥಾವಿವ ಸಂಪೃಕ್ತೌ ಎಂಬೀ

ನುಡಿಯೆಂಬ ದುರ್ಬಿಣದಿಂದ ನೋಡಿದರೂ ಈ ಮತವೇ ಸ್ಪಷ್ಟವಾಗಿ ತೋರಿ ಬರುವುದು.

ತಾನೇ ನಿರ್ಮಿಸಿದ ಜಾಳಗಿಯನ್ನು ಜೇಡ ಹುಳುವು ಮರಳಿ ತನ್ನ ಸ್ವರೂಪದಲ್ಲಿ ಅಡಗಿಸಿಕೊಳ್ಳುವಂತೆ, ದ್ವಿರೂಪವೂ ಬಹುರೂಪವೂ ಆಗಿ ತೋರುವ ತನ್ನ ಶಕ್ತಿ ವಿಕಾಸವನ್ನು ಪರಮಾತ್ಮನು ಮರಳಿ ತಾನೊಬ್ಬ ತನ್ನೊಳು ಅಡಗಿಸಿಕೊಂಡು ಒಬ್ಬನೇ ಉಳುಮೆ ರೂಪನಾಗುವನು [ಮುಂಡ ೧.೭].

ಘಟವೇ ಕುಟಿಯಾಗಿ ತೋರುವುದು. ಕುಟಿರೂಪವಾದ ವಿಶ್ವವು ಪಟರೂಪವಾದ ಚೈತನ್ಯವೇ. ಬ್ರಹ್ಮಕ್ಕೂ ತಚ್ಛಕ್ತಿ ವಿಕಾಸಭೂತವಾದ ವಿಶ್ವಕ್ಕೂ ಅಧಿಷ್ಠಾನ ಅಧ್ಯಸ್ತ ಭಾವವನ್ನು ಕಲ್ಪಿಸಿ ಹಗ್ಗ ಹಾವುಗಳ ಪರಿಯನ್ನು ಹೋಲಿಸಿ ಹೇಳುವುದು ಪರಿಪಕ್ವ ಹೃದಯರಿಗೆ ರುಚಿಸದು.

ಈ ಹಿಂದೆ ಉಲ್ಲೇಖಿಸಿದ --' ಆತ್ಮಾನಂ ದ್ವೇಧಾ ಅಪಾತಯತ್ ತತಃಪತಿಶ್ಚ ಪತ್ನೀಚಾಭವತಾಮ್' ಎಂಬ ಬೃಹದಾರಣ್ಯಕ ವಾಕ್ಯದಂತೆ ಒಂದೇ ಚೈತನ್ಯವು ತನ್ನ ಲೀಲಾ ವಿಲಾಸಕ್ಕಾಗಿ ದ್ವಿರೂಪವಾಯಿತು; ಆದರೆ ಅದು ಎರಡಾಗಿ ತೋರುವ ಭರದಲ್ಲಿ ತನ್ನ ಏಕತ್ವಕ್ಕೆ ಕುಂದು ತಂದು ಕೊಳ್ಳಲಿಲ್ಲ; ಎಂದರೆ ಅದು ಅರ್ಧ ಬೃಗುಲ ನ್ಯಾಯದಂತೆ (ದ್ವಿದಲ ಧಾನ್ಯದ ಹಾಗೆ) ತನ್ನ ಏಕಸ್ವರೂಪದಲ್ಲಿಯೇ [ಅರ್ಧನಾರೀ ನಟೇಶ್ವರನಂತೆ] ಎರಡು ಬಗೆಯ ರೂಪವನ್ನು ತೋರಿಸಿತು. ಆದರೆ, ಅದು ಅಧ್ಯಾಸವಲ್ಲ ವಸ್ತು ಸ್ಥಿತಿಯೇ. ದ್ವಿದಲ ದೊಳಗಣ ಅರ್ಧ ಭಾಗಕ್ಕೇನೆ ಶ್ರುತಿಯು ಪತ್ನಿಯೆಂದು ಹೆಸರಿಟ್ಟಿದೆ. ಈ ಚೈತನ್ಯಾರ್ಧದ್ವಯವು ತನ್ನ ಸ್ವಯಂ ಪ್ರಕಾಶತ್ವವನ್ನು ಕಳೆದುಕೊಳ್ಳದೆ ಜಗತ್ಕಾರಣವಾಗಿ ತನ್ನ ಸ್ವಭಾವದಂತಹ ಜಗತ್ತನ್ನು ನಿರ್ಮಿಸಿತು. ಕಾರಣದ ಗುಣವು ಕಾರ್ಯದಲ್ಲಿರಲೇಬೇಕು. ಎಂಬೀ ಸಾಮಾನ್ಯ ನಿಯಮದಂತೆ ಸ್ವಯಂ ಪ್ರಕಾಶ ಚೈತನ್ಯವು ಕೇವಲ ತನ್ನ ಸ್ವಭಾವದಿಂದಲೇ ಜಗತ್ತನ್ನು ಮಾಡಿದೆ; ಎಂದಮೇಲೆ ಈ ಜಗತ್ತಾದರೂ ಚಿತ್ಪ್ರಕಾಶವಾಗಿರಲೇ ಬೇಕು. ಹಾಗೇ ಇರುವುದು. ಕಾರಣ ಗುಣವು ಕಾರ್ಯದಲ್ಲಿರಬೇಕೆಂಬ ನಿಯಮವು ಶಂಕರಾಚಾರ್ಯರಿಗೆ ಗೊತ್ತಿರಲಿಲ್ಲವೆಂದಲ್ಲ. 'ಪ್ರಕೃತಿ ರೂಪಸ್ಯ ವಿಕಾರೊನ್ವಯ ದರ್ಶನಾತ್' [ಬ್ರ. ಸೂ. ಶಾಂ--ಭಾ. ೨-೧-೪] ಕಾರ್ಯದಲ್ಲಿ ಕಾರಣದ ಸ್ವರೂಪ ಅನುಗತವಾಗಿರುವುದು ತೋರಿಬರುತ್ತದೆ. [ಮಣ್ಣಿನ ಕಾರ್ಯವಾದ ಕೊಡದಲ್ಲಿ ಮಣ್ಣಿನ

ಸ್ವರೂಪವೂ, ಬಂಗಾರದಿಂದಾದ ಒಡವೆಯಲ್ಲಿ ಬಂಗಾರದ ಇರುವೂ ಕಂಡು ಬರುವುದು]. ಎಂಬುದಾಗಿ ಹೇಳುವರು. ಆದರೆ ಈ ಮಾತು ಇತರರಿಗೆ ಸಂಬಂಧಿಸಿದ್ದಲ್ಲದೆ ತಾವು (ಶಂಕರಾಚಾರ್ಯರು) ಹೇಳುವ ಜಗತ್ತಿನ ಲಕ್ಷಣದಲ್ಲಿ ಒಪ್ಪಿಗೆಯಾದುದಲ್ಲವಂತೆ! ಯಾರ ಮತದಲ್ಲಿ ಸಚ್ಚಿದಾನಂದ ಚೈತನ್ಯವು, ಅಸತ್ತು, ಜಡ, ದುಃಖರೂಪವಾದ ಜಗತ್ತಿಗೆ ಕಾರಣವಾಗಿರುವದೂ ಅವರು ಈ ಕಾರ್ಯ ಕಾರಣ ವೈಲಕ್ಷಣ್ಯವನ್ನು ಒಪ್ಪುವ ಬಗೆಯು 'ನಾನು ಕಂಬಳಿಯನ್ನು ಬಿಡಬೇಕೆಂದು ಹವಣಿಸುವೆನು. ಆದರೆ ಕಂಬಳಿಯೇ ನನ್ನನ್ನು ಬಿಡಲೊಲ್ಲದು' ಎಂಬವನ ಪರಿಯಾಗಿದೆ; ಅಯ್ಯೋ! ತಾವೇ 'ನ ಚ ವಿಲಕ್ಷಣತ್ವೆ ಪ್ರಕೃತಿವಿಕಾರ ಭಾವೊ ದೃಷ್ಟಃ'—ಯಾವುದರಲ್ಲಿ ವೈಲಕ್ಷಣ್ಯ ವಿರುವದೋ ಅದರಲ್ಲಿ ಪ್ರಕೃತಿ ವಿಕಾರ ಭಾವ[ಕಾರ್ಯ ಕಾರಣಭಾವ]ವು ತೋರುವದಿಲ್ಲ [ಬ್ರ. ಸೂ. ಶಾಂ. ಭಾ, ೨-೧-೪]. ಎಂದು ಕಾರ್ಯ ಕಾರಣಗಳಲ್ಲಿ ವೈಲಕ್ಷಣ್ಯವಿಲ್ಲದುದನ್ನು ಸಾರುವವರಾಗಿ, ಮತ್ತೆ ಈ ನುಡಿಗೆ ವಿರುದ್ಧವಾದ ಕಾರ್ಯಕಾರಣ ಭಾವದ ಘಟನೆ ಗೊಳಿಸುವದಕ್ಕಾಗಿ ಹೆಣಗುವದೊಂದು ಆಶ್ಚರಿಯೇ ಸರಿ.

ಎಲ್ಲಕಡೆಯಲ್ಲಿ ಹಬ್ಬಿ ತೋರುವ ಸೂರ್ಯನ ಪ್ರಭೆಯು ಸೂರ್ಯನ ಕಿರಣಮಯವಾಗಿರುವಂತೆ, ಪರಶಿವನ ಸಂವಿಚ್ಛಕ್ತಿಯೇ ವಿಶ್ವರೂಪವಾಗಿ ತೋರುವುದು. ಈ ರೀತಿಯಾಗಿ, ಪರಾಶಕ್ತಿಯೇ ಸಕಲ ಜಗನ್ನಿರ್ಮಾಣ ಸಮರ್ಥವಾಗಿರಲು ಪರಶಿವಚೈತನ್ಯದಲ್ಲಿ ಅನಿರ್ವಚನೀಯವೂ ಜಡವೂ ಆದ ಬೇರೊಂದು ಮಾಯೆಯೆಂಬ ಅಂತರ್ಗಡುವನ್ನು ಕಲ್ಪಿಸಿ ಜಲ್ಪಿಸುವುದೇಕೆ? ಶ್ರೀ ಮೃತ್ಯುಂಜಯ ಭಟ್ಟಾರಕದಲ್ಲಿ—

ಸಾಮಮೇಚ್ಛಾ ಪರಾಶಕ್ತಿರವಿಯುಕ್ತಾ ಸ್ವಭಾವಜಾ।
ವಹ್ನೇರೂಷ್ಮೇವ ವಿಜ್ಞೇಯಾ ರಶ್ಮಿರೂಪಾರವೇರಿವ॥
ಸರ್ವಸ್ಯ ಜಗತೋವಾಪಿ ಸಾಶಕ್ತಿಃಕಾರಣಾತ್ಮಿಕಾ।

ಎಂದು ಹೇಳಿರುವ ಮೇರೆಗೆ, ಅಗ್ನಿದಾಹಕ ಸೂರ್ಯ ಕಿರಣಗಳ ನ್ಯಾಯದಂತೆ ಪರಮಾತ್ಮನ ಇಚ್ಛಾರೂಪವಾದ ಪರಾಶಕ್ತಿಯೇ ಸರ್ವಜಗದ್ರೂಪವಾಗಿರುವುದು. ಕುಂಬಾರನು ತನಗೆ ಅನ್ಯವಾದ ಮಣ್ಣು-ತಿಗುರಿ-ಕೋಲುಗಳೆಂಬ ಉಪಾದಾನ ಸಹಕಾರಿ ಕಾರಣಗಳಿಲ್ಲದೆ ಕೊಡವನ್ನು ಮಾಡಲಾರನಷ್ಟೇ? ಹಾಗೆ ಪರಶಿವನಿಗೆ ಜಗನ್ನಿರ್ಮಾಣದಲ್ಲಿ ಭೇಕರಸನಾಯಿತ ಗಗನಕುಸುಮಾಯಿತ ವಂಧ್ಯಾಪುತ್ರಾಯಿತ ಮಾಯೆ

ಮೊದಲಾದುದರ ಹಂಗಿರುವುದಿಲ್ಲ ತನ್ನ ಸತ್ಯವಾದ ಸಂವಿಚ್ಛಕ್ತಿಯು ಮತ್ತು ಅದರ [ಪುಷ್ಪಫಲನ್ಯಾಯದಂತೆ] ವಿಲಕ್ಷಣ ಪರಿಣಾಮರೂಪಗಳಾದ ಮಾಯೆ ಪ್ರಕೃತಿಗಳನ್ನೇ ಉಪಾದಾನ ಸಹಕಾರಿಗಳನ್ನಾಗಿಮಾಡಿಕೊಂಡು ವಿಶ್ವವನ್ನು ರಚಿಸುವನು. ಇದೇ ಅಭಿಪ್ರಾಯವನ್ನು ಒಬ್ಬಾನೊಬ್ಬ ಮಾಹೇಶ್ವರನು—

ಶಕ್ತ್ಯಾಖ್ಯ ವೃತ್ತಿಪ್ಪ ಮುಪಾದದಾನೋ
ಮಾಯಾಖ್ಯ ಚಕ್ರಭ್ರಮಣ ಕ್ರಮೇಣ।
ಮೂಲಾಖ್ಯ ಮಂಡೇನ ಮುಹುರ್ವಿಧತ್ತೇ
ಬ್ರಹ್ಮಾಂಡ ಭಾಂಡಂ ಭಗವಾನ್ ಕುಲಾಲಃ॥

ಎಂದು ಹೇಳಿದ್ದಾನೆ. ಶಂಕರಾಚಾರ್ಯರಿಗಿಂತಲೂ ಹಿರಿಯರಾದ ಉತ್ಪಲಾಚಾರ್ಯರು—

ಚಿದಾತ್ಮೈವ ಹಿದೇವೋಂತಃ ಸ್ಥಿತಮಿಚ್ಛಾವಶಾದ್ಬಹಿಃ।
ಯೋಗೀವ ನಿರುಪಾದಾನ ಮರ್ಥಜಾತಂ ಪ್ರಕಾಶತೇ॥

ಎಂದು ನಿರೂಪಿಸಿರುವಂತೆ, ಯೋಗಿಗಳು ಪ್ರಸಿದ್ಧ ಮೃತ್ಕಾಷ್ಠ ಶುಕ್ರಶೋಣಿತಾದಿ ಬೇರೆಬೇರೆಯಾದ ಯಾವದೊಂದೂ ಉಪಾದಾನವನ್ನು ಅಪೇಕ್ಷಿಸದೆ, ಸ್ವೇಚ್ಛಾಶಕ್ತಿಮಾತ್ರದಿಂದೇ ಪುರಸೇನೆ ಮೊದಲಾದ ವೈಚಿತ್ರ್ಯವನ್ನು ನಿರ್ಮಿಸಿ ತೋರಿಸುತ್ತಿರುವಹಾಗೆಯೇ ಪರಶಿವನು ಸ್ವೇಚ್ಛಾಶಕ್ತಿಮಾತ್ರದಿಂದೇ ಸಮಸ್ತ ಪ್ರಪಂಚವನ್ನು ನಿರ್ಮಿಸುತ್ತಾನೆ. ಆದ್ದರಿಂದ, ಮಾಯೆಗೆ ಕಾಲತ್ರಯದಲ್ಲಿ ಅಭಾವವನ್ನು ಸಮ್ಮತಿಸಿ, ಪ್ರತೀಯಮಾನವಾದ ಈ ವಿಶ್ವಕ್ಕೆ ಅಂತಪ್ಪಮಾಯೆಯೇ ಉಪಾದಾನಕಾರಣವೆಂದು ಹೇಳಬಾರದು. ತಾನೇ ಕಾಲತ್ರಯದಲ್ಲಿ ಇಲ್ಲದುದು ಬೇರೊಂದಕ್ಕೆ ಕಾರಣವಾಗುವದುಂಟೆ? ಅದು ಕಾರಣ, ಪರಶಿವ ವಿಮರ್ಶ ಶಕ್ತಿಯು ವಿಲಕ್ಷಣ ಪರಿಣಾಮವೇ ಮಾಯೆಯು; ಅದು ತನಗಧೋವರ್ತಿಯಾದ ಕಾರ್ಯವರ್ಗಕ್ಕೆ ಉಪಾದಾನವಾಗಿರುವುದರಿಂದ ಮಿಥ್ಯೆಯಲ್ಲ; ಅದುವೇ ಮಿಥ್ಯೆಯಾದರೆ ತತ್ಕಾರ್ಯರೂಪವಾದೀ ವಿಶ್ವವೇ ಸಂಭವಿಸದು. ಪರಶಿವಸ್ವಾತ್ಮೀಯ ಶಕ್ತಿಯೊಂದೇ ಬೇರೆ ಯಾವ ಕರಣಾಪೇಕ್ಷೆಯಿಲ್ಲದೆ ಸಮಸ್ತ ಪ್ರಪಂಚ ಪ್ರಥನೈಕ ಹೇತುವಾಗಿದೆ. ಎಂಬ ಶ್ರುತಿ ಸ್ಮೃತ್ಯಾಗಮ ಸಮ್ಮತವಾದ ಈ ಶಿವಾದ್ವೈತ ಮತವೇ ಸಿದ್ಧಾಂತಿತವಾದುದೆಂದು ಪ್ರಾಚೀನರೂ ಅರ್ವಾಚೀನರೂ ಏಕ ಕಂಠವಾಗಿ ಹೇಳುತ್ತಾರೆ. ಶೀರ ಹಳಬರ ಸಾಕ್ಷಿ

ಗಳಾದರೂ ಈ ಮೇಲೆ ಉಲ್ಲೇಖಿಸಲ್ಪಟ್ಟಿವೆ. ಅವರ ಈಚೆಗೆ ವೈದೋರಿದ ಮಹಾಜ್ಞಾನಿಗಳಲ್ಲಿ, ಮಹಾರಾಷ್ಟ್ರದಲ್ಲಿ ಸುಪ್ರಸಿದ್ಧನಾದ ಜ್ಞಾನೇಶ್ವರನೆಂಬಾತನೂ ಶಕ್ತಿವಿಶಿಷ್ಟಾದ್ವೈತವಾದಿಯೇ ಆಗಿದ್ದನೆಂಬ ಸಂಗತಿಯು ಅವನು ಸ್ವತಂತ್ರವಾಗಿ ರಚಿಸಿದ 'ಅಮೃತಾನುಭವ' ಎಂಬ ಮರಾಠೀ ಓವೀಬದ್ಧ ಗ್ರಂಥದಿಂದ ತಿಳಿದುಬರುವುದು. ಸಮರ್ಥ ರಾಮದಾಸನೂ ಸಂತತುಕೋಬನೂ ಮುಂತಾದ ಮಹಾರಾಷ್ಟ್ರದೇಶದ ಸತ್ಪುರುಷರು ಆಜ್ಞಾನೇಶ್ವರನ ವಾಕ್ಯಗಳಲ್ಲಿ ಪ್ರಾಮಾಣ್ಯ ಬುದ್ಧಿಯುಳ್ಳವರಾಗಿದ್ದರೆಂಬ ಬಗ್ಗೆ ಅವರಿಂದ ಹಾಡಲ್ಪಟ್ಟ ಅಭಂಗಗಳೆಂಬ ಪದ್ಯಗಳೇ ಸಾಕ್ಷಿಗಳಾಗಿವೆ. ಅಂತಹ ಪ್ರಾಮಾಣಿಕ ಸಾಧುಪುರುಷನಾದ ಜ್ಞಾನೇಶ್ವರನು ಶೈವಾಗಮ ಮತ್ತು ಶಿವಸೂತ್ರಾದಿಗಳ ರಹಸ್ಯಾರ್ಥವನ್ನೇ ಆ 'ಅಮೃತಾನುಭವ' ಎಂಬ ಗ್ರಂಥದಲ್ಲಿ ಬಿಚ್ಚಿಹೇಳಿದ್ದಾನೆ ಶಕ್ತಿವಿಶಿಷ್ಟಾದ್ವೈತ ವಿಚಾರದಬಗ್ಗೆ ಪ್ರಮಾಣ, ಯುಕ್ತಿ, ದೃಷ್ಟಾಂತಗಳ ಪೂರ್ವಕವಾಗಿ ಅನುಭವಗಮ್ಯವಾಗುವಹಾಗೆ ಪ್ರತಿಪಾದಿಸುವ ಜ್ಞಾನೇಶ್ವರನ ಶೈಲಿಯು ಶಿವಜ್ಞಾನಿಗಳು ಮೆಚ್ಚಿ ತಲೆದೂಗುವಂತಿದೆ ಆ ಗ್ರಂಥವು ಸಂಪೂರ್ಣವಾಗಿ ಮರಾಠೀ ಕವಿತಾರೂಪವಾಗಿದ್ದರೂ ಅದರ ಮೊದಲನೆಯ ಪ್ರಕರಣದಲ್ಲಿಯ ಐದೇ ಶ್ಲೋಕಗಳು ಸಂಸ್ಕೃತಭಾಷೆಯಲ್ಲಿ ರಚಿಸಲ್ಪಟ್ಟಿರುವುದರಿಂದ, ಮರಾಠಿಭಾಷೆಯ ಪರಿಚಯುವಿಲ್ಲದವರ ತಿಳಿವಳಿಕೆಗಾಗಿ ಅವುಗಳಲ್ಲಿ ಮೂರನೆಯ ನಾಲ್ಕನೆಯ ಶ್ಲೋಕಗಳನ್ನು ನಾವು ಈ ಕೆಳಗೆ ಉಲ್ಲೇಖಿಸುವೆವು--

ಸಾರ್ಧಂ ಕೇನಚ ಕಸ್ಯಾರ್ಧಂ ಶಿವಯೋಃ ಸಮರೂಪಿಣೋಃ।
ಜ್ಞಾತುಂ ನಶಕ್ಯತೇಲಗ್ನಮಿತಿ ದ್ವೈತಚ್ಛಲಾನ್ಮ್ಮಹುಃ ॥೩॥
ಅದ್ವೈತಮಾತ್ಮನಸ್ತತ್ವಂ ದರ್ಶಯನ್ತೌಮಿಥಸ್ತರಾಮ್।
ತೌವನ್ದೇ ಜಗತಾಮಾದ್ಯೌ ತಯೋಸ್ತತ್ವಾಭಿಪತ್ತಯೆ ॥೪॥

'ಸಮಾನವಾದ ರೂಪವುಳ್ಳ ಶಿವಶಕ್ತಿಗಳಲ್ಲಿ, ಯಾವುದರೊಂದಿಗೆ ಯಾವುದಿರುವುದೆಂಬುದೂ ಯಾವುದು ಯಾವುದರ ಅರ್ಧವೆಂಬುದೂ ತಿಳಿಯಲು ಶಕ್ಯವಿಲ್ಲ; ಶಿವಶಕ್ತಿಗಳು ತಮ್ಮ ನಿಜದಿರುವನ್ನು ಪರಸ್ಪರವಾಗಿ ವ್ಯಕ್ತಪಡಿಸುತ್ತವೆ, ಇವೆರಡರ ವಾಸ್ತವಿಕ ಸ್ವರೂಪದ ಪ್ರಾಪ್ತಿಗಾಗಿ ಆ ಶಿವಶಕ್ತಿಗಳನ್ನು ನಮಿಸುತ್ತೇನೆ'

ಈ ಮೇಲಿನ ಶ್ಲೋಕಗಳ ಅರ್ಥವನ್ನು ನಾವು ಬರೆದಿರುವುದು ಜ್ಞಾನೇಶ್ವರನ ಹೃದಯದ ಆಶಯುವನ್ನೆಲ್ಲ ಸ್ಪಷ್ಟಗೊಳಿಸುವದೆಂದು ನಮ್ಮ

ಅಭಿಪ್ರಾಯವಲ್ಲ; ಶಿವಾನುಭಾವಿಗಳು ಇದಕ್ಕೂ ಹೆಚ್ಚಿನ ತಾತ್ಪರ್ಯವನ್ನು ಕಂಡು ಹಿಡಿದು ಜ್ಞಾನೇಶ್ವರನ ಅಸಾಮಾನ್ಯವಾದ ಭಾವವನ್ನು ವ್ಯಕ್ತಗೊಳಿಸಲು ಅನುಕೂಲ್ಯವಿರುವದೆಂದು ನಮ್ಮ ನಂಬಿಕೆ. ಮತ್ತು ಮಹಾರಾಷ್ಟ್ರ ಭಾಷೆಯ ಪರಿಚಯವುಳ್ಳ ಜಾಣರು ಜ್ಞಾನೇಶ್ವರನು ಬರೆದ ಅಮೃತಾನುಭವ ಗ್ರಂಥವನ್ನು ಅಗತ್ಯವಾಗಿ ಒಮ್ಮೆಯಾದರೂ ಓದಿ ಅದರ ಸ್ವಾರಸ್ಯವನ್ನು ಅರಿತು ಆನಂದ ಪಡಲೆಂದು ಅವರಿಗೆ ನಾವು ಒತ್ತಿ ಹೇಳುತ್ತೇವೆ.

ಒಟ್ಟಿನ ಮೇಲೆ, ಬೇರೆ ಬೇರೆ ಶಾಸ್ತ್ರಕಾರರು ತಮ್ಮ ತಮ್ಮ ಮತ ಸಾಧನೆಗಾಗಿ ನಾನಾವಿಧ ಪಾರಿಭಾಷಿಕ ಶಬ್ದಗಳನ್ನು ಕಲ್ಪಿಸಿ ಅವುಗಳನ್ನೇ ಬಳಕೆಯಲ್ಲಿ ತರುವ ಮೂಲಕವಾಗಿ ಹಲವು ಪರಿಯಿಂದ ಹೆಣಗುತ್ತಾರೆ; ಇಂಥಾ ಸಂದರ್ಭದಲ್ಲಿ ವಸ್ತುಸ್ಥಿತಿಯೇ ವಿಪರ್ಯಾಸಕ್ಕೀಡಾಗುವುದುಂಟು. ಆದ್ದರಿಂದ, ಸರ್ವಜ್ಞನೂ, ಪರಮಆಪ್ತನೂ, ಆದ ಪರಮೇಶ್ವರನಿಂದ ಬೋಧಿಸಲ್ಪಟ್ಟ ವೇದಾಗಮಗಳಲ್ಲಿ ಸ್ಪಷ್ಟವಾಗಿ ಕಂಡು ಬರುವ ತಾತ್ವಿಕ ವಿಚಾರಗಳೇ ಮುಮುಕ್ಷು ಜನ ಗ್ರಾಹ್ಯಗಳೆಂದು ಶಿಷ್ಟರ ಅಭಿಪ್ರಾಯವಿದೆ. ನಂದೀಸ್ಕಂದಾದಿ ಪ್ರಮಥರೂ, ಉಪಮನ್ಯು, ಔಡಲೋಮಿ ಆಶ್ಮರಥ್ಯ, ಯಾಜ್ಞ್ಯವಲ್ಕ್ಯ ಮೊದಲಾದ ಮುನಿಗಳೂ, ರೇಣುಕ, ಉಪವರ್ಷ, ಅಭಿನವ ಗುಪ್ತಾದ್ಯಾಚಾರ್ಯರೂ, ನಿಜಗುಣ ಜ್ಞಾನೇಶ್ವರಾದಿ ಮಹಾತ್ಮರೂ ವೇದದ ಉತ್ತರ ವಿಚಾರವನ್ನು ಶಿವಾಗಮಗಳನ್ನು ಅವಲಂಬಿಸಿಯೇ ಮಾಡಿದ್ದಾರೆ. ಬಹು ಪುರಾತನವಾದ ಶೈವದರ್ಶನವೇ ಮಿಕ್ಕ ದರ್ಶನಗಳಿಗಿಂತಲೂ ಸರ್ವಾಂಗಪೂರ್ಣವೂ ನಿರ್ದುಷ್ಟವೂ ಆಗಿದೆ ಎಂದು ಈಗಣ ತತ್ವಜ್ಞಾನಿಗಳಾದರೂ ಮುಕ್ತಕಂಠದಿಂದ ಹೇಳುತ್ತಾರೆ. ಆದ್ದರಿಂದ, ಶೈವದರ್ಶನ ಪ್ರತಿಪಾದ್ಯವಾದ ಶಿವಶಕ್ತಿ ವಿಲಾಸವೇ ಈ ವಿಶ್ವವೆಂಬುದು ವೇದಾಗಮಪ್ರಮಾಣಸಿದ್ಧವು.



# ಕವಿಯೂ ಜನಾಂಗದಲ್ಲಿ ಅವನ ಸ್ಥಾನವೂ.

ಲೇಖಕರು — ಬಿ. ಶಿವಮೂರ್ತಿಶಾಸ್ತ್ರಿ ಕೀರ್ತನಕೇಸರಿ ಕವಿರತ್ನ ಹುಲಕುಂಟೆ ಮಠ
ತುಮಕೂರು.



ಕವನ ಕಲೆಯುಳ್ಳವನನ್ನು ಕವಿಯೆಂದು ಕರೆವರು. ಕವಿಯು ಜನಾಂಗದ ಪ್ರತಿನಿಧಿಯಾಗಿರುವನು. ಸಮಾಜದ ನಡೆನುಡಿಗಳೂ, ಸ್ಥಿತಿಗತಿಗಳೂ, ರೀತಿನೀತಿಗಳೂ, ಕವಿಯ ಮುಖದಿಂದ ಹೊರಹೊಮ್ಮುವುವು. ಆದುದರಿಂದ ನಾಗರಿಕರೂ, ಕಲಾಭಿಮಾನಿಗಳೂ, ಆದವರೆಲ್ಲರೂ, ಕವಿಲೋಕದ ಪರಿಚಯ ಮಾಡಿಕೊಳ್ಳಲು ಕುತೂಹಲ ಪಡುವುದು ಸ್ವಾಭಾವಿಕವಾಗಿಹುದು.

ಕವಿಯೆಂದರೆ ಯಾರು? ಅವನ ಸಾಮರ್ಥ್ಯವೇನು? ಅವನ ಅಂತರಂಗದ ರಹಸ್ಯವೇನು? ಸಮಾಜದಲ್ಲಿ ಅವನ ಸ್ಥಾನವಾವುದು? ಅವನ ಗುಣದೋಷಗಳಾವು? ಎಂಬಿವೇ ಮೊದಲಾದ ವಿಷಯಗಳನ್ನು ಚರ್ಚಿಸುವುದೇ ಈ ಲೇಖನದ ಮುಖ್ಯೋದ್ದೇಶವು.

ಕವಿಯು ಮನುಷ್ಯಕೋಟಿಗೆ ಸೇರಿದವನಾದರೂ ಅವನನ್ನು ಸಾಮಾನ್ಯರಂತೆ ಗಣಿಸಲಾಗದು. ಅವನು ಕವಿತ್ವವೆಂಬ ಚಿಂತಾರತ್ನವನ್ನೂ ಪ್ರತಿಭೆಯೆಂಬ ಕಲ್ಪವೃಕ್ಷವನ್ನೂ ಲೋಕಹಿತವೆಂಬ ಕಾಮಧೇನುವನ್ನೂ ಹೊಂದಿ ಆನಂದಮಯವಾದ ಸಾಹಿತ್ಯಸಾಮ್ರಾಜ್ಯವೆಂಬ ಸ್ವರ್ಗಲೋಕದಲ್ಲಿ ಆನಂದವೆಂಬ ಶಚಿಯಿಂದ ಸಮಲಂಕೃತನಾಗಿ ಉದ್ದೇಶವೆಂಬ ಅಮರಾವತಿಯಲ್ಲಿ ಸ್ವಚ್ಛಂದವಾಗಿ ರಾಜ್ಯಭಾರ ಮಾಡುತ್ತಿರುವನು. ವಿಬುಧರೆಂಬ ದೇವತೆಗಳು ಅವನ ಪ್ರಜಾವರ್ಗವಾಗಿರುವರು. ದೇವೇಂದ್ರನ ಪಾರಿಜಾತ ತರುವು ಅವನ ಪೇರ್ಮೆಯನ್ನು ಲೋಕಕ್ಕೆ ಸಾರುವಂತೆ ಕವಿಯ ಕೀರ್ತಿಯೆಂಬ ಪಾರಿಜಾತ ತರುವು ಅವನ [ಕವಿಯ] ಖ್ಯಾತಿಯನ್ನು ಕೈಯೆತ್ತಿ ಹೇಳುವುದು. ದೇವೇಂದ್ರನಿಗೆ ವಜ್ರಾಯುಧವು ಪ್ರತಿಯೊಂದು ಕಾರ್ಯದಲ್ಲಿಯೂ ಸಹಾಯಕವಾದಂತೆ ಕವೀಂದ್ರನಿಗೆ ಅವನ ಕೈಲೇಖಣಿಯು ಅಪ್ರತಿಹತವಾಗಿ ತನ್ನ ಸ್ವಾಮಿಯ ಅಭೀಷ್ಟವನ್ನುಸಲ್ಲಿಸುವುದು. ಆದುದರಿಂದ ಅಮರನಾದ ಕವಿಯು ಅಮರರ ರಾಜ

ನನ್ನು ಹೋಲುತ್ತ ಭೂಲೋಕದ ದೇವೇಂದ್ರನೆಂಬಂತಿರುವನು. ಆದುದರಿಂದಲೇ ಹಿಂದಿನಿಂದ ಇಂದಿನ ವರೆಗೂ ಕವೀಂದ್ರನಿಗೆ ಪ್ರತಿಯೊಂದು ಜನಾಂಗವೂ ಪೂಜ್ಯಸ್ಥಾನವನ್ನೇ ಕೊಟ್ಟಿರುವುದು.

ಕವಿಯು ಸಾಹಿತ್ಯರಾಜ್ಯದಲ್ಲಿ ಸುಖವಾಗಿ ಬಾಳಲು ಅವನಿಗೆ ಕೆಲವು ಅನುಕೂಲಗಳೂ ಉತ್ತಮವಾದ ಸನ್ನಿವೇಶಗಳೂ ಬೇಕಾಗುವುವು. ಕವಿಯು ನಿರರ್ಗಳವಾಗಿ ತಾನು ತನ್ನ ಕಾರ್ಯಗಳನ್ನು ಸಾಗಿಸಲು ಅವನಿಗೆ ದಾರಿದ್ರ್ಯಬಾಧೆಯಿರಬಾರದು. ನಾನಾದುಃಖಗಳಿಗೆ ತೌರುಮನೆಯೆನಿಸಿದ ಬಡತನವು ಕವಿಯಾದವನಿಗೆ ಗಂಟುಬಿದ್ದರೆ ಅವನ ಚೈತನ್ಯವನ್ನೇ ಆ ಹಾಳು ದಾರಿದ್ರ್ಯವು ನುಂಗಿಬಿಡುವುದು. ದಾವಾಗ್ನಿಗೆ ಸಿಕ್ಕಿದ ಲತೆಯು ಜೀವಿಸುವುದು ಹೇಗೆ ಕಷ್ಟಸಾಧ್ಯವೋ ದಾರಿದ್ರ್ಯಾಗ್ನಿಗೆ ಸಿಕ್ಕಿದ ಕವಿಯ ಹೃದ್ಗತಕವಿತಾಲತೆಯು ಜೀವಿಸುವುದಾದರೂ ಹೇಗೆ ?

ನಾನಾಬಗೆಯ ಕಷ್ಟಕಾರ್ಪಣ್ಯಗಳಿಗೀಡಾದ ಕವಿಯ ಕವನಲಹರಿಯು ತನ್ನ ಸಹಜ ಸೌಂದರ್ಯ ಮಾಧುರ್ಯಗಳನ್ನೂ ಸೌಭಾಗ್ಯ ಸಾಕುಮಾರ್ಯಗಳನ್ನೂ ಹಾಳುಮಾಡಿಕೊಳ್ಳುವುದು. ಆದುದರಿಂದಲೇ ಕವಿಕುಲಗುರುವಾದ ಕಾಲಿದಾಸನು ಒಂದು ಸಮಯದಲ್ಲಿ ವಿದ್ಯಾಭಿಮಾನಿಯಾದ ಭೋಜರಾಜನನ್ನು ಕುರಿತು "ವ್ಯಸನಿ ಇವ ವಿದ್ಯಾಕ್ಷೀಯತೇ ಪಂಕಜಶ್ರೀಃ" ಎಂದು ಹೇಳಿರುವುದು. ವ್ಯಸನಿಯ ವಿದ್ಯೆಯು ಕ್ಷೀಣಿಸುವಂತೆಯೇ ದರಿದ್ರಕವಿಯ ಕವನಶಕ್ತಿಯೂ ಕುಂದುವುದು.

ಕವಿಗೆ ಯಾವ ಈತಿಬಾಧೆಗಳೂ ಇರಬಾರದು. ಅವನ ಮನಸ್ಸು ಅನುಪಯುಕ್ತ ಚಿಂತೆಗಳಿಗೆ ಈಡಾಗಬಾರದು. ಕವಿಯು ತನ್ನ ಅಮೌಲ್ಯವಾದ ಜೀವನವನ್ನೂ ಅಲಭ್ಯವಾದ ಶಕ್ತಿವಿಶೇಷವನ್ನೂ ಸಾಮಾನ್ಯಕಾರ್ಯಗಳಿಗೆ ಉಪಯೋಗಿಸುವದಾದರೆ ಜನಾಂಗಕ್ಕೆ ಅದು ಅಪರಿಮಿತ ನಷ್ಟವೆಂದೇ ಹೇಳಬೇಕಾಗುವುದು.

ಯಾವನದೆಶೆಯಿಂದ ಜನಜೀವನವು ಸುಧಾರಿಸಬೇಕಾಗುವುದೋ, ಯಾರ ಶಕ್ತಿಯಿಂದ ಜನಾಂಗದಲ್ಲಿ ರಸಿಕತೆಯೂ, ಅಭಿಜ್ಞತೆಯೂ, ಸುಖಾನುಭವವೂ ಬಳೆಯಬೇಕೋ ಅಂತಹ ಕವಿಯನ್ನು ಜನಾಂಗವು ಕಡೆಗಣಿಸುವುದು ಎಷ್ಟುಮಾತ್ರಕ್ಕೂ ಒಪ್ಪತಕ್ಕದ್ದಲ್ಲ. ಕವಿಗೆ ತಕ್ಕಷ್ಟು ಸಂತೋ

ಷವೂ ಶಾಂತತೆಯೂ ಲಭಿಸದ ಹೊರತು ಅವನು ತನ್ನ ಶಕ್ತಿಯನ್ನು ಬಹಿರಂಗಪಡಿಸಲು ಒಪ್ಪುವುದಿಲ್ಲ. ಅಥವಾ ಅವನ ಅಂತರಂಗದಿಂದ ಮೃದುಮಧುರವೂ ನವರಸಮಯವೂ, ಆವೇಶಯುಕ್ತವೂ ಆದ ಕವನ ಲಹರಿಯು ಪ್ರವಹಿಸುವದಿಲ್ಲ.

ಕೋಗಿಲೆಯು ವಸಂತಕಾಲದಲ್ಲಿ ಹಾಡುವುದು. ಗಿಣಿಯು ಸಂತೋಷವಾದಾಗ ಮಾತನಾಡುವುದು. ದುಂಬಿಯು ನವಕುಸುಮಗಳನ್ನು ಕಂಡು ಝೇಂಕರಿಸುವುದು. ಹಂಸವು ಮಾನಸ ಸರೋವರವನ್ನು ಕಂಡು ಆನಂದಿಸುವುದು. ಚಕೋರಿಯು ಬೆಳದಿಂಗಳನ್ನು ಕಂಡು ಕುಣಿದಾಡುವುದು- ಹೇಗೆ ಸ್ವಾಭಾವಿಕವೋ ಕವಿಯು ತೃಪ್ತನಾದಾಗ ಅವನ ಶಕ್ತಿಯು ಹೊರ ಹೊಮ್ಮುವುದಾದರೂ ಹಾಗೆಯೇ ನಿಸರ್ಗವಾದುದು.

ಪೂರ್ವ ಕಾಲದಿಂದಲೂ ಆರ್ಯ ಜನಾಂಗವು ಕವಿಗೆ ಉತ್ತಮ ಸ್ಥಾನವನ್ನೇ ನಿರ್ಧರಿಸಿರುವುದು. ಆರ್ಯ ಜನಾಂಗಕ್ಕೆ ಪರಮ ಪೂಜ್ಯರೆನಿಸಿದ ವ್ಯಾಸ, ವಾಲ್ಮೀಕಿ, ಶುಕ, ಗೌತಮ, ಪರಾಶರ ಪ್ರಭೃತಿಗಳೆಲ್ಲರೂ ಋಷಿ ಕವಿಗಳೇ ಆಗಿರುವರು. ಪುರಾಣಯುಗದಲ್ಲಿ ಋಷಿ ಕವಿಗಳು ಭಗವಂತನ ಅಂಶೀಭೂತರಾದವರೆಂದು ಜನರು ಭಾವಿಸಿದ್ದರು.

ಇತಿಹಾಸ ಕಾಲದಲ್ಲಿಯೂ ನಮ್ಮ ಆರ್ಯ ಭೂಮಿಯಲ್ಲಿ ಕವಿಗಳು ಉತ್ತಮ ಸ್ಥಾನಾಪನ್ನರಾಗಿಯೇ ಇದ್ದರು. ಚಂದ್ರಗುಪ್ತಮೌರ್ಯನು ಕವಿಯೂ, ಮಹಾಯೋಗಿಯೂ, ನೀತಿ ನಿಪುಣನೂ ಆದ ಕೌಟಿಲ್ಯನನ್ನು ತನ್ನ ಪರಮ ಗುರುವಾಗಿ ಭಾವಿಸಿದನು. ಶ್ರೀ ಹರ್ಷನು ಮಹಾಕವಿ ಬಾಣಭಟ್ಟನನ್ನು ತನ್ನ ಸರ್ವಸ್ವನಾಗಿ ಭಾವಿಸಿ ಅವನಿಗೆ ತನ್ನ ಆಸ್ಥಾನದ ಅಗ್ರ ಪೀಠವನ್ನು ಮೀಸಲಾಗಿಟ್ಟನು. ಜಗದ್ವಿಖ್ಯಾತನಾದ ಭೋಜ ರಾಜನು ಕಾಲಿದಾಸನನ್ನು ತನ್ನ ಪ್ರಾಣಕ್ಕಿಂತಲೂ ಪ್ರಿಯತಮನೆಂದು ನಂಬಿದನು. ಭವಭೂತಿ ಮೊದಲಾದ ಕವಿಪುಂಗವರಿಗೆ ವಿಪುಲಾಶ್ರಯವನ್ನು ಕೊಟ್ಟು ಈ ಲೋಕದಲ್ಲಿ ಮತ್ತಾರಿಗೂ ಸಾಧ್ಯವಲ್ಲದ ಸಾಹಿತ್ಯ ಸಾಮ್ರಾಜ್ಯ ಸಾಮ್ರಾಟ ಪದವಿಯನ್ನು ಹೊಂದಿದನು.

ಹೀಗೆಯೇ ನಮ್ಮ ದೇಶದ ರಾಜರೂ ಸಾರ್ವಭೌಮರೂ ಶ್ರೀಮಂತರೂ ಪೂರ್ವದಿಂದಲೂ ಕವಿಗಳಿಗೆ ಆಶ್ರಯವನ್ನು ಕೊಡುತ್ತಲೇ ಬಂದಿರುವರು. "ನಿರಾಶ್ರಯೋನ ಶೋಭಂತೇ ಪಂಡಿತಾವನಿತಾಲತಾಃ" ಎಂಬೀ ಸೂ

ತ್ರವು ಎಲ್ಲ ಜನಾಂಗಕ್ಕಿಂತಲೂ ಮೊದಲು ನಮ್ಮ ಆರ್ಯರಿಗೇ ತಿಳಿದಂತೆ ತೋರುವುದು.

ಕವಿಯು ಕಾರ್ಯ ನಿರ್ವಾಹಣದಲ್ಲಿ ಪ್ರವೀಣನೆಂದು ಮಾತ್ರ ಹಿಂದಿನವರು ಭಾವಿಸಿದಂತೆ ಕಾಣುವದಿಲ್ಲ. ಕವಿಯು ರಾಜ್ಯಭಾರ ಮಾಡಲಿಕ್ಕೂ ಕಡೆಗೆ ರಾಜ ಪದವಿಗೂ ಅರ್ಹನೆಂಬುದನ್ನು ನಮ್ಮ ಕನ್ನಡ ದೇಶದಲ್ಲಿ ಆಗಿಹೋದ ಮಹಾಪುರುಷರ ಚರಿತ್ರೆಗಳಿಂದ ತಿಳಿಯಬಹುದು.

ಮೈಸೂರು ಸಂಸ್ಥಾನವನ್ನು ಆಳಿದ ಮಹಾರಾಜರುಗಳಲ್ಲಿ ಅತ್ಯಂತ ವಿಖ್ಯಾತರಾದ ಚಿಕ್ಕ ದೇವರಾಜರು ಮಹಾ ಕವಿ ತಿರುಮಲಾರ್ಯನನ್ನು ತಮ್ಮ ಮಂತ್ರಿಯಾಗಿ ಸ್ವೀಕರಿಸಿದ್ದರು. ಕೆಳದಿ ಸಂಸ್ಥಾನದಲ್ಲಿ ರಾಜ್ಯವಾಳಿದವರಲ್ಲಿ ಅತ್ಯಂತ ಪ್ರಬಲನಾದ ಕರ್ಣಾಟಕ ಭೋಜ ನೆನಿಸಿದ ಬಸವರಾಜನು ಷಡಕ್ಷರ ಮಂತ್ರಿಯನ್ನೂ ನಿರ್ವಾಣ ಮಂತ್ರಿಯನ್ನೂ ತನ್ನ ಅಮಾತ್ಯರನ್ನಾಗಿ ಸ್ವೀಕರಿಸಿದ್ದನು. ಬೇಲೂರಿನಲ್ಲಿದ್ದ ನರಸಿಂಹ ಬಲ್ಲಾಳನು ಮಹಾಕವಿ ಪದ್ಮರಸನನ್ನು ತನ್ನ ಮಂತ್ರಿಯನ್ನಾಗಿ ನೇಮಿಸಿ ಕೊಂಡಿದ್ದನು.

ದ್ವಾರಸಮುದ್ರದಲ್ಲಿದ್ದ ನರಸಿಂಹ ಬಲ್ಲಾಳನು ಹರಿಹರದೇವನನ್ನು ತನ್ನ ಆಸ್ಥಾನದಲ್ಲಿ ಕರಣಿಕರಕುಲತಿಲಕನನ್ನಾಗಿ ನೇಮಿಸಿದ್ದನು. ಚಿಕ್ಕದೇವರಾಜರು ಚಿಕ್ಕುಪಾಧ್ಯಾಯ, ಸಿಂಗಳಾರ್ಯ ಮೊದಲಾದವರಿಗೆ ಸಹಾಯಕರಾಗಿ ಅವರಿಗೆ ತಾವೇ ಪೋಷಕರಾಗಿದ್ದರು. ಕೆಳದಿಯ ವೆಂಕಟಪ್ಪನಾಯಕನು ತಿರುಮಲಭಟ್ಟ ಮೊದಲಾದ ಕವಿಗಳಿಗೆ ಆಶ್ರಯವನ್ನಿತ್ತನು. ಒಟ್ಟಿನಲ್ಲಿ ಹೇಳುವುದಾದರೆ ಪುರಾಣಯುಗದಿಂದ ಇಲ್ಲಿಯವರೆಗೂ ಕವಿಲೋಕವನ್ನು ಆರ್ಯಜನಾಂಗವು ಗೌರವಿಸಿರುವುದು.

ಸೋಮಕವಿಯು “ಕವಿಯೇ ರಾಜನ ಕಣ್ಣೆಲೈ” ಎಂದು ಒಂದೆಡೆಯಲ್ಲಿ ಹೇಳಿರುವನು. ಅದನ್ನು “ಕವಿಯೇ ಲೋಕದ ಕಣ್ಣೆಲೈ” ಎಂದು ನಾವು ಬದಲಾಯಿಸಿದರೆ ಅದಕ್ಕೆ ಇನ್ನೂ ಗೌರವವುಂಟಾಗುವುದು. ಕವಿಯು ಜನಾಂಗದಲ್ಲಿ ಗಣನೀಯನಾದುದರಿಂದಲೇ ಅವನನ್ನು “ಕವಿಯೇ ಸರ್ವರೊಳುತ್ತಮಂ” ಎಂದು ಕವಿಗಳು ಹೊಗಳಿರುವರು.

ಸ್ವಲ್ಪ ವಿಚಾರಮಾಡಿ ನೋಡಿದರೆ ನಮಗೆ ಮೇಲಿನ ಸೋಮಕವಿಯ ವಾಕ್ಯಗಳು ಯಥಾರ್ಥವಾದವುಗಳೆಂದು ತೋರುವುವು. ಆದಿ

ಕವಿಯಾದ ವಾಲ್ಮೀಕಿಯೂ ಭಗವಾನ್ ಬಾದರಾಯಣನೂ ಮುನಿಶ್ರೇಷ್ಠರಾದ ಶುಕಪರಾಶರ ಗೌತಮಾದಿಗಳೂ ಕವಿಗಳಾಗಿರದಿದ್ದರೆ ಈಗಿನ ಜನಾಂಗದ ಸ್ಥಿತಿಯೇನಾಗುತ್ತಿದ್ದಿತು? ಆ ಮಹಾತ್ಮರು ರಾಮಾಯಣ, ಭಾರತ, ಭಾಗವತಾದಿ ಇತಿಹಾಸಗಳನ್ನೂ ಪುರಾಣಗಳನ್ನೂ ಸ್ಮೃತಿಗಳನ್ನೂ ಶಾಸ್ತ್ರಗಳನ್ನೂ ಬರೆದಿಡದಿದ್ದರೆ ಇಂದು ನಮ್ಮ ಜನಾಂಗಕ್ಕಿರುವ ಮನುಷ್ಯತ್ವವು ಎಲ್ಲಿಂದ ಬರುತ್ತಿದ್ದಿತು? ಶ್ರೀರಾಮ, ಧರ್ಮಜ, ಕಲಿಪಾರ್ಥ, ಶ್ರೀಕೃಷ್ಣ, ನಳ, ಹರಿಶ್ಚಂದ್ರ, ಪುರೂರುವ, ದುಷ್ಯಂತ, ಭರತಾದಿ ಜೀವರತ್ನಗಳು ನಮ್ಮ ಸ್ಮೃತಿಪಥದಲ್ಲಿರುತ್ತಿದ್ದವೆ? ಇಂತಹ ಮಹಾಪುರುಷರ ಚರಿತೆಯ ಪರಿಚಯವು ನಮಗೆ ಆ ಋಷಿ ಕವಿಗಳ ಮುಖದಿಂದಲ್ಲವೇ? ಆದರೂ ಇದಕ್ಕಾಗಿಯೇ ನಾವು ಕವಿಸೋಮನ ನುಡಿಯನ್ನು "ಕವಿಯೇ ಲೋಕದ ಕಣ್ಣೆಲ್ಲೈ" ಎಂದು ತಿದ್ದಿ ಬರೆದುದು.

ಕವಿಗಳಲ್ಲಿ 'ವಾಗ್ವಶ್ಯ' ರೆಂದೂ 'ವಶ್ಯವಾಕ್ಕು' ಗಳೆಂದೂ ಎರಡು ಬಗೆಯುಂಟು. ಯಾವನು ಮಾತುಗಳಿಗೆ ಅಧೀನನೋ ಅಂತಹವನು ವಾಗ್ವಶ್ಯನು. ಯಾವನ ಅಧೀನದಲ್ಲಿ ಮಾತುಗಳಿವೆಯೋ ಅಂದರೆ ಯಾವನಿಗೆ ವಾಕ್ಯಗಳೂ ಸಾಹಿತ್ಯಗಳೂ ವಿಧೇಯವಾಗಿವೆಯೋ ಅಂತಹವನು ವಶ್ಯವಾಕ್ಕೆಂದೂ ಗಣಿಸಲ್ಪಡುವನು. ವಾಗ್ವಶ್ಯನನ್ನು ಸಾಮಾನ್ಯ ಕವಿಯೆಂದೂ ವಶ್ಯವಾಕ್ಕುಳ್ಳವನನ್ನು ಮಹಾ ಕವಿಯೆಂದೂ ಕಲಾವಿದರು ಹೇಳುವರು.

ವಾಗ್ವಶ್ಯನಾದ ಸಾಮಾನ್ಯ ಕವಿಯು ಕಾವ್ಯವನ್ನು ಬರೆಯಲಿಕ್ಕೆ ಎಷ್ಟುಮಾತ್ರಕ್ಕೂ ಸಮರ್ಥನಾಗಲಾರನು. ಒಂದುವೇಳೆ ಪ್ರಯತ್ನಿಸಿದರೂ ಅವನ ಕೃತಿಯು ಸತ್ಕಾರ್ಯವೆನಿಸದು. ಇಂತಹ ಅಸಮರ್ಥ ಕವಿಯನ್ನು ಷಡಕ್ಷರದೇವನು

ವೃ॥ ಬರೆಬರೆದಂತದಂ ತೊರೆದು ತೊಟ್ಟನೆ ನಿಟ್ಟಿಸಿ ಮೆಲ್ಲನೊಂದುಮಂ।
ಸರಸಪದಾರ್ಥಮಂ ತಡಕಿ ಕಾಣದೆ ಕಳ್ದು ಪರೋಕ್ತ ಯುಕ್ತಿಯಂ॥
ವಿರಚಿಸುತಂತು ಮಿಂತು ಮಳಿಗಬ್ಬಮನಾಗಿಸಿ ಕೇಳಿಸುತ್ತೆ ಕಾ।
ಲುರಿಚರ ತೋರ್ಪ ದುಷ್ಕವಿ ಮಹಾಕವಿ ಮಧ್ಯದೊಳೊಪ್ಪಲಾರ್ಪನೇ॥

ರಾಜಶೇಖರ ವಿಳಾಸ (ಪ್ರ. ಪ. ೨೩)

ಎಂಬುದಾಗಿಯೂ, ಮಹಾ ಕವಿಯಾದ ನೇಮಿಚಂದ್ರನು

ಕಂದ॥ ಅಸ್ತವ್ಯಸ್ತಂ ಪದಮು।
ಪ್ರಸ್ತುತಮತಿ ವಿಹಿತಮರ್ಥಮೇನೆ ದುಷ್ಕೃತಿಯಂ॥
ವಿಸ್ತರಿಸಿ ಸಲೆ ಸುಜನ ಶಿ।
ರ ಸ್ತೋದಮನೇಕೆಮಸಗಿ ಮಾಳ್ಪರೊ ಕೆಲಬರ್॥೨೨॥

ಮಿಗೆ ಪದಮಿಡಲರಿಯದ ನಾ।
ಲಗೆ ವೆಳವರ್ ಸಲೆ ಸದರ್ಥಮಂ ಕಾಣದಪೋ॥
ಬಗೆ ಗುರುಡರ್ ಬಗೆಪ್ಪೊಡೆ ಕ।
ಬ್ಬಿಗರಕ್ಕನೆ ಓದುಗೇಳದಕ್ಕರಗಿವುಡರ್॥೨೩॥

[ಲೀಲಾವತಿ. ಪ್ರ. ಆ.]

ಎಂಬ ರೀತಿಯಿಂದಲೂ ಹಂಗಿಸಿರುವರು. ಯಾವನಾದರೆ ಸಂಸ್ಕಾರ ಜನ್ಯವಾದ ಕವಿತಾವೇಶವುಳ್ಳವನಾಗಿರುವುದಿಲ್ಲವೋ ಅಥವಾ ಇದ್ದರೂ ತಕ್ಕಷ್ಟು ವ್ಯುತ್ಪನ್ನನಾಗಿರುವುದಿಲ್ಲವೋ ಅವನು ಕಾವ್ಯ ಮಾರ್ಗದಲ್ಲಿ ಹೀಗೆ ಅಪಹಾಸ್ಯಕ್ಕೆ ಗುರಿಯಾಗಿ ವಾಗ್ವಶ್ಯನಾದ ಸಾಮಾನ್ಯ ಕವಿಯೆಂದು ಕರೆಯಲ್ಪಡುವನು. ವಶ್ಯವಾಕ್ಕೆನಿಸಿದ ಮಹಾ ಕವಿಯು ಹೀಗೆಂದಿಗೂ ಕಾವ್ಯಮಾರ್ಗದಲ್ಲಿ ಎಡವಲಾರನು.

ವಶ್ಯವಾಕ್ಕೆನಿಸಿದ ಮಹಾ ಕವಿಯು ಕಾವ್ಯವನ್ನು ಬರೆಯಲಿಕ್ಕೆ ತೊಡಗಿದರೆ ಪದಗಳೂ ಭಾವಗಳೂ ಉಪಮೆಗಳೂ ತಾವಾಗಿಯೇ ಒಂದರಮೇಲೊಂದು ಬಂದು, ಕವಿಯು ನಮ್ಮನ್ನು ಕರೆದರೆ ಸಾಕೆಂದು ವಿಧೇಯವಾಗಿ ನಿಂತಿರುವುವು. ಇಂತಹ ಕಬ್ಬಿಗನ ಕೃತಿಯು "ಮನೋಭವನ ಲರಂಬಿನಂತೆ" ಹೃದಯಂಗಮವಾಗಿರುವುದು.

ಮಹಾಕವಿ ನಿರ್ಮಿತಕಾವ್ಯಗಳು ಈ ಮುಂದೆ ಹೇಳುವಂತೆ

ವೃ॥ ಪ್ರಿಯವಚದಂತೆ ಪುಣ್ಯತತಿಯಂತೆ ಸುಧಾಕರನಂತೆ ಕೂರ್ತಮು।
ಗ್ಧೆಯ ಕಡುನೇಹದಂತಮೃತದಂತೆ ವಸಂತಕನಂತೆ ಪುಷ್ಪಮಾ॥
ಲೆಯ ಪೊಸಗಂಪಿನಂತೆ ಮಲಯಾನಿಲನಂತೆ ಮರಾಳನಂತೆ...।
..................................................................॥

[ಗಿರಿಜಾಕಲ್ಯಾಣ.]

ಯೂ,

ವೃ॥ ಜೇಂಗೊಡವಂತೆ ಝೇಂಕರಿಪ ತುಂಬಿಗಳಿಂಚರದಂತೆ ಪೆಂಪಸಾ।
ಳ್ದಂಗಡಲಂತೆ ಪತ್ತೆಸೆವ ಮಾಮರನಂತೆಳೆಗಾಳಿಯಂತೆ ಬೆ॥
ಳ್ದಿಂಗಳ ಸೊಂಪಿನಂತೆ ಸುಸಿಲಾಸೆಯನಲ್ಲಳ ನೋಟದಂತೆ...।
॥

[ಶಬರಶಂಕರವಿಳಾಸ.]

ಯೂ, ಮತ್ತು

ವೃ॥ ಎಳಗಿಳಿ ವೆಂಡಿರಂತೆ ಮಿಳಿರ್ದಾಡುವ ತುಂಬಿಯ ಬಂಬಲಂತೆ ಕೆಂ।
ದಳಿರ್ಗಳ ತೊಂಗಲಂತೆ ನಡೆನೋಡುವ ಪೆಂಡಿರ ನೋಟದಂತೆ ಪೂ॥
ಗಳ ಪೊಸಗಂಪಿನೋಳ್ ಪೊರೆದು ತೀಡುವ ತೆಂಬೆಲರಂತೆ ತೋರ್ಪ ತಿಂ।
ಗಳ ಸಿರಿಯಂತೆ ॥

ಯೂ ತೋರಿ ಹೃದಯಂಗಮವಾಗಿರುವುವು.

ಬಿಲ್ಲು ಹಿಡಿವವರೆಲ್ಲರೂ ಶೂರರಾಗದಂತೆಯೇ ಲೇಖಣಿಯನ್ನು ಹಿಡಿದವರೆಲ್ಲರೂ ಮಹಾ ಕವಿಗಳಾಗಲಾರರು. ಸಾಹಿತ್ಯ ಪ್ರಪಂಚದಲ್ಲಿ ಮಹಾ ಕವಿಯು ಸಮುದ್ರಗಳಂತೆಯೂ ಸಾಮಾನ್ಯ ಕವಿಯು ಕೆರೆ ಕುಂಟೆಗಳಂತೆಯೂ ತೋರುವನು.

ಸುಕವಿಯು ನಿರ್ಮಾತ್ಸರ್ಯ ಮತಿಯಾಗಿಯೂ ಸುಜನನಾಗಿಯೂ ಇರಬೇಕು. ಉದಾರಿಯಾದ ಧನಿಕನಂತೆಯೇ ನಿರ್ಮತ್ಸರ ಮತಿಯಾದ ಕವಿಯೂ ಲೋಕದಲ್ಲಿ ಅಪೂರ್ವವಾಗಿರುವನು. ಇದನ್ನೇ ಕವಿರತ್ನನು,

ಕಂದ॥ ಶ್ರೀಯುತನೊಳುದಾರತೆ ವಾ।
ಕ್ಶ್ರೀಯುತನೊಳ ಮತ್ಸರತ್ವ ಮಾಗದುದಾರಂ॥
ಕ್ಶ್ರೀಯುತನ ಮತ್ಸರಂ ವಾ।
ಕ್ಶ್ರೀಯುತನಾದೊಡೆ ಕೃತಾರ್ಥರಾಗರೆ ಕವಿಗಳ್॥

(ಗದಾಯುದ್ಧ. ಪ್ರ. ಆ. ಪ. ೪೯.)

ಎಂಬ ಪದ್ಯದಲ್ಲಿ ಹೇಳಿರುವನು.

ಕವಿಯು ಸದಾಚಾರಿಯೂ ದೈವಭಕ್ತನೂ ಕ್ರಿಯಾಸಿದ್ಧಿಯುಳ್ಳವನೂ ಆಗಿದ್ದರೆ ಅವನ ಕವನದಲ್ಲಿ ಚೈತನ್ಯವಿರುವುದು. ಆ ಕವಿಗೂ ಒಂದು ವಿಧವಾದ ಆತ್ಮವಿಶ್ವಾಸವಿರುವುದು. ತನ್ನಲ್ಲಿ ತನಗೆ ನಂಬಿಕೆಯುಳ್ಳ ರಾಘವಾಂಕ ಪಂಡಿತನು ತನ್ನ ಹರಿಶ್ಚಂದ್ರ ಪುರಾಣದಲ್ಲಿ ಹೇಳಿರುವುದನ್ನು ನೋಡಿರಿ.

ವಾ॥ ಷ॥ ಪರರೊಡವೆಯಂ ಕೊಂಡು ಕೃತಿಯ ಪೇಳದ ಭಾಷೆ।
ಪರರ ಕಾವ್ಯಾರ್ಥಂಗಳಂ ಛಿದ್ರಿಸದ ಭಾಷೆ।
ಪರರ ದೈವವನುತಿಸದಿರ್ಪ ಭಾಷೆಯ ತನ್ನ ಮನದೊಳಗೆ ಹಿಡಿದಿರ್ಪನು ॥
ಪರರ ನಿಂದಿಸಿ ತನ್ನ ಹೊಗಳಿಕೊಳ್ಳದ ಭಾಷೆ।
ಪರರ ವಧುವಂ ಕಂಡು ಮನವೆಳಸದಿಹ ಭಾಷೆ।
ಪರರ ವಸ್ತುವ ತೃಣಕೆ ಸರಿಯೆಂಬ ಭಾಷೆಯಿದು ರಾಘವಾಂಕಗೆ ಸಂದುದು ॥

(ಹರಿಶ್ಚಂದ್ರ ಪುರಾಣ ಸ್ಥಲ ೧ ಪ. ೧೬)

ಮಹಾಕವಿ ರಾಘವಾಂಕ ಪಂಡಿತನು ಇಂತಹ ನಿರ್ಮಲಮೂರ್ತಿಯಾದುದರಿಂದಲೇ ಅವನ ವಾಣಿಯು ಆಹ್ಲಾದಜನಕವಾದುದೂ ಸೌರಭದಿಂದ ಪುಷ್ಪದ ಯೋಗ್ಯತೆಯು ತಿಳಿಯುವಂತೆ ವಾಣಿಯಿಂದ ವಕ್ತೃವಿನ ಶಕ್ತಿಯು ಕಂಡುಹಿಡಿಯಲ್ಪಡುವುದು.

'ರವಿ ಕಾಣದುದನ್ನು ಕವಿ ಕಂಡ'ನೆಂಬ ಸಾಮತಿಯೊಂದು ಪ್ರಚಾರದಲ್ಲಿರುವುದಷ್ಟೇ? ಈ ಮಾತು ಕವಿಯ ಹಿರಿಯತನವನ್ನು ಸೂಚಿಸತಕ್ಕುದಾಗಿರುವುದು. ಕವಿಯು ಶಬ್ದಗಳಿಂದ ಉದಾತ್ತ ಭಾವಗಳುಳ್ಳ ಚಿತ್ರವನ್ನು ಕಾವ್ಯಪಾಠಕರ ಚಿತ್ತ ಭಿತ್ತಿಯ ಮೇಲೆ ಚಿತ್ರಿಸುವನು. ಇದು ಸಾಮಾನ್ಯವಾದ ಸಾಹಸವಲ್ಲ. ಚಿತ್ರಗಾರನು ಭೌತಿಕವಾದ ಪದಾರ್ಥಗಳಲ್ಲಿ ಸುಂದರವಾದ ಚಿತ್ರಗಳನ್ನು ರೇಖೆಗಳಿಂದಲೂ ಬಣ್ಣಗಳಿಂದಲೂ ಬರೆದು ನಮ್ಮ ಕಣ್ಣೆದುರಿಗಿಟ್ಟರೆ, ಕವಿಯು ಭೌತಿಕ ಸಾಧನವಿಲ್ಲದೆಯೇ ಶಬ್ದಸಾಮರ್ಥ್ಯದಿಂದಲೇ ನಮಗೆ ಒಳ್ಳೊಳ್ಳೆಯ ಚಿತ್ರಗಳನ್ನು ಬರೆದು ನಮ್ಮ ಆತ್ಮನ ಮುಂದಿಡುವನು.

ಕವಿಯನ್ನು ಒಬ್ಬ ಶಿಲ್ಪಿಗೆ ಹೋಲಿಸಬಹುದು. ಶಿಲ್ಪಿಯು ಕಲ್ಲು ಮಣ್ಣು ಮರ ಮಿಂಡಿ ಲೋಹಾದಿಗಳಿಂದ ಒಂದು ಭವ್ಯವಾದ ಸೌಧವನ್ನು ನಿರ್ಮಿಸುವನು. ಕವಿಯು ಶಬ್ದ, ರಸ, ಭಾವ, ಅಲಂಕಾರ ನೊದಲಾದವುಗಳಿಂದ ಮಹಾ ಕಾವ್ಯನಾಮಕ ಸೌಧವನ್ನು ನಿರ್ಮಿಸುವನು. ಶಿಲ್ಪಿಯ ಕೃತಿಯಾದ ಪ್ರಾಸಾದವು ನೇತ್ರಾನಂದದಾಯಕವು. ಕವಿಯ ಕೃತಿಯಾದ ಕಾವ್ಯವು ಆತ್ಮಾನಂದದಾಯಕವು. ಶಿಲ್ಪಿಯ

ಕಾವ್ಯವು ಬಹುಕಾಲ ಜೀವಿಸತಕ್ಕುದ್ದಲ್ಲ. ಕವಿಯ ಕಾವ್ಯವು ಸೂರ್ಯ ಚಂದ್ರರಿರುವ ವರೆಗೂ ಜೀವಿಸತಕ್ಕುದು. ಶಿಲ್ಪಿಯ ಕಾರ್ಯವು ಯಾವುದಾದರೊಂದು ಸ್ಥಳದಲ್ಲಿರತಕ್ಕುದು. ಕವಿಯ ಕಾವ್ಯವು ವಿರಾಡ್ರೂಪವನ್ನು ಹೊಂದಿ ವಿಶ್ವವನ್ನೆಲ್ಲಾ ವ್ಯಾಪಿಸತಕ್ಕುದು. ವಿಷಯವು ಹೀಗಿರುವುದರಿಂದಲೇ ಸಮಾಜವು ಶಿಲ್ಪಿ, ಚಿತ್ರಗಾರ ಮೊದಲಾದ ಇತರ ಕಲಾವಿದರಿಗಿಂತಲೂ ಕವಿಗೆ ಅಗ್ರಪೀಠವನ್ನಿತ್ತಿರುವುದು.

ಆಗ್ರಾ ಪಟ್ಟಣದಲ್ಲಿನ ತಾಜಮಹಲ್ ಮಂದಿರವನ್ನೂ, ಹಳೇಬೀಡು ಬೇಲೂರ ಸೋಮನಾಥಪುರಗಳಲ್ಲಿಯ ದೇವಾಲಯಗಳನ್ನೂ ಅಜಂತದಲ್ಲಿನ ಶಿಲ್ಪಗೆಲಸಗಳನ್ನೂ ನಿರ್ಮಿಸಿದ ಶಿಲ್ಪಿಗಳನ್ನು ನಾವು ಸಾಮಾನ್ಯರೆಂದು ಭಾವಿಸುವಂತಿಲ್ಲ. ಆದರೂ ಶಾಕುಂತಲ, ಕಾದಂಬರಿ, ಉತ್ತರ ರಾಮಚರಿತ್ರೆ, ಪಂಪ ಭಾರತ, ರಾಜಶೇಖರ ವಿಳಾಸಗಳೆಂಬ ಕಾವ್ಯಕರ್ತೃಗಳಾದ ಕಾಲಿದಾಸ, ಬಾಣ, ಭವಭೂತಿ, ಆದಿಪಂಪ, ಷಡಕ್ಷರಿ ಮೊದಲಾದ ಕಾವ್ಯ ಕಲಾವಿದರನ್ನು ನಾವು ಶಿಲ್ಪಿಗಳಿಗಿಂತಲೂ ಕಡಿಮೆ ತರಗತಿಯವರೆಂದು ಭಾವಿಸಲಾಗುವುದಿಲ್ಲ. ಹಿಂದಿನಿಂದ ಸಮಾಜವು ಹಾಗೇ ಭಾವಿಸಿಯೂ ಇಲ್ಲ.

ಕವಿಗಳು ಎಂತಹ ಮಹಾತ್ಮ್ಯವುಳ್ಳವರೆಂಬುದನ್ನೂ ಅವರ ಅಘಟನಾಘಟನ ಶಕ್ತಿ ಎಂತಹದೆಂಬುದನ್ನೂ ನೇಮಿಚಂದ್ರನ ಮುಂದಿನ ಪದ್ಯಗಳಿಂದ ತಿಳಿಯಬಹುದು.

ವೃ॥ ಕಟ್ಟುಗೆ ಕಟ್ಟಿದಿರ್ಕೆ ಕಡಲಂ ಕಪಿ ಸಂತತಿ ವಾಮನಕ್ರಮಂ।
ಮುಟ್ಟುಗೆ ಮುಟ್ಟಿದಿರ್ಕೆ ಮುಗಿಲಂ ಹರನಂ ನರನಿಕ್ಕಿ ಗಂಟಲಂ॥
ಮೆಟ್ಟುಗೆ ಮೆಟ್ಟಿದಿರ್ಕೆ ಕವಿಗಳ್ ಕೃತಿಬಂಧದೊಳಿತ್ತೆ ಕಟ್ಟಿದರ್।
ಮುಟ್ಟಿದರಿಕ್ಕಿ ಮೆಟ್ಟಿದರಿದೇ ನಳವಗ್ಗಳವೋ ಕವೀಂದ್ರರಾ॥೧೧॥

ಕವಿಯಿಂ ದೀಂಟಿಸುವರ್ ಸಮಸ್ತ ರಸಮಂ ತೋರ್ಪರ್ ಸರೋಜಾತಮಂ।
ಯುವತೀ ಪ್ರೌಢಲತಾಗ್ರದೊಳ್ ಕುಮುದಮೊಂದೊಂದದಲ್ಲಿಯೂ ಬಾಲಪ॥
ಲ್ಲವಮಂ ಪುಟ್ಟಿಪರಾರ್ಯ ಮೋಹನಮುಮಂ ಮಾಳ್ಪೀ ಚಮತ್ಕಾರಮಂ॥
ಕವಿಗಳ್ ಬಲ್ಲವೊಲನ್ಯರೆತ್ತರಿವರಂತಾ ಬ್ರಹ್ಮನುಂ ಬಲ್ಲನೇ॥೧೨॥

ಮರನೀಗುಂ ಮಣಿಯಾಗುವೊಂದು ಪಶುವೀಗುಂ ಕೇಳಿಮೆಂ ದೊಳಿಯೊಳ್ ।
ಪುರುಡಂ ಪುಟ್ಟಿಸಿ ಕಾಷ್ಠಮುಂ ಕೊನರಿಪರ್ ಕಲ್ಲಲ್ಲಿ ನಾರೆತ್ತುವರ್ ॥
ಮರುಳಂ ಪ್ರೋಪರುಗಳಾಗಿಪರ್ ಕಿವಿಗಳೊಳ್ ಪೀಯೂಷಮಂ ಪಿಂಡಲು ।
ರ್ವರಿಯೊಳ್ ಸಂದ ಕವಿಪ್ರವೇಕರಿ ವಲಂ ಬಲ್ಲರ್ ಪೆರರ್ ಬಲ್ಲರೇ ॥೧೩॥

[ಲೀಲಾವತಿ. ಅ. ೧]

ಮೇಲಿನ ಪದ್ಯಗಳಲ್ಲಿ ಕವಿ ಸಾಮರ್ಥ್ಯವನ್ನು ನೇಮಿಚಂದ್ರನು ಬಹು ಮನೋಹರವಾಗಿ ಹೇಳಿರುವನು. ಸೋಮಕವಿಯು ಹೇಳಿದ "ಕವಿಯೇ ಸರ್ವರೊಳುತ್ತಮಂ" ಎಂಬ ಮಾತು ನೇಮಿಚಂದ್ರನ ಪದ್ಯಗಳನ್ನು ಓದಿದವರಿಗೆ ಅತಿಶಯವೆಂದು ತೋರುವುದಿಲ್ಲ.

ಕವಿಗೆ ಸಾಮರ್ಥ್ಯದಂತೆಯೇ ಗಾಂಭೀರ್ಯವೂ ಕರ್ತವ್ಯನಿಷ್ಠೆಯೂ ಮುಖ್ಯವಾದ ಗುಣಗಳು. ಇವು ಕವಿಯಲ್ಲಿ ಅವಶ್ಯವಾಗಿಯೂ ಇರುವ ಗುಣಗಳೆಂಬುದನ್ನು ಹರಿಹರನ ಮಾತಿನಿಂದ ತಿಳಿಯಬಹುದು. ಅದೇನೆಂದರೆ:—

ವೃ॥ ತನಗೆ ಕವಿತ್ವವಿಲ್ಲ ಪರರಂ ಪಳಿದಲ್ಲದೆ ನಿಲ್ಲನಾತನೊಳ್ ।
ಮುನಿವುದ ನೀತಿಪಂದಿಡುರುಕೆಂದೊಡೆ ತಾಂಡುರುಕೆಂಬುದೇ ಮಹಾ ॥
ವನಕರಿಯಂ ವಿದಾರಿಸುವ ಸಿಂಹಮದಂತತಿ ದೋಷಿಯಪ್ಪದು ।
ರ್ಜನರ ಕಟೂಕ್ತಿಗಂಜದೆ ಲಸತ್ಕೃತಿಯಂ ಸಲೆ ಮಾಳ್ಕೆ ಸಜ್ಜನರ್ ॥೨೯॥

[ಗಿರಿಜಾಕಲ್ಯಾಣ ಪ್ರ. ಅ. ಪ.]

ಮಹಾಕವಿಯಾದವನಲ್ಲಿರಬೇಕಾದ ಸ್ವಭಾವವನ್ನು ಕುಮಾರವ್ಯಾಸನು ಮುಂದೆ ನಿರೂಪಿಸುವ ಪದ್ಯದಲ್ಲಿ ವ್ಯಾಜಾಂತರದಿಂದ ಹೇಳಿರುವನು.

ಭಾ॥ ಷ॥ ಹಲಗೆ ಬಳಹವ ಪಿಡಿಯದೊಂದ ।
ಗ್ಗಳಿಕೆಪದವಿಟ್ಟಳುಪದೊಂದ ।
ಗ್ಗಳಿಕೆ ಪರರೊಡ್ಡವದ ರೀತಿಯಕೊಳ್ಳದಗ್ಗಳಿಕೆ ॥
ಬಳಸಿ ಬರೆಯಲು ಕಂಠಪತ್ರದ ।
ಉಲುಹುಗೆಡದಗ್ಗಳಿಕೆಯೆಂಬೀ ।
ಬಲುಹು ಗದುಗಿನ ವೀರನಾರಾಯಣನ ಕಿಂಕರಗೆ ॥

[ಕನ್ನಡಭಾರತ ಪೀಠಿಕೆ ಪ.]

ಈ ಪದ್ಯದಲ್ಲಿ ನಿರೂಪಿತವಾಗಿರುವ ಗುಣಗಳು ಎಲ್ಲ ಕವಿಗಳಲ್ಲಿಯೂ ಇರಬೇಕಾದವುಗಳೇ ಆಗಿರುವುವು.

ಕವಿಯು ತನ್ನ ಕಾವ್ಯವನ್ನು ವಿಖ್ಯಾತವನ್ನಾಗಿ ಮಾಡಬೇಕಾದರೆ ಉತ್ತಮವಾದ ಕಥಾವಸ್ತು, ಮನೋಹರವಾದ ವರ್ಣನಾವೈಖರಿ, ಹೃದಯಂಗಮವಾದ ರಸಭಾವಗಳು, ಎಂದೂ ಕೇಳದ ಯುಕ್ತಿರಾಶಿಗಳು, ಸುಶ್ರಾವ್ಯವಾದ ಶೈಲಿ ಎಂಬೀ ಕಾವ್ಯಸಾಮಗ್ರಿಯ ಕಡೆಗೆ ಗಮನ ಕೊಡಬೇಕಾಗುವುದು.

ಕವಿಯು ಅತ್ಯಂತ ಆಪ್ತರಾದ ರಸಿಕರು ಸುಲಲಿತವಾದ ಶೈಲಿಯುಳ್ಳ ಕಾವ್ಯವನ್ನು ಬಹಳವಾಗಿ ಪ್ರೀತಿಸುವರಾದುದರಿಂದ ಕವಿಯು ಅವರಿಷ್ಟದಂತೆ ನಡೆಯಬೇಕಾಗುವುದು. ಸುಕವಿ ತಿರುಮಲಭಟ್ಟನು ಹೇಳುವಂತೆ

ವಾ॥ ಷ॥ ಒಳಗಮೃತದಂತೆ ರಸ ತಿರುಳಿರ್ದೊಡಂ ಶುಕಾ।
ವಳಿ ಹೊರಗೆ ಬಿರುಸಾದ ಕರಟವುಂ ಸಿಂಪೆಯುಂ।
ಬಳಸಿರ್ದ ತೆಂಗಾಯ ಮುಟ್ಟಲೊಲ್ಲದೆ ನಿಕ್ಕ ಫಲತತಿಯನರಸುವಂತೆ॥
ವಿಳಸಿದರ್ಥಗಳಿರ್ದೊಡಂ ಕಠಿನವಾದ ಕೃತಿ।
ಗಳ ನೋಡರತಿ ರಸಿಕರದರಿಂದ ಮೃದುಪದಂ।
ಗಳನಿಟ್ಟು ರುಜು ಮಾರ್ಗದಿಂ ಸಕಲರರಿವಂತೆ ವಿರಚಿಸುವೆನೀ ಕೃತಿಯನು।೧೬॥

[ಕರ್ನಾಟಕ ಶಿವಗೀತೆ. ಪೀ. ಸಂ.]

ಕಠಿನವಾದ ಕಾವ್ಯಗಳು ರಸಿಕ ಮಾನ್ಯವಾದವುಗಳಲ್ಲವಾದುದರಿಂ ದಲೇ ಹರಿಹರದೇವನು.

ಕಂದ॥ ಓದಿದೊಡೆ ಕಲ್ಲಮಾಲೆಯ।
ನಾದಂ ಕಬ್ಬೊನ್ನ ಕಡಲೆವಾದಿಸೆ ರಸವಂ॥
ಸೋದಿಸೆಯುಕ್ತಿನ ಪುಡಿಯೆನಿ।
ಪಾದುಷ್ಕವಿತೆಗಳ ನೆಣೆಸಲೇಕೇ ಕೃತಿಯೊಳ್॥೨೨॥

[ಗಿರಿಜಾಕಲ್ಯಾಣ ಪ್ರ ಪ]

ಎಂಬುದಾಗಿ ಹೇಳಿ ಕಠಿನ ಕಾವ್ಯಗಳನ್ನು ಹೀಯಾಳಿಸಿರುವನು.

ಕವಿಯ ಮುಖ್ಯೋದ್ದೇಶವು ರಸಿಕರನ್ನು ಆನಂದಗೊಳಿಸುವದು. ರಸಿಕರು ತನ್ನ ಕಾವ್ಯದಿಂದ ಆನಂದಪಟ್ಟರೆಂದರೆ ಕವಿಗೆ ಬಹು ಸಡಗರ. ಆತನು ತನ್ನ ಶ್ರಮವು ಸಫಲವಾಯಿತೆಂದು ಭಾವಿಸುವನು. ಈ ಮಾತನ್ನು ನಾವು ಅಭಿನವ ಕಾಲಿದಾಸನ

ಕಂದ॥ ಅರಸ ಕರ್ಣಡುವಾ ಕಾರ್ತ।
ಸ್ವರ ಕಂಕಣಮಿಕ್ಕೆ ಸರಸಂ ಸ್ವಾದಿಸಿ ಕಾ॥
ವ್ಯರಸವ ಸೂಸುವ ಸುಖಭಾ।
ಸ್ವರಾಶ್ರ ಕಂಕಣವೆ ಕವಿಗೆ ಕಂಕಣಮಲ್ತೇ॥೨೨॥

[ದಮಯಂತಿ ಸ್ವಯಂವರ ಪೀಠಿಕಾ ಸಂಧಿ]

ಎಂಬೀ ಪದ್ಯದಿಂದ ತಿಳಿಯಬಹುದು.

ಕವಿಯ ವೈಷಯಿಕವಾದೀ ಲೋಕುನದಲ್ಲಿ ನಾವು ಕವಿಗೆ ಅತ್ಯಂತ ಪ್ರಿಯತಮರಾದ ರಸಿಕರನ್ನು ಮರೆಯಲಾಗದು. ಬಹುಮಾತಿನಿಂದೇನು ರಸಿಕರಿಲ್ಲದಿದ್ದರೆ ಕವಿಯು ಬೆಳಕಿಗೆ ಬರಲಾರನು. ಅವನ ಶಕ್ತಿಯು ಲೋಕಕ್ಕೆ ತಿಳಿಯಲಾರದು. ಆದುದರಿಂದ ಸಾಹಿತ್ಯ ರಾಜ್ಯದಲ್ಲಿ ಕವಿ, ಪಂಡಿತ, ವೈಮರ್ಶಿಕರಂತೆಯೇ ರಸಿಕರೂ ಅತ್ಯಂತ ಮುಖ್ಯರಾದವರು.

ಮತ್ತೊಬ್ಬನ ಮಾತಿನಲ್ಲಾಗಲಿ ಕೃತಿಯಲ್ಲಾಗಲಿ ಇರಬಹುದಾದ ರಸಭಾವಗಳನ್ನು ಅರಿತು ಆನಂದಿಸುವ ಶಕ್ತಿಯುಳ್ಳವನನ್ನು ರಸಿಕನೆಂದು ಹೇಳಬಹುದು.

ರಸಿಕನು ಕೆಲವು ವೇಳೆ ಕವಿಗೆ ಸಮಾನವಾದ ಭಾವವುಳ್ಳವನಾಗಿದ್ದರೆ ಅಂದರೆ ಕವಿಯ ಹೃದ್ಗತಾಭಿಪ್ರಾಯವನ್ನೂ ಇಂಗಿತವನ್ನೂ ತಿಳಿಯುವಷ್ಟು ಚತುರನಾದರೆ ಆಗ ಅವನು ಸಹೃದಯನೆಂದು ಸಂಬೋಧಿಸಲ್ಪಡುವನು. ಸುಹೃದಯನೂ ಸಹೃದಯನೂ ಆದ ರಸಿಕನು ಕವಿಗೆ ಬಹಳ ಪ್ರಿಯತಮನು. ಕವಿಯ ಯೋಗ್ಯತಾ ನಿರ್ಣಯಕ್ಕೆ ಅಂತಹವರು ಅರ್ಹರು" ಎಂಬುದನ್ನು ಕವಿ ಗುರುವಾದ ಕಾಲಿದಾಸನು ಹೇಳಿರುವನು.

ಕಾವ್ಯದಲ್ಲಿನ ರಸಾಸ್ವಾದ ಮಾಡತಕ್ಕ ಶಕ್ತಿಯು ಎಲ್ಲರಿಗೂ ಬರುವುದಿಲ್ಲ. ಅದಕ್ಕೆ ರಸಿಕನೇ ತಕ್ಕವನು. ಎಂಬುದನ್ನು ಷಡಕ್ಷರಿಯು

ಕಂದ॥ ರಸವತ್ಕಾವ್ಯದ ರಸಮಂ।
ರಸಿಕರ್ಕಳ್ ಬಲ್ಲರೆರದಿ ನರಿವರೆ ಗಾಂಪರ್॥
ಪೊಸ ಜೊನ್ನದಿನಿನದರಿವುವೊ
ಮಿಸುಪ ಚಕೋರಂಗಳಂ ತಿರುಳಿದ ಖಗಂಗಳ್ ॥ ೨೪ ||
( ಶಬರ ಶಂಕರ ವಿಳಾಸ ಪ್ರ ಅ)

ಎಂಬ ಪದ್ಯದಲ್ಲಿ ಹೇಳಿರುವನು.

ಮಹಾಕವಿಯು ಕಾವ್ಯದಲ್ಲಿ ನ್ಯೂನತೆಯೇ ಇಲ್ಲವೆಂದೂ, ಅದನ್ನು ವಾಚಕನು ಹೇಳಲೇ ಕೂಡದೆಂದೂ ನಾವು ತಿಳಿಯಬಾರದು. ಮಹಾಕವಿಯೂ ಮನುಜನಾದುದರಿಂದ ನ್ಯೂನತೆಯಿರುವುದು ಸ್ವಾಭಾವಿಕವಾದುದು. ಇದ್ದರೂ ಅದು ಕವಿಯಂತಲ್ಲ. ಮಹಾಕವಿಯ ಕುಂದು ಅಷ್ಟು ಗಣನೀಯವಾದುದಾಗಿರುವುದಿಲ್ಲ.

ಪ್ರತಿಯೊಂದು ಕಾವ್ಯದಲ್ಲಿಯೂ ಬಸವಪ್ಪ ಶಾಸ್ತ್ರಿಗಳು ಹೇಳುವಂತೆ

ಇರ್ದಪುದೇಂ ನಿರ್ಗುಣಮುಂ।
ನಿರ್ದೋಷಮುಮೆನಿಪ ವಸ್ತು ಲೋಕದೊಳದರಿಂ॥
ಪೊರ್ದುವುದು ಗುಣವನೊಲವಿಂ।
ತಿರ್ದುವುದಿರೆ ದೋಷ ಮನುಲಮತಿಗಳ್ ಕೃತಿಯೊಳ್ ||
(ದಮಯಂತಿ ಸ್ವಯಂವರ ಪೀ ಪ. ೨೫)

ಪ್ರತಿಯೊಂದು ಪದಾರ್ಥದಲ್ಲಿಯೂ ಗುಣದೋಷಗಳೆರಡೂ ಇರುವುವು. ಸುಗುಣಿಯಾದವನು

ದೂರೀಕರಿಸುತೆ ದೋಷವ।
ಸಾರಜ್ಞಂ ಗ್ರಹಿಪನೊಲ್ಪು ಗುಣಮಂ ಕೃತಿಯೊಳ್॥
ನೀರಂ ಬೇರ್ಪಡಿಸುತ್ತಂ।
ಕ್ಷೀರಮನಾ ರಾಜಹಂಸನಾಸ್ವಾದಿಪವೋಲ್॥
[ದ ಸ್ವ ಪೀ ಪ ೨೪]

ಹಂಸವು ನೀರನ್ನುಳಿದು ಕ್ಷೀರವನ್ನು ಸ್ವೀಕರಿಸುವಂತೆ ಕಾವ್ಯದಲ್ಲಿ ಗುಣವನ್ನು ಮಾತ್ರ ಗ್ರಹಿಸಬೇಕಾಗುವುದು.

ಬಲ್ಲವರಲ್ಲಿಯೂ ಬಹು ವಿಧವುಂಟು. ತಿರುಮಲಭಟ್ಟನು ಹೇಳುವಂತೆ

ವಾ॥ ಷ॥ ಕಂಡ ಸಕ್ಕರೆಯಂ ಬಾಯೊಳಿಕ್ಕಲದ।
ನುಂಡು ಸವಿಯರಿಯದರು ಕೆಲರು ಕೆಲರಂತೊಡಂ।
ಕೊಂಡಾಡರಕಟಕೇಣದಿಕೆಲರಿದುಪ್ಪೆಂದು ಮಂಡೆಯಂ
ಕೊಡಹುತಿಹರು ||
ಮಂಡಲದೊಳಿಂತಪ್ಪ ಮನುಜರುಂಟಿ ನಗವರ।
ಕೊಂಡೇನು? ।
॥

ಸಕ್ಕರೆಯ ರುಚಿಯರಿಯದವರೂ ಅರಿತರೂ ಹೇಳುವಷ್ಟು ಔದಾರ್ಯವಿಲ್ಲದವರೂ ಸಕ್ಕರೆಯನ್ನು ಉಪ್ಪೆಂದು ಸಾಧಿಸುವಷ್ಟು ದೌರ್ಜನ್ಯವುಳ್ಳವರೂ ಲೋಕದಲ್ಲಿರುವರು. ಇಂತಹವರಿಂದ ಕವಿಲೋಕಕ್ಕೆ ಯಾವ ಫಲವೂ ಆಗುವುದಿಲ್ಲ. ಆದುದರಿಂದಲೇ ಕವಿಶಿರುಮಲನು "ಅವರ ಕೊಂಡೇನು?" ಎಂದು ತಿರಸ್ಕಾರ ಬುದ್ಧಿಯಿಂದ ಗುಣಗ್ರಾಹಿಗಳಲ್ಲದವರನ್ನು ಕಂಡಿರುವನು.

ಗುಣವಂತರಾದ ರಸಿಕರಿಲ್ಲದ ಸ್ಥಳದಲ್ಲಿ ಕವಿಗಳಿಗೆ ಪ್ರಾಶಸ್ತ್ಯವು ದೊರೆಯುವದಿಲ್ಲ. ಆದುದರಿಂದಲೇ ಕವಿಗಳು ರಸಿಕರನ್ನು ಬಹುವಾಗಿ ಪ್ರೀತಿಸುವುದು. ವಿದ್ಯಾಭಿಮಾನಿಯಾದ ಭೋಜರಾಜನ ಮುಂದೆ ರಸಿಕಶಿಖಾಮಣಿಯಾದ ಕಾಲಿದಾಸನು "ಗುಣಿನ ಇಹವಿದೇಶೇ ದೈನ್ಯಮಾಯಾಂತಿ ಭೃಂಗಾಃ" ಎಂದು ಹೇಳಿರುವುದು ಯುಕ್ತವಾಗಿರುವುದು. ಪುಷ್ಪಗಳಿಲ್ಲದ ಪ್ರದೇಶದಲ್ಲಿ ದುಂಬಿಗಳಿಗೆ ಹೇಗೆ ಕೆಲಸವಿಲ್ಲವೋ ರಸಿಕರಿಲ್ಲದ ಸ್ಥಳದಲ್ಲಿ ಕವಿಗೂ ಹಾಗೆಯೇ ಆಶ್ರಯವಿಲ್ಲವಾಗುವುದು. ಈ ಅರ್ಥದಲ್ಲಿ ರಾಘವಾಂಕ ಪಂಡಿತನು ಹೇಳಿರುವುದನ್ನು ಕೇಳಿರಿ.

ವಾ॥ ಕವಿಯಧಿಕನಿರ್ದೊಡೇಂ ಕೇಳ್ವರಿಲ್ಲದೊಡೆಗಾ।
ನವಿನೋದಿಯಿರ್ದೊಡೇಂ ಜಾಣರಿಲ್ಲದೊಡೆ ಜಾ।
ತಿ ವಿದಗ್ಧೆಯಿರ್ದೊಡೇಂ ರಸಿಕರಿಲ್ಲದೊಡೆ ಪೊಸ ಪೂಮಾಲೆಯಿರ್ದೊಡೇನು॥
ತವೆಮುಡಿವರಿಲ್ಲದೊಡೆ ನಾನಾಕಳಾ ಪ್ರೌಢ।
ನಿವಹವಿರ್ದೇನಧಿಕ ದಾತರಿಲ್ಲದೊಡಿಂ।
ತಿವನೈದೆ ಬಲ್ಲವರ ಪೂರ್ವಪುಣ್ಯಾಳಿಯಿಂ ಪಡೆವ ದೇವನಲ್ಲದೆ ಮನುಜನೇ॥೨೫॥

ಹರಿಶ್ಚಂದ್ರ ಕಾವ್ಯ. ಸ್ಥಲ ೧.

ರಾಘವಾಂಕನು ರಸಿಕರನ್ನೂ ಗುಣಗ್ರಾಹಿಗಳನ್ನೂ ದೈವಾಂಶಪ್ರುಷ್ಯವರೆಂದೇ ಕರೆದಿರುವನು.

ಕಲಾವಿದರಾದ ಕವಿಗಳು ರಸಿಕನನ್ನು ಜಾಣ, ಪ್ರೌಢ, ವಿಬುಧ, ಎಂಬ ಅಭಿಧಾನಗಳಿಂದ ಕರೆದಿರುವರು. ಅಂತಹ ಪ್ರೌಢರು ಒಪ್ಪಬೇಕಾದರೆ, ಕವಿಯು ತನ್ನ ಕೃತಿಯನ್ನು ರಸವತ್ತಾಗಿಯೇ ನಿರ್ಮಿಸಬೇಕು. ಈ ವಿಷಯದಲ್ಲಿ ಹರಿಹರನು

ಕಂದ॥ ಕೇಳಲೊಡಂ ಕಿವಿಸವಿಯೊಳ್ ।
ಗಾಳಲೊಡಂ ತನ್ಮನಂ ಮುಳುಂಗಲೊಡಂ ಸೌ ॥
ಖ್ಯಾಳಂಬಿಯೆನಿಪಚಿತ್ತಂ ।
ಲೀಲೆಯೊಳವಗಾಹಮಿರದೊಡಮು ಸತ್ಕೃತಿಯೇ ॥೨೧॥

ಗಿರಿಜಾಕಲ್ಯಾಣ. ಪ್ರ. ಆ.

ಎಂಬುದಾಗಿ ಹೇಳಿರುವನು. ಇಂತಹ ಸತ್ಕಾವ್ಯಗಳಿಗೇ ಜಾಣರು ತಲೆದೂಗುವುದು. ಜಾಣರನ್ನು ತಲೆದೂಗಿಸುವವನೇ ಮಹಾಕವಿಯು. ಆದುದರಿಂದ ಕವಿಯೂ ತನ್ನ ಕೃತಿಯಲ್ಲಿ ನೈಪುಣ್ಯವನ್ನು ತೋರಿ ರಸಿಕರಿಂದ ಮಾನ್ಯತೆಯನ್ನು ಹೊಂದಲು ಪ್ರಯತ್ನಿಸಬೇಕು.

ಸಾಹಿತ್ಯವು ಜನಾಂಗದ ಪ್ರತಿಬಿಂಬವು. ಸಾಹಿತ್ಯಾಭಿವೃದ್ಧಿಯೇ ಜನಾಂಗಾಭಿವೃದ್ಧಿಯು. ಇಂತಹ ಸಾಹಿತ್ಯಕ್ಕೆ ಕವಿಗಳು ಪ್ರಾಣನಾಡಿಸ್ವರೂಪರು. ಮಹಾಕವಿಗಳ ಹುಟ್ಟುವಿಕೆಯು ಸಮಾಜಕ್ಕೆ ಭೂಷಣಾಸ್ಪದವೂ ಶುಭಸೂಚನೆಯ ಕುರುಹೂ ಆಗಿರುವುದು.

ಸುಸಂಸ್ಕೃತವಾದ ಸಮಾಜದಲ್ಲಿ ಮಾತ್ರ ಕವಿಗಳು ಹುಟ್ಟುತ್ತಿರುವುದನ್ನು ನಾವು ನೋಡಬಹುದು. ಮಹಾಮತಿಗಳಾದ ಕಬ್ಬಿಗರನ್ನು ಮಹಾರಾಜನೂ ಕಾವ್ಯಕರ್ತೃವೂ ಲಾಕ್ಷಣಿಕ ಶಿಖಾಮಣಿಯೂ ಆದ ನೃಪತುಂಗದೇವನು

ಕಂದ॥ ಕುರುವಂತು ಪೆರರ ಬಗೆಯಂ ।
ತೆರೆದಿರೆ ಪೆರರ್ಗಱಿಪಲಾರ್ಪವಂ ಮಾತರಿವಂ ॥
ಕಿರಿದರೊಳೆ ಪಿರಿದುಮರ್ಥಮ ।
ನಿರಿಪಲ್ಕೆರೆವಾತನಾತನಿಂದಂ ನಿಪುಣಂ ॥೧೫॥

ನುಡಿಯಂಭಂದದೊಳೊಂದಿರೆ ।
ತೊಡರ್ಚಲರಿವಾತನಾತನಿಂದಂ ಜಾಣಂ ॥
ತಡೆಯದೆ ಮಹಾಧ್ವಕೃತಿಗಳ ।
ನೊಡಲಿಸಲಾರ್ಪಾತನೆಲ್ಲರಿಂದಂ ಬಲ್ಲಂ ॥೧೬॥

ಮಾತರಿವರ್ ಕೆಲಬರ್ ಜಗ ।
ತೀತಲಗತ ಮನುಜರೊಳಗೆ ಮಾತರಿವವರೊಳ್ ॥
ನೀತಿ ವಿದರಮಳ ಕವಿತಾ ।
ನೀತಿಯು ತರ್ಕೆಲರೆ ಪರಮ ಕವಿ ವೃಷಭಾರ್ಕಳ್ ॥೧೭॥

ಕವಿರಾಜಮಾರ್ಗ. ಪ್ರ. ಪ.

ಮೇಲಿನ ಮೂರು ಪದ್ಯಗಳಲ್ಲಿಯೂ ನೃಪತುಂಗನು ಜಾಣರ ಹಾಗೂ ಕವಿಗಳ ವಿಷಯವನ್ನು ಬಹು ಪ್ರೌಢವಾಗಿ ಹೇಳಿರುವನು. ಇಂತಹವರ ಕಾವ್ಯಗಳನ್ನು ಓದುವುದರಿಂದ ಜನರಿಗೆ

ಕಂದ॥ ಪಾಪವಿದು ಪುಣ್ಯವಿದು ಹಿತ ।
ರೂಪವಿದ ಹಿತಪ್ರಕಾರವಿದು ಸುಖವಿದು ದುಃ॥
ಖೋಪಾತ್ತವಿದೆಂದರಿಪುಗು ।
ಮಾಪರಮ ಕವಿಪ್ರವರರಾ ಕಾವ್ಯಂಗಳ್ ॥೧೮॥

ಕವಿರಾಜಮಾರ್ಗ. ಪ್ರ. ಪ.

ಪಾಪ, ಪುಣ್ಯ, ಸುಖದುಃಖಗಳ ಜ್ಞಾನವಾಗುವುದೆಂದು ಬಹಳ ಚೆನ್ನಾಗಿ ಹೇಳಿರುವನು.

ಮಹಾಕವಿ ನಿರ್ಮಿತವಾದ ಸತ್ಕಾವ್ಯಗಳನ್ನು ಓದುವುದರಿಂದ ಪಾಠಕರಿಗೆ ಬಹಳ ಪ್ರಯೋಜನವುಂಟು. ಕಾವ್ಯಗಳು ಹೃದಯಂಗಮವಾದ ರೀತಿಯಿಂದ ಲೋಕಾನುಭವವನ್ನೂ ಪ್ರಕೃತಿಯ ಮರ್ಮವನ್ನೂ ಪಾಪಪುಣ್ಯ ಭೇದಗಳನ್ನೂ ಮಾನವನ ಲೋಕಯಾತ್ರೆಗೆ ಅವಶ್ಯಕಗಳಾದ ಲೋಕನೀತಿಗಳನ್ನೂ ಹೇಳಿ ವಾಚಕನ ಮನಸ್ಸನ್ನೂ ಬುದ್ಧಿಯನ್ನೂ ಸಂಸ್ಕರಿಸಲು ಸಹಾಯಕವಾಗುವುವು.

ಶ್ರುತಿ ಸ್ಮೃತಿಗಳೂ ಪುರಾಣಗಳೂ ಈ ವಿಷಯವನ್ನು ಲೋಕಕ್ಕೆ ಬೋಧೆ ಮಾಡುವುವು. ಆದರೆ ವೇದವು ಗುರೂಕ್ತಿಯಂತೆಯೂ ಪುರಾಣವು ಮಿತ್ರೋಕ್ತಿಯಂತೆಯೂ ಇರುವುದರಿಂದ ಇವುಗಳು ಸುಂದರ ಸುಕು

ಮಾಯಿ ಮೃದುಮಧುರ ವಾಕ್ಯಗಳಂತೆ ಆಪ್ಯಾಯಮಾನವಾಗಿರುವ ಸತ್ಕಾವ್ಯಗಳಂತೆ ಲೋಕಕ್ಕೆ ಅಪೇಕ್ಷಣೀಯವಾಗುವುದು ಅಸ್ವಾಭಾವಿಕವಲ್ಲ.

ಕಾಲಿದಾಸಾದಿ ರಸಿಕ ಕವಿಗಳು ಋಷಿಕವಿಗಳ ಪುರಾಣೇತಿಹಾಸಗಳ ಕಥೆಗಳನ್ನೇ ತೆಗೆದುಕೊಂಡು ಅವಕ್ಕೆ ನವಚೈತನ್ಯವನ್ನು ಕೊಟ್ಟು ಆ ಪ್ರಾಚೀನ ಕಥೆಗಳನ್ನೇ ಸತ್ಕಾವ್ಯಗಳನ್ನಾಗಿ ಬರೆದರು.

ವಿಚಾರಿಸಿದರೆ ಈ ಪ್ರಪಂಚದಲ್ಲಿ ಮುಖ್ಯವಾದ ತ್ರಿವಿಧಾನಂದಗಳಿರುವುವು. ಅವುಗಳನ್ನು

೧. ಬ್ರಹ್ಮಾನಂದ
೨. ಕಾವ್ಯಾನಂದ
೩. ಕಾಂತಾನಂದ

ಎಂಬುದಾಗಿ ಜ್ಞಾಣರು ಹೇಳುವರು. ಇವುಗಳಲ್ಲಿ ಮೊದಲನೆಯದು ಅತ್ಯಂತ ಮಹತ್ವವಾದುದಾದರೂ ಸುದುರ್ಲಭವಾದುದು. ಇದು ಜನಸಾಮಾನ್ಯಕ್ಕೆ ಬಹುದೂರವಾದುದು. ಮೂರನೆಯದು ಸ್ವಲ್ಪ ಹೆಚ್ಚು ಕಡಿಮೆಯಾಗಿ ಜನರ ಅನುಭವಕ್ಕೆ ಗೋಚರವಾಗಿರುವುದು. ಎರಡನೆಯದು ಜನರೆಲ್ಲರಿಗೂ ಸಾಧ್ಯವಾದುದಾಗಿದ್ದರೂ ಅದನ್ನು ಸಾಧ್ಯ ಮಾಡಿಕೊಂಡು ಸುಖಿಸಿದ ಅದೃಷ್ಟವಂತರು ಲೋಕದಲ್ಲಿ ವಿಪುಲವಾಗಿಲ್ಲದಿದ್ದರೂ ವಿರಳವಾಗಿರುವರು.

ಆದುದರಿಂದ ಬ್ರಹ್ಮಾನಂದಕ್ಕೆ ಎರಡನೆಯದಾದ ಅಥವಾ ಪ್ರಪಂಚದ ಸುಖಾನಂದದಲ್ಲಿ ಉತ್ತಮವಾದ ಕಾವ್ಯಾನಂದವನ್ನು ಪ್ರತಿಯೊಬ್ಬ ನಾಗರಿಕನೂ ಹೊಂದಲಿಚ್ಛಿಸಿ ಮಹಾಕವಿಯ ಉದ್ದೇಶವನ್ನು ಸಾರ್ಥಕಪಡಿಸಲಿ.

ಪ್ರಕೃತಿ ಸೌಂದರ್ಯಕ್ಕಿಂತಲೂ ಕಾವ್ಯ ಸೌಂದರ್ಯವು ಮಿಗಿಲಾದುದು. ಈ ವಿಚಿತ್ರ ಸೃಷ್ಟಿಯನ್ನು ರಸಿಕರಿರಲಿ ಬ್ರಹ್ಮದೇವನಾದರೂ ಕೊಂಡಾಡಬೇಕಾಗುವುದು.

ಪ್ರಕೃತಿಯಲ್ಲಿ ನಾವು ಕಾಣುವ ಸೂರ್ಯೋದಯ ಚಂದ್ರೋದಯಗಳೂ, ಅಸ್ತಮಯಗಳೂ, ನಕ್ಷತ್ರಗಳೂ, ಆಕಾಶವೂ, ಮೇಘಮಾಲೆಯೂ, ಮಂದಮಾರುತನೂ, ಮೃಗಪಕ್ಷಿವೃಂದವೂ ನಮಗೆ ಕಾವ್ಯದಲ್ಲಿ ಇನ್ನೂ ಸುಂದರವಾಗಿಯೂ ಆಶ್ಚರ್ಯಕರವಾಗಿಯೂ ಇರುವುವು.

ಹುಲಿ, ಸಿಂಹ, ಸರ್ಪ, ಅಗ್ನಿ ಮುಂತಾದ ಭಯಪ್ರದ ವಿಷಯಗಳೂ, ಯುದ್ಧ, ಕ್ಷಾಮ, ಜಲಪ್ರಳಯ ಮುಂತಾದ ಅದ್ಭುತ ವಿಷಯಗಳೂ ಕಾವ್ಯದಲ್ಲಿ ನಮಗೆ ಹೊಸಬಗೆಯಾಗಿ ಕಂಡು ತಮ್ಮ ಸಹಜ ಗುಣದೊಡನೆ ಆನಂದಾಶ್ಚರ್ಯಗಳನ್ನುಂಟು ಮಾಡುವುವು. ಜರೆ, ಮರಣ, ದುಃಖ ಮೊದಲಾದ ಅಪ್ರಿಯ ವಿಷಯಗಳನ್ನೂ ಕಾವ್ಯದಲ್ಲಿ ನಾವು ಸಂತೋಷವಾಗಿ ಓದಬಹುದು. ಆದುದರಿಂದಲೇ ನಾವು ಕವಿಯನ್ನು ಅಘಟನಾಘನನೆಂದು ಹೊಗಳುವುದು. ನವೀನ ಸೃಷ್ಟಿವೈಚಿತ್ರ್ಯವುಳ್ಳ ಕವೀಂದ್ರನನ್ನು ನೇಮಿಚಂದ್ರನು "ಈ ಚಮತ್ಕಾರಮಂ ಕವಿಗಳ್ ಬಲ್ಲರ್ ಪೊಲನ್ಯರೆತ್ತರಿವರಂತಾ ಬ್ರಹ್ಮನುಂ ಬಲ್ಲನೇ" ಎಂದು ಹೇಳಿರುವುದು ಸಯುಕ್ತಿಕವಾಗಿರುವುದು.

ಪೂರ್ವದಿಂದಲೂ ನಮ್ಮ ಜನರು ಕವಿಗಳಿಗೆ ಪ್ರಾಶಸ್ತ್ಯವನ್ನಿತ್ತಿರುವರೆಂದು ಮೊಟ್ಟಮೊದಲೇ ಅರಿಕೆ ಮಾಡಿರುವೆನಷ್ಟೇ? ಆದರೆ ಅಂತಹ ಪ್ರೋತ್ಸಾಹವು ಕವಿಗಳಿಗೆ ಈಗಲಿಲ್ಲವಾಯ್ತು. ಇದಕ್ಕೆ ಭಾರತೀಯರು ಪರಾಧೀನವಾದುದೂ ರಾಜ್ಯಾಧಿಕಾರವು ಕೈತಪ್ಪಿದುದೂ ಅರಬ್ಬೀ ದೇಶದ ಮರಳ್ಗಾಡಿನ ಮೇಲಿನ ಬಿರುಗಾಳಿಯೂ ಪಶ್ಚಿಮ ಸಮುದ್ರದ ಕಡೆಯ ವಿಷಮಯ ಪ್ರಚಂಡ ಮಾರುತವೂ ಹೈಂದವರ ದುರ್ಬಲವಾದ ಹೃದಯದ ಮೇಲೆ ಬೀಸಿ ಅವರ ಸಾಹಿತ್ಯ ಪ್ರೇಮವನ್ನು ಕಿತ್ತೊಗೆದವು.

ಕರ್ಮ ಧರ್ಮ ಸಂಯೋಗದಿಂದ ನಮ್ಮಲ್ಲಿ ಈಗ ಜನ್ಮಧಾರಣ ಮಾಡಿದ ಕವೀಂದ್ರನಾದ ರವೀಂದ್ರನ ಯೋಗ್ಯತೆಯನ್ನು ಪಾಶ್ಚಾತ್ಯರು ತಿಳಿವುದಕ್ಕಿಂತ ಮೊದಲು ನಾವು ತಿಳಿಯಲಾರದಷ್ಟು ದುರ್ಬಲರಾದೆವು? ಭರತವರ್ಷೀಯರಿಗೆ ತಮ್ಮ ದೇವಭಾಷೆಯಲ್ಲಿಯೂ ದೇಶಭಾಷೆಯಲ್ಲಿಯೂ ಮಮತೆಯು ಕಡಿಮೆಯಾಗಿ ಅವರ ಹೃದಯ ಮಂದಿರದಲ್ಲಿ ಮತ್ತೊಂದು ಬಹು ದೂರದೇಶದ ಸಾಹಿತ್ಯವು ಕುಣಿಯತೊಡಗಿತೆಂದರೆ ಅವನತಿ ಗತಿಯನ್ನು ಹಿಡಿದಿರುವ ಭಾರತೀಯ ಸಾಹಿತ್ಯವನ್ನೂ ಆ ಸಾಹಿತ್ಯಾಂತರ್ಗತ ಕಾವ್ಯಕರ್ತೃಗಳಾದ ಗತವೈಭವವುಳ್ಳ ಭಾರತೀಯ ಕವಿಲೋಕವನ್ನೂ ಕೇಳುವವರಾದರೂ ಯಾರು? ಇಂತಹ ವಿಷಮಾವಸ್ಥೆಯಲ್ಲಿ ಅವರಿಗೆ ಸಮಾಜದಲ್ಲಿ ಯೋಗ್ಯಸ್ಥಾನವು ಲಭಿಸುವುದಾದರೂ ಹೇಗೆ?



# ಶಿವಶರಣರ ಪತಿಸತಿ ಭಾವ.

(ಲೇಖಕ:— ಕಾಪಸೆ ರೇವಪ್ಪ, ಆಲಮಟ್ಟಿ.)



ಮಾನವನಿಗೆ ಒದಗುವ ಸುಖದುಃಖಗಳೆಲ್ಲ ಒಂದಕ್ಕೊಂದು ಹೊಂದಿಕೊಂಡಿವೆ. ಸುಖದ ಅತಿರೇಕವೆಂದರೆ ದುಃಖದ ಮುಂಜಾವೆಂದು ತಿಳಿಯಬೇಕು. ಹೀಗೆ ಸುಖದುಃಖ ಗಳೆರಡಕ್ಕೂ ಪರಸ್ಪರ ನಿಕಟ ಸಂಬಂಧವಿದೆ. ಹಗಲು ರಾತ್ರಿಗಳೆರ ಡಕ್ಕೂ ಹೇಗೆ ಸಂಬಂಧವಿದೆಯೋ ಹಾಗೆಯೇ ಈ ಜೀವಾತ್ಮನ ಸುಖ ದುಃಖಗಳೆರಡಕ್ಕೂ ತೆರಪಿಲ್ಲದ ಒಂದು ಬಂಧನವಿದೆ. ಸುಖದ ಕೊನೆ ಯಲ್ಲಿಯೇ ದುಃಖದ ಮೊಳಕೆಯುಂಟು. ದುಃಖದ ಆದಿಯಲ್ಲಿಯೇ ಸುಖವುಂಟು. ಇಂಥ ಸುಖ ದುಃಖಗಳತೀತನಾದ ಪರಬ್ರಹ್ಮನನ್ನು ಯಾವನು ಕೂಡುವನೋ ಅವನೆ ಯೋಗಿಯಾಗುವನು, ಶರಣನಾಗು ವನು, ಸಂತನಾಗುವನು.

ಅಂಥ ಪರಮಾತ್ಮನಲ್ಲಿ ಕೂಡಲು ಭಕ್ತರು ಏನು ಮಾಡಿದರೆಂದರೆ ಅವನೊಡನೆ ಗೆಳೆತನ ಕಟ್ಟಿದರು. ಕರುಳಿನ ಕರುಳಾದ ಹೊಟ್ಟೆಯ ಮಗುವಾಗಿ ಗೆಳೆತನ ಕಟ್ಟಿದರು. ಒಡಹುಟ್ಟಿದ ಪ್ರೀತಿಯ ಬಂಧುವಾಗಿ ಗೆಳೆತನ ಕಟ್ಟಿದರು. ಜೀವಕ್ಕೆ ಜೀವಾಳವಾದ ನಲ್ಲೆಯಾಗಿ ಇಲ್ಲದೆ ನಲ್ಲ ನಾಗಿಯೂ ಕಟ್ಟಿದರು. ಪರಮಾತ್ಮನೊಡನೆ ಗೆಳೆತನ ಕಟ್ಟಿ, ತಮ್ಮ ಇಷ್ಟ ಸಿದ್ಧಿಯನ್ನು ಸಾಧಿಸಿಕೊಂಡ ನಮ್ಮ ಕನ್ನಡ ನುಡಿ ತಾಯಿಯ ಕಂದ ಮ್ಮಗಳು ಆವ ಕಲ್ಲೆದೆಯನ್ನೂ ಕರಗಿಸದೆ ಇರಲಿಕ್ಕಿಲ್ಲ! ತಮ್ಮ ಇನಿದಾದ ಸರದಿಂದ ದೇವನನ್ನು ಕೂಗುತ್ತಲೂ, ತಾಯಿ ಬಾ! ಎನ್ನ ಹಡೆದವ್ವ ಬಾ!! ಎಂದು ಎಳೆ ಮಕ್ಕಳಾಗಿ ಅಂಗಲಾಚುತ್ತಲೂ, ಹಲವರು ಶಿವ ನನ್ನೆ ಮಗುವಾಗಿ ಮಾಡಿಕೊಂಡು ಎನ್ನ ಕಂದಮ್ಮ ಬಾ! ಎನ್ನ ಕನ್ನಕ್ಕಿ ಬಾ!! ಎಂದು ಕರೆಯುತ್ತಲೂ, ಅವನನ್ನೆ ಮದುವೆಯಾಗಿ ಹಂಬಲಿ ಸುತ್ತಲೂ, ಇದ್ದರು. ಸತಿಯಾಗಿ ದೇವನ ಕೂಡ ಸಂಸಾರ ಸಾಗಿಸಿದ ಮಹಿಳೆಯರೆಂದರೆ ಶರಣ ಶರಣೆಯರೇ ಸರಿ. " ಹರನೇ ನೀನೆನಗೆ

ಗಂಡನಾಗಬೇಕೆಂದು ಅನಂತಕಾಲ ತಪ್ಪಿಸಿದ್ದೆ ನೋಡಾ" ಎಂದಂದ ಉಡುತಡಿಯ ಮಹಾದೇವಿಯರ ಹಂಬಲವು ಇಂಬಾಗಿ ತೋರುವುದು.

"ಬಸವ ಬಂದಿಗಟ್ಟಿ ಸಂಗಯ್ಯಾ ಮದುವಳಿಗ ನಾನು ಮದುವಳಿಗೆ ವಸುಧೆಯ ಭಕ್ತರೆಲ್ಲರು ನಿಬ್ಬಣಿಗರು. ಶುದ್ಧಶಿವಾಚಾರವೆಂಬ ಮನೆಯಲ್ಲಿ ಮದುವೆಯಾಗಿತ್ತಾಗಿ ಕೂಡಲ ಚನ್ನಸಂಗಮನೊಬ್ಬ ಅಚಳ, ನಾನು ನಿತ್ಯ ಮುತ್ತೈದೆ"

ಈ ವಚನದಲ್ಲಿ ಜಗತ್ಕುಟುಂಬಿಯೆಂದು ಹೇಳಿಕೊಂಡ ಆ ಮಹಾನುಭಾವರಾದ ಚನ್ನಬಸವಣ್ಣನವರು ತಮ್ಮ ಮುತ್ತೈದಿತನವನ್ನೂ ಹೇಳಿಕೊಂಡಿದ್ದಾರೆ.

ಒಮ್ಮೆ ಅಕ್ಕ ಮಹಾದೇವಿಯರು ಶ್ರೀಶೈಲಕ್ಕೆ ಹೊರಟಾಗ ಅಸಂಖ್ಯಾತ ಶರಣರೆಲ್ಲರೂ ಕಳುಹಲೆಂದು ಹೋಗಿದ್ದರು. ಆಗ ಅಕ್ಕ ಮಹಾದೇವಿಯವರು.

"ಹುಟ್ಟಿದೆನು ಶ್ರೀಗುರುವಿನ ಹಸ್ತದಲ್ಲಿ. ಬೆಳೆದೆನು ಅಸಂಖ್ಯಾತರ ಕರುಣದಲ್ಲಿ ಭಾವವೆಂಬ ಹಾಲು ಸುಜ್ಞಾನವೆಂಬ ತುಪ್ಪ ಪರಮಾರ್ಥವೆಂಬ ಸಕ್ಕರೆಯ—ನಿಕ್ಕಿದರು ನೋಡಾ- ಇಂತಪ್ಪ ತ್ರಿವಿಧಾಮೃತವ ದಣಿವೆರೆದು ಸಲಹಿದಿರೆನ್ನ, ವಿವಾಹವ ಮಾಡಿದಿರಿ, ಸಯಮಪ್ಪ ಗಂಡಂಗೆ ಕೊಟ್ಟಿರಿ. ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರೂ ನೆರೆದು ಬಂದಿರಿ. ಬಸವಣ್ಣ ಮೆಚ್ಚಲು ಒಗತನವ ಮಾಡುವೆ. ಚನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮಂಡೆಗೆ ಹೂವ ತಾಹೆನಲ್ಲದೆ ಹುಲ್ಲುತಾರೆನು. ಅವಧರಿಸಿ, ನಿಮ್ಮಡಿಗಳೆಲ್ಲರು ಮರಳಿ ಬಿಜಯಂಗೈವುದು ಶರಣಾರ್ಥಿ"

ಎಂದು ಹೇಳಿದುದನ್ನು ಕೇಳಿದರೆ ಸತ್ಯವಾಗಿಯೂ ಶರಣ ಶರಣೆಯರು ಪರಮಾತ್ಮನೊಡನೆ ವಿವಾಹವಾಗಿ ಒಗತನವ ಮಾಡಿದರೆಂದು ಸ್ಪಷ್ಟವಾಗುತ್ತದೆ.

"ಎನ್ನ ನಲ್ಲನು ಒಲ್ಲೆನೆಂದು ಕಳುಹಿದೊಡೆ ಇಲ್ಲಿಯೇ ಅರಸುವೆ ನವನ. ಗಂಗೆಯನೋನೆನು ಗೌರಿಯನೋನೆನು ಇಲ್ಲಿಯೇ ಅರಸುವೆನವ್ವಾ ಎನ್ನ ಅಂತರಂಗ ಆತ್ಮಜ್ಯೋತಿಯೇ ಉರಿಲಿಂಗದೇವ ಎಂದು ಇಲ್ಲಿಯೇ ಅರಸುವೆನವ್ವಾ"

ಪತಿವ್ರತಾ ಶಿರೋಮಣಿಯರಾದ ಹೆಂಗಳೆಯರು ತಮ್ಮನ್ನು ತಮ್ಮ ನಲ್ಲರು ತ್ಯಜಿಸಿದರೆ ಅವರನ್ನುವ ವಾಕ್ಯಗಳೇ ಇವರ ಕರುಳಿನಿಂದ ಒಸರಿ ಬಂದಿವೆ. ಆವ ಸೀತೆಯನ್ನು ರಾಮನು "ಕಟ್ಟಾರಣ್ಯದಲ್ಲಿ ಬಿಟ್ಟು ಬಾ!" ಎಂದು ಲಕ್ಷ್ಮಣನಿಗೆ ಹೇಳಿದಾಗ ಅವನು ಆಕೆಯನ್ನು ವನದಲ್ಲಿ ಇಳುಹಿ

ತಾಯಿ ಅಣ್ಣನು ನಿನ್ನನ್ನು ತ್ಯಜಿಸಿ ವನದಲ್ಲಿ ಬಿಟ್ಟು ಬಾ, ಎಂದು ಹೇಳಿದುದಕ್ಕಾಗಿ, ನಿನ್ನನ್ನು ನಾನು ಇಲ್ಲಿಗೆ ಕರತಂದೆ" ಎಂದೆಂದು ಅಳ ಹತ್ತಲು ಆಗ ಸೀತೆಯು ಹಲವು ತರದಿಂದ ಹಲುಬಿ "ರಾಮನ ಸೇವೆ ಸಂದುದೇ ತನಗೆ?" ಎಂದು ರೋಧಿಸಿದಳು. ಇದಲ್ಲದೆ "ಏಕೆ ನಿಂದಪೆ? ಪೋಗು ನೆರವುಂಟು ತನಗೀ ಕಾಡೊಳುಗ್ರ ಜಂತುಗಳಲ್ಲಿ ರಘುನಾಥ ನೇಕಾಕಿಯಾಗಿರ್ಪನು" ಎಂದು ಹೇಳಿ ಕಳುಹಿದ ಸೀತೆಗೂ, ಶಿವನ ಹೆಂಡರಾದ ಶರಣರಿಗೂ, ಏನು ವ್ಯತ್ಯಾಸ?

ಮದುವೆಯಾದ ಯುವತಿಯರು ಗಂಡನನ್ನಿಚ್ಛಿಸುವಂತೆ ಈ ಶರಣರು ಶಿವನಿಗಾಗಿಂತೆಂದರು.

> "ಗಿಡಮರದ ಕುರುಬಿತಿಯ ಜವ್ವನದಂತೆ ನುಡಿಯಲರಿಯದ ಮುಗ್ಧೆಯಾಗಿರ್ದೆನವ್ವಾ. ಪಗಲನರಿಯದ ಚಕ್ರವಕ್ಕಿಯಂತೆ ಮನಬಯಸುತ್ತಿರ್ದೆನವ್ವಾ. ಹಲವು ಕಾಲ ಎಲವದ ಮರನಸಾರ್ದಿದ ಅರಗಿಳಿಯಂತಾದೆನವ್ವಾ. ಇದು ಮಹಾಲಿಂಗ ಗಜೇಶ್ವರನ ನೆರಯಲರಿಯದೆ ಇವರೆಲ್ಲ ವಿಧಿಯ ಹೊತ್ತೆನವ್ವಾ."
>
> "ಇನಿಯಂಗೆ ತವಕವಿಲ್ಲ. ಎನಗೆ ಸೈರಣೆಯಿಲ್ಲ. ಮನದಿಚ್ಛೆಯ ನರಿವ ಸಖಿಯರಿಲ್ಲ. ಮನ್ಮಥ ವೈರಿಯ ಬಾಣ ಮನದಲ್ಲಿ ಸಿಲುಕಿ ಬಿಡದು. ಇನ್ನೇವೆ ನಿನ್ನೇವೆ? ದಿನವೃಥಾ ಹೋಗಿ ಯವ್ವನ ಬೀಸರ ಹೋಗದ ಮುನ್ನ ಪಿನಾಕಿಯ ತಂದು ನೆರಹವ್ವಾ ಶಂಭುಜಕ್ಕೇಶ್ವರನಾ"
>
> "ಕಾಮುಕಂಜಿ ಚಂದ್ರಮನ ಮರೆಹೊಗಲು ರಾಹು ಕಂಡಂತಾದಳವ್ವೆ ಹಾವೆಂದರಿಯದೆ ನೇಣೆಂದರಿಯದೆ ಕ್ಷಣನಾಗ ಭೂಷಣೆಯಾಗಿದ್ದಳವ್ವೆ ಮಹಾಲಿಂಗ ಗಜೇಶ್ವರನ ನೆರೆವ ಭರದಿಂದ ಕೊಳಕೆ ಬಂದ ಮೃಗದ ಹಾಗಿದ್ದೆನವ್ವಾ!"

ನಮ್ಮ ಶರಣರು ಸಂಸಾರಕ್ಕೆ ಹೇಸಿ ಹೇಸಿ ಹಲವು ಕಾಲ ದೇವ ನಡಿಗೆ ಹಂಬಲಸಿ ಹಂಬಲಸಿ, ಕಳವಳಗೊಂಡು ಹ್ಯಾಗೆ ರಾಧೆಯು ಯಮುನಾ ತಟದಲ್ಲಿ ಕೃಷ್ಣನಿಗಾಗಿ ವನವೆಲ್ಲ ತಿರುಗಿ ನನ್ನ ಕೃಷ್ಣನ ನೀವು ನೋಡಿರೇನೇ, ನನ್ನ ರಂಗನ ನೀವು ನೋಡಿರೇನೇ, ಎಂದು ಹ್ಯಾಗೆ ಹಲುಬಿದಳೋ ಹಾಗೆ ಇವರು ಶಿವನಿಗಾಗಿ ಬಾಯ್ಬಿಟ್ಟರು.

> "ಒಮ್ಮೆ ಕಾಮನ ಕಾಲ ಹಿಡಿವೆ, ಒಮ್ಮೆ ಚಂದ್ರಮನ ಸೆರಗೊಡ್ಡಿ ಬೇಡುವೆ, ಸುಡು ವಿರಹವನು, ಆರಿಗೆ ಧೃತಿಗೆಡುವೆ? ಚನ್ನಮಲ್ಲಿಕಾರ್ಜುನನೆನ್ನ ನೊಲ್ಲದ ಕಾರಣ ಎಲ್ಲರಿಗೆ ಹಂಗಿತೆಯಾದೆನವ್ವಾ"
>
> "ಕಳವಳದ ಮನವು ತಲೆಗೆಳಗಾಯಿತ್ತವ್ವಾ. ಸುಳಿದು ಬೀಸುವ ಗಾಳಿ ಉರಿಯಾಯಿತ್ತವ್ವಾ. ಬೆಳದಿಂಗಳು ಬಿಸಿಲಾಯಿತ್ತವ್ವಾ ಕೆಳದಿ ಹೊಳಲ ಸುಂಕಿಗನಂತೆ ತೊಳಲುತ್ತಿದ್ದೆನವ್ವಾ ಚನ್ನಮಲ್ಲಿಕಾರ್ಜುನಂಗೆ ಮುನಿಸವ್ವಾ"

" ಚಿಲಿಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೇ, ನೀವು ಕಾಣಿರೇ. ಕೊಳದ ತಡೆಯಲಾಡುವ ಹಂಸೆಗಳಿರಾ, ನೀವು ಕಾಣಿರೇ, ನೀವು ಕಾಣಿರೇ. ಸರವೆತ್ತಿ ಪಾಡುವ ಕೋಗಿಲೆಗಳಿರಾ, ನೀವು ಕಾಣಿರೇ, ನೀವು ಕಾಣಿರೇ. ಗಿರಿಗಹ್ವರಗಳೊಳಾಡುವ ನವಿಲುಗಳಿರಾ, ನೀವು ಕಾಣಿರೇ, ನೀವು ಕಾಣಿರೇ. ಚೆನ್ನಮಲ್ಲಿಕಾರ್ಜುನದೇವನೆಲ್ಲಿದ್ದಾನೆಂಬುದ ಬಲ್ಲಿರೇ. ನೀವು ಹೇಳಿರೇ "

ನಮ್ಮ ಶರಣನು ತಮ್ಮ ನಲ್ಲನ ವರ್ಣನೆ ಮಾಡಿರುವದನ್ನು ನೋಡಿದರೆ ಸಾಧ್ವೀಶಿರೋಮಣಿಯಾದ ಸತಿಯು ತನ್ನ ಪತಿಯನ್ನು ಮೆಚ್ಚಿ ಆತನ ಚಲ್ವಿಕೆಯನ್ನೂ ಆತನ ನಡೆನುಡಿಗಳನ್ನೂ ನೆನೆನೆನೆಯುವಂತೆ ಇವರೂ ಕೂಡ ಆ ದೇವನಿಗೆ ಮೆಚ್ಚಿ ಮೋಹಿತರಾಗಿ ಹಲವು ತರದಿಂದ ಬಣ್ಣಿಸಿದರು. ಹೇಗೆಂದರೆ

" ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚಲುವನವ್ವಾ. ಎಡೆಯಿಲ್ಲದ ತೆರಹಿಲ್ಲದ, ಕುರುಹಿಲ್ಲದ ಚಲುವಂಗಾನೊಲಿದೆ ಎಲೆ ಅವ್ವಾ. ನೀ ಕೇಳಾ ತಾಯೆ. ಭವವಿಲ್ಲದ ಭಯವಿಲ್ಲದ ನಿರ್ಭಯ ಚಲುವಂಗೆ. ಕುಲಸೀಮೆ ಇಲ್ಲದ ನಿಸ್ಸೀಮ ಚಲುವಂಗೆ ನಾನೊಲಿದೆ. ಇದು ಕಾರಣ ಚನ್ನಮಲ್ಲಿಕಾರ್ಜುನ ಚಲುವ ಗಂಡನೆನಗೆ ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು "

ಒಬ್ಬನೆ ಗರುವನು, ಇವನೊಬ್ಬನೆ ಚಲುವನು, ಇವನೊಬ್ಬನೆ ಧನಪತಿ ಕೇಳಾ ಕೆಳದಿ. ಅವನಿಗೆ ಹಿರಿಯರಿಲ್ಲ. ಅವನಿಗೆ ಒಡೆಯರಿಲ್ಲ. ಇಂತಪ್ಪನಲ್ಲನು ಲೇಸು ಕಾಣೆನಗೆ. ನೀವೆಲ್ಲ ಒಂದಾಗಿ ಹಿಡಿದು ಬಡಿದರೆ, ಬಿಡಿಸುವ ಈ ನಲ್ಲಲೇಸು ಉರಿಲಿಂಗದೇವನು "

ಭಾವವು ಅಡಗಿ ಆತನನ್ನು ಪಡೆದಾಗೆಲ್ಲ ಅಮೋಘವಾಣಿಯಿಂದ ನುಡಿದರು. ತಮ್ಮ ಆನಂದದ ಸುಗ್ಗಿ ಸೂರಿದಾಗ ಕೋಗಿಲೆಯಾಗಿ ಕೂಗಿದರು. ಗಿಳಿವಿಂಡಾಗಿ ಮಾತ ಹೇಳಿದರು.

" ಆರ ಪರಿಯಂತಲ್ಲ ನಮ್ಮ ನಲ್ಲನು. ವಿಶ್ವವೆಲ್ಲ ಸತಿಯರು. ಚೋದ್ಯದ ಪುರುಷನು. ಅವರವರ ಪರಿಯಲ್ಲಿ ಅವರವರ ನೆರೆವನು. ಅವರವರಿಗೆ ಅವರವರಂತೆ ಸುಖಮಯನು ನೋಡಾ. ಅವರೆಲ್ಲರ ವಂಚಿಸಿ ಎನ್ನ ನಗಲದ ಪರಿಯಹೇಳಾ ಕೆಳದಿ. ನೀನೊಳ್ಳಿದಳಾದರೆ ಮಹಾಮಂತ್ರವ ಜಪಿಸಲು ಎನ್ನನಗಲ ನಿನ್ನಾಣೆ.

" ಮನೆಯ ಗಂಡನ ಮನೆ ವಾರ್ತೆಯನೇನ ಹೇಳುವೆನವ್ವಾ? ಅಂಗವಿದ್ಯೆಯನೊಲ್ಲ. ಕಂಗಳೊಳಗಣ ಕಸವ ಕಳೆದಲ್ಲದೆ ನೋಡಲೀಯ. ಕೈದೊಳದಲ್ಲದೆ ಮುಟ್ಟಲೀಯ. ಕಾಲುದೊಳದಲ್ಲದೆ ಹೊದ್ದಲೀಯ. ಇಂತು ಸರ್ವಾಂಗ ಸಲೆದೊಳೆದ ಕಾರಣ ಕೂಡಲ ಚನ್ನಸಂಗಮದೇವನೆನ್ನ ಕೂಡಿಕೊಂಡನವ್ವ.

“ನಲ್ಲನ ರೂಪೆನ್ನ ನೇತ್ರವ ತುಂಬಿತ್ತು. ನಲ್ಲನ ನುಡಿಎನ್ನ ಶ್ರೋತ್ರವ ತುಂಬಿತ್ತು. ನಲ್ಲನ ಸುಗಂಧವೆನ್ನ ಘ್ರಾಣವ ತುಂಬಿತ್ತು. ನಲ್ಲನಾಲಿಂಗನವೆನ್ನ ಸರ್ವಾಂಗವ ತುಂಬಿತ್ತು. ನಲ್ಲನ ಪ್ರೇಮವೆನ್ನ ಮನವ ತುಂಬಿತ್ತು. ನಲ್ಲನು ಅಂತರಂಗ ಬಹಿರಂಗದಲ್ಲಿ ಕೂಡಿ ಸುಖಿಯಾದೆ ಉರಿಲಿಂಗದೇವಾ”

“ನಲ್ಲನ ಕೂಡುವನ್ನಕ್ಕ ಸುಖದ ಸುಗ್ಗಿಯು ನೇನೆಂದರಿಯೆ ಕೇಳಾ ಕೇಳದಿ. ಸುಖರ ಸವಿಗೆ ಸವಿಸಿ ಹರಿಯಿತ್ತು. ಹೇಳಲು ನಾಚಿಕೆ ಕೇಳಾ ಕೇಳದಿ. ಸುಖರಸ ಮೂಡುಗಟ್ಟಿದಲ್ಲಿ ಉರಿಲಿಂಗದೇವನ ಕೂಡಿ ಸುಖಸಾಗರದಲ್ಲಿ ಕ್ರೀಡಿಸುತಿರ್ದೆ ಕೇಳದಿ’

ಇಂತು ಆ ಶರಣರು, ದೇವನೊಡನೆ, ಭೂಜಗಲಿಯ ಮೇಲೆ, ಗಗನದ ಹಂದರದಲ್ಲಿ ಮದುವೆಯಾಗಿ, ದೇವನಲ್ಲಿ ತಮ್ಮ ಪ್ರೇಮ ಹೆಚ್ಚಿದಾಗೆಲ್ಲ ಗಂಡನಗಲಿದ ಯುವತಿಯರಂತೆ, ಅವನ ರೂಪು ಗುಣಗಳನ್ನು ವರ್ಣಿಸಿಯೂ, ಅವನ ಕೂಟಕ್ಕಾಗಿ ನೆನೆನೆನಿಸಿಯೂ, ಕಂಡಕಂಡವರನ್ನೆಲ್ಲ, ಕಂಡ ಕಂಡದುದನ್ನೆಲ್ಲ, ಕೇಳಿ ಬಾಯ್ಬಿಟ್ಟರು! ಕಡೆಗೆ ಅವನ ಕಂಡು ಆತನಲ್ಲಿಯೇ ಕಾಣದಾದರು!!

---

## ಶ್ರೀ ಅನ್ನದಾನಿ ಸ್ವಾಮಿಸ್ತೋತ್ರಂ.

(ಈ ಕೆಳಗಿನ ಪದ್ಯಗಳು ಕೈ. ವಾ. ಚನ್ನಗೌಡಾ ಗೌರವಾಡ ಮಾಸ್ತರ ಗಂಜೀಹಾಳ ಇವರಿಂದ ರಚಿಸಲ್ಪಟ್ಟವಿರುತ್ತವೆ. ಅವರು ಹೋದ ತಿಂಗಳಲ್ಲಿ ಲಿಂಗೈಕ್ಯರಾಗಿದ್ದು ಅವರು ತಮ್ಮ ಮರಣದ ಪೂರ್ವದಲ್ಲಿ ಈ ಪದ್ಯಗಳನ್ನು ರಚಿಸಿ ಇವುಗಳನ್ನು ಶಿವಾನುಭವದಲ್ಲಿ ಅಚ್ಚುಹಾಕಲು ಅಪೇಕ್ಷಿಸಿದ್ದರು. ಅವರು ಕನ್ನಡ ಮತ್ತು ಸಂಸ್ಕೃತದಲ್ಲಿ ಉತ್ತಮತರದ ಕವಿತೆಗಳನ್ನು ಮಾಡುತ್ತಿದ್ದರು. ಅವರು ಟ್ರೇನಿಂಗ ಕಾಲೇಜದ ೩ನೇ ವರ್ಷದ ಸರ್ಟಿಫಿಕೇಟನ್ನು ಪಡೆದು ಕೆಲವು ವರ್ಷ ಶಿಕ್ಷಕರ ಕೆಲಸವನ್ನು ಮಾಡಿ ನಂತರ ಗಂಜೀಹಾಳ ಜಹಾಗೀರದಾರರ ಕಾರಭಾರಿಗಳಾಗಿದ್ದರು. ಅವರು ಅತ್ಯಂತ ಸುಸ್ವಭಾವದವರೂ ಪ್ರೇಮಳ ಮನಸ್ಸಿನವರೂ ಆಗಿದ್ದರು. ಅವರ ಆತ್ಮಕ್ಕೆ ಪರಮಾತ್ಮನು ಶಾಂತಿಯನ್ನೀಯಲಿ. —**ಸಂಪಾದಕ**)

ಪ್ರಥಮಾ ವಿಭಕ್ತಿ ಪರವಾಗಿ.

ಶ್ರೀಮದ್ಭಾಸುರ ವೀರಶೈವ ವರ ದುಗ್ಧಾಂಬೋಧಿ ಚಂದ್ರೋದಯಃ ।
ಶ್ರೀಮತ್ಸುಪ್ರವಃಘೇಂದ್ರ ಸಾಂದ್ರ ಘನಗಂಭೀರೋಕ್ತಿ ಭಿರ್ವರ್ಣಿತಃ ॥
ಶ್ರೀಮಚ್ಛಂಕರ ಕಿಂಕರಾಳಿ ಸುಮನಸ್ಸಂಕಲ್ಪ ಕಲ್ಪದ್ರುಮಃ ॥
ಶ್ರೀಮತ್ಸದ್ಗುರು ವನ್ನದಾನಿ ಯತಿವರ್ಯ್ಯಃ ಸಂತತಂ ಪಾತುಮಾಂ ॥೧॥

ದ್ವಿತೀಯಾ ವಿಭಕ್ತಿ ಪರವಾಗಿ.

ಚಂಚತ್ಕಾಂಚನ ಪಲ್ಲವಾಂಚಿತಲಸತ್ಸಂಚಿತ್ಪ್ರಭಾಂದೋಲನೇ ।
ಪ್ರಾಂಚದ್ರತ್ನ ಮಯಾಸನೋಪರಿ ಸಮಾಸೀನಂ ಮುನಿಂ ಸ್ವಾಮಿನಂ ॥
ಪಂಚಾಸ್ಯೋದಿತ ಪಂಚವರ್ಣವಲಯಾಂತರ್ಭಾಗ ಚಿಜ್ಜ್ಯೋತಿನಂ ।
ಶ್ರೀಮತ್ಸದ್ಗುರುವನ್ನ ದಾನಿಯತಿವರ್ಯ್ಯಾರ್ಯಂ ಸದಾ ಹಂಭಜೇ ॥ ೨ ॥

ತೃತೀಯಾ ವಿಭಕ್ತಿ ಪರವಾಗಿ.

ಸಾರಾಸಾರ ವಿಚಾರಪೂರ ಗರಿಮಾ ಸನ್ಮಾರ್ಗ ಸಂದರ್ಶಿನಾ ।
ಧೀರೋದಾರ ಸುಶೀಲ ಸಜ್ಜನ ಚಕೋರಾನಂದ ಚಂದ್ರೇಣವೈ ॥
ಶ್ರೀಮಾಹೇಶ್ವರ ಲಾಂಛನಾಂಚಿತ ಲಸದ್ಗಾತ್ರೇಣ ತೇಜಸ್ವಿನಾ ।
ಶ್ರೀಮತ್ಸದ್ಗುರು ವನ್ನದಾನಿಯತಿನಾರಕ್ಷ್ಯೇ ಸದಾಹಂಭುವಿ ॥ ೩ ॥

ಚತುರ್ಥೀ ವಿಭಕ್ತಿ ಪರವಾಗಿ.

ಶ್ವೇತಚ್ಛತ್ರ ಸುಚಾರು ಚಾಮರ ಪತಾಕಾನಂದಿ ದಂಡೈಶ್ಶುಭೈ ।
ಸ್ತಾರಾಮಂಡಲ ಭೇದಕೈಶ್ಚ ನಿನದೈರಾನಂದ ಸಂದೋಹ ಭೇ ॥
ರೀ ಘಂಟಾಕಹಳಾ ಮೃದಂಗ ವಿಲಸದ್ವಾದ್ಯೈಸುಸೇವ್ಯಾಯತೇ ।
ಶ್ರೀಮತ್ಸದ್ಗುರು ವನ್ನದಾನಿಯತಯೆ ಮೋಕ್ಷಾಧಿಪತಯೇನಮಃ ॥೪॥

ಪಂಚಮಿ ವಿಭಕ್ತಿ ಪರವಾಗಿ.

ಸಾಕ್ಷಾನ್ಮೋಕ್ಷ ವಿದಾಯಕಾತ್ಪಶುಪತೇಃ ಪಾಶ್ಚಾತ್ಯ ಚಕ್ರಸ್ಥಲಾ ॥
ತ್ಪ್ರಾದುರ್ಭೂತ ನಿರಂಜನಪ್ರಭು ಚರನ್ಮೂರ್ತಿ ಸ್ವರೂಪಂ ಭೃತಃ ॥
ಯಸ್ಮಾತ್ಸಂಜನಿತಾ ಅನಂತಮಹಿಮಾನಃ ಸಂತತಂ ಭೂತಲೇ ।
ಶ್ರೀಮತ್ಸದ್ಗುರು ವನ್ನದಾನಿ ಮುನಿರಾಟ್ ಪಾದಾದ್ವಿದಾಃ ಕಂಟಕಾಃ ॥೫॥

ಷಷ್ಠಿ ವಿಭಕ್ತಿ ಪರವಾಗಿ.

ಆಪದ್ಘೋರ ತರಾಣಿ ಪಂಚಕ ಮಹಾಪಾಪಾನಿ ಸಂಹರ್ತಿನಃ ।
ಶಾಪಾತ್ತಸ್ತನರಾನ್ಸಿ ಮೋಚಕ ಯಶಶ್ಶೀತಾಂಶು ಸಂಕಾಶಿನಃ ॥

ಮುಕ್ತದ್ವಾರಸದನ್ನದಾನ ನಿರತ ಪ್ರೇಮಾವೃತೋಲ್ಲಾಸಿನಃ ।
ಶ್ರೀಮತ್ಸದ್ಗುರು ವನ್ನದಾನಿಸುಧಿಯಃ ಪಾದಾರವಿಂದಂಭಜೇ ॥ ೬ ॥
ಸಪ್ತಮಿ ವಿಭಕ್ತಿ ಪರವಾಗಿ.

ಸಚ್ಚಿನ್ಮೋದ ಕಲಾವೃತೇ ಪತಿತದೀನೋದ್ಧಾರ ಸದ್ಬಾಂಧವೇ ।
ಸಮ್ಯಜ್ಞಾನವತಾಂ ಸುಹೃತ್ಕಮಲ ಸಂಚಾರಪ್ರಹಂಸೋತ್ತಮೇ ॥
ಅಜ್ಞಾನ ಪ್ರಬಲಾಂಧಕಾರ ಹರಣ ಸ್ಫೂರ್ಜತ್ಪ್ರಭಾ ಭಾಸ್ಕರೇ ।
ಶ್ರೀಮತ್ಸದ್ಗುರುವನ್ನದಾನಿ ಶಿವಯೋಗೀಂದ್ರೇರಮೇಹಂ ಸದಾ ॥ ೭ ॥
ಸಂಬೋಧನ ವಿಭಕ್ತಿ ಪರವಾಗಿ.

ಶ್ರೀಮತ್ಸಾಂಭವಯೋಗ ಮಾರ್ಗನಿರತ ಪ್ರಾಪಂಚಕಾಂಬೋಧಿ ನೌ ।
ಕ್ಷೇಮಾನಂದ ಮಮಂದ ಸೌಖ್ಯಮತಿ ಸಂಪತ್ತಿಂ ಯಶಃ ಪ್ರಾಪಯನ್ ॥
ಧೀಮಂತ ಪ್ರಚಯ ಪ್ರಕಲ್ಪತರು ಸತ್ಪಾದಾರವಿಂದಂ ಪ್ರಭೋ ।
ಶ್ರೀಮತ್ಸದ್ಗುರು ವನ್ನದಾನಿ ಮನಸಾ ವಂದೇ ಪರಂಧಾಮತೇ ॥೮॥
ಸರ್ವವಿಭಕ್ತಿ ಪರವಾಗಿ.

ಯಃ ಶ್ರೀ ಕ್ಷೀರಸರೋವರೇ ವಸತಿಯಂ ಸೇವ್ಯಂ ವಿದುಸ್ಸಜ್ಜನಾಃ ।
ಯೇನಾನಂತ ಮಹತ್ವ ಸತ್ಕ್ರಿಯಕೃತಾ ಯಸ್ಮೈಸದಾನಂದಿತಾಃ ।
ಯಸ್ಮಾತ್ಸರ್ವ ಭಯೋವಿನಶ್ಯತಿ ತಥಾ ಯಸ್ಯಾಸ್ತಿ ಕರ್ತವ್ಯತಾ ।
ಶ್ರೀಮತ್ಸದ್ಗುರು ವನ್ನದಾನಿ ನವಮಾಂ ಯಸ್ಮಿನ್ ಜಗದ್ವಿದ್ಯತೇ ॥೯॥

ಶ್ರೀಮತ್ಸದ್ಗುರು ವನ್ನದಾನಿ ಪದಪೂಜಾಸಕ್ತ ಸದ್ಭಕ್ತ ಗಂ ।
ಜೀಹಾಲಸ್ಥ ಸುವೀರಶೈವ ಪರಚನ್ನಾಖ್ಯೇನ ಚೇದಂಕೃತಂ ॥
ಯಃಸ್ತೋತ್ರಂ ಪಠತೇ ಸ ಏವ ಗುರುಕಾರುಣ್ಯಾತ್ಸದಾ ಸಂಪದಂ ।
ಸಂತಾನಂ ಸಕಲೇಪ್ಸಿತಂಚ ಪರಿಲಬ್ಧಾಂತೇ ಸುಮುಕ್ತಿಂ ಲಭೇತ್ ॥೧೦॥

ಭಾಸ್ವತ್ಸದ್ಗುರು ವನ್ನದಾನಿ ನವರತ್ನಾಖ್ಯಂ ಸದಾಭಕ್ತಿ ಪೂ ।
ರ್ಣಂ ಶಾಂತಂ ಹೃದಯಾಭಿರಾಮಮನಿಶಂ ಸಂತೋಷ ಸಂಪತ್ಕರಂ ॥
ಸಾಂಗತ್ಯಂ ಪ್ರಥಮಾದಿ ಸಪ್ತಕ ವಿಭಕ್ತ್ಯಂತ ಕ್ರಮೇಣಾನ್ವಿತಂ ।
ಶ್ರೀಮತ್ಸದ್ಗುರು ವನ್ನದಾನಿ ಕೃಪಯಾ ಪೂರ್ಣೀಕೃತಂಚಾಧುನಾ ॥೧೧॥

---

# ಹೃದ್ಗತ.



ಶಿವಾನುಭವದ ಈ ಸಂಚಿಕೆಯಿಂದ ಅದರ ನಾಲ್ಕನೇ ವರ್ಷವು ಪ್ರಾರಂಭವಾಗಿರುತ್ತದೆ. ಈ ಅವಧಿಯಲ್ಲಿ ಅದು ಮಾಡಿದ ಲೋಕ ಮತ್ತು ಧರ್ಮ ಸೇವೆಗಳನ್ನು ನಾವು ಅದರ ವಾಚಕ ವರ್ಗಕ್ಕೆ ವಿದಿತಪಡಿಸುವ ಅವಶ್ಯವೇನೂ ಇರುವದಿಲ್ಲ. ವೀರ ಶೈವ ಧರ್ಮವು ಹಿಂದುಸ್ತಾನದ ಧರ್ಮಗಳಲ್ಲಿ ಒಂದು ವಿಶೇಷ ತರವಾದ ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿಗಳನ್ನೆಸಗಿರುತ್ತದೆ. ಅಲ್ಲದೆ ಅದು ಕರ್ನಾಟಕ ರಾಜಕೀಯ ಇತಿಹಾಸದ ಮೇಲೆಯೂ ಮಹತ್ವದ ಪರಿಣಾಮಗಳನ್ನುಂಟು ಮಾಡಿರುತ್ತದೆ. ಹೀಗಿದ್ದರೂ ಅದು ಇನ್ನೂ ನಮ್ಮ ದೇಶದಲ್ಲಿ ಅಜ್ಞಾತಾವಸ್ಥೆಯಲ್ಲಿಯೇ ಉಳಿದಿರುತ್ತದೆ. ಈ ಸ್ಥಿತಿಯನ್ನು ದೂರಗೊಳಿಸಿ ಅದರ ಮಹತ್ವದ ಪ್ರಕಾಶವನ್ನು ಬೀರುವದೇ ಶಿವಾನುಭವದ ಮುಖ್ಯ ಉದ್ದೇಶವಾಗಿದ್ದು ಈ ಕಾರ್ಯವನ್ನು ಅದು ಈಗಿನ ಪರಿಸ್ಥಿತಿಗೆ ಸರಿಯಾಗಿ ಶಕ್ಯವಿದ್ದಷ್ಟರ ಮಟ್ಟಿಗೆ ನೆರವೇರಿಸಲು ಯತ್ನಿಸುತ್ತ ಬಂದಿರುತ್ತದೆ.

ವೀರಶೈವ ಸಂಸ್ಕೃತಿಯನ್ನು ದೇಶ ದೇಶಗಳಲ್ಲಿ ಹರಡಿ, ಅದಕ್ಕೆ ಒಂದು ಮಹತ್ವದ ಸ್ವರೂಪನ್ನು ತಂದುಕೊಡಲಿಕ್ಕೆ ವಚನವಾಙ್ಮಯವು ಬಹಳ ಅಂಶದಿಂದ ಕಾರಣವಾಗಿರುತ್ತದೆ. ಆದರೆ ಇದರ ಅಸಂಖ್ಯಾತ ಗ್ರಂಥಗಳು ಇನ್ನೂ ಅಪ್ರಕಾಶಿತವಾಗಿ ಉಳಿದು ಬಿಟ್ಟಿರುತ್ತವೆ. ಇವುಗಳಲ್ಲಿ ೧ಳ ಗ್ರಂಥಗಳು ಶಿವಾನುಭವ ಪತ್ರಿಕೆಯ ದ್ವಾರಾ ಈ ವರೆಗೆ ಪ್ರಕಟಿಸಲ್ಪಟ್ಟಿರುತ್ತವೆ. ಇದೇ ಕ್ರಮವನ್ನು ಶಿವಾನುಭವದಲ್ಲಿ ನಾವು ಮುಂದಾದರೂ ಅನುಸರಿಸುವೆವು.

ಈ ಪ್ರಕಾರ ಧಾರ್ಮಿಕ ಮೂಲಗ್ರಂಥಗಳನ್ನು ಪ್ರಕಟಿಸುವದಲ್ಲದೆ ಅವುಗಳಲ್ಲಿ ಅಡಕವಾಗಿರುವ ಧಾರ್ಮಿಕ ನೈತಿಕ ಮತ್ತು ಆಚಾರ ವಿಷಯಕ ತತ್ವಗಳ ನಿಜಸ್ವರೂಪನ್ನು ಬಹಿರಂಗಗೊಳಿಸುವದಾದರೂ ಈ ಪತ್ರಿಕೆಯ ಉದ್ದೇಶವಾಗಿರುವದು. ಇನ್ನು ಮುಂದೆ ಶಿವಾನುಭವದ ಸಂಚಿಕೆಗಳಲ್ಲಿ ಇಂಥವಿಷಯಗಳಿಗೆ ಮಹತ್ವದ ಸ್ಥಾನವು ಕೊಡಲ್ಪಡುವದು. ಇಲ್ಲಿ

ನಾವು ವಾಚಕರಿಗೆ ಅವಶ್ಯವಾಗಿ ತಿಳುಹಿಸತಕ್ಕದ್ದೇನೆಂದರೆ ಶಿವಾನುಭವವು ಯಾವ ಪಕ್ಷಕ್ಕೂ ಸೇರ್ಪಡೆಯಾಗಿರದೆ, ತತ್ವಾನ್ವೇಷಣವೇ ಅದರ ಮುಖ್ಯ ಧ್ಯೇಯವಾಗಿರುತ್ತದೆ. ಆದ್ದರಿಂದ ಲೇಖಗಳಲ್ಲಿ ಪ್ರಕಟಿಸಲ್ಪಟ್ಟ ಅಭಿಪ್ರಾಯಗಳು ಆಯಾ ಲೇಖಕರವೇ ಇರುತ್ತವೆಂದು ತಿಳಿಯಬೇಕೇ ಹೊರ್ತು ಸಂಪಾದಕರವಲ್ಲವೆಂಬದನ್ನು ನಾವು ವಾಚಕರಿಗೆ ಬೇರೆಯಾಗಿ ಹೇಳುವ ಅವಶ್ಯವಿಲ್ಲ. ಲೇಖಗಳ ಬಗ್ಗೆ ಯಾರಲ್ಲಾದರೂ ಭಿನ್ನಾಭಿಪ್ರಾಯಗಳಿದ್ದರೆ ಅವರು ಅವುಗಳನ್ನು ಶಿವಾನುಭವ ದ್ವಾರಾ ಅವಶ್ಯವಾಗಿ ಪ್ರಕಟಿಸಬಹುದು.

ಶಿವಾನುಭವದ ಹಿಂದಿನ ಸಂಚಿಕೆಗಳಲ್ಲಿ ವೀರಶೈವ ಸಮಾಜದಲ್ಲಿಯ ಅನೇಕ ಧಾರ್ಮಿಕ ಮತ್ತು ರಾಜಕೀಯ ಮಹಾಪುರುಷರ ಚರಿತ್ರೆಗಳು ಬಂದಿವೆ. ಆದರೆ ಅವುಗಳಲ್ಲಿರುವ ಅದ್ಭುತ ಭಾಗಗಳಿಗೆ ನಾವು ಮಹತ್ವ ಕೊಡದೆ, ಕೇವಲ ಐತಿಹಾಸಿಕ ಭಾಗಗಳ ನಿಜತ್ವವನ್ನು ನಿರ್ಧರಿಸುವ ಧ್ಯೇಯವನ್ನಿಟ್ಟುಕೊಂಡು ಆ ಚರಿತ್ರೆಗಳು ನಿರ್ದೇಶಿಸಲ್ಪಟ್ಟಿರುವವು. ಪ್ರಚಲಿತ ಕಾಲದಲ್ಲಿ ಈ ಧ್ಯೇಯವನ್ನಿಟ್ಟುಕೊಂಡು ಸಂಶೋಧನ ಮಾಡುವದು ಬಹಳ ಮಹತ್ವದ್ದಿರುತ್ತದೆ. ಮುಂದಾದರೂ ಕೂಡ ಇದೇ ಪದ್ಧತಿಯನ್ನು ಅನುಸರಿಸಬೇಕೆಂದು ನಾವು ನಿಶ್ಚಯಿಸಿದ್ದೇವೆ. ಆದರೆ ಅನೇಕ ಭಾವಿಕ ಜನರು ನಮ್ಮ ಈ ಪದ್ಧತಿಯನ್ನು ನೋಡಿ ವಿಪರೀತ ಕಲ್ಪನೆಗಳನ್ನು ಮಾಡಿಕೊಂಡಿರುವದು ನಮಗೆ ಕಂಡು ಬಂದಿರುವದರಿಂದ ನಾವು ಈ ಸಂಗತಿಯನ್ನು ಇಲ್ಲಿ ವಿವರಿಸಬೇಕಾಗಿ ಬಂದಿರುತ್ತದೆ.

ಶಿವಾನುಭವವು ಕೈಕೊಂಡ ಮೇಲ್ಕಂಡ ಧ್ಯೇಯಗಳು ಎಷ್ಟು ಬಿಗಿಯಾದವೆಂಬದನ್ನು ನಾವು ಇಲ್ಲಿ ಬೇರೆ ಹೇಳುವದು ಅವಶ್ಯವಿಲ್ಲ. ಆದರೆ ವೀರಶೈವ ಸಮಾಜದಲ್ಲಿ ಈ ಬಗೆಯ ಶೋಧದ ಕಾರ್ಯಗಳಲ್ಲಿ ತೊಡಗಿರುವವರ ಸಂಖ್ಯೆಯು ಅತ್ಯಲ್ಪವಾಗಿರುವದರಿಂದ ದೊಡ್ಡ ಪತ್ರಿಕೆಯ ಮಹತ್ವವನ್ನು ಕಾಯ್ದುಕೊಂಡು ಹೀಗೆ ನಡಿಸುವದು ಯಾವಾಗಲೂ ಬಹಳ ದುಸ್ತರವಾಗಿದೆ. ಆದರೆ ಈ ಪತ್ರಿಕೆಯನ್ನು ಪ್ರತಿತಿಂಗಳು ಪ್ರಕಟಿಸಿದ್ದಾದರೆ ಜನರಲ್ಲಿ ಹೆಚ್ಚು ಉತ್ಸುಕತೆಯೂ, ಜಾಗ್ರತೆಯೂ ಉತ್ಪನ್ನವಾಗಿ ಅದರಿಂದ ಹೆಚ್ಚಿಗೆ ಉಪಯೋಗವಾಗಬಹುದೆಂದು ಅನೇಕರು ಸೂಚಿಸಿದ್ದರಿಂದ ನಾವು ಇದನ್ನು ಈಗ ಮಾಸಪತ್ರಿಕೆಯನ್ನಾಗಿ ಮಾಡಿದ್ದೇವೆ. ಈ ವ್ಯವಸ್ಥೆಯಿಂದ ಹೆಚ್ಚಿಗೆ ಪ್ರಯೋಜನವಾದೀತೆಂದು

ನಾವು ನಿರೀಕ್ಷಿಸುತ್ತೇವೆ. ಆದರೆ ನಮ್ಮ ಉದ್ದೇಶವು ನೆರವೇರಬೇಕಾದರೆ ನಮ್ಮಲ್ಲಿರುವ ವಿದ್ವಜ್ಜನರು ತಮ್ಮ ವಿಚಾರಗಳನ್ನು ತಮ್ಮಲ್ಲಿಟ್ಟುಕೊಳ್ಳದೆ, ಅವುಗಳನ್ನು ಬರೆದು ಬಹು ಜನ ಸಮಾಜದ ಎದುರಿಗೆ ಇಡುತ್ತ ಹೋಗುವದು ಅವಶ್ಯವು. ಇದರಿಂದ ಅವರು ತಮ್ಮ ಜ್ಞಾನದ ಅಭಿವೃದ್ಧಿಯನ್ನಷ್ಟೇ ಅಲ್ಲ, ಸಮಾಜದಲ್ಲಿ ತಿಳುವಳಿಕೆಯ ಪ್ರಸಾರವನ್ನೂ ಮಾಡಿದ ಶ್ರೇಯಸ್ಸಿಗೆ ಪಾತ್ರರಾಗುವರು.

ಈಗಿನ ಕಾಲದಲ್ಲಿ ಗ್ರಂಥಪ್ರಕಟನಾ ಕಾರ್ಯವು ಅವಶ್ಯವಾಗಿರುವದರಿಂದ ಈ ಬಗ್ಗೆ ಒಂದು ಸ್ವತಂತ್ರ ಸಂಘವನ್ನು ಏರ್ಪಡಿಸುವದು ಅವಶ್ಯವೆಂದು ಅನೇಕರು ಅಭಿಪ್ರಾಯಪಟ್ಟ ಮೂಲಕ ಈ ವಿಷಯವನ್ನು ಕುರಿತು ವಿಚಾರ ಮಾಡಲು ತಾ|| ೨೭-೧-೨೯ ದಿವಸ ವಿಜಾಪುರದಲ್ಲಿ ಒಂದು ಸಭೆಯು ಸೇರಿತ್ತು. ಆ ಕಾಲಕ್ಕೆ "ವಾಙ್ಮಯ ಸಂಘ"ವೆಂಬ ಸಂಸ್ಥೆಯನ್ನು ಸ್ಥಾಪಿಸಬೇಕೆಂದು ನಿರ್ಧರಿಸಿ ಅದರ ಬಗ್ಗೆ ನಿಯಮಗಳೂ ಮಾಡಲ್ಪಟ್ಟವು. ಈ ಸಂಘಕ್ಕೆ ಸದ್ಯಕ್ಕೆ ರಾ|| ರಾ|| ವೀರಭದ್ರಪ್ಪ ಹಾಲಭಾವಿ ಸಬಜಜ್ಜ ಇವರು ೫೦೦ ರೂಪಾಯಿ, ರಾ|| ರಾ|| ದುಂಡಪ್ಪ ಅಕ್ಕಿ ೨೫೦ ರೂ, ರಾ|| ರಾ|| ಬಸವಲಿಂಗಪ್ಪ ಮೋಟಗಿ, ರಾ|| ರಾ|| ರಾಚಪ್ಪ ಹೇರಲಗಿ, ಶಂಕರೆಪ್ಪ ಧನಶಟ್ಟಿ, ರೇವಣಸಿದ್ದಪ್ಪ ಭೈರೋ ಪಾಟೀಲ ಇವರು ಪ್ರತಿಯೊಬ್ಬರು ೧೦೦ ರೂಪಾಯಿ ಈ ಪ್ರಕಾರ ಹಣವನ್ನು ವಾಗ್ದಾನ ಮಾಡಿ ಈ ಸಂಸ್ಥೆಯ ಸದಸ್ಯರಾಗಿರುವರು. ಮುಂದೆ ಸಾಕಷ್ಟು ಜನ ಸದಸ್ಯರಾದ ಬಳಿಕ ಇದರ ಕಾರ್ಯಕಾರೀ ಮಂಡಲ ಮುಂತಾದವುಗಳು ನಿಯಮಾನುಸಾರ ಏರ್ಪಡಿಸಲ್ಪಡುವವು.

ಆದರೆ ಯಾವದಾದರೂ ಒಂದು ಗ್ರಂಥವನ್ನು ಅಚ್ಚುಹಾಕುವ ಬಗ್ಗೆ ಅದಕ್ಕೋಸ್ಕರ ಯಾರಾದರೂ ಹಣವನ್ನು ಕೊಟ್ಟಿದ್ದಾದರೆ ಅವರ ಹೆಸರಿನಿಂದಲೇ ಆ ಗ್ರಂಥವನ್ನು ಪ್ರಕಟಿಸಬೇಕೆಂದು ಸಭೆಯಲ್ಲಿ ಗೊತ್ತಾದ್ದರಿಂದ ಆ ಪ್ರಕಾರ "ಶೂನ್ಯಸಂಪಾದನೆ" ಎಂಬ ಪ್ರಸಿದ್ಧ ಗ್ರಂಥವು ರಾ|| ರಾ|| ವೀರಭದ್ರಪ್ಪ ಹಾಲಭಾವಿ ಇವರ ಹೆಸರಿನಿಂದ ಪ್ರಕಟಿಸಲ್ಪಡುವದು. ಇದಕ್ಕೋಸ್ಕರ ಈ ಮಹನೀಯರು ಈಗ ೨೫೦ ರೂಪಾಯಿಗಳನ್ನು ಕೊಟ್ಟಿದ್ದು ಇದನ್ನು ಅಚ್ಚುಹಾಕುವ ಕಾರ್ಯವಾದರೂ ಈಗ ಪ್ರಾರಂಭವಾಗಿರುತ್ತದೆ. ಕವಿ ಶ್ರೇಷ್ಠನಾದ ಹರಿಹರಾಚಾರ್ಯನ ರಘಟಾ

ಕಾವ್ಯವಾದರೂ ಕನ್ನಡದಲ್ಲಿ ಮಹತ್ವದ ಗ್ರಂಥವಿರುತ್ತದೆ. ಇದರಲ್ಲಿ ೬೩ ಪುರಾತನರ ಚರಿತ್ರೆಗಳು ಅಡಕವಾಗಿದ್ದು ಇದನ್ನೂ ಅಚ್ಚು ಹಾಕುವ ಕಾರ್ಯವನ್ನು ಈಗ ನಾವು ಕೈಕೊಂಡಿದ್ದೇವೆ. ಇದರದೊಂದು ಪ್ರತಿಯು ಗವರ್ನಮೆಂಟ ಓರಿಯೆಂಟಲ್ ಲೈಬ್ರರಿ ಮೈಸೂರು ಇಲ್ಲಿ ಉಪಲಬ್ಧವಿದ್ದು ಅದನ್ನು ನಾವೀಗ ದೊರಕಿಸುವ ವ್ಯವಸ್ಥೆಯನ್ನು ಮಾಡಿದ್ದೇವೆ. ಈ ಕಾವ್ಯದ ಶುದ್ಧ ಪ್ರತಿಯನ್ನು ಅಚ್ಚುಹಾಕುವದು ಬಹಳ ಅವಶ್ಯವಿದ್ದದರಿಂದ ಇದರ ಬೇರೆ ಪ್ರತಿಗಳು ಮತ್ತೆ ಯಾರಲ್ಲಾದರೂ ಇದ್ದರೆ ಅವುಗಳನ್ನು ನಮ್ಮ ಕಡೆಗೆ ಕಳಿಸಿದರೆ ನಾವು ಅವರಿಗೆ ಬಹಳ ಆಭಾರಿಯಾಗುವೆವು.

ಶಿವಾನುಭವಕ್ಕೆ ಈ ವರೆಗೆ ಲೇಖಗಳನ್ನು ಕಾಲಕಾಲಕ್ಕೆ ಬರೆಯುತ್ತಲೂ ಇನ್ನೂ ಅನೇಕ ರೀತಿಯಿಂದ ನಮಗೆ ಅತ್ಯಂತ ಸಹಾಯವನ್ನು ಮಾಡುತ್ತಲೂ ಬಂದ ಯಾವತ್ತೂ ಮಹನೀಯರಿಗೆ ನಾವು ಕೃತಜ್ಞತಾ ಪೂರ್ವಕವಾಗಿ ನಮ್ಮ ವಂದನೆಗಳನ್ನು ಅರ್ಪಿಸುತ್ತೇವೆ. ಇದೇ ಮೇರೆಗೆ ಅವರು ಮುಂದಾದರೂ ಈ ಪತ್ರಿಕೆಯನ್ನು ಪೋಷಿಸುವರೆಂದು ನಾವು ವಿನಂತಿ ಮಾಡಿಕೊಳ್ಳುತ್ತೇವೆ.

ಈ ಕಾಲಕ್ಕೆ ನಾವು ಕೈ. ವಾ. ಗಂಗಾಧರಪ್ಪ ಸಾಬೋಜಿ ಇವರು ಆಕಸ್ಮಿಕವಾಗಿ ಲಿಂಗೈಕ್ಯರಾದದ್ದಕ್ಕೆ ನಮಗುಂಟಾದ ಅತ್ಯಂತ ವಿಷಾದವನ್ನು ವ್ಯಕ್ತಪಡಿಸದೆ ಇರಲಾರೆವು. ಇವರು ವೀರಶೈವ ಸಮಾಜದ ಉಜ್ವಲ ಪ್ರೇಮಿಗಳಾಗಿದ್ದು ಇವರಿಂದ ಶಿವಾನುಭವಕ್ಕೆ ಬಹಳ ಸಹಾಯವಿತ್ತು. ಇವರು ಅತ್ಯಂತ ಉದಾರಿಗಳೂ ಪ್ರೇಮಳ ಹೃದಯರೂ ಆಗಿದ್ದು ವೀರಶೈವ ಸಮಾಜದಲ್ಲಿ ಪ್ರಬಲವಾಗಿರುವ ಅಹಿತಕಾರಕವಾದ ರೂಢಿಗಳನ್ನು ನಿವಾರಣೆ ಮಾಡಲು ಬಹಳ ಉತ್ಸುಕರಾಗಿದ್ದರು. ಅವರು ಇನ್ನೂ ಕೆಲವು ದಿವಸ ಇದ್ದಿದ್ದರೆ ಅವರಿಂದ ಸಮಾಜಕ್ಕೆ ಅನೇಕ ಮಹತ್ವದ ಕಾರ್ಯಗಳಾಗಬಹುದಾಗಿತ್ತು. ಆದರೆ ಸಮಾಜದ ದುರ್ದೈವದಿಂದ ಅವರು ಬೇಗನೆ ಲಿಂಗೈಕ್ಯರಾದರು. ಅವರ ಆತ್ಮಕ್ಕೆ ಶಾಂತಿಯು ಸಿಗಲೆಂದು ನಾವು ಪರಮಾತ್ಮನನ್ನು ಕುರಿತು ಪ್ರಾರ್ಥಿಸುತ್ತೇವೆ.

---

R. N. B. 2554.

# ಶಿವಾನುಭವ.

(ಮಾಸಪತ್ರಿಕೆ)

ಸಂಪುಟ ೪.] [ಸಂಚಿಕೆ ೩.



ನೋ ೧೯೨೯] ವಿಜಾಪುರ [ವೈಶಾಖ ೧೮೫೧

ವಾ. ಚ. ೪ ರೂ. ೪ ಆ.

# ವಿಷಯಾನುಕ್ರಮಣಿಕೆ.



## ಶಿವಾನುಭವ.

ಇದು ವೀರಶೈವ ಧಾರ್ಮಿಕ ಉನ್ನತಿಯ ಬಗ್ಗೆ ಹೆಣಗಾಡುವ ಮೋಲ್ತರದ ಮಾಸಪತ್ರಿಕೆಯು. ಇದು ೬೪ ಪುಟಗಳುಳ್ಳದ್ದಿದ್ದು ಚಂದಾ ಮಾತ್ರ ನಾಲ್ಕೇ ರೂಪಾಯಿ. ಇದು ಪ್ರತಿ ತಿಂಗಳ ಮಧ್ಯಕ್ಕೆ ಹೊರಡುತ್ತದೆ. ಲೇಖಕರು ಚಿಕ್ಕ ಚಿಕ್ಕ ಲೇಖಗಳನ್ನು ಕಳಿಸಬೇಕು. ವೀರಶೈವರ ಉನ್ನತಿಯ ಪರವಾಗಿ ಯಾರು ಬೇಕಾದವರು ಬರೆದರೂ ಅವಕಾಶ ಸಿಗುವದು. ಕೆಲವರು ಇದರ ಹಿಂದಿನ ಸಂಚಿಕೆಗಳನ್ನು ಬೇಡುತ್ತಾರೆ. ಆದರೆ ೧-೨ ಸಂಚಿಕೆಗಳು ಸಿಗುವದೇ ಇಲ್ಲ. ೩ ರಿಂದ ೧೨ ವರೆಗೆ ಮಾತ್ರ ಸಿಗುತ್ತವೆ. ಬೇಕಾದವರು ಶೀಘ್ರ ತರಿಸಿಕೊಳ್ಳಬಹುದು. ತಡವಾದರೆ ಪ್ರತಿಗಳು ಸಿಗಲಾರವು. ಯಾಕಂದರೆ ಪ್ರತಿಗಳು ಸ್ವಲ್ಪೇ ಉಳದಿವೆ. ಪ್ರತಿಯೊಂದು ಸಂಚಿಕೆಗೆ ೮ ಆಣೆ.

ಮ್ಯಾನೇಜರ.


ಇದನ್ನು ವಿಜಾಪುರದಲ್ಲಿ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ.

ವರ್ಷ ೪] ಮೇ ೧೯೨೯ [ಸಂಚಿಕೆ ೨

## ಆಂಧ್ರ ವೀರಶೈವರು.

(ಪಂಡಿತ, ಚಿದಿರೆ ಮಠದ, ವೀರಭದ್ರ ಶರ್ಮ ಹೈದರಾಬಾದ್.)
(ಕಾಶಿಯಿಂದ)

(೧ನೇ ಸಂಚಿಕೆಯಿಂದ ಮುಂದೆ ಸಾಗಿದ್ದು.)

**ಪಂಡಿತರೂ ಕವಿಗಳೂ:—** ಆಂಧ್ರ ವೀರಶೈವರಲ್ಲಿ ಪಂಡಿತ ಪುತ್ರರ ಉದಯವು ಅತ್ಯಲ್ಪವೇ! ಒಂದೆರಡು ನಿರ್ದುಷ್ಟ ರತ್ನಗಳು ಮೆರೆದು ಹೋದವೆಂದು ಮಾತ್ರ ಹೇಳಬಹುದು. ಶ್ರೀ ಪಾಲ್ಕುರಿಕೆ ಸೋಮನಾರಾಧ್ಯರ ಪವಿತ್ರ ನಾಮವನ್ನು, ಅಕ್ಷರಾಸ್ಯರಾದ ಸಮಸ್ತಾಂಧ್ರರೂ, ಎಲ್ಲಾ ಪ್ರಾಂತಗಳಲ್ಲಿಯ ವೀರಶೈವರೂ, ಸ್ಮರಿಸದಿರಲಾರರು. ರಾಮನು ವಾಲ್ಮೀಕಿ ಮಹರ್ಷಿಯಿಂದ ಪ್ರಸಿದ್ಧಿಗೆ ಬಂದಂತೆ, ಬಸವೇಶ್ವರನು ಸೋಮನಾರಾಧ್ಯರಿಂದಲೇ ಪ್ರಸಿದ್ಧಿಗೆ ತರಲ್ಪಟ್ಟನೆಂದರೆ, ಅತಿಶಯೋಕ್ತಿಯಲ್ಲ. ಇವರು ಲಿಂಗೈಕ್ಯರಾಗುವ ವರೆಗೂ ಬಸವ ಶಬ್ದದ ಹೊರತು ಮತ್ತೊಂದನ್ನು ವ್ಯವಹರಿಸಲಿಲ್ಲವೆಂಬುದು ಬಹಳ ಸತ್ಯ. ಇದಕ್ಕೆ ಇವರ “ಬಸವ ಪುರಾಣ, ಬಸವರಗಳೆ, ಬಸವಾಷ್ಟಕ, ಬಸವರಾಜೀಯ (ಸೋಮನಾರಾಧ್ಯ ಭಾಷ್ಯ), ಬಸವಸ್ತೋತ್ರ, ಬಸವಪಂಚಗದ್ಯ, ಬಸವೋದಾಹರಣ, ವೃಷಾಧಿಪಶತಕ” ಮುಂತಾದ ಕೃತಿಗಳು ಸಾಕ್ಷಿಯಾಗಿವೆ. ಈತನು ಬಸವ ಮಹಾ ಭಕ್ತನಾಗಿ ಪ್ರಸಿದ್ಧಿಯಾದವನಲ್ಲದೆ ಉದ್ದಾಮ ಪಂಡಿತನೂ, ಅಷ್ಟಭಾಷಾ ಕವಿಯೂ ಆಗಿದ್ದನು. ನನ್ನೆಚೋಡನೆಂಬ ಆಂಧ್ರ ಮಹಾಕವಿಯೋ (ಮಾಹೇಶ್ವರನೋ)ರ್ವನು ಸೋಮನಾರಾಧ್ಯರಿಗಿಂತಲೂ ಪೂರ್ವ

ಪಟ್ಟಿದ್ದನು. ಈತನಷ್ಟು ವ್ಯಾಪಕನಾಗಿ ಹೋಗದಿದ್ದರೂ, "ಆಂಧ್ರ ಕುಮಾರ ಸಂಭವ"ವನ್ನು ರಚಿಸಿ ಭಾಷೆಯಲ್ಲಿ ನೂತನ ಶಕವನ್ನುಂಟು ಮಾಡಿದನಲ್ಲದೆ, ಆಂಧ್ರ ಭಾಷೆಯ 'ಆದಿಕವಿ'ಯೆಂದು ಮೊನ್ನೆ ತಾನೆ ಆಂಧ್ರರು ತಿಳಿದುಕೊಂಡಿರುತ್ತಾರೆ. ಇನ್ನು ಶ್ರೀಪತಿ ಪಂಡಿತ, ಮಲ್ಲಿ ಕಾರ್ಜುನ ಪಂಡಿತಾರಾಧ್ಯ" ಮೊದಲಾದ ಕೆಲವು ಆರಾಧ್ಯ ಕವಿಗಳೂ "ವಿಶ್ವೇಶ್ವರ ಶಿವದೇಶಿಕ, ಶಿವದೇವಯ್ಯ, ಪಿಡುಪರ್ತಿ ಬಸವ (ಸೋಮ ನಾಥ) ಕವಿ, ತ್ರಿಪುರಾಂತಕ, ಕುಮಾರಸ್ವಾಮಿ" ಮುಂತಾದ ಮಾಹೇಶ್ವರ ಕವಿಗಳೂ ಹಿಂದೆ ಆಗಿರುತ್ತಾರೆ. ಇತ್ತೀಚೆಗೆ "ಚಿತ್ತಾರು ಗಂಗಾಧರ ಕವಿ, ಚಿದಿರೆ ವೀರಕವಿ, ನಾಗಭೂಷಣ ಕವಿ" ಗಳೆಂಬುವರು ಸ್ವಲ್ಪ ಪ್ರಸಿದ್ಧಿಯನ್ನು ಹೊಂದಿದ್ದರು. ವರ್ತಮಾನ ಕಾಲದಲ್ಲಿ ಸಂಸ್ಕೃತ ಪಂಡಿತರೆಂದರೆ ವೇ॥ ನಂದಿಕೊಟುಕೂರಿ ನೀಲಕಂಠಶಾಸ್ತ್ರಿಗಳೋರ್ವರೇ! ಆದರಂತೆ ಲೇಖನೆ ಮತ್ತು ಕವಿತೆಯಲ್ಲಿ ಬಂಡಾರು ತಮ್ಮಯ್ಯ ಎಂಬುವರೂ, ಶಿವಕೀರ್ತನೆಯಲ್ಲಿ ಚದುವುಲ ಬಸವ ಶಂಕರಯ್ಯ ಎಂಬುವರೂ, ಜ್ಯೋತಿಷದಲ್ಲಿ ಕೋಸಿಗಿ ಶರಭಯ್ಯ ಸಿದ್ಧಾಂತಿಗಳೂ, ವೈದಿಕ ಪ್ರಕ್ರಿಯೆ ಗಳಲ್ಲಿ ಹೈದರಾಬಾದ್ ಮುಹಾಂತುಮಠದ ಚೆನ್ನಬಸವಯ್ಯನವರೂ, ಹೆಸರಾಗಿರುತ್ತಾರೆ. ಮತ್ತು ಒಬ್ಬಿಬ್ಬ ಚಿಕ್ಕಪುಟ್ಟ ಕವಿಗಳೂ ಪುರಾಣಿ ಕರೂ ಇರುತ್ತಾರೆ. ರಾಜಕೀಯ ವಿದ್ಯೆಯಲ್ಲಂತೂ ಬಹಳ ಹಿಂದುಳಿ ದಿರುತ್ತಾರೆ. ಬಿ ಎ ಡಿಗ್ರಿಗಳನ್ನು ಸಂಪಾದಿಸಿದವರು ನಾಲ್ಕಾರು ಮಂದಿ ಸಿಕ್ಕರೆ, ಮಹಾಘನವಾದ ವಿಷಯವಷ್ಟೆ! ಹೈದರಾಬಾದಿನ ಸುಪ್ರಸಿದ್ಧ ಪ್ರಮುಖರಾದ ಶ್ರೀಮಂತ ಬಾಪೂರಾವ ದೇಶಮುಖರ ಸುಪುತ್ರ ನಾಗ ಭೂಷಣರಾಯರೊಬ್ಬರು ಮಾತ್ರ "ಸೀಮೆ" ಯಿಂದ 'ಬ್ಯಾರಿಸ್ಟ' ರಾಗಿ ಬಂದಿರುತ್ತಾರೆ. ಇನ್ನು ಒಬ್ಬಿಬ್ಬ ವಕೀಲರು ಹೈದ್ರಾಬಾದಿನಲ್ಲೂ ನಾಲ್ಕಾರು ಜನ ಉಚ್ಚ ವಿದ್ಯಾವಂತರು ಪೂರ್ವಾಂಧ್ರರಲ್ಲೂ ದೊರೆಯುವರು. ವಿದ್ಯಾವಿಷಯದಲ್ಲಿದಕ್ಕೂ ಹೆಚ್ಚಿನ ಚರಿತ್ರೆಯೂಂಧ್ರ ವೀರಶೈವರಲ್ಲಿ ಲಭಿ ಸಿದರೆ ಮಹಾಪುಣ್ಯವೆಂದು ಭಾವಿಸಬೇಕು.

ಮಹಾತ್ಮರು:— ದೇಶಚರಿತ್ರೆಯಲ್ಲಿ ಮಹಾತ್ಮರಿಗೆ ಮೊದಲನೆಯ ಸ್ಥಾನವು ಕೊಡಬೇಕಾಗುವದು. ಮಾನವ ಜಾತಿಯ ಜಾಗೃತಿಗಾಗಿ ಪರಮೇಶ್ವರನ ಕೇವಲಾಂಶಗಳೇ ಭಿನ್ನ ಭಿನ್ನ ಪ್ರದೇಶಗಳಲ್ಲಿ ಅವತರಿಸಿ ಅನೇಕ ಪವಾಡಗಳಿಂದ ಮೆರೆದು ಹೋಗುವದು ಸಹಜವಾಗಿದೆ ಈ

ಸೌಭಾಗ್ಯವಾಂಧ್ರ ವೀರಶೈವರಿಗೂ ತಕ್ಕಮಟ್ಟಿಗೆ ಲಭಿಸಿರುವುದು. ವೀರಶೈವ ಮತದ ಪ್ರಥಮಾಚಾರ್ಯರೂ, ಮಹಾಮಹಿಮಾಶಾಲಿಗಳೂ, ಸುಪ್ರಸಿದ್ಧೋಪದೇಶಕರೂ ಆದ ಶ್ರೀ ಜಗದ್ಗುರು ರೇವಣಸಿದ್ಧೇಶ್ವರಾಚಾರ್ಯ ಭಗವತ್ಪಾದರು ಶುದ್ಧಾಂಧ್ರ ವೀರಶೈವರೇ ಆಗುವರು. ಹಾಗೆಯೇ ಶ್ರೀ ಪಂಡಿತಾರಾಧ್ಯ ಭಗವತ್ಪಾದರೂ * ಏಕೋರಾಮಾರಾಧ್ಯ ಜಗದ್ಗುರುಗಳೂ ಆಂಧ್ರವೀರಶೈವ ಸಮುದಾಯವನ್ನು ತಮ್ಮ ಜನ್ಮದಿಂದ ಪವಿತ್ರಗೊಳಿಸಿದವರೇ! ಇನ್ನು ಆಗಾಗ್ಗೆ ಸಿದ್ಧಶಂಭು ಸ್ವಾಮಿ, ಸಿದ್ಧೇಶ್ವರ ಸ್ವಾಮಿ, ಏಕತಾರೇಶ್ವರ, ವೀರನಾಗೇಂದ್ರ, ನೀಲಕಂಠಲಿಂಗ, ಗುರುಬಸವ ದೇಶಿಕ" ಮುಂತಾದ ತಪಸ್ವಿ ವಿಭೂತಿಗಳು ಉದಯವಾಗಿ ಹೋಗಿವೆ! ಇತ್ತೀಚೆಗೆ (೭೦ ವರ್ಷಗಳ ಹಿಂದೆ) ಶಂಷಾಬಾದಿನಲ್ಲಿ ಉದಯಿಸಿ ಅನಂತ ಲೀಲಾಮೂರ್ತಿಗಳೂ, ಶಾಪಾನುಗ್ರಹಶಕ್ತಿಸಂಪನ್ನರೂ, ಎನಿಸಿದ ಶ್ರೀ ವೈರಾಗ್ಯ ಚೆನ್ನಬಸವ ಮಹಾಸ್ವಾಮಿಗಳವ (ವಿರಕ್ತ) ರನ್ನು ಕೆಲವು ಕನ್ನಡ ದೇಶದ ವೀರಶೈವ ಬಂಧುಗಳೂ ತಿಳಿಯುತ್ತಾರೆ. ನಿಜಾಂ ಕನ್ನಡ ದೇಶದ ವೀರಶೈವರಲ್ಲಿ ಅಭೇದಾಧ್ಯವಸಾಯದಿಂದ ಬೆರತು ಹೋದ ಘನ (ಪೆದ್ದ) ಮಠದ ಶ್ರೀ ನಾಗಭೂಷಣಾರ್ಯರೂ ಆಂಧ್ರರೇ! ಈ ಮಹನೀಯ ಗೃಹಸ್ಥರ ತತ್ವಪದಗಳಿಂದ ಅಪರಿಚಿತರಾದ ನಿಜಾಂ ದೇಶದ ಕನ್ನಡ ವೀರಶೈವರಾರೂ ಇಲ್ಲವೆಂದು ಹೇಳಬಹುದು. ಮೊನ್ನೆ ಜರುಗಿದ ಪಂಳೀ ಪ್ರಕರಣದ ಉತ್ಪಾದಕರೂ, ಸದಾ ತಪೋನುಷ್ಠಾನ ನಿಷ್ಠರೂ, ಸರ್ವಭೂತದಯಾವಂತರೂ ಆದ ಶ್ರೀ ಶಿವಕೋಟಿ ವೀರಭದ್ರಾರ್ಯರು ಆಂಧ್ರ ವೀರಶೈವ ಭೂಷಣರೆಂದು ಗಣಿಸಲ್ಪಡುತ್ತಾರೆ. ಇವರು ಮಠ ಮಂದಿರಾದ್ಯನೇಕ ಶಾಶ್ವತ ಕಾರ್ಯಗಳನ್ನು ಮಾಡಿರುತ್ತಾರಲ್ಲದೆ ಅಲ್ಲಲ್ಲಿ ಶಿವಭಜನಾಸಂಘಗಳನ್ನು ಸ್ಥಾಪಿಸಿ ಸಂಸಾರೋಪಹತರಾದವರಿಗೆ ಸನ್ಮಾರ್ಗವನ್ನು ಪ್ರಸಾದಿಸಬೇಕೆಂದು ಭಾವನಾಮಯನಾದ ಈಶ್ವರನ ಸಾನ್ನಿಧ್ಯದಲ್ಲಿ ಮೊರೆಯಿಡುತ್ತಿರುವರು. ಇವರು ಚಿತ್ರಿಸಿದ ಶಿವಕೋಟಿ ಎಂಬ ಪವಿತ್ರ ಗ್ರಂಥವನ್ನು ನೋಡಿ ಪಾಶ್ಚಾತ್ಯರು *(Europeans)* ಸಹ ಹೊಗಳಿದರು.

---

* ತತ್ಪೀಠಾಧಿಪತಿಗಳಾ [ಈಗಿನ ಗುಂತಕಲ್ಲು ಮಠ] ದ ಶ್ರೀ ಜಗದ್ಗುರು ವೀರಭಿಕ್ಷಾವರ್ತಿ ಮಹಾಸ್ವಾಮಿಗಳಾದರೂ ಸುಪ್ರಸಿದ್ಧ ತಪಸ್ಸಂಪನ್ನರಾದ ಆಂಧ್ರರೇ.

**ಸಂಘ ಸಂಸ್ಕಾರಿಗಳು:—** ಕೈ. ವೀರಸಂಗಪ್ಪ, ವಾರದ ಮಲ್ಲಪ್ಪ, ಸಕ್ಕರೆ ಕರಿಬಸಪ್ಪನವರಂತಹ ವಿಭೂತಿಗಳು ಆಂಧ್ರ ವೀರಶೈವರಲ್ಲಾರೂ ಆಗಿಲ್ಲವು. ಏನೋ ನಾಲ್ಕೆಂಟು ಊರುಗಳಲ್ಲಿ ಬೇಕಾಗಿ ಹೌದೆನಿಸಿ ಕೊಂಡವರೇ ನಾಯಕರೆಂತಲೂ, ಸಂಘ ಸಂಸ್ಕಾರಿಗಳೆಂತಲೂ ಹೇಳ ಬೇಕು. ಗುಂಟೂರು ನೆಲ್ಲೂರು ಜಿಲ್ಹೆಗಳಲ್ಲಿ "ಕೊಂ॥ ನಾಗಭೂಷಣ ಮುಗಾರು (ಮಾಕೇಶ್ವರರು) ಗಂ॥ ಸುಬ್ರಹ್ಮಣ್ಯ ಮುಗಾರು (ಸ್ಥಳ ಪತಿಜಂ,)" ಎಂಬವರು ನಾಲ್ಕೆಂಟು ಪುಸ್ತಕಗಳನ್ನು ಬರೆದು ಪುರಾಣಾ ದಿಗಳನ್ನು ಹೇಳುತ್ತ ತಮ್ಮ ಪ್ರಾಂತದ ಜನರಲ್ಲಿ ಸ್ವಲ್ಪ ಕ್ರಾಂತಿಯನ್ನೆ ಬ್ಬಿಸಿದರೂ ತಮಗಾವಿಷಯದಲ್ಲಿ ತಕ್ಕಷ್ಟು ಪಾಂಡಿತ್ಯವಿಲ್ಲದಿರುವದ ರಿಂದ ಸಂಚಲನವೆಲ್ಲ ನಿಷ್ಫಲವಾಗಿ ಪರಮತೀಯರ ಪರಿಹಾಸಕ್ಕೆ ಗುರಿ ಯಾಯಿತು. ಹೈದರಾಬಾದಿನ. ಗುದೆಪೆಲ್ಲೆ ಸಿದ್ಧರಾಮಪ್ಪನವರೂ, ಅನ ಕಾನಪಲ್ಲಿ (ವಿಶಾಖಪಟ್ಟಣ ಜಿಲ್ಲೆ) ಯ ಶ್ರೀ ಪಟ್ಟದ ಸ್ವಾಮಿಗಳೂ, ಸ್ವಲ್ಪ ಮಟ್ಟಿಗೆ ಮತಸೇವೆಯನ್ನು ಮಾಡಿದ ಧನ್ಯರಷ್ಟೆ! ನೆನ್ನೆ ಮೊನ್ನೆ ಪೂರ್ವಾಂ ಧ್ರದಲ್ಲಿ ಸ್ವಲ್ಪ ಚಳವಳಿಯು ಉತ್ಪನ್ನವಾಗಿ ಅದರಿಂದ ಒಬ್ಬಿಬ್ಬ ನಾಯ ಕರು ಮುಂದೆ ಬಂದಿರುತ್ತಾರೆ. ಹೈದರಾಬಾದಿನ ಹೈಕೋರ್ಟಿನ ವಕೀಲ ಶ್ರೀಮಂತ ಬಾಪೂರಾವ ದೇಶಮುಖರವರು ತಮಗೆ ಉದ್ಯೋಗ ದೊರೆತ ಕಾಲದಿಂದ ಹಿಡಿದು ಇಲ್ಲಿಯ ವರೆಗೆ ಅನೇಕ ಬಡ ವೀರಶೈವ ವಿದ್ಯಾರ್ಥಿ ಗಳಿಗೆ ಅನ್ನ ವಸ್ತ್ರಾದಿಗಳನ್ನು ಕೊಟ್ಟು ಪ್ರತಿವರ್ಷ ನಾಲ್ಕಾರು ಜನ ರನ್ನು ಪ್ರಾಥಮಿಕ ಶಿಕ್ಷಣ *(Matriculation)* ಯಲ್ಲಿ ತೇರ್ಗಡೆ ಹೊಂದಿ ಸುತ್ತ ಬಂದಿದ್ದಾರೆ. ಒಬ್ಬಿಬ್ಬರು ಬಿ. ಎ. ಮತ್ತು 'ವಕಾಲತ್' ಅಧಿಕಾ ರಗಳನ್ನೂ ಇವರ ಸಂಪೂರ್ಣ ಸಹಾಯದಿಂದಲೇ ಸಂಪಾದಿಸಿದರು. ಪರಂತು ಆ ವಿದ್ಯಾರ್ಥಿಗಳೆಲ್ಲರೂ ಮಹಾರಾಷ್ಟ್ರ ಅಥವಾ ಕನ್ನಡ ದೇಶದ ವೀರಶೈವರಾಗಿರುತ್ತಾರೆ. ಶ್ರೀ ಬಾಪೂರಾಯರು ಪ್ರತಿ ವರ್ಷದಲ್ಲಿ ನಾಲ್ಕಾರು ಮೃಷ್ಟಾನ್ನ ಭೋಜನಗಳಿಂದ ಆಂಧ್ರ ವೀರಶೈವರನ್ನು ಸಂತೋ ಷಗೊಳಿಸುತ್ತಾರಲ್ಲದೆ, 'ದೇಹಿ' ಎಂಬವರಿಗೆ 'ನಹಿ' ಎನ್ನದಂತೆ ಯಥಾ ಶಕ್ತಿಯಾಗಿ ದಾನವನ್ನು ಮಾಡುತ್ತ, ತಮಗಿರುವ ಸಹಜೌದಾರ್ಯ ದಿಂದ ಪ್ರಸಿದ್ಧರಾಗಿರುತ್ತಾರೆ. ಆದರೆ ಯಾವ ಉಪಕಾರವು ಶ್ರೀ ಬಾಪೂ ರಾಯರಿಂದ ಆಗುವದೆಂದು ಆಂಧ್ರ ವೀರಶೈವರು ನಿರೀಕ್ಷಿಸುತ್ತಿರುವರೋ! ಅದು ಇನ್ನೂ ಉಪಕ್ರಮಿಸಲ್ಪಟ್ಟಿಲ್ಲವು. ಆದರೆ ಅದರ ಸುಲಕ್ಷಣಗಳು

ಮಾತ್ರ ಬಹುಕಾಲದಿಂದ ಸೂಚಿತಗಳಾಗುತ್ತಲೇ ಬಂದಿವೆ. ಪರಳೀ ಪ್ರಕರಣದಿಂದ ವೀರಶೈವ ಸಮಾಜದಲ್ಲಿ ಚನ್ನಾಗಿ ಪರಿಚಿತರಾದ ಇವರ ವಿಷಯವನ್ನು ನಾನು ಬರೆಯಲವಶ್ಯವಿಲ್ಲ. ಆಂಧ್ರ ವೀರಶೈವರಲ್ಲಿ ಯಾವ ತರಹದ ಮುಂದಾಳುಗಳಿರುವರೋ ಇದರಿಂದ ನಿವೇದಿಸಲ್ಪಟ್ಟಂತೆಯೇ!

ಮಠಗಳುಃ— ಮಠಗಳ ಪದ್ಧತಿಯಿಂದ ವೀರಶೈವ ಸಮಾಜದಲ್ಲಿ ನೂತನ ಚೈತನ್ಯವನ್ನುಂಟು ಮಾಡುವ ಉದ್ದೇಶವೇ ನಮ್ಮ ಪೂರ್ವಜರಿಗಿದ್ದಿತು. ಆಗ ಪ್ರಭಾವ ಶಾಲಿಗಳೇ ಮಠಾಧಿಕಾರಿಗಳಾಗುತ್ತಿದ್ದರು. ಅದರಿಂದ ಧರ್ಮಾನುಷ್ಠಾನವೂ ಸಾಮಾಜಿಕ ಸಂಘಟನೆಯೂ ರಕ್ಷಣವಾಗುತ್ತಿತ್ತೆಂದು ಹೇಳಬಹುದು. ಆ ವಿಧವಾದ ಮಠಗಳು ಆಂಧ್ರ ವೀರಶೈವರಲ್ಲಿಯೂ ಕೆಲವಿವೆ. ತಪಸ್ಸಿನ ವಿಷಯದಲ್ಲಿ "ಕೊತ್ತಘಡಿ, ಅಮುನಗಲ್ಲು, ಕಲ್ಲೂರು, ಕೊಡವಟಿಕಲ್ಲು, ಕೊಮರವಲ್ಲಿ, ಅನಕಾನಪಲ್ಲಿ." ಮಠಾಧಿಪತಿಗಳೂ ಪಾಂಡಿತ್ಯ ವಿಷಯದಲ್ಲಿ "ಚಿದಿರೆ, ರೇಪಾಕ, ವೇನವೇಲ್ಲ, ಚಿತ್ತಾರು, ಭಂಗಿನಿ, ಉಪ್ಪಲ" ಮಠಾಧೀಶ್ವರರೂ ಧನವಂತಿಗೆಯಲ್ಲಿ "ಕಂಚನಪಲ್ಲಿ, ನಡಿಪೂಡಿ, ಮಹಂತ, ಏಲೂರು, ಪರವಾರಾಧ್ಯುಲ, ಓರುಗಂಟಿ" ಮಠದವರೂ ಅಧಿಕಾರದಲ್ಲಿ "ಶ್ರೀಶೈಲ, ಶಂಷಾಬಾದ್, ಕೊಲನುಪಾಕ, ನಿಡುಮಾಮಿಡಿ, ಪಾಟಿಮಟ್ಲ, ಅಪುಸಗಂಟಿ" ಮುಂತಾದ ಮಠದವರೂ ಪ್ರಸಿದ್ಧರಾಗಿದ್ದಾರೆ. ಮಠಿಕರ ದುರ್ದೈವದಿಂದ ಇತ್ತೀಚೆಗೆ ಈ ವಿಷಯಗಳೆಲ್ಲ ಶಿಥಿಲವಾಗಿವೆ. ಆದರೂ ತಮ್ಮ ಪ್ರಾಚೀನ ಪ್ರತಿಷ್ಠಾದ್ಯೋತಕಗಳಾದ ಕೆಲವು ಉದಾಹರಣೆಗಳು ಪರಿಶೋಧಕರಿಗೆ ಲಭಿಸುವವು. ಕನ್ನಡ ದೇಶದಲ್ಲಿ 'ಹಿರೆಯಮಠ'ವೆಂಬ ಹೆಸರು ಬಹಳ ಪ್ರಚಾರವಾಗಿದೆ. ಆಂಧ್ರ ವೀರಶೈವರಲ್ಲೀ ಹೆಸರಿನ ಸುಳುವೇ ಇಲ್ಲ. ಅಷ್ಟೇಯಲ್ಲ. ಪಟ್ಟಚರಾಧಿಕಾರವುಳ್ಳ ಮಠಗಳಿಗೂ 'ಹಿರಿಯಮಠ'ವೆಂಬ ಬಿರುದು ಬಿದ್ದಿಲ್ಲವು. ಒಂದು ಕೊಲನು (ಕೊಲ್ಲಿ) ಪಾಕೆಯ ಮಠದವರಿಗೆ ಮಾತ್ರ ಈ ನಾಮುವಂಕಿತವಾಗಿರುತ್ತದೆ. ಹೈದರಾಬಾದಿನ (ಅತ್ರಾಫ್ ಬಲ್ದಾ) ಜಿಲ್ಲೆಯನ್ನು ದಾಟಿದರಾಯಿತು. ವಿರಕ್ತ ಮಠಗಳ ಸುದ್ದಿಯೇ ಇಲ್ಲ. 'ವಿರಕ್ತ' ಅಂದರೆ ಆಂಧ್ರ ವೀರಶೈವರಿಗೆ ಬಹುಶಃ ಪರಿಚಯವೇಯಿಲ್ಲ. ಕೆಲವು ಪಟ್ಟಚರಾಧಿಕಾರಿ ಮೊದಲಾದ ವಿಶಿಷ್ಟ ವರ್ಗಕ್ಕೆ ಮಾತ್ರ 'ಷಟ್‌ಸ್ಥಲ'ಗಳೆಂಬುದು ಮಾತ್ರ ಗೊತ್ತುಂಟು. ಆಯಿದ್ದ ವಿರಕ್ತರಲ್ಲಿಯೂ ಕೆಲವು ವಿಶೇಷಗಳಿವೆ. ಇವರಿಗೆ ಗೃಹಸ್ಥರಾದ ಶಿಷ್ಯರುಂಟು.

ಇವರು ತಮ್ಮ ಮಠದ ಹೆಸರನ್ನೇ ಶಿಷ್ಯರಿಗೆ ಉಪಯೋಗಿಸಿಕೊಳ್ಳುವ ದಕ್ಕಾಗಿ ಅವಕಾಶ ಕೊಟ್ಟಿರುವದರಿಂದ ಅವು ಹಾಗೆಯೇ ಉಳಿದಿವೆ. ಅಂದರೆ "ವೈರಾಗ್ಯ, ಕೆಂಪಿನಿ, ಚೀಲಾಳ" ಮುಂತಾದ ವಿರಕ್ತ ಶಾಖಾ ದ್ಯೋತಕಗಳಾದ ಶಬ್ದಗಳನ್ನು ತಮ್ಮ ಮಠದ ಉಪನಾಮಗಳನ್ನಾಗಿ ಸ್ವೀಕರಿಸಿದ ಜಂಗಮ (ಗೃಹಸ್ಥ) ರಿರುತ್ತಾರೆ. ಇವರಿಗೂ ಗುರುವರ್ಗ ಪರಂಪರಾಗತ ಮಠಾಧಿಕಾರಿಗಳಿಗೂ ಸಮಾನವಾಗಿ ಬಂಧುಬಾಂಧವ್ಯ ಹಕ್ಕುಗಳಿವೆ. ಈ ಭೇದವನ್ನು (?) ಇವರು ಎಣಿಸಿಯೂ ಇಲ್ಲ.

ಮಠಗಳ ವಿಷಯದಲ್ಲಿ ಕೊಲನುಪಾಕೆಯು ವಿಶೇಷ ಸ್ಥಾನವನ್ನಾ ಕ್ರಮಿಸುತ್ತದೆ. ಅಷ್ಟಾದಶವರ್ಣದವರಿಗೋಸ್ಕರ ಹದಿನೆಂಟು ಮಠಗ ಳನ್ನು ಅಲ್ಲಿ ಪೂರ್ವಾಚಾರ್ಯರು ಸ್ಥಾಪಿಸಿರುತ್ತಾರೆ. ಅಂದರೆ ಕೋಮಟಿ, ರೆಡ್ಡಿ (ಕಾಪು), ಕುರುಬ, ಸಿಂಪಿಗ, ಪದ್ಮಶಾಲಿ, ಅಗಸ, ಕುಂಬಾರ. ಮೊದಲಾದ ಎಲ್ಲಾ ಜಾತಿಯವರಿಗೋಸ್ಕರ, ಗುರುಸ್ಥಾನಗಳೆಂದು ಆಯಾ ಮಠಗಳು ಈಗಲೂ ಪ್ರಸಿದ್ಧಿಯಲ್ಲಿವೆ. ಅನೇಕ ವರ್ಣದ ಗೃಹಸ್ಥರೀ ಮಠಾಧಿಕಾರಿಗಳನ್ನು ಗುರುಗಳನ್ನಾಗಿ ಭಾವಿಸಿ ಆಗಾಗ್ಗೆ ಕಾಣಿಕೆಗಳನ್ನು ಸಮರ್ಪಿಸುವದುಂಟು. ಆ ವಿದ್ಯಾವಂತರಾದ ಕೊಲನುಪಾಕೆಯ ಮಠಾ ಧೀಶ್ವರರು ಇತ್ತೀಚೆಗೆ ತಮ್ಮ ಪ್ರಾಚೀನದ ಎಲ್ಲಾ ರಿಕಾರ್ಡುಗಳನ್ನು ಕಳೆದುಕೊಂಡಿರುತ್ತಾರೆ. ಕಡೆಗೆ ಶ್ರೀ ಸೋಮೇಶ್ವರ ಲಿಂಗಮೂರ್ತಿಯ ಅರ್ಚಕತ್ವವೂ ಇವರ ಹಸ್ತದಿಂದ ಜಾರಿಬಿಟ್ಟಿದೆ ಆದರೂ ಅಷ್ಟಾದಶ ಮಠಾಧಿಕಾರಿತ್ವವು ಕೇವಲ ವೀರಶೈವ (ಮಾಹೇಶ್ವರ)ರಿಗೇನೇ ಸೇರಿರು ವದರಿಂದ ನಮ್ಮ ಸಮಾಜಕ್ಕೆ ಗೌರವಾಸ್ಪದವೇ ಸರಿ. ಚನ್ನಾಗಿ ಪರಿಶೀ ಲಿಸಿದರೆ ಚರಿತ್ರೆಗೆ ತಕ್ಕ ಪ್ರಮಾಣಗಳು ದೊರೆಯಬಹುದು. ಕೊಲನು ಪಾಕೆಯಲ್ಲಿರುವ ಸಮಸ್ತ ಮಾಹೇಶ್ವರರೂ ಪರಸ್ಪರವಾಗಿ ಬಂಧುಬಾಂಧ ವ್ಯವುಳ್ಳವರಾಗಿರುತ್ತಾರೆ.

**ಕೊಲನುಪಾಕೆ:—** ಈ ಪವಿತ್ರ ಪಟ್ಟಣದ ವಿಶೇಷಗಳನ್ನು ಶಿವಾನು ಭವದ ವಾಠಕರು ಹಿಂದಿನ ವರ್ಷದಲ್ಲಿ ಓದಿದವರಾಗಿರುತ್ತಾರೆ ಆದು ದರಿಂದ ಅವರನ್ನು ಬೇಸರಗೊಳಿಸದ ಒಂದೆರಡು ನೂತನಾಂಶಗಳನ್ನು ಮಾತ್ರ ಬರೆಯುತ್ತೇನೆ. ಹೈದರಾಬಾದಿನ ಸಂಸ್ಥಾನಕ್ಕೆ ಸೇರಿದ ನಲ್ಲ ಗೊಂಡ ಜಿಲ್ಲೆಯ ಆಲೇರು ಸ್ಟೇಷನಿಗೆ ಎರಡು ಮೈಲು ದೂರದಲ್ಲಿ ಈ ಕೊಲನುಪಾಕೆಯಿರುವುದು. ಇದನ್ನು, "ಕೊಲನುಪಾಕ, ಕುಲಪಾಕ,

ಕುಲ್ಯಪಾಕ, ಸರೋವರಕುಟೀ, ಸೋಮಶೇಖರಪುರ, ಕುದುಟಿಪುರಿ, ಬಿಂಬಾವತಿಪುರಿ," ಎಂಬ ಅನಂತನಾಮಗಳಿಂದ ಶಾಸನಕಾರರೂ ಆಂಧ್ರ ಕವಿಗಳೂ ವ್ಯವಹರಿಸುತ್ತಾರೆ. ಸ ಧಾರಿಸಿದವರಲ್ಲಿ 'ಕೊಲನುಪಾಕ' ಎಂತಲೂ ಪಾಮರ ಜನರಲ್ಲಿ 'ಕೊಲಿಪಾಕ' ಎಂತಲೂ ಈಗ ಮುಖ್ಯ ವಾಗಿ ರೂಢಿಯಿದೆ. ಆದರೆ ಕನ್ನಡ ರೇವಣಸಿದ್ಧಪುರಾಣ ಕರ್ತೃವಾದ ಬೊಮ್ಮರಸ ಕವಿಯೂ, ಸಂಸ್ಕೃತ ಸಿದ್ಧಾಂತ ಶಿಖಾಮಣಿ ಗ್ರಂಥಕರ್ತನೂ, ರೇಣುಕ ವಿಜಯದ ಸಿದ್ಧನಾಥ ಶಿವಾಚಾರ್ಯನೂ ಈ ಊರನ್ನು ಕೊಲ್ಲಿ ಪಾಕೆಯೆಂದು ಪ್ರಯೋಗಿಸಿದರು. ಅದು ಕಾರಣ ಕನ್ನಡ ದೇಶದ ವೀರ ಶೈವರೆಲ್ಲರೂ ಅವಾಚ್ಯವಾದ ಕೊಲ್ಲಿಪಾಕೆ ಶಬ್ದವನ್ನು ರೂಢಿಯಲ್ಲಿ ತಂದುಬಿಟ್ಟರು. ಅವಾಚ್ಯವೇತಕ್ಕೆಂದರೆ 'ಕೊಲ್ಲಿ' ಎಂಬುವದನ್ನು ಆಂಧ್ರ ದೇಶದ ಆ ಪ್ರಾಂತ ಜನರು 'ಯೋನಿ' ಎಂಬರ್ಥದಲ್ಲಿ ಮೊದ ಲಿನಿಂದಲೂ ಉಪಯೋಗಿಸುತ್ತಾರೆ. ಈ ಯರ್ಥವನ್ನರಿಯದ ಕನ್ನಡಿಗರು ದುರ್ವಾಚ್ಯವನ್ನು ಛಂದಸ್ಸಿಗಾಗಿಯೋ ಏನೋ ಪ್ರಯೋಗಿಸಿಕೊಂಡರು. ಯಥಾರ್ಥದಲ್ಲಿ 'ಕೊಲನು' ಎಂದರೆ ಕೊಳ (ಸರೋವರ)ವೆಂತಲೂ 'ಪಾಕ' ಎಂದರೆ ಗೋಡೆ ಮೇಲಿನಿಂದ ಇಳಿಜಾರಾಗಿ ಹಾಕಿದ ಕಪ್ಪು ಉಳ್ಳ ಹಂದರ ಅಥವಾ ಚಿಕ್ಕ ಗುಡಿಸಲು ಎಂತಲೂ ಆಂಧ್ರ ಭಾಷೆಯೊಳು ಪ್ರಸಿದ್ಧಾರ್ಥಗಳಿವೆ. ಆದುದರಿಂದ 'ಸರೋವರ ಕುಟೀರ' ಮುಂತಾದ ಪರಿವರ್ತನ ನಾಮಗಳನ್ನು ಆಂಧ್ರ ಕವಿಗಳು ಪ್ರಯೋಗಿಸಿದರಷ್ಟೇ. ಈ ಊರಲ್ಲಿ ನೂರಾರು ಶಾಸನಗಳಿವೆಯೆಂದು ಪ್ರತೀತಿ. ನಾಲ್ವತ್ತು ಶಾಸ ನಗಳಿಗೆ ಮಾತ್ರ ಹೈದರಾಬಾದಿನ "*Archailogical Department*" ಸಂಘದವರು ಪ್ರತಿಬಿಂಬಗಳನ್ನು ತೆಗೆದುಕೊಂಡು ಹೋಗಿರುತ್ತಾರೆ. ಅವುಗಳಲ್ಲಿ ನಾಲ್ಕೆಂಟು ಶಾಸನಗಳು ಮಾತ್ರ ಪ್ರಕಟಿಸಲ್ಪಟ್ಟಿದ್ದು ಮೂರು ಶಿಲಾಲೇಖ ಪ್ರತಿಗಳನ್ನು ನಾನು ಕಂಡಿರುವೆನು. ವೀರಶೈವರಿಗಾವಶ್ಯ ಕಗಳಾದ ಯಾವ ವಿಷಯಗಳೂ ಈ ಲೇಖಗಳಲ್ಲಿ ಸೂಚಿತಗಳಾಗಿಲ್ಲವು. ಉಳಿದ ಶಾಸನಗಳ ಪೈಕಿ ಒಂದರಲ್ಲಾದರೂ ವೀರಶೈವರ ವಿಷಯವಾಗಿ ಒಂದೆರಡು ಆಧಾರಗಳು ದೊರೆಯಬಹುದು. ಆದರೇನಾಯಿತು "ಪರಿ ಶೋಧಕರಿಗೆ ಪರಿಕರಗಳಿಲ್ಲ. ದುಡ್ಡಿದ್ದವರಿಗೆ ಬುದ್ಧಿ ಇಲ್ಲ" ವೆಂಬ ಗಾದೆಯು ವೀರಶೈವರಲ್ಲಿ ಸ್ಥಾಯಿಯಾಗಿರುವ ಮೂಲಕ ಅಪಾತ್ರವ್ಯಯವೆಷ್ಟಾದರೂ ಕೇಳುವವರಿಲ್ಲ. ಒಟ್ಟಿನಮೇಲೆ ಕೊಲನುಪಾಕೆಯು ದಕ್ಷಿಣ ಕಾಶಿಯೆಂಬ

ಪವಿತ್ರ ಬಿರುದುಳ್ಳದ್ದಾಗಿರುವದಲ್ಲದೆ ಸುಪ್ರಸಿದ್ಧರಾದ ಚಾಳುಕ್ಯ ಕಾಕತೀಯರಾಜರಿಗೆ ರಾಜಧಾನಿಯಾಗಿದ್ದು ಚರಿತ್ರ ಬುಭುಕ್ಷುಗಳಿಗೆ ಯಥೇಚ್ಛವಾಗಿ ಅನ್ನ ದೊರೆಯುವ ದರ್ಶನೀಯಸ್ಥಾನವೆಂಬುದರಲ್ಲಿ ಸಂಶಯವಿಲ್ಲ.

**ವಿಶೇಷಗಳು:—** ಆಂಧ್ರವೀರಶೈವರ ವಿವಿಧ ಬೇಧಗಳನ್ನೂ, ಕೆಲವು ಆವಶ್ಯಕ ವಿಷಯಗಳನ್ನೂ, ಸಂದರ್ಭಾನುಸಾರವಾಗಿ ಸ್ಮರಣವಿದ್ದ ಮಟ್ಟಿಗೆ ಲಿಖಿಸಿರುವೆನು. ಆದರಂತೆ ಅವರ ವಿಶಿಷ್ಟ ವಿಷಯಜ್ಞಾನವೂ, ಪಾಠಕರಿಗಾಗಲೆಂದು ಇದೊಂದು ಶೀರ್ಷಿಕೆಯಿಂದ ಬೇರೆ ಬರೆಯುವದಾಯಿತು. ಪಂಚಸೂತಕ (ಜನನ ಮರಣಾದಿ ದೋಷ) ಗಳನ್ನು ಬಹುಶಃ ಆಂಧ್ರವೀರಶೈವರೆಲ್ಲರೂ ಮನ್ನಿಸುತ್ತಾರೆ. ಅನ್ಯ ಧರ್ಮದವರಂತೆ ಆಯಾ ಕರ್ಮಗಳಿಗನುಕೂಲವಾದಷ್ಟು ದಿವಸಗಳು ಹೊರಗೆಯಿದ್ದು ಶುದ್ಧರಾದ ಬಳಿಕ ಪುನಃ ಗೃಹಪ್ರವೇಶ ಮಾಡುವರು. ಚಂಡಿಕೆಯು (ಶಿಖೆ ಅಥವಾ ಜುಟ್ಟು) ಪೂರ್ವೋತ್ತರಾಂಧ್ರರಲ್ಲಿ ಹೆಚ್ಚು. ಅತಿ ಶುದ್ಧಾಚಾರದಲ್ಲಿಯೂ, ಉತ್ತರಾಂಧ್ರ ವೀರಶೈವರೇ ಶ್ರೇಷ್ಠರೆನಿಸುವರು. ಇನ್ನೊಂದು ಸಂತೋಷ ವಾರ್ತೆಯೇನಂದರೆ ಆಂಧ್ರವೀರಶೈವರು ಕನ್ನಡ ಭಾಷೆಯನ್ನು ಬಹಳವಾಗಿ ಪ್ರೀತಿಸುತ್ತಾರೆ. ಮುಖ್ಯ ಜನರಿಗೆ ಕನ್ನಡ ಭಾಷೆಯ ಒಂದು ಪದ (ಹಾಡು) ವಾಗಲಿ ವಿಶೇಷ ಪ್ರಸಂಗದ್ಯೋತಕಗಳಾದ ನಾಲ್ಕಾರು ಮಾತುಗಳಾಗಲಿ ಕಂಠಸ್ಥವಾಗಿ ತಪ್ಪದೆಯಿರುತ್ತವೆ. ಅಭಿಮಾನಿಗಳಾದವರು ನಾಲ್ಕಾರು ವರ್ಷ ಪರಿಶ್ರಮೆಯಿಂದಲೇ ಇವರಲ್ಲಿ ಕನ್ನಡಭಾಷಾ ಪ್ರಚಾರವನ್ನು ಮಾಡಬಹುದು.

ವಿವಾಹ ಸಮಯದಲ್ಲಿ ಉಭಯ ಪಕ್ಷದವರು ಪರಸ್ಪರವಾಗಿ ಲಗ್ನಪತ್ರಿಕೆಯನ್ನು ಕಳುಹಿಸಿಕೊಳ್ಳುವಾಗ (ಒಂದು ಪ್ರಾಂತದ ವೀರಶೈವರು) ಆ ಪತ್ರಿಕೆಯಲ್ಲಿ ಶ್ರೀಮತ್ಕಲ್ಯಾಣ ಬಸವೇಶ್ವರಾಂಶಸಂಭೂತರಾದ "ಇಂಥವರಿಗೆ ಇಂಥವರ ಕನ್ಯೆಯನ್ನು ಕೊಟ್ಟು" ಮುಂತಾಗಿ ಬರೆದುಕೊಳ್ಳುವ ಸಾಂಪ್ರದಾಯ ಉಂಟು. ಹೀಗೇಕೆಯೆಂದು ಕೇಳಿದರೆ ನಮ್ಮ ಮತಸ್ಥಾಪಕನು ಶ್ರೀ ಬಸವೇಶ್ವರನೇ ಎಂದು ಹೇಳುತ್ತಾರೆ. ಇದರಿಂದ ಆಂಧ್ರವೀರಶೈವರಲ್ಲಿ ಎಂತಹ ದುರಭಿಪ್ರಾಯವು ಹಬ್ಬಿದೆಯೋ ತಿಳಿಯಲವಕಾಶವಾಗುವದು.

ವಿಧವಾ ವಿವಾಹವು (ಉಡುಕಿ) ಹತ್ತೆಂಟು ವರ್ಷಗಳ ಹಿಂದೆ ಕನ್ನಡ ವೀರಶೈವರ ಸಂಬಂಧದಿಂದಲೇ ನಡೆಯಲು ಪ್ರಾರಂಭವಾಗಿ

*(Encyclopaedia)* ಗಳಲ್ಲಿಯೂ ಇತರ ಪತ್ರಿಕೆಗಳಲ್ಲಿಯೂ ವೀರಶೈವರನ್ನು ನಿಂದಿಸಿ ಪರಮತೀಯರು ಕೋಲಾಹಲವನ್ನೆಬ್ಬಿಸುತ್ತಿರುವದನ್ನು ಕಣ್ಣಾರೆ ನೋಡಿದ ನಿಮ್ಮ ಸಂಸ್ಕೃತ ಪಂಡಿತರು ವೀರಶೈವ ಮತದ ಯಾವ ಪ್ರಾಚೀನ ಮತ್ತು ಶಾಸ್ತ್ರೀಯ ಪ್ರಮಾಣಗಳನ್ನು ಅನ್ವೇಷಣ ಮಾಡಿದರು? ಸಂಸ್ಕೃತ ವಿದ್ಯಾರ್ಥಿಗಳಿಗೆ ಫಂಡಿನಿಂದ ಸಹಾಯವನ್ನು ಮಾಡಬಾರದೆಂದು ವ್ಯರ್ಥವಾಗಿ ಕಾರಿಕೊಳ್ಳುತ್ತಿರುವ ಕೆಲವು ಪ್ರಮುಖರು ಇಂಗ್ಲೀಷು ಕಲಿಯುವವರಿಗೆ ತನುಮನಧನಗಳಿಂದ ಸಹಾಯವನ್ನೈದು ವೀರಶೈವ ಮತದ ಯಾವ ಇತಿಹಾಸವನ್ನು ತಯಾರುಗೊಳಿಸಿದರು? ನಿಷ್ಪಕ್ಷಪಾತದಿಂದ ವಿಚಾರಿಸುವವರಿಗೆ ಇವೆಲ್ಲ ಪರಿಚಯವಾಗದಿರದು. ಈ ನಿಷ್ಠುರ ವಾದವನ್ನು ನೀವು ಖಂಡಿಸಿದರೂ ಅಡ್ಡಿಯಿಲ್ಲ. ಸತ್ಯವನ್ನು ಗ್ರಹಿಸಿಯೇ ತೀರುವಿರೆಂದು ನನಗೆ ವಿಶ್ವಾಸವುಂಟು. ಎಲ್ಲಾ ತರದ ಪ್ರತಿಭೆಯುಳ್ಳ ಮಹನೀಯರು ವೀರಶೈವರಲ್ಲಿದ್ದು ಇದುವರೆಗೂ ಕಟ್ಟಿದಿಟ್ಟವಾದ ಸ್ವಮತದ ಇತಿಹಾಸವು ಸಿದ್ಧವಾಗಿಲ್ಲವೆಂದರೆ ಏನು ಹೇಳಬೇಕು? ನಿಶ್ಚಯವಾಗಿದೊಂದು ಮಹಾಕಲಂಕವೆಂದರೂ ಸತ್ಯದೂರವಲ್ಲ. ಬೇರೊಂದು ಕಡೆ ಕಲಹಪ್ರಿಯರು ಕೆಲವರು ಕೂಡಿ ಪರಸ್ಪರವಾಗಿ ಗುರುವಿರಕ್ತರನ್ನು ನಿಂದೆಗೆ ಗುರಿ ಮಾಡುತ್ತಿರುವರಲ್ಲದೆ, ತಮ್ಮ ಭ್ರಮಿಷ್ಟತೆಯನ್ನು ಅನ್ಯಾಯವಾಗಿ ಹೆರರ ಮುಂದೆ ಬಿಚ್ಚಿತೋರಿಸಿಕೊಳ್ಳುತ್ತಿರುವರು. ಇಂತಹ ಸಮಯದಲ್ಲಿ ಪ್ರಮುಖರು ಮುಂದಕ್ಕೆ ಬಂದು ಸತ್ಯ ನಿರ್ಣಯವನ್ನು ಮಾಡಬೇಕಾಗಿಲ್ಲವೇನು? ಹೀಗೆಯೇ ಎಷ್ಟು ವರ್ಷಗಳ ವರೆಗೆ ಕಲಹಾಗ್ನಿಯು ಪ್ರಜ್ವಲಿಸುತ್ತಿರಬೇಕು? ಸ್ವಮತಕ್ಕೆ ಮಹದುಪಕಾರವನ್ನು ಮಾಡುವದೆಂದು ಭಾವಿಸಿ ವೀರಶೈವರು 'ಮಹಾಸಭೆ'ಯೊಂದನ್ನು ಸ್ಥಾಪಿಸಿಕೊಂಡಿರುತ್ತಾರೆ. ಆದರಿಂದ ಮೊದಲಿನ ನಾಲ್ಕಾರು ಸಭೆಗಳಲ್ಲಿ ಮಾತ್ರ ಸ್ವಲ್ಪ ಹುರುಪು ಹುಟ್ಟಿತೆಂದು ಹೇಳಬಹುದು. ಆದರೆ ಇತ್ತೀಚೆಗೆ ವ್ಯರ್ಥವಾದ ಒಂದು ಕಾರಣದಿಂದ ಮತ ವಿಷಯಕವಾದ ಪ್ರಶ್ನೆಯು ಸಂಪೂರ್ಣವಾಗಿ 'ವೀರಶೈವ ಮಹಾಸಭೆ'ಯಿಂದ ಎದ್ದು ಹೋಯಿತು! ಮತವಿಷಯಕವಾದ ಧಾರ್ಮಿಕ ಚರ್ಚೆಯಿಲ್ಲದ ಸಭೆಗೆ "ವೀರಶೈವ ಮಹಾಸಭೆ"ಯೆಂಬುದು ಹೇಗೆ ಸಮಂಜಸವು? ಸ್ವಜನರೆಲ್ಲರೂ ಒತ್ತಟ್ಟಿಗೆ ಕೂಡಿ ಸುಮ್ಮನೇ ದುಡ್ಡನ್ನು ವೆಚ್ಚಪಡಿಸುವದಕ್ಕಿಂತಲೂ ಯಾವ "ಬ್ರಾಹ್ಮಣೇತರ ಸಭೆ"ಯಲ್ಲೋ

ನಿಮ್ಮ ಸಮ್ಮೇಲನವನ್ನು ನೆರವೇರಿಸಿಕೊಳ್ಳಬಹುದಲ್ಲವೇ? ಇನ್ನುಳಿದಿರುವದು ಸಾಮಾಜಿಕ ಪ್ರತಿಭೆ! ಒಟ್ಟಿನಮೇಲೆ ವೀರಶೈವರಿಗೆ ಅಸತ್ಯದಲ್ಲಿ ಅಂಧ ವಿಶ್ವಾಸವೂ ವಿಮರ್ಶನೆಯಲ್ಲಿ ಬೇಸರಿಕೆಯೂ ಅಧಿಕವಾಗಿದೆಯೆಂದು ಹೇಳಿ ಕೊಳ್ಳಬಹುದು. ಇದುವೇ ವೀರಶೈವರ ಅವನತಿಯ ದೊಡ್ಡ ನಿದರ್ಶನವು! ಇಂತಹವರನ್ನು ಕುರಿತು ಓರ್ವ ಪಂಡಿತನು ಬಲು ಅಪೌರುಷ್ಯವಾದ ಉದ್ಗಾರವನ್ನು ಮಾಡಿದನು. *He who cannot think is a fool; He who fears to think is the worst of all, a coward"* ಅಂದರೆ 'ಆಲೋಚನೆ ಮಾಡಲಾರದವನು ಮೂರ್ಖ, ಆಲೋಚನೆ ಮಾಡಲಿಚ್ಛೆಯಿಲ್ಲದವನು ಅಂಧವಿಶ್ವಾಸಿಕ; ಆಲೋಚನೆ ಮಾಡಲು ಭಯಪಡತಕ್ಕವನು ಎಲ್ಲರಿಗಿಂತಲೂ ಅಧಮ. ಅಂಜುಬುರುಕ," ಎಂದು ಸ್ಥೂಲವಾಗಿ ಹೇಳಬಹುದು. ಇದನ್ನು ಬಲಪಡಿಸಲು ವೀರಶೈವರ 'ವಾಙ್ಮಯ ಧಾರ್ಮಿಕ' ಘಟನೆಗಳ ಅನೇಕ ಪ್ರಮಾಣಗಳನ್ನುದಹರಿಸಬಹುದು. ಅದೊಂದು ಹೊಸ ಪುಸ್ತಕದಲ್ಲಿ ಮಾತ್ರ ಹೇಳಲು ಸಾಧ್ಯವಿದೆ. ನಮ್ಮ ಪ್ರಮುಖರನ್ನು ಕುರಿತು ವಿಜ್ಞಾಪಿಸಿಕೊಳ್ಳುವದೇ ನನ್ನ ಮುಖ್ಯ ಉದ್ದೇಶ! ಮಹನೀಯರೇ! ಉನ್ನತಿಯನ್ನು ಹೊಂದುತ್ತಲಿದ್ದ ಕನ್ನಡ ವೀರಶೈವರಾದ ನಾವು ಯೋಗ್ಯ ಕರ್ತವ್ಯವನ್ನು ನಿರ್ಣಯಿಸಿಕೊಂಡು ಗಾಢನಿದ್ರೆಯಲ್ಲಿದ್ದ ಸೋದರಾಂಧ್ರ ವೀರಶೈವರನ್ನು ಎಚ್ಚರಗೊಳಿಸುವ ಕಾರ್ಯವನ್ನು ನಿಶ್ಚಯವಾಗಿ ಕೈಕೊಳ್ಳುವಿರೆಂದು ನನ್ನ ನಂಬಿಗೆ.

ವಾಠಕ ಮಹಾಶಯರೇ, ನಾನು ಅನುಭವವಿದ್ದಮಟ್ಟಿಗೆ ಸಾಮಾನ್ಯವಾಗಿ 'ಅಂಧ್ರವೀರಶೈವರ' ದಿಗ್ದರ್ಶನವನ್ನು ಮಾಡಿರುತ್ತೇನೆ. ಪರಿಸರ [ಅಜುಬಾಜು] ಪ್ರಾಂತಗಳಲ್ಲಿರತಕ್ಕವರ ಜಾತಿಗಳನ್ನಾಗಲಿ ಆಚಾರಗಳನ್ನಾಗಲಿ ಬರೆದಿಲ್ಲವು. ಪ್ರಾಜ್ಞರು ಗುಣಗ್ರಹಣವನ್ನು ಮಾಡಿದರೆ ನನ್ನ ಉದ್ದೇಶವು ಸಫಲವಾಗುತ್ತದೆ.

"क्लेशः फलेनहि पुनर्नवतां विधत्ते"



ಪಶ್ಚಿಮಾಂಧ್ರ ವೀರಶೈವರಲ್ಲಿ ಸಾಧಾರಣ ರೀತಿಯಿಂದ ಪ್ರಚಾರವನ್ನು ಹೊಂದಿ ಈಗೀಗ ಪೂರ್ವಾಂಧ್ರರಲ್ಲೂ ಹಬ್ಬಹತ್ತಿದೆ. ಈ ಪದ್ಧತಿಯನ್ನು ನಮ್ಮ (ಆಂಧ್ರ) ದೇಶೀಯರು ಬಹಳ ಮಂದಿ ಗರ್ಹಿತವನ್ನಾಗಿ ತಿಳಿದರೂ ಅಕ್ಷತ ಯೋನಿಯಾ (ಮೊದಲಿನ ಗಂಡನ ಸಂಪರ್ಕವಿಲ್ಲ) ದ ವಿಧವೆಯು ಸಶಾಸ್ತ್ರೀಯ ವಿವಾಹವನ್ನು (ಅಂದರೆ ಪೂರ್ವದಂತೆ ಮಾಂಗಲ್ಯಧಾರಣಾದಿ ಸಮಸ್ತ ಪದ್ಧತಿಯುಳ್ಳ ಮದುವೆಯನ್ನು) ಕೆಲವು ಪ್ರಮುಖರೂ ಮಠಾಧಿಕಾರಿಗಳೂ ಅಂಗೀಕರಿಸದೊಡಗಿರುತ್ತಾರೆ. ಅದರಂತೆ ಒಂದೆರಡು ಇಂತಹ ವಿವಾಹಗಳು ಮೊನ್ನೆಯೇ ಜರಗಿರುತ್ತವೆ.

ಕನ್ನಡ ವೀರಶೈವರಲ್ಲಿ 'ಬಸವಪ್ಪ' ಹೆಸರಿನ ಮಂದಿ ಬಹಳವಾಗಿ ದೊರೆಯುವಂತೆ ಆಂಧ್ರ ವೀರಶೈವರಲ್ಲಿ 'ಕೋಟಯ್ಯ, ವೀರಭದ್ರಯ್ಯ' ಹೆಸರುಗಳು ತುಂಬಿ ಹೋಗಿವೆ. ಸಾಮಾನ್ಯವಾಗಿ 'ಮಲ್ಲಯ್ಯ, ಸಿದ್ಧಯ್ಯ, ರಾಜಯ್ಯ, ಬಸವಯ್ಯ' ಎಂಬ ನಾಮಗಳೂ ಪ್ರಚಾರದಲ್ಲಿವೆ. ಆಂಧ್ರ ವೀರಶೈವರಿಗೆ ಪವಿತ್ರ ಕ್ಷೇತ್ರಗಳೆಂದರೆ "ಶ್ರೀಶೈಲ ಕೋಟಪ್ಪಕೊಂಡ (ಜಿ. ಗುಂಟೂರ) ಕೊಲನುಪಾಕ, ರಾಚಗೊಂಡ (ಜಿ. ನಲ್ಲಗೊಂಡ) ವೇಮುಲಪಾಡ, ಕೊರಿವಿ" ಎಂಬ ಪ್ರದೇಶಗಳು ಸುಪ್ರಸಿದ್ಧವಾಗಿವೆ. ಕನ್ನಡ ವೀರಶೈವರಿಗೆ ಕರಿಗಡಬಿನ ಮೇಲೆ ಅತಿ ಪ್ರೇಮವಷ್ಟೇ! ಹಾಗೆಯೇ "ಪೋಲೆಲು (ಭಕ್ಷ್ಯಾಲು), ಅರಿಶೆಲು" ಎಂಬ ಹೆಸರು ಕೇಳಿದೊಡನೆಯೇ ಆಂಧ್ರ ವೀರಶೈವರ ಬಾಯಿಯಲ್ಲಿ ನೀರು ಕಟೆಯುವವು. ಮತ್ತು ಅಗ್ನಿಕುಂಡಧ್ವಂಸ (ದಕ್ಷಯಾಗವಿನಾಶ) ವೆಂಬ ಉತ್ಸವವನ್ನು ನೆರವೇರಿಸುವದರಲ್ಲೂ ಇವರಿಗೆ ವಿಲಕ್ಷಣವಾದ ಉತ್ಸಾಹ ಪ್ರತಿಜ್ಞೆಗಳುಂಟು. ಭಕ್ತಮಾಹೇಶ್ವರರೆಲ್ಲಾರಿಗಾದರೂ 'ಅಯ್ಯ' ಎಂದು ಹೆಸರಿನ ಮುಂದೆ ಸೇರಿಸಬಹುದು. ಆಂಧ್ರ ದೇಶದ ಇತರರು 'ಮಾಹೇಶ್ವರ, ಬಣಜಿಗ, ಶೀಲವಂತ, ಬಳಿಗಾರ' ರನ್ನು ಮಾತ್ರ ವೀರಶೈವ (ಲಿಂಗಾಯತ) ರನ್ನಾಗಿ ಪರಿಗಣಿಸುತ್ತಾರೆ. ಈ ಲೇಖದಲ್ಲಿ ನಾನಾದರೂ 'ಆಂಧ್ರವೀರಶೈವ' ಎಂಬ ಶಬ್ದವನ್ನು ಬಹುಶಃ ಈ ವಿಶಿಷ್ಟಾರ್ಥದ್ಯೋತಕವನ್ನಾಗಿಯೇ ಪ್ರಯೋಗಿಸಿರುವೆನು. 'ಲಿಂಗಾಯತ' ಎಂಬ ಶಬ್ದವು ಪಶ್ಚಿಮಾಂಧ್ರ ದೇಶದ ಕೆಲವು ಪ್ರದೇಶಗಳಲ್ಲಿ ಮಾತ್ರ ಪ್ರಚಾರವಾಗಿದೆ.

**ಉಪಸಂಹಾರಃ**— ಆಂಧ್ರ ವೀರಶೈವರು ಸ್ವಸಂಘ ಸುಧಾರಣೆಯನ್ನು ಅತಿ ದೃಢವಾಗಿ ಅಪೇಕ್ಷಿಸುತ್ತಿಹರು. ಅವರಲ್ಲಿ ಯೋಗ್ಯರಾದ

ವಿದ್ಯಾವಂತರೂ ಉದಾರಿಗಳೂ ಮಾರ್ಗದರ್ಶಕರೂ ಇಲ್ಲವು. ತಕ್ಕೆ ಉನ್ನತಿಯನ್ನು ಪಡೆಯುತ್ತಿರುವ ಕನ್ನಡ ವೀರಶೈವರು ತಮ್ಮ ಸಹೋದರರಾದ ಆಂಧ್ರ ವೀರಶೈವರ ಕಡೆಗೆ ಕಡೆನೋಟಗಳನ್ನಾದರೂ ಹಾಕಲಿಲ್ಲ. ಕನ್ನಡ ವೀರಶೈವರಲ್ಲಿ ನಡೆಯುತ್ತಿದ್ದ ಮಹಾ ಸಭೆ ಮುಂತಾದ ಚಳುವಳಿಗಳನ್ನು ಸಹ ತಿಳಿದುಕೊಳ್ಳಲಿಕ್ಕೆ ಆಂಧ್ರ ವೀರಶೈವರಿಗೆ ಸಾಧನಗಳಿಲ್ಲ. ಮಹಾ ಸಭೆಯ ಪ್ರಾಂತಿಕ ಕೇಂದ್ರಸ್ಥಾನಗಳೆಂದು ಹೇಳಲ್ಪಡುವ ಬಳ್ಳಾರಿ ನಗರದ ಆಂಧ್ರ ವೀರಶೈವ ಸಂಘವು, ಹೆಸರಿಗೆ ಮಾತ್ರ ವೀರಶೈವ ಮಹಾ ಸಭಾ ಸೆಕ್ರೆಟರಿಗಳಿಂದ ತಮ್ಮ ನಿವೇದಿಕೆಯಲ್ಲಿ (*5-11-27*, ಮೈಸೂರು ಸ್ಟಾರ್) ಪ್ರಕಟಿಸಲ್ಪಟ್ಟಿದೆ ಹೊರತು, ಆ ಸಂಘದ ಚಾಲಕರಾರು? ಇಲ್ಲಿಯವರಿಗಾವ ಕಾರ್ಯಗಳಾಗಿವೆ? ಎಂಬುದು ಗಗನ ಕುಸುಮಪ್ರಾಯವಷ್ಟೆ! ಅಂದಬಳಿಕ ಆಂಧ್ರ ವೀರಶೈವರು ಉನ್ನತಿಯನ್ನು ಕಾಣುವದು ಹೇಗೆ? ಕನ್ನಡ ವೀರಶೈವರ ವಿಷಯವಾಗಿಯೂ ಒಂದೆರಡು ಮಾತುಗಳನ್ನು ಬರೆಯಬೇಕೆಂದಿರುವೆನು. ರಸಜ್ಞರು ನನ್ನ ಧೃಷ್ಟತೆಯನ್ನು ಮನ್ನಿಸಲಿ!

೫೦-೬೦ ವರ್ಷಗಳ ಹಿಂದೆ ಕನ್ನಡ ವೀರಶೈವರಲ್ಲಿ ಸುಧಾರಣಾ ವಾತಾವರಣವು ಬೀಸಿದೆ. ಉದಾರಿಗಳಾದ ಮಹಾನುಭಾವರು ಲಕ್ಷಗಟ್ಟಲೆ ದ್ರವ್ಯವನ್ನು ನಿಸ್ಪೃಹೆಯಿಂದ ದಾನಮಾಡಿ ಅನೇಕ ವಿದ್ಯಾ ಸಂಸ್ಥೆಗಳನ್ನು ನೆಲೆಗೊಳಿಸಿದರು. ದಿವಾನ ಬಹದ್ದೂರರೂ ರಾವಬಹದ್ದೂರರೂ ಕಲೆಕ್ಟರರೂ ಜಡ್ಜಿಗಳೂ ವಕೀಲರೂ ಬಾರಿಷ್ಟರರೂ ಪಂಡಿತರೂ ಪ್ರತಿಭಾಶಾಲಿಗಳೂ ಹೊರಟರು. ಆದರೆ ಇವರಿಂದ ಮತಕ್ಕಾಗಿ ಯಾವ ಘನಕಾರ್ಯವು ಮಾಡಲ್ಪಟ್ಟಿತೆಂದು ಕೇಳಿದರೆ 'ಅತಿ ಸ್ವಲ್ಪನೇ' ಎಂದು ಸಪ್ಪನ ಉತ್ತರವು ದೊರೆಯುವದು. ಇಷ್ಟು ಮಂದಿ ವಿದ್ಯಾವಂತರ ಪೈಕಿ ಯಾರು ತಮ್ಮ ಜೀವಿತವನ್ನು ಸಂಪೂರ್ಣವಾಗಿ ಮತಕ್ಕೆ ಅರ್ಪಿಸಿದರು? ವೀರಶೈವರನ್ನು ಅನ್ಯಾಯವಾಗಿ ಇಂಡಿಯಾ ಪ್ರಭುತ್ವದವರು ಶೂದ್ರರಿಗಿಂತಲೂ ಕಡಿಮೆಯಾದ ಖಾನೆಯಲ್ಲಿ ಸೇರಿಸುತ್ತಿರುವರೆಂಬ ಸಂಗತಿ ಯಾವ ದಿವಾನ್ ಬಹದ್ದೂರರವರ ದೃಷ್ಟಿಗೆ ಗೋಚರವಾಯಿತು? ಅನೇಕ ಧಾರ್ಮಿಕ ಪ್ರಕರಣಗಳಲ್ಲಿ ವೀರಶೈವರಿಗಾಗುವ ಸಂಕಟ ಪರಾಭವಗಳನ್ನು ಕಂಡು ಯಾವ ಬ್ಯಾರಿಷ್ಟರುಗಳಾಗಲಿ ಉಚಿತವಾಗಿ ವಾದಿಸಿ ಸ್ವಮತಿಕರಿಗೆ ಜಯವನ್ನು ಹಂಚಿದರೋ? ಸ್ವತಂತ್ರ ಗ್ರಂಥಗಳಲ್ಲಿಯೂ ಜ್ಞಾನಕೋಶ

# ಚೌಡದಾನಪುರದ ಶಿಲಾಶಾಸನಗಳು.

ಲೇಖಕಃ— ಶಿ. ಚ. ನಂದಿಮಠ ಎಮ್. ಎ. ಎಫ್. ಆರ್. ಎ. ಎಸ್. ಲಂಡನ





ಕನ್ನಡ ನಾಡು ಧಾರ್ಮಿಕ, ಸಾಮಾಜಿಕ, ಮತ್ತು ರಾಜಕೀಯ ವಿಷಯಗಳಲ್ಲಿ ಅತಿ ಪ್ರವೀಣರಾದ ಮಹಾ ಪುರುಷರ ತವರೂರಾಗಿ, ಒಂದಾನೊಂದು ಕಾಲದಲ್ಲಿ ಅನ್ಯಕಡೆಗೆ ಕಂಡುಬಾರದ ಸುಖ ಸಂಪತ್ತುಗಳಿಗೆ ನೆಲೆಯಾಗಿತ್ತೆಂಬುದು, ಇತಿಹಾಸದಲ್ಲಿ ಪರಿಶ್ರಮವುಳ್ಳವರಿಗೆ ಕಂಡುಬರದೆ ಇರಲಾರದು. ನಮ್ಮಲ್ಲಿ ನೆಲೆಗೊಂಡ ಆಲಸ್ಯಕ್ಕಾಗಿಯೋ ಅಥವಾ ಅಜ್ಞಾನಕ್ಕಾಗಿಯೋ "ನಮ್ಮ ಹಿರಿಯರ ವಿಷಯಕ್ಕೆ ನಿಮಗೆ ಗೊತ್ತಿದ್ದುದನ್ನು ದಯಮಾಡಿ ನಮಗಷ್ಟು ಹೇಳುವಿರಾ?" ಎಂದು ಅಂಗಲಾಚಿ ಅನ್ಯರನ್ನು ಕೇಳುವ ಪ್ರಸಂಗ ಬಂದಿದೆ. ಈ ಸ್ಥಿತಿಯು ಕನ್ನಡಿಗರೆಲ್ಲರಿಗೆ ಸಾಮಾನ್ಯವಾಗಿದ್ದರೂ, ವೀರಶೈವರಲ್ಲಿ ವಿಶೇಷವಾಗಿದೆ.

ಹನ್ನೆರಡನೇಯ ಶತಮಾನದಲ್ಲಿ ವೀರಶೈವರ ಉದ್ಧಾರಕ್ಕಾಗಿ ಎಷ್ಟೋ ವಿಭೂತಿಗಳುದ್ಭವಿಸಿ, ಅಪಾರವಾದ ಜನಸೇವೆ ಮಾಡಿರುವರು. ಅವರ ಚರಿತ್ರೆಗಳು, ಅವರ ಸಂತತಿಯವರ ಆಲಸ್ಯಕ್ಕಾಗಿ ಪೌರಾಣಿಕ ಕಥೆಗಳಾಗಿವೆ. ಈಗಿನ ವಿದ್ವಾಂಸರ ವಿಮರ್ಶೆಯ ಕುಲುಮೆಯಲ್ಲಿ ಅವು ತಡೆಯುವದಿಲ್ಲ. ದುರ್ದೈವದಿಂದ ಇಲ್ಲಿಯ ವರೆಗೆ ನಮ್ಮ ಶರಣರ ಅಸ್ತಿತ್ವವನ್ನು ಸಿದ್ಧ ಮಾಡುವ ಮತ್ತು ಈಗಿನ ಕಠೋರ ಹೃದಯದ ವಿಮರ್ಶಕರ ಮನದಣಿಯುವಂತೆ ಸಿದ್ಧ ಮಾಡುವ ಆಧಾರಗಳು ತೀರ ಸ್ವಲ್ಪ ಹೊರಬಿದ್ದಿವೆ. ಶ್ರೀಬಸವಣ್ಣನವರಂಥ ಮಹಾ ವಿಭೂತಿಗಳ ಕಾಲವು ಕೂಡಾ ಸರಿಯಾಗಿ ನಿರ್ಣಯವಾಗಿಲ್ಲ. ಓರ್ವ ವಿದ್ವಾಂಸರು ಶ್ರೀ. ಬಸವಣ್ಣನವರು ಕ್ರಿ. ಶ. ೧೧೬೦ ರಲ್ಲಿದ್ದರೆಂದು ಅಭಿಪ್ರಾಯಬಟ್ಟರೆ ಮತ್ತೋರ್ವರು ಸುಮಾರು ಕ್ರಿ. ಶ ೧೨೦೦ ರೊಳಗೆ ಇದ್ದಿರಲಾರರೆಂದು ಹೇಳುತ್ತಾರೆ. ಅದು ಏನೇ ಇರಲಿ! ಇಲ್ಲಿಯ ವರೆಗೆ ದೊರೆತ ಐತಿಹಾಸ ಸಂಗತಿಗಳ ವಿಷಯಕ್ಕೆ ಅತ್ಯುಪಯುಕ್ತವಾದ ಅವುಗಳ

ಸತ್ಯತೆಯ ವಿಷಯಕ್ಕೆ ಭಿನ್ನಾಭಿಪ್ರಾಯವಿಲ್ಲದಂಥ ಸಾಧನಗಳಾದ, ಕನ್ನಡ ನಾಡಿನ ಶಿಲಾಶಾಸನಗಳಲ್ಲಿ ಬಸವಣ್ಣನವರ ಉಲ್ಲೇಖವು ದೊರೆಯುವದಿಲ್ಲವೆಂದು ಶಿಲಾಶಾಸನಜ್ಞರಾದ ಪಂಡಿತರೆಲ್ಲರು ಅಭಿಪ್ರಾಯಪಡುತ್ತಿದ್ದರು. ಶಿವಾನುಭವದಲ್ಲಿ ಪ್ರಸಿದ್ಧವಾದ ಅರ್ಜುನವಾಡದ ಶಿಲಾಶಾಸನವು ಈಯಭಿಪ್ರಾಯವನ್ನು ಕೆಲಮಟ್ಟಿಗೆ ಕಡಿಮೆ ಮಾಡಿದೆಯಷ್ಟೇ ಅಲ್ಲ, ಹೆಚ್ಚು ಶ್ರಮಬಟ್ಟು ಶೋಧಿಸಿದರೆ ಅದಕ್ಕೂ ಹೆಚ್ಚು ಮಹತ್ವದ ವಿಷಯಗಳು ಬೆಳಕಿಗೆ ಬರಬಹುದೆಂಬ ಆಶೆಯನ್ನು ಬಲಪಡಿಸಹತ್ತಿದೆ. ಈ ಬಲವತ್ತರವಾದ ಆಶೆಯನ್ನು ನಂಬಿ, ಸ್ವಲ್ಪ ಮುಂದರಿಯಲು, ನಮ್ಮ ದೃಷ್ಟಿಗೆ ಬಿದ್ದ ಕೆಲವು ಸಂಗತಿಗಳನ್ನು, ಸತ್ಯಾನ್ವೇಷಣಕ್ಕೋಸುಗ ಕನ್ನಡಿಗರಾದ ಇತಿಹಾಸ ಸಂಶೋಧಕರ ಮುಂದಿರುಸುವೆವು.

ಈ ಲೇಖಕ್ಕಾಧಾರಗಳಾದ ಶಿಲಾಶಾಸನಗಳ ಬಗ್ಗೆ ಒಂದು ಮಾತನ್ನು ಹೇಳುವುದು ಅಗತ್ಯನೆನಿಸುತ್ತದೆ. ಹಿಂದುಸ್ತಾನದಲ್ಲಿದ್ದಾಗ ಡಾ. ಫ್ಲೀಟ ಸಾಹೇಬರವರ "ಮುಂಬಯಿ ಪ್ರಾಂತದ ಕನ್ನಡ ಜಿಲ್ಹೆಗಳ ರಾಜಮನೆಗಳು (*Dynasties of Kanarese District in the Bombay Presidency*) ಎಂಬ ಪುಸ್ತಕದ ಮೊದಲನೇಯ ಅಧ್ಯಾಯದ ಬುಡದಲ್ಲಿ "ಮ॥ ಇಲಿಯಟ್ ಸಾಹೇಬರವರು ಕನ್ನಡ ನಾಡಿನ ಶಿಲಾಶಾಸನಗಳನ್ನೆಲ್ಲ ಸಂಗ್ರಹಿಸಿ, ಮೂರು ಪ್ರತಿಗಳನ್ನು ತೆಗೆಯಿಸಿ, ಒಂದು ಪ್ರತಿಯನ್ನು ಡಾ. ಫ್ಲೀಟರವರಿಗೂ, ಒಂದನ್ನು ರಾಯಲ್ ಏಸಿಯಾಟಿಕ್ ಸೊಸಾಯಿಟಿಗೂ, ಕೊಟ್ಟರೆಂದು ಕಂಡಿದ್ದೆನು. ಡಾ. ಫ್ಲೀಟರವರು ತಮ್ಮ ಪುಸ್ತಕಕ್ಕೆ ಅನೇಕ ಕಡೆಗೆ ಆ ಹಸ್ತಪ್ರತಿಯ ಆಧಾರವನ್ನು ತೆಗೆದುಕೊಂಡಿದ್ದಾರೆ. ಆದುದರಿಂದ ಆ ಪ್ರತಿಯು ಮಹತ್ವದ್ದಿರಬೇಕೆಂದು ಅನ್ನಿಸಿತ್ತು. ಅದರಂತೆ ಇಲ್ಲಿಗೆ ಬಂದನಂತರ ಆ ಪ್ರತಿ ಶೋಧಿಸಿ ಕತ್ತಲೆಕೋಣೆಯೊಳಗಿಂದ ಹೊರಗೆ ತೆಗೆದು ಓದಲು ಅಪಾರವಾದ ಆನಂದವಾಯಿತು. ಈ ಪ್ರತಿಗೆ ಸೊಸಾಯಿಟಿಯವರು ಒಳ್ಳೇ ಮುದ್ದಾದ ಮತ್ತು ಭದ್ರವಾದ ಕಟ್ಟನ್ನು (*Binding*) ಕೂಡ್ರಿಸಿ ಮೂರು ಭಾಗಗಳನ್ನಾಗಿ ಮಾಡಿರುವರು. ಒಂದನೇಯ ಮತ್ತು ಎರಡನೇಯ ಭಾಗಗಳಲ್ಲಿ ಕನ್ನಡ ಶಿಲಾಶಾಸನಗಳಿವೆ. ಮೂರನೇಯ ಭಾಗದಲ್ಲಿ ತೆಲುಗು ಶಿಲಾಶಾಸನಗಳಿವೆ. ಕೋರಿ ಕಾಗದದ ಮೇಲೆ ಅರಗಿನ ಮಸಿಯಿಂದ ಸುವಾಚ್ಯವಾದ ಅಕ್ಷರಗಳಲ್ಲಿ ಆಪನೋ ಓರ್ವ ಕನ್ನಡ

ಕಾರಕೂನನು ಬರೆದಿದ್ದಾನೆ. ಲಿಪಿಗಳನ್ನು ಓದಿದವನ ಕಡೆಯಿಂದಾ ಗಲಿ ಅಥವಾ ಬರೆದವನ ದೋಷದಿಂದಾಗಲಿ ಆದ ತಪ್ಪುಗಳಿಗೇನೂ ಕಡಿಮೆಯಿಲ್ಲ. ಪದ್ಧತಿಯ ಪ್ರಕಾರ ಬರೆದಿಲ್ಲ. ಆದರೂ ಶಿಲಾಶಾಸನಗಳ ಆಶೆಯುವನ್ನು ಕಂಡುಹಿಡಿಯಲು ಅಡ್ಡಿಯಿಲ್ಲ. ಇನ್ನೂ ಬೆಳಕಿಗೆ ಬಾರದ ಶಿಲಾಶಾಸನಗಳೆಷ್ಟೋ ಇದರಲ್ಲಿ ಅಡಕವಾಗಿವೆಯೆಂದು ನಮಗೆ ಅನ್ನಿ ಸುವುದು. ಕೆಳಗಿನ ಒಂದೆರಡು ಸಂಗತಿಗಳಿಂದ ಈ ಪ್ರತಿಯ ಮಹತ್ವವು ಮತ್ತಷ್ಟು ಹೆಚ್ಚಾಗುವುದು. ಡಾ. ಫ್ಲೀಟರವರ ಪುಸ್ತಕದ ಆಧಾರದಿಂದ ಬೆಳಗಾವ ಜಿಲ್ಹಾ ಸಂಕೇಶ್ವರದಲ್ಲಿ ಶಿಲಾಶಾಸನಗಳಿವೆಯೆಂದು ಕಂಡು ಬಂದಿತು. ಅವುಗಳ ವಿಷಯವೇನದೆಯೆಂಬ ಲವಲವಿಕೆಯಿಂದ ಸಂಕೇ ಶ್ವರಕ್ಕೊಮ್ಮೆ ಹೋದಾಗ ಎಷ್ಟು ಸೂಕ್ಷ್ಮದೃಷ್ಟಿಯಿಂದ ಶೋಧಿಸಿದರೂ ಶಿಲಾಶಾಸನಗಳು ನಮ್ಮ ದೃಷ್ಟಿಗೆ ಬೀಳಲಿಲ್ಲ. ಮ॥ ಇಲಿಯಟ್ ಸಾಹೇ ಬರ ಪ್ರತಿಯಲ್ಲಿ ಸಂಕೇಶ್ವರದ ಶಿಲಾಶಾಸನಗಳ ಉಲ್ಲೇಖವದೆ. ಇಷ್ಟೇ ಅಲ್ಲ, ಅವುಗಳ ಸಾರಾಂಶವನ್ನು ಸಹ ಕಂಡುಕೊಳ್ಳಬಹುದು. ಸುಮಾರು ೫೦ ವರುಷಗಳಿಗೂ ಹಿಂದೆ ಈ ಪ್ರತಿಯನ್ನು ಬರೆದುಕೊಂಡುದರಿಂದ ಈ ಐವತ್ತು ವರುಷಗಳಲ್ಲಿ ಎಷ್ಟೋ ಶಾಸನಗಳು ಕಾಲನ ಬಾಯಿಗಾ ಗಲಿ ಅಥವಾ ಜನರ ತಿಳಿಗೇಡಿತನಕ್ಕಾಗಲಿ, ತುತ್ತಾಗಿ ಹೋಗಿರುವವು. ಕನ್ನಡಿಗರ ದೃಷ್ಟಿಗೆ ಈ ವಿಷಯವನ್ನು ತರಬೇಕೆಂಬುದ್ದೇಶದಿಂದಲೇ ಇಷ್ಟು ವಿಸ್ತರಿಸಿ ಬರೆಯಬೇಕಾಯಿತು. ಇನ್ನು ನಮ್ಮ ವಿಷಯದ ಕಡೆಗೆ ತಿರಳುವಾ.

ಮೊದಲನೇಯ ಭಾಗದಲ್ಲಿ ಕಲಚೂರಿ ವಂಶದ ಬಿಜ್ಜಳ ಮಹಾ ರಾಜನ ಕಾಲದ ವರೆಗೆ ಶಿಲಾಶಾಸನಗಳಿವೆ. ಎರಡನೇಯ ಭಾಗದಲ್ಲಿ ಕಲಚೂರಿ ವಂಶದಿಂದ ಸುರುವಾಗಿ ಸುಮಾರು ಹದಿನೆಂಟನೇಯ ಶತ ಮಾನದ ವರೆಗೆ ಹೋಗಿವೆ. ಅನುಕೂಲವಾದ ಹಾಗೆ ಸೊಸಾಯಟಿಯು ವರ ಅಪ್ಪಣೆಯಿಂದ ಕನ್ನಡಿಗರಿಗೆ ಇವುಗಳ ಪರಿಚಯ ಮಾಡಿಕೊಡ ಬೇಕೆಂಬ ಅಪೇಕ್ಷೆ. ಪ್ರಕೃತ ಲೇಖಕ್ಕೆ ಸಂಬಂಧಿಸಿದ ಶಿಲಾಶಾಸನಗಳು ಐದು. ಈ ಪ್ರತಿಯ ಪ್ರಕಾರ ಇವೆಲ್ಲವು ದೇವಗಿರಿಯ ಯಾದವರ ಆಡ ಳಿತದಲ್ಲಿ ಹುಟ್ಟಿ ಕನ್ನರ ದೇವನ ಶಿಲಾಶಾಸನ ನಂಬರ ೪, ಮಹಾದೇವ ರಸರ ಶಿಲಾಶಾಸನಗಳು ನಂಬರ ೧, ೨, ೩ ಮತ್ತು ೫ ಆಗಿವೆ. ಶಕೆ ವರುಷ ೧೧೮೧ ರಿಂದ ೧೧೮೭ರ ವರೆಗೆ ಈ ಶಿಲಾಶಾಸನಗಳ ಕಾಲವು

ಈ ಶಾಸನಗಳಲ್ಲಿ ಕಂಡುಬರುವ ಮಹತ್ವದ ವಿಷಯಗಳನ್ನಷ್ಟು ಸ್ವಲ್ಪ ದರಲ್ಲಿ ಚರ್ಚಿಸುವಾ.

## ಮುಕ್ತೇಶ್ವರ.

ಇದು ಪವಿತ್ರಳಾದ ತುಂಗಭದ್ರೆಯ ತಡಿಯಲ್ಲಿ ಅದೆಯೆಂದು ಶಿಲಾಶಾಸನಗಳಲ್ಲಿ ಉಲ್ಲೇಖವಿದೆ. ಇದು ಆ ಕಾಲಕ್ಕೆ ಒಳ್ಳೇ ಪ್ರಸಿದ್ಧ ವಾದ ಪುಣ್ಯ ಸ್ಥಳವಾಗಿತ್ತೆಂದು ಈ ಶಿಲಾಲೇಖಗಳಿಂದ ಕಂಡು ಬರುವುದು. ರೇವಣಸಿದ್ಧೇಶ್ವರರ ಆಜ್ಞೆಯಿಂದ ವೀರಶಂಕರಾದೇವಿಯರು ಇಲ್ಲಿಗೆ ಬಂದಂತೆ ಹೇಳಿರುವುದರಿಂದಲೂ, ಗುತ್ತರಸ ವಿಕ್ರಮಾದಿತ್ಯನ ಪ್ರಧಾನ ಕಾಮೆಯ ನಾಯಕನು ಶಕೆ ೧೧೧೩ ನೇಯ ವಿರೋಧಿಕೃತು ಸಂವತ್ಸರದಲ್ಲಿ ಇದೇ ದೇವರಿಗೆ ಮುಕ್ತಜೀಯರ ಕಾಲಂಕಚ್ಚೇದತ್ತಿಯನ್ನು ಬಿಟ್ಟಂತೆ ಸಂಕೀರ್ಣ ಶಾಸನ ನಂಬರ ೧೭ * ರಿಂದ ಕಂಡುಬರುವದರಿಂದಲೂ, ಕ್ರಿ. ಶ. ಹನ್ನೆರಡನೇ ಶತಮಾನದ ಅಂತ್ಯದಿಂದಲೂ ಈ ದೇವರು ಒಳ್ಳೇ ಪ್ರಸಿದ್ಧಿಯನ್ನು ಹೊಂದಿತ್ತೆಂಬುದು ಸ್ಪಷ್ಟವಾಗುವುದು. ಆ ಕಾಲದಲ್ಲಿ ಅಲ್ಲಿಯ ಸ್ಥಾನದಾಚಾರ್ಯರು ಕಾಲಾಮುಖ ಗುರುಗಳಾದ ಮುಕ್ತಜೀಯರೆಂಬವರಿದ್ದರೆಂದೂ ಕಂಡು ಬರುವುದು.

## ರೇವಣಸಿದ್ಧ.

ಮಹಾದೇವರ ಒಂದನೇಯ ನಂಬರದ ಶಾಸನದಲ್ಲಿ "ಕಾರುಣಿಕ ರೆನಿಪರೊಳು ತಾಂ। ಕಾರುಣಿಕರೆನಿಪ ಸಿದ್ಧರೇವಣದೇವನ। ಕಾರುಣ್ಯದ ಶಿಶು ಭಕ್ತ್ಯಾಚಾರದ ಚಿಲ್ಲಾಳದೇವ ಲೆಕ್ಕೆಯೊಳೆಸೆದಂ॥" ಎಂಬ ಪದ್ಯದಲ್ಲಿ ಓರ್ವ ಸಿದ್ಧರೇವಣರ ಹೆಸರಿದೆ. ಇವರು ಒಳ್ಳೇ ಪ್ರಸಿದ್ಧ ರಾದವರೂ, ರಾಜಪೂಜಿತರೂ ಆಗಿದ್ದರೆಂದು ಇದೇ ಪದ್ಯವು ಹೇಳುವದು. ಮೊಗಲಾಯಿ ಇಲಾಖಾ ಶಿರಿವಾಳದ ಸಿದ್ಧಲಿಂಗೇಶ್ವರ ಗುಡಿಯಲ್ಲಿಯ ಶಾಸನದಿಂದ ಓರ್ವ ರೇವಣಸಿದ್ಧರ ವಿಷಯಕ್ಕೆ ಈ ಪ್ರಕಾರ ವರ್ಣನೆಯದೆ. "ಶ್ರೀ ಮದ್ಯಣಿಮಾದ್ಯಷ್ಟಗುಣಸಂಪನ್ನರೂ, ಷಟ್ಕ್ರಿಯಾ

---

* ಊಲಿಯ ಟಿಕವರ ಹಸ್ತ:ಪ್ರತಿ.

ನ್ವಿತರುಂ, ಸಾರಸೌರಭ್ಯಸರ್ವನಿಸ್ಸಂಗರುಮಪ್ಪ ಶಿವಯೋಗಿ ಶಾಂತಿ ಮಯ್ಯಗಳ ಪುತ್ರ ರೇಣುಕಾಚಾರ್ಯರ ಪ್ರಸಿದ್ಧಿಯೆಂತೆಂದಡೆ॥

ಕಂದ ॥

ಬರ್ಬಲ ತಂಡುಲದಿಂದೆ। ದೋರ್ದೀಶಂರಾಯುಕಟಕಮಂ ತಣಿಪಿದನಾ ॥
ಸರ್ವಜ್ಞ ಮೂರ್ತಿ ಜಗದೊಳು। ಗೋರ್ವನೇ ಸಿವಸಿದ್ಧ ಚಕ್ರಿರೇವಣದೇವಾ ॥
ತೊರೆತುಂಬಿ ಬಂದಡರೆ ತಾ। ಹರುಗೋಲಂ ತನ್ನಿವೆನ್ನದಾಜ್ಞಾಬಲದಿಂ ॥
ತೊರೆಯಂ ದಾಂಟುವನಿಂತಿರೆ।ರರುಪಿನ ತತುಕಾರನೀತ ರೇವಣದೇವಂ ॥
ಅಂದೊವ್ಮೆ ಸಿದ್ಧನೆಂದಡೆ। ನಿಂದಿಸಿದರು ಮನುಜರೆಲ್ಲ ಧರೆ ಭೂಭುಗಿಲೆನೆಂ ॥
ಬಂದದಿ ಸತ್ವರಜಂ ತಮ। ವಂದಿನಸಿದ್ಧಂ ಪ್ರಸಿದ್ಧ ರೇವಣದೇವಂ ॥
ಮುನ್ನೊವ್ಮೆ ಸಿದ್ಧನಾಗಿಯು। ವಂಶದ ತವನಿಧಿಯು ತೋರೆ ಲೋಕದೊಳೊವ್ಮೆ ॥
ತ್ರಿನ್ನೊವ್ಮೆ ತೋರ್ಪೆನೆಂದುಂ। ತಂನತಾನರಿದು ನೆಗಳ್ದ ರೇವಣದೇವಂ ॥
ತಾರದ ಮಂತ್ರದ ಮಧುರದ। ಸಾರಾಯುದ ಸಪ್ತಸ್ವರದಿಂದಾ ನರೇಶ್ವರನಂ ॥
ಭೋರನೆ ಕೇಳಿಸುತಿರ್ಪಂ। ಧಾರುಣಿ ತಳದೊಳಗೆ ನೆಗಳ್ದ ರೇವಣದೇವಾ ॥
ನೃತ್ಯಕೆ ನಿಂದಡೆ ಬಳಿಕಾ। ಅತ್ಯದ್ಭುತ ಮರುಳು ತಾಂಡರೌದ್ರಮಿವೆನಲುಂ ॥
ಪ್ರತ್ಯಕ್ಷಲಿಂಗ ಬೆಮರಲು। ಸತ್ಯದಲತ್ಯಂತ ಸಿದ್ಧ ರೇವಣದೇವ ॥

ಆ ಮೂಲೋಕ ಸಿದ್ಧ ಪ್ರಸಿದ್ಧರಪ್ಪ ಸಿದ್ಧರೇವಣಯ್ಯಂಗಳ ಪಾದಪ್ರಕ್ಷಾಲನಂ ಮಾಡಿ ಸಿರಿವೊಳಲ ಸರ್ವಸಮಸ್ಯವಾಗಿ ಧಾರಾ ಪೂರ್ವಕದಿಂ ಮಾಡಿ ಕೊಟ್ಟರು ॥ ಮಂಗಳಂ ಮಹಾಶ್ರೀಶ್ರೀ ॥ " ಈ ಶಿಲಾಶಾಸನವನ್ನು " ಶೀಲಾರ ವಂಶದ ಶ್ರೀ ಮನ್ಮಹಾಮಂಡಲೇಶ್ವರ ಎಳಿಮೇಲ ಶಿಂಗಿದೇವರಸರು ಅವ್ವೆ ನಾಗಲದೇವಿಯರು ಶ್ರೀ ಮನ್ಮಹಾಪ್ರಧಾನ ಸೇನಾಧಿಪತಿ, ಶ್ರೀ ಮತು ಪುಟ್ಟಿಯ ಕೆರೆಯ ನಾಯಕನುಂ, ಶ್ರೀ ಮತು ಬಲ್ಲಮ ದೇವರ ಮಹಾ ಪಸಾಯಿತ ಅಯ್ಯನಾಯಕರುಂ, ಶಕ ವರುಷಂಗಳು ೧೧೧೯ ನೇಯ ಪ್ಲವಂಗ ಸಂವತ್ಸರ ಭಾದ್ರಪದ ಬಹುಳ ೩೦ ಶುಕ್ರವಾರ ಸೂರ್ಯಗ್ರಹಣ ನಿಮಿತ್ತವಾಗಿ, ಯೆಳೆಮೇಲೆಯ ವತ್ತರ ಬಳಿಯ ಬಾಡಂ ಮುರುವಡಿಯ ಮಂನೆಯ ಮೇಲಾಳಿಕೆಯಂ, ಶ್ರೀಮದ್ದಕ್ಷಿಣ ವಾರಾಣಸಿ, ಸಿರಿವೊಳಲ ಶ್ರೀ ಮತುಸಿದ್ಧ ಶಾಂಕೇಶ್ವರ ಅಂಗಭೋಗ ರಂಗಭೋಗ ಖಂಡಸ್ಫುಟಿತ ಜೀರ್ಣೋದ್ಧಾರಕ್ಕಂ ಶಿವಯೋಗಿಗಳಶನಾಚ್ಛಾದನಕ್ಕಂ " ಕೊಟ್ಟರು.

ಮತ್ತು ಮೊಗಲಾಯಿ ಇಲಾಖಾ ಚಿತ್ತಾಪೂರ ತಾಲೂಕ ಇಂಗಳೀ ಮಲ್ಲಪ್ಪನ ಗುಡಿಯಲ್ಲಿಯ ಶಾಸನ (ಮ. ಇಲಿಯಟ್ಟರ ಹಸ್ತಪ್ರತಿ ಶಿಂಘ

ಣದೇವ ಶಾಸನ ನಂ. ೧) ದಿಂದ, ಕೆಳಗಿನ ಅಂಶವು ಗೊತ್ತಾಗುವುದು. "ವೀರ ಬಿಜ್ಜರಸರು ಮಾಡಿದ ಧರ್ಮವಂ ಸಮಸ್ತ ಲೋಕಾಲೋಕ ಚಕ್ರ ವರ್ತಿಜೇಯಂ ಶಾಶ್ವತೈಶ್ವರ್ಯ ಮೂರ್ತಿಯುಮಪ್ಪ ಶ್ರೀ ಮಹಾಲಿಂಗ ದೇವರ ವುರಿಂಗ (?) ಜ್ವಾಲೆಯಿಂದುದಯಿಸಿದ ಮಹಾ ವೀರ ಗಣಂಗಳ ಸಂಖ್ಯಾತರ ಮಹಿಮೆಯೆಂತೆಂದಡೆ.

ಕಂದ॥ ಕರಕರನಂ ಸೆಂಡಾಡುವ। ತುರಗಫಣಂ ಕೀಳಲಿಟ್ಟು ಬಿಟ್ಟಿಕ್ಕುವರಾ। ಗಿರಿಕುಲವಂ ಕಿತ್ತಿತ್ತುವ। ಧುರಿಯೊಳು ಪರಿಪರಿಯು ನಾಡು ತಿಪ್ಪರು ಸರಣರ್॥

ಶಕ ೧೧೩೨ ಪ್ರಮೋದ ಆಶ್ವಿನ ಶು. ೧೩ ಸೋಮವಾರ ವೀರ ಬಿಜ್ಜರಸರು ಆರಲು ಮುನ್ನೂರರ ಬಳಿಯು ಬಾಡಂ ಇಂಗುಳಿಗೆಯ ಪ್ರಭು ನಾಗರಸ ಹೆಗ್ಗಡೆ ಬಸವಯ್ಯನಲ್ಲಿಯ ಪಂಚಮಠಂ (ರಂ?) ಇಂತಿವರು ಏಕಸ್ತರಾಗಿ ಶ್ರೀ ಮೂಲಸ್ಥಾನ ದೇವರ ಪಾದಾರಾಧಕೇಯ್ಯುಮಪ್ಪ ಕ್ಷೇತ್ರ ಸಂನ್ಯಾಸಿನಿ ಮಹಾನುಭಾವೆಯ್ಯುಮಪ್ಪ ಚೆಲಪ್ವೆಗಳ ಕಾಲಂ ತೊಳೆದು ಧಾರಾಪೂರ್ವಕಂ ಮಾಡಿ ಸಿದ್ಧನಾಥ ದೇವರ್ಗ್ಗಂ ದಶಗಣ ಸಿಂಗಿದೇವ ಬಿಜ್ಜೇಶ್ವರ ದೇವರು ರೇವಣೇಶ್ವರ ಕಂನೇಶ್ವರ ಕೇದಾರ ದೇವರು ನಾಗೇಶ್ವರ ಇಂತೀ ಸಕಳ ಲಿಂಗ ದೇವರಿಗೆ ಶ್ರೀ ಗುಡ್ಡಮ್ಮೆಗಳು ಮುಖ್ಯವಾಗಿ ಗಣಮಠಕ್ಕೆ ಕೊಟ್ಟ ವೃತ್ತಿ" ಉದ್ಧೃತವಾದ ಶಿಲಾಶಾಸನಗಳ ಈ ಭಾಗಗಳಿಂದ ಶಿವಶರಣ ಮತ್ತು ರೇವಣಸಿದ್ಧರ ಪ್ರಭಾವವು ಆ ಕಾಲ ದಲ್ಲಿ ಎಷ್ಟಿತ್ತೆಂಬ ಬಗ್ಗೆ ವಿಚಾರ ಮಾಡಲು ಅನುವಾಗುವುದೆಂದು ನಮ್ಮ ತಿಳುವಳಿಕೆ. ಈ ರೇವಣಸಿದ್ಧರೂ, ಚೌಡದಾನಪುರದ ಶಾಸನದಲ್ಲೇ ಹೇಳಿದ ರೇವಣಸಿದ್ಧರೂ ಒಂದೇ ಇರಬಹುದೋ ಹೇಗೆಂಬುದು ವಿಚಾರಿಸತಕ್ಕ ವಿಷಯವಾಗಿದೆ. ಕೊಲ್ಲಾಪೂರದ ಸಮೀಪಕ್ಕಿರುವ ಲಿಂಗವಂತರ ಒಮ್ಮೆ ಪ್ರಸಿದ್ಧ ಮಠವಾದ ಸಿದ್ಧಗಿರಿಯ ಮೂಲಪುರುಷನಾದ ಕಾಡ ಸಿದ್ಧೇಶ್ವರರ ಗುರುಗಳೂ ರೇವಣಸಿದ್ಧರು. ಸೊನ್ನಲಾಪುರದ ಸಿದ್ಧರಾಮ ಶಿವಯೋಗಿಗಳ ಜನನಕ್ಕೂ ಮೊದಲು, ಅವರ ಜನನಿ ಜನಕರಿಗೆ ಮಹಾ ಮಹಿಮಾಶಾಲಿಯು ಅವರ ಉದರದಲ್ಲಿ ಹುಟ್ಟುವನೆಂದು ಹೇಳಿದವರೂ ರೇವಣಸಿದ್ಧರು. ಕನ್ನಡ ವಾಙ್ಮಯದಲ್ಲಿಯ "ರೇವಣಸಿದ್ಧೇಶ್ವರ ಪುರಾಣ" "ರೇವಣ ಸಾಂಗತ್ಯ" "ರೇಣುಕಾಚಾರ್ಯ ಚರಿತ್ರ" ಮೊದಲಾದ ಗ್ರಂಥಗಳೂ, ರೇವಣಸಿದ್ಧನ ಚರಿತ್ರವನ್ನೇ ಸಾರುವವು. ವೀರಶೈವರ ಮೂಲ ಪುರುಷರಾದ ಪಂಚಾಚಾರ್ಯರಲ್ಲಿ ಅತಿ ಬಲಾಢ್ಯರಾದವರೂ

ಓರ್ವ ರೇಣುಕಾಚಾರ್ಯರು ಅಥವಾ ರೇವಣಸಿದ್ಧರು. ಬೊಮ್ಮರಸನು ತನ್ನ "ರೇವಣಸಿದ್ಧೇಶ್ವರ ಪುರಾಣ" ದಲ್ಲಿ ಇವರು ಪಂಚಾಚಾರ್ಯರ ಲ್ಲೋರ್ವರಾದ ರೇಣುಕಾಚಾರ್ಯರೇ ಎಂದು ಹೇಳುತ್ತಾನೆ. ಈ ವಿಷ ಯಗಳನ್ನೆಲ್ಲ ಚನ್ನಾಗಿ ಶೋಧಿಸಿ, ಇವೆಲ್ಲ ಒಬ್ಬನೇ ರೇವಣಸಿದ್ಧನನ್ನು ಸಂಬೋಧಿಸುವವೋ ಅಥವಾ ಶಿವಯೋಗಿಗಳೂ ಮಹಿಮಾಶಾಲಿಗಳೂ ಆದ ರೇವಣಸಿದ್ಧರು ಒಂದೇ ಶತಮಾನದಲ್ಲಿ ಅನೇಕರಿದ್ದರೋ ಹೇಗೆಂಬು ದನ್ನು ನಿರ್ಣಯಿಸಲು ನಮ್ಮ ಹತ್ತರ ಇಲ್ಲಿ ಸಾಧನಗಳಿಲ್ಲದುದರಿಂದ ಈ ವಿಷಯವನ್ನು ಇಷ್ಟಕ್ಕೇ ವಿಷಾದದಿಂದ ನಿಲ್ಲಿಸಬೇಕಾಗಿದೆ.

## ಬಸವಣ್ಣ.

ಕರ್ನಾಟಕದ ಮಹಾವಿಭೂತಿಗಳಾದ ಬಸವಣ್ಣನವರ ಉಲ್ಲೇಖವು ಇವುಗಳಲ್ಲಿ ಸ್ಪಷ್ಟವಾಗಿ ಬಂದಿದೆ. ಇಷ್ಟೇ ಅಲ್ಲ.

ಎನೆ ನೆಗಳ್ದದ್ರಿಜೆ ಬಿನ್ನಪದಿ ಶಿವ ಜಗಕ್ಕೀ ಮಾರ್ಗಮಂ ತೋರಬೇಕೆ।
ಳ್ಕೆನಲಾದ ಪ್ರಭು ನಂದಿನಾಥನ ಮೊಗಂ ನೋಡಲ್ಕೆ ಶ್ರೀ ಸಂಗಮೋ।
ಶನಪುತ್ರಂ ಬಸವಯ್ಯ ಬಂಕನದರಿಂ ಶಿವನಮುದ್ದುದೇವಂ ಜನ।
ಕ್ಕನಿಮಿತ್ತಂ ಶಿವದೇವನಾಗಿಯು ಗಣ ಶ್ರೀಪಾದಮಂ ತೋರುವೇಂ॥

(ಮಹಾದೇವರ ಶಿ. ಶಾ. ನಂ. ೨)

ಎಂಬುದರಿಂದ ಬಸವಣ್ಣನವರು ಈ ಶಿಲಾಶಾಸನದ ಕಾಲಕ್ಕೆ ನಂದಿಯ ಅವತಾರರೆಂದು ಜನರು ನಂಬುತ್ತಿದ್ದರೆಂದು ಸ್ಪಷ್ಟವಾಗು ವದು. ಈ ನಂಬುಗೆಯನ್ನೇ ಕನ್ನಡಿಗರಲ್ಲಿ ಪುಷ್ಟೀಕರಿಸಿದ ಭೀಮ ಕವಿಯು ಈ ಶಿಲಾಶಾಸನದ ಕಾಲಕ್ಕೂ ಸುಮಾರು ವರುಷ ಈಚಿನವರು ಮೇಲಾಗಿ ಪುರಾಣಿಕನು. ಪಾಪ! ಪುರಾಣಿಕರನ್ನು ಈಗಿನ ಪಂಡಿತರು ನಂಬುವ ದಿಲ್ಲ. ಅವರು ಅದ್ಭುತವಾದ ಸುಳ್ಳುಗಳನ್ನು ಸಾರುವುದರಲ್ಲಿ ಬಲು ಬಂಟರಂತೆ! ಇದು ಶಿಲಾಶಾಸನದ ಮಾತಿದ್ದುದರಿಂದ ಇಂಥ ಶಾಸನ ಗಳು ಆ ಕಾಲದಲ್ಲಿದ್ದ ಜನರ ನಂಬುಗೆಯನ್ನು ಎಷ್ಟರ ಮಟ್ಟಿಗೆ ಪುರಾ ಣಗಳು ಸತ್ಯವಾಗಿ ಹೇಳುವವೆಂಬುದನ್ನು ಕಂಡು ಹಿಡಿಯಲು ಅನು ಕೂಲವಾಗುವುದು.

"ಲಿಂಗಕ್ಕೆ ಜಂಗಮಕ್ಕೆ। ಪಿಂಗದೆ ದಾಸತ್ವ ಮಾಳ್ಪುದೇಂ ಬೆಸಸಿದನಾ।
ಸಂಗನ ಬಸವಂ ಬೆಸಸೆಮ। ನಂಗೊಂಡರ್ಚಿಸುವನುಭಯ ಲಿಂಗವ ಮುದದಿಂ॥

ಮೃಡಗಣವರ ಪ್ರಸಾದಮ। ಪಡೆದಂ ಜಗವರಿಯಲಂದು ಸಂಗನ ಬಸವಂ।
ಪಡೆದಾ ಪ್ರಸಾದ ಸಿದ್ಧಿಯು। ಕಡುವೀರ ವ್ರತದಿ ಪಡೆದನೀ ಶಿವದೇವನು॥

(ಮ. ಶಿ. ಶಾ. ೩)

ಈ ಪದ್ಯಗಳು ಅತಿಸ್ಪಷ್ಟವಾಗಿ ಸಂಗನ ಬಸವನು ಭೀಮ ಕವಿಯ ಬಸವನೆಂದೂ, ಲಿಂಗ ಜಂಗಮ ದಾಸೋಹನಿರತನೆಂದೂ ಹೇಳುವವು. ಭೀಮ ಕವಿಯ ಬಸವನ ದಾಸೋಹದ ವರ್ಣನೆಯನ್ನೂ, ಬಸವಣ್ಣನವರ "ಲಿಂಗವ ಪೂಜಿಸಿದ ಬಳಿಕ ಜಂಗಮಕ್ಕಂಜಲೇಬೇಕು. ದಕ್ಕನೆ ನುಂಗಿದಂತೆ ಬೆರತು ಕೊಂಡಿರಬೇಡ. ಬೀಗಿ ಬೆಳೆದ ಕೊನೆವಾಳೆಯಂತೆ ಬಾಗಿ ಕೊಂಡಿದ್ದರೆ ಬೇಡಿದ ಪದವಿಯನೀವ ಕೂಡಲ ಸಂಗಮದೇವಾ." (ಬ. ವ. ಭಕ್ತಿಸ್ಥಲ ೬೫. ಪಾನ ೨೮. ಹಳಕಟ್ಟಿಯವರ ಪ್ರತಿ). "ನಾನು ಗುರಪೂಜೆಗೆಂದು ಆರಂಭ ಮಾಡುವೆನು, ನಾನು ಲಿಂಗಾರ್ಚನೆಗೆಂದು ಆರಂಭ ಮಾಡುವೆನು, ನಾನು ಜಂಗಮ ದಾಸೋಹಕ್ಕೆಂದು ಸೇವೆ ಮಾಡುವೆನು, ನಾನು ಆವಕರ್ಮವನ್ನು ಮಾಡಿದೊಡೆಯು ಕರ್ಮ ಫಲ ಭೋಗವನ್ನು ನೀನೇ ಕೊಡುವಾತನೆಂಬುದನ್ನು ನಾನೇ ಬಲ್ಲೆನಯ್ಯಾ, ನೀನು ಕೊಟ್ಟ ದ್ರವ್ಯವನ್ನು ನಿಮಗೂ ನಿಮ್ಮ ಶರಣರಿಗೂ ಅಲ್ಲದೆ ಮತ್ತೊಂದು ಕಾರ್ಯಕ್ಕೆ ಉಪಯೋಗಿಸೆನಯ್ಯಾ, ನಿಮ್ಮ ಸೊಮ್ಮನ್ನು ನಿಮಗೆ ಸಲಿಸುವೆನು. ನಿಮ್ಮಾಣೆ ನಿಮ್ಮಾಣೆ ಕೂಡಲಸಂಗಮದೇವಾ." (ಹರ್ಡೇಕರ ಮಂಜಪ್ಪನವರ ಬಸವಚರಿತ್ರೆ. ಪಾನ. ೪೩) ಈ ವಚನಗಳ ತಿರುಳನ್ನು ಮೇಲಿನ ಪದ್ಯಗಳು ಬಲಪಡಿಸುವವು.

[ಮುಂದೆ ಸಾಗುವದು.]



# ಯೋಗ.

(ಲೇಖಕ:— ರಾ॥ ರಾ॥ ಮಡಿವಾಳಪ್ಪ ಸಾಸನೂರು ಮು. ಕಲಕೇರಿ ಜಿ. ವಿಜಾಪುರ.)



ಜಗತ್ತಿನ ಎಲ್ಲ ಧಾರ್ಮಿಕ ಗ್ರಂಥಗಳಲ್ಲಿಯೂ ದೈವೀ ಭಾವನೆಯಿಂದ ಪ್ರೇರಿತರಾದ ಗುರುಗಳ, ಭವಿಷ್ಯದ್ವಾದಿಗಳ, ಸಾಧುಗಳ ಮತ್ತು ಸತ್ಯದೃಷ್ಟ್ರುಗಳ ಜೀವನ ಚರಿತೆಗಳಲ್ಲಿ ಅನೇಕ ಅದ್ಭುತ ಸಂಗತಿಗಳ ಹಾಗು ಶಕ್ತಿಗಳ ವರ್ಣನೆಗಳು ದೊರೆಯುತ್ತವೆ. ಅವುಗಳಲ್ಲಿ ಕೆಲವು ಭಾಗವು ಅತಿಶಯೋಕ್ತಿಯೆಂದು ಬಿಡಲ್ಪಟ್ಟರೂ ನಿಜಾಂಶವು ಸಹ ಅವುಗಳಲ್ಲಿ ಇರಲೇ ಬೇಕು. ಪ್ರಾಚೀನ ಕಾಲದಿಂದ ಪ್ರತಿಯೊಂದು ಯುಗದಲ್ಲಿಯೂ, ಪ್ರತಿಯೊಂದು ದೇಶದಲ್ಲಿಯೂ, ಎರಡನೆಯವರ ವಿಚಾರಗಳನ್ನು ಅರಿಯುವಂಥ ಭಾವೀ ಸಂಗತಿಗಳನ್ನು ತಿಳಿಯುವಂಥ ಎಷ್ಟೋ ಜನರ ಉದಾಹರಣೆಗಳು ನಮ್ಮ ದೃಷ್ಟಿಗೆ ಬೀಳುತ್ತವೆ. ಆದರೆ ಇವರಲ್ಲಿಯ ಬಹು ಜನರು ತಮ್ಮ ವಿಶಿಷ್ಟ ಶಕ್ತಿಯ ಕಾರಣಗಳನ್ನು ತಿಳಿದಿರಲಿಲ್ಲ. ಅದಕಾರಣ ಅವರು ಅವುಗಳನ್ನು ದೇವರು ಅಥವಾ ಭೂತಗಳು ಇವೇ ಮೊದಲಾದ ಎಷ್ಟೋ ಹೊರಗಿನ ಪ್ರಾಣಿಗಳ ಪ್ರೇರಣೆಯ ಪರಿಣಾಮವೆಂದು ತಿಳಿ ಹೇಳುತ್ತಿದ್ದರು.

ಅವರಲ್ಲಿ ಕೆಲವರು ಈ ಹೆಚ್ಚಿನ ಸಂಗತಿಗಳನ್ನು ಹೊರಗೆಡಹುವದಕ್ಕೆ ತಮ್ಮನ್ನೇ ಕಾರಣೀಭೂತರನ್ನಾಗಿ ಮಾಡಿರುವರೆಂದೂ ತಾವು ಈಶ್ವರನ ಅಥವಾ ಯಾವದೊಂದು ವಿಶಿಷ್ಟ ದೇವತೆಯ ಪ್ರತಿನಿಧಿಯೆಂದು ಪೂಜಿಸಲ್ಪಡತಕ್ಕದ್ದೆಂದೂ ಹೇಳುತ್ತಿದ್ದರು. ಕ್ರಿಸ್ತೀ ಜನರು ಏಸೂಕ್ರಿಸ್ತನನ್ನೂ, ಮಹಮ್ಮದೀಯರು ಮಹಮ್ಮದನನ್ನೂ, ಬೌದ್ಧರು ಬುದ್ಧನನ್ನೂ, ಜನ ಸಾಮಾನ್ಯರಿಂದ ಬೇರೆ ಎಂದು ತಿಳಿಯುವಂತೆಯೇ ಈ ಅಮಾನುಷ ಶಕ್ತಿಯಿಂದೊಡಗೂಡಿದವರೂ ದೈವಿಕ ಅಪವಾದಗಳೆಂದು ಜನರು ತಿಳಿಯುತ್ತಿದ್ದರು. ಎಷ್ಟೋ ಜನರು ಇವರಿಗೆ 'ಮಾಂತ್ರಿಕ' ರೆಂದೂ ಅಥವಾ 'ಜಾದೂಗಾರ' ರೆಂತಲೂ ಅನ್ನುತ್ತಿದ್ದರು.

ಈ ಅಮಾನುಷ ಕೃತಿಗಳ ಸಾಧನೆಗಳು ಮಾತ್ರ ಎಂದೂ ಬರೆಯಲ್ಪಡದೆ, ಗುರುವಿನಿಂದ ಶಿಷ್ಯನಿಗೆ ಬಾಯಿಯಿಂದಲೇ ಹೇಳಲ್ಪಡುತ್ತಿದ್ದವು. ಈ ರೀತಿಯಿಂದ ಅವು ಪರಂಪರಾಗತವಾಗಿ ಗೌಪ್ಯರೀತಿಯಲ್ಲಿಯೇ ಇದ್ದವು. ಆದಕಾರಣದಿಂದಲೇ ಪ್ರಾಚೀನ ಕಾಲದಲ್ಲಿ ಇಷ್ಟು ಗುಪ್ತ ಸಂಘಗಳು ಸ್ಥಾಪಿತವಾದವು. ಅವುಗಳ ಉದ್ದೇಶವಾದರೂ ಹಲವು ತರದ ಶಿಕ್ಷಣದಿಂದ ಹಲವು ಬಗೆಯ ಶಕ್ತಿಗಳನ್ನು ಬೆಳಿಸುವದಾಗಿತ್ತು. ಇಜಿಪ್ಷಿಯನ್ಸ್, ಈಶನ್ಸ್, ನಾಸ್ಟಿಕ್ಸ್, ಮ್ಯಾನಿಚೇನ್ಸ್, ನಿಯೋಪ್ಲೆಟೋನಿಸ್ಟ್ಸ್ ಮತ್ತು ತಮೋಯುಗದ ಕ್ರಿಸ್ತ ಜಾದುಗಾರರು, ಗುಪ್ತ ಸಂಘಗಳನ್ನು ಕಟ್ಟಿದ್ದರು. ಅವುಗಳಲ್ಲಿ ಕೆಲವು ಇನ್ನೂ ಇರುವವು. ಉದಾ:— ಮೇಸನಿಕ್ ಲಾಜ್; ಈ ಸಂಘದ ಸಭಾಸದರಲ್ಲಿ ಒಬ್ಬನೂ ತಮ್ಮ ಗುಪ್ತ ಶಿಕ್ಷಣವನ್ನು ಹೊರಗೆಡಹಲಿಲ್ಲ. ಅಥವಾ ತಮ್ಮ ಸಾಧನೆಗಳ ಸಾಮಂಜಸ ವಿಚಾರಗಳನ್ನೊಳಗೊಂಡ ಯಾವ ಪುಸ್ತಕಗಳನ್ನೂ ಬರೆಯಲಿಲ್ಲ. ಆದುದರಿಂದ ಹೆಚ್ಚಿನ ಶಕ್ತಿಗಳ ಸಾಧನೆಯಲ್ಲಿ ಪೆಚ್ಚಾಗಿ ಹೆಚ್ಚಳವನ್ನು ಹೊಂದಿದವರು ಅನೇಕರಿದ್ದರೂ ಈ ಅಮಾನುಷ ಕೃತಿಗಳ ನಿಜವಾದ ಅರಿವು ಪಾಶ್ಚಾತ್ಯ ರಾಷ್ಟ್ರಗಳಿಗೆ ಆಗಲಿಲ್ಲ. ಇದಲ್ಲದೆ ಯಾವದೊಂದು ಪುಸ್ತಕರೂಪವಾಗಿಯೂ ಪರಿಣಮಿಸಲಿಲ್ಲ.

ಇದಕ್ಕೆ ವಿರುದ್ಧವಾಗಿ ಪ್ರಾಚೀನ ಹಿಂದುಸ್ತಾನದಲ್ಲಿ ಪಾಶ್ಚಾತ್ಯ ರಾಷ್ಟ್ರಗಳಲ್ಲಿಯಂತೆ (ಮಾಂತ್ರಿಕರೂ, ಜಾದೂಗಾರರೂ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ರಾಜರಿಂದ ಶಿಕ್ಷಿಸಲ್ಪಡುತ್ತಿದ್ದರು.) ಈ ತರಹದ ಕೃತಿಗಳಿಂದ ಜೀವಕಳಕೊಳ್ಳುವ ಭಯವಿಲ್ಲದ್ದರಿಂದ ಇಲ್ಲಿಯ ರೀತಿಯು ತೀರ ಬೇರೆ ತರಹದ್ದಾಗಿರುವದು. ಪ್ರತಿಯೊಬ್ಬ ಹಿಂದುವು ತನ್ನ ಧಾರ್ಮಿಕ ಕರ್ತವ್ಯದ ಭಾಗವೆಂದು ತಿಳಿದು, ಅವುಗಳಲ್ಲಿಯ ಕೆಲವನ್ನು ಪ್ರತಿದಿನ ಸಾಧನೆಯಿಂದ ಬೆಳಿಗೊಡುವದು ಅವಶ್ಯವಾಗಿತ್ತು, ಹೆಚ್ಚಿನ ಸತ್ಯಗಳ ಜ್ಞಾನಕ್ಕೋಸುಗ ಎದುರಾಗಿ ನಿಂತು ಹೆಣಗಾಡುವದು ಅವರ ಕರ್ತವ್ಯವಾಗಿತ್ತು. ಓಣಿಗಳಲ್ಲಿಯೂ, ಸಂತೆಪೇಟೆಗಳಲ್ಲಿಯೂ, ರಾಜಸಭೆಗಳಲ್ಲಿಯೂ, ರಣರಂಗದಲ್ಲಿಯೂ ಈ ಬಗೆಯ ಜ್ಞಾನವನ್ನು ಪಡೆಕೊಂಡ ಎಷ್ಟೋ ಜನರಿದ್ದರು. ಆದರೆ ಅವರೆಲ್ಲರು ತಮ್ಮ ಅನುಭವವನ್ನು ಹೆಚ್ಚಿನ ಎಚ್ಚರಿಕೆಯಿಂದ ವರ್ಗೀಕರಿಸಿ ಅದರ ಆಧಾರದಿಂದ ಯೋಗ ಶಾಸ್ತ್ರವನ್ನು ನಿರ್ಮಿಸಿದರು.

ಈ ಪ್ರಕಾರ ಉಳಿದ ಎಲ್ಲ ಶಾಸ್ತ್ರಗಳಂತೆ ಯೋಗ ಶಾಸ್ತ್ರವಾದರೂ ಅನುಭವದ ತಳಹದಿಯ ಮೇಲೆ ಕಟ್ಟಲ್ಪಟ್ಟಿಪ್ಪೆಂಬುವದು ನಮಗೆ ಕಂಡು ಬರುತ್ತದೆ. ಅವರು ಉಪಯೋಗಿಸಿದಂಥ ಬಗೆಯಾದರೂ ಪ್ರಕೃತಿಯ ಗುಣಧರ್ಮಗಳನ್ನು ಹುಡುಕುವಾಗ ಆಧುನಿಕ ವೈಜ್ಞಾನಿಕರು ಉಪ ಯೋಗ ಮಾಡುವಂತಹ ಅಂದರೆ ನಿರೀಕ್ಷಣ ಆ ಮೇಲೆ ಪ್ರಯೋಗ. ಈ ರೀತಿಯು ಸಂಪೂರ್ಣವಾಗಿ ಹೊಸದೆಂದು ಪಾಶ್ಚಿಮಾತ್ಯರು ಎಣಿಸು ತ್ತಾರೆ. ಆದರೆ ನಿಜವಾಗಿ ಬಹುಕಾಲದ ಹಿಂದೆಯೇ ಭರತಖಂಡದ ಋಷಿವರ್ಯರು ಅದನ್ನು ಕಂಡು ಹಿಡಿದದ್ದಲ್ಲದೆ ಪ್ರಚಾರದಲ್ಲಿ ಸಹ ತಂದರು. ಸೂಕ್ಷ್ಮ ನಿರೀಕ್ಷಣೆ ಮತ್ತು ಸತತ ಪ್ರಯೋಗಗಳಿಂದ ಸೃಷ್ಟಿಯ ಸೂಕ್ಷ್ಮ ಶಕ್ತಿಗಳನ್ನು ಶಾರೀರಿಕ ಮಾನಸಿಕ ಮತ್ತು ಆತ್ಮಿಕ ನಿಯಮ ಗಳನ್ನು ಹುಡುಕಿ ತೆಗೆದರು. ಈ ಪ್ರಕಾರ ತಮ್ಮ ಅನುಭವ ಮತ್ತು ನಿರೀಕ್ಷಣೆಗಳಿಂದ ದೊರಕಿಸಿದ ಸತ್ಯಗಳನ್ನು ಅವರು ಗ್ರಂಥರೂಪವಾಗಿ ಬರೆದಿಟ್ಟರು. ಸಮಾಜಕ್ಕೆ ತಿಳಿ ಹೇಳಿದರು. ಮತ್ತು ಶಿಷ್ಯವೃಂದಕ್ಕೆ ಮನ ವರಿಕೆ ಮಾಡಿಕೊಟ್ಟರು. ಆತ್ಮನ ಅಥವಾ ಪರಮಾತ್ಮನ ವಿಷಯಕ್ಕೆ ಏನೊಂದು ಊಹಿಸುವ ಪೂರ್ವದಲ್ಲಿ ಅದರ ಅರಿವನ್ನು ಅವರು ಮಾಡಿ ಕೊಂಡಿರುತ್ತಿದ್ದರು. ಸಾಧಕನಿಗೆ ಏನೊಂದು ಹೇಳುವ ಪೂರ್ವದಲ್ಲಿ ತಾವು ಸ್ವತಃ ಅದನ್ನು ಸಾಧಿಸಿ ನೋಡುತ್ತಿದ್ದರು. ಮತ್ತು ಸಾಧನೆ ಯಿಂದ ನಿಯಮಿತ ಪರಿಣಾಮಗಳನ್ನು ಕಂಡು ಹಿಡಿಯುತ್ತಿದ್ದರು.

ಬಹುಕಾಲದಿಂದ ಭರತಖಂಡದೊಳಗೆ ಸೃಷ್ಟಿ ಸಾಮ್ರಾಜ್ಯದಲ್ಲಿ ನಡೆ ಯಿಸಿದ ಶೋಧನೆಯು ಅನೇಕ ಸತ್ಯಾನ್ವೇಷಿಗಳ ಅನಿವಾರ ಪ್ರಯತ್ನ ದಿಂದ ಆರ್ಯಧರ್ಮವೆಂಬ ಸಾಧಾರಣ ಹೆಸರಿನಿಂದ ವರ್ಗೀಕರಿಸಲ್ಪ ಡುವ ಅನೇಕ ವಿಜ್ಞಾನ ಶಾಸ್ತ್ರಗಳು, ತತ್ವಜ್ಞಾನ ಗ್ರಂಥಗಳು, ಮನೋ ವಿಜ್ಞಾನ ಪುಸ್ತಕಗಳೇ ಮೊದಲಾದ ರೂಪಗಳಲ್ಲಿ ಪರಿವರ್ತನೆಯನ್ನು ಹೊಂದಿತು. ಧರ್ಮವೆಂಬುದು ಇವೆಲ್ಲವುಗಳನ್ನು ಒಳಗೊಂಡಿತ್ತು. ಯಾಕಂ ದರೆ ಭರತಖಂಡದೊಳಗೆ ಯಾವ ಕಾಲದಲ್ಲಿಯೂ ಧರ್ಮವು ಭಿನ್ನ ಭಿನ್ನ ಶಾಖೆಗಳಾಗಿ ವಿಭಾಗಿಸಲ್ಪಟ್ಟಿಲ್ಲ. ಅಥವಾ ದಿನದ ವ್ಯವಹಾರದಿಂದ ಬೇರೆ ಯಾಗಿಲ್ಲ. ಆತ್ಮಿಕ ಸುಧಾರಣೆಗೋಸುಗ ಯಾವನೊಬ್ಬ ವ್ಯಕ್ತಿಯು ದಿನದ ವ್ಯವಹಾರದಲ್ಲಿ ಉಪಯೋಗ ಮಾಡಿಕೊಳ್ಳುವ ನಿಯಮ ಬದ್ಧ ತತ್ವ ಗಳೇ 'ಯೋಗ' ವೆಂಬ ಹೆಸರನ್ನು ಹೊಂದಿವೆ.

'ಯೋಗ' ವೆಂಬುದು ಧರ್ಮದ ಅನುಭವಾತ್ಮಕ ಭಾಗವನ್ನು ಸೂಚಿಸುವದೊಂದು ಸಂಸ್ಕೃತ ಶಬ್ದವು. ಸಂಪೂರ್ಣ ಆರೋಗ್ಯ ಮತ್ತು ನೈತಿಕ, ಆತ್ಮಿಕ ಪೂರ್ಣತೆಗಳ ಸಾಧನೆಗಳು, ನಮ್ಮ ನೈತಿಕ ಮತ್ತು ಶಾರೀರಿಕ ಪ್ರಕೃತಿಯನ್ನವಲಂಬಿಸಿರುತ್ತವೆ. ಈ ಪ್ರಕೃತಿಯ ನಿಯಮಗಳನ್ನು ಅನುಸರಿಸುವಂತೆ ನಮ್ಮನ್ನು ಮುಂದು ಮಾಡುವದೇ ಯೋಗದ ಮೊದಲನೆಯ ಸಂಬಂಧ, ಯೋಗ ಶಬ್ದವು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಬಹು ತಪ್ಪಾದ ಅರ್ಥದಲ್ಲಿ ಉಪಯೋಗಿಸಲ್ಪಡುತ್ತದೆ. ಎಷ್ಟೋ ಲೇಖಕರು ಇದನ್ನು ಗಾರುಡಿಗತನ ಸುಷುಪ್ತಿವಿದ್ಯ, ಹಿಪ್ನಾಟಿಜಮ್, ಕಪಟತಂತ್ರ ಇವೇ ಮೊದಲಾದ ತೀರ ತಪ್ಪಾದ ಅರ್ಥಗಳಲ್ಲಿ ಉಪಯೋಗಿಸಿದ್ದಾರೆ. ಯೋಗ ಮಾಡುವವನು ಯೋಗಿಯು; ಆದರೆ ಯೋಗವೆಂಬ ಶಬ್ದವನ್ನು ಕೇಳಿದೊಡನೆ ಅವರಿಗೆ ಯಾವನೊಬ್ಬ ಗಾರುಡಿಗನ, ತಂತ್ರಗಾರನ, ಫಕೀರನ ಅಥವಾ ಜಾದೂ ಸಾಧನೆ ಮಾಡುವವನ ನೆನಪಾಗುತ್ತದೆ. ಈ ತರದ ತಪ್ಪು ತಿಳುವಳಿಕೆಯು ಬಳಕೆಯಲ್ಲಿ ಬರಬೇಕಾದರೆ 'ಥಿಯಾಸಾಫಿಸ್ಟ್' ಸಂಘದವರೇ ಮುಖ್ಯ ಕಾರಣರು. ಆದರೆ ಭಾರತೀಯರ ಧರ್ಮಗ್ರಂಥಗಳನ್ನು ಉದಾಹರಣಾರ್ಥ ಭಗವದ್ಗೀತೆಯನ್ನು ಅಭ್ಯಾಸ ಮಾಡಿದ ಪ್ರತಿಯೊಬ್ಬನಿಗೆ ಅದರಲ್ಲಿಯ ಪ್ರತಿಯೊಂದು ಅಧ್ಯಾಯವು ಅಂತಿಮ ಸತ್ಯವನ್ನು ತಿಳಿಸುವದಕ್ಕಾಗಿಯೂ, ಅತ್ಯುಚ್ಚ ಜ್ಞಾನ ಲಾಭಕ್ಕೋಸುಗವಾಗಿಯೂ ಇರುವದೆಂದು ಹಾಗು ಯೋಗಿಯೆಂದರೆ ಬೇರೆ ಬೇರೆ ಸಾಧನೆಗಳಿಂದ ಧರ್ಮದ ಉಚ್ಚತಮ ಆದರ್ಶವನ್ನು ಮುಟ್ಟಿದವನಿರುವನೆಂದು ಹೊಳೆಯದೆ ಇರಲಾರದು. ಭಗವದ್ಗೀತೆಯಂತೆ 'ಆತ್ಮ' ಮತ್ತು 'ಪರಮಾತ್ಮ' ಇವುಗಳ ಐಕ್ಯವೇ ಉಚ್ಚತಮ ಆದರ್ಶವು.

ಹೀಗಿದ್ದರೂ ಹಿಂದೂ ಲೇಖಕರು ಎಷ್ಟೋ ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗಿಸಿದ್ದಾರೆ:— ೧. ಎರಡು ಬಾಹ್ಯ ಪದಾರ್ಥಗಳ ಸಂಯೋಗ, ೨. ಸಾಧಾರಣ ಕಾರ್ಯವನ್ನು ಮಾಡುವಂತಹ ಕಾರಣಗಳ ಒಳಹೊದಿಕೆ, ೩. ಯಾವನೊಬ್ಬ ಸೈನಿಕನ ಅಥವಾ ಉದ್ಯೋಗಸ್ಥನ ನಿಯಮಿತ ಉಡುಪು, ೪. ಯಾವದೊಂದು ಸತ್ಯಾನ್ವೇಷಣೆಗೆ ಅವಶ್ಯವಾದ ಸದಸದ್ವಿವೇಕ ಬುದ್ಧಿ ಮತ್ತು ತರ್ಕಶಕ್ತಿ, ೫. ಯಾವದೊಂದು ವಿಶಿಷ್ಟವಿಚಾರವನ್ನೊಯ್ಯುವಂತೆ ಮಾಡುವ ಧ್ವನಿಶಕ್ತಿ, ೬. ಹತ್ತಿರಿದ್ದುವದರ ರಕ್ಷಣೆ, ೭. ಒಂದು ಪದಾರ್ಥವನ್ನು ಇನ್ನೊಂದಾಗಿ ಮಾಡೋಣ, ೮ ಒಬ್ಬ

ಆತ್ಮನೊಡನೆ ಮತ್ತೊಬ್ಬನ ಸಂಯೋಗ ಅಥವಾ ಆತ್ಮ ಪರಮಾತ್ಮರ ಐಕ್ಯ, ೯. ಯಾವದೊಂದು ಪದಾರ್ಥದೆಡೆಗೆ ಹರಿಯುವ ವಿಚಾರ ಪ್ರವಾಹ. ೧೦. ಧ್ಯಾನ ಧಾರಣೆಗಳಿಂದ ಎಲ್ಲ ಕಾರ್ಯಗಳ ನಿರೋಧ; ಈ ರೀತಿಯಲ್ಲಿ ಒಂದೇ ಶಬ್ದದ ಬೇರೆ ಬೇರೆ ವ್ಯಾಖ್ಯೆಗಳಲ್ಲಿ ಎಷ್ಟೋ ತರದ ಶಾಸ್ತ್ರಗಳ ಶಾಖೋಪಶಾಖೆಗಳು ಒಳಗೊಂಡಿವೆ. ನಿಜವಾಗಿ ಈ ಶಬ್ದವು ಸೃಷ್ಟಿಯ ಎಲ್ಲ ಭಾಗವನ್ನು ಆಕ್ರಮಿಸಿದೆ. ಈ ಶಬ್ದದ ಅಕ್ಷರಶಃ ಅರ್ಥದ ವಿಚಾರವನ್ನು ಮಾಡಿದರೆ ಇದರ ವ್ಯಾಪಕತೆಯ ಉದ್ದೇಶವು ನಿಮಗೆ ತಿಳಿಯುವದು.

'ಯುಜ್' ಅಂದರೆ ಕೂಡಿಸು ಎಂಬ ಸಂಸ್ಕೃತ ಧಾತುವಿನಿಂದ ಈ ಶಬ್ದವು ಬಂದಿದೆ. ಇಂಗ್ಲಿಷ ಭಾಷೆಯಲ್ಲಿಯ '*Yove*' ಎಂಬ ಶಬ್ದವಾದರೂ ಇದೇ ಧಾತುವಿನಿಂದ ಬಂದಿದೆ. 'ಯುಜ್' ಧಾತುವಿನ ಅರ್ಥವು, ಒಂದನ್ನು ಮತ್ತೊಂದಕ್ಕೆ ಕೂಡಿಸೋಣವೆಂದು ಆಗುತ್ತದೆ. ಲಕ್ಷ್ಯವಸ್ತುವಿನಂತೆ ಯೋಗಾಭ್ಯಾಸಕ್ಕೆ ಬೇಕಾಗುವ ಶ್ರಮವಾದರೂ ಮಾನಸಿಕ ಅಥವಾ ಶಾರೀರಿಕ ಇರುವದು. (ಗುರಿಯು ಬೇರೆಯಾದಂತೆ ಅದನ್ನು ಸಾಧಿಸುವ ಬಗೆಯಾದರೂ ಬೇರೆಯಾಗುವದು.) ಪೂರ್ಣ ಆರೋಗ್ಯ ಸಾಧನೆಯೇ ನಮ್ಮ ಗುರಿಯಾಗಿದ್ದರೆ ಎಷ್ಟೋ ಸಾಧನೆಗಳಿಂದ ಇದನ್ನು ಸಾಧಿಸುವ ಮಾನಸಿಕ ಮತ್ತು ಶಾರೀರಿಕ ಯತ್ನಗಳಿಗೆ ಯೋಗವೆನ್ನುತ್ತೇವೆ. ಇದರಂತೆಯೇ ಮಾನಸಿಕ ಶಕ್ತಿಗಳ ಬೆಳವಣಿಗೆಯೇ ಉದ್ದೇಶವಿದ್ದರೂ ಅದಕ್ಕೆ ಬೇಕಾಗುವ ಹೆಣಗಾಟಗಳಿಗೆ ಯೋಗವೆನ್ನುತ್ತೇವೆ. ಆತ್ಮಸಂಯಮನ, ಈಶ್ವರನೊಡನೆ ಆತ್ಮನ ಸಂಯೋಗ, ಆಧ್ಯಾತ್ಮಿಕ ಪೂರ್ಣತೆ ಇವುಗಳ ಸಿದ್ಧಿಗೋಸುಗ ಅವಶ್ಯವಾದ ನೈತಿಕ ಶಿಕ್ಷಣ ಈ ಅರ್ಥದಲ್ಲಿಯಾದರೂ ಯೋಗ ಶಬ್ದವು ಉಪಯೋಗಿಸಲ್ಪಡುತ್ತದೆ. ಯೋಗಶಾಸ್ತ್ರದ ಭಿನ್ನ ಭಿನ್ನ ತರಹಗಳನ್ನೊಳಗೊಂಡ ಮತ್ತು, ಯೋಗಸಾಧನೆಯಿಂದ ಸಾಧ್ಯವಾದ ಅನೇಕ ಆದರ್ಶಗಳಿಂದ ತುಂಬಿದ ಎಷ್ಟೋ ಪುಸ್ತಕಗಳು ರಚಿಸಲ್ಪಟ್ಟಿರುತ್ತವೆ.

ಯೋಗದ ಹಾದಿಯನ್ನು ಹಿಡಿಯಲಿಚ್ಛಿಸುವ ಪ್ರತಿಯೊಬ್ಬನಿಗೆ ತಾಳ್ಮೆ ಮತ್ತು ದೃಢ ಸಂಕಲ್ಪಗಳು ಅತ್ಯವಶ್ಯವಾದವುಗಳು. ತಾಳ್ಮೆ ಇಲ್ಲದವರು ಸತ್ಯ ಜ್ಞಾನವನ್ನು ಸಾಧಿಸಿಕೊಳ್ಳಲರಿಯರು. ಶೋಧಕ ಬುದ್ಧಿಯಿಂದ ಅಥವಾ ಕ್ಷಣಿಕ ಉತ್ಸಾಹತೆಯಿಂದ ಪ್ರೇರಿತರಾದವರು ಒಳ್ಳೇ ಪರಿಣಾ

ಮಗಳನ್ನು ಕಾಣಲಾರರು. ಈ ತಪ್ಪು ಅವರದೇ. ಅದನ್ನು ಗುರುಗಳ ತಲೆಯ ಮೇಲೆ ಹೊರಿಸಲಾಗದು. ಅದೇ ನಿಯಮಗಳನ್ನು ಒಳ್ಳೇ ತಿಳು ವಳಿಕೆಯಿಂದ ಮತ್ತು ಯೋಗ್ಯ ರೀತಿಯಿಂದ ಮನವಿಟ್ಟು ಮಾಡಿದರೆ ಅದರಿಂದ ಅಚ್ಚರಿಗೊಳ್ಳುವ ಪರಿಣಾಮಗಳು ಕಂಡು ಬರುವವು. ಶಾರೀ ರಿಕ ಮತ್ತು ಮಾನಸಿಕ ಆಚರಣೆಗಳಲ್ಲಿ ಹಾದೀ ತೋರಿಸುವಂಥ ಸಜೀವ ಶಿಕ್ಷಕನ ಶಿಕ್ಷಣವನ್ನು ಅನುಸರಿಸುವ ಪ್ರತಿಯೊಬ್ಬ ವಿದ್ಯಾರ್ಥಿಗೆ ಒಳ್ಳೇ ಪರಿಣಾಮಗಳು ಕಂಡು ಬರುತ್ತವೆ. ಯೋಗಾಭ್ಯಾಸ ಮಾಡಲಿಚ್ಛಿಸುವ ವರನ್ನು ಮೂರು ಭಾಗಗಳಾಗಿ ವಿಭಾಗಿಸಬಹುದು.

೧. ಹುಟ್ಟು ಯೋಗಿಗಳು:— ಹಿಂದಿನ ಜನ್ಮದಲ್ಲಿ ಯೋಗವನ್ನು ಆಚರಿಸಿ, ಈಗ ಜನ್ಮ ತಾಳಿದ ಕೆಲವರು ಬಾಲ್ಯದಿಂದಲೇ ಅಮಾನುಷ ಕೃತಿಗಳನ್ನು ಹೊರಗೆಡಹುತ್ತಾರೆ. ಅವರ ಸ್ವಾಭಾವಿಕ ಒಲವು ಶುದ್ಧ ಆಚರಣೆಯ ಕಡೆಗಿರುತ್ತದೆ. ಯಾಕಂದರೆ ಯೋಗ್ಯ ಚರಿತಾರ್ಥ ಮತ್ತು ನಿರ್ದೋಷ ವಿಚಾರಗಳೇ ಅವರಲ್ಲಿ ಹೆಚ್ಚಳವನ್ನು ಪಡೆದಿದ್ದು ಮನ ಸ್ಸನ್ನು ಅಂಕೆಯಲ್ಲಿ ಇಟ್ಟುಕೊಂಡಿರುವರು. ವಿಷಯ ಸುಖಗಳು ಮತ್ತು ಸಾಧಾರಣ ಜನರ ಮನಸ್ಸನ್ನು ಮರುಳುಗೊಳಿಸುವ ವಿಷಯಗಳು ಅವ ರಲ್ಲಿ ಎಡೆಗೊಂಡಿರುವದಿಲ್ಲ. ಜೀವಿತದ ಎಲ್ಲ ಸುಖ ಸಂಪತ್ತಿನಿಂದ ಸುತ್ತು ಗಟ್ಟಲ್ಪಟ್ಟಿದ್ದರೂ ಅವರು ಗುರುತಿಲ್ಲದ ನಾಡಿನಲ್ಲಿ ಪರಕೀಯರಿದ್ದಂತೆ ಇರುತ್ತಾರೆ. ಇಂಥ ವ್ಯಕ್ತಿಗಳ ಮಾನಸಿಕ ಸ್ಥಿತಿಯನ್ನು ಕಂಡು ಹಿಡಿಯು ವದು ಕಷ್ಟದ ಮಾತು. ಅವರನ್ನು ವೈದ್ಯರೆಡೆಗೆ ಕರೆತಂದು ಹುಚ್ಚಿನ ಔಷಧೋಪಚಾರಗಳನ್ನು ಮಾಡಿಸಿದರೆ ಏನೂ ಗುಣ ತೋರದೆ, ಅದಕ್ಕೆ ವಿಪರೀತವಾಗಿ ಕೆಡಕು ಪರಿಣಾಮವೇ ಕಂಡು ಬರುವದು. ಆಕರ್ಷಣ ಶಕ್ತಿಯಿಂದ ಅವರು ಒಂದಿಲ್ಲೊಂದು ದಿನ ಯಾವನೊಬ್ಬ ಯೋಗಿಯ ಸಹವಾಸವನ್ನು ಪಡೆಯುವರು. ತಮ್ಮ ಆಂತರಿಕ ಭಾವನೆಯು ಹಂಬ ಲಿಸುತ್ತಿದ್ದುದನ್ನು ಅವನಲ್ಲಿ ಕಂಡು ಹಿಡಿದು, ಸುಖ ಸಮಾಧಾನವನ್ನು ಹೊಂದುವರು. ಆ ಯೋಗಿಯ ಶಿಕ್ಷಣವು ಅವರ ಮನಸಿನ ಮೇಲೆ ಅಚ್ಚೊತ್ತಿದಂತೆ ಆಗುತ್ತದೆ. ಆ ಯೋಗಿಯ ಮೇಲ್ವಿಚಾರಣೆಯಿಂದ ತಮ್ಮ ಯೋಗಾಭ್ಯಾಸವನ್ನು ಪ್ರಾರಂಭ ಮಾಡುತ್ತಾರೆ. ಈ ಅಧ್ಯಯ ನವು ಅವರಿಗೆ ಸುಲಭವೂ, ಸ್ವಾಭಾವಿಕವೂ, ಆಗಿ ತೋರಿ ಬೇಗನೆ ಅತ್ಯುತ್ತಮ ಸಿದ್ಧಿಗಳನ್ನು ಹೊಂದುವರು. ಈ ಪ್ರಕಾರ ಅವರು ತಮ್ಮ ಪೂರ್ವ

ಜನ್ಮದಲ್ಲಿ ಯೋಗವನ್ನು ಎಲ್ಲಿಗೆ ಬಿಟ್ಟಿದ್ದರೋ ಅಲ್ಲಿಂದಲೇ ಬಾಲ್ಯದಿಂದ ಆರಂಭ ಮಾಡುತ್ತಾರೆ. ಹಾದಿಯಲ್ಲಿ ತಮಗೆ ಅಡರುವ ಎಡರುಗಳನ್ನು ಎದೆಗೊಟ್ಟು ಕಾದಿ, ಮನಮುಟ್ಟಿ ದುಡಿದು ತೀವ್ರವಾಗಿ ಮತ್ತು ನಿಯಮಿತವಾಗಿ ಅಧ್ಯಾತ್ಮ ಜೀವನದ ಮೇಲುದಾರಿಯನ್ನು ಮುಟ್ಟುವರು. ಜಗತ್ತಿನಲ್ಲಿಯ ಯಾವ ಶಕ್ತಿಯೂ ಅವರನ್ನು ತಡೆಯದು. ಯಾಕಂದರೆ ಜ್ಞಾನಾಭಿಲಾಷೆಯೇ ಅವರಲ್ಲಿ ಅಷ್ಟು ದಟ್ಟವಾಗಿರುವದು.

೨. ಅರ್ಧ ಪ್ರಬುದ್ಧ ಆತ್ಮಗಳು:— ಮುಂದಿನ ಅನುಭವದ ಹಂಬಲದಿಂದ ಸತ್ಯ ಮಾರ್ಗದ ಶೋಧನೆಗೋಸುಗ ಇವರು ಎಷ್ಟೋ ಬಗೆಯಾಗಿ ಹೆಣಗಾಡುವರು. ಅವರು ಪ್ರತಿಯೊಂದು ಮೆಟ್ಟಿಲನ್ನು ಶೋಧಕ ಬುದ್ಧಿಯಿಂದ ನಿರೀಕ್ಷಿಸಿ ಸತತ ಪ್ರಯೋಗ ಮಾಡುವದರಲ್ಲಿಯೇ ಬಹು ಶಕ್ತಿಯನ್ನೂ ಎಷ್ಟೋ ವೇಳೆಯನ್ನೂ ವೆಚ್ಚ ಮಾಡುತ್ತಾರೆ. ಈ ಪ್ರಕಾರ ಪೂರ್ವದಲ್ಲಿ ಪಡೆದ ಸಂಸ್ಕಾರದಿಂದೊಡಗೂಡಿದ ಇಂಥ ಅರ್ಧ ಪ್ರಬುದ್ಧರು ದೈವಯೋಗದಿಂದ ಯೋಗಿಗಳ ಸಹವಾಸವನ್ನು ಹೊಂದಿದರೆ, ದೃಢನಿಶ್ಚಯ ಮತ್ತು ತಿಳುವಳಿಕೆಗಳಿಂದ ಈ ಜನ್ಮದಲ್ಲಿಯೇ ಸಿದ್ಧಿಯನ್ನು ಪಡೆಯುವರು. ಆದರೆ ಮೊದಲನೆಯ ತರಗತಿಯವರಿಗಿಂತ ಇವರು ಮುಂದುವರಿಯುವದು ಸಾವಕಾಶ.

೩. ಸತ್ಯಶೋಧನೆಯ ಕಾರ್ಯವನ್ನು ಹಾಗು ಯೋಗಾಚರಣೆಯನ್ನು ಈ ಜನ್ಮದಲ್ಲಿಯೇ ಮೊದಲು ಮಾಡುವ ಅಜಾಗ್ರತರು ಈ ವರ್ಗದಲ್ಲಿ ಸೇರುತ್ತಾರೆ. ಅವರು ಬಾಲ್ಯದಿಂದಲೇ ನಿರ್ವಿರೋಧವಾಗಿ, ವಿಷಯವಾಸನೆಯಿಂದ ಜಗ್ಗಲ್ಪಡುತ್ತಾರೆ. ಅವರು ಯೋಗಾಚರಣೆಯನ್ನು ಮಾಡಹತ್ತಿದರೆ ಅದರ ನಿಯಮಗಳನ್ನು ಅನುಸರಿಸುವದು ಕಷ್ಟವಾಗಿ ಎಷ್ಟೋ ಎಡರುಗಳಿಗೀಡಾಗುವರು. ಅವರ ಪರಿಸ್ಥಿತಿಯಾದರೂ ಸಾಧನೆಗೆ ಅನುಕೂಲವಾಗಿರುವದಿಲ್ಲ. ಹೀಗಾಗಿ ಅವರು ಎಷ್ಟು ಹೆಣಗಾಡಿದರೂ ಕೊನೆಗಾಣುವದು ದುಸ್ತರವಾಗಿರುವದು. ಅವರ ದೇಹಸ್ಥಿತಿಯಾದರೂ ಒಳ್ಳೇದಾಗಿರುವದಿಲ್ಲ. ಅವರ ಮನಸ್ಸೂ ಚಂಚಲವಾಗಿರುವದು. ಅವರು ಎಷ್ಟೋ ಆಧಿವ್ಯಾಧಿಗಳಿಂದ ಬಳಲುತ್ತಿರುವರು. ಅವರಲ್ಲಿ ದೃಢಸಂಕಲ್ಪವಿರುವದಿಲ್ಲ. ಇಂದ್ರಿಯ ನಿಗ್ರಹವಂತೂ ಅವರಿಗೆ ಅಸಂಭವ. ಹೊಸ ಹೊಸ ಪರಿಸ್ಥಿತಿಗನುಸರಿಸಿ ತಮ್ಮ ಜೀವನ ಗತಿಯನ್ನಾದರೂ ಹೆಚ್ಚು

ಕಡಿಮೆ ಮಾಡಬೇಕಾಗುವದು. ಈ ಎಲ್ಲ ಪ್ರತಿಬಂಧಗಳಿಗೆ ಅವರು ಎದೆ
ಗೊಡಬೇಕಾಗುವದರಿಂದ ಎಷ್ಟೋ ಕಾಲದ ವರೆಗೆ ಆಚರಣೆ ಮಾಡಿದ
ಮೇಲೆ ಸ್ವಲ್ಪ ಪರಿಣಾಮವು ಕಂಡುಬರುತ್ತದೆ. ಆದರೂ ಇಂಥ
ಜನರು ಸಾವಕಾಶವಾಗಿ ನಿಯಮಿತವಾದ ಹಠಯೋಗಾಭ್ಯಾಸದಿಂದ ತಮ್ಮ
ಇಚ್ಛಾ ಶಕ್ತಿಯನ್ನು ಬೆಳಿಸ ಬಲ್ಲವರಾದರೆ ಪ್ರಾಣಾಯಾಮ ಮಾಡಿ ತಮ
ಗೊದಗುವ ಸಂಕಟಗಳನ್ನು ದೂರ ಮಾಡಿದರೆ ಮತ್ತು ಯೋಗ್ಯ ಗುರು
ವಿನ ಹೇಳಿಕೆಯಂತೆ ನಡಕೊಂಡರೆ ಈ ಜನ್ಮದಲ್ಲಿಯೇ ಅವನು ತನ್ನ
ಶಾರೀರಿಕ ಆರೋಗ್ಯವನ್ನು ತನಗೆ ಸರಿದೋರಿದಂತೆ ತಿರುವ ಬಲ್ಲನು.
ಮತ್ತು ಅಲ್ಪ ಸ್ವಲ್ಪ ಯೌಗಿಕ ಶಕ್ತಿಯನ್ನು ದೊರಕಿಸ ಬಲ್ಲನು. ಹಠ
ಯೋಗವು ಬಹುತರ ಇಂಥ ಜನರಿಗೇ ಉಪಯೋಗವುಳ್ಳದ್ದಾಗಿರುತ್ತದೆ.
ಪ್ರಾಣಾಯಾಮ ಸಾಧನೆಯಿಂದ ಶರೀರವನ್ನು ತಮ್ಮ ಅಂಕೆಯಲ್ಲಿಟ್ಟು
ಕೊಳ್ಳಬಲ್ಲರು. ಬರಬರುತ್ತ ರಾಜಯೋಗಾಭ್ಯಾಸಕ್ಕೆ ಯೋಗ್ಯವಾದ ಕ್ಷೇತ್ರ
ವನ್ನುಂಟು ಮಾಡಿಕೊಳ್ಳುವರು. ರಾಜಯೋಗಾಭ್ಯಾಸದಿಂದ ಅವರ ಆತ್ಮ
ನಲ್ಲಿ ಅಡಗಿಕೊಂಡಿದ್ದ ಅನೇಕ ಅದ್ಭುತ ಶಕ್ತಿಗಳು ಬೈಲಿಗೆ ಬರುವವು.



# ವೀರಶೈವರ ಕಾಯಶಕ್ತಿ.

(ಲೇಖಕ— ಜೀರಗೆ ಬಸವಲಿಂಗಪ್ಪ, ಚೀಫಕೋರ್ಟಟ್ರಾನ್ಸ್ಲೇಟರ್
ಅರಳೇಪೇಟೆ, ಬೆಂಗಳೂರ ಸಿಟಿ.)



ವೀರಶೈವರೇ, ನಮ್ಮ ಮತವೊಂದು ಸಣ್ಣ ಮತನಾಗಿರುತ್ತದೆ. ಆದರೂ ಕೇವಲ ಸಣ್ಣ ಮತವೆನ್ನುವದಕ್ಕಾಗುವದಿಲ್ಲ. ಇಂಡಿಯಾ ದೇಶದಲ್ಲೆಲ್ಲ ವೀರಶೈವರ ಸಂಖ್ಯೆಯು ಮೂವತ್ತು ಲಕ್ಷಕ್ಕೆ ಮೇಲ್ಪಟ್ಟಿರುತ್ತದೆ. ಈ ಮತವು ಪುರಾತನ ಮತವಾಗಿರುತ್ತದೆ. ಈ ಮತಕ್ಕೆ ವೇದ ಉಪನಿಷತ್ತು ಪುರಾಣ ಗ್ರಂಥಗಳು ತಕ್ಕಮಟ್ಟಿಗೆ ಪ್ರಮಾಣಗಳಾಗಿದ್ದಾಗ್ಗೆಯೂ ಇಪ್ಪತ್ತೆಂಟು ಶಿವಾಗಮಗಳು ಮುಖ್ಯ ಗ್ರಂಥಗಳಾಗಿರುತ್ತವೆ.

ಈ ಮತದಲ್ಲಿ ಆಚಾರಕ್ಕೆ ಪ್ರಾಮುಖ್ಯತೆಯೇ ಹೊರತು ಉದ್ಯೋಗಗಳಿಗೆ ಪ್ರಾಮುಖ್ಯತೆಯಿಲ್ಲ. ಯಾರು ಯಾವ ಉದ್ಯೋಗವನ್ನು ಮಾಡಿದರೂ ಆಚಾರದಲ್ಲಿ ಸರಿಯಾಗಿದ್ದರೆ ಸಾಕಾಗಿರುತ್ತದೆ. ಈ ಮತದಲ್ಲಿ ಪೌರೋಹಿತ್ಯ ಮಾಡುವವರಿರುವರು. ಬೇಸಾಯ ಮಾಡುವವರಿರುವರು. ನೇಯಿಗೆ ಕೆಲಸ ಮಾಡುವವರಿರುವರು, ಮಡಕೆ ಮಾಡುವವರಿರುವರು. ಇನ್ನೂ ಬೇರೆ ಬೇರೆ ಕುಶಲೋದ್ಯೋಗ ಮಾಡುವವರಿರುವರು. ಈ ಮತಕ್ಕೆ ಪುಷ್ಟಿದಾಯಕವೇ ಹೊರತು ಆದರಿಂದ ಕುಂದಕವೇನೂ ಇಲ್ಲ.

ಈ ಮತದಲ್ಲಿ ಸಂಸ್ಕೃತ, ಕನ್ನಡ, ತೆಲುಗು, ತಮಿಳು ಭಾಷೆಗಳಲ್ಲಿ ಅನೇಕ ಉದ್ಗ್ರಂಥಗಳನ್ನು ಬರೆದು ಈ ಮತಕ್ಕೆ ವಿದ್ಯಾ ಪ್ರೌಢಿಮೆಯನ್ನು ತಂದಿರುತ್ತಾರೆ. ಪೂರ್ವಕಾಲದಲ್ಲಿ ವಿದ್ಯದಲ್ಲಿ ವೀರಶೈವರು ಯಾವ ರೀತಿಯಲ್ಲೂ ಕಡಿಮೆಯಾಗಿರಲಿಲ್ಲ. ಅದ್ವಿತೀಯಶಕ್ತರೆಂಬುದನ್ನು ಜಗತ್ತಿಗೆ ತೋರಿಸಿರುತ್ತಾರೆ. ಈಗಲೂ ಮೇಲೆ ಕಂಡ ಭಾಷೆಗಳಲ್ಲಿ ಪಂಡಿತರು ಉತ್ಪನ್ನವಾಗುತ್ತಲೇ ಇರುತ್ತಾರೆ.

ಹಣದ ಬಲದಲ್ಲೂ ವೀರಶೈವರು ಕಡಿಮೆಯಾಗಿಲ್ಲ. ವ್ಯಾಪಾರ ಮೊದಲಾದ ಉದ್ಯೋಗಗಳನ್ನು ಮಾಡಿ ಬಹಳವಾಗಿ ಹಣವನ್ನು ಸಂಪಾದಿಸಿ ಈ ಮತಕ್ಕೆ ಅರ್ಥ ಸಂಪತ್ತಿಯನ್ನುಂಟು ಮಾಡಿರುತ್ತಾರೆ. ದುಡ್ಡಿನಿಂದ ಅನೇಕ ಮಹತ್ಕಾರ್ಯಗಳನ್ನೂ ಮಾಡಿರುತ್ತಾರೆ.

ಈ ಮತದಲ್ಲಿ ಇಷ್ಟು ಅನುಕೂಲವಿದ್ದರೂ ಈ ಮತದವರ ಶರೀರ ಬಲ ಹೇಗೆ, ಈ ಮತದವರ ಧೈರ್ಯಶಕ್ತಿ ಯಾವ ರೀತಿ, ಇದನ್ನು ತಿಳಿಯಬೇಕು. ಈ ಮತದಲ್ಲಿ ಪೂರ್ವದೊಳಗೆ ಕೆಳದಿ ಅರಸರು, ಇಕ್ಕೇರಿ ಅರಸರು, ಕೊಡಗಿನ ಅರಸರು ಇನ್ನೂ ಮೊದಲಾದವರು ರಾಜ್ಯಭಾರಗಳನ್ನು ಮಾಡಿಕೊಂಡು ಅನೇಕ ಯುದ್ಧಗಳಲ್ಲಿ ಶತ್ರುಗಳೊಡನೆ ಹೋರಾಡಿ ಸಾಹಸವನ್ನು ತೋರಿಸಿರುತ್ತಾರೆ. ಇದಕ್ಕೆ ಕೆಳದಿ ನೃಪವಿಜಯ, ಮಡಿಕೇರಿ ರಾಜೇಂದ್ರ ಚರಿತ್ರೆ ಮೊದಲಾದ ಗ್ರಂಥಗಳನ್ನು ನೋಡಿದರೆ ಗೊತ್ತಾಗುತ್ತದೆ. ಈಗಲೂ ಆ ಶಕ್ತಿಯು ವೀರಶೈವರಲ್ಲಿದೆಯೋ? ರಾಜತ್ವಮಾಡಿ ಬಹುಕಾಲದ ಹಿಂದೆ ಅಳಿದು ಹೋದುದರಿಂದ ವೀರಶೈವರು ಪರಾಕ್ರಮ ಕಾರ್ಯಗಳನ್ನು ಮರೆತು ಹೋಗಿಬಿಟ್ಟರುತ್ತಾರೆ. ಈಗಿನ ಕಾಲದಲ್ಲಿ ಕೆಲವು ವೀರಶೈವರು ಅತಿ ನಾಗರೀಕತೆಯನ್ನು ಕಲಿತುಕೊಂಡು ಅವಶ್ಯಕ ಬಿದ್ದಾಗ ಆತ್ಮರಕ್ಷಣೆಯನ್ನು ಸಹ ಮಾಡಿಕೊಳ್ಳುವಷ್ಟು ಶಕ್ತಿಯಿಲ್ಲದವರಾಗಿರುತ್ತಾರೆ.

ಈಗ ರಾಜ್ಯದಲ್ಲಿ ಎಲ್ಲೆಲ್ಲಿಯೂ ಶಾಂತಿ ಇರುವದರಿಂದ ಜನರು ಸಾಹಸ ಕಾರ್ಯಗಳನ್ನು ಮರೆತು ಬಿಡಹತ್ತಿರುತ್ತಾರೆ. ಮತ್ತು ಹಿಂದಣ ಲಿಂಗಾಯತರು ಶತ್ರುಗಳನ್ನು ನಿಗ್ರಹಿಸುವಾಗ ಆಚಾರಗಳನ್ನು ನೋಡುತ್ತಿರಲಿಲ್ಲ. ಶಾಂತಿಯಲ್ಲಿ ಆಚಾರವನ್ನು ನೋಡಬೇಕು. ಆದರೆ ಶತ್ರು ನಿಗ್ರಹ ಮಾಡುವಾಗ ಇದನ್ನು ನೋಡಿದರೆ "ಗಣಾಚಾರ" ವೆಂಬ ವೀರಶೈವಾಚಾರಕ್ಕೆ ಲೋಪ ಬರುವದು. ಆದದರಿಂದ ಯಾರಾದರೂ ಶತ್ರುಗಳ ಮೇಲೆ ಬಿದ್ದರೆ ಆಗ ಲಿಂಗಾಚಾರಕ್ಕೆ ಭಂಗ ಬರುವುದಾದರಿಂದ ವೀರಶೈವನಾದವನು ಪಂಚಾಚಾರರಲ್ಲೊಂದಾದ ಗಣಾಚಾರವನ್ನು ನಡಿಸಲೇ ಬೇಕು. ಈ ಎಲ್ಲ ಕಾರಣಗಳಿಂದಲೂ ಪ್ರತಿಯೊಬ್ಬ ವೀರಶೈವನೂ ಶತ್ರು ನಿಗ್ರಹಕ್ಕಾಗಿ ಶರೀರ ಬಲವುಳ್ಳವನಾಗಿರಬೇಕು.

ಶರೀರ ಬಲಕ್ಕೆ ವೀರಶೈವರು ಏನು ಮಾಡಬೇಕು? ವೀರಶೈವರಲ್ಲಿ ಗ್ರಾಮಾಂತರಗಳೊಳಗೆ ಕಷ್ಟ ಕೆಲಸಗಳನ್ನು ಮಾಡುವುದರಿಂದಲೂ ರಾಗಿ ಹಿಟ್ಟು ಜೋಳದ ರೊಟ್ಟಿ ಮೊದಲಾದ ಆಹಾರಗಳನ್ನು ಊಟ ಮಾಡುವದರಿಂದಲೂ ಅಲ್ಲಿಯವರು ಪುಷ್ಟರಾಗಿರುತ್ತಾರೆ. ಆದರೆ ಇನ್ನೊಂದು ವಿಷಯದಲ್ಲಿ ವೀರಶೈವ ಸಮಾಜಕ್ಕೆ ಅನುಕೂಲ್ಯವಿರುವದು. ವೀರಶೈವರಲ್ಲಿ ಕೇವಲ ಚಿಕ್ಕವಯಸ್ಸಿನಲ್ಲಿ ಮದುವೆಗಳನ್ನು ಮಾಡುವ ಪದ್ಧತಿ

ಇಲ್ಲ. ಪ್ರಾಪ್ತವಯಸ್ಸಾದ ಮೇಲೆ ಹೆಣ್ಣುಗಂಡುಗಳು ಚೆನ್ನಾಗಿ ಬಲಿತ ಮೇಲೆ ಮದುವೆ ಮಾಡುವರು. ಇದು ಬಹಳ ಒಳ್ಳೆಯದು. ಇದರಿಂದ ಸಂತತಿಯು ಒಳ್ಳೇ ಪುಷ್ಟವಾದದ್ದಾಗಿರುತ್ತದೆ. ಅದರಿಂದ ಮುಂದೆ ಹುಟ್ಟುವ ವೀರಶೈವ ಪುರುಷರು ಶರೀರ ಪುಷ್ಟಿಯುಳ್ಳವರಾಗಿ ಹೆಂಡತಿ ಮಕ್ಕಳುಗಳನ್ನು ಕಾಪಾಡುವ ಶಕ್ತಿಯುಳ್ಳವರಾಗಿರುತ್ತಾರೆ. ಆದುದರಿಂದ ವೀರಶೈವರು ಪ್ರಾಪ್ತವಯಸ್ಸಾದ ಮೇಲೆ ಮಕ್ಕಳುಗಳಿಗೆ ವಿವಾಹ ಮಾಡುವ ಪದ್ಧತಿಯನ್ನು ಮುಂದುವರಿಸುತ್ತ ಬರಬೇಕು. ವಿವಾಹವನ್ನು ಎಷ್ಟು ನಿಧಾನಿಸಿದರೂ ಅಷ್ಟು ಎಳ್ಳೆಯದು. ಹಿರಿಯರಾದವರು ಎಚ್ಚರಿಕೆಯಿಂದ ನೋಡಿಕೊಳ್ಳಬೇಕು.

ಇನ್ನು ಸಮಾಜೋದ್ಧರಣೆಗೂ ಅವರವರ ಆತ್ಮರಕ್ಷಣೆಗೂ ಅವರವರ ಹೆಂಡತಿ ಮಕ್ಕಳುಗಳ ರಕ್ಷಣೆಗೂ ಪ್ರತಿಯೊಬ್ಬರೂ ಏನು ಮಾಡಬೇಕು? ಪ್ರಕೃತಿಯನ್ನು ನೋಡಿರಿ! ಏನು ಕಾಣುತ್ತದೆ? ಎಲ್ಲ ಪ್ರಾಣಿಗಳೂ ತಮ್ಮ ತಮ್ಮ ಆತ್ಮರಕ್ಷಣೆಗೆ ಅನುಕೂಲ್ಯವನ್ನುಹೊಂದಿದವುಗಳಾಗಿರುತ್ತವೆ. ನೋಡಿರಿ! ಪ್ರಕೃತಿಯು ದನಗಳಿಗೆ ಹುಲಿಗಳಿಂದ ರಕ್ಷಿಸಿಕೊಳ್ಳುವದಕ್ಕೆ ಕೊಂಬುಗಳನ್ನು ಕೊಟ್ಟಿರುತ್ತದೆ. ಜಿಂಕೆಗೆ ಬೇಟೆಗಾರರಿಂದ ತಪ್ಪಿಸಿಕೊಳ್ಳುವದಕ್ಕೆ ಓಡುವ ಶಕ್ತಿಯನ್ನು ಕೊಟ್ಟಿರುತ್ತದೆ. ಪಕ್ಷಿಗಳಿಗೆ ಹಿಡಿಯುವವರಿಂದ ತಪ್ಪಿಸಿಕೊಳ್ಳುವದಕ್ಕೆ ಹಾರುವ ರೆಕ್ಕೆಗಳನ್ನು ಕೊಟ್ಟಿರುತ್ತದೆ. ಹಂದಿಗಳಿಗೆ ಹೊಡೆಯುವವರಿಂದ ತಪ್ಪಿಸಿಕೊಳ್ಳುವದಕ್ಕೆ ಕೋರೆಹಲ್ಲುಗಳನ್ನೂ ಕೆಲವಕ್ಕೆ ಮುಳ್ಳುಗಳನ್ನೂ ಕೊಟ್ಟಿರುತ್ತದೆ. ಹಾವುಗಳಿಗೆ ಕೆಣಕುವವರನ್ನು ಕಚ್ಚಲು ವಿಷದ ಹಲ್ಲುಗಳನ್ನು ಕೊಟ್ಟಿರುತ್ತದೆ. ಹುಲಿಗೆ ಮೃಗಗಳನ್ನು ಹಿಡಿದು ತಿನ್ನುವದಕ್ಕೆ ಕೋರೆಹಲ್ಲುಗಳನ್ನು ಕೂರುಗುರಗಳನ್ನು ಕೊಟ್ಟಿರುತ್ತದೆ. ಹೀಗೆ ಸಕಲ ಜೀವಿಗಳಿಗೂ ಅವವುಗಳ ರಕ್ಷಣೆಗೆ ಒಂದೊಂದು ಉಪಕರಣವು ಇರುವಾಗ್ಗೆ ಮನುಷ್ಯನು ಯಾವದೊಂದನ್ನೂ ಇಲ್ಲದಿರುವುದಕ್ಕಾಗುತ್ತದೆಯೇ? ಮನುಷ್ಯನಿಗೆ ಪ್ರಕೃತಿಯು ಬುದ್ಧಿಶಕ್ತಿಯನ್ನು ಕೊಟ್ಟಿರುವದರಿಂದ ತನ್ನ ಹೆಂಡತಿ ಮಕ್ಕಳ ರಕ್ಷಣೆಗೆ ಸಿಕ್ಕ ಉಪಕರಣಗಳನ್ನು ಕಲ್ಪಿಸಿಕೊಳ್ಳಬೇಕು.

ಪ್ರತಿಯೊಬ್ಬನು ತನ್ನ ಸಮಾಜದಲ್ಲಿ ಆತ್ಮರಕ್ಷಣೆಗೂ ತಮ್ಮ ಹೆಂಡತಿ ಮಕ್ಕಳ ರಕ್ಷಣೆಗೂ ಏನು ಉಪಕರಣವನ್ನು ಕಲ್ಪಿಸಿಕೊಳ್ಳಬೇಕು? ಶರೀರ ಬಲವನ್ನು ಸಂಪಾದಿಸಿ ಕುಸ್ತಿ ಮೊದಲಾದವುಗಳನ್ನು ಕಲಿ

ಯುಬೇಕು. ಇದಕ್ಕಾಗಿ ವೀರಶೈವರು ಪ್ರತಿಯೊಂದು ಊರಿನಲ್ಲಿಯೂ ಪ್ರತಿಯೊಂದು ಹಳ್ಳಿಯಲ್ಲಿಯೂ ಗರಡಿಗಳನ್ನು ಸ್ಥಾಪಿಸಿಕೊಳ್ಳಬೇಕು. ಈ ಗರಡಿಗಳು ಬಹು ಪುರಾತನದಿಂದ ಬಂದವುಗಳು. ಪಾಂಡವರಿರುವ ಜಾಗಗಳಲ್ಲಿ ಗರಡಿಗಳಿಲ್ಲದೇ ಇರುತ್ತಿರಲಿಲ್ಲ. ಕೆಳದಿ ಮೊದಲಾದ ವೀರ ಶೈವರ ರಾಜರಿದ್ದ ಜಾಗಗಳಲ್ಲಿ ಗರಡಿಗಳಿಲ್ಲದೇ ಇರುತ್ತಿರಲಿಲ್ಲ. ಈಗ ಲೂ ವೀರಶೈವರು ಈ ಕೆಲಸವನ್ನು ಮಾಡಬೇಕು.

ವೀರಶೈವರು ವೀರತ್ವದಿಂದ ಇರಬೇಕಾದುದು ಭೂಷಣವು. ಶರೀರ ಬಲವನ್ನು ಸಂಪಾದಿಸದ ಹೊರತು ವೀರತ್ವವು ಬರುವದಿಲ್ಲ. ಶರೀರ ಬಲವನ್ನೂ ಆರ್ಜಿಸಬೇಕಾದರೆ ಗರಡಿಗಿಂತಲೂ ಉತ್ತಮ ಪಥವಾವುದೂ ಇಲ್ಲ. ಗರಡಿಯ ವ್ಯಾಯಾಮದಿಂದ ಶರೀರ ಪಟುತ್ವವೂ, ಜಿತೇಂದ್ರಿಯ ತ್ವವೂ, ಧೈರ್ಯ ವೀರ್ಯ ಶೌರ್ಯ ಸ್ಥೈರ್ಯ ಗುಣಗಳೂ ಬರುತ್ತವೆ. ವೀರಶೈವ ಮತವು ಕ್ರಿಯಾಜ್ಞಾನೋದಯ ವಿಹಿತ ಮತವಾಗಿರುತ್ತದೆ. ಕ್ರಿಯೆಯನ್ನು ಬಿಟ್ಟು ಜ್ಞಾನವೊಂದನ್ನೇ ಹಿಡಿಯತಕ್ಕ ಮತವಾಗಿರುವ ದಿಲ್ಲ. ಜ್ಞಾನವನ್ನೂ ಬಿಟ್ಟು ಕ್ರಿಯೆಯೊಂದನ್ನೇ ಹಿಡಿಯತಕ್ಕ ಮತವಾ ಗಿರುವದಿಲ್ಲ. ಕ್ರಿಯಾಜ್ಞಾನಗಳೆರಡನ್ನೂ ಹಿಡಿಯಬೇಕಾಗಿರುತ್ತದೆ. ಕಾಯ ಶಕ್ತಿಯನ್ನೂ ಸಂಪಾದಿಸುವದು ಕ್ರಿಯಾ ಸಂಬಂಧವಾಗಿರುತ್ತದೆ. ವೀರಾ ಚಾರಗಳನ್ನು ನಡೆಸಬೇಕಾದರೆ ಶರೀರ ಶಕ್ತಿಯು ಬೇಕಾಗಿರುತ್ತದೆ.

ಎಲ್ಲ ವಿಧದ ಸಾಮುಗಳಿಗಿಂತಲೂ ಗರಡಿಯ ಸಾಮು ಬಹು ಉತ್ತಮತರವಾದುದು. ವೀರಶೈವ ಸಮಾಜದಲ್ಲಿ ಗರಡಿಗಳನ್ನು ಏರ್ಪ ಡಿಸಬೇಕಾದರೆ ಎಲ್ಲರೂ ಸೇರಿ ಒಂದು ಬೇರೆ ಮನೆಯನ್ನು ಮಾಡಿಕೊ ಳ್ಳಬೇಕು. ಅಥವಾ ಅಲ್ಲಲ್ಲಿ ಆಶ್ರಮಗಳನ್ನು ಮಾಡಿಕೊಂಡಿರುವದುಂ ಟಷ್ಟೆ. ಅಲ್ಲಿಯಾದರೂ ಗರಡಿಯನ್ನು ಏರ್ಪಡಿಸಿಕೊಳ್ಳಬಹುದು. ಗರಡಿ ಸಾಮುಗಳು ಬಹಳ ಕಠಿಣವಾದವುಗಳಾದುದರಿಂದ ಪ್ರಾಪ್ತ ವಯಸ್ಸಿನ ವರೇ ಸಾಮುಗಳನ್ನು ಮಾಡಬೇಕು. ಅನಾರೋಗ್ಯವಾಗಿದ್ದಾಗಳೂ, ದೌರ್ಬಲ್ಯವಿದ್ದಾಗಳೂ, ಕಾಹಿಲೆ ಇದ್ದಾಗಳೂ, ಬಹಳ ಹಸಿವಾಗಿದ್ದಾ ಗಳೂ, ಊಟ ಮಾಡಿದ ಕೂಡಲೆಯೂ, ಭೇದಿಯಾಗಿದ್ದಾಗಲೂ ಸಾಮು ಮಾಡಬಾರದು. ಗರಡಿಯ ಸಾಮು ಮಾಡತಕ್ಕವರು ಜಿತೇಂದ್ರಿಯ ರಾಗಿರಬೇಕು. ಆಹಾರ ನಿಯಮವನ್ನಿಟ್ಟುಕೊಂಡಿರಬೇಕು. ಗರಡಿಯ ಸಾಮುಗಳಲ್ಲಿ ಮುಖ್ಯವಾದ ಕೆಲವು ಸಾಮುಗಳನ್ನು ಪಾಠಕರ ಅವಗಾ

ಹನೆಗೆ ಇಲ್ಲಿ ಬರೆಯುತ್ತೇನೆ. ಅವು ಯಾವವೆಂದರೆ:— (೧) ದಂಡೆ (೨) ಜೋಕು. (೩) ಮಲಿಕೆ ಅಥವಾ ಹೊಳಿಕೆ (೪) ಸಾಪಾಟು ಅಥವಾ ಸಾದಾಬಸಿಗೆ (೫) ಹನುಮಂತ ಬಸಿಗೆ (೬) ಮುಂಡಿಸಾಧನೆ ಅಥವಾ ನುಲಿಕೆ (೭) ಗೋಡೆದಂಡೆ (೮) ಸಾಂಬ್ರಾಣಿ ತಿರುಗಿಸುವದು (೯) ಕರೋಲಾ ತಿರುಗಿಸುವದು (೧೦) ಮಲುಕಂಬ ಕಟ್ಟುವದು ಅಥವಾ ಕೊಡತಿ ಕಟ್ಟುವದು (೧೧) ಕುಸ್ತಿ (೧೨) ದೊಣ್ಣೆ ಸಾಧನೆ ಮೊದಲಾದುವು.

ವೀರಶೈವರು ಶರೀರ ಶಕ್ತಿಯಲ್ಲಿ ಕೇವಲ ಹಿಂದೆಂದು ಹೇಳಲಾಗದು. ಅವರು ಶರೀರ ಶಕ್ತಿಯಿಂದ ಪೂರ್ವದಲ್ಲಿ ಅನೇಕ ಮಹತ್ಕಾರ್ಯಗಳನ್ನು ಮಾಡಿರುತ್ತಾರೆ. ಮಡಿವಾಳಮಾಚದೇವನು ಕಲ್ಯಾಣ ಪಟ್ಟಣದಲ್ಲಿರುವಾಗ ಅವನನ್ನು ರಾಜನು ಆನೆಯಿಂದ ತುಳಿಸಬೇಕೆಂದು ಆಜ್ಞೆ ಮಾಡಲಾಗಿ ಆನೆಯನ್ನು ತನ್ನ ಶರೀರ ಶಕ್ತಿಯಿಂದ ತುಂಡು ಮಾಡಲಿಲ್ಲವೇ? ಹರಳಯ್ಯ ಮಧುವಯ್ಯಗಳು ಲಿಂಗ ಧಾರಣ ಸಮಾನತ್ವದಿಂದ ವಿವಾಹ ಸಂಬಂಧವನ್ನು ಬೆಳಿಸಲು ರಾಜನು ಅವರ ಕಣ್ಣು ಕೀಳಿಸಲಾಗಿ ಮಲ್ಲೆ ಬೊಮ್ಮಗಳು ತಮ್ಮನ್ನು ಮೂದಲಿಸಿದ ತಾಯಿಯ ಮಾತನ್ನು ಕೇಳಿ ವೀರ ತಾಂಬೂಲವನ್ನು ತೆಗೆದುಕೊಂಡು ತಮ್ಮ ಶರೀರ ಶಕ್ತಿಯಿಂದ ಪ್ರತಿಕ್ರಿಯಾ ಕಾರ್ಯವನ್ನು ಮಾಡಲಿಲ್ಲವೇ? ಕೆಳದಿ ಅರಸರಲ್ಲಿ ದೊಡ್ಡ ಸಂಕಣ್ಣ ನಾಯಕನು ಅನೇಕ ಮಹತ್ಕಾರ್ಯಗಳನ್ನು ಮಾಡಿ ಯಾತ್ರಾರ್ಥವಾಗಿ ಅನೇಕ ಜಂಗಮ ವೇಷವನ್ನು ತಾಳಿ ಅನೇಕ ದೇಶಗಳನ್ನು ತಿರುಗಿ ಡಿಲ್ಲಿಗೆ ಹೊರಟು ಅಲ್ಲಿ ಪಾತುಷಾಹನ ಸಮ್ಮುಖದಲ್ಲಿ ಅಂಕುಶಖಾನನೊಡನೆ ಮಲ್ಲ ಯುದ್ಧವನ್ನು ಮಾಡಿ ಅವನನ್ನು ಜಯಿಸಿ ಪಾತುಷಾಹನಿಂದ ಹಸಿರು ನಿಶಾನೆಯನ್ನು ಪಡೆದು ಪಾತುಷಾಹನ ಮೂಲಕ ಡಿಲ್ಲಿಯಲ್ಲಿ ಚಾವಲಿಕಿ ಮಂಡೈ ಎಂಬ ಸ್ಥಳದಲ್ಲಿ ಒಂದು ಜಂಗಮ ಮಠವನ್ನು ಕಟ್ಟಿಸಿದನು. ವೀರಶೈವ ರಾಜರಾದ ಕೆಳದಿ ಅರಸರು ಬಿಳಿಗಿ ಅರಸರು, ಇಕ್ಕೇರಿ ಅರಸರು, ಕೊಡಗಿನ ಅರಸರು, ಪುಂಗನೂರು ಅರಸರು, ಹಾಗಲ್ವಾಡಿ ಅರಸರು, ನೆಲ್ಯಾಳದ ಅರಸರು ಮೊದಲಾದವರು ತಮ್ಮ ಶರೀರ ಶಕ್ತಿಯಿಂದ ಅನೇಕ ಯುದ್ಧಗಳಲ್ಲಿ ಶತ್ರುನಿಗ್ರಹ ಮಾಡಿ ಮಹತ್ಕಾರ್ಯಗಳನ್ನು ಮಾಡಿರುತ್ತಾರೆ. ವೀರಶೈವರಲ್ಲಿ ಕೆಲವು ಮನೆತನದವರಿಗೆ ಸರದಾರರು ಎಂಬ ಹೆಸರು ಬಂದಿರುತ್ತದೆ. ಇವರುಗಳ ಪೂರ್ವಿಕರು ಶರೀರ ಶಕ್ತಿಯನ್ನು ತೋರಿಸಿ ಸಾಹಸ ಕಾರ್ಯಗಳನ್ನು ಮಾಡಿದವರಾಗಿರುತ್ತಾರೆ. ಆದುದ

ರಿಂದ ಈಗಲೂ ವೀರಶೈವರ ಶರೀರ ಶಕ್ತಿಯನ್ನು ಸಾಮಾನ್ಯವಾದದ್ದೆಂದೆ ಣಿಸದೆ ಎಲ್ಲಕ್ಕಿಂತಲೂ ಅದಕ್ಕೆ ಪ್ರಾಮುಖ್ಯತೆಯನ್ನು ಕೊಡಬೇಕು.

ವೀರಶೈವರು ತಮ್ಮಲ್ಲಿ ಶರೀರ ಶಕ್ತಿಯ ಕಾರ್ಯಗಳು ಹೆಚ್ಚು ವದಕ್ಕೆ ತಕ್ಕ ಸಾಹಸಗಳನ್ನು ಮಾಡಬೇಕು. ಸಾಮು, ಕುಸ್ತಿ, ದೊಣ್ಣೆ ಸಾಧನೆ ಮೊದಲಾದವನ್ನು ಮಾಡತಕ್ಕವರಿಗೆ ವರ್ಷ ವರ್ಷವೂ ಮುಖ್ಯ ಮುಖ್ಯ ಸ್ಥಳಗಳಲ್ಲಿ ಸಭೆಗಳನ್ನು ನೆರೆಯಿಸಿ ಬಹುಮಾನವನ್ನು ಕೊಡು ವದರ ಮೂಲಕ ಪ್ರೋತ್ಸಾಹ ಕೊಡಬೇಕು. ದೊಡ್ಡ ಪರೀಕ್ಷೆಗಳಲ್ಲಿ ತೇರ್ಗಡೆಯನ್ನು ಹೊಂದಿ ಘನ ವಿದ್ಯಾವಂತರಾದವರು ವೀರಶೈವ ಸಮಾ ಜಕ್ಕೆ ಎಷ್ಟು ಮುಖ್ಯವೋ ಹಾಗೆಯೇ ಶರೀರ ಶಕ್ತಿಯಲ್ಲಿ ಸುಘನರಾದ ವರು ಸಮಾಜಕ್ಕೆ ಅಷ್ಟೇ ಮುಖ್ಯವು.

ವೀರಶೈವ ಸಮಾಜವು ಇತರ ಸುಪ್ರಸಿದ್ಧ ಸಮಾಜಗಳಂತೆ ಅಂದರೆ ಬ್ರಾಹ್ಮಣ, ಜೈನ, ಬೌದ್ಧ, ಬ್ರಹ್ಮಸಮಾಜ, ಕ್ರಿಸ್ತ, ಮಹಮ್ಮದೀಯ ಸಮಾಜಗಳಂತೆ ಒಂದು ಪ್ರತ್ಯೇಕ ಸಮಾಜವಾಗಿರುತ್ತದೆ. ಸರ್ವವಿಷಯ ದಲ್ಲೂ ಇದು ಪ್ರಪಂಚ ದೃಷ್ಟಿಗೆ ಭಿನ್ನ ಪ್ರಭೆಯಿಂದ ಕಾಣಿಸಬೇಕಾದುದು ಅತ್ಯವಶ್ಯಕವಾಗಿರುತ್ತದೆ. ಆದಿಯಿಂದಲೂ ಹಾಗೆಯೇ ಬಂದಿರುತ್ತದೆ. ಇತ ರರಲ್ಲಿ ವೈದಿಕ ಮಂಡಳಿಯವರಿರುವಂತೆ ವೀರಶೈವರಲ್ಲಿ ವೈದಿಕ ಮಂಡ ಳಿಯವರಿರುವರು. ಇತರರಲ್ಲಿ ಕೈಗಾರಿಕೆಯವರಿರುವಂತೆ ವೀರಶೈವರಲ್ಲಿ ಕೈಗಾರಿಕೆಯವರಿರುವರು, ಇತರರಲ್ಲಿ ಸುಪ್ರಸಿದ್ಧರಾದ ಅರಸುಮನೆತನದವ ರಿರುವಂತೆ ವೀರಶೈವರಲ್ಲಿ ಸುಪ್ರಸಿದ್ಧರಾದ ಅರಸುಮನೆತನದವರಿರುವರು. ಈಗಲೂ ವೀರಶೈವರು ಅನೇಕ ವಿಷಯಗಳಲ್ಲಿ ತಮಗೆ ಸರಿಯಾದ ಬೇರೆ ಬೇರೆ ಮಹತ್ಕಾರ್ಯಗಳನ್ನು ಮಾಡುತ್ತಲಿದ್ದಾರೆ. ಕೆಲ ಪಂಡಿತರು ವೀರ ಶೈವ ನಾಟಕಗಳನ್ನು ಬರೆದರು. ಕುಸ್ತಿ ಸರ್ಕಸ್ಸುಗಳಲ್ಲಿ ಅನೇಕರು ಮುಂದಾ ಗಿರುವರು. ಕೆಲವರು ಚಿತ್ರಕಲೆಯನ್ನು ಸುಪ್ರಕಾಶಕ್ಕೆ ತಂದಿರುವರು ಇದೇ ರೀತಿಯಲ್ಲಿ ವೀರಶೈವರು ಅನೇಕ ವಿಷಯದಲ್ಲಿ ಪ್ರತ್ಯೇಕತೆಯನ್ನು ತೋರಿ ಸಬೇಕು. ಇಂತವುಗಳಲ್ಲಿ ವೀರಶೈವರ ಶರೀರ ಶಕ್ತಿ ಪ್ರದರ್ಶನವು ಒಂದು ಮುಖ್ಯವಾದದ್ದಾಗಿರುತ್ತದೆ. ಆದುದರಿಂದ ವೀರಶೈವರು ತಮ್ಮ ಸಮಾಜ ದಲ್ಲಿ ಶರೀರ ಶಕ್ತಿಯನ್ನು ಪ್ರಬಲಿಸುವದಕ್ಕೆ ಸರ್ವ ಪ್ರಯತ್ನ ಮಾಡಬೇಕು.



# ಪ್ರಶ್ನೋತ್ತರಗಳು.



ಶಿವಮೊಗ್ಗ ಜಿಲ್ಹೆಯ ಶಿರಾಳಕೊಪ್ಪದಲ್ಲಿಯ ರಾ|| ರಾ|| ಚನ್ನಮಲ್ಲಪ್ಪ ಕೋರಿ ಈ ಮಹನೀಯರು ಈ ಕೆಳಗಿನ ವಿಷಯಗಳ ಬಗ್ಗೆ ವಿವರಣೆಗಳನ್ನು ಶಿವಾನುಭವದಲ್ಲಿ ಕೊಡಲು ನಮಗೆ ಸೂಚಿಸಿದ್ದಾರೆ. ಇವುಗಳ ವಿಷಯವಾಗಿ ನಾವು ಯಥಾಮತಿ ಇಲ್ಲಿ ಉತ್ತರಗಳನ್ನು ಕೊಡಲು ಪ್ರಯತ್ನಿಸುತ್ತೇವೆ. ಆದರೆ ಇವುಗಳ ಬಗ್ಗೆ ಮತ್ತೆ ಯಾರಿಗಾದರೂ ಹೆಚ್ಚಿನ ಸಂಗತಿಗಳು ಗೊತ್ತಿದ್ದರೆ ಅವರು ಅವುಗಳನ್ನು ಅವಶ್ಯವಾಗಿ ಬರೆದು ನಮ್ಮ ಕಡೆಗೆ ಕಳಿಸಿಕೊಡಬೇಕೆಂದು ನಮ್ಮ ಸೂಚನೆ ಇದೆ. ಷಟ್ಸ್ಥಲ ಶಾಸ್ತ್ರವು ಬಹು ಮಹತ್ವವಾದ ವಿಷಯವು. ಅದರ ಮರ್ಮಗಳು ಇನ್ನೂ ಸಂಪೂರ್ಣವಾಗಿ ಪ್ರಕಾಶಿತವಾಗಿರುವದಿಲ್ಲ. ಆದ್ದರಿಂದ ಅವುಗಳ ಬಗ್ಗೆ ತೋರಿದ ವಿಷಯಗಳನ್ನು ವಾಚಕರು ಅವಶ್ಯವಾಗಿ ಬಹಿರಂಗಗೊಳಿಸಬೇಕೆಂದು ನಮ್ಮ ಆಗ್ರಹದ ಸೂಚನೆ ಇದೆ.

ಪ್ರಶ್ನೆ:— ೧. ಚಿಲ್ಲಿಂಗವೆಂದರೇನು? ಇದರ ಪೂಜೆಯು ಹೇಗೆ?

ಉತ್ತರ:— ಷಟ್ಸ್ಥಲ ಶಾಸ್ತ್ರದಲ್ಲಿ ಚಿಲ್ಲಿಂಗವೆಂಬ ಶಬ್ದವು ಬಹುಶಃ ಉಪಯೋಗಿಸಲ್ಪಡುವದಿಲ್ಲ. ಚಿತ್‌ವೆಂಬ ಶಬ್ದವು ವಾಡಿಕೆಯಾಗಿ ಲಿಂಗಕ್ಕೆ ಸಂಬಂಧ ಪಟ್ಟಿರದೆ, ಶಕ್ತಿಗೆ ಸಂಬಂಧ ಪಟ್ಟಿರುತ್ತದೆ. ಆದ್ದರಿಂದ ಚಿಲ್ಲಿಂಗ ಶಬ್ದವಿರದೆ ಚಿತ್‌ಶಕ್ತಿಎಂಬ ಶಬ್ದವಿರುತ್ತದೆ.

ಲಿಂಗವು ೯ ವಿಧವಾಗಿ ೬ ವಿಧವಾಗಿ ಮತ್ತು ೩ ವಿಧವಾಗಿ ಈ ಪ್ರಕಾರ ಷಟ್ಸ್ಥಲ ಶಾಸ್ತ್ರದಲ್ಲಿ ವಿವೇಚಿಸಲ್ಪಟ್ಟಿರುತ್ತವೆ.

೯ ಲಿಂಗಗಳು ಯಾವವೆಂದರೆ:— ನಿರಂಜನ ಲಿಂಗ ಅಥವಾ ನಿಶ್ಶೂನ್ಯ ಲಿಂಗ, ಶೂನ್ಯಲಿಂಗ, ನಿಃಕಲಲಿಂಗ, ಮಹಾಲಿಂಗ, ಪ್ರಸಾದಲಿಂಗ, ಜಂಗಮ ಲಿಂಗ, ಶಿವಲಿಂಗ, ಗುರು ಲಿಂಗ ಮತ್ತು ಆಚಾರ ಲಿಂಗ ಇವುಗಳೇ ಇರುತ್ತವೆ. ಇವುಗಳಲ್ಲಿ ಮೊದಲನೆಯ ಮೂರು ಲಿಂಗಗಳು ಎಂದರೆ ನಿರಂಜನ ಲಿಂಗ, ಶೂನ್ಯ ಲಿಂಗ ಮತ್ತು ನಿಃಕಲ ಲಿಂಗ ಇವುಗಳು ಶೂನ್ಯ ಲಿಂಗದ ಬೇರೆ ಬೇರೆ ವಿಧಗಳೆಂದು ಹೇಳಬಹುದಾಗಿದೆ. ಈ ಲಿಂಗಗಳ ಉದ್ಭವದ ಕಾಲದಲ್ಲಿ ಜಗತ್ತಿನ ಸೃಷ್ಟಿಯು ಇನ್ನೂ ಆಗಿ

ರುವದಿಲ್ಲ. ಆಗ ಬ್ರಹ್ಮ, ವಿಷ್ಣು, ಶಿವ ಇವರ ಉದಯವು ಸಹ ಆಗಿರದೆ ಪರಬ್ರಹ್ಮ ವಸ್ತುವು ಮಾತ್ರ ಒಂದೇ ಒಂದಾಗಿರುತ್ತದೆ. ಆದರೆ ಶೂನ್ಯ ಲಿಂಗದ ಕಡೆಯ ಸ್ಥಿತಿಯಾದ ನಿಃಕಲಲಿಂಗದಲ್ಲಿ ಚಿತ್ತಶಕ್ತಿಯು ಉದಯುವಾಗುತ್ತದೆ. ಈ ಚಿತ್ತಿನಿಂದಲೇ ಅ, ಉ, ಮ ಎಂಬ ಅಕ್ಷರಗಳು ಉತ್ಪನ್ನವಾಗಿ ಈ ಮೂರು ಅಕ್ಷರಗಳೂ ಮೂಲ ಚಿತ್ತವೂ ಪರಸ್ಪರ ಕೂಡಲಾಗಿ ಓಂಕಾರವೆಂಬ ಪ್ರಣವವು ಉತ್ಪನ್ನವಾಗುತ್ತದೆ. ಈ ಪ್ರಣವವೇ ಅಖಂಡ ಪರಿಪೂರ್ಣ ಗೋಳಕಾಕಾರವಾದ ಮಹಾಲಿಂಗವೆನಿಸಿಕೊಳ್ಳುತ್ತದೆ. ಇದರಿಂದಲೇ ಮುಂದಿನ ಸೃಷ್ಟಿಯ ಉತ್ಪತ್ತಿಯು, ಚಿತ್ತಶಕ್ತಿಯು ಇದರಲ್ಲಿಯೇ ಅಡಗಿರುತ್ತದೆ. ಈ ಲಿಂಗಕ್ಕೆ ಷಟ್ಸ್ಥಲ ಶಾಸ್ತ್ರದಲ್ಲಿ ಚಿಲ್ಲಿಂಗವೆಂಬ ಅಭಿಧಾನವಿರುವದಿಲ್ಲ. ಇದಕ್ಕೆ ಮಹಾಲಿಂಗವೆಂತಲೇ ಹೆಸರು. ಈ ಮಹಾಲಿಂಗದಿಂದ ಮುಂದೆ ಬೇರೆ ಆರು ಲಿಂಗಗಳೂ ಶಕ್ತಿಗಳೂ ಉದ್ಭವಿಸುತ್ತ ಹೋಗುತ್ತವೆ. ಅವುಗಳಿಂದಲೇ ಸೃಷ್ಟಿಯಲ್ಲಿಯ ನಾನಾ ವಿಧ ಪದಾರ್ಥಗಳು ಉಗಮ ಹೊಂದುತ್ತವೆ. ವೀರಶೈವ ಧರ್ಮದ ಪ್ರಕಾರ ಜಗತ್ತಿನ ಉತ್ಪತ್ತಿಯು ಈ ಪ್ರಕಾರ ಇರುತ್ತದೆ.

ಒಮ್ಮೊಮ್ಮೆ ಷಟ್‌ಸ್ಥಲದಲ್ಲಿ ಚಿತ್ ಮತ್ತು ಅಚಿತ್ ಎಂಬ ಶಬ್ದಗಳನ್ನು ಉಪಯೋಗಿಸುವದುಂಟು. ಆಗ ಚಿತ್ ಎಂದರೆ ಚೇತನಾ ಶಕ್ತಿಯುಳ್ಳದ್ದು, ಅಚಿತ್ ಎಂದರೆ ಚೇತನಾರಹಿತವಾದದ್ದು ಎಂದು ಅರ್ಥವಾಗುತ್ತದೆ. ಮೊದಲನೇದಕ್ಕೆ ಜಂಗಮವೆಂತಲೂ ಎರಡನೇದಕ್ಕೆ ಸ್ಥಾವರವೆಂತಲೂ ಶಿವಾನುಭವಶಾಸ್ತ್ರದಲ್ಲಿ ಅನ್ನುವದುಂಟು. ಇವುಗಳನ್ನು ಲಿಂಗಕ್ಕೆ ಸಂಬಂಧಿಸಿ ಹೇಳಬೇಕಾದರೆ ಚಿಲ್ಲಿಂಗವೆಂದರೆ ಪ್ರಾಣಲಿಂಗವೆಂತಲೂ ಎರಡನೇದನ್ನು ಇಷ್ಟಲಿಂಗವೆಂತಲೂ ಅನ್ನಬಹುದಾಗಿದೆ. ಆದರೆ ಪ್ರಾಣಲಿಂಗಕ್ಕೆ ಚಿಲ್ಲಿಂಗವೆಂದು ಅನ್ನುವ ರೂಢಿಯು ಮಾತ್ರ ವಚನಶಾಸ್ತ್ರದಲ್ಲಿ ಇಲ್ಲ.

ಈ ಪ್ರಕಾರ ಷಟ್‌ಸ್ಥಲ ಶಾಸ್ತ್ರದಲ್ಲಿ ಚಿಲ್ಲಿಂಗವೆಂಬ ಶಬ್ದವಿರುವದಿಲ್ಲಾದ್ದರಿಂದ ಚಿಲ್ಲಿಂಗ ಪೂಜೆಯೂ ಇರಲಾರದು. ವೀರಶೈವರಲ್ಲಿ ಲಿಂಗ ಪೂಜೆಗಳು ಕೆಲವು ವಿಧಗಳಾಗಿರುತ್ತವೆ. ಅವು ನವಲಿಂಗ ಪೂಜೆ, ಷಡ್ಲಿಂಗ ಪೂಜೆ ತ್ರಿಲಿಂಗ ಪೂಜೆ, ಎಂದು ಹೇಳಬಹುದು. ಆದರೆ ಇವೆಲ್ಲವುಗಳು ಪರಸ್ಪರ ಸಂಬಂಧವುಳ್ಳವಾದವುಗಳಿವೆ. ಇಷ್ಟ, ಪ್ರಾಣ, ಭಾವ ಲಿಂಗಗಳ ಪೂಜೆಯೇ ತ್ರಿಲಿಂಗ ಪೂಜೆಯು. ಈ ಪೂಜೆಯು ಪ್ರತಿಯೊಬ್ಬ ವೀರಶೈವನು ಮಾಡುವ ಪೂಜಾ ಕ್ರಿಯೆಗಳಲ್ಲಿ ಅಡಕವಾ

ಗಿರುತ್ತದೆ. ಆದರೆ ಇವುಗಳನ್ನು ಮಾಡಬೇಕಾದರೆ ಆಯಾ ಸ್ಥಲಗಳಿಗನುಸರಿಸಿ ೬ ವಿಧ ಕ್ರಿಯೆಗಳಿಂದ ಮಾಡತಕ್ಕದ್ದು. ವೀರಶೈವ ವಚನಕಾರರು ಇದರ ವರ್ಣನೆಯನ್ನು ಸವಿಸ್ತಾರವಾಗಿ ತಮ್ಮ ಗ್ರಂಥಗಳಲ್ಲಿ ಮಾಡಿರುತ್ತಾರೆ. ×

ನವಲಿಂಗ ಪೂಜೆಯು ಹೆಚ್ಚಿಗೆ ಸೂಕ್ಷ್ಮನಾಗಿರುತ್ತದೆ. ಷಟ್‌ಸ್ಥಲ ಶಾಸ್ತ್ರದ ಮರ್ಮಗಳನ್ನು ಅರಿತವರಿಗೆ ಮಾತ್ರ ಈ ಪೂಜೆಯ ರೀತಿಗಳು ತಿಳಿಯುತ್ತವೆ. ಇದರಲ್ಲಿ ಧ್ಯಾನದ ಮಹತ್ವವು ಹೆಚ್ಚಿಗಿರುತ್ತದೆ. ಈ ಪೂಜಾಕ್ರಮದಿಂದ ಆರು ಚಕ್ರಗಳಾದ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ ಮತ್ತು ಆಜ್ಞೆ ಇವುಗಳಲ್ಲಿಯ ಆರು ಲಿಂಗಗಳು ಪ್ರಜ್ವಲ ಹೊಂದುವದಲ್ಲದೆ ಈ ಆರಕ್ಕೆ ಮೇಲ್ಪಟ್ಟಿರುವ ಮೂರು ಲಿಂಗಗಳೂ ಸಹ ಪ್ರಜ್ವಲಗೊಳ್ಳುತ್ತವೆ. ಈ ಮೇಲಿನ ಮೂರು ಲಿಂಗಗಳಾವವೆಂದರೆ ಬ್ರಹ್ಮರಂಧ್ರದಲ್ಲಿ ಸಹಸ್ರದಳ ಕಮಲವಿದ್ದು ಅಲ್ಲಿ ನಿಷ್ಕಲ ಲಿಂಗವು. ಇದರ ಮುಂದೆ ಶಿಖಾಚಕ್ರವಿದ್ದು ಅದರ ತ್ರಿದಳ ಮಂಟಪದಲ್ಲಿ ಶೂನ್ಯಲಿಂಗವು. ಇದರ ಮುಂದೆ ಪಶ್ಚಿಮ ಚಕ್ರವಿದ್ದು ಅದರ ಏಕದಳ ಮಂಟಪದಲ್ಲಿ ನಿರಂಜನ ಲಿಂಗವು ಈ ಪ್ರಕಾರ ಇವೆ. ಇವುಗಳನ್ನೆಲ್ಲ ಧ್ಯಾನ ಕ್ರಿಯೆಗಳಿಂದ ಕಂಡುಹಿಡಿಯಬೇಕಾಗುತ್ತದೆ. ಇದೇ ನವಲಿಂಗ ಪೂಜೆಯು. ಈ ಪ್ರಕಾರ ೯ ಲಿಂಗಗಳ ತರುವಾಯ ಬಟ್ಟ ಬರಿಯ ಬಯಲು ಇದ್ದು ಕಡೆಗೆ ಅದರಲ್ಲಿಯೇ ಭಕ್ತನು ಅಡಗತಕ್ಕವನಾಗಿರುವನು. ಇದೇ ನಿರವಯವು. ವಚನಕಾರರ ಪ್ರಕಾರ ಬೇರೆ ಬೇರೆ ಲಿಂಗಪೂಜೆಗಳು ಮೇಲೆ ಹೇಳಿದಂತೆ ಇವೇ ಇರುತ್ತವೆ. ಇದೇ ಶಿವಯೋಗವು.

ಚಿಲ್ಲಿಂಗ ಪೂಜೆ ಎಂದರೆ ಪ್ರಾಣಲಿಂಗ ಪೂಜೆಯು ಎಂದು ತಿಳಿದದ್ದಾದರೆ, ಈ ಪೂಜೆಯು ಇಷ್ಟಲಿಂಗ ಪೂಜೆ ಇಲ್ಲದೆ ಸಾಧ್ಯವಲ್ಲ. ಇದೇ ವೀರಶೈವ ಮತದ ಸಿದ್ಧಾಂತವು. ಈ ಬಗ್ಗೆ ಬಸವಾದಿ ಪ್ರಮಥರ ಕಾಲದಲ್ಲಿ ಬಹಳ ಚರ್ಚೆಯಾಗಿದ್ದು ಇದೇ ಸಿದ್ಧಾಂತವು ಕಡೆಗೆ ಸ್ಥಿರಗೊಳಿಸಲ್ಪಟ್ಟಿರುತ್ತದೆ. ಸಿದ್ಧರಾಮ ಶಿವಯೋಗಿಯು ಇಷ್ಟಲಿಂಗ ಪೂಜೆ ಇಲ್ಲದೆ ಪ್ರಾಣಲಿಂಗ ಪೂಜೆಯು ಶಕ್ಯವೆಂಬ ಅಭಿಪ್ರಾಯವುಳ್ಳವನಾಗಿ

---

× ಈ ವಿಷಯದ ಬಗ್ಗೆ ಲಿಂಗ ಪೂಜೆಯ ತತ್ವಗಳು (ಶಿವಾನುಭವ ಗ್ರಂಥಮಾಲೆ) ಈ ಪುಸ್ತಕವನ್ನು ನೋಡಿರಿ.

ದ್ದನು. ಆದರೆ ಶಿವಶರಣರು ಈ ಅಭಿಪ್ರಾಯವನ್ನು ಖಂಡಿಸಿ ಸಿದ್ಧರಾಮನಿಗೆ ಲಿಂಗಧಾರಣೆಯನ್ನು ಮಾಡಿಸಿರುವರು. ಅವರು ಯಾವ ಯಾವ ಕಾರಣಗಳಿಗೋಸ್ಕರ ಈ ಅಭಿಪ್ರಾಯವುಳ್ಳವರಿದ್ದರೆಂಬುದು ಶೂನ್ಯಸಂಪಾದನೆ ಗ್ರಂಥದ ಸಿದ್ಧರಾಮೇಶ್ವರನ ಸಂಪಾದನೆ ಈ ಭಾಗದಲ್ಲಿ ಸವಿಸ್ತಾರವಾಗಿ ವಿವರಿಸಲ್ಪಟ್ಟಿದ್ದು ಅದನ್ನು ವಾಚಕರು ನೋಡಬಹುದು.

ಪ್ರಾಣಲಿಂಗವು * ಸೂಕ್ಷ್ಮ ಶರೀರಕ್ಕೆ ಸಂಬಂಧ ಪಟ್ಟಿದ್ದಿರುತ್ತದೆ. ಸೂಕ್ಷ್ಮ ಶರೀರದ ಶುದ್ಧ ಚೈತನ್ಯವೇ ಪ್ರಾಣಲಿಂಗವು. ಈ ಸೂಕ್ಷ್ಮ ಶರೀರವು ಸ್ಥೂಲ ಶರೀರವನ್ನು ಬಿಟ್ಟು ವ್ಯವಹರಿಸಲಾರದು. ಅದರ ಕಾರ್ಯಗಳು ಸ್ಥೂಲ ಶರೀರದ ಮೇಲೆ ಅವಲಂಬಿಸಿರುತ್ತವೆ. ಸ್ಥೂಲ ಶರೀರಕ್ಕೆ ಕರ್ಮೇಂದ್ರಿಯಗಳೂ ಜ್ಞಾನೇಂದ್ರಿಯಗಳೂ ಇದ್ದು ಇವುಗಳ ಕ್ರಿಯೆಗಳಿಂದಲೇ ಸೂಕ್ಷ್ಮಶರೀರದ ಕಾರ್ಯಗಳು ಪ್ರಕಟವಾಗುತ್ತವೆ. ಆದ್ದರಿಂದ ಈ ಕರ್ಮೇಂದ್ರಿಯಗಳು ನಷ್ಟವಾದರೆ ಸೂಕ್ಷ್ಮ ಶರೀರವು ವ್ಯವಹರಿಸಲಾರದು. ಈ ಸ್ಥಿತಿಯಲ್ಲಿ ಅದರ ಬೆಳವಣಿಗೆಯೂ ನಿಲ್ಲುವದು. ಆದ್ದರಿಂದ ಸ್ಥೂಲ ಶರೀರವನ್ನು ವಿಕಾಸಗೊಳಿಸುವದೇ ಷಟ್‍ಸ್ಥಲ ಶಾಸ್ತ್ರದ ಪ್ರಥಮ ಕಾರ್ಯವಾಗಿರುತ್ತದೆ. ಇದರ ರೀತಿಯು ಭಕ್ತ ಮಾಹೇಶ್ವರ ಈ ಸ್ಥಲಗಳಲ್ಲಿ ಹೇಳಲ್ಪಡುತ್ತದೆ. ಆ ಪ್ರಕಾರ ವರ್ತಿಸಿದರೆ ಭಕ್ತನಲ್ಲಿ ಆಚಾರಲಿಂಗ ಗುರುಲಿಂಗಗಳು ಪ್ರಕಾಶಿತವಾಗುವವು. ಈ ಎರಡು ಲಿಂಗಗಳು ಇಷ್ಟಲಿಂಗದ ಭಾಗಗಳಾಗಿವೆ. ಹೀಗೆ ಇಷ್ಟಲಿಂಗವನ್ನು ಹೊಂದಿ ಪ್ರಾಣಲಿಂಗವನ್ನು ಉಜ್ವಲಗೊಳಿಸತಕ್ಕದ್ದಾಗಿರುವದು. ಆದ್ದರಿಂದ ಇಷ್ಟಲಿಂಗವನ್ನು ಬಿಟ್ಟು ಪ್ರಾಣಲಿಂಗವನ್ನು ಸಾಧಿಸುವದು ಆಗಲಾರದು. ಇದೇ ಷಟ್‍ಸ್ಥಲ ಶಾಸ್ತ್ರದ ಸಿದ್ಧಾಂತವಾಗಿದೆ. ಆದ್ದರಿಂದ ಇಷ್ಟಲಿಂಗ ಪೂಜೆಯನ್ನು ಬಿಟ್ಟು ಪ್ರಾಣಲಿಂಗದ ಪೂಜೆಯುಯಾಗುವದು ಅಶಕ್ಯವು. ಆದ್ದರಿಂದ ಚಿಲ್ಲಿಂಗ ಪೂಜೆಯು ಪ್ರತ್ಯೇಕವಾಗಿ ಇರಲಾರದು.

ಪ್ರಶ್ನ:— ೨. ಪಂಚಪ್ರಣವಗಳಾವವು? ಅವುಗಳ ಉಪಯೋಗವೇನು?

---

* ಇದರ ಸವಿಸ್ತಾರ ವಿವೇಚನೆಯು ವಚನಶಾಸ್ತ್ರಸಾರ ಪುಟ ೪೦೬ ಇದರಲ್ಲಿ ಬಂದಿದೆ.

ಉತ್ತರಃ— ಪಂಚ ಪ್ರಣವಗಳು ಓಂಕಾರದಿಂದಲೇ ಹುಟ್ಟಿರುತ್ತವೆ. ಅವು ಪಂಚಾಕ್ಷರೀ ಮಂತ್ರದ ಆ ಅವಯವಗಳು. ಅವು ಯಾವವೆಂಬುದು ಪ್ರತಿಯೊಬ್ಬ ವೀರಶೈವನಿಗೆ ಅವಗತನೇ ಇರುತ್ತದೆ. ಮಂತ್ರಗಳು ಪರಮಾತ್ಮನನ್ನು ನೆನೆಯಲಿಕ್ಕೆ ಸಾಧನಗಳಾಗಿವೆ. ಅವುಗಳ ಧ್ಯಾನದಿಂದಲೇ ಮನುಷ್ಯನಲ್ಲಿ ಲಿಂಗ ಕಳೆಗಳು ಉದ್ಭವಿಸಿ ಆಯಾ ಚಕ್ರಗಳಲ್ಲಿ ಆಚಾರಲಿಂಗ, ಗುರುಲಿಂಗ ಮೊದಲಾದ ಹೆಸರಿನಿಂದ ಪ್ರಕಟವಾಗುತ್ತವೆ.

ವೀರಶೈವನು ಲಿಂಗಧಾರಣವುಳ್ಳವನಾಗಿರುವದರಿಂದ ಮಂತ್ರ ಶರೀರಿಯಾಗಿರುವನು. ಅವನು ಧರಿಸಿರುವ ಇಷ್ಟಲಿಂಗವೂ ಅದರಂತೆ ಪ್ರಾಣಲಿಂಗವೂ ಭಾವಲಿಂಗವೂ ಪರಸ್ಪರ ಸಂಬಂಧವುಳ್ಳವಾಗಿ ಮಂತ್ರದಿಂದಲೇ ಕಲಾಪೂರ್ಣವಾಗುತ್ತವೆ. ಈ ಮೂರು ಲಿಂಗಗಳ ಚೈತನ್ಯ ಶಕ್ತಿಯನ್ನು ಪಂಚಾಕ್ಷರೀ ಮಂತ್ರದಿಂದಲೇ ಭಕ್ತನು ಪ್ರಜ್ವಲಗೊಳಿಸತಕ್ಕದ್ದಾಗಿರುವದು.

ಮಂತ್ರವು ಶರೀರವನ್ನಾವರಿಸಲು ಅದರ ಪೂರ್ವಭಾಗವಾದ ಓಂಕಾರವು ಭಕ್ತನ ಹೃದಯಸ್ಥಾನದಲ್ಲಿ ನೆಲೆಗೊಳ್ಳುವದು. ಈ ಹೃದಯವು ಮನುಷ್ಯನ ಎಲ್ಲ ಇಂದ್ರಿಯಗಳಿಗೂ ಸಂಬಂಧ ಪಟ್ಟಿರುತ್ತದೆ. ಆದ್ದರಿಂದ ಅದು ಸರ್ವೇಂದ್ರಿಯವೆಂದೆನ್ನಿಸಿಕೊಳ್ಳುವದು. ಹೃದಯದಲ್ಲಿರುವ ಈ ಓಂಕಾರ ಮಂತ್ರವು ಮನುಷ್ಯನ ಎಲ್ಲ ಇಂದ್ರಿಗಳಲ್ಲಿಯೂ ವ್ಯವಹರಿಸಹತ್ತುವದು. ಈ ವ್ಯವಹರಣೆಯು ಪಂಚಾಕ್ಷರಿಯ ಬೇರೆ ಬೇರೆ ಪಂಚಪ್ರಣವಾಕ್ಷರಗಳ ಮೂಲಕವಾಗಿಯೇ ನಡೆಯುವದು. ಆಗ್ಗೆ ಘ್ರಾಣದಲ್ಲಿ ನಕಾರವು ಜಿಹ್ವೆಯಲ್ಲಿ ಮಕಾರವು, ನೇತ್ರದಲ್ಲಿ ಶಿಕಾರವು, ಶ್ರವಣದಲ್ಲಿ ವಕಾರವು, ತ್ವಕ್ಕಿನಲ್ಲಿ ಯಕಾರವು ಈ ಪ್ರಣವಗಳು ನೆಲೆಗೊಳ್ಳುವವು.) ಹೀಗೆ ಈ ಇಂದ್ರಿಯಗಳು ಈ ಪ್ರಣವ ಮಂತ್ರಗಳ ಶಕ್ತಿಯೊಡನೆ ಬೆರೆದು ವ್ಯವಹರಿಸಹತ್ತಲು ಅವನ ನಡತೆ ವಿಚಾರ ಮೊದಲಾದವುಗಳು ಉಚ್ಚ ಭಾವವನ್ನೈದುವವು. ಆಗ್ಗೆ ಅವನಲ್ಲಿಯ ಚಕ್ರಗಳ ಚಲನೆಯು ಪ್ರಾರಂಭವಾಗುವದು. ಅದು ಹ್ಯಾಗೆಂದರೆ ಘ್ರಾಣೇಂದ್ರಿಯಕ್ಕೆ ಆಧಾರ ಚಕ್ರವು ಸಂಬಂಧಿಸಿದ್ದದರಿಂದ ಅದರಲ್ಲಿ ಆಚಾರ ಲಿಂಗವೂ ಜಿಹ್ವೇಂದ್ರಿಯಕ್ಕೆ ಸ್ವಾಧಿಷ್ಠಾನ ಚಕ್ರವು ಸಂಬಂಧಿಸಿದ್ದುದರಿಂದ ಅದರಲ್ಲಿ ಗುರುಲಿಂಗವೂ ನೇತ್ರೇಂದ್ರಿಯಕ್ಕೆ ಮಣಿಪೂರಕ ಚಕ್ರವು ಸಂಬಂಧಿಸಿದ್ದುದರಿಂದ ಅದರಲ್ಲಿ ಶಿವಲಿಂಗವೂ ಶ್ರವಣೇಂದ್ರಿಯಕ್ಕೆ ಅನಾಹತ ಚಕ್ರವು ಸಂಬಂಧಪಟ್ಟದ್ದಿ

ರುವದರಿಂದ ಆದರಲ್ಲಿ ಜಂಗಮ ಲಿಂಗವೂ, ತ್ವಗಿಂದ್ರಿಯಕ್ಕೆ ವಿಶುದ್ಧಿ ಚಕ್ರವು ಸಂಬಂಧಪಟ್ಟದ್ದಿರುವದರಿಂದ ಆದರಲ್ಲಿ ಪ್ರಸಾದ ಲಿಂಗವೂ ಪ್ರಜ್ವಲಿಸುವವು. ಆಗ ಭಕ್ತನ ನೈತಿಕಾಚಾರಗಳು ಮಾನಸಿಕ ಮತ್ತು ಬೌದ್ಧಿಕ ಕ್ರಿಯೆಗಳು ಉನ್ನತಾವಸ್ಥೆಯನ್ನು ಹೊಂದುತ್ತ ಹೋಗುವವು. ಇವೆಲ್ಲವೂ ಈ ಮಂತ್ರಗಳ ಭಾವದಿಂದಲೆ ಇವೆ.

ಈ ಪ್ರಕಾರ ಈ ಲಿಂಗಗಳು ಪ್ರಜ್ವಲಿಸಬೇಕಾದರೆ, ಆಯಾ ಪ್ರಣವಗಳ ಅರ್ಥವನ್ನು ತಿಳಿದುಕೊಂಡು ಅವುಗಳ ಜಪಗಳನ್ನು ಭಕ್ತನು ಮಾಡತಕ್ಕದ್ದು. ಈ ಜಪಗಳು ಬೇರೆ ಬೇರೆ ಲಿಂಗಗಳಿಗನುಸಾರವಾಗಿ ನಿಶ್ಚಿತ ಸಂಖ್ಯೆಯುಳ್ಳವಾಗಿವೆ. ಆಚಾರ ಲಿಂಗದ ಜಪಗಳು ೧೭೨೮, ಗುರು ಲಿಂಗದ ಜಪಗಳು ೨೫೯೨, ಶಿವ ಲಿಂಗದ ಜಪಗಳು ೪೩೨೦ ಜಂಗಮ ಲಿಂಗದ ಜಪಗಳು ೫೧೮೪, ಪ್ರಸಾದ ಲಿಂಗದ ಜಪಗಳು ೬೯೧೨, ಮಹಾಲಿಂಗದ ಜಪಗಳು ೮೬೪ ಹೀಗೆ ಒಟ್ಟಿಗೆ ೨೧೬೦೦ ಜಪಗಳು ಇರುತ್ತವೆ.×

ಈ ಪ್ರಕಾರ ಪ್ರಣವ ಮಂತ್ರಗಳ ಸಹಾಯದಿಂದ ಭಕ್ತನ ಇಂದ್ರಿಯಗಳು ಶುದ್ಧತೆಯನ್ನು ಹೊಂದುವವು. ಅವು ಶುದ್ಧತೆಯನ್ನು ಹೊಂದಿದ ಹಾಗೆ ಅವನ ಒಳಗಿನ ಚಕ್ರಗಳೂ ಚೈತನ್ಯ ಹೊಂದುವವು. ಅವುಗಳ ಚೈತನ್ಯವೇ ಅವುಗಳಲ್ಲಿ ಆಯಾಲಿಂಗ ರೂಪವಾಗಿ ವ್ಯವಹರಿಸಹತ್ತುವವು.

ಈ ಪ್ರಕಾರ ಭಕ್ತ ತನ್ನಲ್ಲಿ ಈ ಪ್ರಣವಗಳ ಮೂಲಕ ಲಿಂಗನ್ನು ಶಕ್ತಿಗಳನ್ನು ಬರಮಾಡಿಕೊಂಡಂತೆ ಅವನು ಜಗತ್ತಿನಲ್ಲೆಲ್ಲ ವ್ಯವಹರಿಸುವ ಅದ್ಭುತ ಶಕ್ತಿಗಳೊಡನೆ ಕೂಡಿ ಬೆರೆದುಕೊಂಡು ಚರಿಸಲಿಕ್ಕೆ ಸಾಮರ್ಥ್ಯವನ್ನು ಹೊಂದುವನು. ಯಾಕಂದರೆ ಬ್ರಹ್ಮಾಂಡದಲ್ಲೆಲ್ಲ ಇವೇ ಶಕ್ತಿಗಳೇ ವ್ಯವಹರಿಸುತ್ತವೆ. ಆಗ ಅವನಿಗೆ ಸ್ಥಾವರಜಂಗಮವೆರಡೂ ಏಕರೂಪತೆಯಿಂದ ವ್ಯವಹರಿಸುವವು. ಹೀಗೆ ಯಾವನಿಗೆ ಶಕ್ತಿಯೂ ಬರುತ್ತದೋ ಅವನೇ ಪ್ರಾಣಲಿಂಗಿಯು. ಅಷ್ಟಾವರಣಗಳಲ್ಲಿ ಒಂದಾದ ಮಂತ್ರದ ಉಪಯೋಗವು ಈ ಪ್ರಕಾರ ಇರುತ್ತದೆ.

---

× ಇವು ಪರಮಾವಧಿಯಾಗಿರುತ್ತವೆ. ಕಡಿಮೆ ಸಂಖ್ಯೆಯುಳ್ಳ ಜಪಗಳೂ ಇವೆ.

ಪ್ರಶ್ನೆ:— ೩. ಉಪನಿಷತ್ತುಗಳಲ್ಲಿ ಲಿಂಗಾಂಗ ಸಂಗದ ಪ್ರತಿಪಾದನೆಯ ಭಾಗಗಳು ಯಾವವು?

ಉತ್ತರ:- ಲಿಂಗಾಂಗ ಸಂಗವೆಂದರೆ ಶಿವಜೀವೈಕ್ಯವೇ ಇರುತ್ತದೆ. ಇದು ಪರಬ್ರಹ್ಮವಸ್ತುವಿನಲ್ಲಿ ಬೆರೆಯೋಣವು. ಈ ವಿಷಯವು ಎಲ್ಲ ಉಪನಿಷದ್ಗ್ರಂಥಗಳಲ್ಲಿಯೂ ದೊರೆಯುತ್ತವೆ. ಆದರೆ ಲಿಂಗ ಮತ್ತು ಅಂಗ ಎಂಬ ಶಬ್ದಗಳು ಮಾತ್ರ ಅವುಗಳಲ್ಲಿ ಅಷ್ಟು ವಿಪುಲವಾಗಿ ಸಿಗಲಿಕ್ಕಿಲ್ಲ. ಹಿಂದೂ ಧರ್ಮದಲ್ಲಿಯೇ ಅನೇಕ ಮತಗಳು ಉತ್ಪನ್ನವಾಗಿದ್ದು ಅವುಗಳ ಪ್ರತಿಪಾದಕರು ತಮ್ಮ ವಿಚಾರಗಳನ್ನು ನಿರೂಪಿಸಲು ತಮ್ಮ ತಮ್ಮ ವಿಶಿಷ್ಟ ಶಬ್ದಗಳನ್ನು ಕಲ್ಪಿಸಿಕೊಂಡು ಅವುಗಳನ್ನು ಉಪಯೋಗಿಸುವದುಂಟು. ಹಾಗೆ ವೀರಶೈವರಾದರೂ ತಮ್ಮ ವಿಶಿಷ್ಟ ಶಬ್ದಗಳನ್ನು ಕಲ್ಪಿಸಿರುವರು. ಅಂಗ, ಲಿಂಗ ಸಾಮರಸ್ಯ ಈ ಶಬ್ದಗಳೆಲ್ಲವೂ ಅವರ ಗ್ರಂಥಗಳಲ್ಲಿಯೇ ಹೆಚ್ಚಾಗಿ ಸಿಗತಕ್ಕವಾಗಿವೆ.



# ಉಪಕಾರವೇ!

(ಲೇಖಕಃ—ಈಶ್ವರ ಸಣಕಲ್ಲ ರಬಕವಿ.)



ವಾ. ಷ. ತರುವಿನೊಳು ಹಣ್ಣಾಗಿ, ಹೂವಿನೊಳು ಕಂಪಾಗಿ,
ತೊರೆಗಡಲು ಮುಗಿಲಿನೊಳು ಹರಿವ ಜೀವನವಾಗಿ,
ದರೆಗೆಲ್ಲ ಬೆಳಕಾಗಿ ಬಿಸಿಗದಿರಿನೊಳು, ಸೊದೆಯ ಹೊನಲಾಗಿ
ತಿಂಗಳಿನೊಳು, ।
ಎರಲೊಳಗೆ ಸಕಲ ಜೀವಿಗಳ ಜೀವಾಳಾಗಿ,
ತಿರೆಯೊಳಗೆ ತರತರದ ಬೆಳೆಯಾಗಿ, ಮತ್ತೆ ದೇ-
ವರ ದೇವನೇ ನೀನೆ, ನೀನೆಯಾ ದೇವನಹ ಸೂಕ್ಷ್ಮವು ಉಪ
ಕಾರವೇ! ॥೧॥

ಇಳೆಯೊಳಗಡೆಲ್ಲಿಯೋ ಮರುಕದಯೆ ಯೌದಾರ್ಯ-
ಗಳ ರೂಪಿಸಿಂದೆ ಕೆಲ ಸಾಧುಸಜ್ಜನ ಕರುಣಿ-
ಗಳ ಬಳಸಿ ಸುಳಿವ ನೀನೆಲ್ಲೆಡೆಯೊಳೆಲ್ಲರೊಳಗೇಕೆ ತಲೆದೋ
ರಲಿಲ್ಲ? ।
ತಲೆದೋರಿ ಹೊಳೆಯುತ್ತ ದುಃಖ ದಾರಿದ್ರ್ಯಗಳ
ನಿಲದಂತೆಯೋಡಿಸುತ ಸತ್ಯ ಸುಖಶಾಂತಿಯಿಂ
ದಿಳೆಯಿದನು ತುಂಬುತಲಿ ಬೆಳಗುತಿಹ ಸಗ್ಗವನ್ನೇಕೆ ನೀನೆಸ
ಗಲಿಲ್ಲ? ॥೨॥

ಬೆಲೆಗೇಡಿ ಖಲಸ್ವಾರ್ಥಿ ವಂಚಕರು ನಿನ್ನ ಬಲು
ಬೆಲೆ ಬಾಳ್ವ ಹೆಸರಿನಿಂ ಸ್ವಾರ್ಥ ಸಾಧಿಸುತಕಟ!
ತಿಳಿಯದಿಹ ಬಡಜನರ ಗೋಣ್ಮುರಿದು ಕೊಲೆ ಮಾಡುತಿರು
ವದನು ನೋಡು! ನೋಡು!! ।
ಕೊಲುವದನು ನೋಡಿ ನೀ ಬಲುಮೆಯಿಂದವರೆದೆಯ-
ನೊಳಪೊಕ್ಕು, ಹೊರದೂಡಿ ಹೊಲಸುತನವನು, ಬಗೆಯ
ತೊಳೆಯುತ್ತ ಸರಿಗೊಳಿಸಿಯುವರನ್ನು ಸಾಧು ಸಜ್ಜನರನ್ನು
ಮಾಡು! ಮಾಡು!! ॥೩॥

ಬೆರೆಯುತಲಿ ಈ ಸೃಷ್ಟಿ ರೋಮರೋಮಗಳಲ್ಲಿ
ಹರಿಯುತಿಹ ಉಪಕಾರವೇ, ನೀನು ಕರುಣದಿಂ

ಹರಿಸೊಡನೆ ಸಕಲ ಜನಮನಗಳಲಿ ನಿನ್ನ ಯೋಗ್ಯತೆಗೇನು
ಕುಂದಿರುವದು?।
ಕರಿಗತ್ತಲೆಯು ಜಗದೊಳಿರಲು ಬೆಳಕಿಗೆ ಬೆಲೆಯು
ಬರುವದೆಂಬೀ ನುಡಿಗೆ ಯಾಪರವ ನೀಯದಿರು;
ತ್ವರೆಮಾಡು! ತ್ವರೆಮಾಡು!! ಹರವು ನಿನ್ನಯ ಮಿರುಗುತಿಹ
ಬೆಳಕನೀಜಗದೊಳು ॥೪॥

ಬೇಡುವೊಡೆ ಬೇಡು ನಿಷ್ಕಾಮೋಪಕಾರಿಯನು,
ಕಾಡುವೊಡೆ ಕಾಡು ನಿಷ್ಕಾಮೋಪಕಾರಿಯನು,
ಕೂಡುವೊಡೆ ಕೂಡು ನಿಷ್ಕಾಮೋಪಕಾರಿಯನು, ಹಗಲಿರುಳು
ಸೇವೆಯನ್ನು!।

ಮಾಡುವೊಡೆ ಮಾಡು ನಿಷ್ಕಾಮೋಪಕಾರಿಯೂ,
ಹಾಡುವೊಡೆ ಹಾಡು ನಿಷ್ಕಾಮೋಪಕಾರಿಯನು,
ಮೂಡುವೊಡೆ ಮೂಡು ನಿಷ್ಕಾಮೋಪಕಾರಿಯಲಿ-ಯಾದೇವನಲ್ಲಿ
ಮನವೇ ॥೫॥

---

## ಕುರುಡ.

ಕುರುಡಾಗಿ ಮರಗುತಿರುವೆ। ಹರಹರನೆ। ಕುರುಡಾಗಿ ಕೊರಗುತಿರುವೆ।
ಕತ್ತಲೆಯೆ ಕತ್ತಲೆಯು! ಕತ್ತಲೆಯೆ ಕತ್ತಲೆಯು!
ಸುತ್ತಿಹುದು ಎತ್ತೆತ್ತಲೀಕ್ಷಿಸಿದೊಡತ್ತತ್ತ!
ಮುತ್ತಿಹುದು ಒಳಹೊರಗು, ಹತ್ತಿಹದು ಮೇಲ್ಕೆಳಗು.
ಸತ್ತಿರುವೆ ಜೀವಿಸಿಯು! ಸತ್ತು ನಾ ಜೀವಿಸುವೆ!
ಕತ್ತಲೆಯೆ ಜಗವಾಗಿದೆ!। ಹಾ ದೇವ! ಜಗವೆ ಕತ್ತಲೆಯಾಗಿದೆ ॥೧॥

ಕಣ್ಣಿನಿಂ ಬಗೆಯೋಡಿ, ಕಣ್ಣಿನಿಂ ಜಗನೋಡಿ,
ಕಣ್ಣಿನಿಂ ಸೊಗಸುಂಡು, ಕಣ್ಣಿನಿಂ ಸೊಗಕಂಡು,
ಕಣ್ಣಿನಿಂ ಬೆಳಕಿಡಿದು, ಕಣ್ಣಿನಿಂ ಚಲುವಡೆದು,

ಕಣ್ಣಿನಿಂದೆಲ್ಲವೂ, ಕಣ್ಣಿನೊಳಗೆಲ್ಲವೆನೆ,
ಜೀವವೇ ಭಾವವಾಯ್ತು! । ಭಾವಿಸಲು । ಭಾವವೇ ಜೀವವಾಯ್ತು ॥೨॥

ಇಂತಿರುವ ಕಣ್ಣನೇಕಳಕೊಂಡು ನಾನಿಂದು
ಭ್ರಾಂತಿವಡೆದಳುತಿರುವೆ ಗಳಗಳನೆ ಬಗೆನೊಂದು,
ಚಿಂತೆಯಿಂ ಕುರುಡ! ಮೇಣ್ಡಿಟವಾಗಿಯೂ ಕುರುಡ!
ಸಂತಸದಿ ನಾನಂದು ದಿಟ್ಟಿಸಿದ ನೋಟಗಳು
ಕರಿಪಟದ ಮೇಲ್ತೋರುವ । ಚಿತ್ರಿನೊಲು । ತಿರುಗುವವು ಪರಮಾತ್ಮನೆ ॥೩॥

ಹರುಷದಿಂ ನಿರುಕಿಸುತ ತಣಿಯಬೇಕೆಂದೆಣಿಸಿ
ಧರೆಯನಿದ ನೆಲೆದೇವ, ನಿರ್ಮಾಣ ಮಾಡಿರುವಿ!
ಮೆರೆಯುತಿಹ ಸರಸಾದ ಹರುಷವಹ ನೋಟಗಳ
ನಿರುಕಿಸುತ ನಿನ್ನಂತೆ ಹರುಷಗೊಳಬೇಕೆನಲು
ಕುರುಡನಾಗಿರುವೆನಲ್ಲ! । ಅಕಟಕಟ! । ಮರುಳನಾಗಿರುವೆನಲ್ಲ! ॥೪॥

ಮಾರಹರ ಜಗದೊಳಗೆ ಕಣ್ಣಿನಿಂ ನೋಡಲ್ಕೆ
ಬಾರದಿಹ ನೋಟಗಳು ಉಂಟೇನು? ಕೇಳಲ್ಕೆ
ಬಾರದಿಹ ವಚನಂಗಳಿರುವವೇ? ನುಡಿಯಲ್ಕೆ
ಬಾರದಿಹ ಶಬ್ದಂಗಳಿರುತಿಹವೆ? ಇದ್ದಿರಲು,
ಕಣ್ಣು ಕಿವಿ ಬಾಯಿಗಳನು । ಹೇ ದೇವ । ಇಲ್ಲದೊಲು ಮಾಡು ನೀನು ॥೫॥

ನೀನು ಪರಿಪೂರ್ಣನಿರೆ ನಿನ್ನ ಸೃಷ್ಟಿಯದೆಂತು
ಹೀನಹುದೆ? ತಿಳಿಯನೇ? ಅಪರಿಪೂರ್ಣಹುದೆಂತು?
ಜಾನಿಸಲ್ಕೆಲ್ಲವೂ ನನ್ನದೇಯಪರಾಧ!
ಮಾನನಿಧಿ, ಜಗದ ಸೊಗವೇ ನಿನ್ನ ಹೆಬ್ಬಾಸೆ!
ನಾನು ಗೈದಿರುವದನ್ನು । ತಪ್ಪದಲೆ । ನಾನೆ ಯುಣ್ಣುತಲಿರುವೆನು ॥೬॥

ಹೊರಗಣ್ಣು ಮುಚ್ಚಿರಲು ಒಳಗಣ್ಣು ತೆರೆಯುವದೆ?
ತೆರೆದು ತನ್ನೊಳಗಿರುವ ಬೆಳಕನ್ನು ನಿರುಕಿಸುದೆ?
ನಿರುಕಿಸುತ ಹೊರಗಿರುವ ಬೆಳಕನ್ನು ಮರೆಯುವದೆ?
ಮರೆಯುತಲಿ ತನ್ನೊಳಿಹ ಬೆಳಕಿನೊಳು ಬೆರೆಯುವದೆ?
ಬೆರೆಯುವೊಲು ಆಬೆಳಕವು । ಹೊರಬೆಳಕಿ । ನಿಂದೆಬಲು ಚಲುವೀವದೆ? ॥೭॥

---

# /ಹಡಪದಪ್ಪಣ್ಣಗಳ

## ವಚನಗಳು.

→⁂←

### ಪರಮಾತ್ಮ

೧ ಹರಿ ಬ್ರಹ್ಮ ಕಾಲ ಕಾಮ ದಕ್ಷಾದಿಗಳ ದೇವರೆಂದು ಗಟ್ಟಿಯುತನದೊಳು ಬೊಗಳುವ ಮಿಟ್ಟೆಯ ಭಂಡರು ನೀವು ಕೇಳಿರೋ. ಅವರ ಹುಟ್ಟನರಿಯಿರಿ, ಹೊಂದನರಿಯಿರಿ. ಅವರ ಹುಟ್ಟು ಕೇಳಿರಣ್ಣಾ! ಏನೇನೂ ಇಲ್ಲದಂದು, ಶೂನ್ಯ ನಿಃಶೂನ್ಯಕ್ಕೆ ನಿಲುಕದ ಘನವು ಕೋಟಿ ಚಂದ್ರ ಸೂರ್ಯರ ಬೆಳಗಾಗಿ ಬೆಳಗುತ್ತಿಪ್ಪಲ್ಲಿ, ಓಂಕಾರವೆಂಬ ನಿರಕ್ಷರ ಪುಟ್ಟಿತ್ತು. ಓಂಕಾರದಿಂದ ನಕಾರ, ಮಕಾರ, ಶಿಕಾರ, ವಕಾರ, ಯಕಾರವೆಂಬ ಪಂಚಾಕ್ಷರ ಪುಟ್ಟಿದವು. ಆ ಪಂಚಾಕ್ಷರಿಗೆ ಪರಾಶಕ್ತಿ ರೂಪಾದಳು. ಆ ಪಂಚಾಕ್ಷರಕ್ಕು ಪರಾಶಕ್ತಿಗು, ಇಬ್ಬರಿಗು, ಸದಾಶಿವನಾದ. ಆ ಸದಾಶಿವಂಗೆ ಜ್ಞಾನಶಕ್ತಿಯಾದಳು. ಆ ಸದಾಶಿವಂಗೆ ಜ್ಞಾನಶಕ್ತಿಯರಿಬ್ಬರಿಗೂ ಶಿವನಾದ. ಆ ಶಿವಂಗೆ ಇಚ್ಛಾಶಕ್ತಿಯಾದಳು. ಆ ಶಿವಂಗು ಇಚ್ಛಾಶಕ್ತಿಗು ಇಬ್ಬರಿಗು ರುದ್ರನಾದ. ಆ ರುದ್ರಂಗೆ ಕ್ರಿಯಾಶಕ್ತಿಯಾದಳು. ಆ ರುದ್ರಂಗೂ ಕ್ರಿಯಾಶಕ್ತಿಗೂ ಇಬ್ಬರಿಗು, ವಿಷ್ಣುವಾದ. ಆ ವಿಷ್ಣು ಪಡೆದ ಸತಿ ಲಕ್ಷ್ಮಿಯು. ಆ ವಿಷ್ಣುವಿಂಗೂ ಮಹಾಲಕ್ಷ್ಮಿಗು ಇವರಿಬ್ಬರಿಗೂ ಬ್ರಹ್ಮನಾದ. ಆ ಬ್ರಹ್ಮಂಗೆ ಸರಸ್ವತಿಯ ಕೊಟ್ಟು, ಬರೆವ ಸೇವೆಯ ಕೊಟ್ಟ. ಬ್ರಹ್ಮಂಗು ಸರಸ್ವತಿಗೂ ಇಬ್ಬರಿಗು ಮನುಮುನಿ ದೇವರ್ಕಳಾದರು. ಆ ಮನುಮುನಿ ದೇವರ್ಕಳಿಗೆ ಸಕಲ ಸಚರಾಚರವಾಯಿತ್ತು. ಇಹಲೋಕಕ್ಕೆ ನರರು ಆಗಬೇಕೆಂದು ಬ್ರಹ್ಮನು ಹೋಗಿ, ಹರನಿಗೆ ಬಿನ್ನಹಂ ಮಾಡಲು, ಹರನು ಪರಮ ಜ್ಞಾನದಿಂದ ನೋಡಿ, ತನ್ನ ಶರೀರದಿಂದಲೆ ನಾಲ್ಕು ಜಾತಿಯ ಪುಟ್ಟಿಸಿ, ಇಹಲೋಕಕ್ಕೆ ಕಳುಹಿದನು. ಆ ಶಿವನ ಶರೀರದಲ್ಲಿ ಪುಟ್ಟಿದವರು ಶಿವನನ್ನೇ ಅರ್ಚಿಸಿ, ಶಿವನನ್ನೇ ಪೂಜಿಸಿ, ಶಿವನನ್ನೇ ಭಾವಿಸಿ, ಶಿವನೊಳಗಾದರು. ಅದರಿಂದಾದ ಭವಬಾಧೆಗಳು ತಾವು

ತವ್ಮ ಹುಟ್ಟನರಿಯದೆ, ಹುಟ್ಟಿಸುವಾತ ಬ್ರಹ್ಮ, ರಕ್ಷಿಸುವಾತ ವಿಷ್ಣು, ಶಿಕ್ಷಿಸುವಾತ ರುದ್ರನೆಂದು ಹೇಳಿದರು. ಈ ಭ್ರಷ್ಟರ ಮಾತ ಕೇಳಿ ಕೆಟ್ಟಿತ್ತು ಜಗವೆಲ್ಲ. ಆಗ ಶಿವನು ಕೊಟ್ಟು ಕಳಿಹಿದ ಮಾಯೆಗೆ ಮರವೆಂಬ ಪಾಶ. ಅವಳು ಕಟ್ಟಿ ಕೆಡಹಿದಳು ಮೂರು ಜಗವೆಲ್ಲವನು. ಇವಳ ಕಟ್ಟಿಗೊಳಗಾದ ಭ್ರಷ್ಟರೆತ್ತಬಲ್ಲರೋ ನಿಮ್ಮ ಶರಣರ ಸುದ್ದಿಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ?

೨. ಆದಿ ಅನಾದಿ ಅಂತ್ಯವೆಂದು, ನುಡಿದಾಡುವರಲ್ಲದೆ, ಇವರ ಭೇದಾದಿ ಭೇದವನಾರು ಅರಿಯರು. ಆದಿಯಿಂದತ್ತತ್ತಲಾರು ಬಲ್ಲರು? ಅನಾದಿಯಿಂದತ್ತತ್ತಲಾರು ಬಲ್ಲರು? ಸಾಧಕರಿಗಳವಲ್ಲ. ವೇದ, ಶಾಸ್ತ್ರ, ಆಗಮ ಪುರಾಣಂಗಳು ಕಾಣದೆ ಹೋದವು. ಅದು ಹೇಗೆಂದರೆ, ಆದಿ ಕೂರ್ಮ ಕರಿ ಸರ್ಪ ಹೊತ್ತಿಪ್ಪವೆಂಬರು. ಅವನಾಗು ಮಾಡಿ, ಅವಕ್ಕೆ ಆದಿಯಾಗಿಪ್ಪವರಾರೆಂದು ಅರಿಯರು. ಅನಾದಿಯೆಂಬ ಆಕಾಶದ ಮೇಲೆ, ದಿಕ್ಪಾಲಕರು, ದೇವರ್ಕಳು, ರುದ್ರ, ಶಿವ, ಸದಾಶಿವ ಉಂಟೆಂಬರು. ಅವರ ನಾಗು ಮಾಡಿ, ಅವರ ನಿಲಿಸಿಕೊಂಡಿಪ್ಪವರಾರೆಂದು ಅರಿಯರು. ಇಂತೀ ಅಜಾಂಡ ಬ್ರಹ್ಮಾಂಡವೆಲ್ಲವು ನಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣನ ಕಕ್ಷೆಯೊಳು ಇಪ್ಪವು ಕಾಣಿರೋ.

೩. ಅಯ್ಯ ನಾ ಉತ್ತರವನೇರಿ ನೋಡಲಾಗಿ, ಊರೊಳಗಣ ಉಲುಹೆಲ್ಲ ನಿಂದಿತ್ತು. ಪಶ್ಚಿಮಕ್ಕಿಳಿದು ನೋಡಲಾಗಿ, ಪ್ರಾಣನ ಪವನನ ಸುಳುಹು ನಿಂದಿತ್ತು. ಪೂರ್ವವ ಮೆಟ್ಟಿ ನೋಡಲಾಗಿ, ಆರು ನೆಲೆ ಮೂರಾಗಿದ್ದವು. ದಕ್ಷಿಣಕ್ಕೆ ಬಂದು ನೋಡಲಾಗಿ, ಈರೇಳು ಭುವನವು ಕುಕ್ಷಿಯೊಳಗೆ ನಿಕ್ಷೇಪವಾಗಿದ್ದಿತ್ತು. ಅದು ಹೇಗೆ ಎಂದರೆ, ಇಹಲೋಕವು ತನ್ನೊಳಗೆ, ಪರಲೋಕವು ತನ್ನೊಳಗೆ, ಸಚರಾಚರವೆಲ್ಲವು ತನ್ನೊಳಗೆ, ಶಿವಶಕ್ತಿಯು ತನ್ನೊಳಗೆ, ಭುವನಾದಿ ಭುವನಂಗಳು ತನ್ನೊಳಗೆ. ಅದು ಹೇಗೆಂದರೆ, ಅದಕ್ಕೆ ದೃಷ್ಟವ ಹೇಳಿಹೆನು ಬಲ್ಲವರು ತಿಳಿದು, ನೋಡಿ. ಓಂ ಏಕಮೇವ ನ ದ್ವಿತೀಯ ಎಂಬ ಶ್ರುತಿಯ ಕೇಳಿ ಬಲ್ಲರಿ. ಇಂತಪ್ಪ ಘನಕ್ಕೆ ಒಂದಲ್ಲದೆ, ಎರಡುಂಟೆ? ತಾನಲ್ಲದೆ ಅನ್ಯೋನ್ಯವಿಲ್ಲವೆಂದು ಅರಿದ ಮೇಲೆ ತನಗಿಂದ ಮುನ್ನ ಇವೇನಾದರುಂಟೆ? ಇದು ಕಾರಣ ನಮ್ಮ ದೇವನೊಬ್ಬನೆ. ಬಸವ ಪ್ರಿಯ ಕೂಡಲ ಚನ್ನಬಸವಣ್ಣನಿಂದಂಗೆ ನಮೋ ನಮೋ ಎಂಬೆ.

೪. ಆದಿ ಅನಾದಿ ಎಂದು ಗಾದೆಯ ಮಾತು ನುಡಿದಾಡುವರೆಲ್ಲ ಇವೆರಡರ ಮಧ್ಯದಲ್ಲಿಪ್ಪ ಮಾಯಾ ಪ್ರಪಂಚವನೆ ಅಳಿವುತ್ತ ಪುರಿವುತಿಪ್ಪರಲ್ಲದೆ, ಆದಿಯಿಂದಲತ್ತತ್ತಲಾರು ಬಲ್ಲರು? ಅನಾದಿಯಿಂದತ್ತತ್ತಲಾರುಬಲ್ಲರು? ಇದರ ಭೇದಾದಿ ಭೇದವ ಮುನ್ನಿನ ಆದ್ಯರು ಬಲ್ಲರಲ್ಲದೆ, ಸಾಧಕರಿಂಗಳವಲ್ಲ. ವೇದಶಾಸ್ತ್ರಾಗಮ ಪುರಾತರ ವಚನ ಬಹು ಶ್ರುತಿ ಇದಿರಿಟ್ಟುಕೊಂಡು, ಕೂಗಿಯಾಡಿ, ಗೋಡೆ ಹಾಯಿಸುವ ಜಡನಾದಿಗಳ ಮಾತ ಮೆಚ್ಚರು ನಮ್ಮ ಶರಣರು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೫. ಕಾಣಬಾರದ ಘನವೆಂದು, ಜಗವೆಲ್ಲ ಹೇಳುತ್ತಿದೆ. ಈ ಕಾಣಬಾರದ ಘನವ ನಾನಾರ ಕೇಳಲಯ್ಯಾ! ಗುರು ಹೇಳಲಿಲ್ಲ, ಲಿಂಗ ಹೇಳಲಿಲ್ಲ, ಜಂಗಮ ಹೇಳಲಿಲ್ಲ. ಅದು ಹೇಗೆ ಎಂದರೆ, ಗುರು ಒಂದು ಲಿಂಗವ ಕೊಟ್ಟು, ತನ್ನ ಅಂಗವ ಕುರಿತು, ಆ ಲಿಂಗಕ್ಕೆ ಬೆಲೆಯ ತಕ್ಕೊಂಡು ಹೋದನಲ್ಲದೆ, ಆ ಕಾಣಬಾರದ ಘನವ ಹೇಳಿದುದು ಇಲ್ಲ. ಇದ ಲಿಂಗವೆಂದು ಪೂಜಿಸಿದರೆ, ಕಂಗಳ ಕಾಮ ಘನವಾಯಿತ್ತಲ್ಲ! ಎರಡರ ಸಂಗ ಸುಖವ ಹೇಳಲರಿಯದೆ, ಜಂಗಮವೆಂದು ಪೂಜೆಯ ಮಾಡಿದರೆ, ಈ ಜಗದೊಳಗೆ ಹುಟ್ಟಿದ ಪದಾರ್ಥಕ್ಕೆ ಒಡೆಯನಾದನಲ್ಲದೆ, ಈ ಕಾಣಬಾರದ ಘನವ ಹೇಳಿದುದಿಲ್ಲ. ಅದೇನು ಕಾರಣವೆಂದರೆ, ಆ ಕಾಣಬಾರದ ಘನವ, ತಾನೊಬ್ಬರ ಕೇಳಲು ಬಾರದು. ತಾನೊಬ್ಬರಿಗೆ ಹೇಳಲು ಬಾರದು. ಏಕೆ? ನಾಮರೂಪಿಲ್ಲವಾಗಿ, ನುಡಿಗಿಲ್ಲ. ಇಂತಪ್ಪ ಘನ ತಾನೆ, ಒಂದು ರೂಪ ತೊಟ್ಟು, ತನ್ನ ಲೀಲೆಯ ಎಲ್ಲ ಶರಣರೊಳು ನಟಿಸಿ, ತನ್ನ ತಾನೆ ಸಾಕಾರ ನಿರಾಕಾರವಾಗಿ, ಏಕವಾದ ಭೇದವನರಿಯದೆ ಈ ಲೋಕದಲ್ಲಿ ಇದ್ದರೇನು? ಆ ಲೋಕದಲ್ಲಿಗೆ ಹೋದರೇನು? ಹದಿನಾಲ್ಕು ಲೋಕವು ತಾನೆಯಾದ ಚಿನ್ಮಯನ ಹೇಳಿಹೆನೆಂದರೆ ಎನ್ನಳವಲ್ಲ. ಬಸವ ಪ್ರಿಯ ಕೂಡಲ ಚನ್ನಬಸವಣ್ಣ ನೀವೆ ಬಲ್ಲಿರಿ.

೬. ಅಂಗಲಿಂಗವೆಂದರಿದಾತಂಗೆ, ಆ ಅಂಗದಲ್ಲಿ ಐಕ್ಯ. ಕಂಗಳು ಲಿಂಗವೆಂದರಿದಾತಂಗೆ, ಕಂಗಳಲ್ಲಿ ಐಕ್ಯ. ಕರವೆ ಲಿಂಗವೆಂದರಿದಾತಂಗೆ, ಕರದಲ್ಲಿ ಐಕ್ಯ. ಈ ತ್ರಿವಿಧದ ನೆಲೆಯ ಶ್ರುತಿಸ್ಮೃತಿಗಳರಿಯವು. ಎನ್ನ ಬಸವ ಪ್ರಿಯ ಕೂಡಲ ಚನ್ನಬಸವಣ್ಣನ ನೆಲೆಯ ಶರಣರೆ ಬಲ್ಲರು.

೭. ಹರಿವ ಜಲಧಿಯಂತೆ, ಚರಿಸಿ ಬಹ ಮನವ ನಿಲ್ಲೆಂದು ನಿಲಿಸುವ ಪುರುಷರುಂಟೆ? ಬಿರುಗಾಳಿ ಬೀಸಿದರೆ ಒಲಿ ಒಲಿದು ಉರಿವ ಬಲುಗಿಚ್ಚಿನ ಉರಿಯ ನೆಲೆಗೆ ನಿಲಿಸುವರುಂಟೆ? ಮಹಾ ಬಯಲೊಳಗಣ ಸಂಚವನರಿದು ಅವಗಡಿಸುವರುಂಟೆ? ಇವ ಬಲ್ಲೆನೆಂಬುರೆಲ್ಲ ಅನ್ನದ ಮದ ಅಹಂಕಾರದ ಮದ, ಕುಲ ಮದ, ಛಲ ಮದ, ಯವ್ವನ ಮದ, ವಿದ್ಯಾ ಮದ, ತಪದ ಮದ, ಆತ್ಮದ ಮದ, ಇಂತೀ ಅಷ್ಟಮದವಿಡಿದು ಬಲ್ಲೆನೆಂಬುವರಲ್ಲದೆ, ದೃಷ್ಟ ನಷ್ಟವಾವುದೆಂದರಿಯದೆ, ಎಲ್ಲರೂ ಭ್ರಷ್ಟರಾಗಿ ಹೋದರು. ಬಸವಪ್ರಿಯ ಕೂಡಲ ಚನ್ನಬಸವಣ್ಣಾ, ನಿಮ್ಮ ನೆಲೆಯನರಿಯದ ಕಾರಣ.

೮. ಅಯ್ಯ ಏನು ಏನು ಇಲ್ಲದಂದು, ಧರೆ ಬ್ರಹ್ಮಾಂಡಗಳು ಇಲ್ಲದಂದು, ಸಚರಾಚರ ರಚನೆಗೆ ಬಾರದಂದು, ಅಂದು ನೀವಿಪ್ಪ ಭೇದವ ಎನಗೆ ತೋರಿದರಾಗಿ, ಅದು ಹೇಗೆಂದರೆ, ನಾನು ಪುಷ್ಪದ ಹಾಗೆ, ನೀವು ಪರಿಮಳದ ಹಾಗೆ, ನಾನಾಲಿಯ ಹಾಗೆ, ನೀವು ನೋಟದ ಹಾಗೆ, ನಾ ಬ್ರಹ್ಮಾಂಡದ ಹಾಗೆ, ನೀವು ಬಯಲಿನ ಹಾಗೆ, ಒಳಹೊರಗೆ ಪರಿಪೂರ್ಣವಾಗಿಪ್ಪಿರಿಯಾಗಿ, ಆ ಭೇದವನು ಎನಗೆ ನೀವೆ ಅರುಹಿದಿರಾಗಿ, ಉರಿ ಕರ್ಪುರದ ಸಂಯೋಗದಂತೆ ಎರಡು ಒಂದೆ ಎಂಬ ಭೇದವ ಎನ್ನ ಗುರು ತಂದೆ ನೀವು ತೋರಿಪಿರಲ್ಲ. ಚನ್ನಮಲ್ಲೇಶ್ವರ ಬಸವಪ್ರಿಯ ಕೂಡಲಚನ್ನಬಸವಣ್ಣಾ ನೀನೆನ್ನ ಪರಮಾರಾಧ್ಯರಾದ ಕಾರಣ.

೯. ಶಿವಭಕ್ತರ ಹಾದಿಯ ಕಾಣದೆ, ಹರಗಣಂಗಳೆಲ್ಲಕ್ಕೆ ಪರಮಗುರುವಾಗಿ, ಪರಮಾರಾಧ್ಯರಾಗಿ, ಸುಳಿದಿರಲ್ಲದೆ ನೀವು ಒಡಲುವಿಡಿದಿದ್ದರೆನ್ನಬಹುದೆ? ಅದೇನು ಕಾರಣವೆಂದರೆ, ಎನ್ನ ಭವವ ಛೇದನೆಯ ಮಾಡಿದುದಕ್ಕೆ ಎನ್ನ ಮನಕ್ಕೆ ಮನವೇ ಸಾಕ್ಷಿ, ಮತ್ತೆ ಚನ್ನಮಲ್ಲೇಶ್ವರ ಸಾಕ್ಷಿ. ಮರವೆಯಿಂದ ಈ ಮರ್ತ್ಯದಲ್ಲಿ ಒಡಲು ವಿಡಿದು ಹುಟ್ಟಿದವರು ಬ್ರಹ್ಮನಾದರೂ ಆಗಲಿ, ವಿಷ್ಣುವಾದರೂ ಆಗಲಿ, ರುದ್ರನಾದರೂ ಆಗಲಿ, ಶಿವನಾದರೂ ಆಗಲಿ, ಸದಾಶಿವನಾದರೂ ಆಗಲಿ ಮಾಯೆವಿಡಿಸಿ ಕಾಡಿದಲ್ಲದೆ ಮಾಣದು. ಮಿಕ್ಕಿನವರ ಭವಕ್ಕೆ ಕಡೆ ಇಲ್ಲ. ಎನ್ನ ಪರಮಾರಾಧ್ಯರು ಚನ್ನಮಲ್ಲೇಶ್ವರ ಮಾಯೆಯ ಮಂಡೆಯ ಮೆಟ್ಟಿ, ಎನ್ನ ತನು ಮನ ಧನಕ್ಕೆ ಒಡೆಯನಾಗಿ ತನ್ಮಯನಾಗಿ ತಾನೇ ರೂಪಾದನೈಯ್ಯಾ. ನಾನೆಂಬುದಿಲ್ಲ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೧೦ ಎನ್ನ ತಂದೆ ತಾಯಿಗಳು ತಮ್ಮ ಕಂದನಪ್ಪ ಶಕ್ತಿಯ ಕೈಯ್ಯಲಿಡೆಗೊಟ್ಟು ಕಳುಹಿಸಿದರೆ, ಎನ್ನ ಇಲ್ಲಿಗೆ ತಂದು, ಮದುವೆಯ ಮಾಡಿ, ಮುಗ್ಧನಪ್ಪ ಗಂಡನ ಕೊರಳಲ್ಲಿ ಕಟ್ಟಿ, ಎನ್ನ ಅತ್ತೆ ಮಾವಂದರ ವಾಸಕ್ಕೆ ಕೊಟ್ಟರು. ಎಮ್ಮ ಅತ್ತೆ ಮಾವಂದರು ಊರ ಹೊಕ್ಕರೆ, ಕತ್ತಲೆಯಲ್ಲದೆ, ಬೆಳಗಿಲ್ಲ. ಎಮ್ಮ ಅತ್ತೆ ಮಾವಂದಿರ ಮನೆಯ ಹೊಕ್ಕರೆ ಅತ್ತಿಗೆ ನಾದಿನಿ ಭಾವ ಮೈದುನ ಇವರು ನಾಲ್ವರು ಎನ್ನ ಗಂಡನ ತಲೆ ಎತ್ತಿ ನೋಡಿಸರು. ಹಟ್ಟಿಯಲ್ಲಿಪ್ಪ ಶ್ವಾನಕೆ ಅಡಿ ಇಟ್ಟು ನಡೆಯಲೀಸರು. ಸುತ್ತಲಿಹ ಆ ಆನೆ ಕುದುರೆ ತೊತ್ತಳಿದುಳಿವುತಿಪ್ಪವು. ಒತ್ತೊತ್ತಿನ ಬಾಗಿಲವರು ಎನ್ನ ಇತ್ತಿತ್ತ ಹೊರಡಲೀಸರು. ಸುತ್ತಲಿಹ ಕಾಲಾಳ ಪಹರಿ ಒತ್ತಿನ ತಳವಾರ ಈ ಮುತ್ತಿಗೆಗೊಳಗಾಗಿ, ನಾ ಸತ್ತು ಹುಟ್ಟುತ್ತಿರ್ದೆನಯ್ಯ! ಆಗ ಎನ್ನ ಹೆತ್ತ ತಾಯಿ ಬಂದು, ತತ್ವವೆಂಬ ತವರ್ಮನೆಯ ಹಾದಿಯ ತೋರಿದರೆ, ಇತ್ತ ತಾನೊಡೆಯುಚ್ಚಿತು. ಎನ್ನ ಚಿಕ್ಕಂದಿನ ಗಂಡನ ನೋಡಿದೆ. ಎವ್ವಿಬ್ಬರ ನೋಟ ಬೇಟದಿಂದ ಒಂದು ಶಿಸು ಹುಟ್ಟಿತ್ತು. ಆ ಶಿಸು ಹುಟ್ಟಿದಾಕ್ಷಣ, ಎಮ್ಮಿಬ್ಬರನು ನುಂಗಿತ್ತು. ನುಂಗಿದ ಶಿಸು ತಲೆ ಎತ್ತಿ ನೋಡಲು, ಎಮ್ಮತ್ತೆ ಮಾವಂದಿರಿಬ್ಬರು ಹೆದರಿ ಬಿದ್ದರು. ಅತ್ತಿಗೆ ನಾದಿನಿ ಭಾವ ಮೈದುನ ಈ ನಾಲ್ವರು ಎತ್ತಲೋ ಓಡಿ ಹೋದರು. ಈ ಹಟ್ಟಿಯಲ್ಲಿಪ್ಪ ಸೊಣಗ ಸುತ್ತಲಿಹ ಆನೆ, ಕುದುರೆ, ಒತ್ತೊತ್ತಿನ ಬಾಗಿಲವರು ಸುತ್ತಲಿಹ ಕಾಲಾಳ ಪಹರೆ ಮೊತ್ತದ ತಳವಾರ, ಹೊತ್ತಿನಿಂದುರಿದು, ಸುತ್ತಿ ನೋಡಿದರು. ಎಲ್ಲಿಯೂ ಒಟ್ಟೆ ಬಯಲಾಯಿತು ಕಾಣಾ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.



# ಗುರು ಉಪದೇಶ.

// ೧. ಅಯ್ಯ ಎನ್ನ ಗುರು ಎನಗೆ ಉಪದೇಶವ ಮಾಡಿದ ಭೇದವ ಎಲ್ಲ ಗಣಂಗಳು ಕೇಳಿ. ತ್ರಿವಿಧ ಮಲತ್ರಯಂಗಳ ಹರಿದು, ಕರ್ಮೇಂದ್ರಿಯಂಗಳ ಜ್ಞಾನೇಂದ್ರಿಯ ಮಾಡಿ, ಕಾಯ ಜೀವ ಪ್ರಾಣ ಈ ತ್ರಿವಿಧವರತು ಭೇದವನರುಹಿಸಿದ. ಉರಸ್ಥಲದ ಪರಂಜ್ಯೋತಿ ಲಿಂಗವ ಎನ್ನ ಕರಸ್ಥಲಕ್ಕೆ ಕೊಟ್ಟರು. ಆ ಗುರು ಕೊಟ್ಟ ಲಿಂಗವೆಂಬ ದರ್ಪಣವ ನೋಡಿ ಎನ್ನ ಮನವೆಂಬ ಸರ್ಪ ಆ ದರ್ಪಣದಲ್ಲಿ ಲೀಯ್ಯವಾಯಿತ್ತು. ಇದು ಕಾರಣ ಎನ್ನ ರೂಪೆಲ್ಲ ಉರಿಯುಂಡ ಕರ್ಪೂರದಂತಾಯಿತ್ತು. ಆಲಿ ನುಂಗಿದ ನೋಟದಂತಾಯಿತ್ತು. ಪುಷ್ಪ ನುಂಗಿದ ಪರಿಮಳದಂತೆ, ಬಯಲು ನುಂಗಿದ ಬ್ರಹ್ಮಾಂಡದಂತೆ, ಅಂಗ ಲಿಂಗ ಸಂಗ ಸಂಯೋಗವಾದ ಭೇದ. ಇದ ಹಿಂಗದೆ ಶರಣ ಸಂಗವ ಮಾಡಿದವರಂಘ್ರಿಯಲ್ಲಿ ಐಕ್ಯವಾದೆನಯ್ಯ. ಬಸವಪ್ರಿಯ ಕೂಡಲ ಚನ್ನಬಸವಣ್ಣ, ಇದನು ಕಂಗಳ ಪಟಲ ಹರಿದ ಲಿಂಗೈಕ್ಯರೇ ಬಲ್ಲರು.

/ ೨. ನಿತ್ಯ ಅನಿತ್ಯವೆಂಬುದ ತೋರಿದಿರಿ, ಸತ್ಯ ಅಸತ್ಯವೆಂಬುದ ತೋರಿದಿರಿ, ಆಚಾರ ವಿಚಾರವೆಂಬುದ ತೋರಿದಿರಿ. ಅಯ್ಯ ಸೋಹಂ ದಾಸೋಹಂವೆಂಬುದ ತೋರಿದಿರಿ. ಇದು ಎಂಬುದ ತೋರಿದಿರಿ. ಅಯ್ಯಾ ಮುಕ್ತಿ ಎಂಬುದ ತೋರಿದಿರಿ. ಅಂಗ ಲಿಂಗವೆಂಬುದ ತೋರಿದಿರಿ. ಪ್ರಾಣವೇ ಜಂಗಮವೆಂಬುದ ತೋರಿದಿರಿ. ಪ್ರಸಾದವೇ ಪರವೆಂದು ತೋರಿದಿರಿ. ಇಂತಿವರ ಭೇದಾದಿ ಭೇದವನೆಲ್ಲ ತೋರಿದಿರಿ. ನಿಮ್ಮ ಹಾದಿಯ ಹತ್ತಿಸಿದಿರಿ. ಮೂದೇವರೊಡೆಯ ಚನ್ನಮಲ್ಲೇಶ್ವರ, ನಿಮ್ಮ ಹಾದಿಗೊಂಡು ಹೋಗುತ್ತಿರ್ದ ನಾನೆತ್ತ ಹೋದೆನೆಂದರಿಯೆನ್ನಯ್ಯ. ಬಸವಪ್ರಿಯ ಕೂಡಲ ಚನ್ನಬಸವಣ್ಣ ನಾ ಹೋದ ಹಾದಿಯ ನೀವೆ ಬಲ್ಲಿರಿ.

/ ೩. ಭಕ್ತನಾದರು ಆಗಲಿ, ಗುರುವಾದರು ಆಗಲಿ, ಲಿಂಗವಾದರು ಆಗಲಿ, ಜಂಗಮವಾದರು ಆಗಲಿ, ಈ ಮರ್ತ್ಯದಲ್ಲಿ ಒಡಲು ವಿಡಿದು ಹುಟ್ಟಿಸ ಮೇಲೆ ಮಾಯೆಯ ಗೆದ್ದೆನೆಂದರೆ ಸಾಧ್ಯವಲ್ಲ ಕೇಳಿರಣ್ಣಾ! ಗೆಲ್ಲಬಹುದು ಮತ್ತೊಂದು ಭೇದದಲ್ಲಿ. ಅದೆಂತೆಂದರೆ, ಭಕ್ತನಾದರೆ ತನುವ ಗುರುವಿಂಗಿತ್ತು, ಮನವ ಲಿಂಗಕ್ಕಿತ್ತು, ಧನವ ಜಂಗಮಕ್ಕಿತ್ತು, ಬೆರೆದರೆ, ಮಾಯಾಪಾಶ ಹರಿಯಿತ್ತು. ಇದರ ಗೊತ್ತು ಹಿಡಿವೆನೆಂದರೆ

ಆತನ ಭಕ್ತನೆಂಬೆ. ಗುರುವಾದರೆ ಸಕಲ ಆಗಮಂಗಳನರಿದು, ತತ್ವಮಸಿ ಎಂದು ನಿತ್ಯವ ನೆಮ್ಮಿ, ತನ್ನ ಒತ್ತುವಿಡಿದ ಶಿಷ್ಯಂಗೆ ಪರತತ್ವವ ತೋರಿ, ಪ್ರಾಣಲಿಂಗವ ಕರದಲ್ಲಿ ಕೊಟ್ಟು, ಆ ಲಿಂಗ ಅಂಗವೆಂಬ ಉಭಯದೊಳಗೆ ತಾನಡಗಿ, ತನ್ನೊಳಗೆ ಶಿಷ್ಯನಡಗಿ, ನಾನು ನೀನು ಎಂಬ ಉಭಯ ಎರಡಳಿದರೆ, ಆತನ ಗುರುವೆಂಬೆ. ಜಂಗಮವಾದರೆ ಬಾಯಿಲೆಕ್ಕಕ್ಕೆ ಬಾರದೆ ಬಂದು ಆಶ್ರಿತವೆನಿಸಿಕೊಳ್ಳದೆ ಆಸೆಯಳಿದು ಲಿಂಗಜಂಗಮವಾಗಿ ನಿರ್ಗಮನಿಯಾಗಿ ಭರ್ಗೋದೇವ ಎಂಬ ಏಕೋದೇವ ನ ದ್ವಿತೀಯವೆಂಬ ಶ್ರುತಿಗೆ ತಂದು ತಾ ಪರಮಾನಂದದಲ್ಲಿ ನಿಂದು ಪರಿಪೂರ್ಣನೆನಿಸಿಕೊಂಡು ಅಣುವಿಂಗಣು ಮಹತ್ತಿಗೆ ಮಹತ್ತು ಘನಕ್ಕೆ ಘನವೆಂಬ ವಾಕ್ಯಕ್ಕೆ ಸಂದು, ತಾ ನಿಂದು ಜಗವನೆಲ್ಲವ ಆಡಿಸುವ ಅಂತರಾತ್ಮಕನಾಗಿ ಅಡಗಿದರೆ ಜಂಗಮವೆಂಬೆ. ಅಂತಾದರೆ ಈ ತ್ರಿವಿಧವು ಏಕವಾದುದನರಿದು, ಈ ಲೋಕದ ಕಾಕುಬಳಕೆಗೆ ಸಿಲ್ಕದೆ ಇಲ್ಲಿ ಹುಟ್ಟಿದವರೆಲ್ಲ ಇವರೊಳಗೆ ಆದರು. ನಾನು ತ್ರಿವಿಧದ ನೆಲೆಯ ಹಿಡಿದುಕೊಂಡು ಇವೆಲ್ಲಕ್ಕು ಹೊರಗಾಗಿ ಹೋದೆನೈಯ್ಯ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೯ ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಾಗುರುವೆಂದು ಹೆಸರಿಟ್ಟುಕೊಂಡು, ನುಡಿವಿರಿ. ದೀಕ್ಷಾಗುರುವಾದಡೆ ತ್ರಿವಿಧ ಮಲತ್ರಯಂಗಳ ತಾ ಮುಟ್ಟದೆ ಆ ಶಿಷ್ಯನ ತಟ್ಟಲೀಯ್ಯದೆ, ಅಂಗಕ್ಕೆ ಆಚಾರವನಳವಡಿಸಿಕೊಟ್ಟು ಪ್ರಾಣಕ್ಕೆ ಅರಿವ ತೋರಿ ಪ್ರಸಾದ ಕಾಯವ ಮಾಡಿದರೆ, ಆತನೇ ದೀಕ್ಷಾಗುರುವೆಂಬೆ. ಶಿಕ್ಷಾಗುರುವಾದಾತ ಶೂರಧೀರನಾಗಿ ಪಟುಭಟನಾಗಿ ಪರಸಮಯಕ್ಕೆ ಪರಂಜ್ಯೋತಿಯಂತಾಗಿ ಅರಗಳಿಗೆ ಅರ್ಭಟಿಸುವ ಸಿಂಹದಂತಾಗಿ ತನ್ನ ಸ್ವಯಮ್ಮಕ್ಕೆ ಸ್ವಯಂಜ್ಯೋತಿಯಂತೆ ಇರಬಲ್ಲರೆ, ಶಿಕ್ಷಾಗುರುವೆಂಬೆ. ಮೋಕ್ಷಾಗುರುವೆಂತಿರಬೇಕೆಂದಡೆ, ತನ್ನ ನಂಬಿದ ಸಜ್ಜನ ಭಕ್ತರ, ವಿರಕ್ತರ ತನ್ನಂತೆ ಮಾಡಿಕೊಂಬುದು. ಅವರ ತನುತ್ರಯ, ಮನತ್ರಯ, ಧನತ್ರಯದ ನೆಲೆಯನರುಹಿ ಇಂತೀ ತ್ರಿವಿಧವನು ತ್ರಿವಿಧಕ್ಕೆ ಮುಖವ ಮಾಡಿ, ತ್ರಿವಿಧರಲ್ಲಿ ತಾನಡಗಿ, ತನ್ನೊಳಗವರಡಗಿದೊಡೆ ಮೋಕ್ಷಾಗುರುವೆಂಬೆ. ಇಂತಾದರೆ ತ್ರಿವಿಧವು ಒಂದಂಗ. ಇಂತೀ ಸ್ಥಲದ ನಿರ್ಣಯವನರಿಯದಿದ್ದರೆ, ಆ ಮೂವರನು ಮುಂದುಗೆಡಿಸಿ ಮೂಗ ಕೊಯ್ದು ಇಟ್ಟಿಗೆಯಲುದ್ದಿ ದರ್ಪಣವ ತೋರಿ, ಅವರ

ದರ್ಪವ ಕೆಡಿಸುವನಲ್ಲದೆ ಅವರ ಮೆರೆವನಲ್ಲ ನಮ್ಮ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

---

## ಗುರು ಶಿಷ್ಯ ಸಂಬಂಧ.

೩. ಗುರುವ ಮುಟ್ಟಿ ಗುರುವಿನಂತಾಗಬೇಡವೆ? ಲಿಂಗವ ಮುಟ್ಟಿ ಪೂಜಿಸಿ ಲಿಂಗದಂತಾಗ ಬೇಡವೆ? ಜಂಗಮವ ಮುಟ್ಟಿ ಪೂಜಿಸಿ ಪಾದೋದಕ ಪ್ರಸಾದವ ಕೊಂಡು ಜಂಗಮದಂತಾಗ ಬೇಡವೆ? ಈ ತ್ರಿವಿಧ ವಿಡಿದು, ತ್ರಿವಿಧವ ಬಿಟ್ಟು, ತ್ರಿವಿಧವ ಮುಟ್ಟಿ, ತ್ರಿವಿಧವನೇಕವ ಮಾಡಿ, ಈ ಭವವ ದಾಂಟಿ ಹೋದವರ ಭಕ್ತರೆಂಬೆ. ಮಹೇಶ್ವರ, ಪ್ರಸಾದಿ ಪ್ರಾಣಲಿಂಗಿ, ಶರಣ, ಐಕ್ಯರೆಂಬೆ. ಇದನರಿಯದೆ ಮದಮತ್ಸರವ ಬಿಡದೆ, ಕುದಿದು ಕೋಟಲೆಗೊಂಬ, ಬಿನುಗರನೊಲ್ಲ ನಮ್ಮ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೪ ಸುಡಿದರೆ ಗುರುವಾಗಿ ನುಡಿಯಬೇಕು. ನಡೆದರೆ ಪರವಾಗಿ ನಡೆಯಬೇಕು. ಕುಳಿತರೆ ಲಿಂಗವಾಗಿ ಕುಳಿತಿರಬೇಕು. ಇದ್ದರೆ ಜಂಗಮವಾಗಿ ಇರಬೇಕು. ಈ ನಾಲ್ಕರ ಹೊಂದಿಗೆಯನರಿಯದವರು ಎಷ್ಟು ದಿನವಿದ್ದರೂ ಫಲವೇನು ಹೇಳಾ ಬಸವಪ್ರಿಯ ಕೂಡಲ ಚನ್ನಬಸವಣ್ಣಾ?

೫ ಗುರು ಶಿಷ್ಯ ಸಂಬಂಧವೆಂತಿಪ್ಪುದೆಂದಡೆ. ಹೇಳಿಹೆ ಕೇಳಿರೋ, ಅರಿಮರುಳುಗಳಿರಾ. ಕಾಯ ಗುಣವಳಿದುದೇ ಗುರು. ಜೀವ ಗುಣವಳಿದುದೇ ಲಿಂಗ. ಪ್ರಾಣ ಗುಣವಳಿದುದೇ ಜಂಗಮ. ಈ ತ್ರಿವಿಧವನರಿದು ಆ ತ್ರಿವಿಧ ನಿಕ್ಷೇಪವ ನರುಹಿಸಿಕೊಟ್ಟವನೀಗ ಗುರು. ಅಲ್ಲಿ ಉಪದೇಶವ ಕೊಂಡವನೀಗ ಶಿಷ್ಯ. ಹೀಗಿರುವದೀಗ ಗುರು ಶಿಷ್ಯ ಸಂಬಂಧ. ಅದಕ್ಕೆ ನಮೋ ನಮೋ ಎಂಬೆ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

## ಗುರು ಮತ್ತು ಭಕ್ತ ಇವರ ವರ್ತನೆ.

೮. ಅಂಗವ ಮಾರಿಕೊಂಡು ಉಂಬಾತನೊಬ್ಬ ತಕ್ಕ. ಲಿಂಗವ ಮಾರಿಕೊಂಡು ಉಂಬಾತನೊಬ್ಬ ತಕ್ಕ. ಜಂಗಮವ ತೋರಿಕೊಂಡು ಉಂಬಾತನೊಬ್ಬ ತಕ್ಕ. ಇವರು ಮೂವ್ವರು ಕಂಗಳು ಕಾಲು ಹೋದವರ ಸಂಗದಂತೆ. ಲಿಂಗ ಜಂಗಮಕ್ಕೆ ದೂರ. ನಮ್ಮ ಶರಣರ ಸಂಗ ಸುಖಕ್ಕೆ ಸಲ್ಲರು ನೋಡಾ, ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೯. ದಿನದಿನಕ್ಕೆ ದೀನಮಾನವನಂತೆ, ಹೀನಾಶ್ರಯದಲ್ಲಿ ಹುಟ್ಟಿ, ಏನನು ಅರಿಯದೆ, ಜ್ಞಾನವು ಇಲ್ಲದೆ, ನಾನು ನೀನೆಂಬ ಉಭಯವು ಅಳಿಯದೆ, ನಾನು ಭಕ್ತ ನಾನು ಜಂಗಮವೆಂಬವರ ನೋಡಿ, ನಾಚಿತ್ತೆನ್ನ ಮನವು. ಅಂಗಕ್ಕೆ ಆಚಾರವಿಲ್ಲ. ಮನಸಿಂಗೆ ಅರುಹಿಲ್ಲ. ಪ್ರಾಣಕ್ಕೆ ಗೊತ್ತು ಇಲ್ಲ. ಭಾವಕ್ಕೆ ಹ್ಯೇಯವಿಲ್ಲದೆ ಇನ್ನಾವ ಬಗೆಯಲ್ಲಿ ಭಕ್ತ ಜಂಗಮವಾದಿರಿ ಹೇಳಿರಣ್ಣಾ? ಭಕ್ತನಾದರೆ ಎಂತಿರಬೇಕೆಂದರೆ ಮಾಡಿಹೆನೆಂಬುದು ಮನದೊಳಗೆ ಹೊಳೆಯದೆ ನೀಡಿಹೆನೆಂಬ ಅರಿಕೆ ಇಲ್ಲದೆ ಬೇಡುವದಕ್ಕೆ ಮುನ್ನವೆ ಆ ಜಂಗಮದ ನಿಲುಕಡೆಯನರಿದು ಮಾಡಬಲ್ಲರೆ ಭಕ್ತ. ಮಾಡಿದ ಭಕ್ತಿಯ ಕೈಕೊಂಡು ಆ ಭಕ್ತನ ಕರಸ್ಥಲಕ್ಕೆ ಲಿಂಗವಾಗಿ ಮನಸ್ಥಲಕ್ಕೆ ಅರಿವಾಗಿ ಭಾವಸ್ಥಲಕ್ಕೆ ಜಂಗಮನಾಗಿ ಅಡಗಿದಡೆ ಐಕ್ಯನೆಂಬೆ, ಜಂಗಮವೆಂಬೆ, ಲಿಂಗವೆಂಬೆ, ಗುರುವೆಂಬೆ. ಆ ಭಕ್ತ ಜಂಗಮ ಎರಡಕ್ಕು ಫಲಂ ನಾಸ್ತಿ ಪದಂ ನಾಸ್ತಿ ಭವಂ ನಾಸ್ತಿ. ಆ ನಿಲುವಿಂಗೆ ನಮೋ ನಮೋ ಎಂದು ಬದುಕಿದೆ ನೀವು ಸಾಕ್ಷಿಯಾಗಿ ಬಸವಪ್ರಿಯ ಕೂಡಲ ಚನ್ನಬಸವಣ್ಣ.

೧೦. ತನ್ನ ತಾ ನರಿಯದೆ ತನ್ನ ತಾ ನೋಡದೆ. ತನ್ನ ತಾ ನುಡಿಯದೆ, ಅನ್ಯರ ಸುದ್ದಿಯ ನುಡಿದಾಡುವ ಕುನ್ನಿಗಳಿಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪಾದೋದಕವಿಲ್ಲ, ಪ್ರಸಾದವಿಲ್ಲ. ಅವನು ಸರ್ವಾಪರಾಧಿ. ಅವನ ಮುಖವ ನೋಡಲಾಗದು ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೧೧. ಮರ್ತ್ಯದಲಿ ಹುಟ್ಟಿ ಕಂಗಳ ಮುಂದಣ ಕತ್ತಲೆಯ ಕಳೆಯದೆ, ನಾವು ಗುರು ಜಂಗಮ, ನಾವು ಭಕ್ತರು ಎಂಬ ನುಡಿಗೆ ಏಕೆ ನಾಚರೊ? ಭಕ್ತನಾದರೆ, ಸತ್ತು ಚಿತ್ತಾನಂದವನೊತ್ತಿಮೆಟ್ಟಿ, ತತ್ವಮಸಿ

ವಾಕ್ಯವೆಂದು ಕಂಡು ಬಿಟ್ಟು, ಲಿಂಗದ ಗೊತ್ತುವಿಡಿದು, ಹಿಂದೆ ಹರಿದು, ಗುರುವಿನ ಗೊತ್ತನರಿದು, ಜಗದೊಳಗಣ ಗುಂಗುದಿಯನೆಲ್ಲವ ಹರಿದು, ಜಂಗಮದ ಗೊತ್ತನರಿದು, ಮುಂದಣ ಮುಕ್ತಿ ಎಂಬುದ ಮರೆದು, ಎಂತಿರ್ದಂತೆ ಬ್ರಹ್ಮವು ತಾನೆ ಎಂಬುದ ನರಿದು, ಪರಿಣಾಮದಲ್ಲಿ ಪರವಶನಾಗಿ ನಿಂದು, ಮತ್ತೆ ಅರನೆಣಿಸಲಿಲ್ಲ ಮೂರು ಮುಟ್ಟಲಿಲ್ಲ ಬೇರೊಂದುಂಟೆನಲಿಲ್ಲ, ನಮ್ಮ ಬಸವಪ್ರಿಯ ಕೂಡಲ ಚನ್ನಬಸವಣ್ಣನಿಗೆ ಸೂರೆ ಹೋದ ಶರಣನು.

೧೨. ಸಾವಾಗ ದೇವನೆಂದರೆ, ಸಾವು ಬಿಡುವುದೇ? ಇದಾವ ಮಾತೆಂದು ನುಡಿವಿರಿ. ಎಲೆಯಣ್ಣಗಳಿರಾ, ಬಾಳುವಲ್ಲಿ, ಬದುಕುವಲ್ಲಿ, ಗುರು ಲಿಂಗ ಜಂಗಮವ ನರಿಯದೆ, ಹಾಳುಹರಿಯ ತಿಂದ ಶುನಕನಂತೆ, ಕಾಲ್ಗೆಡೆದು ಓಡಾಡಿ ಏಳಲಾರದೆ, ಬಿದ್ದಾಗ ಶಿವ ಶಿವ ಎಂದರೆ, ಅಲ್ಲಿ ದೇವನಿಪ್ಪನೆಂದು ಇದ ನೋಡಿ ನಾಚಿ ನಗುತಿರ್ದೆ ನಮ್ಮ ಬಸವಪ್ರಿಯ ಕೂಡಲಚನ್ನಬಸವಣ್ಣಾ.

೧೩. ಹಸನ ಮಾಡಿ ಹರಗಿ ಹೊಲದಲ್ಲಿ ಕಸವ ಬಿತ್ತುವ ಮರುಳರಂತೆ, ವಿಷಯ ಸುಖಂಗಳಿಗೆ ಹುಸಿಯನೆ ನುಡಿದು, ಗಸಣಿಗೊಳಗಾಗುವ ಮನುಜರೆತ್ತ ಬಲ್ಲರೊ ಮಹಾಘನಗುರುವಿನ ನೆಲೆಯ? ಮರಣ ಬಾಧೆಗೊಳಗಾದವರು ನಿಮ್ಮನೆತ್ತ ಬಲ್ಲರೊ ಬಸವಪ್ರಿಯ ಕೂಡಲ ಚನ್ನಬಸವಣ್ಣಾ?

೧೪. ಗುರು ಗುರು ಎಂದು ಪೂಜೆಯ ಮಾಡುವರು. ಮತ್ತೆಯಾ ಗುರುವ ನರನೆಂದೆಂಬರು. ಅವರು ಗುರುದ್ರೋಹಿಗಳು. ಲಿಂಗ ಲಿಂಗವೆಂದು ಪೂಜೆಯ ಮಾಡುವರು. ಆ ಲಿಂಗವ ಸಿಲೆ ಎಂಬರು. ಅವರು ಲಿಂಗದ್ರೋಹಿಗಳು. ಜಂಗಮ ಜಂಗಮವೆಂದು ಪೂಜೆಯ ಮಾಡುವರು. ಆ ಜಂಗಮವ ಜಗದ ಹಂಗಿಗರೆಂಬರು. ಇವರು ಜಂಗಮದ್ರೋಹಿಗಳು. ಈ ಮೂರು ಕರ್ತರೆಂದು ಅರಿಯದವಂಗೆ ಕುಂಭೀಪಾಕ ನಾಯಕ ನರಕ ತಪ್ಪದು ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೧೫. ಲಿಂಗಪೂಜೆಯ ಮಾಡುತ್ತ, ತಮ್ಮಂಗ ಸುಖದ ಸಲುವಾಗಿ ಹಂಪೆಯ ಕಂಗಳರ ಹಾಗೆ ಕೂಗುತ್ತ, ಕೊರಚುತ್ತ, ಅರಚುತ್ತ, ಸತಿಸುತರೊಳಗೆ ಹೊಡೆದಾಡುತಿಪ್ಪರಲ್ಲದೆ, ಆ ಲಿಂಗಕ್ಕೆ ತನಗೆ ಒಡೆಯನಾಗಿದ್ದ ಜಂಗಮ ಬಂದರೆ, ಎತ್ತಲೆಂದರಿಯರು. ಇಂತಪ್ಪ ಕತ್ತಲೆ ಮನುಜರು, ಲಿಂಗವ ಕಟ್ಟಿದರೇನು? ಜಂಗಮಕಿಕ್ಕಿದರೇನು? ಗುರುವಿಂಗೆ

ಶರಣೆಂದರೇನು? ತಮ್ಮ ಮರಣ ಬಾಧೆಯ ಗೆಲುವನಕ, ಹುಗುಳಿಲ್ಲ ಹುರುಳಿಲ್ಲ. ಮಾಡಿದ ಭಕ್ತಿ, ಅತ್ತಿಯ ಹಣ್ಣ ಬಿಚ್ಚಿದಂತೆ. ಅವರು ಹೊತ್ತಿಪ್ಪ ವೇಷ ದೊಡ್ಡದು. ಎಮ್ಮ ಸಮಯ ನಾನದನರಿದು, ನಿಮ್ಮಲ್ಲಿ ನಿರ್ಮುಕ್ತನಾದ ಬಳಿಕ ಈ ಜಗವೇನಾವರೇನಯ್ಯಾ ಬಸವಪ್ರಿಯ ಕೂಡಲ ಚನ್ನ ಬಸವಣ್ಣಾ.

೧೬. ಗುರುಭಕ್ತಿಯ ಮಾಡಿಹೆನೆಂದು ಅಂಗಸೂತಕವ ಮಾಡಿದರು. ಲಿಂಗಭಕ್ತಿಯ ಮಾಡಿಹೆನೆಂದು ಮನಸೂತಕವ ಮಾಡಿದರು. ಜಂಗಮಭಕ್ತಿಯ ಮಾಡಿಹೆನೆಂದು ಜಗದ ಹಂಗಿಗರಾದರು. ಈ ತ್ರಿವಿಧ ಭಕ್ತಿಯ ಮಾಡಿಹೆನೆಂದು ತ್ರಿವಿಧವ ಹಿಡಿದು ತ್ರಿವಿಧ ಮಲ ಸಂಬಂಧಿಗಳಾಗಿ ಹೋದರಲ್ಲದೆ ತ್ರಿವಿಧವನು ತ್ರಿವಿಧಕ್ಕಿತ್ತು ತ್ರಿವಿಧದ ನೆಲೆಯನರಿದು ಈ ಕಲಿಯುಗದ ಭವವ ದಾಂಟಿ ಬಯಕೆಯ ಸವಿದು ಭಾವ ಬಯಲಾಗಿ ಆ ಬಯಲನೆಯ್ದಿ ಹೋಗುವ ಶರಣರ ಪಾದವ ನಂಬಿ ಕೆಟ್ಟು ಬಟ್ಟಬಯಲಾದೆನೈಯ್ಯಾ ಬಸವಪ್ರಿಯ ಕೂಡಲ ಚನ್ನಬಸವಣ್ಣಾ

---

## ಗುರುಲಿಂಗಜಂಗಮದಿಂದ ಮೋಕ್ಷವು.

೧೭. ಸೋಹಂ ಹೊಕ್ಕು ದಾಸೋಹನೆಂಬ ಅಂಜನವ ಹಚ್ಚಿ ಮುಂದೆ ನೋಡಲಾಗಿ ಅರುಹ ಕಂಡೆ, ಆ ಅರುಹಿಂದ ಆಚಾರವ ಕಂಡೆ, ಆಚಾರದಿಂದ ಗುರುವ ಕಂಡೆ, ಗುರುವಿಂದ ಲಿಂಗವ ಕಂಡೆ, ಲಿಂಗದಿಂದ ಜಂಗಮವ ಕಂಡೆ, ಜಂಗಮದಿಂದ ಪ್ರಸಾದವ ಕಂಡೆ, ಪ್ರಸಾದದಿಂದ ಪರವ ಕಂಡೆ, ಪರದೊಳಗೆ ವಿಪರೀತ ಸ್ವರೂಪವ ಕಂಡೆ, ವಿಪರೀತ ಸ್ವರೂಪದೊಳಗೆ ನಿರ್ಲೇಪವಾದ ನಮ್ಮ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೧೮ ಉದಯ, ಮಧ್ಯಾಹ್ನ, ಅಸ್ತಮಯವೆಂಬ ತ್ರಿಕಾಲದಲ್ಲಿ ತ್ರಿವಿಧ ಪೂಜೆಯ ಮಾಡಬೇಕೆಂಬರು. ಈ ತ್ರಿವಿಧದ ನೆಲೆಯನರಿಯರು. ಲಿಂಗಲಿಂಗವೆಂದು ಲಿಂಗವನೆ ಅರ್ಚಿಸಿ, ಲಿಂಗವನೆ ಪೂಜಿಸಿ, ಅಂಗ ಭಿನ್ನವಾಯಿತ್ತು. ಅದಾರಿಗೆಂದರೆ, ಸ್ವರ್ಗ, ಮರ್ತ್ಯ, ಪಾತಾಳದ ವರೆಗೆ ಮೂರು ಲೋಕವು ಸೆರೆಸೂರೆ ಹೋಯಿತ್ತು. ಗುರುಲಿಂಗಜಂಗಮ ತ್ರಿವಿಧವು ಏಕವಾದ ಭೇದವ ನಿಮ್ಮ ಶರಣರೇ ಬಲ್ಲರಲ್ಲದೆ, ಈ

ಮರಣ ಬಾಧೆಗೊಳಗಾಗುವ ಮರ್ತ್ಯರೆತ್ತ ಬಲ್ಲರು, ಬಸವಪ್ರಿಯ ಕೂಡಲ ಚನ್ನಬಸವಣ್ಣಾ?

೨೪೧೯. ಹಾಕಿದ ಮುಂಡಿಗೆಯ ಎತ್ತುವರಿಲ್ಲ. ಎತ್ತಿದ ಮುಂಡಿಗೆಯ ದೃಷ್ಟದಲ್ಲಿ ಶ್ರುತದಲ್ಲಿ ಗೆದ್ದು, ಈಸಕೊಂಬುವರಿಲ್ಲ. ಈ ಉಭಯದ ಗೊತ್ತನರಿಯದೆ, ಕೆಟ್ಟಿತ್ತು, ನಾವು ಭಕ್ತ ಜಂಗಮರೆಂಬುವರೆಲ್ಲ. ಅದಂತಿರಲಿ. ನಾನು ನೀನು ಎಂಬ ಉಭಯದ ಗೊತ್ತನರಿದು, ದೃಷ್ಟದಲ್ಲಿ ಶ್ರುತದಲ್ಲಿ ಗೆದ್ದು ಕೊಟ್ಟು, ನ್ಯಾಯದಲ್ಲಿ ಜಗವನೊಡಂಬಡಿಸಿ ಕೊಟ್ಟು, ಆ ಸಿಕ್ಕಿ ಹೋಗುವ ಮುಂಡಿಗೆಯ ಎತ್ತಿಕೊಂಡು, ಸುತ್ತಿ ನೋಡಿದರೆ ಬಟ್ಟಬಯಲಾಗಿರ್ದಿತ್ತು. ಆ ಬಟ್ಟಬಯಲ ದಿಟ್ಟಿಸಿ ನೋಡಲು, ನೆಟ್ಟಗೆ ಹೋಗುತ್ತಿದ್ದೆ. ಹೋಗಹೋಗುತ್ತ ನೋಡಿದರೆ, ನಾ ಎತ್ತ ಹೋದೆನೆಂದರಿಯೆನಯ್ಯ ಬಸವಪ್ರಿಯ ಕೂಡಲಚನ್ನಬಸವಣ್ಣಾ.



# ಷಟ್‌ಸ್ಥಲಗಳು.

5 ೧ ಭಕ್ತನಾದರೆ ಮುಕ್ತಿಪಥ ಗತಿಗೆ ನಿಲುಕದಂತಿರಬೇಕು. ಮಹೇಶ್ವರನಾದರೆ ಮನದಲ್ಲಿ ಮನ್ಮಥ ಹೊಗದಂತಿರಬೇಕು. ಪ್ರಸಾದಿಯಾದರೆ ತನ್ನ ಪ್ರಾಣವೇ ಅಗ್ನಿಸ್ವರೂಪವೆಯಾಗಿರಬೇಕು. ಪ್ರಾಣಲಿಂಗಿಯಾದರೆ ಪ್ರಾಣವ ನಿಲ್ಲಿಸಿ ಲಿಂಗಪ್ರಾಣಿಯಾಗಿರಬೇಕು. ಶರಣನಾದರೆ ತನ್ನ ಮರಣ ಬಾಧೆಯ ಗೆಲಿದಿರಬೇಕು. ಐಕ್ಯನಾದರೆ ಅನ್ನಪಾನಾದಿಗೆ ಇಚ್ಛೆ ಇಲ್ಲದಿರಬೇಕು. ನಿರ್ವಯಲಾದರೆ ಸರ್ವರ ಕಣ್ಣಿಗೆ ಬಯಲು ಬಯಲಾಗಿರಬೇಕು. ಈ ಷಟ್‌ಸ್ಥಲ ಸಂಪನ್ನತೆಯಲ್ಲಿ ಇರಬಲ್ಲಡೆ ಎಮ್ಮ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

3/ ೨. ಭಕ್ತನಾದರೆ ಪೃಥ್ವಿ ಸಾರದಲಾದ ಪದಾರ್ಥವ ಲಿಂಗಕ್ಕೆ ಕೊಡದ ಭಾಷೆ. ಮಹೇಶ್ವರನಾದರೆ ಅಪ್ಪುವಿನ ಸಾರದಿಂದ ಉದಕವ ಲಿಂಗಕ್ಕೆ ಮಜ್ಜನಕ್ಕೆರೆಯದ ಭಾಷೆ. ಪ್ರಸಾದಿಯಾದರೆ ಅಗ್ನಿಯಿಂದಾದ ಕಳೆಯ ಲಿಂಗಕ್ಕೆ ವೇಧಿಸದ ಭಾಷೆ. ಪ್ರಾಣಲಿಂಗಿಯಾದರೆ ವಾಯುವಿನಿಂದಾದ ಧ್ಯಾನವ ಲಿಂಗದಲ್ಲಿ ನೋಡದ ಭಾಷೆ. ಶರಣನಾದರೆ ಆಕಾಶದಿಂದಾದ ಸ್ತುತ್ಯವ ಲಿಂಗಕ್ಕೆ ಮಾಡದ ಭಾಷೆ. ಐಕ್ಯನಾದರೆ ಆತ್ಮದಿಂದಾದ ಅಹಂ ಮಮತೆಯಲಿ, ಲಿಂಗವ ಭಾವಿಸದ ಭಾಷೆ. ಇಂತೀ ಆರರಿಂದ ವಿೂರಿ ತೋರುವ ಘನವು ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೩. ಕೇಳು ಕೇಳಾ. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಐಕ್ಯರೆಂದು ನುಡಿದಾಡುತಿಪ್ಪಿರಿ. ಇಂತೀ ಷಟ್‌ಸ್ಥಲ ಸಂಪನ್ನತೆ ಎಲ್ಲರಿಗೆ ಎಂತಾಯಿತ್ತಯ್ಯ ಹೇಳಿರಣ್ಣಾ! ಭಾಗ್ಯವುಳ್ಳತಂಗೆ ಭಕ್ತಿಸ್ಥಲವಾಗದು. ಮಕ್ಕಳುಳ್ಳಾತಂಗೆ ಮಹೇಶ್ವರಸ್ಥಲವಾಗದು. ಪರಧನ ಚೋರಂಗೆ ಪ್ರಸಾದಿಸ್ಥಲವಾಗದು. ಇಹಪರವೆಂದು ಕಾಮಿಸುವಾತಂಗೆ ಪ್ರಾಣಲಿಂಗಿಸ್ಥಲವಾಗದು. ಪರದಲ್ಲಿ ಪರಿಣಾಮವನರಿಯದಾತಂಗೆ ಶರಣಸ್ಥಲವಾಗದು. ಹರುಷವೇ ಹರನಲ್ಲಿ ಲೀಯ್ಯವಾದಾತಂಗೆ ಐಕ್ಯಸ್ಥಲವಾಗದು. ನೆರೆದ ದೇಹವು ಕರ್ಪೂರ ಉರಿಗೊಂಡಂತೆ ಅಲ್ಲದೆ ನಿರವಯ ಸ್ಥಲವಾಗದು. ಇದು ನಮ್ಮ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೪. ನಾವು ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯರೆಂದು ನುಡಿವಿರಿ. ಭಕ್ತಸ್ಥಲ ಒತ್ತಿ ಹೇಳಿದರೆ, ಚಿತ್ತದಲ್ಲಿ ಕರಗುವಿರಿ,

ಕೊರಗುವಿರಿ ಮತ್ತೆ ನಮಗೆ. ಮುಕ್ತಿಯಾಗಬೇಕೆಂದು ಚಿಂತೆಯ ಮಾಡು ವಿರಿ. ಇಂತೀ ಉಭಯದಿಂದ ಸತ್ಯವಾವುದು ನಿತ್ಯವಾವುದು ಎಂದರಿ ಯದೆ, ಕೆಟ್ಟರಲ್ಲ ಜಗವೆಲ್ಲ. ಜಗದ ವ್ಯಾಕುಳವಳಿದುದೇ ಸತ್ಯ. ನಿರಾ ಕುಳದಲ್ಲಿ ನಿಂದುದೇ ನಿತ್ಯ. ಈ ಉಭಯದ ಗೊತ್ತನರಿದರೆ, ಅದೇ ಐಕ್ಯ ಬಸವಪ್ರಿಯ ಕೂಡಲಚನ್ನಬಸವಣ್ಣಾ.

೫. ಪ್ರಥಮದಲ್ಲಿ ಭಕ್ತಸ್ಥಲವೆಂದು ನುಡಿವಿರಿ. ಆ ಭಕ್ತಸ್ಥಲ ವೆಲ್ಲರಿಗೆಂತಾಯಿತ್ತು ಹೇಳಿರಣ್ಣಾ! ಸತಿಪತಿಸುತರು ಭೃತ್ಯಾಚಾರದಲ್ಲಿ ಭಕ್ತಿಯ ಮಾಡಿಹೆನೆಂದಣ್ಣಗಳು ಕೇಳಿರೋ. ಪತಿಯ ಮಾತ ಮೀರು ವಾಕೆ ಸತಿಯಲ್ಲ. ಪಿತನ ಮಾತ ಮೀರುವಾತ ಸುತನಲ್ಲ. ಅತಿ ಕೃಪೆ ಯಿಂದ ದೀಕ್ಷೆ, ಶಿಕ್ಷೆಯನಿತ್ತ ಗುರುವಿನಾಜ್ಞೆಯ ಮೀರುವಾತ ಶಿಷ್ಯನಲ್ಲ. ಇಂತಿವು ಭಕ್ತಸ್ಥಲಕೆ ಸಲ್ಲವು ಕೇಳಿರಣ್ಣಾ! ಆ ಸತಿಗೆ ಪತಿಯೇ ಗುರು ವಾಗಿ, ಆ ಸುತಗೆ ಪಿತನೇ ಗುರುವಾಗಿ, ಆ ಪಿತಗೆ ಅತಿ ಕೃಪೆಯಿಂದ ದೀಕ್ಷೆ ಶಿಕ್ಷೆಯನಿತ್ತ ಗುರುವೇ ಗುರುವಾಗಿ, ಏಕಪದವಿಲ್ಲಾಗಿ ಭಕ್ತಸ್ಥಲವ ಮಾಡಿಹೆನೆಂಬಣ್ಣಗಳಿರಾ ಕೇಳಿ. ಈ ಒಂದು ಸ್ಥಲವುಳ್ಳವರಿಗೆ ಆರು ಸ್ಥಲವು ಅಡಗಿತ್ತು. ಇಂತಿವು ಏಕಸ್ಥಲವಾದ ಮೇಲೆ ಮುಂದೆಂತೆಂದಡೆ, ಆ ಪತಿಗೆ ಸತಿಯೇ ಗುರುವಾಗಿ, ಆ ಪಿತಗೆ ಸುತನೇ ಗುರುವಾಗಿ, ಅತಿ ಕೃಪೆಯಿಂದ ದೀಕ್ಷೆ ಶಿಕ್ಷೆಯನ್ನಿತ್ತ ಗುರುವೇ ಶಿಷ್ಯನಾಗಿ, ಇಂತಿ ದೀಗ ನಿರ್ಣಯಸ್ಥಲವು. ಇದನರಿಯದೆ, ಅವಳು ಸತಿ ತಾ ಪತಿ ಎಂಬ ಹಮ್ಮಿಂದವೇ ಅವರು ಸುತರು ತಾ ಪಿತನೆಂಬ ಹಮ್ಮಿಂದವೇ ಅವರು ಶಿಷ್ಯರು ತಾ ಗುರುವೆಂಬ ಹಮ್ಮಿಂದವೇ ಇದು ಲಿಂಗ ಪಥಕ್ಕೆ ಸಲ್ಲದು. ಹಿಡಿದ ವ್ರತಕ್ಕೆ ನಿಲ್ಲದು. ಇದ ಮುಂದೆ ನಮ್ಮ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೬. ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದ ಲಿಂಗ ಮಹಾಲಿಂಗದೊಳು ಬೆರೆದರೆ, ಬಸವಪ್ರಿಯ ಕೂಡಲ ಚನ್ನ ಬಸವಣ್ಣಾ.

೭. ಸ್ಥಲವಿಟ್ಟು ನಡೆಯಬೇಕೆಂಬರು. ಸ್ಥಲವಿಟ್ಟು ನುಡಿಯಬೇಕೆಂ ಬರು. ಸ್ಥಲದ ನೆಲೆಯನಾರು ಅರಿಯರು. ಕಾಯಸ್ಥಲ, ಕರಸ್ಥಲ, ಭಾವಸ್ಥಲವನಂದು, ಆ ಕಾಯಸ್ಥಲ ಕರಸ್ಥಲ ಭಾವಸ್ಥಲದಲ್ಲಿ ಕೂಡಿ ನಿಲಿಸುವದೆ ಸ್ಥಲ. ಇದನರಿಯದೆ, ಹಿಂದಕ್ಕೆ ನುಡಿದ ವರ ಮಾತು ಕಲಿ

ತುಕೊಂಡು, ಈಗ ನುಡಿವವರ ಮಾತ ಮೆಚ್ಚುವರೆ ನಮ್ಮ ಶರಣರು? ಅದಂತಿರಲಿ, ಇನ್ನು ನೇಮವಾವುದು ಎಂದರೆ, ಗುರುಲಿಂಗಜಂಗಮದ ಪಾದೋದಕ ಪ್ರಸಾದವನರಿದು, ಅಂಗೀಕರಿಸಿ ತನ್ನ ತನುವನೆ ಪ್ರಸಾದವ ಮಾಡುವದೀಗ ನೆಲೆ. ಈ ಸ್ಥಲದ ನೆಲೆಯ ಬಲ್ಲವರಿಗೆ ನಮೋ ನಮೋ ಎಂಬೆ. ಇದನರಿಯದೆ ಬರಿಯ ನುಡಿಯ ನುಡಿವವರ ಕಂಡರೆ ಛೀ ಎಂಬೆನು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೮. ಕಾಯಸ್ಥಲ, ಕರಸ್ಥಲ, ಉರಸ್ಥಲ, ಶಿರಸ್ಥಲ, ಪ್ರಾಣಸ್ಥಲ, ಭಾವಸ್ಥಲವೆಂದು ನುಡಿದಾಡುವರು ಆ ಸ್ಥಲದೊಳಗಣ ಸ್ವಯಸ್ಥಲವನರಿಯರು, ಕಾಣಿರೇ. ಸ್ವಯಸ್ಥಲವೆಂತಿಪ್ಪದೆಂದರೆ, ಕಾಯಸ್ಥಲವನರಿದರೆ, ಅದು ತಾನೇ ಲಿಂಗವಾಯಿತ್ತು. ಕರಸ್ಥಲವನರಿದರೆ, ಕೈಲಾಸ ಮರ್ತ್ಯ ತನ್ನೊಳಗಾಯಿತ್ತು. ಉರಸ್ಥಲವನರಿದರೆ, ಪರವು ತನ್ನೊಳಗಾಯಿತ್ತು. ಶಿರಸ್ಥಲವನರಿದರೆ ಶಿವನೆಂಬುದಕ್ಕೆ ಇಲ್ಲ. ಪ್ರಾಣಸ್ಥಲವನರಿದರೆ, ಭಯ ಮರಣಾದಿಗಳಿಲ್ಲ. ಭಾವಸ್ಥಲವನರಿದರೆ, ಇನ್ನಾವುದು ನೆನಹಿಲ್ಲ. ಇದರ ಭೇದವನರಿಯದ ಸ್ಥಲನೆಲೆಯುಂಟೆಂಬಿರಿ. ಅದರ ಭೇದವ ನೀವು ಅರಿಯಿರಿ, ಕಾಣಿರೋ. ಸ್ಥಲವೆಂದರೆ, ಅಂಗ. ನೆಲೆಯೆಂದರೆ ಪ್ರಾಣ. ಇದನರಿಯದೆ ತಲೆ ಕೆಳಗಾಗಿ ಹೋದರು. ಆರು? ದೇವದಾನವರು. ನಿಮ್ಮ ಪಾಡೇನೋ ನರಗುರಿಗಳಿರಾ? ಇದನರಿದು ಇನ್ನಾದರು ನಮ್ಮ ಶರಣರಿಗೆರಗಿ ಬದುಕಿರೋ ನಮ್ಮ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.



# ಭಕ್ತಸ್ಥಲ

## ನೀತಿಯಿಂದಿರುವುದು.

೧. ಅಂಗಲಿಂಗವೆಂದರಿದಕ್ಕೆ ಕುರುಹು ಎಂತಿಪ್ಪುದೆಂದರೆ, ಕರುಣ ರಸಭರಿತವಾಗಿಪ್ಪುದೇ ಕುರುಹು. ಕಂಗಳು ಲಿಂಗವೆಂದರಿದಕ್ಕೆ ಕುರುಹು ಎಂತಿಪ್ಪುದೆಂದರೆ, ಕಾವಾದಿಗಳ ಸೃಜಿಸದುದೇ ಕುರುಹು. ಕರವೇ ಲಿಂಗವೆಂದರಿದುದಕ್ಕೆ ಕುರುಹು ಎಂತಿಪ್ಪುದೆಂದರೆ, ಇಹಪರ ಮೋಕ್ಷವ ಬಯಸದಿಪ್ಪುದೇ ಕುರುಹು. ಈ ತ್ರಿವಿಧವು ಏಕವಾದರೆ ಎಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣನಲ್ಲಿ ಮಹಾ ಲಿಂಗೈಕ್ಯವು.

೨. ಅಯ್ಯಾ, ಶಿವಭಕ್ತರು ನುಡಿವಲ್ಲಿ ಜಾಣತನದಿಂದ ನುಡಿವರು. ನೀಡುವಲ್ಲಿ ಭೇದದಿಂದ ನೀಡುವರು. ಕೊಡುವಲ್ಲಿ ಸತ್ಪಾತ್ರಕ್ಕೆ ಕೊಡುವರು. ಬಿಡುವಲ್ಲಿ ಶರಣಗೋಷ್ಠಿಯ ಬಿಡುವರು. ಪೊಡವಿಯೊಳವರ ಭಕ್ತರೆನ್ನಬಹುದೆ? ಅದಂತಿರಲಿ, ಎನ್ನೊಡೆಯ ಬಸವಪ್ರಿಯನಡಿಗಳ ನೆನೆವ ಶರಣ ಲಿಂಗೈಕ್ಯರು ಮೆಡುವ ಪಡುಗ ಪಾದರಕ್ಷೆಯ ಕಾಯ್ದಿರಿಸಯ್ಯ ಚನ್ನಬಸವಣ್ಣಾ

೩. ತಾನೆನಬೇಡ, ಮನ ಮುಗ್ಧನೆನಬೇಡ, ಮುನ್ನವರ ಬೇಡ ಬೇಡ, ತನುಜರೊಳ್ನುಡಿ ಬೇಡ, ಕಂಡೆನೆಂದು ಉಲಿಯ ಬೇಡ, ಉಣ್ಣೆವೆಂದು ಸುಮ್ಮನಿರಬೇಡ, ಬಂಡು ಮಾಡಿಕೊಳಬೇಡ, ಚಂಡ ವಿಕ್ರಮ ಬಸವಪ್ರಿಯ ಕೂಡಲ ಚನ್ನಬಸವಣ್ಣ

೪ ಕತ್ತಲೆ ಬೆಳಗೆನ ಬೇಡ, ಸತ್ಯ ತಾನೆನಬೇಡ, ಚಿತ್ತವ ಸುಯಿಧಾನವ ಮಾಡಿ ಮೊತ್ತಾದ ಹೆಣ್ಣು ಹೊನ್ನು ಮಣ್ಣು ಗೆದ್ದರೆ, ನಿಮುಕ್ತ ಬಸವಪ್ರಿಯ ಕೂಡಲ ಚನ್ನಬಸವಣ್ಣ.

೫. ವಂದನೆಗೆ ನಿಲ್ಲಬೇಡ, ನಿಂದೆಗಂಜಿ ಓಡಲಿಬೇಡ, ಹಿಂದು ಮುಂದು ಆಡಲಿಬೇಡ, ಸಂದೇಹ ಗೊಳಲಿಬೇಡ. ದ್ವಂದ್ವ ಬುದ್ಧಿಯ ಕಳೆದು ನಿಂದಿರೆ ಬಸವಪ್ರಿಯ ಕೂಡಲ ಚನ್ನಬಸವಣ್ಣ.

೬. ಕಾಡಬೇಡ ಕಂಡವರ. ಬೇಡಬೇಡ ನರರುಗಳ. ಆಡಬೇಡ ಅನೃತವ. ನೋಡಬೇಡ ಪರಸ್ತ್ರೀಯರ. ಗಾಢಗಂಭೀರ ಲಿಂಗಾರೂಢನಾದ ಬಸವಪ್ರಿಯ ಕೂಡಲ ಚನ್ನ ಬಸವಣ್ಣಾ.

೭. ಕಟ್ಟಬೇಕು ಮನವ. ಮೆಟ್ಟಬೇಕು ಮದವ. ಸುಟ್ಟಿರಬೇಕು ಸಪ್ತವ್ಯಸನಗಳ. ಆ ತೊಟ್ಟಿಲ ಮುರಿದು ಕಣ್ಣಿಯ ಹರಿದು ಆ ಒಟ್ಟಬಯಲಲ್ಲಿ ನಿಂದಿರೆ, ಬಸವಪ್ರಿಯ ಕೂಡಲಚನ್ನಬಸವಣ್ಣಾ.

೮. ಕರಿದೈದು ಬಿಳಿದೈದು ಭಾಸುರವೈದು ಹದಿನೈದು ಬಗೆಯ ಕರಣವ ಸುಟ್ಟು, ಸುರತ ಸುಗ್ಗಿ ಕಾಲ ಕಾಮಾದಿಗಳೈವರ ಗೆದ್ದರೆ, ಬಸವಪ್ರಿಯ ಕೂಡಲಚನ್ನಬಸವಣ್ಣಾ.

೯. ಇಂದು ನಾಳೆ ಎಂಬ ಸಂದೇಹವ ಬಿಟ್ಟು, ನಿಂದ ನಿಜಾನಂದದಿಂದ ನೋಡಿ, ಹಿಂದು ಮುಂದು ಕುಂದು ಹೆಚ್ಚು ಧಂದುಗ ಧಾವತಿಯ ಕೊಂದು ನಿಂದರೆ ಬಸವಪ್ರಿಯ ಕೂಡಲಚನ್ನಬಸವಣ್ಣಾ.

೧೦. ಆಗುತಿವೆ ಉದಯ ಮಧ್ಯಾಹ್ನ ಅಸ್ತಮಾನ. ಹೋಗುತಿವೆ ದಿನ ವಾರ ಮಾಸ ಸಂವತ್ಸರವು. ಸಾವುತಿವೆ ಆಯುಷ್ಯ ಭಾಷೆ. ಇವರೊಳು ಬೇಗದಿ ತಿಳಿದು ನೀಗಿ, ನಿಷ್ಪತ್ತಿಯಾದರೆ ಬಸವ ಪ್ರಿಯ ಕೂಡಲಚನ್ನಬಸವಣ್ಣಾ.

೧೧. ವಾದಿಗೆ ಜೂಜನಾಡುವಾತನೊಬ್ಬಪಾತಕ. ಪರರ ಹಾದಿಯ ಹೋದಾತನೊಬ್ಬ ಪಾತಕ. ಪಶುವಧೆಯ ಮಾಡುವಾತನೊಬ್ಬ ಪಾತಕ. ಇವರು ಮೂವರು ಹೋದ ಹಾದಿಯಲಿ ಹೋಗಲಾಗದು. ಅದೇನು ಕಾರಣವೆಂದರೆ, ಅವರು ಚಂದ್ರ ಸೂರ್ಯರುಳ್ಳನ್ನಕ್ಕ ನರಕದಲ್ಲಿಪ್ಪುದು ತಪ್ಪದು ಕಾಣಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೨. ದಾಸಿಯ ಸಂಗ ಎರಡನೆಯ ಪಾತಕ. ವೇಶಿಯ ಸಂಗ ಮೂರನೆಯ ಪಾತಕ. ಮೀಸಲಳಿದ ಪರಸ್ತ್ರೀಯರ ಸಂಗ ಪಂಚ ಮಹಾಪಾತಕ. ಇನಿಸು ಶಿವಭಕ್ತರಿಗೆ ಸಲ್ಲವು. ಇವನರಿದರಿದು ಮಾಡಿದನಾದರೆ, ಯಮಪಟ್ಟಣವೆ ವಾಸವಾಗಿಪ್ಪರಲ್ಲದೆ, ಈ ದೇಶಕ್ಕೆ ಮರಳಿ ಬರಲಿಲ್ಲ ನೋಡಾ, ಬಸವಪ್ರಿಯ ಕೂಡಲಚನ್ನಬಸವಣ್ಣಾ.

೧೩. ಹೊನ್ನ ಗಳಿಸಿದರೇನಯ್ಯಾ ಹೊಲೆಯರ ಮನೆಯಲ್ಲಿದ್ದರೆ? ಹೆಣ್ಣ ಗಳಿಸಿದರೇನೈಯ್ಯಾ, ವೇಶಿಯರ ಮನೆದಾಸಿಯಾಗಿದ್ದರೆ? ಮಣ್ಣ ಗಳಿಸಿದರೇನೈಯ್ಯಾ, ಉಣ್ಣದಾಹಾರವನುಂಡರೆ? ಹೋಗುವ ಹಾಳುಗೇರಿಯಾಗಿರದೆ, ಇದನರಿದು ಮಹಾಘನವನೆ ಮರೆದು, ಮತ್ತೆ ಹೊನ್ನು ಹೆಣ್ಣು ಮಣ್ಣು ತನ್ನದೆಂಬರು. ಕಣ್ಣುಗಾಣದ ಕುರುಡರಂತಾದರು ಕಾಣಾ ಬಸವಪ್ರಿಯ ಕೂಡಲಚನ್ನಬಸವಣ್ಣಾ

೧೪. ಹೊತ್ತಾರೆಯಿಂದ ಅಸ್ತಮಯತನಕ ಸುತ್ತಿರ್ದ ಮಾಯಾ ಪ್ರಪಂಚನೆ ಆಳವುತ್ತ ಸುರಿವುತ್ತಲಿರ್ದು, ಕತ್ತಲೆಯಾದರೆ, ಕಾಳುವಿಷಯದೊಳಗೆ ಮುಳುಗಿತ್ತು. ಸತ್ತು ಹುಟ್ಟಿತ್ತು. ಮತ್ತೆ ಬೆಳಗಾಗಿರ್ದು, ನಾನು ತತ್ವವ ಬಲ್ಲೆನೆಂದು ನುಡಿವ ಕತ್ತಲೆ ಮನುಜರು ಅತ್ತ ಹೊದ್ದದೆ, ಇತ್ತಲೆ ನಿಂದು ನಾಚಿ ನಗುತಿರ್ದ ನಮ್ಮ ಬಸವಪ್ರಿಯ ಕೂಡಲ ಚನ್ನ ಬಸವಣ್ಣಾ.

೧೫. ಮಾತು ಮಾತಿಗೆ ಮಥನವ ಮಾಡುವಾತನೆ ಜಾತ. ಮಾತಿನ ಮೊದಲ ಕಂಡಾತನೆ ಅಜಾತ. ಕಾತರಕ್ಕೆ ಕಂಗೆಟ್ಟು, ಕಳವಳಿಸದಿಪ್ಪನೆ ಪರಮಾತ್ಮ. ನೀತಿ ನಿಜನೆಲೆಗೊಂಡಾತನೆ ಜಗನ್ನಾಥ. ಇವೇತರೊಳಗು ಸಿಕ್ಕದಿಪ್ಪಾತನೆ ಗುರುನಾಥ ಬಸವ ಪ್ರಿಯ ಕೂಡಲ ಚನ್ನ ಬಸವಣ್ಣಾ.

೧೬. ಕಂಡುದ ಹೇಳಿಹೆನೆ? ಸಮಯಕ್ಕೆ ದೂರ ಎನ್ನ ಇರವನರಿಯರು. ಲೆಂಡನೆಂಬರು, ಸುಮ್ಮನಿದ್ದೇನೆ. ಇವರೆನ್ನ ಆರೈದು ಕಂಡುದ ನುಡಿವರು. ಎನ್ನ ಮುಟ್ಟಿದವರ ಎನ್ನಂತೆ ಮಾಡಿಕೊಂಬೆ. ಎನ್ನ ಅರಿಯದವರ ಹಾದಿಯ ಹೋಗೆ. ಎನ್ನನರಿತ ಜಂಗಮದ ಸಂಗವ ಮಾಡುವೆ. ಜಗದ ಸಂಗವನೊಲ್ಲೆ. ನಿಗಮಾಗಮ ಶಾಸ್ತ್ರವನೊಲ್ಲೆ. ಅವೆಲ್ಲವು ಸ್ಥಲನೆಲೆ ಇಟ್ಟು ಹೇಳುವವು. ಎಮ್ಮ ಶರಣರ ನುಡಿದ ಶಾಸ್ತ್ರಕ್ಕೆ ಸ್ಥಲನೆಲೆಇಲ್ಲ. ಇಂತಿವೆಲ್ಲವ ಬಲ್ಲೆನಾಗಿ, ಎನ್ನಂಗಕ್ಕೆ ಪ್ರಾಣಕ್ಕೆ ಭವವಿಲ್ಲ, ಬಂಧನವಿಲ್ಲ. ಅದೇಕೆಂದರೆ ಲಿಂಗವೆಂದ ಕಾರಣ. ನಾನೆಂಬುದಿಲ್ಲ, ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೭. ಹೊತ್ತುಹೊತ್ತಿಗೆ ಲಿಂಗಪೂಜೆಯ ಮಾಡಿಯೂ, ಮತ್ತೆಯು ಸತ್ಯವಾವುದು, ನಿತ್ಯವಾವುದೆಂದರಿಯದೆ, ಕೆಟ್ಟರೆಲ್ಲ ಜಗವು. ಸತ್ಯವಾಗಿ ನುಡಿವ ಶರಣರ ಕಂಡರೆ, ಕತ್ತೆ ಮಾನವರೆತ್ತ ಬಲ್ಲರೊ? ಅಸತ್ಯವನೆ ನುಡಿದು, ಹುಸಿಯನೆ ಬೋಧಿಸುವ ಹಸುಕರ ಕಂಡರೆ, ಇತ್ತ ಬನ್ನಿ ಎಂಬರು. ಇಂತಪ್ಪ ಅನಿತ್ಯ ದೇಹಿಗಳ ಭಕ್ತರೆಂದು ಜಂಗಮವೆಂದು ನೋಡಿದರೆ, ನುಡಿಸಿದರೆ, ಮಾತನಾಡಿದರೆ, ನೀಡಿದರೆ, ಅಘೋರ ನರಕವೆಂದು ನಮ್ಮ ಆದ್ಯರ ವಚನ ಸಾರುತಿದೆ., ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೧೮. ಸತಿಸುತ ಮಾತಾಪಿತರಂದದಿ ಮೋಹದಲಿ ಮನ ಮಗ್ನವಾದರೆ, ಅವನಿಗೆ ಲಿಂಗವಿಲ್ಲ, ಲಿಂಗಕ್ಕೆ ತಾನಿಲ್ಲ. ಅದೇನು ಕಾರಣ

ವೇದರಿ ಆತನ ಧ್ಯಾನ ಸತಿಯು ಮೇಲೆ, ಸುತರ ಮೇಲೆ, ಮಾತಾಪಿತರಮೇಲೆ ಇಪ್ಪುದಲ್ಲದೆ, ಲಿಂಗದ ಮೇಲಿಲ್ಲ. ಅದು ಕಾರಣ ಆತ ಕಟ್ಟಿದುದು ಲಿಂಗವಲ್ಲ. ತೊಟ್ಟದುದು ವಿಭೂತಿ ರುದ್ರಾಕ್ಷಿಯಲ್ಲ. ಅದು ಕಾರಣ ಆತನಾಚಾರಕ್ಕೆ ದೂರ ಬಸವಪ್ರಿಯ ಕೂಡಲಚನ್ನಬಸವಣ್ಣಾ.

೧೯. ಊರ ಮೇಲೆ ಊರ ಕಂಡೆ. ನೀರ ಮೇಲೆ ನೀರ ಕಂಡೆ. ಮರನ ಮೇಲೆ ಮರನ ಕಂಡೆ. ಗಿರಿಯ ಮೇಲೆ ಗಿರಿಯ ಕಂಡೆ. ಉರಿಯ ಮೇಲೆ ಉರಿಯ ಕಂಡೆ. ಈ ಭಾರವ ತಾಳಲಾರದೆ, ಆ ಉರಿ ಎದ್ದು ಊರು ಬೆಂದಿತ್ತು. ಮರನು ಬೆಂದಿತ್ತು. ಗಿರಿಯು ಬೆಂದಿತ್ತು. ನೀರು ಬೆಂದಿತ್ತು. ಆ ಉರಿಯೇ ಉಳಿಯಿತ್ತು. ಆ ಉರಿಯುನೆರೆದು ಸೀರೆಯ ಸೆಳೆದು ಪರಮ ಸುಖ ಪರಿಣಾಮದೊಳೋಲಾಡುತ್ತ ನಿಮ್ಮ ಬರವ ಹಾರುತ್ತಿದ್ದೇನೈಯ್ಯ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೨೦. ಆಡುವ ಹಾಡುವ ನಡೆವ ನುಡಿವ, ಬೆಡಗಬಿಡದೆ, ಒಡಲ ದುರ್ಗುಣಗಳ ಕೆಡದೆ, ಪೊಡವಿಯೊಳು ನುಡಿಯ ನುಣ್ಣನೆ ನುಡಿದುಕೊಂಡು ಒಡಲ ಹೊರೆವ ಅಣ್ಣಗಳಿರಾ, ನೀವು ಭಕ್ತಮಾಹೇಶ್ವರರೆಂದು ನುಡಿದುಕೊಂಬಿರಿ. ಅಂತಲ್ಲ ಕೇಳಿರಣ್ಣಾ ನೋಡುವ ಕಣ್ಣು ನುಡಿವ ನಾಲಿಗೆಯ ನುಂಗಿತ್ತು. ಕೇಳುವ ಕಿವಿ ವಾಸಿಸುವ ನಾಸಿಕವ ನುಂಗಿತ್ತು. ಕೊಡುವ ಕೊಂಬುವ ಕೈ ಅಡಿ ಇಡುವ ಕಾಲ ನುಂಗಿತ್ತು. ಇವನೊಡಬಿಡದೆ ಕೊಂಬ ತನುವ ನುಂಗಿತ್ತು. ತಲೆಯುಷ್ಟೆಯುಳಿದು,ಆ ತಲೆಯು ನೆಲವಿಡಿದು, ಘನವ ನಂಬಿದವರ ಭಕ್ತ ಮಹೇಶ್ವರರೆಂಬೆ ಕಾಣಾ ಬಸವಪ್ರಿಯಕೂಡಲ ಚನ್ನಬಸವಣ್ಣಾ.

೨೧. ಅಯ್ಯ, ಎನ್ನ ಬಾಳುವೆಯಲ್ಲಿ ಹೇಳದೆ ಕೇಳದೆ, ಒಬ್ಬ ಕಾಳ ರಕ್ಕಸಿ ನುಂಗಿದಳೈಯ್ಯ. ಆ ಬಾಳುವೆಗೋಸುಗ ಕಾಳ ರಕ್ಕಸಿಯ ಬಾಯೊಳಗೆ ಸಿಲ್ಕಿದೆನಯ್ಯ. ಆ ಕಾಳ ರಕ್ಕಸಿ ಆವಾಗೆ ಅಗಿದಾಳೆಂದರಿಯೆ. ಆವಾಗೆ ನುಗಿದಾಳೆಂದರಿಯೆ. ಆ ಕಾಳ ರಕ್ಕಸಿಯ ಬಾಯಿಂದವೆ ಹೊರಟು ಆ ಬಾಳುವೆಯನಲ್ಲಿ ಬಿಟ್ಟು ಆ ಕಾಳ ರಕ್ಕಸಿಯ ಬಾಯಿಂದಲೆ ಹೊರವಂಟು, ಆ ಮಹಾ ಜಾಣನಾಳುವ ಪುರವ ಹೊಕ್ಕೆ. ಆ ಜಾಣನಾಳುವ ಪುರದೊಳಗೆ, ಕಾಣಬಾರದುದನೆ ಕಂಡೆ. ಕೇಳಬಾರದುದನೆ ಕೇಳಿದೆ. ಕದಳಿಯನೆ ದಾಂಟಿದೆ. ಜ್ಞಾನ ಜ್ಯೋತಿಯ ಕಂಡೆ.

ತಾನು ತಾನಾಗಿಪ್ಪ ಮಹಾ ಬೆಳಗಿನೊಳು ನಾನು ಓಲಾಡುತಿಪ್ಪೆನಯ್ಯಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

---

## ಶರಣರೊಡನೆ ಅನುಭಾವ.

೬೨. ಭಕ್ತನಾದರೆ ಎಂತಿರಬೇಕೆಂದರೆ, ಉಲುಹಡಗಿದ ವೃಕ್ಷದಂತಿರಬೇಕು. ಶಿಸು ಕಂಡ ಕನಸಿನಂತಿರಬೇಕು. ಗಲಭೆಗೆ ನಿಲ್ಲದ ಮೃಗದಂತಿರಬೇಕು. ತಾಯ ಹೊಲಬುದಪ್ಪಿದ ಎಳೆಗರುವಿನಂತೆ, ತ್ರಿಕಾಲದಲ್ಲಿಯು ಲಿಂಗವನೆ ನೆನೆವ ಶರಣರ ಎನಗೊಮ್ಮೆ ತೋರಯ್ಯಾ ಶಿವನೆ ಬಸವ ಪ್ರಿಯ ಕೂಡಲ ಚನ್ನಸಂಗನ ಬಸವಣ್ಣಾ.

೨೩. ಅನುಭಾವ ಅನುಭಾವವೆಂದು, ನುಡಿದಾಡುತಿಪ್ಪಿರಿ. ನಿಮ್ಮ ತನುವಿನಿಚ್ಛೆಗೆ ಅನುವಿಗೆ ಬಂದಂತೆ, ಬಿನುಗರ ಮುಂದೆ ಬೊಗುಳಿಯಾಡುವ ನಿನಗಂದೆ ದೂರ. ಅನುಭಾವವೆಂತೆಂದರೆ, ತಮ್ಮ ಹಿಂದನರಿದು ಮುಂದೆ ಲಿಂಗದಲ್ಲಿ ನೋಡುವ ಶರಣರ ಅಂಗವ ಸೋಂಕಿ ನಾ ಬದುಕಿದೆ ಕಾಣಾ, ಬಸವಪ್ರಿಯ ಕೂಡಲಚನ್ನಬಸವಣ್ಣಾ.

೨೪. ಉಟ್ಟರೆ ತೊಟ್ಟರೇನೈಯ್ಯ? ನಟ್ಟುವರಂತೆ. ಕೊಟ್ಟರೆ ಕೊಂಡರೇನೈಯ್ಯ? ವೇಶಿಯರಂತೆ. ಬಿಟ್ಟರೆ ಕಟ್ಟಿದರೇನೈಯ್ಯ? ಭೈರೂಪನಂತೆ. ಇವಾವಂಗವ ಮಾಡಿದರೇನೈಯ್ಯ? ಮುಟ್ಟಿ ನಮ್ಮ ಶರಣರೊಡನೆ ಒಡವೆರೆಯದಿದ್ದವರು ಉಟ್ಟಿದ್ದರೇನು, ಬಿಟ್ಟಿದ್ದರೇನು ಹೇಳಾ ಬಸವ ಪ್ರಿಯ ಕೂಡಲಚನ್ನಬಸವಣ್ಣಾ?

೨೫. ಕರಕನಿಷ್ಟ ಕಬ್ಬಿಣವ ನೆರಹಿರೆ, ಪರುಷ ಮುಟ್ಟಲು ಚಿನ್ನವಾಗದೆ? ಗುರುಕಾರುಣ್ಯಾ ಪಡೆವರು ಇಂದು ಶರಣರೊಳು ಬೆರೆದರೆ ಬಸವಪ್ರಿಯ ಕೂಡಲ ಚನ್ನ ಬಸವಣ್ಣಾ.

೨೬. ಅಂಗ ಲಿಂಗ ಸಂಬಂಧವಾದ ಬಳಿಕ ಮನ ಹಿಂಗದಿಪ್ಪುದು. ತನುವನು ಬಿಟ್ಟು, ಸಂಗಸುಖದ ಶರಣರ ಗೋಷ್ಠಿಯೊಳು ಇಪ್ಪಾತ ಮಂಗಳಾತ್ಮಕ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

R. N. B. 2534.

# ಶಿವಾನುಭವ.

ಸಂಪುಟ ೪.] (ಮಾಸಪತ್ರಿಕೆ) [ಸಂಚಿಕೆ ೩.



ಜೂನ ೧೯೨೯] ವಿಜಾಪುರ [ಜ್ಯೇಷ್ಠ ೧೮೫೧

ವಾ. ವ. ೪ ರೂ. ೪ ಅ.

# ವಿಷಯಾನುಕ್ರಮಣಿಕೆ.



# ಶಿವಾನುಭವ.

ಇದು ವೀರಶೈವ ಧಾರ್ಮಿಕ ಉನ್ನತಿಯ ಬಗ್ಗೆ ಹೆಣಗಾಡುವ ವೇಲ್ತ್ರದ ಮಾಸಪತ್ರಿಕೆಯು. ಇದು ೬೪ ಪುಟಗಳುಳ್ಳದ್ದಿದ್ದು ಚಂದಾ ಮಾತ್ರ ೪ ರೂಪಾಯಿ. ಇದು ಪ್ರತಿ ತಿಂಗಳ ಮಧ್ಯಕ್ಕೆ ಹೊರಡುತ್ತದೆ. ಲೇಖಕರು ಚಿಕ್ಕ ಚಿಕ್ಕ ಲೇಖಗಳನ್ನು ಕಳಿಸಬೇಕು. ವೀರಶೈವರ ಉನ್ನತಿಯ ಪರವಾಗಿ ಯಾರು ಬೇಕಾದವರು ಬರೆದರೂ ಅವಕಾಶ ಸಿಗುವದು. ಕೆಲವರು ಇದರ ಹಿಂದಿನ ಸಂಚಿಕೆಗಳನ್ನು ಬೇಡುತ್ತಾರೆ. ಆದರೆ ೧-೨ ಸಂಚಿಕೆಗಳು ಸಿಗುವದೇ ಇಲ್ಲ. ೩ ರಿಂದ ೧೨ ವರೆಗೆ ಮಾತ್ರ ಸಿಗುತ್ತವೆ. ಬೇಕಾದವರು ತೀವ್ರ ತರಿಸಿಕೊಳ್ಳಬಹುದು. ತಡವಾದರೆ ಪ್ರತಿಗಳು ಸಿಗಲಾರವು. ಯಾಕಂದರೆ ಪ್ರತಿಗಳು ಸ್ವಲ್ಪೇ ಉಳಿದಿವೆ. ಪ್ರತಿಯೊಂದು ಸಂಚಿಕೆಗೆ ೮ ಆಣೆ.

ಮ್ಯಾನೇಜರ.

ಕಟ್ಟಕ್ಕೆ ಬಾರದುದರಿಂದಲೂ, ಚಲುಕ್ಯ ವ
ಯ ಸೋಮೇಶ್ವರ ಅಥವಾ ತ್ರಿಭುವನಮ
ಹರಿದುದರಿಂದಲೂ, ಹೊಯ್ಸಳರಿಗೆ ಅನ



# ಚೌಡದಾನಪುರದ ಶಿಲಾಶಾಸನಗಳು.

(ಪುಟ ೮೪ ರಿಂದ ಮುಂದೆ ಸಾಗಿದ್ದು.)

ಲೇಖಕ- ಶಿ. ಚ. ನಂದಿಮಠ ಎಮ್. ಎ. ಎಮ್. ಆರ್. ಎ. ಎಸ್. ಲಂಡನ.

## ಶಿವದೇವರು.



ಈ ಶಾಸನಗಳಲ್ಲಿರುವ ಇವರ ವಿಪುಲವಾದ ವರ್ಣನೆಗಳಿಂದ ಇವರು ಆ ಕಾಲದ ವೀರಶೈವ ಗುರುಗಳಲ್ಲಿ ಒಳ್ಳೇ ಪ್ರಸಿದ್ಧಿಯನ್ನು ಹೊಂದಿದ್ದರೆಂದು ತಿಳಿದುಕೊಳ್ಳಲು ಅಡ್ಡಿಯಿಲ್ಲ. ಇಷ್ಟೇ ಏಕೆ? ಮ. ಶಿ. ಶಾ. ನಂ. ೨ ರಲ್ಲಿ ನಂದಿಯು ಅವತಾರವಾದ ಶ್ರೀ ಬಸವಣ್ಣನವರ ಪ್ರತಿ ಅವತಾರವೇ ಇವರೆಂದು ಸ್ಪಷ್ಟ ಉಲ್ಲೇಖವಿದೆ. ಇವರು ಶಕ ವರುಷ ೧೧೪೮ ನೇಯ ಪಾರ್ಥಿವ ಸಂವತ್ಸರದ ಭಾದ್ರಪದ ಶು. ೧೫ ಸೋಮವಾರ ಚಂದ್ರೋಪರಾಗ ಪುಣ್ಯತಿಥಿ ಮಧ್ಯಾನ್ಹ ಸಮಯದಲ್ಲಿ ಬಂದು ಮುಕ್ತಿ ಕ್ಷೇತ್ರವಪೊಕ್ಕಂತೆ ಹೇಳಿದೆ. ಇದು ಬಹುತರ ಇವರ ಜನ್ಮತಿಥಿಯಾಗಿರಬಹುದು. ಇವರನ್ನು ಶಾಸನಗಳು "ವೀರಗಣಂಗಳ ಕುಮಾರನೀ ಶಿವದೇವಂ" "ಶಿವದೇವ ಮುನಿಪತಿ ತೋರಿ ಮೆರೆದಂ ಲಿಂಗಜಂಗಮೈಕ್ಯಕ್ರಮಮಂ" ಎಂದು ಕರೆಯುತ್ತವೆ. ಇವರು ದೊಡ್ಡ ಯೋಗಿಗಳೂ, ವ್ರತಿಗಳೂ, ಗುರುಗಳೂ ಆಗಿದ್ದುದಲ್ಲದೆ, ಆ ಕಾಲದ ಅರಸು ಅರಸಿಯರಿಂದಲೂ, ಮಾಂಡಲಿಕರಿಂದಲೂ ಬಲು ಮನ್ನಣೆಯನ್ನು ಹೊಂದಿದ್ದರೆಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಗುತ್ತವೊಳಲ ಶ್ರೀ ಗುತ್ತನೃಪಾ

ಲನು [redacted] ತೊರಗ
ಲಿಯು " [redacted] ಂದು ಹಳ್ಳಿ
ಯನ್ನು [redacted], ಉಲ್ಲೇ
ಖವಿರುವುದ [redacted] ರಾಜಮನೆ
ತನಗಳಲ್ಲಿ ಎಷ್ಟಿರಬಹುದೆಂಬು[redacted] ಅವರು ತೊಟ್ಟ ಭಾಷೆಗಳಿಂದ
ಅವರು ಎಂಥ ಕಠೋರ [redacted]ಂಬುದನ್ನೂ ,

"ಬೆರಳಂ ಕಚ್ಚಿ ಕರಗಳಂ ಮುಗಿದು ಬಾಯ್ಕುಂ ಪಾಯ್ವುವಂತೆಂಮು ।
ಕ್ಕರದಿಂ ಮುಚ್ಚುತ ಬಾಯುವಿಟ್ಟು ಕುಸಿದುಂ ನ್ಯೈಯಿಕ್ಕುತಂ ಪಲ್ಗಳಂ ।
ಪಿರಿದುಂ ಜೀ ಶರಣಾರ್ಥಿಯೆಂದನಃ- ದಿನಂ ಷಡ್ದರ್ಶನಂ ಬಾಹುಲಿ ।
ಭರದೊಳ್ತಾಳ್ತಲಿವುತ್ತಮಿರ್ದುರ್ವನಿಶಂ ಶಿವದೇವಮಾಎಾಂಘ್ರಿಯೊಳ್ ॥"

ಎಂಬುದರಿಂದ ಇವರ ವಿದ್ವತ್ತೆಯನ್ನು ಊಹಿಸಲು ಅವಕಾಶವಿದೆ. ಇವರು ತೊಟ್ಟ ಭಾಷೆಗಳನ್ನು ಬಸವಣ್ಣನವರು ಅಧಿಕಾರಾರೂಢರಾದ ಕೂಡಲೇ ತೊಟ್ಟ ಭಾಷೆಗಳಿಗೆ ಹೋಲಿಸಿ ನೋಡಬಹುದು. ಶಕ ೧೧೪೮ ಇವರ ಜನ್ಮವೆಂದು ಹಿಡಿದರೆ, ಶಿಲಾಶಾಸನದ ಕಾಲದಲ್ಲಿ ಅಂದರೆ ಶಕ ೧೧೮೧ ರಲ್ಲಿ (ಕ. ಶಿ ಶಾ. ನ ೪) ಇವರಿಗೆ ಮುವತ್ತುಮೂರೇ ವರುಷಗಳಾಗುವವು. ಇದರಿಂದ ಇವರು ಚಿಕ್ಕ ವಯಸ್ಸಿನಲ್ಲಿಯೇ ಪ್ರಸಿದ್ಧಿಯನ್ನು ಹೊಂದಿದಂತೆ ಕಂಡುಬರುವದು.

## ಮಹಾದೇವರಸರು.

ಸುಮಾರು ೧೧ನೇಯ ಶತಮಾನದಿಂದ ಯಾದವರ ಸಂಪರ್ಕವು ಕನ್ನಡ ನಾಡಿಗೆ ಆಗಹತ್ತಿದೆ. ಚಲುಕ್ಯರ ಕಾಲದಲ್ಲಿಯಾಗಲಿ, ಕಲಚುರಿಯ ಬಿಜ್ಜಳನ ಕಾಲದಲ್ಲಿಯಾಗಲಿ ಅವರು ಅಷ್ಟು ಪ್ರಬಲರಾಗಿದ್ದಿಲ್ಲ. ಅವರಲ್ಲಿ ಉತ್ತರದವರಿಗೆ ದೇವಗಿರಿಯ ಯಾದವರೆಂದೂ, ದಕ್ಷಿಣದವರಿಗೆ ಹೊಯ್ಸಳರೆಂದೂ ಹೆಸರು. ಚಲುಕ್ಯರ ಕಡೆಯ ಕಾಲದಲ್ಲಿ ಇವರು ಪ್ರಬಲರಾಗ ಹತ್ತಿದರು. ಕರ್ನಾಟಕವನ್ನಾಕ್ರಮಿಸಲು ಇವರ ಯತ್ನಗಳು ಎಡೆಬಿಡದೆ ನಡೆದಿದ್ದವು. ಆದರೆ ಬಿಜ್ಜಳನ ಮರಣದವರೆಗೆ ಇವರಿಗೆ ಸಾಕಷ್ಟು ಅನುವು ದೊರೆಯಲಿಲ್ಲ. ಬಿಜ್ಜಳನ ಮರಣದ ನಂತರ, ಬಲಾ

ಢ್ಯರು ಪಟ್ಟಕ್ಕೆ ಬಾರದುದರಿಂದಲೂ, ಚಲುಕ್ಯ ವಂಶದ ಕಡೆಯವನಾದ ನಾಲ್ಕನೆಯ ಸೋಮೇಶ್ವರ ಅಥವಾ ತ್ರಿಭುವನಮಲ್ಲನು ಕಲಚೂರ್ಯರ ಕಟ್ಟನ್ನು ಹರಿದುದರಿಂದಲೂ, ಹೊಯ್ಸಳರಿಗೆ ಅನುವು ದೊರೆತು ಕರ್ಣಾಟಕದ ಬಹುತರ ಎಲ್ಲ ಭಾಗವನ್ನಾಕ್ರಮಿಸಿದರು. ಸೆವುಣರೆಂದು ಕರೆಯಲ್ಪಡುವ ದೇವಗಿರಿಯ ಯಾದವರು, ಹೊಯ್ಸಳರಿಗೆ ಸುಖವಾಗಿ ಕರ್ಣಾಟಕವನ್ನು ಭೋಗಿಸಗೊಡಲಿಲ್ಲ. ಅವರ ಸಂಗಡ ಎಷ್ಟೋ ಕದನಗಳನ್ನು ಮಾಡಿ ಪೆಟ್ಟು ತಿಂದರು. ಆದರೂ ಎದೆಗುಂದದೆ ಯುದ್ಧಮಾಡಿ ಹೊಯ್ಸಳರನ್ನು ಕೆಳಗೆ ನೂಕಲು ಹತ್ತಿದ ವೀರನು ಭಿಲ್ಲಮನು. ಕರ್ಣಾಟಕದಲ್ಲಿ ಈ ಭಿಲ್ಲಮನ ಶಿಲಾಶಾಸನಗಳು ವಿಜಾಪುರ ಜಿಲ್ಹೆಯ, ಮುತ್ತಗಿ, ಭೈರವಾಡಿ, ಹಿಪ್ಪರಿಗಿ, ಮೊದಲಾದ ಸ್ಥಳಗಳಲ್ಲಿ ಅವೆ. ಭಿಲ್ಲಮನ ನಂತರ ಬಂದ ಜೈತುಗಿಯ ಶಾಸನಗಳು ವಿಜಾಪುರ ಜಿಲ್ಹಾ ಇಂಡೀ ತಾಲೂಕ ಮನಗೋಳಿ, ದೇವೂರ ಮೊದಲಾದ ಊರುಗಳಲ್ಲಿ ಅವೆ. ಜೈತುಗಿಯ ನಂತರ ಸಿಂಹಣನು ದೇವಗಿರಿಯ ಸಿಂಹಾಸನವನ್ನೇರಿ, ಹಿರಿಯರಿಂದ ನಡೆದುಬಂದ ಕರ್ಣಾಟಕದ ಆಕ್ರಮಣವನ್ನು ಮುಂದಕ್ಕೆ ಚಾಚಿದನು. ಈವನು ಕ್ರಿ. ಶ. ಸ. ೧೨೧೦ ರಿಂದ ೧೨೪೭ ರವರೆಗೆ ರಾಜ್ಯವಾಳಿದನು. ಕೊಲ್ಲಾಪುರ ಶಿಲಾಹಾರ ವಂಶದ ಬಲಾಢ್ಯನಾದ ಭೋಜ ದೇವನನ್ನು ಸೋಲಿಸಿ, ಶಿಲಾಹಾರ ರಾಜ್ಯಕ್ಕೆ ಸೇರಿದ ಕೊಂಕಣ ಮತ್ತು ಕರ್ಣಾಟಕದ ಭಾಗಗಳನ್ನು ಸೆಳೆದುಕೊಂಡನು. ಈತನು ಶಿವಭಕ್ತನಿದ್ದಂತೆ ತೋರುವುದು. ಈತನು ಶಿಲಾಹಾರರ ಸಂಗಡ ಯುದ್ಧಮಾಡುವಾಗ ಇದ್ದ ಈತನ ದಂಡಿನ ಚಾವಣಿ (ಬೀಡ)ಯೇ ಒಂದು ಊರಾಗಿ, ಕೊಲ್ಲಾಪುರದಿಂದ ನೈಋತ್ಯಕ್ಕೆ ೭-೮ ಮೈಲು ಅಂತರಗಳ ಮೇಲೆ "ಬೀಡ" ವೆಂಬ ಹೆಸರಿನ ಊರು ಇನ್ನೂ ಅದೆ. ಅಲ್ಲಿ ವಿಪುಲವಾಗಿ ಲಿಂಗಗಳೂ ವೀರಗಲ್ಲುಗಳೂ ದೊರೆಯುವವು. ಸಿಂಘಣ ದೇವನು ದಿನಕ್ಕೊಂದು ಲಿಂಗವನ್ನು ಪೂಜಿಸುತ್ತಿದ್ದನೆಂದೂ, ಆದುದರಿಂದಲೇ ಆ ಊರಲ್ಲಿ ಅಷ್ಟು ಲಿಂಗಗಳಿರುವವೆಂದೂ, ಇನ್ನೂ ಅಲ್ಲಿ ಪ್ರತೀತಿಯದೆ. ಇದಲ್ಲದೆ "ಶಿಂಘಣಾಪೂರ" ಗಳೆಂಬ ಹಳ್ಳಿಗಳು ಇನ್ನೂ ಕರ್ಣಾಟಕದಲ್ಲಿ ಅನೇಕ ಅವೆ. ಈತನ ಶಿಲಾಶಾಸನಗಳು ಕನ್ನಡ ಭಾಷೆಯಲ್ಲಿ ವಿಪುಲವಾಗಿವೆ. ಮ॥ ಇಲಿಯಟ್ಟರ ಹಸ್ತಪ್ರತಿಯಲ್ಲಿ ಈತನ ೩೪ ಶಾಸನಗಳಿವೆ. ಈತನ ತರುವಾಯ ಬಂದವನು, ಕನ್ನರ, ಕಂಧರ, ಕೃಷ್ಣನೆಂಬವನು. ಈತನ ಕಾಲದಲ್ಲಿ ಹೊಯ್ಸಳರ ಸುಳುವು ಕರ್ಣಾಟಕವಲ್ಲಿ

ಕೇಳಿಸುವುದಿಲ್ಲ. ಈತನು ವಿಘ್ನವಿಲ್ಲದೆ ಸಂಪೂರ್ಣ ಕರ್ಣಾಟಕವನ್ನು ಆಳುತ್ತಿದ್ದಂತೆ ಶಿಲಾಶಾಸನಗಳಿಂದ ಕಂಡು ಬರುವುದು. ಈತನ ದಂಡನಾಯಕರಲ್ಲಿ ಕನ್ನಡಿಗರಾದ ನಾಗರಸನೂ, ಚಾವುಂಡ ದಂಡಾಧಿಪನೂ ಮುಖ್ಯರು. ಇವರು ಕರ್ನಾಟಕದಲ್ಲಿ ಮುಖ್ಯಾಧಿಕಾರಿಗಳಾಗಿದ್ದಂತೆ ಕಂಡು ಬರುವದು. ಪುಲಿಗಿರಿ (ಲಕ್ಷ್ಮೇಶ್ವರ) ನಗರವನ್ನು ಆ ಕಾಲದಲ್ಲಿ ಕರ್ನಾಟಕದ ರಾಜಧಾನಿಯನ್ನಾಗಿ ಮಾಡಿದಂತೆ ತೋರುವುದು. ಈತನ ಕಾಲದ ಶಿಲಾಶಾಸನಗಳೂ ವಿಪುಲವಾಗಿವೆ. ಈತನ ದಂಡನಾಯಕನಾದ ಚಾವುಂಡರಾಯ, ಅಥವಾ ಚೌಡಿ ಸೆಟ್ಟಿಯರ ಶಾಸನಗಳೂ ದೊರೆಯುವವು. ಇದೇ ಚೌಡಿ ಸೆಟ್ಟಿಯರು ಶ್ರೀ ಬಸವಂಣನವರ ವಂಶಜರಾದ ಕವಿಳಾಸಪುರದ ಹಾಲಬಸವಿದೇವ ಮುನೀಶ್ವರರಿಗೆ ಭೂಮಿಯನ್ನು ಬಿಟ್ಟಂತೆ ಅರ್ಜುನವಾಡದ ಶಿಲಾಶಾಸನದಲ್ಲಿಯೂ, "ಶ್ರೀಮನ್ಮಹಾಪ್ರಧಾನ ಸರ್ವಾಧಿಕಾರಿ ಚಾಮುಂಡ ದಂಡಾಧಿಪಃ ಸ್ವಕೀಯ ಯಶೋಧವಳ ಪ್ರಾಸಾದ ಮಧ್ಯೇಗಗನ ಮಹಾನೀಲಲಿಂಗಂ ಪ್ರತಿಷ್ಠಾಪ್ಯ" ಕುರುಂಬೆಟ್ಟ ಪತ್ತಣ ತ್ರಿಕೂಟ ಪ್ರಾಸಾದದಲ್ಲಿ ತಮ್ಮ ತಂದೆಗಳಾದ ಮಲ್ಲನಾಥರ ಮತ್ತು ಬಂಧುಗಳಾದ ದೇವಶ್ರೇಷ್ಠಿಯರ ಹೆಸರಿಂದ ಲಿಂಗವನ್ನು ಸ್ಥಾಪಿಸಿ ಮಹಾದೇಶಿಕರಾದ ಶಿವಮುನೀಂದ್ರರ ಹಸ್ತದಲ್ಲಿ ಭೂಮಿಯನ್ನು ಬಿಟ್ಟಂತೆ, ಗೋಕಾಕ ತಾಲೂಕ ಗಚ್ಚಿನ ಕುರಬೆಟ್ಟದ ಶಿಲಾಶಾಸನದಿಂದಲೂ ಕಂಡು ಬರುವುದು. ಕನ್ನರನ ನಂತರ ಆತನ ತಮ್ಮನಾದ ಮಹಾದೇವನು ಪಟ್ಟಕ್ಕೆ ಬಂದನು. ಈ ಶಿಲಾಶಾಸನಗಳಲ್ಲಿದ್ದ ಚಕ್ರವರ್ತಿ ಮಹಾದೇವ ರಾಯನು ಈತನೇ. ಈತನು ಕ್ರಿ. ಶ. ಸು ೧೨೬೦–೧೨೭೧ ರ ವರೆಗೆ ಆಳಿದನು. ಈತನ ಶಾಸನಗಳು ಕರ್ನಾಟಕದಲ್ಲಿ ಕನ್ನಡ ನುಡಿಯಲ್ಲಿ ಅನೇಕವವೆ.

"ಕಾರುಣಿಕರೆನಿಪ ಸಿದ್ಧರೇವಣದೇವನ। ಕಾರುಣ್ಯದ ಶಿಶು ಭಕ್ತ್ಯಾಚಾರದ ಬಲ್ಲಾಳದೇವಂ॥

"ಮುದದಿಂದ ವಿತ್ತ ಬಲ್ಲಾಳದೇವಂ ಜಂಗಮ ಸುಖೈಕ ಗುಣಸದ್ಭಾವಂ॥

(ಮ. ಶಿ. ಶಾ. ನಂ೧)

ಇವುಗಳಲ್ಲಿರುವ "ಬಲ್ಲಾಳ" ಶಬ್ದವು ದೇವಗಿರಿಯ ಯಾದವರನ್ನು ಸಂಬೋಧಿಸುತ್ತಿದ್ದರೆ, ಅವರು ಒಳ್ಳೇ ಶಿವಭಕ್ತರೂ ವೀರಶೈವರ ಪಕ್ಷಪಾತಿಗಳೂ ಇದ್ದರೆಂದು ಹೇಳಲು ಅಡ್ಡಿಯಿಲ್ಲ. ಈ ಶಾಸನವು ಮಹಾ

ದೇವನ ಕಾಲದಲ್ಲಿ ಬರೆದುದರಿಂದ "ಯಾದವ" ಈ ಶಬ್ದವು ದೇವಗಿರಿಯವರಿಗೂ, ದ್ವಾರಸಮುದ್ರದವರಿ(ಬಲ್ಲಾಳರಿ)ಗೂ ಸಾಮಾನ್ಯವಾಗಿರುವುದರಿಂದ ಇದನ್ನು ರಚಿಸಿದ ಕವಿಯು, ದೇವಗಿರಿಯ ಯಾದವರನ್ನು ಬಲ್ಲಾಳರೆಂದು ಕರೆದಿರಬೇಕೆಂದು ನಮಗೆ ಅನ್ನಿಸುತ್ತದೆ.

"ಒಂದು ಗ್ರಾಮುನ ಕೊಡುವೆಂತೆಂ। ದೆದುಶತಿ ಮಹಾದೇವಂ ತಾನಂದದಿ ಪತಿಕರಿಸಲು ಬೇ। ಕೆಂದಡೆ ಶಿವಯೋಗಿ ಸಿದ್ಧ ನಗುತಿಂದೆಂದಂ"

[ಮು. ಶಿ. ಶಾ. ನಂ೫]

ಇದು ಶಿವಭಕ್ತರ ಕಡೆಗಿದ್ದ ಈತನ ಒಲವನ್ನು ವ್ಯಕ್ತ ಪಡಿಸುವದು.

## ಕಲ್ಲರಸ ನರಸಿವೀರ ಕನ್ನಾದೇವಿ.

ಈ ಮಹಾ ಸಾಧ್ವಿಯ ವಿಷಯಕ್ಕೆ ಹೆಚ್ಚಿಗೆ ಶೋಧಮಾಡಿ ಬರೆಯಲು ಅವಕಾಶವಿಲ್ಲದುದಕ್ಕಾಗಿ ವಿಷಾದವೆನಿಸುತ್ತದೆ. ಈಕೆಯ ವಿಷಯಕ್ಕೆ ತಿಳಿದು ಬರುವ ಸಂಗತಿಗಳು ಅವುವೆಂದರೆ:— ಈಕೆಯು ಬಲ್ಲಾಳರಾಯನಿಂದ ಮನ್ನಣೆಹೊಂದಿದವಳೂ, ಶಿವಭಕ್ತೆಯೂ, ಪತಿನಿಧನದ ನಂತರ ರೇವಣಸಿದ್ಧರಾಜ್ಞೆಯಿಂದ ಮುಕ್ತೇಶ್ವರ ಕ್ಷೇತ್ರಕ್ಕೆ "ಧರ್ಮಜ್ಞಾ ದೇವಿ ಕಂನ್ನರೆ। ಕರ್ಮಾರಿಯುಂ" ನೀಗುವುದಕ್ಕಾಗಿ ಬಂದಳು. ಅಲ್ಲಿ "ಪಿಂಗದೆ ಲಿಂಗಜಂಗಮಾರ್ಚನೆ ತತ್ಪರೆಯಾಗಿರೆ ಕಲಿದೇವರ ಸ್ಥಾಪಿಸಿದಳ್." ಇದೇ ಕಲಿದೇವರಿಗೆ ಗುತ್ತರಸ ದೇವನು ದತ್ತಿಯನ್ನು ಶಕ ೧೧೮೪ರಲ್ಲಿ ಬಿಟ್ಟಿದುದರಿಂದ, ವೀರಕನ್ನಾದೇವಿಯವರು ಶಕ ೧೧೮೪ಕ್ಕೂ ಹಿಂದಿರಬಹುದೆಂದು ಊಹಿಸಲವಕಾಶವಿದೆ. ಎಷ್ಟು ಹಿಂದಿರಬಹುದೋ ಸರಿಯಾಗಿ ಹೇಳಲು ಸಾಧ್ಯವಿಲ್ಲ: ಆದರೂ ಊಹಿಸಲು ಅಡ್ಡಿಯಿಲ್ಲ. ಕನ್ನಾದೇವಿಯರು ದರ್ಶನಕ್ಕೆಂದು ಬಂದ ಮುಕ್ತೇಶ್ವರ ದೇವರ ಉಲ್ಲೇಖವು ಶಕ ೧೧೧೩ ರಲ್ಲೊಂಟೆಂದೂ ಶಕ ೧೧೯೦ರ ಶಾಸನದಲ್ಲಿ ಸಿದ್ಧರೇವಣರ ವರ್ಣನೆಯದೆಯೆಂದೂ ಮೇಲೆ ಹೇಳಿರುವೆವು. ಕನ್ನಾದೇವಿಯವರು ಸಿದ್ಧರೇವಣರ ಅಜ್ಞೆಯ ಮೇರೆಗೆ ಮುಕ್ತೇಶ್ವರ ದರ್ಶನಕ್ಕೆ ಬಂದಳೆಂದು ಈ ಶಾಸನದಲ್ಲಿ (ಮು. ಶಿ. ಶಾ. ನಂ. ೧) ಹೇಳಿರುವುದರಿಂದ, ಶಿರಿವಾಳ ಶಾಸನದ ಶಿವಯೋಗಿ ಶಾಂತಿಮಯ್ಯಗಳ ಪುತ್ರ ರೇವಣಸಿದ್ಧರು, ಆ ಕಾಲದಲ್ಲಿ ಪ್ರಸಿದ್ಧವಾದ ಮುಕ್ತೇಶ್ವರ ಕ್ಷೇತ್ರಕ್ಕೆ ಹೋಗಲು ಕನ್ನಾದೇವಿಯವರಿಗೆ

ಕೇಳಿಸುವುದಿಲ್ಲ. ಈತನು ವಿಘ್ನವಿಲ್ಲದೆ ಸಂಪೂರ್ಣ ಕರ್ಣಾಟಕವನ್ನು ಆಳುತ್ತಿದ್ದಂತೆ ಶಿಲಾಶಾಸನಗಳಿಂದ ಕಂಡು ಬರುವುದು. ಈತನ ದಂಡನಾಯಕರಲ್ಲಿ ಕನ್ನಡಿಗರಾದ ನಾಗರಸನೂ, ಚಾವುಂಡ ದಂಡಾಧಿಪನೂ ಮುಖ್ಯರು. ಇವರು ಕರ್ನಾಟಕದಲ್ಲಿ ಮುಖ್ಯಾಧಿಕಾರಿಗಳಾಗಿದ್ದಂತೆ ಕಂಡು ಬರುವದು. ಪುಲಿಗಿರಿ (ಲಕ್ಷ್ಮೇಶ್ವರ) ನಗರವನ್ನು ಆ ಕಾಲದಲ್ಲಿ ಕರ್ನಾಟಕದ ರಾಜಧಾನಿಯನ್ನಾಗಿ ಮಾಡಿದಂತೆ ತೋರುವುದು. ಈತನ ಕಾಲದ ಶಿಲಾಶಾಸನಗಳೂ ವಿಪುಲವಾಗಿವೆ. ಈತನ ದಂಡನಾಯಕನಾದ ಚಾವುಂಡರಾಯ, ಅಥವಾ ಚೌಡಿ ಸೆಟ್ಟಿಯರ ಶಾಸನಗಳೂ ದೊರೆಯುವವು. ಇದೇ ಚೌಡಿ ಸೆಟ್ಟಿಯರು ಶ್ರೀ ಬಸವಣ್ಣನವರ ವಂಶಜರಾದ ಕವಿಳಾಸಪುರದ ಹಾಲಬಸವಿದೇವ ಮುನೀಶ್ವರರಿಗೆ ಭೂಮಿಯನ್ನು ಬಿಟ್ಟಂತೆ ಅರ್ಜುನವಾಡದ ಶಿಲಾಶಾಸನದಲ್ಲಿಯೂ, "ಶ್ರೀಮನ್ಮಹಾಪ್ರಧಾನ ಸರ್ವಾಧಿಕಾರಿ ಚಾಮುಂಡ ದಂಡಾಧಿಪಃ ಸ್ವಕೀಯ ಯಶೋಧವಳ ಪ್ರಾಸಾದ ಮಧ್ಯೇಗಗನ ಮಹಾನೀಲಲಿಂಗಂ ಪ್ರತಿಷ್ಠಾಪ್ಯ" ಕುರುಂಬೆಟ್ಟ ಪತ್ತಣ ತ್ರಿಕೂಟ ಪ್ರಾಸಾದದಲ್ಲಿ ತಮ್ಮ ತಂದೆಗಳಾದ ಮಲ್ಲನಾಥರ ಮತ್ತು ಬಂಧುಗಳಾದ ದೇವಶ್ರೇಷ್ಠಿಯರ ಹೆಸರಿಂದ ಲಿಂಗವನ್ನು ಸ್ಥಾಪಿಸಿ ಮಹಾದೇಶಿಕರಾದ ಶಿವಮುನೀಂದ್ರರ ಹಸ್ತದಲ್ಲಿ ಭೂಮಿಯನ್ನು ಬಿಟ್ಟಂತೆ, ಗೋಕಾಕ ತಾಲೂಕ ಗಚ್ಚಿನ ಕುರಬೆಟ್ಟದ ಶಿಲಾಶಾಸನದಿಂದಲೂ ಕಂಡು ಬರುವುದು. ಕನ್ನರನ ನಂತರ ಆತನ ತಮ್ಮನಾದ ಮಹಾದೇವನು ಪಟ್ಟಕ್ಕೆ ಬಂದನು. ಈ ಶಿಲಾಶಾಸನಗಳಲ್ಲಿದ್ದ ಚಕ್ರವರ್ತಿ ಮಹಾದೇವರಾಯನು ಈತನೇ. ಈತನು ಕ್ರಿ. ಶ. ಸು ೧೨೬೦–೧೨೭೧ ರ ವರಿಗೆ ಆಳಿದನು. ಈತನ ಶಾಸನಗಳು ಕರ್ನಾಟಕದಲ್ಲಿ ಕನ್ನಡ ನುಡಿಯಲ್ಲಿ ಅನೇಕವವೆ.

"ಕಾರುಣಿಕರೆನಿಪ ಸಿದ್ಧರೇವಣದೇವನ। ಕಾರುಣ್ಯದ ಶಿಶು ಭಕ್ತ್ಯಾಚಾರದ ಬಲ್ಲಾಳದೇವಂ॥

"ಮುದದಿಂದ ವಿತ್ತ ಬಲ್ಲಾಳದೇವಂ ಜಂಗಮ ಸುಖೈಕ ಗುಣಸದ್ಭಾವಂ॥

(ಮ. ಶಿ. ಶಾ: ನಂ೧)

ಇವುಗಳಲ್ಲಿರುವ "ಬಲ್ಲಾಳ" ಶಬ್ದವು ದೇವಗಿರಿಯ ಯಾದವರನ್ನು ಸಂಬೋಧಿಸುತ್ತಿದ್ದರೆ, ಅವರು ಒಳ್ಳೇ ಶಿವಭಕ್ತರೂ ವೀರಶೈವರ ಪಕ್ಷಪಾತಿಗಳೂ ಇದ್ದರೆಂದು ಹೇಳಲು ಅಡ್ಡಿಯಿಲ್ಲ. ಈ ಶಾಸನವು ಮಹಾ

ದೇವನ ಕಾಲದಲ್ಲಿ ಬರೆದುದರಿಂದ "ಯಾದವ" ಈ ಶಬ್ದವು ದೇವಗಿರಿಯವರಿಗೂ, ದ್ವಾರಸಮುದ್ರದವರ(ಬಲ್ಲಾಳರ)ಗೂ ಸಾಮಾನ್ಯವಾಗಿರುವುದರಿಂದ ಇದನ್ನು ರಚಿಸಿದ ಕವಿಯು, ದೇವಗಿರಿಯ ಯಾದವರನ್ನು ಬಲ್ಲಾಳರೆಂದು ಕರೆದಿರಬೇಕೆಂದು ನಮಗೆ ಅನ್ನಿಸುತ್ತದೆ.

"ಒಂದು ಗ್ರಾಮಮನ ಕೊಡುವೆಂತೆಂ। ದೆದುಶತಿ ಮಹಾದೇವಂ ತಾನಂದದಿ ಪತಿಕರಿಸಲು ಬೇ। ಕೆಂದಡೆ ಶಿವಯೋಗಿ ಸಿದ್ಧ ನಗುತಿಂದೆಂದಂ"

[ ಮು. ಶಿ. ಶಾ. ಸಂ೫ ]

ಇದು ಶಿವಭಕ್ತರ ಕಡೆಗಿದ್ದ ಈತನ ಒಲವನ್ನು ವ್ಯಕ್ತ ಪಡಿಸುವದು.

## ಕಲ್ಲರಸ ನರಸಿವೀರ ಕನ್ನಾದೇವಿ.

ಈ ಮಹಾ ಸಾಧ್ವಿಯ ವಿಷಯಕ್ಕೆ ಹೆಚ್ಚಿಗೆ ಶೋಧಮಾಡಿ ಬರೆಯಲು ಅವಕಾಶವಿಲ್ಲದುದಕ್ಕಾಗಿ ವಿಷಾದವೆನಿಸುತ್ತದೆ. ಈಕೆಯ ವಿಷಯಕ್ಕೆ ತಿಳಿದು ಬರುವ ಸಂಗತಿಗಳು ಅವುವೆಂದರೆ:— ಈಕೆಯು ಬಲ್ಲಾಳರಾಯನಿಂದ ಮನ್ನಣೆಹೊಂದಿದವಳೂ, ಶಿವಭಕ್ತೆಯೂ, ಪತಿನಿಧನದ ನಂತರ ರೇವಣಸಿದ್ಧರಾಜ್ಞೆಯಿಂದ ಮುಕ್ತೇಶ್ವರ ಕ್ಷೇತ್ರಕ್ಕೆ "ಧರ್ಮಜ್ಞಾದೇವಿ ಕಂನ್ನರೆ। ಕರ್ಮಾರಿಯಂ" ನೀಗುವುದಕ್ಕಾಗಿ ಬಂದಳು. ಅಲ್ಲಿ "ಪಿಂಗದೆ ಲಿಂಗಜಂಗಮಾರ್ಚನೆ ತತ್ಪರೆಯಾಗಿರೆ ಕಲಿದೇವರ ಸ್ಥಾಪಿಸಿದಳ್." ಇದೇ ಕಲಿದೇವರಿಗೆ ಗುತ್ತರಸ ದೇವನು ದತ್ತಿಯನ್ನು ಶಕ ೧೧ಲಳರಲ್ಲಿ ಬಿಟ್ಟದುದರಿಂದ, ವೀರಕನ್ನಾದೇವಿಯರು ಶಕ ೧೧ಲಳಕ್ಕೂ ಹಿಂದಿರಬಹುದೆಂದು ಊಹಿಸಲವಕಾಶವಿದೆ. ಎಷ್ಟು ಹಿಂದಿರಬಹುದೋ ಸರಿಯಾಗಿ ಹೇಳಲು ಸಾಧ್ಯವಿಲ್ಲ: ಆದರೂ ಊಹಿಸಲು ಅಡ್ಡಿಯಿಲ್ಲ. ಕನ್ನಾದೇವಿಯರು ದರ್ಶನಕ್ಕೆಂದು ಬಂದ ಮುಕ್ತೇಶ್ವರ ದೇವರ ಉಲ್ಲೇಖವು ಶಕ ೧೧೧೩ ರಲ್ಲುಂಟೆಂದೂ ಶಕ ೧೧೯೯ರ ಶಾಸನದಲ್ಲಿ ಸಿದ್ಧರೇವಣರ ವರ್ಣನೆಯುದೆಯೆಂದೂ ಮೇಲೆ ಹೇಳಿರುವೆವು. ಕನ್ನಾದೇವಿಯುವರು ಸಿದ್ಧರೇವಣರ ಅಜ್ಞೆಯ ಮೇರೆಗೆ ಮುಕ್ತೇಶ್ವರ ದರ್ಶನಕ್ಕೆ ಬಂದಳೆಂದು ಈ ಶಾಸನದಲ್ಲಿ ( ಮು. ಶಿ. ಶಾ. ನಂ. ೧) ಹೇಳಿರುವುದರಿಂದ, ಶಿರಿವಾಳ ಶಾಸನದ ಶಿವಯೋಗಿ ಶಾಂತಿಮಯ್ಯಗಳ ಪುತ್ರ ರೇವಣಸಿದ್ಧರು, ಆ ಕಾಲದಲ್ಲಿ ಪ್ರಸಿದ್ಧವಾದ ಮುಕ್ತೇಶ್ವರ ಕ್ಷೇತ್ರಕ್ಕೆ ಹೋಗಲು ಕನ್ನಾದೇವಿಯುವರಿಗೆ

ಆಜ್ಞೆಯಿತ್ತುದು ಅಸಂಭವವಾಗಿ ತೋರುವುದಿಲ್ಲ. ಆದುದರಿಂದ ಈ ಶಾಸನದ ರೇವಣರೂ, ಶಿರಿವಾಳ ಶಾಸನದ ರೇವಣರೂ, ಒಂದೇ ಇರಬೇಕೆಂದು ತರ್ಕಿಸಲು ಅವಕಾಶವಿದೆ.

## ಗುತ್ತರಸ.

ಈತನು ಒಳ್ಳೇ ಉದಾರನಾದ ಮಹಾಮಂಡಲೇಶ್ವರನು. ಪಂನಿರ್ಬರ ಗಂಡನು. ಹನ್ನೆರಡು ಜನರಾರೋ ತಿಳಿಯದು. ಈತನು ವೀರಶೈವನಿದ್ದನೆಂದು ಅನುಮಾನಿಸಲು ಸಾಧನಗಳು ಈ ಶಾಸನದಲ್ಲಿ ಅವೆಯೆಂದು ಅನ್ನಿಸುವುದು. ಈತನ ಹಿರಿಯರು ಶಿವಭಕ್ತರು. ಈತನ ಬಿರುದುಗಳಲ್ಲಿ "ಚಂದ್ರಗುಪ್ತಾನ್ವಯಂ" ಎಂದಿರುವುದರಿಂದ, ಕ್ರಿ. ಶ. ಪೂರ್ವದಲ್ಲಿ ೩೨೧ ರಿಂದ ೨೯೭ ರ ವರೆಗೆ, ಭರತಖಂಡದ ಸಾರ್ವಭೌಮತ್ವವನ್ನನುಭವಿಸಿದ ಮೌರ್ಯವಂಶದ ಚಂದ್ರಗುಪ್ತನೇ ಇವರ ಮೂಲಪುರುಷನಾಗಿರಬಹುದು. ಜೈನ ಗುರುಗಳಾದ ಭದ್ರಬಾಹು ಸ್ವಾಮಿಗಳ ಸಂಗಡ ಚಂದ್ರಗುಪ್ತ ಮಹಾರಾಜನು ದಕ್ಷಿಣಕ್ಕೆ ಬಂದು ಶ್ರವಣ ಬೆಳ್ಗುಲದಲ್ಲಿ ಶಲ್ಲೇಖನ ವ್ರತದಿಂದ ಐಕ್ಯನಾದಂತೆ ಜೈನ ಗ್ರಂಥಗಳಿಂದ ತಿಳಿಯುವುದು. ರಾವಬಹಾದ್ದೂರ ಆರ್. ನರಸಿಂಹಾಚಾರ್ಯರೂ, ಮಿ. ಲೂಯಿಸ ರಾಯಿಸರವರೂ ಐತಿಹಾಸಿಕ ದೃಷ್ಟಿಯಿಂದ ಇದರ ಸತ್ಯತೆಯನ್ನು ಒಪ್ಪಿಕೊಂಡಿರುವರು. ( ಕರ್ಣಾಟಕ ಕವಿಚರಿತೆ ಭಾಗ ಪುಟ ೬. *Mysore and Coorg.chapter I* ) ಗುಪ್ತವಂಶದವರೆಂದು ಕರೆದುಕೊಳ್ಳುವ ಒಂದು ಮಾಂಡಲಿಕ ವಂಶವೂ ಕರ್ಣಾಟಕದಲ್ಲಿ ರಾಜ್ಯಭಾರ ಮಾಡುತ್ತಿದ್ದಂತೆ ಕಂಡು ಬರುವುದು. ಅವರು ಜೈನರಿದ್ದಂತೆ ತಿಳಿಯುವುದು. ಒಂದು ವೇಳೆ ಈ ಗುತ್ತರಸನ ಪೂರ್ವಜರು ಜೈನರಿದ್ದು, ಲಿಂಗವಂತ ಧರ್ಮವನ್ನು ಸ್ವೀಕರಿಸಿರಬಹುದು. ಹೀಗಿದ್ದರೆ ಎಂದು ಸ್ವೀಕರಿಸಿದರೆಂಬ ಪ್ರಶ್ನವು ಉದ್ಭವಿಸುವುದು. ಈ ಪ್ರಶ್ನಕ್ಕೆ ಸರಿಯಾದ ಉತ್ತರ ಶಿಲಾಶಾಸನಗಳಿಂದ ಏನೂ ಹೇಳಲಾರೆವು. ಗುತ್ತರಸನಿಂದಾಚೆಗೆ ಮೂರು ತಲೆಗಳ ವರೆಗೆ ವಂಶಾವಳಿಯು ದೊರೆತದೆ. ಗುತ್ತರಸನ ಅಜ್ಜನಾದ ವಿಕ್ರಮಾದಿತ್ಯನು "ಪರಶುಲಿಂಗ ಗಳಗನಾಥ ಪಾದಪದ್ಮಾರಾಧಕ"ನಿದ್ದನು. ಇಷ್ಟರಿಂದಲೇ ಗುತ್ತರಸನಿಗೂ ಆಚೆಗೆ ಮೂರು ತಲೆಯವರಿಗೂ, ಶಿವಲಿಂಗ ಪೂಜಕರಿದ್ದರೆಂದು ಊಹಿ

ಸಬಹುದು. ಅದೇ ವಿಕ್ರಮಾದಿತ್ಯನ ಪ್ರಧಾನನಾದ ಕಾಮಿನಾಯಕನು ಮುಕ್ತಜೀಯರ ಕಾಲಂಕರ್ಚಿ ಮುಕ್ತೇಶ್ವರ ದೇವರಿಗೆ ವೃತ್ತಿಯನ್ನು ಬಿಟ್ಟಿದ್ದಾನೆ. ಈ ವಿಕ್ರಮಾದಿತ್ಯನು ಉಜ್ಜಯಿನಿಯ ಪ್ರಸಿದ್ಧ ವಿಕ್ರಮಾದಿತ್ಯನ ಅವತಾರವೆಂದು ಚೌಡದಾನಪುರದ ಮತ್ತೊಂದು ಶಾಸನದಿಂದ ತಿಳಿಯುವದು. ಈ ವಿಕ್ರಮನ ಹೆಂಡತಿ ಮಾದೇವಿ. ಇವರು ಶಕ ೧೧೧೩ರಲ್ಲಿದ್ದರು. ಇವರ ಮಗನಾಗಲೀ ಅಥವಾ ಮೊಮ್ಮಗನಾಗಲೀ ಆದವನು ಎರಡನೇಯ ವಿಕ್ರಮನು. ಆತನ ಹೆಂಡತಿ ಮೈಳಲದೇವಿ. ಒಂದು ಶಾಸನದಿಂದ ಇವರೇ ನಮ್ಮ ಗುತ್ತರಸನ ಮಾತಾಪಿತರೆಂದು ಕಂಡು ಬರುವುದು; ಆದರೆ ಮತ್ತೊಂದು ಶಾಸನದಿಂದ ವಿಕ್ರಮ, ಮೈಳಲದೇವಿಯರ ಮಕ್ಕಳು ಮಾರಕಂಠೀರವರು. ಗುತ್ತರಸನು ಅನುಜಾತನು. (ಮ. ಶಿ. ಶಾ. ನಂ. ೩) (ಮ. ಶಿ. ಶಾ. ನಂ. ೨) 'ಅನುಜಾತ' ಶಬ್ದವನ್ನು 'ತಮ್ಮ' ಹಿಂದಿನಿಂದ ಹುಟ್ಟಿದವ' ಎಂಬರ್ಥದಲ್ಲಿ ವಿಪುಲವಾಗಿ ಉಪಯೋಗಿಸುತ್ತಿದ್ದರೂ, 'ಮಗ' ನೆಂಬರ್ಥದಲ್ಲಿ ಅದನ್ನು ಉಪಯೋಗಿಸಿದ ಉದಾಹರಣೆಗಳುಂಟು. ಅಂಥ ಪ್ರಸಂಗದಲ್ಲಿ ಗುತ್ತರಸನಿಗೆ ಮಾರಕಂಠೀರವರೆಂಬ ಅಣ್ಣಂದಿರಿದ್ದ ಹಾಗಾಯಿತು. ಅವರಿಬ್ಬರ ವಿಷಯಕ್ಕೆ ಉಳಿದ ಶಾಸನಗಳಲ್ಲಿ ಉಲ್ಲೇಖವಿಲ್ಲವೇಕೆ? ಅವರು ಅಂಥ ಮಹತ್ವದ ಮನುಷ್ಯರಿರಲಿಕ್ಕಿಲ್ಲವಾದುದರಿಂದ ಶಾಸನಗಳನ್ನು ರಚಿಸಿದ ಕವಿಯು ಅವರ ಹೆಸರನ್ನು ಬಿಟ್ಟಿರಬಹುದೇನು ?

ಕಂದ॥ ಧಾರುಣಿಯೊಳುಗ್ರತಪದಿಂ । ವಿಶ್ವೈಶ್ವರ್ಯವನು ಪಡೆವ ಶಿವದೇವಯ್ಯನ।
ಕಾರುಣ್ಯವೆನಿಗೆ ಜೀವನ । ಬೇರಿಲ್ಲೆಂದರಿದು ತತ್ಪ್ರಸಾದವ ಪಡೆದನ್ ॥೫॥

ಎಂಬುದರಿಂದ ಶ್ರೀಶಿವದೇವರ ಮೇಲಿರುವ ಈತನ ಭಕ್ತಿ-ವಿಶ್ವಾಸಗಳು ಧ್ವನಿತವಾಗುವವು.

## ದೇವರಸ.

ಮಹಾದೇವರಸರ ಮಹಾಪ್ರಧಾನ, ಸರ್ವಾಧಿಕಾರಿ, ತೊರಗಲೆಯ ದೇವರಸನೆಂದು ಶಾಸನಗಳಲ್ಲಿ ಉಲ್ಲೇಖವಿದೆ. ಈ ಶಾಸನಗಳಲ್ಲಿ ಅಲ್ಲದೆ ಇನ್ನೂ ಅನೇಕ ಶಾಸನಗಳಲ್ಲಿ ಈತನ ಉಲ್ಲೇಖವು ಇದೇ ಪ್ರಕಾರವಿದೆ.

ಕಂದ॥ ದಕ್ಷಿಣ ದಿಕ್ತಟ ವಿಲಸಿತ। ಲಕ್ಷ್ಮಿಗೆ ನೀನಧಿಪನೆಂದು ಯಾದವ ಭೂಪಂ।
ರಕ್ಷಿಸಿ ಬೆಸಸಲು ಮುದದಿಂ। ರಕ್ಷಿಪ ತೊರಗಲೆಯ ದೇವರಸ ಜನಪದವಂ॥

(ಮು. ಶಿ. ಶಾ. ನಂ. ೩.)

ಎಂಬುದರಿಂದ ಚಕ್ರವರ್ತಿ ಮಹಾದೇವರ ವಿಶ್ವಾಸವು ಈತನ ಮೇಲೆ ವಿಶೇಷವಾಗಿದ್ದಂತೆ ತೋರುವುದು. ಇದು ಆವ ತೊರಗಲೆಯೋ ಸ್ಪಷ್ಟವಾದ ಉಲ್ಲೇಖವಿಲ್ಲ. ಸವದತ್ತಿ ತಾಲೂಕ ಮುನವಳ್ಳಿ ಪಾಡೇ ದೊಳಗಿರುವ ಉಡಚವ್ವನ ಗುಡಿಯ ಬಳಿಯ ಶಿಲಾಶಾಸನದಲ್ಲಿ ಮುನ ವಳ್ಳಿಯನ್ನು ವರ್ಣಿಸುವಾಗ "ತೊರಗಲೆ ಯಾರು ಸಾಸಿರವೆನಿಪ್ಪಸು ದೇಶದೊಳ್" ಎಂದಿದೆ (ಕನ್ನರ. ಶಿ. ಶಾ. ನಂ. ೨ ಕಾಲ. ಶಕ. ೧೧೭೩ ನೇಯ ವಿರೋಧಿಕೃತುಸಂ। ಜೇಷ್ಠ ಬ। ೩೦ ಸೂರ್ಯಗ್ರಹಣ ಶುಕ್ರ ವಾರ) ಈ ಮುನವಳ್ಳಿಯಿಂದ ಸಮೀಪದಲ್ಲಿದ್ದ, ಅದೇ ಮಲಪ್ರಹಾರಿ ಣಿಯ ತಟದಲ್ಲಿರುವ ತೊರಗಲೆಯೇ ಈ ಶಾಸನದಲ್ಲಿ ಉಲ್ಲೇಖವಾಗಿ ರುವದೆಂಬ ಬಗ್ಗೆ ಸಂಶಯವಿಲ್ಲ. ಈ ಶಾಸನವು ಪ್ರಕೃತದ ಶಾಸನಗ ಳಿಗಿಂತ ಸುಮಾರು ಹತ್ತು ವರುಷ ಹಿಂದಿನದು. ದೇವರಸನ ತೊರಗ ಲೆಯು ಒಂದುವೇಳೆ ಮುನವಳ್ಳಿಯ ಸಮೀಪದಲ್ಲಿರುವ, ಕೊಲ್ಹಾಪುರ ಸಂಸ್ಥಾನದಧಿಪತ್ಯಕ್ಕೊಳಪಟ್ಟ ತೊರಗಲೆ ಇರಬಹುದು. ಆರು ಸಾವಿರದ ರಾಜಧಾನಿಯಾದ ಆ ತೊರಗಲೆಯನ್ನೇ ಈ ಶಿಲಾಶಾಸನಗಳ ಕಾಲದಲ್ಲಿ ಕರ್ನಾಟಕದ ಈ ಭಾಗದ ರಾಜಧಾನಿಯನ್ನು ಮಾಡಿರಬಹುದು. ಹಾಗಿದ್ದ ಪಕ್ಷದಲ್ಲಿ, ಅದೇ ಶಾಸನದಿಂದ ಆ ಕಾಲದಲ್ಲಿ, ಅಲ್ಲಿಯ ಅಧಿಕಾರಿಯು ಪರಮ ಮಾಹೇಶ್ವರ ದಂಡನಾಯಕ ಬಸ್ತವಿದೇವನಿ ದ್ದಂತೆ ಕಂಡು ಬರುವುದು. ಶಿವಶರಣರ ಕಡೆಗೆ ವಿಶೇಷ ಬಲವುಳ್ಳ ಈ ದೇವರಸನು ಪರಮ ಮಾಹೇಶ್ವರನಾದ ದಂಡನಾಯಕ ಬಸ್ತವಿದೇವನ ವಂಶದವನಿದ್ದರೂ ಇರಬಹುದು. ಶಿವಾನುಭವ ಸಂಚಿಕೆ ೧೦ ರಲ್ಲಿ ಶಕ ೧೧೧೦ ರಲ್ಲಿ ಪರಮ ಮಾಹೇಶ್ವರಿಯಾದ ಸುಗ್ಗಲ ದೇವಿಯೂ, ಕಾಲಾ ಮುಖ ಗುರುಗಳ ಶಿಷ್ಯನಾದ ಆಕೆಯ ಪತಿ ಬಮ್ಮರಸನೂ ತೊರಗ ಲೆಯನ್ನೊಳಗೊಂಡ ಪದಿನೆಂಟು ನಾಡುಗಳನ್ನಾಳುತ್ತಿದ್ದರೆಂದು ಶಿವಾನು ಭವದ ವಾಚಕರಿಗೆ ತೋರಿಸಿಕೊಟ್ಟಿರುವೆವು. ದಂಡನಾಯಕ ಬಸ್ತವಿ ದೇವನೂ, ಮಹಾಪ್ರಧಾನ ದೇವರಸನೂ ಅವರ ವಂಶದವರೋ ಹೇಗೆಂ

ಬುದು ಶೋಧಿಸತಕ್ಕ ವಿಷಯುವಾಗಿದೆ. ಇವರು ಒಂದೇ ವಂಶದವ ರೆಂದು ಸಿದ್ಧವಾದರೆ ಆಹವಮಲ್ಲ ಭೂತೇಯು ದೇವನಿಂದ (ತೈಲ ಅಥವಾ ನೂರ್ಮಡಿತೈಲ ಕ್ರಿ. ಶ. ೯೭೩ ರಿಂದ ೯೯೭) ದೇವರಸನ ವರೆಗೆ ಸುಮಾರು ಮುನ್ನೂರು ವರ್ಷಗಳ ವರೆಗಿನ ಕರ್ಣಾಟಕದ ಒಂದು ಪ್ರಸಿದ್ಧ ಮಾಂಡಲಿಕರ ಇತಿಹಾಸವು ಕರ್ಣಾಟಕದ ಇತಿಹಾಸಕ್ಕೆ ಭೂಷಣಪ್ರಾಯವಾಗುವುದಿಲ್ಲವೆ?

ಈ ಶಿಲಾಶಾಸನಗಳು ವಿಶೇಷವಾಗಿ ಈಗಿನ ಕಾಲದಲ್ಲಿ ಎಷ್ಟು ಮಹತ್ವದವವೆ ಎಂಬುದನ್ನು, ಈಗಾಗಲೇ ಈ ಲೇಖದಿಂದ ಬೇಸತ್ತ ಜನರ ತಲೆಯಲ್ಲಿ ಜೋರಿನಿಂದ ಸೇರಿಸುವುದಕ್ಕಿಂತ, ಅನುಕೂಲವಾದಂತೆ ಅವರಿಗೆ ಊಹಿಸಲವಕಾಶ ಕೊಡುವುದು ನೆಟ್ಟಗೆ. ಇವುಗಳಲ್ಲಿ ವೀರಶೈವರ ಉಲ್ಲೇಖವು ವಿಪುಲವಾಗಿದೆ. ಈ ಶಿಲಾಶಾಸನಗಳನ್ನೋದಿದವರು ಇವುಗಳಲ್ಲಿ ಲಿಂಗವಂತರ ಉಲ್ಲೇಖವಿಲ್ಲೆಂದು ಅನ್ನಲು ಧೈರ್ಯಪಡಲಾರರೆಂದು ನಮಗೆ ಅನ್ನಿಸುವುದು. ಮಹತ್ವದ ಮಾತೆಂದರೆ ಸುಮಾರು ಹದಿಮೂರನೇಯ ಶತಮಾನದ ಮಧ್ಯದಲ್ಲಿ ಅಂದರೆ ಈಗ ಸಾಧಾರಣವಾಗಿ ನಿರ್ಣಯಿಸಿದ ಬಸವಣ್ಣನವರ ಕಾಲದಿಂದ ನೂರು ವರುಷಗಳೊಳಗಾಗಿ, ಭೀಮಕವಿಯ ಬಸವ ಪುರಾಣವು ಹುಟ್ಟುವದಕ್ಕೂ ಮೊದಲು, ಭೀಮಕವಿಯ "ನಂದೀಶ್ವರರ ಅವತಾರವು" ಈ ಶಿಲಾಶಾಸನಗಳಲ್ಲಿಯ "ಶಿವದೇವರ ಅವತಾರ" ವನ್ನು ಬಹಳವಾಗಿ ಹೋಲುವುದು. ಶಿಲಾಶಾಸನಗಳಲ್ಲಿ ಸಹ ಪುರಾಣಗಳ ವರ್ಚಸ್ಸವು, ಈ ಕಾಲದಲ್ಲಿ, ಕಂಡುಬರುವದು. ಏಕಾಂತದ ರಾಮಯ್ಯನವರ ಅಬ್ಬಲೂರ ಶಿಲಾಶಾಸನದಲ್ಲಿಯೂ ಇದನ್ನು ಕಾಣಬಹುದು.

ಈ ಶಾಸನಗಳ ಕವಿಯಾಗಲೀ ಅಥವಾ ಕವಿಗಳಾಗಲೀ ಆರೆಂಬುದು ಗೊತ್ತಾಗುವದಿಲ್ಲ. ಬಹುತರ ಛಂದಸ್ಸಿನ ದೋಷಗಳಿಲ್ಲದ ಪದ್ಯಗಳು ವಿರಳ ವಿದ್ದಾಗ್ಯೂ ಆ ದೋಷಗಳನ್ನು ಕವಿಯ ಮೇಲೆ ಹೊರಿಸಲು ನಮ್ಮ ಮನಸ್ಸೊಪ್ಪುವದಿಲ್ಲ. ಕೆಲವು ಪದ್ಯಗಳು ಬಹಳೇ ಚನ್ನಾಗಿದ್ದು ಬರೆದವನು ದೊಡ್ಡ ಕವಿಯಾಗಿರಬೇಕೆಂದು ಅನ್ನಿಸದೆ ಇರಲಾರದು. ಕಂದ ಪದ್ಯಗಳು ಸರಳ ವಾಗಿಯೂ, ಸ್ಫೂರ್ತಿದಾಯಕವಾಗಿಯೂ ಅವೆ. ವೃತ್ತಗಳಲ್ಲಿ ಉತ್ಪಲ ಮತ್ತೇಬವಿಕ್ರೀಡಿತ ಶಾರ್ದೂಲವಿಕ್ರೀಡಿತ ಚಂಪಕಗಳು ಮುಖ್ಯವಾಗಿವೆ. ಇಲ್ಲಿಯ " ಸಾ। ಕುಲಿಯದಿರೆಂದು ಬಗ್ಗಿಪುದು ಶ್ರೀ ಶಿವ

ದೇವನ ಕಾಲಹೊನ್ ದೊಡರು” ಅಂಡಯ್ಯನ ಕಬ್ಬಿಗರ ಕಾವದಲ್ಲಿಯು ಗೊರವನ ಒಡ್ಡೋಲಗದ ಪಡಿಹಾರಿಯು ಪದ್ಯವನ್ನೂ ನೆನಪು ಮಾಡಿ ಕೊಡುವುದು. ಅಂಡಯ್ಯನಿಗೆ ಪಕ್ಕದವೆಂದರೆ ಸಿಟ್ಟು ಬೆಂಕಿ, ಆದರೆ ಈ ಶಾಸನಗಳ ಕವಿಯು ಸಂಸ್ಕೃತದಲ್ಲಿಯೂ ನಿಷ್ಣಾತನಿದ್ದಂತೆ “ದಿಕ್ಕಾಂತಾ ಜನತಾಲಲಾಟ” ವೆಂಬ ಪದ್ಯದಿಂದ ಸ್ಪಷ್ಟವಾಗುವುದು.

ಇನ್ನೊಂದು ಮಾತೆಂದರೆ ರಾ- ಸಾ. ಹಳಕಟ್ಟಿಯವರು ಅರ್ಜುನ ವಾಡದ ಶಿಲಾಶಾಸನದ ಉಪೋದ್ಘಾತದಲ್ಲಿ ಕವಿಲಾಸಪುರವೆಂಬುದು ಒಂದು ಊರಿತ್ತೆಂತಲೂ, ಅರ್ಜುನವಾಡದ ಸುತ್ತುಮುತ್ತಲು, ಈಗ ದೊರೆತ ಶಿಲಾಶಾಸನದ ಸ್ಥಳದಲ್ಲಿ ಅದು ಇದ್ದಿರಬೇಕೆಂದು ಅಭಿಪ್ರಾಯ ಪಟ್ಟಿರುವರು. ಆದರೆ ಪ್ರಕೃತದ ಶಿಲಾಶಾಸನದಲ್ಲಿ “ಧರೆಯೊಳ್ಕವಿಲಾಸ ಮೆನಿಪ ಮುಕ್ತಿಕ್ಷೇತ್ರಂ” ಶಿವ। ಕವಿಲಾಸವನಖಿಳ ದೇವತಾ ಪಡೆಸಹಿತ” (ಮ. ಶಿ. ಶಾ. ನಂ. ೨.) ಎಂಬುದರಲ್ಲಿ ಕವಿಲಾಸವೆಂಬ ಶಬ್ದವು ಬಂದಿದೆ. ಇದೇ ಪ್ರಕಾರ ಮತ್ತೊಂದು ಕಡೆಗೂ ಬಂದಿದೆ. ಇದರ ಮೇಲಿಂದ “ಕವಿಲಾಸ” ಶಬ್ದವು “ಕೈಲಾಸ” ದ ತದ್ಭವವಾಗಿರಬೇಕೆಂದೂ, ಶಿವಕ್ಷೇತ್ರಕ್ಕೆ ಬಹುತರವಾಗಿ “ಕವಿಲಾಸ”ವೆಂದು ಕರೆಯುತ್ತಿರಬಹುದೆಂದೂ ನಮಗೆ ಅನ್ನಿಸ ಹತ್ತಿದೆ. ಬಲ್ಲಿದರು ವಿಚಾರಿಸಲಿ.

(ಮುಂದೆ ಸಾಗುವದು.)



# ಶ್ರೀ ಕೇದಾರ ಸಿಂಹಾಸನ.

(ಲೇಖಕ:— ಶ್ರೀಪುರಗಿರಿ ಚಿದ್ಘನಶರ್ಮ ಶಿವಾಚಾರ್ಯ ಪಂಡಿತರು
ಪೋ. ಊಖೀಮಠ ಗಡವಾಲ.)



ನಾನು ಮತ್ತು ನನ್ನ ಒಬ್ಬ ಸ್ನೇಹಿತರು ಶ್ರೀಕಾಶೀಕ್ಷೇತ್ರದಿಂದ ತಾ॥ ೧೯-೪-೨೯ ರಲ್ಲಿ ಶ್ರೀಕೇದಾರ ಕ್ಷೇತ್ರಕ್ಕೆ ಹೋಗುವ ಉದ್ದಿಶ್ಯವಾಗಿ ದೇಹರಾದೂನ ಎಕ್ಸಪ್ರೆಸಿನಲ್ಲಿ ಕುಳಿತು ಲಖನೌ ಮಾರ್ಗವಾಗಿ ನಜೀಬಾಬಾದಕ್ಕೆ ರಾತ್ರಿ ೪ ಘಂಟೆಗೆ ಬಂದೆವು. ಅಲ್ಲಿ ಧರ್ಮಶಾಲೆಯಲ್ಲಿ ವಿಶ್ರಾಂತಿಗೈಯ್ದು ಕೋಟೇದ್ವಾರ ಗಾಡಿಯಲ್ಲಿ ಬಂದೆವು. ಅಲ್ಲಿಯೇ ಶ್ರೀಕೇದಾರ ಸಿಂಹಾಸನಾಧಿಪತಿಗಳಾದ ಶ್ರೀಜಗದ್ಗುರು ನೀಲಕಂಠಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಬಂದಿದ್ದು ಅಲ್ಲಿ ಅವರ ದರ್ಶನವಾಯಿತು. ಅಲ್ಲಿಂದ ಕೋಟೇದ್ವಾರಕ್ಕೆ ಬಂದಿಳಿದು, ಜಗದ್ಗುರುಗಳೊಡನೆ ಮೋಟಾರದಿಂದ ದೊಗಡ್ಡಾಕ್ಕೆ ಬಂದೆವು. ಅಲ್ಲಿ ಶ್ರೀಕೇದಾರ ಸಿಂಹಾಸನ ಮಹಾಸಂಸ್ಥಾನ ಊಖೀಮಠದಿಂದ ಮಹಾಸ್ವಾಮಿಗಳವರ ಸಲುವಾಗಿ ೨೦ ಜನರು ಬಂದಿದ್ದರು. ಬಳಿಕ ಮೋಟಾರದಿಂದಿಳಿದು ಸರ್ವರೂ ಸೇರಿ ಅಲ್ಲಿ ಹರಿಯುವ ಒಂದು ನದಿಯ ತೀರದಲ್ಲಿ ಸ್ನಾನ ಪೂಜಾದಿಗಳನ್ನು ತೀರಿಸಿಕೊಂಡು ಅಲ್ಲಿಂದ ಪಾದಚಾರಿಗಳಾಗಿ ಜಗದ್ಗುರುಗಳೊಡನೆ ಸಂಭಾಷಣ ಮಾಡುತ್ತ ಗಿರಿ ಸೌಂದರ್ಯವನ್ನು ನಿರೀಕ್ಷಿಸುತ್ತಲೂ ಗಿರಿವನಸ್ಪತಿಗಳ ಪ್ರಭಾವವನ್ನು ಕೇಳುತ್ತಲೂ ಹೊರಟೆವು. ಮೊದಲು ಜಗದ್ಗುರುಗಳು ಒಂದು ವಿಧವಾದ ಪತ್ರವನ್ನು ವೃಕ್ಷದೊಳಗಿಂದ ತೆಗೆದು ತೋರಿಸಿದರು. ಅದರ ಸುಗಂಧವು ಅತಿಶಯವಾಗಿತ್ತು. ಇನ್ನು ಪಂಚಪತ್ರಿಯೆಂಬ ಸುಗಂಧ ಪತ್ರವುಳ್ಳ ಗಿಡಗಳಂತು ವಿಪರೀತವಾಗಿವೆ. ಬಳಿಕ ವೃಶ್ಚಿಕ ವೃಕ್ಷವನ್ನು ತೋರಿಸಿದರು. ಅದನ್ನು ಮುಟ್ಟಿದ ಕೂಡಲೇ ಚೋಳು ಕಡಿದಂತಾಯಿತು. ಬಳಿಕ ದಾಲಚಿನ್ನಿ ಮೊದಲಾದ ಅನೇಕ ವೃಕ್ಷಗಳನ್ನು ತೋರಿಸಿದರು. ಹಾಗೆಯೇ ಅನೇಕಾನೇಕ ವನಸ್ಪತಿಗಳ ಮಹತ್ವವನ್ನು ಕೇಳುತ್ತ ಒಂದೆರಡು ಮೈಲುಗಳ ವರೆಗೆ ಬಂದೆವು. ಬಳಿಕ ಅಲ್ಲಿ ಮಾವಿನ ಮರದಡಿಯಲ್ಲಿ ವಿಶ್ರಾಂತರಾದೆವು. ಅನಂತರ ಜಗದ್ಗುರುಗಳು ಪಲ್ಲಕ್ಕಿಯಲ್ಲಿ

ವಂದಿಸಿದರು. ನಮಗೆ ಅಶ್ವವನ್ನು ಹತ್ತಿರೆಂದು ಹೇಳಿದರು. ಆದರೆ ಆ ಪರ್ವತದ ಭಯದಿಂದ ನಾವು ಹತ್ತಲಿಲ್ಲ. ಬಳಿಕ ದಂಡಿಗಳು ಪಲ್ಲಕ್ಕಿಯನ್ನು ಹೊತ್ತು ವೇಗದಿಂದ ಮುಂದಕ್ಕೆ ಸಾಗಿದರು. ಓರ್ವನು ನಮ್ಮ ಸಾಮಾನುಗಳನ್ನು ತೆಗೆದುಕೊಂಡು ಮೆಲ್ಲಗೆ ಮಾರ್ಗದರ್ಶಕನಾಗಿ ನಮ್ಮನ್ನು ಕರೆದುಕೊಂಡು ಹೊರಟನು.

ಅಲ್ಲಲ್ಲಿ ಮಾರ್ಗದಲ್ಲಿ ಜವೆಗೋದಿ ಬೆಳೆಗಳು ಪಕ್ವವಾಗಿದ್ದವು. ಕೆಲವೆಡೆಯಲ್ಲಿ ಪಕ್ವವಾದ ಗೋದೀ ಬೆಳೆಗಳನ್ನು ಸ್ತ್ರೀಯರು ಕೊಯ್ಯುತ್ತಿದ್ದರು. ಇವರ ವೇಷ ಭಾಷೆಗಳು ವಿಲಕ್ಷಣವಾಗಿದ್ದವು. ಗಗ್ಗರಿಗಳನ್ನು ನಡಕ್ಕೆ ಬಿಗಿದಿದ್ದರು. ಕಂಬಳಿಯ ಕುಬುಸಗಳನ್ನು ತೊಟ್ಟಿದ್ದರು. ಮೇಲು ಕಂಬಳಿಯು ಗೌಸಿನಾಕಾರವಾಗಿ ಕೆಲವರು ಹೊದ್ದಿದ್ದರು. ಮುಖ ಸೌಂದರ್ಯವು ಚನ್ನಾಗಿರಲಿಲ್ಲ. ಉಡಿಗೆ ತೊಡಿಗೆಗಳಂತು ಕಪ್ಪಾದವುಗಳೇ ಆಗಿದ್ದವು. ಪ್ರಾಯಃ ಇವರ ಮಾತುಗಳಂತು ತಿಳಿಯಲು ಶಕ್ಯವೇ ಇಲ್ಲ. ನಮ್ಮ ಮಾರ್ಗವು ಒಂದು ಭಾಗದಲ್ಲಿ ಗೋಡೆಯಂತಿರುವ ಪರ್ವತವು. ಮತ್ತೊಂದು ಭಾಗದಲ್ಲಿ ಅಪಾರವಾದ ಸರೋವರವು. ಆದರೆ ಬೀದಿಯು ಚನ್ನಾಗಿದ್ದದರಿಂದ ಭಯವೇನು ನಮಗೆ ಅನಿಸಲಿಲ್ಲ. ಅಲ್ಲಲ್ಲಿ ಫಲಾರ್ಂಗ ಮೈಲುಗಲ್ಲುಗಳು ವಿರಾಜಿಸುತ್ತಿದ್ದವು. ಅಷ್ಟರಲ್ಲಿ ಜಗದ್ಗುರುಗಳು ದೊಡ್ಡ ದೊಡ್ಡ ಮರಗಳ ಬನದಲ್ಲಿ ವಿಶ್ರಾಂತರಾಗಿದ್ದರು. ನಾವು ಅಲ್ಲಿಗೆ ಬಂದೊಡನೆಯೇ ಅಲ್ಲಿ ಬಹು ವಿಶಾಲವಾಗಿಯೂ ಅತ್ಯುನ್ನತವಾಗಿಯೂ ಬೆಳೆದಿರುವ ವೃಕ್ಷಗಳ ಹೂವುಗಳನ್ನು ತಮ್ಮ ಪಹಡಿ ಸೇವಕರಿಗೆ ತರಹೇಳಿದರು. ಬಳಿಕ ಒಬ್ಬರ ಮೇಲೊಬ್ಬರು ನಿಂತು ಆ ಹೂವುಗಳನ್ನು ತೆಗೆದುಕೊಂಡು ಬಂದರು. ಬಳಿಕ ಜಗದ್ಗುರುಗಳು ನಮಗೂ ಆ ಹೂವುಗಳ ಗುಚ್ಛವನ್ನು ಕೊಟ್ಟರು. ಅವುಗಳ ಸುಗಂಧವು ಬಹಳ ಪರಿಮಳವಾಗಿತ್ತು.

ಅನಂತರ ಪಾಲಕಿಯು ಮುಂದಕ್ಕೆ ಸಾಗಿತು. ನಾವು ಸಾವಕಾಶವಾಗಿ ನಮ್ಮ ಹತ್ತಿರಿರುವ ಸೇವಕನೊಡನೆ ಮಾರ್ಗಗಾಮಿಗಳಾದೆವು. ಅನಂತರ ನೀರಿನ ಪ್ರವಾಹವು ಬರಲು ಅದನ್ನು ಘೂಲಿನಿಂದ ದಾಟಿ, ಮುಂದೆ ಒಂದು ದಿನ್ನಿಯನ್ನು ಮೆಲ್ಲಗೆ ಹತ್ತುತ್ತ ನಡೆದೆವು. ಅದರ ಮೇಲ್ಭಾಗದಲ್ಲಿ ಜಗದ್ಗುರುಗಳು ಕುಳಿತಿದ್ದರು. ಅಲ್ಲಿ ಅಂಗಡಿಯು ಇದ್ದು ವಾಸಕ್ಕೆ

ಯೋಗ್ಯವಾದ್ದರಿಂದ ಪಾಕಾದಿಗಳನ್ನು ಪೂರೈಸಿಕೊಂಡು ಮಲಗಿದೆವು. ಬಳಿಕ ಮರುದಿನ ಐದು ಘಂಟೆಗೆ ಎದ್ದು ಮುಂದೆ ವಾಯುಘಾಟಿಗೆ ಬಂದು ಅಲ್ಲಿ ಹರಿಯುತ್ತಿರುವ ನದಿಯ ಪೂಲನ್ನು ದಾಟಿ ನದಿಯ ತೀರದಲ್ಲಿ ಸ್ನಾನಾರ್ಪಣಾದಿಗಳನ್ನು ಪೂರೈಸಿಕೊಂಡು ಪುನಃ ಹೊರಟು ೧೦ಮೈಲು ಮಾರ್ಗವನ್ನು ತುಳಿದೆವು. ಆಗ ೮ಘಂಟೆ ರಾತ್ರಿಯಾಯಿತು. ಆದರೂ ಮುಂದಕ್ಕೆ ನಾವೀರ್ವರೂ ಹೊರಟು ಮುಂದೆ ಚಿಟ್ಟೆ ಎಂಬ ಗ್ರಾಮಕ್ಕೆ ಬಂದು ಮಲಗಿದೆವು. ಅಲ್ಲಿಂದೆದ್ದು ಮುಂದೆ ಹೊರಟು ಪೌಡಿಯೆಂಬ ಗ್ರಾಮಕ್ಕೆ ಬಂದೆವು. ಅಲ್ಲಿ ಅಡಿಗೆ ಮಾಡಿಕೊಂಡು ಸ್ನಾನಾದಿಗಳನ್ನು ತೀರಿಸಿಕೊಂಡು ಶ್ರೀನಗರಕ್ಕೆ ಬಂದೆವು.

ಶ್ರೀನಗರವು ಸಮುದ್ರಕ್ಕಿಂತಲೂ ಎರಡೂವರೆಸಾವಿರ ಫೂಟು ಎತ್ತರವಿದೆ. ಇಲ್ಲಿಗೆ ಕೋಟಿದ್ವಾರ ೫೭ ಮೈಲು, ಹರಿದ್ವಾರ ೭೫ ಮೈಲು, ಬದರೀನಾಥ ೧೦೮ ಮೈಲು, ಕೇದಾರನಾಥ ೭೫ ಮೈಲು ಆದೆ. ಶ್ರೀನಗರವು ಅಲಕಾನಂದಾ ನದೀತೀರದಲ್ಲಿದೆ. ಅಲ್ಲಿ ಉತ್ತಮವಾದ ಧರ್ಮಶಾಲೆ ಇದೆ. ಹಾಗೂ ಹರಿದ್ವಾರದಿಂದ ಬರುವ ಬೀದಿಯೂ ಇಲ್ಲಿಗೆ ಕೂಡಿದೆ. ನಾವು ಬಂದ ದಾರಿಯು ಯಾತ್ರಿಕರದಿರದೆ ಏತದ್ದೇಶಿಯರು ಸಂಚರಿಸುವ ಮಾರ್ಗವಾಗಿತ್ತು. ಶ್ರೀನಗರದಲ್ಲಿ ಬಹಳ ದಣಿದದ್ದರಿಂದ ಹಾಗೇ ಮಲಗಿಕೊಂಡು ಅಲ್ಲಿಂದ ಪ್ರಾತಃಕಾಲಕ್ಕೆ ಎದ್ದು ಹೊರಟು ಅಲಕಾನಂದಾ ತಟವಿಡಿದು ಬಂದೆವು ಅಲ್ಲಿಂದ ಬಹಳ ಎತ್ತರವಾದ ಚಢಾವು (ದಿನ್ನಿಯು) ಬಂದಿತು. ಅದನ್ನು ಹತ್ತಿ ಮತ್ತೊಂದು ಮುಕ್ಕಾಮಿಗೆ ಬಂದೆವು. ಅಲ್ಲಿ ಅಲಕನಂದಾ ಸ್ನಾನಾದಿಗಳನ್ನು ಮಾಡಿಕೊಂಡು ರುದ್ರಪ್ರಯಾಗಕ್ಕೆ ಬಂದೆವು.

ಅಲ್ಲಿ ಬದರೀನಾಥ ಕಡೆಯಿಂದ ಅಲಕಾನಂದ ಮತ್ತು ಕೇದಾರನಾಥನಿಂದ ದಾರೇನೀ ಎಂಬೆರಡು ನದಿಗಳು ಕೂಡಿ ಸಂಗಮವಾಗಿದೆ. ಹಾಗೂ ಬದರೀನಾಥ ಮತ್ತು ಕೇದಾರನಾಥ ಮಾರ್ಗಗಳು ಅಲ್ಲಿ ಬೇರೇ ಬೇರೇಯಾಗುವವು. ನಾವು ಕೇದಾರನಾಥ ಮಾರ್ಗವಾಗಿ ಹೊರಟು ಅಲಕನಂದಾದ ಪೂಲನ್ನು ದಾಟಿ ಕೆಳಗೆ ಇಳಿದು ಅಲನಕನಂದಾದ ಉಸುಬಿನ ನಿರ್ಜನ ಪ್ರದೇಶದಲ್ಲಿ ಹೋಗಿ ಪಾಕಾದಿಗಳನ್ನು ಸಿದ್ಧಪಡಿಸಿ ಭೋಜನ ಮಾಡಿದೆವು. ಆದಿನ ರಾತ್ರಿ ಅಲ್ಲಿದ್ದು ೫ ಘಂಟೆಗೆ ಅಗಸ್ತ್ಯ ಮುನಿಯೆಂಬ

ಪುರಿಗೆ ಬಂದೆವು. ಅಲ್ಲಿ ಅಗಸ್ತ್ಯ ಮಹಿಮೆಗಳನ್ನು ತಿಳಿದುಕೊಂಡು ಅಲ್ಲಿಂದ ರಾತ್ರಿಯಲ್ಲಿ ಮುಂದೊಂದು ನೀರಿನ ಪ್ರವಾಹವಿರುವ ಹಳ್ಳಿಯಲ್ಲಿ ಳಿದು ಭೋಜನಾದಿಗಳನ್ನು ಪೂರೈಸಿಕೊಂಡೆವು. ಅಷ್ಟರೊಳಗಾಗಿ ಅವ ರಾದಿಯ ಶ್ರೀ. ಸಂಗಪ್ಪನೆಂಬವರು ಕಾಶಿಯಲ್ಲಿ ನಮಗೆ ಪರಿಚಿತರಾದ ಯೌಗಿಕ ವೈದ್ಯಕರೊಬ್ಬರು ಸಿಕ್ಕರು. ಅಲ್ಲಿಂದ ಅವರೊಡನೆ ಬ್ರಾಹ್ಮೀ ಮುಂತಾದ ವನಸ್ಪತಿಗಳ ಪ್ರಭಾವವನ್ನು ಕೇಳುತ್ತ ಅನಂತಾನಂತ ಪ್ರಫು ಲ್ಲಿತ ಪುಷ್ಪ ಮಂಡಲಾವೃತ್ ಸುಗಂಧ ವೃಕ್ಷವೃಂದವನ್ನು ಲತಾಕುಂಜ ವನ್ನು ದರ್ಶಿಸುತ್ತ ಟಿರೀಬೆಟ್ಟಗೆ ಬಂದೆವು. ಅದನ್ನು ದಾಟಿದರೆ ಗುಪ್ತ ಕಾಶಿಯು, ಹಾಗೇ ಹೋದರೆ ಊಖೀಮಠವು, ಹೀಗೆ ಮಾರ್ಗಕ್ರಮಣವು ಇರುತ್ತದೆ. ಆದರೆ ಯಾತ್ರಿಕರು ಗುಪ್ತಕಾಶೀ ಮಾರ್ಗವಾಗಿಯೇ ಕೇದಾರ ನಾಥನಿಗೆ ಪ್ರಯಾಣ ಮಾಡುತ್ತಿರುವರು. ಆದರೆ ನಾವು ಕೇದಾರ ಸಿಂಹಾ ಸನಕ್ಕೆ ಹೋಗಿ ಅಲ್ಲಿಂದ ಕವಾಟೋದ್ಘಾಟನವಾದ ಬಳಿಕ ಕೇದಾರನಾಥ ನಿಗೆ ಹೋಗಬೇಕೆಂದು ಊಖೀಮಠದ ರಸ್ತೆಯನ್ನು ಹಿಡಿದೆವು. ಮತ್ತು ಊಖೀಮಠಕ್ಕೆ ತಾ. ೨೫-೪-೨೯ ದಿನ ಗುರುವಾರ ೧೦ ಘಂಟೆಗೆ ಬಂದೆವು.

ಊಖೀ ಮಠವೆನ್ನುವದು ಕೇದಾರ ಸಿಂಹಾಸನಮಠದ ನಾಮವೇ ಆಗಿದ್ದರೂ ಈಗ ಈ ಸ್ಥಳವು ಕೇದಾರನಾಥ ಬದರಿ ನಾರಾಯಣ ಮಾರ್ಗವಾಗಿರುವದರಿಂದ "ಬಡಾಬಜಾರ ಊಖೀಮಠ" ಎಂದು ಪ್ರಸಿದ್ಧವಾಗಿದೆ. ಮೊಟ್ಟ ಮೊದಲು ನಾವು ಈ ಮಠಕ್ಕೆ ಬಂದೊ ಡನೆ ಮಹಾ ದ್ವಾರದಲ್ಲಿ ಕೇದಾರಸಿ, ಹಾಸನವೆಂಬ ಬಹು ಮನೋ ಹರವೂ, ಭಕ್ತಿಜನಕವೂ ಆದ ದೊಡ್ಡ ಬೋರ್ಡು ಮೇಲುಭಾಗದಲ್ಲಿ ಕಂಡಿತು. ಆದರೆ ಮಹಾದ್ವಾರವು ಗಜಾರೋಹಕರು ಗಜಗಳಂವ ಹೋಗಬಹುದಾದಷ್ಟು ಬಹು ದೊಡ್ಡದಾಗಿದೆ. ಒಳಭಾಗವನ್ನು ಹೊಕ್ಕ ಕೂಡಲೆ ಬೈಲು ಮಠಾಂಕಣವು ಕಂಡಿತು. ಅಷ್ಟರಲ್ಲಿ ಸಂಸ್ಥಾನದ ಕಾರ ಭಾರಿಗಳು ನಮಗೆ ಸ್ವಾಗತ ಮಾಡಿದರು. ಮಠದ ಒಳಭಾಗದಲ್ಲಿ ಕೇದಾರ ಸಿಂಹಾಸನವು ವಿರಾಜಿಸುತ್ತಿದ್ದು ಅಲ್ಲಿಗೇನೆ ಮೊಟ್ಟ ಮೊದಲು ಬಂದೆವು. ಇನ್ನು ಸಿಂಹಾಸನವೆಂದರೆ ಎತ್ತರವಾದ ಪೀಠವಾಗಿರುತ್ತದೆ. ಅದರ ಮೇಲು ಭಾಗದಲ್ಲಿ ಬೆಳ್ಳಿಯ ಸಿಂಹಾಸನವೂ ಅದರಲ್ಲಿ ದಂಡವೂ ಕಮಂಡಲೂ ಪುರಾಣ ಶಾಸನಾದಿಗಳೂ ಇರುತ್ತವೆ. ಪುಷ್ಪ ಹಾರಾದಿಗಳನ್ನು ಮೇಲು

ಭಾಗದಲ್ಲಿ ಧರಿಸಿರುವರು. ಅಷ್ಟರಲ್ಲಿ ಅಲ್ಲಿಗೆ ಬಂದಿದ್ದ ಜಗದ್ಗುರುಗಳ ದರ್ಶನವನ್ನು ಮಾಡಿಕೊಂಡು ಸ್ನಾನ-ಸಂಧ್ಯಾ-ಪೂಜಾದಿಗಳನ್ನು ಪೂರೈಸಿಕೊಂಡೆವು.

ಜಗದ್ಗುರುಗಳಿಗೆ ಇಲ್ಲಿ ಕೇದಾರನಾಥ ರಾವಲ್ ಜಗದ್ಗುರುಗಳೆಂದು ಅನ್ನುತ್ತಾರೆ. ಮತ್ತು ಆಗ ಅವರ ದರ್ಶನಕ್ಕೆ ತಂಡೋಪತಂಡವಾಗಿ ಜನರು ಬರುತ್ತಿದ್ದರು. ದರ್ಶನವನ್ನು ಮಾಡಬೇಕಾದರೆ ಕಾಣಿಕಾದಿಗಳನ್ನರ್ಪಿಸದ ವಿನಹ ದಂಡ ಪ್ರಣಾಮಗಳನ್ನು ಮಾಡದ ವಿನಹ ಯಾರೂ ದರ್ಶನ ಮಾಡುತ್ತಿರಲಿಲ್ಲ. ಕಿಂಬಹುನಾ ಇವರ ಗೌರವಕ್ಕೆ ಇತ್ತಕಡೆಗೆ ಸೀಮೆ ಇರುವದಿಲ್ಲ. ಸಂಸ್ಥಾನದಲ್ಲಿ ದರ್ಬಾರ ಮಂದಿರವು ಪ್ರತ್ಯೇಕವಾಗಿದೆ. ಅಲ್ಲಿ ಅನೇಕ ವೇದೋಪನಿಷದ್ಧರ್ಮ ಶಾಸ್ತ್ರೀಯ ವಾಕ್ಯಗಳು ಸರ್ವತ್ರ ವಿರಾಜಿಸುವವು. ಪೆನ್ಶನ್‌ದಾರ ಡಿ. ಕಲೇಶ್ವರ ವಿಶ್ವೇಶ್ವರ ಪ್ರಸಾದ ಎಂಬ ಹೆಸರಿನ ಮ್ಯಾನೇಜರರಿರುವರು. ಕ್ಲಾರ್ಕರು ಎಷ್ಟು ಜನರಿರುವರೆನ್ನುವದು ತಿಳಿಯುವಂತಿಲ್ಲ. ನಾನಾ ಪ್ರಕಾರವಾದ ಕಾರ್ಯಕ್ರಮಗಳು ಅಲ್ಲಿ ನಡೆದಿರುತ್ತವೆ. ಜಗದ್ಗುರುಗಳು ಪೂಜಾರ್ಪಣಾದಿಗಳನ್ನು ಪೂರೈಸಿಕೊಂಡು ಅಲ್ಲಿಯೇ ಮೂರ್ತಮಾಡಿ ಸಂಸ್ಥಾನ ಕಾರ್ಯಗಳ ವಿಚಾರವನ್ನು ನೋಡುತ್ತಿರುವರು. ಇನ್ನು ಆಗ್ಗೆ ಕೇದಾರನಾಥನ ಕಪಾಟೋದ್ಘಾಟನವಾಗಬೇಕಾಗಿದ್ದರಿಂದ ಮಠದಲ್ಲಿ ಅತಿಶಯ ಬೀಡು ಇದ್ದಿತು. ಯಾಕೆಂದರೆ ಅಲ್ಲಿಗೆ ಹೋಗುವ ಸಿದ್ಧತೆಯು ಒಳ್ಳೇ ಪ್ರೋತ್ಸಾಹದಿಂದಲೂ ದಕ್ಷತೆಯಿಂದಲೂ ನಡಿದಿದ್ದಿತು. ಬಳಿಕ ತಾ॥ ೨೮-೪-೨೯ ರಲ್ಲಿ ಪ್ರಸ್ಥಾನವಾಗಿ ತಾ॥ ೩-೫-೨೯ ರಲ್ಲಿ ಕಪಾಟೋದ್ಘಾಟನವಾದದ್ದು ಪತ್ರಿಕೆಯಲ್ಲಿ ಎಲ್ಲರೂ ನೋಡಿರಬಹುದು.

ಮಹಾ ವಿದ್ಯಾಲಯದಲ್ಲಿ ಓರ್ವ ಅಧ್ಯಾಪಕನು ಶ್ರೀ. ಪಿ. ಮಹಿಮಾನಂದ ಶಾಸ್ತ್ರಿಗಳು ವ್ಯಾಕರಣ ಸಾಹಿತ್ಯಾದಿ ಪಾಠಗಳನ್ನು ಹೇಳುತ್ತಿರುವರು. ವಿದ್ಯಾರ್ಥಿಗಳು ಕಾಶೀ ಪ್ರದಯಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಪ್ರಥಮ, ದ್ವಿತೀಯ, ತ್ರಿತೀಯ ಖಂಡ ಮಧ್ಯಮ ಪರೀಕ್ಷಾ ಶ್ರೇಣಿಯಲ್ಲಿರುತ್ತಾರೆ. ಮತ್ತು ವಿದ್ಯಾರ್ಥಿಗಳು ಅಲ್ಲಿ ವಯಸ್ಕರು ಅಂದರೆ ೧೦-೧೨-೧೫ ವರ್ಷದವರೇ ಇದ್ದಾರೆ. ಆದರೂ ಮಧ್ಯಮದ ವರೆಗೂ ತಲ್ಪಿರುವರು. ಈ ವಿದ್ಯಾಲಯವು ನಮ್ಮ ದೇಶದಲ್ಲಿದ್ದರೆ ಸರ್ವ ಪಾಠ

ಶಾಲೆಗಳನ್ನು ಅದು ತಿರಸ್ಕರಿಸುವಂತಿದೆ. ಜ್ಯೋತಿಷಾಧ್ಯಾಪಕರು ಒಬ್ಬರು ಇದ್ದರೂ ಪರೀಕ್ಷಾ ಪ್ರಣಾಲಿಯನ್ನು ಅನುಸರಿಸದೆ ಕರ್ಮಕಾಂಡೀಯಾನುಸಾರವಾಗಿ ನಡಿದಿರುತ್ತಾರೆ. ಅಂತು ಒಟ್ಟಿಗೆ ೩೬ ವಿದ್ಯಾರ್ಥಿಗಳು ಇಲ್ಲಿ ಇರುವರು. ಮತ್ತು ಮಠದಲ್ಲಿಯೇ ಬಾಲಕರ ಪ್ರಾಥಮಿಕ ಸ್ಕೂಲ ವಿರಾಜಿಸುತ್ತಲಿದೆ. ಆದರೆ ಆಂಗ್ಲ ವಿದ್ಯಾಪ್ರಭಾವವೂ ಗಿರಿಯಲ್ಲಿ ಪ್ರಸಾರಗೊಂಡಿದೆ. ಇದು ನೀಲಕಂಠ ಮಿಡಲಸ್ಕೂಲ್ ಎಂದು ಶೋಭಿಸುತ್ತದೆ. ಮಠದಲ್ಲಿಯೇ ಈ ಸ್ಕೂಲ್ ಇರುವದು. ೩೫ಸಾವಿರ ರೂಪಾಯಿಗಳ ಅಂದಾಜು ಖರ್ಚಾಗಿರುವ ಮಿಡಿಲಸ್ಕೂಲ್ ಹೌಸ ಬಹು ಭವ್ಯವಾಗಿಯೂ, ನೂತನ ಪದ್ಧತಿಗನುಸಾರವಾಗಿಯೂ ಜಗದ್ಗುರುಗಳಿಂದ ತಯಾರಿಸಲ್ಪಟ್ಟಿರುವದು. ಈ ಸ್ಕೂಲಿನಲ್ಲಿ ೮-೧೦ ಜನ ಮಾಸ್ತರರು ಇರುವರು. ೧೦೦ ಜನ ವಿದ್ಯಾರ್ಥಿಗಳು ಇರುವರು. ಈ ಸ್ಕೂಲಿನ ವೈಭವವು ನಾಗರಿಕ ಪದ್ಧತಿಗನುಸರಿಸಿಯೇ ಇದೆ.

ಇನ್ನು ಮಠದ ಮಧ್ಯದಲ್ಲಿಯೇ ಶಿವಲಿಂಗಮೂರ್ತಿಯು ಮಂದಿರವಿದೆ. ಈ ಮಂದಿರದ ಕಟ್ಟಡವು ಕೇದಾರ ಬದರಿ ಮಂದಿರಕ್ಕಿಂತಲೂ ಬಹು ರಮಣೀಯವಾಗಿದೆ. ಶಿಖರದಲ್ಲಿ ಕಟ್ಟಿಗೆಯ ಮಂಟಪವಿದೆ. ಅದರ ಸುತ್ತಲು ಕ್ಷುದ್ರ ಭದ್ರ ಘಂಟೆಗಳ ಶ್ರೇಣಿ ಇದೆ. ವಾಯುವು ಬಿಸುವ ಸಮಯದಲ್ಲಿ ಅವುಗಳಿಂದ ಮನೋಹರವಾದ ಮಂಜುಲ ಧ್ವನಿಯು ಕೇಳುತ್ತಿರುವದು. ಈ ಮೂರ್ತಿಯು ಜಗದ್ಗುರುಗಳಮೂಲ ಸಮಾಧಿ ಸ್ಥಾನವೆಂದು ಹೇಳುತ್ತಾರೆ. ಇಲ್ಲಿ ಲಿಂಗಧಾರಿ ಮಾಹೇಶ್ವರ ಮೂರ್ತಿಗಳ ವ್ಯತಿರಿಕ್ತ ಅನ್ಯರು ಪ್ರವೇಶಮಾಡುವದಿಲ್ಲ. ಈ ಮೂರ್ತಿಯ ಸನ್ನಿಧಿಯಲ್ಲಿಯೇ ಮಾಂಧಾತನರೇಶನ ಮೂರ್ತಿ ಇರುವದು. ಅವನು ಸಾಕ್ಷಾತ್ ಓಂಕಾರೇಶ್ವರನೆಂಬ ಹೆಸರಿನಿಂದ ಪೂಜಿಸಿದ್ದರಿಂದ ಓಂಕಾರೇಶ್ವರನೆಂತಲೂ ನಾಮವು ಬಿದ್ದಿದೆ. ಉಷಾದೇವಿಯು ಶ್ರೀಕೇದಾರ ಪೀಠಾಧಿಪತಿಗಳನ್ನೇ ಶರಣು ಹೊಂದಿ, ತನ್ನ ಇಷ್ಟಾರ್ಥಸಿದ್ಧಿಯನ್ನು ಪಡೆದಿರುವಳು. ಅವಳ ಪತಿಯ ಮೂರ್ತಿಯೂ, ಉಷಾಮೂರ್ತಿಯೂ ಈ ಮಠದಲ್ಲಿ ಇರುತ್ತವೆ. ಆಕೆಯು ವಿಶೇಷವಾಗಿ ಭಕ್ತಿಮತಿಯೂ, ವಿದುಷಿವೂ, ಆಗಿರುವದರಿಂದ ಜಗದಾಚಾರ್ಯರ ಮಠವನ್ನು ಸಹ ನಿರ್ಮಿಸಿರುವಳು. ಅಂದಿನಿಂದ ಊಷಾಮಠವೆಂದು ಪ್ರತೀತಿಯು ಬಂದಿರಬಹುದಾಗಿದೆ. ಆದರೆ ದೈವವಶಾತ ಭೂಕಂಪ

ವಾಗಿ ಅನೇಕ ಸಾರೆ ಮಠದ ಮಂದಿರಕ್ಕೆ ನೂತನ ರಚನೆಗಳು ಆಗಿವೆ. ಇನ್ನು ಈ ಮಠದ ಸಮೀಪದಲ್ಲಿಯೇ ಬಾಂಸುರ ಅಂದರೆ ಬಾಣಾಸುರನ ರಾಜಧಾನಿಯು ನೆಲಸಿದೆ. ಮತ್ತು ವ್ಯಾಸಮುನಿಯು ಬೋಧಾನುಸಾರವಾಗಿ ಧರ್ಮಭೀಮಾದಿ ಪಾಂಡವರು ಸಹ ಕೇದಾರ ಕ್ಷೇತ್ರದಲ್ಲಿರುವ ಕೇದಾರ ಪೀಠಾಧಿಪತಿಗಳ ದರ್ಶನಕ್ಕೆ ಪಾತ್ರರಾಗಿ ಶಿವಜ್ಞಾನೋಪದೇಶವನ್ನು ಪಡೆದು ಕೇದಾರೇಶ್ವರ ದರ್ಶನ ಅರ್ಚನಗಳನ್ನು ಮಾಡಿ ಮುಕ್ತರಾಗಿದ್ದಾರೆ. ಈ ಬಗ್ಗೆ "ಕೇದಾರಖಂಡ" ಇತ್ಯಾದಿ ಅನೇಕ ಪ್ರಮಾಣಗಳನ್ನು ನಾವು ನೋಡಿದೆವು. ಮತ್ತು ಅದೇ ರೀತಿಯಾಗಿ ಬೇರೆ ಮೂರ್ತಿಗಳೂ ಅಲ್ಲಿ ಅವೆ, ಮತ್ತು ಭೈರವಮೂರ್ತಿಯೂ ಅದೆ. ಭೈರವ ಮೂರ್ತಿಯು ಪೂಜೆಯನ್ನು ಮೊದಲು ಅಟ್ಟಹಾಸದಿಂದ ಮಾಡಿ ಪ್ರಸ್ಥಾನವನ್ನು ಮಾಡಿದರು ಮತ್ತು ಕೇದಾರ, ಮಧ್ಯಮ, ತುಂಗ, ಕಲ್ಪ, ರುದ್ರ, ನಾಥನೆಂಬ ಪಂಚ ಕೇದಾರ ಮೂರ್ತಿಗಳು ಆರು ತಿಂಗಳು ಇಲ್ಲಿಯೇ ಅರ್ಚಿಸಲ್ಪಡುತ್ತವೆ. ಈ ಪಂಚ ಕೇದಾರ ಮಂದಿರಗಳು ಜಗದ್ಗುರು ರಾವಲ್‌ರ ಸ್ವಾಧೀನದಲ್ಲಿಯೇ ಇವೆ. ಗೋಪೇಶ್ವರ ಸ್ಥಾನವು ಇವರ ಕೆಳಗಿನ ಮಠಸ್ಥಳವಾಗಿದೆ. ಇಲ್ಲಿ ಜಗದ್ಗುರುಗಳ ಶಿಷ್ಯರೇ ಇರುತ್ತಾರೆ. ಇವರೂ ದಕ್ಷಿಣ ದೇಶದವರೇ ಆಗಿದ್ದಾರೆ. ಹಾಗೂ ತುಂಗನಾಥನಲ್ಲಿ ಒಬ್ಬ ಯೋಗಿಯು ಬ್ರಹ್ಮಚಾರಿ ಇರುವನೆಂದು ಹೇಳುತ್ತಾರೆ. ಕಾಲೀ, ಸರಸ್ವತೀ ಇತ್ಯಾದಿ ಅನೇಕ ತೀರ್ಥಗಳು ಇವರ ಹಸದಲ್ಲಿಯೇ ಅವೆ. ಅನೇಕ ಜಾಹಗೀರ ಗ್ರಾಮಗಳೂ ಇವೆ.

ಭೃಂಗಿ ಕುಂಡವೆಂಬ ಕುಂಡವು ಯೋಜನಸ್ವಯ ವಿಸ್ತೀರ್ಣವಾಗಿದ್ದು ಗೋಪೇಶ್ವರನ ಹತ್ತರ ಇರುವದು. ಅಲ್ಲಿ ಅನೇಕ ಮಹಿಮೆಗಳು ಇರುವವು. ಅವು ಕೇದಾರ ಖಂಡದಲ್ಲಿ ವರ್ಣಿಸಲ್ಪಟ್ಟಿವೆ. ಮತ್ತು ಭೃಂಗಿಯ ಮಹಿಮೆಗಳು ಕೇದಾರ ಮಂಡಲದಲ್ಲಿ ಅಲ್ಲಲ್ಲಿ ಅನೇಕವಾಗಿವೆ. ಘಂಟಾಕರ್ಣ ಮುಸೀಶ್ವರ ಪ್ರಮಥನ ಮಹಿಮೆಗಳೂ ಇಲ್ಲಿ ಬಹಳವಾಗಿವೆ. ಕಿಂಬಹುನಾ ಕೇದಾರ ಖಂಡ ಗ್ರಂಥವನ್ನು ನೋಡಿದರೆ ಈ ಬಗ್ಗೆ ವಿಸ್ತೃತ ವಿಷಯಗಳು ತಿಳಿಯುವವು. ಮತ್ತು "ಮೂಲ ಹಸ್ತಲಿಖಿತಕೇದಾರಖಂಡವು,, ಈ ಸಂಸ್ಥಾನದಲ್ಲಿಯೇ ಇರುವದು. ಇದನ್ನು ನೋಡಿಯೇ ಮುಂಬಯಿ ವೆಂಕಟೇಶ್ವರ ಮುದ್ರಣಾಲಯದವರು ಮುದ್ರಿಸಿರುವರು. ಮುದ್ರಿತ ಗ್ರಂಥದಲ್ಲಿ ಅವರು ಜಗದ್ಗುರುಗಳ ಉಪಕಾರ ಸ್ಮರಣೆಯನ್ನು ಮಾಡಿದ್ದಾರೆ. ಹೀಗೆ ಇನ್ನು ಅನೇಕ ಪುರಾಣ ಗ್ರಂಥ

ಗಳು ಸಂಸ್ಥಾನದಲ್ಲಿ ಇರುವವು. ಮತ್ತು ಪ್ರಾಚೀನ ಶಾಸನಗಳೂ ಇರು ತ್ತವೆ. ಮತ್ತು ಮಂದಿರದಲ್ಲಿ ವ್ಯಾಸ ಮುನಿಯು ಘಂಟಾಕರ್ಣರ ಕಾಲ ದಲ್ಲಿದ್ದು ಅವರ ಬೋಧೆಯನ್ನು ಗ್ರಹಿಸಿರುವರು. ಹ್ಯಾಗೆ ರೇಣುಕಾಚಾರ್ಯ ರಿಂದ ಅಗಸ್ತ್ಯಮುನೀಶ್ವರನಿಗೆ ಬೋಧವಾಗಿರುವದೋ ಹಾಗೆಯೇ ವ್ಯಾಸನು ಘಂಟಾಕರ್ಣಾಚಾರ್ಯರಿಂದ ಶಿವಜ್ಞಾನೋಪದೇಶವನ್ನು ಪಡೆದಿರುವನು. ಈತನ ಮೂರ್ತಿಯು ಈಗ್ಗೂ ಶಿಲೆಯಲ್ಲಿ ಕೆಚ್ಚಲ್ಪಟ್ಟಿರುತ್ತದೆ.

ತಾ॥ ೯-೫-೨೯ ರಲ್ಲಿ ಸೂರ್ಯಗ್ರಹಣವಿದ್ದದರಿಂದ ಜಗದ್ಗುರುಗಳು ಸಂಸ್ಥಾನ ಮ್ಯಾನೇಜರ್, ಅಧ್ಯಾಪಕರು, ವಿದ್ಯಾರ್ಥಿಗಳು ಸಹಿತವಾಗಿ ಮಂದಾಕಿನೀ ಸ್ನಾನಕ್ಕೆ ಹೋಗಿದ್ದರು. ಮಂದಾಕಿನೀ ತೀರದಲ್ಲಿ ಈಗಿನ ಜಗದ್ಗುರುಗಳು ಯೋಗಾಶ್ರಮವನ್ನು ವಿರಚಿಸಿರುವರು. ಇದಕ್ಕೆ "ನೀಲ ಕಂಠಾಶ್ರಮ" ವೆಂದೆನ್ನುತ್ತಾರೆ. ಇಲ್ಲಿ ಬೈಲು ಭೂಮಿ ಇದೆ. ಇಲ್ಲಿ ಮಾವಿನ ಮರಗಳು, ಅಂಜೂರಿ, ದಾಡಿಮ, ಲಿಂಬಿ, ರಂಭಾದಿ ವೃಕ್ಷ ಗಳು ಮಲ್ಲಿಕಾ, ಗುಲಾಬಿ ಮುಂತಾದ ಲತಾಕುಂಜಗಳೂ ಶೋಭಿಸು ತ್ತವೆ. ಇಲ್ಲಿ ಚಳಿಗಾಲದಲ್ಲಿ ಮಹಾ ವಿದ್ಯಾಲಯವು ಇರುವದು. ಹೋಮ ಕುಂಡವಿದೆ. ಆಶ್ರಮವು ಏಕಾಂತವಾಗಿರುವದರಿಂದ ಬಹಳೇ ಯೋಗ್ಯ ವಾಗಿದೆ. ಅಲ್ಲಿಂದ ಮಂದಾಕೀನೀ ತಟದಲ್ಲಿ ಸರ್ವರೂ ಹೋದೆವು. ಅಲ್ಲಿ ವೃಕ್ಷಚ್ಛಾಯಾಧಃ ಪ್ರದೇಶದಲ್ಲಿ ಶಿಲಾಮಂಟಪದಲ್ಲಿ ವಿಶ್ರಾಂತಿಗೊಂಡು ಸ್ನಾನ ಮಾಡಿದೆವು. ಇಲ್ಲಿ ಸ್ವಯಂ ಸಮಾಧಿಯು ಹತ್ತುವಂತಿದೆ. ಯಾಕೆಂದರೆ ಸ್ವಾಭಾವಿಕವಾದ ಮಂದಾಕಿನೀ ತೀರದ ಶಿಲಾಶಾಸನಗಳೂ ನೆರಳೂ ಗಂಗಾಜಲ ನಿನಾದವೂ ಸ್ಫಟಿಕ ಪಿಷ್ಟದಿಂತಿರುವ ಜಲ ಪ್ರದರ್ಶ ನವೂ ಪತ್ರ ಪುಷ್ಪಾದಿಗಳ ವೈಪುಲ್ಯವೂ ಏಕಾಂತ ಶೀಲತೆಗೆ ಭಂಗವಿಲ್ಲ ದಿರುವಿಕೆಯೂ ಸಮಾಧಿಗೆ (ಶಿವಯೋಗ) ಕ್ಕೆ ಸಹಾಯಕಗಳಾಗಿವೆ. ಇಲ್ಲಿ ನಾವು ಮೋಕ್ಷಕಾಲೀನ ಸ್ನಾನವನ್ನು ಮಾತ್ರ ಮಾಡಿ ಅರ್ಚನಾ ದಿಗಳನ್ನು ಆನಂದ ಭಕ್ತಿಯಿಂದ ಪೂರೈಸಿಕೊಂಡೆವು. ಸುಮಾರು ೨ ಘಂಟೆಯೊಳಗೆ ನಮ್ಮ ಚಿತ್ತವೃತ್ತಿಯು ಈ ತೀರವನ್ನು ಬಿಡಬಾರದೆನ್ನು ವಂತೆ ಆಗಿತ್ತು ತಾತ್ಪರ್ಯವೇನಂದರೆ ಚಿತ್ತಸ್ಥೈರ್ಯವೂ ಚಿತ್ತಾನಂ ದವೂ ಅಗ್ಗೆ ಪ್ರಾಪ್ತವಾಗಿದ್ದವು. ಇತ್ತಕಡೆ ಇಂಥ ಪ್ರದೇಶಗಳು ಅನೇಕ ವಾಗಿರುವವೆಂದು ಜಗದ್ಗುರುಗಳು ಹೇಳಿದರು. ಬಳಿಕ ಅಲ್ಲಿಂದ ಹೊರಟು ಊಖೀಮಠಕ್ಕೆ ಬಂದು ಪುನಃ ಪೂಜಾದಿಗಳನ್ನು ಪೂರೈಸಿಕೊಂಡೆವು. ಮುಂದೆ ನಡೆದ ಸಮಾಚಾರಗಳನ್ನು ಮತ್ತೊಮ್ಮೆ ಬರೆಯುವೆವು.

---

# ಪುಲಿಗೆರೆ (ಲಕ್ಷ್ಮೇಶ್ವರ) ಯಲ್ಲಿ ಹೊಸದಾಗಿ ದೊರೆತ ಶಿಲಾಶಾಸನವು.

## ಹೂಲಿಯ ಮರುಳಸಿದ್ಧೇಶ್ವರ.

ಲೇಖಕ:— ವೀರಭದ್ರಪ್ಪ ಕೊಪ್ಪಳ ಬಿ. ಎ. ಹೆಡ್‌ಮಾಸ್ತರ ಶ್ರೀ ಉಮಾ ವಿದ್ಯಾಲಯ ಲಕ್ಷ್ಮೇಶ್ವರ.





ಈ ಶಾಸನವು ಸದ್ಯಕ್ಕೆ ಮ. ರಾ. ರಾ. ಬಸೆಟ್ಟೆಪ್ಪನವರು ತಟ್ಟಿ ಇವರ ಹತ್ತಿಯ ಕಾರ್ಯಾಲಯದ ಹತ್ತರವಿದ್ದ ಗೊಡಚೀ ವೀರಭದ್ರ ದೇವಾಲಯದಲ್ಲಿ ಪೂರ್ವಾಭಿಮುಖವಾಗಿ ಗೋಡೆಯಲ್ಲಿ ಇರಿಸಲ್ಪಟ್ಟಿದೆ. ಇದು ಸುಮಾರು ೬ ಫೂಟ ಉದ್ದ, ೨॥ ಫೂಟ ಅಗಲವಾಗಿದ್ದು ಬರಹವು ಮೇಲಿದ್ದ ಈಶ್ವರ ಬಸವಣ್ಣಗಳ ಸಲುವಾಗಿ ಅರ್ಧ ಫೂಟನಷ್ಟು ಸ್ಥಳವನ್ನು ಬಿಟ್ಟು ಪ್ರಾರಂಭಿಸಲ್ಪಟ್ಟಿದೆ. ಅದು ೨॥ ಫೂಟಿನ ವರೆಗೆ ಸಾಗಿದ್ದು ಮುಂದೆ ೩ ಫೂಟನಷ್ಟು ಬರಿಗಲ್ಲು ಇದೆ. ೩೨ ಸಾಲುಗಳು ಕಟಿಯಲ್ಪಟ್ಟಿವೆ.

ಇದರಲ್ಲಿ ಒಂದು ಅನುಷ್ಟುಪ ಆರು ಅಕ್ಷರ ವೃತ್ತಗಳೂ ನಾಲ್ಕು ಕಂದ ಪದ್ಯಗಳೂ, ಗದ್ಯ ಭಾಗವೂ ಇವೆ. ಭಾಷೆಯು ಸುಲಭವಾಗಿದೆ. ಶಾಸನದ ಸಾರಾಂಶವು ಅದರ ಅಂತ್ಯದಲ್ಲಿರುವ ಗದ್ಯಭಾಗದಲ್ಲಿ ಬಂದಿದೆ. ಅದರಿಂದ ತಿಳಿಯುವದೇನಂದರೆ, ಪರಮೇಶ್ವರನ ಅವತಾರನಾದ ರೇಣುಕಾಚಾರ್ಯರೇ ಹೂಲಿಯ ಮರುಳ ಸಿದ್ಧೇಶ್ವರ ನಾಮವನ್ನು ಧರಿಸಿ ನಿಜಮಹಾತ್ಮ್ಯೆಯನ್ನು ಮೆರೆದು ಪುಲಿಗೆರಿಪುರಕ್ಕೆ ಬಂದು ಸಕಲ ಭಕ್ತರ ಇಷ್ಟಾರ್ಥವನ್ನು ಸಲಿಸಿ ಶ್ರೀದಕ್ಷಿಣ ಸೋಮೇಶ್ವರನ ಸಾನಿಧ್ಯದಲ್ಲಿ ಶ್ರೀ ಲಿಂಗಮೂರ್ತಿಯಾಗಿ ನೆಲಿಸಿದರು. (ಐಕ್ಯ ಹೊಂದಿದರು.) ಈ ಮರುಳ ಸಿದ್ಧೇಶ್ವರ ದೇವರಿಗೆ ಅವರ ಶಿಷ್ಯನಾದ ಕೂಡಲಿಗೆಯ ಸಂಗಸೆಟ್ಟಿಯರ ಸತ್ಪುತ್ರರಾದ ಪರುವತ ಸೆಟ್ಟಿಯು ಒಂದು ಹೂದೋಟವನ್ನೂ ಭಾವಿಯನ್ನೂ, ಶಿವಾಲಯವನ್ನೂ ಲೋಕಪ್ರಸಿದ್ಧವಾಗಿ ವಿರಚಿಸಿದನು ಎಂದು ಈ ಶಾಸನದಿಂದ ತಿಳಿದುಬರುತ್ತದೆ.

ಹೂಲಿಯು ಸವದತ್ತಿಯಿಂದ ೫ ಮೈಲಿನ ಮೇಲೆ ಇದೆ. ಇದು ಬಹು ಪುರಾತನ ಗ್ರಾಮವಾಗಿದ್ದು ಅನೇಕ ದೇವಾಲಯಗಳಿಂದ ತುಂಬಿಕೊಂಡು ಈಗಲೂ ಒಂದು ಪುಣ್ಯ ಕ್ಷೇತ್ರವೆನಿಸಿಕೊಳ್ಳಲ್ಪಡುತ್ತದೆ. ಅಲ್ಲಿ ಅನೇಕ ಶಿಲಾಶಾಸನಗಳು ಈಗ್ಗೆಯೂ ದೊರೆಯುತ್ತವೆ. ಈಗಿನ ಶಿಲಾಶಾಸನದಿಂದ ತಿಳಿಯುವದೇನೆಂದರೆ ಇಲ್ಲಿ ಮರುಳಸಿದ್ಧೇಶ್ವರರೆಂಬ ಮಹಾಪುರುಷರಿದ್ದು ಇವರು ರೇಣುಕರ ಎರಡನೇ ಅವತಾರವೆಂದು ಇದರಲ್ಲಿ ಹೇಳಲ್ಪಟ್ಟಿದೆ. ಆದರೆ ಈ ರೇಣುಕರು ದಾರುಕ ನಿಮಿತ್ತದ ಸೋಂಕಿನಿಂದ ಶಿವಲಿಂಗದಲ್ಲಿ ಉದ್ಭವಿಸಿ ೧೪೦೦ ವರ್ಷ ಲೀಲೆಯಿಂದ ಜಗತ್ತಿನಲ್ಲಿ ಸಂಚರಿಸಿದರೆಂದು ಹೇಳಲ್ಪಟ್ಟಿದ್ದು ಮನನೀಯವಾಗಿದೆ. ಇದರಲ್ಲಿ ದಾರುಕನ ಸಂಬಂಧವು ಯಾವದೆಂಬದು ನಮಗೆ ತಿಳಿಯದು. ಈ ರೇವಣನೇ ಪೂರ್ವದಲ್ಲಿಯ ಸಿದ್ಧೇಶ್ವರನೆಂಬ ಹೆಸರಿನಿಂದ ಜಂಗಮಾಕಾರದಿಂದ ಭಕ್ತಗಣಕ್ಕಾನಂದವನ್ನು ಹುಟ್ಟಿಸುತ್ತ ಜಗತ್ತಿನಲ್ಲಿ ಸುಳಿದನೆಂದು ಇಲ್ಲಿ ವರ್ಣಿಸಲ್ಪಟ್ಟಿದೆ. ಇದರ ಮೇಲಿಂದ ಈ ಮರುಳಸಿದ್ಧೇಶ್ವರನು ಆ ಕಾಲಕ್ಕೆ ಪ್ರಸಿದ್ಧ ಪುರುಷನಾಗಿರಬೇಕು. ಆದ್ದರಿಂದಲೇ ಅವನು ಐಕ್ಯ ಹೊಂದಿದ ಸ್ಥಳವಾದ ಲಕ್ಷ್ಮೇಶ್ವರದಲ್ಲಿ ಅವನ ಸ್ಮರಣಾರ್ಥ ಒಂದು ದೇವಾಲಯವು ಕಟ್ಟಿಸಲ್ಪಟ್ಟಿದೆ. ಶಾಸನವನ್ನು ಕೊರೆದವರು ಮಾದೋಜ ಮತ್ತು ಸಿದ್ದೋಜ ಎಂದು ಹೇಳಲ್ಪಟ್ಟಿದ್ದಾರೆ. ಶಾಸನದ ಪೂರ್ವಶಕೆ ೧೪೩೫ ಎಂದರೆ ಕ್ರಿ. ಶ. ೧೫೧೩.

ಈ ಶಾಸನದಲ್ಲಿ ನಿರ್ದಿಷ್ಟವಾದ ದೇವಾಲಯವು ಮೇಲೆ ಹೇಳಿದ ವೀರಭದ್ರ ದೇವಾಲಯದ ಹಿಂದೆಯೇ ಇರುವದೆಂದು ಊಹಿಸಬಹುದಾಗಿದೆ. ಯಾಕೆಂದರೆ, ಅಲ್ಲಿ ಗುಡಿಯು ಇವೂರತಿಯು ಇದ್ದು ಒಳಗೆ ಮೂರ್ತಿಯು ಮಾತ್ರ ಇಲ್ಲದಾಗಿದೆ. ಇದಲ್ಲದೆ ಮೊದಲು ಶಾಸನವು ಅಲ್ಲಿಯೇ ಇತ್ತೆಂದು ಜನವಾರ್ತೆಯೂ ಇದೆ.

ಶಿವಾನುಭವದ ೭ನೇ ಸಂಚಿಕೆಯಲ್ಲಿ ಗೆಳೆಯರ ಗುಂಪಿನ ಚನ್ನಮಲ್ಲಪ್ಪನವರು ಹೂಲಿಯ ಪಂಚವಣ್ಣಿಗೆಯ ಮಠದ ಪರಂಪರೆಯನ್ನು ಕುರಿತು ಬೆಲೆಯುಳ್ಳ ಒಂದು ಬರಹವನ್ನು ಬರೆದಿದ್ದಾರೆ. ಅದರಲ್ಲಿ ಮರುಳ ಸಿದ್ಧೇಶ್ವರರ ಹೆಸರು ಇರಬಹುದೇನೆಂದು ನೋಡಲಾಗಿ ದೊರೆಯಲಿಲ್ಲ. ಇದಲ್ಲದೆ ಈ ಮಠವು ಪಂಚವಣ್ಣಿಗೆ ಸೂತ್ರದ ಕಾಶೀ

ಸಿಂಹಾಸನಕ್ಕೆ ಹೊಂದಿದೆಂದು ಆ ಲೇಖದಲ್ಲಿ ಕಾಣಿಸಲ್ಪಟ್ಟಿದೆ. ಆದರೆ ಈ ಶಿಲಾಶಾಸನದಿಂದ ಮರುಳ ಸಿದ್ಧೇಶ್ವರರು ಶ್ರೀ ರೇಣುಕರ ಬಾಳೇಹಳ್ಳಿಯ ಪೀಠದವರೆಂದು ತಿಳಿದುಬರುತ್ತದೆ. ಇದರ ಮೇಲಿಂದ ಇವರು ಬೇರೆ ಪರಂಪರೆಗೆ ಸ್ವಾಮಿಗಳೋ ಹೇಗೆಂಬುದನ್ನು ಸಂಶೋಧಕರ ನಿರ್ಣಯಕ್ಕೆ ಬಿಟ್ಟಿರುತ್ತದೆ.

ಈ ಶಾಸನದಿಂದ ೪೦೧ ವರ್ಷಗಳ ಹಿಂದಿನ ಲಿಂಗವಂತ ವರ್ತಕರ ಸ್ಥಿತಿಯು ಒಳ್ಳೇ ಚನ್ನಾಗಿತ್ತೆಂದೂ ಅವರು ಮನ್ನಣೆಗೆ ಪಾತ್ರರಾಗಿದ್ದರೆಂದೂ ವ್ಯಕ್ತವಾಗುತ್ತದೆ.

## ಮೂಲ ಶಾಸನವು.

(೧) ಶ್ರೀ ಗುರುಭ್ಯೋಂ ನಮಃ। ಶುಭಮಸ್ತು।
ನಮಸ್ತುಂಗ ಸಿರಶ್ಚುಂಬಿ ಚಂದ್ರಚಾಮರಚಾ(೨)ರವೇ।
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ॥
ಶ್ರೀಮರುಳಸಿ(೩)ದ್ಧೇಶ್ವರಾಯ ನಮ:

(೪) ಉ॥

ಶ್ರೀಮದುಮಾಮನೋಹರನೆನಿಪ್ಪ ಸದಾಶಿವನಾ ಮಹಾಗಣ।
ಸ್ತೋಮದ ಮಧ್ಯದಲ್ಲಿ ರಜತಾದ್ರಿಯೊಳೋಲಗವಿತ್ತು ದಿವ್ಯ(೫)ತೇ॥
ಜೋಮಯ ಮೂರ್ತಿದಾರುಕನಿಮಿತ್ತದ ಸೊಂಕಿನೊಳಂದು ರೇಣುಕಂ।
ಗೀಮಹಿಯಲ್ಲಿ ಲಿಂಗದುದರೋದ್ಭವನೇ(೬)ಮವನಿತ್ತನಕ್ಕಜಂ॥

ಶಿವಭಕ್ತರ್ನಲಿದಾಡೆ ಸಜ್ಜನಜನಂ ಕೊಂಡಾಡೆ ದೇವಕ್ಕಳು।
ತ್ಸವದಿಂ(೭)ದಂಬರ ಭಾಗದೊಳ್ಜಯಜಯದ್ಧಾನಂಗಳಂ ಮಾಡೆ ತತ್॥
ಶಿವಲಿಂಗೋದ್ಭವನಾಗಿ ಸಂಚರಿಸುತಿರ್ದಂ ರೇವ(೮)ಣಾಚಾರ್ಯ ಪುಂ।
ಗವನೀ ಧಾರುಣಿಯಲ್ಲಿ ಸಾಸಿರದ ನಾನೂರ್ವತ್ಸರಂ ಲೀಲೆಯಿಂ॥

ಮಗುಳ್ದಾ ಸೋಮೇಶನೊ(೯)ಳ್ಪೊಕ್ಕ ಗಣಿತ ಮಹಿಮಂ ಸಿದ್ಧರೇವಣ್ಣನೊಲ್ದಾ॥
ಜಗದೀಶಂ ತಂನ ಮುಂನ್ನಂ ಕಳುಪಿದ ಕಥನಂ ತೀರಲೆಂದು (೧೦) ಪ್ರಿರ್ಯೊಳ್ಪಂ॥

ದೊಗೆದಂ ಪೂವಲ್ಲಿ ಸಿದ್ಧೇಶ್ವರನೆನೆ ಪೆಸರಿಂ ಜಂಗಮಾಕಾರದಿಂ ಭ-॥
ಕ್ತಗಣಕ್ಕಾನಂದಮಂ ಪುಟ್ಟಿಸುತೆ ಸುತೆ[?](೧೧)ಸುಳಿದ ಲೀಲಾವಿನೋದಂಗ
ಳಿಂದಂ ॥

ಕಂ॥ ಇಂತಾಯತಿಕುಲತಿಲಕನ।
ನಂತ ಮಹಾತ್ಮೆಯೊಳೆ ಚರಿಸಿ(೧೨)ಪುಲಿಗೆರೆಗೆಯ್ತಂ॥
ದಂ ತನ್ನ ಸುಗುಣಲೀಲೆಯ।
ದಂತದನುಳಿದ ಮಲಲಿಂಗಮುಪ್ಪನಿಮಿತ್ತಂ॥

ಉ॥
ಶಕಮಾಬಾಣ(೧೩)ಪುರಾಂಬುರಾಸಿ ಸಸಿಸಂಖ್ಯಾ ಶ್ರೀಮುಖೀವತ್ಸರಂ।
ಪ್ರಕಟಂಬೆತ್ತಿ ಸುಮಾಸ ಭಾದ್ರಪದ ಶುದ್ಧಂ ಪಂಚಮೀ(೧೪)ವಾರ ಚಂ-॥
ಡಕರಾಖ್ಯೋದಯ ಕಾಲದೊಳ್ವಿಮಲ ಲಿಂಗಾಕಾರದಿಂ ನಿಂದನೊ-।
ಲ್ದಕಲಂಕಸ್ಥಲವಾದ ವ್ಯ[?]ಪ್ರಪುರ(೧೫)ದೊಳ್ಪೂವಲ್ಲಿ ಸಿದ್ಧೇಶ್ವರಂ॥

ಕಂ॥ ಇದು ದಕ್ಷಿಣ ಕಾಶಿ ಬಳಿ।
ಕ್ಕಿದು ಪುರಿಸಹಿತಂದು ರಜತಗಿರಿಗೆ ಇದಿದ (೧೬) ಪು-॥
ಣ್ಯದ ತಾಣಮೆಂದು ತಾನ್ನೆಲ।
ಸಿದನೀ ಪುರಿಗೆರೆಯೊಳೊಲ್ದು ಪುಲಿಯು[ಾ]ಸಿದ್ಧಂ॥

ವ॥ ಇಂತು ನೆಲಸಿರ್ದ ಮರುಳ (೧೭) ಸಿದ್ಧೇಶ್ವರನ ನಿಜಶಿಷ್ಯನ ಭಕ್ತಿ ಭಾವವೆಂತೆಂದೊಡೆ.

ಉ॥
ಶರಣಜನಾಂಶ ಸಂಜನಿತ ಭಕ್ತಿಪರಂ ಶಿವತ(೧೮) ತ್ವಕೋವಿದಂ
ಪರಿಣತ ಸಂಗಿಸೆಟ್ಟಿಯುದರಾಂಬುಧಿಚಂದ್ರನನೂನ ಧಾರ್ಮಿಕಂ॥
ಪರುವತಸೆಟ್ಟಿ ತನ್ನಯುಳಸದ್ಗು (೧೯) ರು ಪೂಲಿಯ ಸಿದ್ಧಲಿಂಗಗೀ।
ಧರೆಯರಿವಂತೆ ಕಟ್ಟಿಸಿದ ದೇಗುಲಮಂ ಚಿರಕಾಲಮಿರ್ಪಿನಂ॥

ಕಂ॥ ಆತನ (೨೦) ಸತಿ ಗುರುಭಕ್ತಿ।
ಪ್ರೀತಿಸದಾಲಿಂಗ ಜಂಗಮಾರ್ಚಿತ ಭಾವಸ॥
ಮೇತೆ ವೀರಂಮನೊಪ್ಪಿ।
ಳೀ ತೆಱದಿಂ ವರಪತಿವ್ರತಾಮಣಿ (೨೧) ಯೆಂಬೊಲ್॥

ಉ॥

ಪರಮೋತ್ಸಾಹವನಾಯುವಂ ಸಿರಿಯನುದ್ಯತ್ಕೀರ್ತಿಯಂ ಭಕ್ತಿಯಂ।
ವರ ಮಾತಾ ಪಿತೃ ಸೋದ (೨೨) ರಾದ್ಯಖಿಲಪುತ್ರಾನೂನ ಸದ್ವೃದ್ಧಿಯಂ॥
ಕರುಣಂಗೆಯ್ಗೊಲವಿಂದೆ ಭಕ್ತತತಿಗೀ ಪೂವಲ್ಲಿ ಸಿದ್ಧೇಶ್ವರಂ।
ದು (೨೩) ರಿತ ಧ್ವಾಂತ ದಿವಾಕರಂ ಶುಭಕರಂ ಚಂದ್ರಾರ್ಕತಾರಾಂಬರಂ॥

ವ॥

ಸ್ವಸ್ತಿ ಶ್ರೀಮತ್ಕೈಲಾಸವಾಸಿಯಾ (೨೪) ದ ಶ್ರೀಮತ್ಪರಮೇಶ್ವರಾವತಾರಮಪ್ಪ ರೇವಣಾಚಾರ್ಯ ಭಕ್ತಜನ ಹಿತಾರ್ಥವಾಗಿ ಮರ್ತ್ಯಕ್ಕೆ ಪೂಲಿ (ಯ) ಮ (೨೫) ರುಳ ಸಿದ್ಧೇಶ್ವರ ನಾಮಮಂ ಧರಿಸಿ ಕತಿಪಯ ದಿವಸಂ ತನ್ನ ಮಹಾತ್ಮ್ಯಯಂ ಮೆಱದು ಚರಿಸುತ ಪುಲಿಕರ ಪುರಕ್ಕೆ (೨೬) ಯ್ತಂದು ಸಕಲ ಭಕ್ತರಿಷ್ಟಾರ್ಥ ಸಿದ್ಧಿಯಂ ಸಾರ್ಚ್ಚ ಶ್ರೀ ದಕ್ಷಿಣ ಸೋಮೇಶ್ವರನ ಸಾನಿಧ್ಯದಲ್ಲಿ ಸಾಲಿವಾಹನ ಶಕ (೨೭) ದ ಸಾವಿರದ ನಾನೂಱ ಮೂವತ್ತಯ್ದನೆಯ ಶ್ರೀಮುಖ ಸಂವತ್ಸರದ ಭಾದ್ರಪದ ಶುದ್ಧ ಪಂಚಮೀ ಆದಿತವಾ (೨೮) ರದರುಣೋದಯದ ಕಾಲದಲ್ಲಿ ಶ್ರೀಲಿಂಗಮೂರ್ತಿಯಾಗಿ ನೆಲಸಿದ ಮರುಳಸಿದ್ಧೇಶ್ವರ ದೇವರಿಗೆ ನಿಜ ಶಿಷ್ಯನಪ್ಪ ಕೂ (೨೯) ಡಲಗಿಯ ಸಂಗಿಸೆಟ್ಟಿಯರ ಸತ್ಪುತ್ರ ಪರುವತ ಸೆಟ್ಟಿ ಸ್ವಯಧರ್ಮಾರ್ಜ್ಜಿತವಿತ್ತದಿಂ ಪೂದೋಟಮಂ ಬಾವಿಯಂ (೩೦) ಶಿವಾಲಯಮಂ ಲೋಕಪ್ರಸಿದ್ಧವಾಗೆ ವಿರಚಿಸಿದಂ

ಕಂ॥ ವರಮೂರ್ತ್ತಿ ಮರುಳಸಿದ್ಧೇ-।
ಶ್ವರ ಭವನವನಿಂ (೩೧) ದು ಶಾಲೆಯುಂ ಶಾಸನಮಂ॥
ವಿರಚಿಸಿದರ್ ಮಾದೋಜಂ।
ಪರಿಣತ ಸಿದ್ದೋಜರಿರ್ವ್ವರತಿ ಕುಶಲತೆಯಿಂ॥

(೩೨) ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ



# ಅತಿವರ್ಣ ಷಡಾಶ್ರಮ ಧರ್ಮವು.

## ಶ್ರೀ. ಸಿದ್ಧರಾಮಪ್ಪ ಪಾವಟೆ ಇವರ ಲೇಖದ ವಿಮರ್ಶೆ.

(ಲೇಖಕಃ— ಸಂಪಾದಕರು.)

ರಾ॥ ರಾ॥ ಸಿದ್ಧರಾಮಪ್ಪ ಪಾವಟೆಯವರು "ಅತಿವರ್ಣ ಷಡಾಶ್ರಮ ಧರ್ಮ" ಎಂಬ ಶಿರೋಲೇಖದ ಕೆಳಗೆ ಷಟ್‌ಸ್ಥಲ ವಿಚಾರಗಳಿಂದ ತುಂಬಿದ ಒಂದು ಮಹತ್ವದ ಲೇಖವನ್ನು ಬರೆದು ಜಯಕರ್ನಾಟಕದಲ್ಲಿ ಮೊದಲಿಗೆ ಪ್ರಸಿದ್ಧಿಸಿದ್ದರು. ಅವರು ಈಗ ಅದನ್ನು ಬೇರೆಯಾಗಿ ಅಚ್ಚು ಹಾಕಿಸಿ ಅದರ ಒಂದು ಪ್ರತಿಯನ್ನು ನಮ್ಮ ಕಡೆಗೆ ವಿಮರ್ಶೆಗಾಗಿ ಕಳಿಸಿರುವರು. ಹಿಂದೂ ಧರ್ಮದಲ್ಲಿ ವೀರಶೈವ ಧರ್ಮದ ಸ್ಥಾನವಾವುದು ಎಂಬದನ್ನು ಐತಿಹಾಸಿಕ ಮತ್ತು ಧಾರ್ಮಿಕ ದೃಷ್ಟ್ಯಾಗೊತ್ತುಪಡಿಸುವದೊಂದು ಬಹು ಮನೋರಂಜಕ ಮತ್ತು ಮಹತ್ವದ ವಿಷಯವಾಗಿದೆ. ವೀರಶೈವ ಧರ್ಮವು ಹಿಂದುಸ್ಥಾನದಲ್ಲಿ ಕಾಶ್ಮೀರ, ದ್ರಾವಿಡ, ಕರ್ನಾಟಕ, ಮತ್ತು ಆಂಧ್ರ ದೇಶಗಳಲ್ಲಿ ನೆಲಸಿರುವ ಶೈವಧರ್ಮಗಳಲ್ಲಿ ಒಂದಾಗಿದ್ದು ಇದು ಮುಖ್ಯವಾಗಿ ಕರ್ನಾಟಕದಲ್ಲಿ ಒಂದು ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿಯನ್ನು ಎಸಗಿರುತ್ತದೆ. ಈ ಕ್ರಾಂತಿಯ ನಿಜ ಸ್ವರೂಪವನ್ನು ಅರಿಯದ ಹೊರತು ವೀರಶೈವ ಧರ್ಮದ ಸ್ಥಾನವನ್ನು ಕಂಡು ಹಿಡಿಯುವದು ದುಸ್ತರವು. ಆದರೆ ಇತ್ತಿತ್ತ ವೀರಶೈವರಲ್ಲಿ ಕೆಲವರು ವರ್ಣಾಶ್ರಮ ಧರ್ಮಗಳೇ ಮುಖ್ಯವಾದವುಗಳೆಂದು ಬಗೆದು ಅವುಗಳನ್ನಾಚರಿಸುವದರಲ್ಲಿಯೇ ಮಹತ್ವವಿದೆ ಎಂದು ಭಾವಿಸಿ ಆ ಪ್ರಕಾರ ವೀರಶೈವ ಮತ ತತ್ವಗಳನ್ನು ವಿಪರ್ಯಾಸ ಮಾಡುತ್ತಿರುವದು ಕಂಡು ಬರುತ್ತದೆ. ಆದರೆ ಇಂಥವರು ಮಿ॥ ಪಾವಟೆಯವರು ಬರೆದ ಈ ಲೇಖವನ್ನು ಓದಿ ವಿಚಾರ ಮಾಡಬೇಕೆಂದು ನಮ್ಮ ಸೂಚನೆ ಇದೆ.

### ವರ್ಣಗಳು.

ಆಗಮ ಧರ್ಮಗಳು ವರ್ಣಗಳಿಗೆ ಮಹತ್ವ ಕೊಟ್ಟಿಲ್ಲ. ಅವುಗಳಲ್ಲಿ ವೀರಶೈವ ಧರ್ಮವಂತು ಇವುಗಳನ್ನು ತಿರಸ್ಕರಿಸಿ ಬಿಟ್ಟಿರುತ್ತದೆ.

ಅದು ಈ ವಿಷಯವನ್ನು ಶಾಸ್ತ್ರಾನುಸಾರವಾಗಿ ನಿರ್ಧರಿಸಿ ಆ ಮೇರೆಗೆ ಆಚರಣೆಗಳನ್ನು ರೂಢಿಯಲ್ಲಿ ತಂದಿರುತ್ತದೆ. ಈ ವಿಧ ಪ್ರಯತ್ನವು ಹಿಂದುಸ್ತಾನದಲ್ಲಿಯ ಬೇರೆ ಯಾವ ಧರ್ಮವೂ ಮಾಡಿಲ್ಲೆಂದು ಹೇಳಿದರೆ ತಪ್ಪಾಗಲಾರದು. ಯಾವ ಕಾರಣದಿಂದ ವೀರಶೈವ ಧರ್ಮ ಪ್ರವರ್ತಕರು ವರ್ಣಗಳನ್ನು ತ್ಯಜಿಸಿರುವರೆಂಬದನ್ನು ಮಿ॥ ಪಾವಟೆಯವರು ತಮ್ಮ ಈ ಚಿಕ್ಕ ಪುಸ್ತಕದಲ್ಲಿ ಬಹು ವಿಶದವಾಗಿ ವಿವರಿಸಿದ್ದಾರೆ. ವೀರಶೈವನು ದೀಕ್ಷಾ ಸಂಸ್ಕಾರವನ್ನು ಹೊಂದಿದ ಬಳಿಕ ಅವನ ಶರೀರವು ಮಂತ್ರಮಯವಾಗಿ ಪುನೀತವಾಗುತ್ತದೆಂದು ತಿಳಿಯಲ್ಪಡುತ್ತದೆ. ಆದ್ದರಿಂದ ಅವನ ಪೂರ್ವಾಶ್ರಯಗಳು ನಷ್ಟಹೊಂದುವವು. ಮತ್ತು ಪಂಚಭೂತದಿಂದಾದ ಅವನ ಶರೀರದ ಹುಟ್ಟಳಿದು, ಅವನು ಪುನರ್ಜಾತನೆನಿಸಿಕೊಳ್ಳುವನು. ಇಂಥವನಿಗೆ ಹಿಂದಿನ ಜಾತಿಯು ಉಳಿಯುವದು ಹೇಗೆ? ಆದ್ದರಿಂದ ಅವನು ವರ್ಣರಹಿತನು ಅಥವಾ ವರ್ಣಾತೀತನು ಎಂದೆನಿಸಿಕೊಳ್ಳುತ್ತಾನೆ. ಇದೇ ವೀರಶೈವಧರ್ಮದ ದೀಕ್ಷೆಯ ಮುಖ್ಯ ಸಿದ್ಧಾಂತವಿದೆ. ವೀರಶೈವನಿಗೆ ಬೋಧಿಸಲ್ಪಡುವ ಉಪದೇಶ್ಯ ಮಂತ್ರವಾದರೂ ವೇದಸಾರವಾದುದೆಂದು ಮಿ॥ ಪಾವಟೆಯವರು ತಮ್ಮ ಲೇಖದಲ್ಲಿ ಅನೇಕ ಆಧಾರಗಳಿಂದ ಸಿದ್ಧಪಡಿಸಿದ್ದಾರೆ. ದೀಕ್ಷೆಯ ಬಗ್ಗೆ ಈ ಬಗೆಯ ಉಚ್ಚ ಕಲ್ಪನೆಗಳಿರುವದರಿಂದ, ಅದಕ್ಕೆ ತಕ್ಕಂಥವನನ್ನೇ ಅಂದರೆ ಗುಣ, ನೀತಿ, ನಡತೆಗಳಲ್ಲಿ ಅತ್ಯುತ್ಕೃಷ್ಟನಾದವನನ್ನೇ ಗುರುವು ಕಂಡು ಹಿಡಿದು ಲಿಂಗಧಾರಣವನ್ನು ಮಾಡತಕ್ಕದ್ದು. ಇದು ಗುರುವಿನ ಕರ್ತವ್ಯವಾಗಿದೆ. ಈ ಬಗ್ಗೆ ವೀರಶೈವ ಧರ್ಮಾಚಾರ್ಯರು ಬಿಗಿಯಾದ ಕಟ್ಟಳೆಗಳನ್ನು ಮಾಡಿದ್ದಾರೆ. ಈ ಕಟ್ಟಳೆಗಳನ್ನು ಉಲ್ಲಂಘಿಸಿ ನಡೆಯುವ ಗುರುಶಿಷ್ಯರನ್ನು ಅವರು ಅತ್ಯಂತವಾಗಿ ನಿಂದಿಸಿದ್ದಾರೆ. ಈ ಬಗೆಯಾಗಿ ದೀಕ್ಷೆಯ ವಿಚಾರಗಳಿರುವದರಿಂದ ವೀರಶೈವರಲ್ಲಿ ವರ್ಣಸಾಂಕರ್ಯದ ದೋಷವು ಬರಲಾರದೆಂದು ಮಿ॥ ಪಾವಟೆಯವರು ಈ ಪುಸ್ತಕದಲ್ಲಿ ಸಿದ್ಧಪಡಿಸಿದ್ದಾರೆ. ಇದನ್ನು ವಾಚಕರು ಅವಶ್ಯವಾಗಿ ನೋಡತಕ್ಕದ್ದು.

ವೀರಶೈವನು ಹೀಗೆ ದೀಕ್ಷಾಸಂಸ್ಕಾರವನ್ನು ಹೊಂದಿದ ಬಳಿಕ ಅವನು ಮನಸ್ಸಿಗೆ ಬಂದಂತೆ ವಿಷಯ ಲೋಲುಪನಾಗಿ ವರ್ತಿಸ ಕೂಡದು. ಹಾಗೆ ವರ್ತಿಸುವದರಿಂದ ಅವನು ಪತಿತನಾಗುವನು. ಇಂಥವನಿಗೆ

ಪ್ರಾಯಶ್ಚಿತ್ತವು ಸಹ ಇರಲಾರದೆಂದು ವೀರಶೈವ ಗ್ರಂಥಗಳಲ್ಲಿ ವಾಕ್ಯಗಳಿವೆ. ಮಿ॥ ಪಾವಟೆಯವರು ಈ ವಿಷಯವನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ಅವನ ಆಚರಣೆಗಳಲ್ಲಿ ಐದು ವಿಧಗಳು ಮಾಡಲ್ಪಟ್ಟಿವೆ. ಅವುಗಳಿಗೆ ಪಂಚಾಚಾರಗಳೆಂಬ ಹೆಸರು. ಇವುಗಳಂತೆ ಆಚರಿಸುವವನೇ ನಿಜವಾದ ವೀರಶೈವನು. ಕರ್ನಾಟಕದ ಕೆಲಭಾಗಗಳಲ್ಲಿ ವೀರಶೈವರಿಗೆ ಪಂಚಾಚಾರದವರೆಂದು ಅನ್ನುವದುಂಟು. ಇದರ ಅರ್ಥವು ಪಂಚಾಚಾರಗಳಂತೆ ವರ್ತಿಸುವವರೆಂಬದಷ್ಟೇ ಇರುತ್ತದೆ. ಈ ಪಂಚಾಚಾರಗಳಾವವೆಂದರೆ:— ಲಿಂಗಾಚಾರ, ಶಿವಾಚಾರ, ಸದಾಚಾರ, ನಿಯತಾಚಾರ ಮತ್ತು ಗಣಾಚಾರ. ಈ ಆಚಾರಗಳ ವಿವರಣೆಯನ್ನು ಮಿ॥ ಪಾವಟೆಯವರು ತಮ್ಮ ಲೇಖದಲ್ಲಿ ಬಹಳ ಚನ್ನಾಗಿ ಮಾಡಿದ್ದಾರೆ. ಲಿಂಗಾಚಾರವೆಂದರೆ ತಾನೂ ತನ್ನ ಕುಟುಂಬದವರೂ ಶಿವಚಿನ್ಹಾಂಕಿತರಾಗಿ ವರ್ತಿಸುವದು. ಶಿವಾಚಾರವೆಂದರೆ ಶಿವದೀಕ್ಷೆ ಹೊಂದಿದವರಲ್ಲಿ ಜಾತಿ ಭೇದವನ್ನೆಣಿಸದೆ ಎಲ್ಲರೂ ಬಂಧು ಭಾವದಿಂದ ವರ್ತಿಸುವದೇ ಇರುತ್ತದೆ. ಸದಾಚಾರವೆಂದರೆ ಸಜ್ಜನರು ಒಪ್ಪುವಂತೆ ವರ್ತಿಸುವದು. ನಿಯತಾಚಾರವೆಂದರೆ, ಒಂದು ಆಚಾರದ ಕಟ್ಟನ್ನು ಪರಿಪಾಲಿಸುವಲ್ಲಿ ಪ್ರಾಣ ಹೋದರೂ ಕೂಡ ಅದನ್ನು ಬಿಡದಿರುವದು. ಗಣಾಚಾರವೆಂದರೆ ಶಿವಧರ್ಮದ ನಿಂದೆಯನ್ನು ತರಹರಿಸದೆ ವರ್ತಿಸುವದು ಇರುತ್ತದೆ. ಇವೆಲ್ಲವೂ ವೀರಶೈವನು ಪರಿಪಾಲಿಸತಕ್ಕ ಸ್ಥೂಲಾಚಾರಗಳಿರುತ್ತವೆ. ಈ ಆಚಾರಗಳಿಂದ ಭಕ್ತನಲ್ಲಿ ಲಿಂಗದ ಶ್ರೇಷ್ಠ ಗುಣಗಳು ಪರಿಪೂರ್ಣ ಹೊಂದುತ್ತಹೋಗುವವು. ಈ ಕಾರಣದಿಂದ ವೀರಶೈವನಲ್ಲಿ ಅವನ ಜನ್ಮ ಮಾತ್ರಕ್ಕೆ ಉಂಟಾದ ವರ್ಣಗಳ ಸಂಬಂಧವು ತಪ್ಪಿ ಹೋಗುತ್ತದೆ. ಹೀಗೆ ಆಚರಿಸುವದರಿಂದ ವೀರಶೈವನು ವರ್ಣಾತೀತನೆನಿಸಿಕೊಳ್ಳುತ್ತಾನೆ. ವೀರಶೈವ ಸಮಾಜದ ವ್ಯವಸ್ಥೆಯು ಈ ಸಿದ್ಧಾಂತಕ್ಕೆ ಅನುಸರಿಸಿಯೇ ಮಾಡಲ್ಪಟ್ಟಿರುತ್ತದೆ.

ವೀರಶೈವ ಧರ್ಮದ ಪ್ರಕಾರ ಮೇಲ್ಕಂಡ ವರ್ಣವಿಚಾರಗಳು ಸ್ತ್ರೀಯರಿಗೂ, ಸಹ ಹತ್ತುತ್ತವೆ. ಅಂದರೆ ಅವರಾದರೂ ವರ್ಣಾತೀತರನಿಸಿಕೊಳ್ಳುತ್ತಾರೆ. ಇದು ಆಗಮ ಗ್ರಂಥಗಳ ವೈಶಿಷ್ಟ್ಯವು. ಈ ವಿಷಯವು ಬೇರೆ ವೈದಿಕ ಮತಗ್ರಂಥಗಳಿಗೆ ಒಪ್ಪಿಗೆಯಾದುದಲ್ಲ. ಈ ಗ್ರಂಥಗಳು ಸ್ತ್ರೀಯರು ಶೂದ್ರರೆಂದು ಭಾವಿಸಿ, ಅವರಿಗೆ ವೇದಾಧಿಕಾ

ರವಿಲ್ಲೆಂದು ಸಾರಿರುತ್ತವೆ. ಈ ಅಕಾಂಚಿತ ವಿಚಾರಗಳು ವೀರಶೈವ ಧರ್ಮಕ್ಕೆ ಹೊರತಾದವುಗಳು. ಆದ್ದರಿಂದ ವೀರಶೈವ ಸಮಾಜದಲ್ಲಿ ಅನೇಕ ಶಿವಶರಣೆಯರು ಉದ್ಭವಿಸಿ, ಅನೇಕ ಮತಗ್ರಂಥಗಳನ್ನು ವಚನಗಳ ಮೂಲಕವಾಗಿ ವಿರಚಿಸಿದ್ದಾರೆ. ಮಿ ಪಾವಟೆಯವರು ಈ ವಿಷಯವಾಗಿಯೂ, ಸಂಕ್ಷೇಪವಾಗಿ ಈ ಲೇಖದಲ್ಲಿ ವಿವರಿಸಿದ್ದಾರೆ.

## ಆಶ್ರಮಗಳು.

ಈ ಪ್ರಕಾರ ವೀರಶೈವರಲ್ಲಿ ವರ್ಣಗಳಷ್ಟೇ ಅಲ್ಲ, ಆಶ್ರಮಗಳೂ ಸಹ ಇರುವದಿಲ್ಲ. ಅವರಿಗೆ ಅತ್ಯಾಶ್ರಮಿಗಳೆಂಬ ಹೆಸರು. ಆದರೆ ಮಿ॥ ಪಾವಟೆಯವರು ಷಟ್‌ಸ್ಥಲಗಳ ಮರ್ಮಗಳನ್ನು ಈ ಲೇಖದಲ್ಲಿ ವಿವರಿಸಲೆಣಿಸಿ ಅವುಗಳ ವಿಚಾರಗಳು ನಾಲ್ಕು ಆಶ್ರಮಗಳ ವಿಚಾರಕ್ಕೆ ಹ್ಯಾಗೆ ಹೊಂದಿಕೆಯಾಗುತ್ತವೆಂಬದನ್ನು ಹೇಳಲು ಯತ್ನಿಸಿದ್ದಾರೆ. ಅವರು ತಮ್ಮ ಲೇಖದಲ್ಲಿ ಭಕ್ತಮಹೇಶ್ವರ ಸ್ಥಲಗಳ ಆಚರಣೆಗಳನ್ನು ಬ್ರಹ್ಮಚರ್ಯಾಶ್ರಮದ ವೃತ್ತಿಗೂ ಪ್ರಸಾದಿ ಪ್ರಾಣಲಿಂಗಿಗಳ ಆಚರಣೆಗಳನ್ನು ಗೃಹಸ್ಥಾಶ್ರಮಕ್ಕೂ, ಶರಣನ ಆಚರಣೆಗಳನ್ನು ವಾನಪ್ರಸ್ಥಾಶ್ರಮಕ್ಕೂ, ಐಕ್ಯನ ಆಚರಣೆಗಳನ್ನು ಸನ್ಯಾಸಾಶ್ರಮಕ್ಕೂ ಹೋಲಿಸಿ ಆಯಾ ಸ್ಥಲಗಳ ವಿವೇಚನೆಯನ್ನು ಮಾಡಿದ್ದಾರೆ. ಆದರೆ ಈ ಪ್ರಕಾರ ಆಯಾ ಸ್ಥಲಗಳೆಂದರೆ ಈ ಬೇರೆ ಬೇರೆ ಆಶ್ರಮಗಳೇ ಎಂದು ತಿಳಿಯಲಿಕ್ಕೆ ಬರಲಾರದು. ಹಾಗೆ ಮಿ. ಪಾವಟೆಯವರಾದರೂ ತಿಳಿದಿಲ್ಲವೆಂತಲೂ ನಮ್ಮ ನಂಬುಗೆ. ಆದರೆ ಚತುರಾಶ್ರಮದ ವಿಚಾರಗಳು ಸಮಾಜದಲ್ಲಿ ಈಗ ಎಲ್ಲರಿಗೂ ಪ್ರಸಿದ್ಧವಾಗಿರುವದರಿಂದ ಇನ್ನೂ ಅಪರಿಚಿತವಾದ ಷಟ್‌ಸ್ಥಲಗಳ ವಿಚಾರಗಳನ್ನು ಸುಲಭವಾಗಿ ಎಲ್ಲರಿಗೂ ತಿಳಿಯಬೇಕೆಂಬ ಉದ್ದಿಶ್ಯವಾಗಿ ಮಾತ್ರ ಅವರು ಹೀಗೆ ಈ ಆಶ್ರಮಗಳಿಗೆ ಹೋಲಿಸಿ ಅವುಗಳ ವಿವರಣೆಯನ್ನು ಮಾಡಿರುವರೇ ಹೊರತು ಬೇರೊಂದಿಲ್ಲ.

ವೀರಶೈವರು ಹ್ಯಾಗೆ ವರ್ಣಾತೀತರೋ ಹಾಗೆಯೇ ಅವರು ಅತ್ಯಾಶ್ರಮಿಗಳೂ ಇದ್ದಾರೆ. ಅಂದರೆ ಆಶ್ರಮಗಳ ವ್ಯವಹರಣೆಯು ಅವರಿಗೆ ಹತ್ತುವದಿಲ್ಲ. ಅವರು ಷಟ್‌ಸ್ಥಲಾಚಾರಕ್ಕೆ ಮಾತ್ರ ಒಳಗಾದವರು. ಆದರೆ ಈ ಆಚಾರಕ್ಕೂ ಮನುಷ್ಯನ ಆಯುಷ್ಯದ ಬೇರೆ ಬೇರೆ ಭಾಗಗ

ಳಿಗೂ ಏನೂ ಸಂಬಂಧವಿರುವದಿಲ್ಲ. ಚತುರಾಶ್ರಮಗಳು ಹೀಗಲ್ಲ. ಅವು ಗಳು ಮನುಷ್ಯನ ಬೇರೆ ಬೇರೆ ಆಯುಷ್ಯದ ಭಾಗಗಳಿಗೆ ಸಂಬಂಧ ಪಟ್ಟ ವುಗಳಾಗಿವೆ. ಇಂತಿಷ್ಟು ಆಯುಷ್ಯದ ಅವಧಿಯವರೆಗೆ ಬ್ರಹ್ಮಚರ್ಯ, ಅದರ ತರುವಾಯ ಗೃಹಸ್ಥಾಶ್ರಮ, ಆ ಮೇಲೆ ವಾನಪ್ರಸ್ಥ, ಮತ್ತು ಕಡೆಗೆ ಸನ್ಯಾಸಾಶ್ರಮವಾಗಿರುತ್ತವೆ. ಆದರೆ ಷಟ್‌ಸ್ಥಲಾಚರಣೆಯು ಬೇರೆ ವಿಧವಾಗಿರುತ್ತದೆ. ಭಕ್ತಸ್ಥಲವನ್ನು ಬಿಟ್ಟು ಐಕ್ಯಸ್ಥಲವಿಲ್ಲ. ಮತ್ತು ಐಕ್ಯಸ್ಥಲವು ಭಕ್ತನಲ್ಲಿಯೂ ಇರುತ್ತದೆ. ಒಂದು ಸ್ಥಲವು ಮತ್ತೊಂದರಲ್ಲಿ ಒಡಮೂಡಿಕೊಂಡಿರುತ್ತದೆ. ಆದ್ದರಿಂದ ಆರುಸ್ಥಲಗಳಲ್ಲಿ ೩೬ ಸ್ಥಲಗಳು, ೩೬ ಸ್ಥಲಗಳಲ್ಲಿ ೨೧೬ ಸ್ಥಲಗಳು ಇನ್ನು, ಆ ಪ್ರಕಾರ ಭಕ್ತನು ಆಚರಿಸ ಬೇಕಾಗುತ್ತದೆ. ಈ ವಿಧದ ಆಚರಣೆಯು ಮೂಲಕ ಭಕ್ತನ ಎಲ್ಲ ಶರೀರ ಗಳೂ, ಅವಯವಗಳೂ, ಚಕ್ರಗಳೂ ಸಮನಾಗಿ ವಿಕಾಸ ಹೊಂದಲು ಅಸ್ಪದವಾಗುತ್ತದೆ. ಈ ವಿಕಾಸದ ಕಾರ್ಯವು ಭಕ್ತನ ಗರ್ಭಾವಸ್ಥೆ ಯಿಂದ ಹಿಡಿದು, ಅಂತ್ಯಕಾಲದ ವರೆಗೂ ಒಂದೇ ಸವನೆ ಆವನಲ್ಲಿ ನಡೆದಿರುತ್ತದೆ. ಈ ಮೇರೆಗೆ ಷಟ್‌ಸ್ಥಲವು ಸಂಪೂರ್ಣ ಆತ್ಮೋನ್ನತಿಯ ಮಾರ್ಗವೆಂದು ಸ್ಪಷ್ಟವಾಗುತ್ತದೆ. ಇದಕ್ಕೂ ಚತುರಾಶ್ರಮಗಳಿಗೂ ಮಹ ದಂತರವಿದೆ.

## ಬ್ರಹ್ಮಚರ್ಯಾಶ್ರಮ.

ಶ್ರೀಯುತ ಪಾವಟೆಯವರು ಬ್ರಹ್ಮಚರ್ಯಾಶ್ರಮವನ್ನು ಭಕ್ತ ಮಹೇಶ್ವರ ಸ್ಥಲಗಳಾಚರಣೆಗೆ ಹೋಲಿಸಿರುತ್ತಾರೆ. ಅವರು ತಮ್ಮ ಲೇಖದಲ್ಲಿ ವಿವರಿಸಿದಂತೆ ಇವುಗಳಲ್ಲಿ ಕೆಲ ಹೋಲಿಕೆಗಳಾದರೂ ಇರು ತ್ತವೆ. ಭಕ್ತನಲ್ಲಿ ಶ್ರದ್ಧೆಯೂ ಮಹೇಶ್ವರನಲ್ಲಿ ನಿಷ್ಠೆಯೂ ಇರತಕ್ಕದ್ದಾ ಗಿದ್ದು ಇವೆರಡೂ ಗುಣಗಳು ಬಾಲ್ಯ ತಾರುಣ್ಯಗಳಲ್ಲಿಯೇ ಹೆಚ್ಚಾಗಿ ಪ್ರಕಟವಾಗುತ್ತವೆಂಬದರ ಬಗ್ಗೆ ಮಿ. ಪಾವಟೆಯವರು ತಮ್ಮ ಲೇಖದಲ್ಲಿ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾರೆ. ಅದರಂತೆ ಹ್ಯಾಗೆ ಬ್ರಹ್ಮ ಚರ್ಯವು ಮುಂದಿನ ಆಶ್ರಮಗಳಿಗೆ ಆಧಾರವಾಗಿರುತ್ತದೋ ಹಾಗೆಯೇ ಭಕ್ತಮಹೇಶ್ವರ ಸ್ಥಲಗಳಾದರೂ ಮುಂದಿನ ಸ್ಥಲಗಳಿಗೆ ಆಧಾರವಾಗಿರು ತ್ತವೆ. ಭಕ್ತನು ಭಕ್ತಸ್ಥಲದಲ್ಲಿ ನೈತಿಕ ಅತ್ಯಂತ ಉನ್ನತಿಯನ್ನು ಹೊಂದತಕ್ಕದ್ದಾಗಿದೆ. ಮತ್ತು ಮಹೇಶ್ವರ ಸ್ಥಲದಲ್ಲಿ ಮನಸ್ಸಿನ ದಾರ್ಢ್ಯ

ವನ್ನು ಅವನು ಪಡೆಯತಕ್ಕದ್ದಾಗಿದೆ. ಈ ಎರಡೂ ಸ್ಥಲಗಳು ಷಟ್ ಸ್ಥಲಕ್ಕೆ ಮುಖ್ಯ ಆಧಾರವಾಗಿವೆ. ಆದ್ದರಿಂದ ಪ್ರತಿಯೊಬ್ಬ ವೀರಶೈವ ಗ್ರಂಥಕಾರನು ತನ್ನ ಷಟ್‌ಸ್ಥಲ ವಿವೇಚನೆಯಲ್ಲಿ ಈ ಎರಡು ಸ್ಥಲಗಳ ಬಗ್ಗೆ ಎಲ್ಲಕ್ಕೂ ಹೆಚ್ಚಿಗೆ ನಿರೂಪಣೆ ಮಾಡಿದ್ದು ತೋರಿ ಬರುತ್ತದೆ.

ಹೀಗೆ ಬ್ರಹ್ಮಚರ್ಯಾಶ್ರಮ ಮತ್ತು ಭಕ್ತ ಮಹೇಶ್ವರ ಸ್ಥಲಗಳಲ್ಲಿ ಪರಸ್ಪರ ಕೆಲವು ಹೋಲಿಕೆಗಳು ಕಂಡು ಬರುತ್ತವೆ. ಆದರೆ ಬ್ರಹ್ಮ ಚರ್ಯಾಶ್ರಮದಲ್ಲಿ ಬ್ರಹ್ಮಚರ್ಯದಿಂದಿದ್ದುಕೊಂಡು ಶಾಸ್ತ್ರಾಭ್ಯಾಸ ಮಾಡು ವದೇ ಅದರ ಮುಖ್ಯ ವೈಶಿಷ್ಟ್ಯವಾಗಿದೆ. ಆದರೆ ಷಟ್‌ಸ್ಥಲ ಶಾಸ್ತ್ರದಲ್ಲಿ ಹೀಗೆ ಕೇವಲ ಅಕ್ಷರಾಭ್ಯಾಸಕ್ಕೆ ಅಷ್ಟು ಮಹತ್ವವು ಕೊಡಲ್ಪಟ್ಟಿಲ್ಲ. ಅದು ನೀತಿ, ನಡತೆ, ಆಚಾರ ಮತ್ತು ಮನಸ್ಸಿನ ದೃಢತೆ ಇವುಗಳಿಗೆ ಅತ್ಯಂತ ಮಹತ್ವವನ್ನು ಕೊಟ್ಟಿರುತ್ತದೆ. ಒಬ್ಬನು ಕೇವಲ ನಿರಕ್ಷರಿಯಾಗಿರಬಹುದು. ಆದರೆ ಅವನು ಷಟ್‌ಸ್ಥಲ ಶಾಸ್ತ್ರಜ್ಞಾನಿಯಾಗಿರಬಹುದು.

## ಗೃಹಸ್ಥಾಶ್ರಮ.

ಮುಂದೆ ಶ್ರೀಯುತ ಪಾವಟೆಯವರು ಗೃಹಸ್ಥ ಧರ್ಮಗಳು ಪ್ರಸಾದಿ ಪ್ರಾಣಲಿಂಗಿ ಸ್ಥಲಗಳ ಧರ್ಮಗಳಿಗೆ ಕೆಲವು ಮಟ್ಟಿಗೆ ಹೋಲುತ್ತವೆಂದು ತಮ್ಮ ಲೇಖದಲ್ಲಿ ಉಲ್ಲೇಖಿಸಿರುವರು. ಹ್ಯಾಗೆಂದರೆ "ಪ್ರಸಾದಿಯ ಧರ್ಮವು ತನಗೆ ದೊರೆತುದೆಲ್ಲ ಶಿವನೆಂದು ನಂಬುವದು, ಅದನ್ನು ಶಿವಕಾ ರ್ಯಕ್ಕೆ ಬಳಸುವದು" ಇರುತ್ತದೆ. ಹಾಗೆಯೇ ಗೃಹಸ್ಥನಾದರೂ ತನಗೆ ಬಂದುದನ್ನು ಸಮಾಜಕ್ಕಾಗಿ ವಿನಿಯೋಗಿಸತಕ್ಕದ್ದು. ಅತಿಥಿ ಸತ್ಕಾರಗ ಳನ್ನು ಮಾಡತಕ್ಕದ್ದು. ವಿಶ್ವ-ಕುಟುಂಬಿಯಾಗಿ ಆಚರಿಸತಕ್ಕದ್ದು. ಅವನು ಮಾಡುವ ಸರ್ವ ಯಜ್ಞಾದಿಕರ್ಮಗಳು ಈಶ್ವರ ಪ್ರಾಪ್ತಿಗಾಗಿಯೇ ಇರು ತ್ತವೆ. ಈ ವಿಚಾರಗಳಿಗೂ, ಪ್ರಸಾದಿಸ್ಥಲದ ಧರ್ಮಗಳಿಗೂ, ಬಹಳ ಹೋಲಿಕೆ ಇರುತ್ತದೆ. ಅದರಂತೆಯೇ ಪ್ರಾಣಲಿಂಗಿ ಸ್ಥಳವಾದರೂ ಗೃಹಸ್ಥ ಧರ್ಮಗಳನ್ನು ಹೋಲುತ್ತದೆ. ಈ ಸ್ಥಳವೆಂದರೆ ಪ್ರಸಾದಿಸ್ಥಲದ ಅವ ಧಾನದಿಂದ ಒದಗಿದ ಶಿವಾನುಭವ ಸ್ವರೂಪವು. ಈ ಪ್ರಕಾರ ಶ್ರೀಯುತ ಪಾವಟೆಯವರು ಕೆಲವು ಸಾಮ್ಯಗಳನ್ನು ತಮ್ಮ ಲೇಖದಲ್ಲಿ ವಿವರಿಸಿರುವರು.

ಈ ಬಗೆಯಾಗಿ ಕೆಲವು ಸಾಮ್ಯಗಳು ತೋರಿ ಬಂದರೂ ಪ್ರಸಾದಿ ಪ್ರಾಣಲಿಂಗಿ ಸ್ಥಳಗಳಿಗೂ ಗೃಹಸ್ಥಾಶ್ರಮ ಧರ್ಮಕ್ಕೂ ಬಹಳ ಭೇದವಿರು

ತ್ತದೆ. ಗೃಹಸ್ಥ ಧರ್ಮದ ಪ್ರಕಾರ ಬ್ರಹ್ಮಚಾರಿಯು ಲಗ್ನವನ್ನು ಮಾಡಿ ಕೊಂಡು ಪುತ್ರರನ್ನು ಪಡೆಯತಕ್ಕದ್ದು. ಹೀಗೆ ಪುತ್ರರನ್ನು ಪಡೆಯುವದು ಅವನಿಗೆ ಅವಶ್ಯವಾಗಿದೆ. ಯಾಕಂದರೆ ಅವರೇ ಅವನನ್ನು ಮುಂದೆ ನರಕದ ಬಾಧೆಯಿಂದ ಮುಕ್ತ ಮಾಡತಕ್ಕವರು. ಮತ್ತು ಅವನ ಮರಣದ ತರುವಾಯ ಅವರೇ ಅವನಿಗೆ ಶ್ರಾದ್ಧಾದಿ ಕಾರ್ಯಗಳನ್ನು ಮಾಡತಕ್ಕವರು. ಅದರಂತೆಯೇ ಸ್ತ್ರೀಯಳಾದರೂ ಲಗ್ನವಾಗುವದು ಅವಶ್ಯವು. ಅವಳು ಗಂಡನ ಅರ್ಧಾಂಗಿನಿಯಾಗಿ, ಅವನ ಪುಣ್ಯಪಾಪಗಳ ಫಲಗಳನ್ನು ತಾನೂ ಅವನೊಂದಿಗೆ ಅನುಭವಿಸುತ್ತ ಮುಕ್ತಳಾಗತಕ್ಕದ್ದು. ಈ ಪ್ರಕಾರ ಉಭಯತರೂ ಗೃಹಸ್ಥಾಶ್ರಮಿಗಳಾಗಿ ಅತಿಥಿಗಳನ್ನು ಸತ್ಕರಿಸುತ್ತ ದಾನ ಧರ್ಮಾದಿಗಳನ್ನು ಮಾಡುತ್ತ ಜೀವಿಸತಕ್ಕದ್ದು. ಹೀಗೆ ವರ್ಣಾಶ್ರಮ ಧರ್ಮಗಳಲ್ಲಿಯ ಗೃಹಸ್ಥ ಧರ್ಮದ ವಿಚಾರಗಳಿವೆ. ಆದರೆ ಷಟ್‌ಸ್ಥಲ ಶಾಸ್ತ್ರದ ಪ್ರಕಾರ ವೀರಶೈವರಲ್ಲಿ ಭಿನ್ನ ಬಗೆಯ ವಿಚಾರಗಳಿರುತ್ತವೆ.

ಷಟ್‌ಸ್ಥಲ ಶಾಸ್ತ್ರದ ಪ್ರಕಾರ ವೀರಶೈವನು ಲಗ್ನವಾಗಬೇಕೆಂಬ ನಿರ್ಬಂಧವಿಲ್ಲ. ಅವನು ಗೃಹಸ್ಥಾಶ್ರಮವನ್ನು ಸ್ವೀಕರಿಸುವದು ಅಥವಾ ಬಿಡುವದು ಅವನ ಇಚ್ಛೆಯ ಮೇಲೆ. ಪುತ್ರರ ಅವಶ್ಯಕತೆಯು ಅವನಿಗಿಲ್ಲ. ಯಾಕಂದರೆ ವೀರಶೈವನು ಮುಕ್ತನಾಗುವದು ಅಥವಾ ಮುಕ್ತನಾಗದೇ ಇರುವದು ಅವನ ಕೃತಿಗಳ ಮೇಲೆ ಅವಲಂಬಿಸಿದೆ ಹೊರತು ಎರಡನೆಯವರ ಮೇಲೆ ಅವಲಂಬಿಸಿಲ್ಲ. ಆದ್ದರಿಂದ ಮಕ್ಕಳು ಮಾಡತಕ್ಕ ಪಿಂಡ ದಾನಾದಿಗಳು ಷಟ್‌ಸ್ಥಲ ಶಾಸ್ತ್ರದ ಪ್ರಕಾರ ಅನಾವಶ್ಯಕವು. ಆದ್ದರಿಂದ ವೀರಶೈವ ಧರ್ಮದ ಪ್ರಕಾರ ಶ್ರಾದ್ಧಾದಿ ಕರ್ಮಗಳು ಇರುವದಿಲ್ಲ. ಆದರೆ ವೀರಶೈವನು ಶಿವಾರ್ಪಣ ಬುದ್ಧಿಯಿಂದ ತನ್ನ ಕಾಯಕಗಳನ್ನು ಯಾವಾಗಲೂ ಮಾಡತಕ್ಕದ್ದು. ಅದೇ ಮೇರೆಗೆ ಲಿಂಗಭೋಗೋಪಭೋಗಿಯಾಗಿ ಅವನು ತನ್ನ ಇಷ್ಟ ಪದಾರ್ಥಗಳನ್ನು ಭೋಗಿಸತಕ್ಕದ್ದು. ಹೀಗೆ ಇರುವದೇ ಅವನ ಸಂಸಾರ ಧರ್ಮವು. ಈ ನಿಯಮಗಳು ಸ್ತ್ರೀಯರಿಗೂ ಹತ್ತುತ್ತವೆ. ಸ್ತ್ರೀಯಳು ಲಗ್ನವಾಗುವದು ಅಥವಾ ಬಿಡುವದು ಅವಳ ಇಚ್ಛೆಯ ಮೇಲೆ ಇರುತ್ತದೆ. ಅವಳು ಇಚ್ಛಿಸಿದರೆ ಅವಿವಾಹಿತಳಾಗಿ ಕಡೆಯ ವರೆಗೂ ಉಳಿಯಬಹುದು. ಈ ಬಗೆಯ ಉದಾಹರಣೆಗಳು ವೀರಶೈವರಲ್ಲಿ ಅನೇಕವಿವೆ. ಆಕೆಯು ತನ್ನ ಧರ್ಮಾಚಾರಗಳನ್ನು

ಅನುವರ್ತಿಸುತ್ತ ಮೋಕ್ಷವನ್ನು ಹೊಂದಬಹುದು. ವರ್ಣಾಶ್ರಮ ಧರ್ಮಗಳಲ್ಲಿ ಹೇಳುವಂತೆ, ಆಕೆಯು ತನ್ನ ಪತಿಯ ಕ್ರಿಯೆಗಳ ಮೇಲೆ ಅವಲಂಬಿಸಿಕೊಂಡು ಶ್ರೇಷ್ಠ ಸ್ಥಿತಿಯನ್ನು ಹೊಂದುವಳೆಂಬುದು ಷಟ್‌ಸ್ಥಲ ಶಾಸ್ತ್ರಕ್ಕೆ ಅಸಮ್ಮತವಾದದ್ದು. ಆಕೆಯು ತನ್ನ ಸ್ವಂತ ಆಚಾರಗಳ ಮೇಲೆ ಅವಲಂಬಿಸಿ ಐಕ್ಯಸ್ಥಿತಿಯನ್ನು ಹೊಂದತಕ್ಕದ್ದು. ಈ ದೃಷ್ಟಿಯಿಂದ ಸ್ತ್ರೀಯಳು ತನ್ನ ಪತಿಯ ಅರ್ಧಾಂಗಿನಿಯಾಗಲಾರಳು. ಸ್ತ್ರೀಯಳಿಗೆ ಪುರುಷನಂತೆಯೇ ಮಂತ್ರೋಪದೇಶವನ್ನು ಸಹ ಮಾಡಲು ಹಕ್ಕುದಾರಳಿದ್ದಾಳೆ. ಆಕೆಯು ಶ್ರೇಷ್ಠ ಮಠಾಧಿಕಾರಿಯೂ ಆಗಬಹುದು. ಹೀಗೆ ಸ್ತ್ರೀಯರು ಆದದ್ದರ ಉದಾಹರಣೆಗಳೂ ವೀರಶೈವ ಸಮಾಜದಲ್ಲಿ ಇವೆ. ಈ ಪ್ರಕಾರ ಷಟ್‌ಸ್ಥಲ ಶಾಸ್ತ್ರದ ವಿಚಾರಗಳಿವೆ. ಇವುಗಳಿಗೂ ಗೃಹಸ್ಥ ಧರ್ಮಕ್ಕೂ ಎಷ್ಟು ವ್ಯತ್ಯಾಸಗಳಿವೆ ಎಂಬದನ್ನು ವಾಚಕರು ಕೂಡಲೆ ಅರಿಯಬಹುದಾಗಿದೆ.

ಇದೇ ಮೇರೆಗೆ ಪ್ರಾಣಲಿಂಗಿಸ್ಥಲಕ್ಕೂ ಗೃಹಸ್ಥಾಶ್ರಮಕ್ಕೂ ಬಹಳ ಅಂತರವಿದೆ. ಪ್ರಾಣಲಿಂಗಿಯು ಶ್ರೀಯುತ ಪಾವಟೆಯವರು ವಿವರಿಸಿದಂತೆ ಒಳ ಹೊರಗಣ ಪೂಜೆಯಿಂದ ಎಡಬಿಡದೆ ಶಿವಧ್ಯಾನವನ್ನು ಮಾಡತಕ್ಕನು. ಪ್ರಪಂಚದ ವ್ಯಾಮೋಹವನ್ನು ಬಿಟ್ಟುಕೊಟ್ಟು ಅಂತರಂಗದಲ್ಲಿ ಅವನು ಧ್ಯಾನಾಸಕ್ತನಾಗಿರತಕ್ಕದ್ದು. ಮತ್ತು ಇಂದ್ರಿಯಗಳಲ್ಲೆಲ್ಲ ಶಿವಲಿಂಗವ್ಯಾಪ್ತಿಯನ್ನು ಲಕ್ಷಿಸಿ ಆ ವ್ಯಾಪಾರಗಳನ್ನು ಶಿವಮಯವನ್ನಾಗಿ ಮಾಡತಕ್ಕದ್ದು. ಇವು ಪ್ರಾಣಲಿಂಗಿಯ ಲಕ್ಷಣಗಳು. ಇವುಗಳ ಮೇಲಿಂದ ಪ್ರಾಣಲಿಂಗಿಸ್ಥಲವು ಮುಖ್ಯವಾಗಿ ಅಂತರಂಗದ ವ್ಯಾಪಾರಕ್ಕೆ ಸಂಬಂಧಪಟ್ಟದ್ದೆಂದು ತಿಳಿದು ಬರುತ್ತದೆ. ಇದು ಆತ್ಮಾರ್ಪಣ ಭಾವವುಳ್ಳ ಪ್ರಸಾದಿಸ್ಥಲದ ಮುಂದಿನ ಮೆಟ್ಟಿಲು. ಆದರೆ ಇಷ್ಟು ಸೂಕ್ಷ್ಮ ವಿಚಾರಗಳು ಗೃಹಸ್ಥಾಶ್ರಮ ಧರ್ಮದಲ್ಲಿ ತೋರಿ ಬರುವದಿಲ್ಲ. ಶ್ರೀಯುತ ಪಾವಟೆಯವರು ಈ ಬಗ್ಗೆ ಒಂದು ಉಕ್ತಿಯನ್ನು ತಮ್ಮ ಲೇಖದಲ್ಲಿ ವಿವರಿಸಿ ಅನ್ನುವದೇನಂದರೆ "ಸರ್ವಮನ್ಯತ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜ ಎಂಬ ಗೀತೋಕ್ತಿಯು ವೀರಶೈವರ ಅನನ್ಯಶಿವಭಕ್ತಿ ಮಾರ್ಗವನ್ನು ಹೋಲುವದು. ಆದರೆ ವೀರಶೈವವು ಗೀತಾ ಧರ್ಮಕ್ಕಿಂತ ಅಂತರಂಗಿಕವಾಗಿಹುದು" ಎಂದು ಅವರು ಅಂದಿರುವರು. ಅವರ ಈ ಅಭಿಪ್ರಾಯವು ತೀರ ನಿಜವಿರುತ್ತದೆ.

## ವಾನಪ್ರಸ್ಥಾಶ್ರಮ.

ಮುಂದೆ ಶ್ರೀಯುತ ಪಾವಟೆಯವರು ಶರಣಸ್ಥಲವನ್ನು ವಾನಪ್ರಸ್ಥಾಶ್ರಮಕ್ಕೆ ಹೋಲಿಸಿರುವರು. ಆದರೆ ಹೋಲಿಕೆಗಿಂತಲೂ ಮಹತ್ವದ ವ್ಯತ್ಯಾಸಗಳು ಇವುಗಳಲ್ಲಿದ್ದದ್ದನ್ನು ಅವರೇ ಉಲ್ಲೇಖಿಸಿರುವರು. ಅವರು ಅಭಿಪ್ರಾಯಪಟ್ಟಿರುವದೇನೆಂದರೆ, "ಕ್ರಿ ಸ್ತ್ರೀ ಸಂಗವರ್ಜನವೂ ತತ್ವ ಚಿಂತನವೂ ಇವೆರಡನ್ನುಳಿದು ವಾನಪ್ರಸ್ಥ ಧರ್ಮಗಳು ಶರಣಸ್ಥಲದ ಆಚರಣದ ಜ್ಞಾನಮಾರ್ಗವನ್ನು ಅನುಸರಿಸಿಲ್ಲ. ಶರೀರ ಕ್ಲೇಶಕರವಾದ ಆಯಾಸಮಯವಾದ ಅನೇಕ ದೇವತಾರ್ಚನದಲ್ಲಿ ವಾನಪ್ರಸ್ಥನು ತೊಡಕಿ ಏಕೇಶ್ವರ ಭಕ್ತಿಯೂ ಆ ಭಕ್ತಿಯಲ್ಲಿ ಈಶ್ವರನಿಗೆ ಸ್ವಾತ್ಮಾರ್ಪಣವೂ ವನಸ್ಥ ಧರ್ಮದಲ್ಲಿ ಕಂಡು ಬರುವದಿಲ್ಲ. ವೊಮ್ಮಕ್ಕಳನ್ನು ಕಂಡ ಬಳಿಕ ವನವನಾಶ್ರಯಿಸಿ ಭೂಶಯ್ಯಾ ಅಜಿನ ಧಾರಣಾದಿ ವ್ರತಗಳನ್ನಾಚರಿಪುದರೊಡನೆ ಶರಣಸ್ಥಲದ ಶಿವಜಿಜ್ಞಾಸೆಯೂ, ಶೀಲಸಂಪತ್ತೂ, ಇಲ್ಲದರಿಂದ ಇದು ಕಷ್ಟಮಯವಾಗಿದೆ." ಎಂದು ಶ್ರೀಯುತ ಪಾವಟೆಯವರು ಉಲ್ಲೇಖಿಸಿ ಶರಣಸ್ಥಲದ ಉತ್ಕೃಷ್ಟತೆಯನ್ನು ತೋರಿಸಿರುತ್ತಾರೆ. ವಾನಪ್ರಸ್ಥಾಶ್ರಮಿಯು ವನದಲ್ಲಿದ್ದುಕೊಂಡು ತಪಶ್ಚರ್ಯಗಳನ್ನು ಆಚರಿಸತಕ್ಕದ್ದು, ವನ್ಯಾಹಾರವನ್ನು ಸೇವಿಸತಕ್ಕದ್ದು, ಜಟಾಧಾರಿಯಾಗಿರತಕ್ಕದ್ದು. ಈ ಪ್ರಕಾರ ಅವನ ಆಚರಣೆಯು ಇರತಕ್ಕದ್ದು. ಆದರೆ ಷಟ್‌ಸ್ಥಲದ ಪ್ರಕಾರ ಶರಣನು ಅರಣ್ಯಗಳಲ್ಲಿ ಹೋಗುವದು ಅವಶ್ಯವಿಲ್ಲ. ಅವನು ಸ್ವಗ್ರಾಮ ನಗರಗಳಲ್ಲಿ ವಾಸವಾಗಿದ್ದುಕೊಂಡು ತನ್ನ ಆಚರಣೆಗಳನ್ನು ಆತಂಕವಿಲ್ಲದೆ ನಡಿಸಬಹುದು. ಈ ಪ್ರಕಾರ ಅವನು ಲೋಕದಲ್ಲಿದ್ದರೂ ಅದರಲ್ಲಿ ಇಲ್ಲದಂತೆ ಅವನು ವರ್ತಿಸತಕ್ಕದ್ದು. ಹ್ಯಾಗೆ ಜಲದಲ್ಲಿ ತಾವರೆಯು ಹೊದ್ದಿಯೂ ಹೊದ್ದದಂತೆ ಇರುತ್ತದೋ, ಹ್ಯಾಗೆ ಗಾಳಿಯು ದೂಳವನ್ನು ಹೊದ್ದಿರುವದಿಲ್ಲವೋ, ಹಾಗೆ ಶರಣನು ಲೋಕವನ್ನು ಬಳಸಿಯೂ ಬಳಸದಂತಿರಬೇಕು. ಹೀಗೆ ಆಚರಿಸುವ ಶರಣನು ವನದಲ್ಲಿದ್ದರೂ ಅಷ್ಟೇ, ಗ್ರಾಮದಲ್ಲಿದ್ದರೂ ಅಷ್ಟೇ.

## ಸನ್ಯಾಸಾಶ್ರಮ.

ಮುಂದೆ ಶ್ರೀಯುತ ಪಾವಟೆಯವರು ಐಕ್ಯಕ್ಕೂ ಸನ್ಯಾಸಕ್ಕೂ ಹೋಲಿಸಿರುವರು. ಆದರೆ ಈ ಬಗ್ಗೆ ಅವರು ಅನ್ನುವದೇನಂದರೆ:—

"ಐಕ್ಯಕ್ಕೂ ಸನ್ಯಾಸಕ್ಕೂ ಬಹಳ ವ್ಯತ್ಯಾಸವಿದೆ. ಸರ್ವವೂ ಬ್ರಹ್ಮವು ಯವೆಂಬ ಭಾವನೆಯಲ್ಲಿ ಉಭಯಕ್ಕೂ ಸಮಾನವಾಗಿದೆ. ಸನ್ಯಾಸವು ಪೂರ್ವ ಧರ್ಮ ಅಂದರೆ ಬ್ರಹ್ಮಚರ್ಯ ಗೃಹಸ್ಥ ವಾನಪ್ರಸ್ಥ ಧರ್ಮಗಳನ್ನು ನೀತಿಗಳೆಯುವದು............ ದ್ವೈತಾದ್ವೈತಾದಿ ಮತಗಳ ಸನ್ಯಾಸಿಯು ಪೂರ್ವದಿಂದನುಷ್ಠಿಸುತ್ತ ಬಂದ ಧರ್ಮಗಳನ್ನೂ ಆ ಧರ್ಮ ಸಂಪಾದನಕ್ಕೆ ಸಾಧನವಾದ ಶಿಖಾಯಜ್ಞೋಪವೀತಗಳನ್ನೂ ಪರಿತ್ಯಜಿಸಿ ಬ್ರಹ್ಮಚಿಂತನಾದ್ಯನುಷ್ಠಾನಂಗೆಯ್ವನು. ಅಗ್ನಿಹೋತ್ರಾದಿ ಧರ್ಮಗಳನ್ನು ಪರಿತ್ಯಜಿಸುವನು. ಐಕ್ಯನು ಹಾಗಲ್ಲ. ಶಿವಲಿಂಗ ಧಾರಣಾದಿ ಧರ್ಮವೂ ಅಷ್ಟಾವರಣ ಪಂಚಾಚಾರ ಪರಾಯಣತೆಯೂ ಹಿಂದಿನ ಐದು ಸ್ಥಳಗಳಂತೆ ಐಕ್ಯದಲ್ಲಿಯೂ ಉಂಟು." ಈ ಪ್ರಕಾರ ಶ್ರೀಯುತ ಪಾವಟೆಯವರು ಮಹತ್ವದ ವ್ಯತ್ಯಾಸಗಳನ್ನು ತೋರಿಸಿರುವರು. ಸನ್ಯಾಸಿಯು ತನ್ನ ಮೊದಲಿನ ಶಿಖಾ ಯಜ್ಞೋಪವೀತಾದಿಗಳನ್ನು ಬಿಟ್ಟುಕೊಡತಕ್ಕದ್ದು. ಮತ್ತು ಒಂದೇ ಊರಲ್ಲಿ ಇರದೆ ಯಾವಾಗಲೂ ಭಿಕ್ಷಾಪಾತ್ರನಾಗಿ ಗ್ರಾಮಗ್ರಾಮಗಳನ್ನು ಸಂಚರಿಸತಕ್ಕದ್ದು. ಹೀಗೆ ಅವನ ಧರ್ಮವಾಗಿದೆ. ಆದರೆ ಈ ವಿಚಾರಗಳೆಲ್ಲ ಷಟ್‌ಸ್ಥಲ ಶಾಸ್ತ್ರಕ್ಕೆ ತೀರ ಹೊರತಾದವುಗಳು. ವೀರಶೈವ ಸನ್ಯಾಸಿಗಳು ಬೇರೆ ಸನ್ಯಾಸಿಗಳಂತೆ ಒಂದೆಡೆಗೆ ಇರದೆ ಗ್ರಾಮಾಂತರಗಳಲ್ಲಿ ಸಂಚರಿಸುವದು ಅವಶ್ಯವಿಲ್ಲ. ಅವರು ಒಂದೇ ಸ್ಥಳದಲ್ಲಿದ್ದುಕೊಂಡು, ತಮ್ಮ ಷಟ್‌ಸ್ಥಲಾಚರಣೆಯನ್ನು ನಿರ್ವಹಿಸಬಹುದಾಗಿದೆ. ಆದರಂತೆಯೇ ಅವರು ತಮ್ಮ ಮೊದಲಿನ ಕ್ರಿಯಾ ಕರ್ಮ ಪೂಜಾದಿಗಳನ್ನು ತೊರೆಯಕೂಡದು. ಈ ಪ್ರಕಾರ ಐಕ್ಯ ಸ್ಥಲಕ್ಕೂ ಸನ್ಯಾಸ ಧರ್ಮಕ್ಕೂ ಬಹಳ ಭೇದವಿದೆ.

## ಮುಗಿತಾಯ.

ಈ ಮೇರೆಗೆ ಷಟ್‌ಸ್ಥಲದ ತತ್ವಗಳಿಗೂ ವರ್ಣಾಶ್ರಮ ಧರ್ಮಗಳಿಗೂ ಮಹದಂತರವಿದೆಂಬುದು ಸ್ಪಷ್ಟವಾಗುತ್ತದೆ. ಅವು ಒಂದನ್ನೊಂದು ಅವಲಂಬಿಸಿಲ್ಲ. ಅವುಗಳ ಮೂಲತತ್ವಗಳೇ ತೀರ ಭಿನ್ನವಾಗಿವೆ. ವರ್ಣಾಶ್ರಮ ಧರ್ಮಗಳು ವೀರಶೈವನಿಗೆ ಸಂಬಂಧಪಟ್ಟವಲ್ಲ. ಆದ್ದರಿಂದ ಅವನು ಅತಿ ವರ್ಣಾಶ್ರಮಿ ಎಂದೆನಿಸಿಕೊಳ್ಳುತ್ತಾನೆ. ಈ ಬಗ್ಗೆ ಆಧಾ

ರಗಳನ್ನು ಶ್ರೀಯುತ ಸಾವಟಿಯವರು ತಮ್ಮ ಲೇಖದಲ್ಲಿ ಕೊಟ್ಟಿರುವರು. ವಾಚಕರು ಅವುಗಳನ್ನು ನೋಡತಕ್ಕದ್ದು.

ವರ್ಣಾಶ್ರಮ ಧರ್ಮಗಳು ಕೇವಲ ಬಾಹ್ಯಾಚರಣೆಗಳಿವೆ. ಆದರೆ ಷಟ್‌ಸ್ಥಲದ ತತ್ವಗಳು ಸಂಪೂರ್ಣ ಅಧ್ಯಾತ್ಮಿಕವಾಗಿವೆ. ಅವುಗಳು ಮನಸ್ಸು, ಬುದ್ಧಿ, ಶರೀರ, ಮತ್ತು ಶಕ್ತಿ ಇವುಗಳ ಲಿಂಗ ವಿಕಾಸದ ರೀತಿಗಳನ್ನು ಹೇಳಿಕೊಡುತ್ತವೆ. ಷಟ್‌ಸ್ಥಲವು ಮನುಷ್ಯನ ಒಳಹೊರಗಿನ ಸಂಬಂಧವನ್ನರುಹಿಸಿಕೊಟ್ಟು ಅವನು ಹ್ಯಾಗೆ ಪ್ರಪಂಚದಲ್ಲಿ ನಡೆಯಬೇಕೆಂಬುದನ್ನು ತಿಳಿಸಿಕೊಡುತ್ತದೆ. ವರ್ಣಾಶ್ರಮ ಧರ್ಮಗಳು ಒಂದು ಕಾಲದ ಹಿಂದೂ ಸಮಾಜದಲ್ಲಿ ಆಗಿನ ಪರಿಸ್ಥಿತಿಗೆ ಅನುಸರಿಸಿ ಮಾಡಿದ ಸಮಾಜ ವ್ಯವಸ್ಥೆಯಾಗಿರುತ್ತದೆ. ಆದರೆ ಈ ವ್ಯವಸ್ಥೆಯು ಮುಂದೆ ಕೆಟ್ಟು ಜಾತಿಭೇದಗಳನ್ನುಂಟುಮಾಡಲು ಕಾರಣವಾಯಿತು. ಈ ಭೇದಗಳು ಮನುಷ್ಯನ ಗುಣಕರ್ಮಗಳ ಮೇಲೆ ಅವಲಂಬಿಸಿರದೆ ಜನ್ಮಮಾತ್ರದಿಂದ ಉಂಟಾದ ಕೃತ್ರಿಮ ವಿಚಾರಗಳನ್ನೊಳಕೊಂಡಿತು. ಈ ಬಗೆಯ ವಿಚಾರಗಳು ಒಮ್ಮೆ ಸಮಾಜದಲ್ಲಿ ರೂಢವಾದ ಕೂಡಲೆ ಅವುಗಳು ಹೆಚ್ಚೆಚ್ಚು ಪಸರಿಸುತ್ತ ಹೋಗಿ ಅಸಂಖ್ಯ ಪಂಗಡ ಉಪಪಂಗಡಗಳು ಉಂಟಾಗಲಿಕ್ಕೆ ಕಾರಣವಾದವು. ಹಿಂದೂ ಸಮಾಜವು ಭಿನ್ನಭಿನ್ನವಾಯಿತು. ಐಕ್ಯವು ಮುರಿದು ಹೋಯಿತು. ಇದರಿಂದ ನಿಜವಾದ ಧಾರ್ಮಿಕ ಜ್ಯೋತಿಯು ಸಮಾಜದಲ್ಲಿ ಅಡಗಿತು. ಈ ಸ್ಥಿತಿಯಾದ ಕೂಡಲೆ ಹಿಂದುಸ್ಥಾನವು ಪರಚಕ್ರಗಳ ದಾಳಿಗೆ ಈಡಾಗಿ ಸಮಾಜದಲ್ಲಿ ಏನೂ ಬಂಧನವಿಲ್ಲದ ಕಾರಣ ನಮ್ಮ ದೇಶವು ಅನ್ಯರ ಪಾದಾಕ್ರಾಂತವಾಗಲಿಕ್ಕೆ ಕಾರಣವಾಯಿತು.

ಆದರೆ ವರ್ಣಾಶ್ರಮ ಧರ್ಮಗಳ ಸೋಂಕು ಆಗಮ ಧರ್ಮಗಳಲ್ಲಿ ಮಾತ್ರ ಬಹಳ ಕಡಿಮೆ ಪ್ರಮಾಣದಿಂದಿರುತ್ತದೆ. ದಕ್ಷಿಣದ ಶಿವಸಿದ್ಧಾಂತಿಗಳಲ್ಲಿಯೂ ಆರಾಧ್ಯರಲ್ಲಿಯೂ, ಕೆಲಮಟ್ಟಿಗಿದ್ದರೂ ಅತ್ಯಲ್ಪವಾಗಿದೆ. ಆದ್ದರಿಂದ ಈ ಸಮಾಜಗಳು ಪ್ರಬಲವಾಗಿದ್ದ ಆಂಧ್ರ ಮತ್ತು ತಮಿಳು ದೇಶಗಳಲ್ಲಿ ಧಾರ್ಮಿಕ ಉಚ್ಚ ಭಾವನೆಯು ಸಾಮಾನ್ಯ ಜನರಲ್ಲಿ ಸಹ ಪ್ರಬಲಗೊಂಡು ಅಲ್ಲಿ ಅನೇಕ ಸಾಧು ಸತ್ಪುರುಷರೂ, ಕವಿಗಳೂ ಆದದ್ದು ತೋರಿಬರುತ್ತದೆ. ವೀರಶೈವರು ಈ ವರ್ಣಾಶ್ರಮ ಧರ್ಮಗ

ಳನ್ನು ಸಂಪೂರ್ಣವಾಗಿ ಪರಿತ್ಯಜಿಸಿ ಷಟ್‌ಸ್ಥಲದ ತತ್ವಗಳನ್ನು ಸಮಾಜದಲ್ಲಿ ಪಸರಿಸಿದರು. ಈ ಕಾರ್ಯವು ಶ್ರೀ ಬಸವೇಶ್ವರನ ಕಾಲದಲ್ಲಿ ಬಹು ವೇಗದಿಂದ ಸಾಗಿತು. ಆಗ ಕೇವಲ ಆಚಾರ, ಗುಣ, ನೀತಿಗೆ ಪ್ರಾಮುಖ್ಯವನ್ನು ಕೊಡುತ್ತಿದ್ದ ಕಾರಣ ಸಮಾಜದಲ್ಲಿ ಅಸಂಖ್ಯ ಸಾಧುಸತ್ಪುರುಷರು ಹುಟ್ಟಿ ಕರ್ನಾಟಕ ಭಾಷೆಯಲ್ಲಿ ಅಗಣಿತ ಗ್ರಂಥಗಳನ್ನು ಲಿಖಿಸಿದರು. ಮತ್ತು ಸಮಾಜದಲ್ಲಿ ಐಕ್ಯವು ಪ್ರಬಲಿಸಿತು. ಆದ್ದರಿಂದ ವೀರಶೈವ ಸಮಾಜವನ್ನು ನುಗ್ಗುನುರಿ ಮಾಡಬೇಕೆಂದಿದ್ದ ರಾಜರನ್ನು ಸಹ ಅದು ಎದುರಿಸುವಷ್ಟು ಅಸಾಧಾರಣ ಸಾಮರ್ಥ್ಯವನ್ನು ಪಡೆಯಿತು. ಈ ಮೇರೆಗೆ ಷಟ್‌ಸ್ಥಲ ಶಾಸ್ತ್ರದ ಮಹತ್ತಾದ ತತ್ವಗಳು ಕರ್ನಾಟಕದಲ್ಲಿ ಅತ್ಯಂತ ಮಹತ್ವದ ರಾಜಕೀಯ ಸಾಮಾಜಿಕ ಮತ್ತು ಧಾರ್ಮಿಕ ಕ್ರಾಂತಿಗಳನ್ನುಂಟುಮಾಡಲು ಕಾರಣವಾಗಿರುತ್ತವೆ.

ಆದರೆ ಇತ್ತಿತ್ತ ಈ ಷಟ್‌ಸ್ಥಲ ಶಾಸ್ತ್ರದ ನಿಜತತ್ವಗಳು ಅಪರಿಚಿತವಾಗಿ ಉಳಿದಿರುವದರಿಂದ ವರ್ಣಾಶ್ರಮ ಧರ್ಮದ ಪರಿಚಯವನ್ನು ಮಾತ್ರ ಮಾಡಿಕೊಂಡಿದ್ದ ಕೆಲವು ಚಳವಳಿಗಾರರು ವೀರಶೈವ ಸಮಾಜದಲ್ಲಿ ಅದಕ್ಕೆ ಏನೂ ಸಂಬಂಧವಿಲ್ಲದ ತತ್ವಗಳನ್ನು ಪ್ರಸಾರಗೊಳಿಸುವದರಲ್ಲಿ ತತ್ಪರರಾಗಿದ್ದಾರೆ. ಇದು ಅತ್ಯಂತ ಶೋಚನೀಯವಾಗಿದೆ. ಈ ಜನರು ವರ್ಣಾಶ್ರಮ ಧರ್ಮಗಳ ಸಂಕೋಲೆಯಿಂದ ವೀರಶೈವ ಸಮಾಜವನ್ನು ಪುನಃ ಬಿಗಿಯಲೆಣಿಸಿದ್ದಾರೆ. ಇದು ವೀರಶೈವ ಸಮಾಜದ ಅಧಃಪಾತವೇ ಸರಿ. ಆದರೆ ವೀರಶೈವ ಧರ್ಮದ ನಿಜವಾದ ಪ್ರಕಾಶವನ್ನು ಹಿಂದುಸ್ತಾನದಲ್ಲಿ ಹಬ್ಬಿಸಬೇಕಾದರೆ ಅದರ ವೈಶಿಷ್ಟ್ಯವಾದ ಷಟ್‌ಸ್ಥಲ ಶಾಸ್ತ್ರದ ಮರ್ಮಗಳನ್ನು ಪ್ರಕಟಪಡಿಸುವದೊಂದೇ ಮುಖ್ಯ ಮಾರ್ಗವಾಗಿದೆ. ಇತ್ತ ಕಡೆಗೆ ನಮ್ಮ ವೀರಶೈವ ವಿದ್ವಾಂಸರೂ, ಮಠಾಧಿಪತಿಗಳೂ, ಪ್ರಮುಖರೂ ಮನಸ್ಸು ಹಾಕುವರೆಂದು ನಾವು ಹಾರೈಸಿದ್ದೇವೆ.

# ಶ್ರೀ ಬಸವಾವತಾರಕ್ಕೆ ಅಧ್ಯಾತ್ಮಿಕ ಅರ್ಥ.

ಎತ್ತಿಬರೆದವ: — ಶ್ರೀ ಗುರಸಿದ್ದಪ್ಪ ಬಸವಪ್ಪ ಬಳ್ಳಾರಿ ಮು. ಗದಗ.



ವಚನ ವಾಙ್ಮಯವು ಕನ್ನಡ ಭಾಷೆಯಲ್ಲಿ ಅತ್ಯಂತ ಅಮೌಲ್ಯವಾಗಿದೆ. ಅದರ ಪಠನವು ಯಾವಾಗಲೂ ಬೋಧಪ್ರದವೂ, ಆಲ್ಹಾದದಾಯಕವೂ, ಇರುತ್ತದೆ. ಅದು ಅತ್ಯಂತ ಮಹತ್ವದ ಅಧ್ಯಾತ್ಮಿಕ ತತ್ವಗಳನ್ನು ಚಿತ್ರವಿಚಿತ್ರವಾಗಿ ನಾನಾವಿಧ ರೀತಿಯಿಂದ ಓದುಗರ ಮನಸ್ಸಿನ ಮೇಲೆ ಚನ್ನಾಗಿ ನಡುವಂತೆ ವಿವರಿಸುಸುತ್ತದೆ. ಈ ಅದರ ಶೈಲಿಯೇ ಬೇರೆ. ವಚನಕಾರರಲ್ಲಿ ಶ್ರೀ ಕಾಡಸಿದ್ಧೇಶ್ವರರು ಅತ್ಯಂತ ಪ್ರಸಿದ್ಧರಾಗಿದ್ದಾರೆ. ಅವರ ವಚನಗಳಲ್ಲೆಲ್ಲ ಬೆಡಗುಗಳು ತುಂಬಿಹೋಗಿವೆ. ಅವುಗಳಲ್ಲಿ ಒಂದನ್ನು ನಾನು ಶಿವಾನುಭವದ ವಾಚಕರಿಗೋಸ್ಕರ ಇಲ್ಲಿ ಉದ್ಧರಿಸುತ್ತೇನೆ. ಇದರಲ್ಲಿ ಮನುಷ್ಯನ ಅಧ್ಯಾತ್ಮಿಕ ಮಾರ್ಗವು ಬಹು ವಿಶದವಾಗಿ ವರ್ಣಿಸಲ್ಪಟ್ಟಿದೆ. ಈ ವಚನದಲ್ಲಿ ಹೇಳಿರುವದೇನಂದರೆ— ಮನುಷ್ಯನು ತನ್ನ ನಿಜ ಸ್ವರೂಪವನ್ನು ಮರೆದು ಅಷ್ಟಮದಗಳಿಂದ ಕೂಡಿಕೊಂಡು ಕ್ಲೇಶಪಡುತ್ತಾನೆ. ಆದರೆ ಶಿವಕೃಪೆಯಿಂದ ಆತನ ಮನೋಮಧ್ಯದಲ್ಲಿ ಜ್ಞಾನೋದಯವಾಗುತ್ತದೆ. ಆಗ ಆತನಲ್ಲಿ ಲಿಂಗದ ಕಳೆಯು ಉದಯಿಸಲು ಅಷ್ಟವಿಧ ಮದಗಳು ದೂರವಾಗುವವು. ಮತ್ತು ಅವುಗಳ ಬದಲು ಅಷ್ಟವಿಧ ಭಕ್ತಿಸ್ವರೂಪವಾದ ಅಷ್ಟವಿಧ ಲಿಂಗಗಳು ಉತ್ಪನ್ನವಾಗಿ ಅವುಗಳನ್ನೊಳಕೊಂಡು ನಿರಂಜನ ಲಿಂಗವು ಅವನಲ್ಲಿ ಪ್ರಕಾಶಿಸಹತ್ತುತ್ತದೆ. ಆಗ ಅವನ ಜ್ಞಾನಕರಣಗಳು ಪರಮಾಮೃತ ಬೋಧೆಯನ್ನುಣ್ಣುತ್ತ ಅವನ ದೇಹವನ್ನಾಶ್ರಯಿಸುವವು. ಈ ಪ್ರಕಾರ ಭಕ್ತನ ಪ್ರಗತಿಯು ಇರುತ್ತದೆಂದು ವಚನಕಾರನು ಇಲ್ಲಿ ಹೇಳಿದ್ದಾನೆ.

**ವಚನ:**— ಕಲ್ಯಾಣಪುರದೊಳಗೆ ಬಿಜ್ಜಳಂಕನೆಂಬ ರಾಜನು ಅಷ್ಟವಿಧ ಪ್ರಧಾನರ ಸಮೂಹದಲ್ಲಿ ಶಿವಭಕ್ತಿ ಇಲ್ಲದೆ ರಾಜ್ಯವಾಳುತ್ತಿರ್ಪನು, ಇಂಗಳೇಶ್ವರವೆಂಬ ಪುರದ ವಿಪ್ರರ ಸಂದಣಿಯಲ್ಲಿ ಬಸವೇಶ್ವರನುದ್ಭವಿಸಿ ಕಲ್ಯಾಣಕ್ಕೆ ಬಂದು ಬಿಜ್ಜಳನ ಅಷ್ಟವಿಧ ಪ್ರಧಾನರ ನಷ್ಟವಮಾಡಿ

ನವಮ ಪ್ರಧಾನನಾಗಿ ಬಿಜ್ಜಳನ ರಾಜ್ಯವಾಳುತ್ತ ನಿತ್ಯದಲ್ಲಿ ಹಲವು ಜಂಗಮಕ್ಕೆ ಭೋಜನವ ಮಾಡುತ್ತ ಬಸವಣ್ಣನಿರ್ದನು ಕಲ್ಯಾಣಪುರದಲ್ಲಿ ನೋಡೆಂದ ಕಾಡಿನೊಳಗಾದ ಶಂಕರ ಪ್ರಿಯ ಚನ್ನ ಕದಂಬ ಲಿಂಗ ನಿರ್ವಾಣಿಯ ಪ್ರಭುವೇ,

**ಟೀಕು**:— ಕಲ್ಯಾಣೆಂದಡೆ ಪಂಚಭೂತ ಮಿಶ್ರವಾದ ದೇಹವು. ಅದೆಂತೆಂದೊಡೆ, ಪಿಂಡ ಬ್ರಹ್ಮಾಂಡಯೋ ರೈಕ್ಯಂ, ಎಂದುದಾಗಿ. ಅಂತಪ್ಪ ಪಂಚಭೂತ ಮಿಶ್ರವಾದ ದೇಹವೆಂಬ ನಗರಕ್ಕೆ ಚಿದಂಶಿಕನಾದ ಜ್ಞಾನ ಕಲಾತ್ಮನು ತನ್ನ ನಿಜವ ಮರೆದು ಜೀವಾತ್ಮನೆಂಬರ ಸಾಗಿರ್ದನು ಎಂಬುದೀಗ, ಕಲ್ಯಾಣಪುರದೊಳಗೆ ಬಿಜ್ಜಳನೆಂಬ ರಾಜನು ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಾತ್ಮನೆಂಬ ರಾಜನು ಅಷ್ಟಮದವೆಂಬ ಮಂತ್ರಿಗಳ ಸಂದಣಿಯಲ್ಲಿ ಲಿಂಗಾಂಗ ಸಮರಸದ ಜ್ಞಾನೋದಯವಿಲ್ಲದೆ ಅಜ್ಞಾನದಿಂದ ಅಹಂ ಅಹಂ ಅಹಂ ಎಂದು ಆ ದೇಹದ ಅಭಿಮಾನವ ಪಿಡಿದು ಸಂರಕ್ಷಣೆಯ ಮಾಡುತ್ತಿಹನು ಎಂಬುದೀಗ ಅಷ್ಟವಿಧ ಪ್ರಧಾನರ ಸಮೂಹದಲ್ಲಿ ಶಿವಭಕ್ತಿ ಇಲ್ಲದೆ ರಾಜ್ಯವಾಳುತಿರ್ದನು ಎಂಬ ಶಬ್ದಕ್ಕರ್ಥ. ಅಷ್ಟರಲ್ಲಿಯೇ ಅಂತಪ್ಪ ಜೀವಾತ್ಮನ ಸೂಕ್ಷ್ಮತನುವೆಂಬ ಇಂಗಳೇಶ್ವರಪುರದ ವಿಪ್ರರೆಂದಡೆ ಸಕಲ ಕರಣಂಗಳು ಸಂದಣಿ ಎಂದಡೆ ಆ ಕರಣಂಗಳ ಸಮ್ಮೇಳದಲ್ಲಿ ಸಂಚರಿಸುವ ಮನಸ್ಸು, ಎಲ್ಲಿ ಎಂದಡೆ ಅಂತಪ್ಪ ಜೀವಾತ್ಮನ ಮನೋಮಧ್ಯದಲ್ಲಿ ಶಿವಕೃಪೆಯಿಂ ಸುಜ್ಞಾನೋದಯವಾಗಿ ಎಂಬುದೀಗ ಇಂಗಳೇಶ್ವರಪುರದ ವಿಪ್ರರ ಸಂದಣಿಯಲ್ಲಿ ಬಸವೇಶ್ವರನುದ್ಭವಿಸಿ ಎಂಬಶಬ್ದಕ್ಕರ್ಥ. ಅಂತಪ್ಪ ಸುಜ್ಞಾನ ಸ್ವರೂಪವಾದ ಪ್ರಾಣಲಿಂಗವು ಆ ಜೀವಾತ್ಮನ ಆತ್ಮನಂತರಂಗಕ್ಕೆ ವೇಧಿಸಿ ಮಂತ್ರಿಗಳೆಂಬ ಅಷ್ಟವಿಧ ಮದಂಗಳ ಪ್ರಕೃತಿಯನುಳಿದು ಎಂಬುದೀಗ ಕಲ್ಯಾಣಕ್ಕೆ ಬಂದು ಬಿಜ್ಜಳನ ಅಷ್ಟವಿಧ ಪ್ರಧಾನರ ನಷ್ಟವ ಮಾಡಿ ಎಂಬ ಶಬ್ದಕ್ಕರ್ಥ. ಅಂತಪ್ಪ ಜೀವಾತ್ಮನ ಅಷ್ಟತನುವಿನಲ್ಲಿರುವ ಅಷ್ಟಮದಂಗಳ ಪ್ರಕೃತಿಯನಳಿದು ಆ ಅಷ್ಟಮದ ಸಂಬಂಧವಾದ ಅಷ್ಟತನುವಿನಲ್ಲಿ ಅಷ್ಟವಿಧ ಭಕ್ತಿ ಸ್ವರೂಪವಾದ ಅಷ್ಟವಿಧ ಲಿಂಗವ ಸ್ವಾಯತವ ಮಾಡಿ, ಇಂತೀ ಅಷ್ಟವಿಧ ಭಕ್ತಿಲಿಂಗವನೊಳಕೊಂಡು ತೋರುವ ನಿರಂಜನ ಲಿಂಗದೇಕ ಸ್ವರೂಪ ತಾನಾಗಿ ಆ ಜೀವಾತ್ಮನ ದೇಹಕ್ಕೆ ಅನ್ಯೋದಕ ವಸ್ತ್ರದಿಂದ ರಕ್ಷಣಾವ ಮಾಡುತ್ತಿರ್ದನು. ವೀರಮಹೇಶ್ವರನು ಎಂಬುದೀಗ ನವಮ ಪ್ರಧಾನವಾಗಿ ಬಿಜ್ಜಳನ ರಾಜ್ಯವನಾಳುತ್ತ ಎಂಬ ಶಬ್ದ

ಕ್ಕರ್ಥ. ಸದಾಕಾಲದಲ್ಲಿ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮವೆಂಬ ಜ್ಞಾನಕರಣಂಗಳಿಗೆ ಪರಮಾಮೃತ ಬೋಧೆಯನುಣಿಸುತ್ತ ಆ ದೇಹವನಾಶ್ರಯಿಸಿರುವನು. ಸುಜ್ಞಾನೋದಯವಾದ ವೀರ ಮಹೇಶ್ವರನು ಕಾಣೆಂದು ಶಿಷ್ಯಂಗೆ ಶ್ರೀ ಗುರು ಬೋಧಿಸುತ್ತಿರ್ಪನು. ಎಂಬುದೀಗ ನಿತ್ಯದಲ್ಲಿ ಹಲವು ಜಂಗಮಕ್ಕೆ ಭೋಜನವ ಮಾಡುತ್ತ ಬಸವಣ್ಣನು ಇರ್ಪನು ನೋಡೆಂದ ನಿರ್ಮಾಯ ಪ್ರಭುವೇ ಎಂಬ ಶಬ್ದಕ್ಕರ್ಥ.

---

# ವೀರಶೈವ ವಾಙ್ಮಯ ಸಂಘದ ಸಭೆಯು.

( ಲೇಖಕಃ— ಫ. ಗು. ಹಳಕಟ್ಟಿ ವಿಜಾಪುರ. )

---

ವೀರಶೈವ ಸಮಾಜದ ಧಾರ್ಮಿಕ, ರಾಜಕೀಯ ಮತ್ತು ಸಾಮಾಜಿಕ ಇತಿಹಾಸವನ್ನೂ ಅದರ ಮತತತ್ವಗಳನ್ನೂ ಶೋಧಿಸುವ ಕಾರ್ಯವನ್ನು ಮಾಡಲಿಚ್ಛಿಸುವಂಥವರ ಸಭೆಯನ್ನು ವೀರಶೈವ ವಾಙ್ಮಯ ಸಂಘದ ಪರವಾಗಿ ಇದೇ ಡಿಸೆಂಬರ ತಿಂಗಳಿನಲ್ಲಿ ಏರ್ಪಡಿಸುವ ವಿಚಾರವು ಮಾಡಲ್ಪಟ್ಟಿರುತ್ತದೆ. ಈ ಬಗೆಯ ಪ್ರಯತ್ನವನ್ನು ಈಗ ಕೈಕೊಳ್ಳುವದು ಎಷ್ಟು ಅವಶ್ಯವಾದುದೆಂದು ನಾವು ಬೇರೆ ಹೇಳಬೇಕಾದುದಿಲ್ಲ. ವೀರಶೈವ ಸಮಾಜದಲ್ಲಿ ಈ ಬಗ್ಗೆ ಸುಸಂಘಟಿತ ಪ್ರಯತ್ನಗಳು ಏನೂ ನಡೆದಿರುವದಿಲ್ಲಾದ್ದರಿಂದ ಅದರಲ್ಲಿ ಅನೇಕ ಬಗೆಯ ಧಾರ್ಮಿಕ ಮತ್ತು ಸಾಮಾಜಿಕ ಒಡಕುಗಳು ಉತ್ಪನ್ನವಾಗಲಿಕ್ಕೆ ಕಾರಣವಾಗಿರುತ್ತದೆ. ವೀರಶೈವ ಸಮಾಜದಲ್ಲಿಯ ವಿದ್ವಜ್ಜನರು ಒತ್ತಟ್ಟಿಗೆ ಸೇರಿ ನಿಜತತ್ವಗಳನ್ನು ಕಂಡು ಹಿಡಿದು ಅವುಗಳನ್ನು ಪ್ರಕಟಿಸದ ಹೊರ್ತು ಈ ಬಗೆಯ ತೊಂದರೆಗಳು ದೂರಾಗಲಾರವು.

ಈ ಕಾಲಕ್ಕೆ ವೀರಶೈವ ಸಮಾಜದವರು ಶೋಧಿಸತಕ್ಕ ವಿಷಯಗಳು ಅಸಂಖ್ಯವಾಗಿವೆ. ಅವರ ವಾಙ್ಮಯವು ಇನ್ನೂ ಹೊರಗೆಡವಲ್ಪ

ಟ್ಟಿಲ್ಲ. ಅದನ್ನು ಕಂಡು ಹಿಡಿದು ಅದರ ನಿಜ ಸ್ವರೂಪವನ್ನು ನಾವು ಹೊರಗೆಡವಲಿಕ್ಕೆ ಬೇಕು. ನಮ್ಮಲ್ಲಿಯ ವಿದ್ವಜ್ಜನರು ಅದರಲ್ಲಿಯ ಗ್ರಂಥಗಳನ್ನು ಮನನ ಮಾಡಿಕೊಂಡು ಅವುಗಳ ವಿಚಾರಗಳನ್ನು ಪ್ರಕಟಿಸಲಿಕ್ಕೆ ಬೇಕು. ವೀರಶೈವ ವಾಙ್ಮಯದಲ್ಲಿ ಅಸಂಖ್ಯ ವಚನ ಗ್ರಂಥಗಳೂ, ಸಂಸ್ಕೃತ ಸಿದ್ಧಾಂತಗ್ರಂಥಗಳೂ, ನಾನಾ ಬಗೆಯ ಪುರಾಣಗಳೂ, ಕಾವ್ಯಗ್ರಂಥಗಳೂ ಇದ್ದು, ಅವುಗಳಲ್ಲಿ ಅನೇಕ ಮತವಿಷಗಳು ನಿರೂಪಿಸಲ್ಪಟ್ಟಿವೆ. ಅವುಗಳನ್ನು ಬೇರೆ ಬೇರೆ ಜನರು ಅಭ್ಯಾಸಕ್ಕೋಸ್ಕರ ತೆಗೆದುಕೊಂಡು ಅವುಗಳ ತತ್ವಗಳನ್ನು ಅವರು ಹೊರಗೆಡುವುವದು ಅವಶ್ಯವದೆ. ವೀರಶೈವರಲ್ಲಿ ಈಗ ಕಂಡುಬರುವ ಭಿನ್ನ ಮತಗಳುಳ್ಳ ವಿಷಯಗಳನ್ನು ಸಹ ತೆಗೆದುಕೊಂಡು ಅವುಗಳ ಬಗ್ಗೆಯೂ ಅವರು ಪರಸ್ಪರ ವಿಚಾರ ಮಾಡಿ ಸತ್ಯವಾದುದನ್ನು ದೃಢಪಡಿಸತಕ್ಕದ್ದು. ಈ ಪ್ರಕಾರ ಈವರೆಗೆ ಏನೂ ಪ್ರಯತ್ನಗಳು ನಡೆದಿರುವದಿಲ್ಲಾದ್ದರಿಂದ, ನಮ್ಮಲ್ಲಿ ವಿರಕ್ತರು, ಗುರುವರ್ಗದವರು ಎಂಬ ತಿಕ್ಕಾಟಗಳು, ವೀರಶೈವರ ಧಾರ್ಮಿಕ ವ್ಯಾಜ್ಯಗಳಲ್ಲಿ ಅವರ ಸಾಕ್ಷಿಗಳಲ್ಲಿ ಕಂಡುಬರುವ ಪರಸ್ಪರ ವಿರುದ್ಧತೆಗಳು ಉಂಟಾಗಲಿಕ್ಕೆ ಕಾರಣವಾಗಿರುತ್ತದೆ. ಈ ಸ್ಥಿತಿಯಿಂದ ಯಾವ ಪರಿಣಾಮಗಳಾಗಿವೆಂಬದು ಎಲ್ಲರಿಗೂ ಗೊತ್ತಿದ್ದದ್ದೇ ಇದೆ. ಈ ಸ್ಥಿತಿಯು ದೂರಾಗಬೇಕಾದರೆ, ನಮ್ಮಲ್ಲಿಯ ವಿದ್ವಜ್ಜನರೂ, ಶೋಧಕರೂ ಮೇಲಿಂದಮೇಲೆ ಒತ್ತಟ್ಟಿಗೆ ಸೇರಿ ಮತಭೇದವಿದ್ದ ವಿಷಯಗಳನ್ನು ಚನ್ನಾಗಿ ಚರ್ಚಿಸುವದೊಂದೇ ಉಪಾಯವಾಗಿರುತ್ತದೆ.

ಇದೇ ಮೇರೆಗೆ ವೀರಶೈವ ಧರ್ಮದ ಸಾಮಾಜಿಕ ಮತ್ತು ರಾಜಕೀಯ ಇತಿಹಾಸವನ್ನು ಹೊರಗೆಡುವುವದಾದರೂ ಅತ್ಯಂತ ಮಹತ್ವದ್ದಿದೆ. ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿಯ ಎಷ್ಟೋ ಶಿಲಾಶಾಸನಗಳು ಈ ಮೊದಲಿಗೆ ಪ್ರಕಟವಾಗಿರುತ್ತವೆ. ಮತ್ತು ಪ್ರಕಟವಾಗದೆ ಇದ್ದಂಥವುಗಳಾದರೂ ಅಸಂಖ್ಯಾತವಾಗಿರುತ್ತವೆ. ಇವುಗಳನ್ನು ವೀರಶೈವ ವಿದ್ಯಾವಂತರು ಶೋಧಿಸಿದ್ದಾದರೆ, ಬರೇ ವೀರಶೈವ ಸಮಾಜದ ಇತಿಹಾಸವಷ್ಟೇ ಅಲ್ಲ, ಕರ್ನಾಟಕದ ಇತಿಹಾಸವಾದರೂ ಪ್ರಕಾಶಕ್ಕೆ ಬೀಳುವಂತೆ ಇದೆ. ಈ ಬಗೆಯ ಲೇಖಗಳು ಶಿವಾನುಭವದ ಸಂಚಿಕೆಗಳಲ್ಲಿ ಅನೇಕ ಬಂದಿದ್ದು ಅವು ವಾಚಕರ ನೆನಪಿನಲ್ಲಿರಬಹುದು. ಅದ್ದರಿಂದ ಅವರು ಈ ಮಹತ್ವದ ವಿಷಯವನ್ನಾದರೂ ಕೈಕೊಳ್ಳುವದು ಅವಶ್ಯವದೆ.

ಈ ಮೇರೆಗೆ ವೀರಶೈವ ಸಮಾಜದಲ್ಲಿಯ ವಿದ್ಯಾವಂತರು ಈ ಬಗೆಯ ಮಹತ್ವದ ವಿಷಯಗಳನ್ನು ಶೋಧಕರ್ಮಕ್ಕೋಸ್ಕರ ಕೈಕೊಳ್ಳಬಹುದಾಗಿದೆ. ಆದ್ದರಿಂದ ಈ ಪ್ರಕಾರ ಕಾರ್ಯಮಾಡಲಿಚ್ಛಿಸುವಂಥವರು ಮೇಲ್ಕಂಡ ಸಭೆಗೆ ಅವಶ್ಯವಾಗಿ ಬರಬೇಕೆಂದು ನಮ್ಮ ವಿನಂತಿ ಇದೆ. ಶಿವಾನುಭವ ಪತ್ರಿಕೆಯಲ್ಲಿ ಅನೇಕರು ಮಹತ್ವದ ಲೇಖಗಳನ್ನು ಮೇಲಿಂದ ಮೇಲೆ ಬರೆಯುತ್ತಿರುವರು. ಅವರು ಈ ಸಭೆಗೆ ಅವಶ್ಯವಾಗಿ ಬರಬೇಕು. ಅದರಂತೆಯೇ ಬೇರೆ ಯಾರಾದರೂ ಈ ಕಾರ್ಯ ಮಾಡಲಿಚ್ಛಿಸುತ್ತಿದ್ದರೆ ಅವರು ನಮಗೆ ತಮ್ಮ ಹೆಸರುಗಳನ್ನು ತಿಳಿಸಿದಲ್ಲಿ ಅವರಿಗೂ ಆಮಂತ್ರಣಗಳು ಕೊಡಲ್ಪಡುವವು. ಈ ಸಭ್ಯಗೃಹಸ್ಥರೆಲ್ಲರೂ, ತಾವು ನಡಿಸಿರುವ ಶೋಧಗಳು ಅಥವಾ ತಾವು ಅಭ್ಯಾಸ ಮಾಡಬೇಕೆಂದಿದ್ದ ವಿಷಯಗಳು ಅದಲ್ಲದೆ ಸಭೆಯಲ್ಲಿ ಚರ್ಚಿಸಬೇಕೆಂದು ಅವರು ಇಚ್ಛಿಸುತ್ತಿದ್ದ ವಿಷಯಗಳು ಇವುಗಳನ್ನೆಲ್ಲ ನಮಗೆ ಶೀವ್ರ ತಿಳಿಸಬೇಕೆಂದು ನಮ್ಮ ಸೂಚನೆ ಇದೆ.

ಈ ಸಭೆಯು ಇದೇ ದಿಸೆಂಬರ ತಿಂಗಳ ಅಂತ್ಯದಲ್ಲಿ ಒಂದು ಅನುಕೂಲ ಸ್ಥಳದಲ್ಲಿ ನೆರಿಸಲ್ಪಡುವದು.



೨೭. ಕೀಡೆ ತುಂಬಿಯು ಬಿಡದೆ ನೆನೆಯೆ, ನೋಡಲುಕ್ಷಣ ತುಂಬಿ ಯಾಗಿಹುದು. ರೂಢಿಯೊಳು ಅಗಮ್ಯ ಶರಣರ ಪಾದವೇ ಗೂಡಾಗಿ ನಿಂದಿರೆ ಬಸವಪ್ರಿಯ ಕೂಡಲ ಚನ್ನಸಂಗನ ಬಸವ.

೨೮. ನಂಬುವುದು, ಶರಣರನೇ ನಂಬುವುದು. ಕೊಂಬುವುದು, ಶರಣರ ಪ್ರಸಾದವನೆ ಕೊಂಬುವುದು. ಕೊಡುವುದು, ಶರಣರಿಗೆ ಕೊಡುವುದು. ಉಡುವುದು, ಶರಣರುಟ್ಟ ವ್ಯೈಲಿಗೆಯುನೆ ಉಡುವುದು. ಇಂತಪ್ಪ ಶರಣರ ಬರವ, ಎನ್ನ ಪ್ರಾಣದ ಬರವು. ಅವರ ಹೊಕ್ಕೆ ಎನ್ನ ಪ್ರಾಣದ ಹೊಕ್ಕು. ಇಂತಪ್ಪ ಶರಣರ ಸಂಗವ ಮಾಡಿದ ಕಾರಣ ಏಕವಾಗಿ ಹೋದೆ ಅವರ ಪಾದದಲ್ಲಿ. ಇನ್ನು ಬೇಕು ಬೇಡೆಂಬ ಸಂದೇಹ ಹುಟ್ಟಿದರೆ, ಇಹಲೋಕಕ್ಕು ಅಲ್ಲ. ಪರಲೋಕಕ್ಕು ಅಲ್ಲ. ಇದಕ್ಕೆ ನೀವೇ ಸಾಕ್ಷಿ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೨೯. ವಜ್ರದ ಮನೆಯೊಳಗಿರ್ದು, ಗೊರಲೆ ಮುಟ್ಟಿತೆಂಬ ಸಂದೇಹವೇಕೆ? ಭದ್ರಗಜದ ಮೇಲೆ ಬರುತಿರ್ದು ಕೆಳಗಿರ್ದ ಗುಜ್ಜನಾಯಿ ಮುಟ್ಟಿತ್ತೆಂಬ ಸಂದೇಹವೇಕೆ? ಸಂಜೀವನ ಕೈಯ್ಯ ಸಾರಿದ್ದು ಇಂದಿಗೆ ನಾಳಿಗೆಂಬ ಸಂದೇಹವೇಕೆ? ಸಜ್ಜನ ಸದ್ಭಕ್ತರ ಸಂಗದೊಳಗಿರ್ದು, ಸತ್ತೆನೋ ಬದುಕಿದೆನೋ ಎಂಬ ಸಂದೇಹವೇಕೆ? ಹತ್ತರಡಿಯ ಬದ್ಧ ಹಾವು ಸಾಯದೆಂದು ಗಾದೆಯ ಮಾತ ನುಡಿವರು. ನಿತ್ಯರಪ್ಪ ಶರಣರ ಸಂಗದೊಳಗಿರ್ದು ಮತ್ತೊಂದು ಉಂಟೆಂದು ಭಾವಿಸಿ ನೋಡುವ ಕತ್ತೆ ಮನುಜರತ್ತ ಹೊದ್ದದೆ, ಇತ್ತಲೆ ನಿಂದು ನಾಚಿ ನಗುತಿರ್ದ ನಮ್ಮ ಬಸವಪ್ರಿಯ ಕೂಡಲಚನ್ನಬಸವಣ್ಣಾ.

೩೦. ಹುಟ್ಟಲೇಕೊ ನರರ ಜನ್ಮದಲ್ಲಿ? ಕಟ್ಟಲೇಕೊ ಕೊರಳಲ್ಲಿ ಲಿಂಗವ? ಕಟ್ಟಿಯೂ ಕಾಣದೆ, ತೊಟ್ಟನೆ ತೊಳಲಿ, ಅರಸಲೇಕೊ ಧರೆಯ ಮೇಲೆ? ಅರಸಿಯೂ ಕಾಣದೆ, ಸತ್ತು ಮೆಟ್ಟಿ ಮೆಟ್ಟಿ ಹೂಳಿಸಿಕೊಳಲೇಕೋ? ಇದನರಿದರಿದು, ಹುಟ್ಟು ಹೊಂದಳಿದ ಶರಣರ ನಿತ್ಯ ನಿತ್ಯ ನೆನೆದು ಬದುಕಿದೆ ಬಸವಪ್ರಿಯ ಕೂಡಲಚನ್ನಬಸವಣ್ಣಾ.

೩೧. ಉದಯ, ಮಧ್ಯಾಹ್ನ, ಅಸ್ತಮಯ, ಕತ್ತಲೆ ಬೆಳಗು ದಿನ ವಾರ ಲಗ್ನತಿಥಿ, ಮಾಸ ಸಂವತ್ಸರ, ಹೋಗುತ್ತ ಬರುತ್ತಲಿವೆ. ಇವ ನೋಡಿದವರಿಲ್ಲ ಇದರೊಳಗೆ ಹೋಗುತ್ತ ಬರುತ್ತ ಇದ್ದಾರೆ. ಜಗಕ್ಕೆ ಇವೀಗ ಇಷ್ಟವಾಗಿಪ್ಪವು. ಎನ್ನ ದೇವಂಗೆ ಇವೊಂದು ಅಲ್ಲ. ದಿನಕಾಲ

ಯುಗಜುಗ ಪ್ರಳಯಕ್ಕೆ ಹೊರಗಾದ ಆ ದೇವನ ಅಂಗವಿಸಿ ಮುಟ್ಟಿ ಹಿಡಿದ ಕಾರಣ ಎಮ್ಮ ಶರಣರು ಪ್ರಳಯಕ್ಕೆ ಹೊರಗಾದರು. ಇವನರಿದು ಅಂತಪ್ಪ ಶರಣರ ಪಾದವ ನಂಬಿ ಕೆಟ್ಟು ಬಟ್ಟೆ ಬಯಲಾದೆನಯ್ಯ ಬಸವಪ್ರಿಯ ಕೂಡಲ ಚನ್ನ ಬಸವಣ್ಣ.

೩೨. ಅವರನಕ ಕೂಳ ಇಡಿದ ಒಡಲಿಗೆ, ಅದೆದು ಕುದಿದು, ಕೋಟಲೆ ಗೊಂಬುತಿದ್ದರು. ಈ ಹದನನರಿಯದೆ ಕೆಡುತಿದ್ದೆಯಲ್ಲ, ಎಂದು ತುದಿ ಹಿಡಿದು, ತೆಗೆದುಕೊಂಡಾತ ಚನ್ನಮಲ್ಲೇಶ್ವರನಯ್ಯ. ಆ ಒಡಲ ಗುಣವ ಕೆಡಿಸುವದಕ್ಕೆ ಪ್ರಸಾದವೆಂಬ ಮದ್ದನಿಕ್ಕಿ ಸಲಹಿದಾತ ಚನ್ನಮಲ್ಲೇಶ್ವರನಯ್ಯ. ಅಂಗಕ್ಕೆ ಆಚಾರ, ಮನಸ್ಸಿಗೆ ಅರುಹು, ಕಂಗಳಿಗೆ ಲಿಂಗವ ತೋರಿದಾತ ಚನ್ನಮಲ್ಲೇಶ್ವರನಯ್ಯ. ಇಂತು ಎನ್ನ ಭವವ ಕೊಂದಿಹೆನೆಂದು ಗುರುಲಿಂಗಜಂಗಮ ಈ ತ್ರಿವಿಧ ವಾಗಿಯು ಸುಳಿದಾತ ಚನ್ನಮಲ್ಲೇಶ್ವರನಯ್ಯ. ಇಂತಪ್ಪ ಚನ್ನಮಲ್ಲೇಶ್ವರನ ಶ್ರೀಪಾದವಿಡಿದು ಕೆಟ್ಟು ಬಟ್ಟ ಬಯಲಾದೆನಯ್ಯ ಬಸವಪ್ರಿಯಕೂಡಲಚನ್ನಬಸವಣ್ಣಾ ಇಂತಪ್ಪ ಚನ್ನಮಲ್ಲೇಶ್ವರನ ಪಾದವ ಮುಟ್ಟಿ ಹುಟ್ಟುಗೆಟ್ಟು ಹೋದೆನಯ್ಯ.



# ಮಹೇಶ್ವರ ಸ್ಥಲ.

## ದೇವರು ಒಬ್ಬನೇ ಇದ್ದಾನೆ.

೧. ಹರನಲ್ಲದೆ ದೈವವಿಲ್ಲೆಂದು ಶೃತಿ ಸಾರುತಿರ್ದು, ವೇದಂಗಳು ಪೊಗಳುತಿರ್ದು, ನರರು ಸುರರು ಅರಿದಿರ್ದು, ಅರಿಯದೆ, ಹರಿಯು ದೈವ, ಬ್ರಹ್ಮನು ದೈವ, ಸುರಪನು ದೈವ, ಮನ ಮುನಿ ತ್ರಿವಿಧ ದೇವರ್ಕಳು ದೈವವೆಂದು, ಚಂದ್ರ, ಸೂರ್ಯರು ದೈವವೆಂದು, ಆರಾಧಿಸುವಿರಿ. ಪತಿವ್ರತೆಯಾದವಳಿಗೆ ತನ್ನ ಪುರುಷನ ನೆನೆವಲ್ಲದೆ, ಅನ್ಯರ ನೆನೆವಳೆ? ವೇಶಿಯಂತೆ ಹಲಬರು ನಂಟರೇ? ಇವರೆಲ್ಲರ ಸಂತವಿಟ್ಟು ಮತ್ತೆ ಶಿವನೇ ಎಂಬ ಶಿವದ್ರೋಹಿಗಳು ಕೇಳಿರೋ. ಹರಿ ದೈವವೆಂದು ಆರಾಧಿಸುವರೆಲ್ಲ ಮುಡುಹು ಸುಡಿಸಿಕೊಂಡು, ಮುಂದಲೆಯಲ್ಲಿ ಕೆರಹ ಹೊತ್ತರು. ಬ್ರಹ್ಮನೇ ದೈವವೆಂದು ಆರಾಧಿಸುವರೆಲ್ಲ ಹೆಮ್ಮೆಯ ನುಡಿದು ಹೋಮವನಿಕ್ಕಿ ಹೋತನ ಕೊಂದು ತಿಂದು ಪಾತಕಕ್ಕೆ ಒಳಗಾದರು. ಸುರಪ ದೈವವೆಂದು ಆರಾಧಿಸಿದವರೆಲ್ಲ ತಮ್ಮ ಸಿರಿಯಲ್ಲಿ ಹೋಗಿ ಶಿವನಲ್ಲಿಗೆ ಸಲ್ಲದೆ ಹೋದರು. ಮನುಮುನಿದೇವರ್ಕಳು ದೈವವೆಂದು ಆರಾಧಿಸಿದವರೆಲ್ಲ ಇಹಪರಕ್ಕೆ ಸಲ್ಲದೆ ಹೋದರು. ಚಂದ್ರ ಸೂರ್ಯರ ಆರಾಧಿಸಿದವರೆಲ್ಲ ಹಿಂದು ಮುಂದಾಗಿ, ಅಡ್ಡ ಬಿದ್ದು ಅವರು ಬಂದ ಭವಕ್ಕೆ ಕಡೆ ಇಲ್ಲ. ಇದನೆಲ್ಲ ಅರಿದು ಮತ್ತೆ ಇವರೇ ದೈವವೆಂದು, ಆರಾಧಿಸುವ ವಿವರಗೆಟ್ಟ ಭವಭಾರಿಗಳ ನುಡಿಯ ಕೇಳಲಾಗದು. ಅವರೊಡನೆ ನುಡಿಯಲಾಗದು. ಅವರ ನಡೆಯ ಕಂಡರೆ ಛೀ ಎಂಬರು ನಿಮ್ಮ ಶರಣರು ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೨. ಜಗದಗಲ ಮುಗಿಲಗಲ ಪಾದ ಪಾತಾಳದಿಂದತ್ತತ್ತ. ಮಕುಟ ಬ್ರಹ್ಮಾಂಡದಿಂದತ್ತತ್ತ. ವಿಶ್ವ ಬ್ರಹ್ಮಾಂಡವನು, ತನ್ನ ಕುಕ್ಷಿಯೊಳು ನಿಕ್ಷೇಪವ ಮಾಡಿ ಕೊಂಡಿಪ್ಪ ದೇವನೀಗ ಎನ್ನ ದೇವ. ಆ ದೇವನೊಳಗೆ ನಾನಡಕ. ನನ್ನೊಳಗೆ ಆ ದೇವನಡಕ. ಇಂತಪ್ಪ ದೇವನ ನಂಬಿ, ನಾ ಕೆಟ್ಟು ಬಟ್ಟಬಯಲಾದೆ. ಈ ದೇವನನರಿಯದೆ ಜಗವೆಲ್ಲ ಕಲ್ಲ ದೇವರು, ಮಣ್ಣದೇವರು, ಮರ ದೇವರು ಎಂದು, ಇವನಾರಾಧಿಸಿ, ಕೆಟ್ಟರಲ್ಲ ಸ್ವರ್ಗ ಮರ್ತ್ಯ ಪಾತಾಳದವರೆಲ್ಲರು. ಎನ್ನ ದೇವನನರಿದು ಅರ್ಚಿಸಲಿಲ್ಲ, ಪೂಜಿಸಲಿಲ್ಲ, ಭಾವಿಸಲಿಲ್ಲ. ಇದುಕಾರಣ ಅವ ಲೋಕದವರಾ

ದರು ಆಗಲಿ, ಎನ್ನ ದೇವನನಂದರೆ, ಭವವಿಲ್ಲ, ಬಂಧನವಿಲ್ಲ. ನೆರೆ ನಂಬಿದರೆ ನಮ್ಮ ಬಸವಪ್ರಿಯ ಕೂಡಲಚನ್ನಬಸವಣ್ಣಾ.

೩. ಕಲ್ಲದೇವರ ನಂಬಿದವರೆಲ್ಲ ಕಲಿಯುಗದ ಕತ್ತಲೆಯೊಳಗಾಗಿ ಕತ್ತೆಗಳಾಗಿ ಹೋದರು. ಅದೇನು ಕಾರಣವೆಂದರೆ, ತಮ್ಮ ದೇವರು ಇಕ್ಕಿದ ಓಗರವನುಣ್ಣಲೊಲ್ಲದೆ, ಒಡನೆ ಮಾತಾಡದು. ಗುಡಿಯು ಕಲ್ಲು ಮೇಲೆ ಬಿದ್ದರೆ ಒಡೆದು ಹಾಳಾಗಿ ಹೋಗುತ್ತಿದೆ. ಇಂತಪ್ಪ ಕಲ್ಲ ಪೂಜಿಸಿ, ಸಲ್ಲದೆ ಹೋದರು. ಅದಂತಿರಲಿ, ಮಣ್ಣದೇವರು ಎಂದು ಪೂಜಿಸಿ, ಮಜ್ಜನಕ್ಕೆ ನೀಡಲಮ್ಮದೆ ಲಜ್ಜೆಗೆಟ್ಟು ನಾಯಾಗಿ ಬೊಗುಳಿ ಹೋದರು. ಅದಂತಿರಲಿ. ಮರನ ದೇವರೆಂದು ಪೂಜಿಸಿ ಧೂಪ ದೀಪವ ಮುಂದಿಡಲಮ್ಮರು. ಅದೊಂದು ವ್ಯಾಪಾರಕ್ಕೊಳಗಾಗಿ, ತಾಪತ್ರಯಕ್ಕೆ ಸಿಲ್ಕಿ ಪಾಪಿಗಳಾಗಿ ಸತ್ತು ಹೋದರು. ಸಲ್ಲದು ಶಿವನಲ್ಲಿ. ಎಮ್ಮ ಭಕ್ತರಿಗೆ ಈ ಪರಿಯಲ್ಲ ಕೇಳಿರಣ್ಣಾ. ಇದೆಲ್ಲ ಪಾಪಿಗಳ ಹಾಗೆ, ಎನ್ನ ದೇವ ನಡೆವ, ನುಡಿವ, ಇಕ್ಕಿದರುಂಬ, ಕೊಟ್ಟರೆ ತಕ್ಕೊಂಬ, ಪೂಜಿಸಿದರೆ ಪೂಜೆಗೊಂಬ, ಅನೇಕ ಪೂಜೆಯಲ್ಲಿ. ತನ್ನ ನಂಬಿದ ಭಕ್ತರಿಗೆ ಬುದ್ಧಿಯ ಹೇಳುವ, ಶುದ್ಧಾತ್ಮನ ತೋರುವ. ತಾ ಮುದ್ದಿನಲ್ಲಿ ಸಜ್ಜನ ಸದ್ಭಕ್ತರಲ್ಲಿ ಇದ್ದು ಇಲ್ಲದಂತಿಪ್ಪ. ಪ್ರಸಿದ್ಧ ಜಂಗಮ ಲಿಂಗವ ಪೂಜಿಸಿ, ಸ್ವಯಲಿಂಗಿಗಳಾದರು ಎಮ್ಮ ಶರಣರು. ಅವರು ಹೋದ ಹಾದಿಯು ನೋಡಿದರೆ, ಎನಗೊಂದು ಹಾದಿ ಸಿಕ್ಕಿತ್ತು. ಆ ಹಾದಿಗೊಂಡು ಹೋಗಿ ಅವರ ಪಾದವ ಕಂಡು, ಕೆಟ್ಟು ಬಟ್ಟಬಯಲಾದೆನೈಯ್ಯ ಬಸವಪ್ರಿಯ ಕೂಡಲಚನ್ನಬಸವಣ್ಣಾ.

೪ ತೀರ್ಥಯಾತ್ರೆ ಲಿಂಗ ದರುಶನಕ್ಕೆ ಹೋಗಿ, ಕರ್ಮವ ಹಿಂಗಿಸಿಕೊಂಡೆನೆಂಬ ಭಂಗಿತರ ಮಾತ ಕೇಳಲಾಗದು. ಅದೇನು ಕಾರಣವೆಂದರೆ, ತೀರ್ಥವಾವುದು ಯಾತ್ರೆಯಾವುದು ಬಲ್ಲರೆ ನೀವು ಹೇಳಿರೆ. ಮಹಾಘನ ಗುರುಪಾದ ತೀರ್ಥದಿಂದ ನೆಗ್ಗಳ ತೀರ್ಥ ಉಂಟೆ? ಜಗತ್ಪಾವನ ಜಂಗಮ ದರುಶನದಿಂದ ಬೇರೆ ಯಾತ್ರೆ ಉಂಟೆ? ಇಂಗಿತವನರಿದ ಬಳಿಕ ತನ್ನ ಅಂಗದ ಮೇಲಿರ್ಪ ಲಿಂಗವಲ್ಲದೆ ಬೇರೆ ಲಿಂಗ ಉಂಟೆ? ಇದನರಿಯದೆ ಇನ್ನು ತೀರ್ಥಯಾತ್ರೆ ಲಿಂಗ ದರುಶನ ಉಂಟೆಂಬ ಅಂಗ ಹೀನರ ಮುಖವ ನೋಡಲಾಗದು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

## ದುಶ್ಶೀಲಗಳನ್ನು ಬಿಡುವುದು.

೫. ತನುವಿನಿಚ್ಛೆಗೆ ಶೀಲವ ಕಟ್ಟಿಕೊಂಬರು ಲಕ್ಷೋಪಲಕ್ಷ ಉಂಟು. ಮನದಿಚ್ಛೆಗೆ ಶೀಲವ ಕಟ್ಟಿಕೊಂಬವರು ಅಪೂರ್ವ ನೋಡಾ. ತನುಮನವೆರಡು ಏಕವಾಗಿ, ಧನದಾಸೆಯಂ ಬಿಟ್ಟು, ಮನ ಮಹದಲ್ಲಿ ನಿಂದುದೆ ಶೀಲ ಸಂಬಂಧ. ಇನಿತಲ್ಲದ ದುಃಶ್ಶೀಲರ ಎನಗೊಮ್ಮೆ ತೋರದಿರು ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೬. ಶೀಲವಂತರು, ಶೀಲವಂತರು ಎಂದೇನೋ? ಶೀಲವಂತಿಕೆಯ ನಾರು ಬಲ್ಲರು? ಶೀಲವಾದರೆ, ಶಿವನೊಳು ಬೆರವುದೆ ಶೀಲ. ಶೀಲವಾದರೆ ಗುರುಲಿಂಗಜಂಗಮವ ತನ್ನೊಳರಿವುದೆ ಶೀಲ. ಅದಕ್ಕೆ ಮಿಗಿಲಾದ ಶೀಲವಾದರೆ, ಹಸಿವು ತೃಷೆ ನಿದ್ರೆ ವಿಷಯವ ಕೆಡಿಸುವದೇ ಶೀಲ. ಅದಕೆ ತುರೀಯಾತೀತ ಶೀಲವಾದರೆ ಬಾಲನಾಗಿ ತನ್ನ ಲೀಲಾ ವಿನೋದವ ಭೂಮಿಯ ಮೇಲೆ, ನಟಿಸುವದೇ ಶೀಲ. ಇದನರಿಯದೆ ಶೀಲಶೀಲವೆಂದು ಮನೆಮನೆಗೆ ಶೀಲವಲ್ಲದೆ ತನ್ನ ತನಗೆ ಕಾಯಕೃತ್ಯವಲ್ಲದೆ, ಇದನರಿದು ಮೋಹ ಘನವನೆ ಮರೆದು, ಮನವನೆ ಬಳಲಿಸಿ, ಘನವ ಮಾಡಿ, ತನುವ ಹೊರೆದೆನೆಂಬ ಬಿನುಗರ ನುಡಿಯ ಮೆಚ್ಚುವನೆ ನಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ?

೭. ಶೀಲವಂತರು, ಶೀಲವಂತರು ಎಂಬರು. ಶೀಲವಂತಿಕೆಯ ನಾರು ಬಲ್ಲರು ಹೇಳಾ? ನೆಲಕೆ ಶೀಲ ಶೀಲವೆಂಬೆನೆ? ಹೊಲೆ ಹದಿನೆಂಟು ಜಾತಿ ನಡೆ ನುಡಿವುದಕ್ಕೆ ಒಂದೆಯಾಯಿತ್ತು. ಜಲಕೆ ಶೀಲವೆಂಬೆನೆ? ಮೀನು ಮೊಸಳೆಗಳು ಖಗಮೃಗಂಗಳು ನಿಂದೆಂಜಲು. ಬೆಳೆಗೆ ಶೀಲವೆಂಬೆನೆ? ಎತ್ತು ಕತ್ತೆ ತಿಂದು ಮಿಕ್ಕ ಎಂಜಲು. ಹೊನ್ನಿಗೆ ಶೀಲವೆಂಬೆನೆ? ಉರ ಹೊರೆಯಾಗಿಪ್ಪುದು. ಹೆಣ್ಣಿಗೆ ಶೀಲವೆಂಬೆನೆ? ಕಣ್ಣುಗೆಡಿಸಿ ಕಾಡುತಿಪ್ಪುದು. ಇನ್ನಾವುದು ಶೀಲ ಹೇಳಿರಣ್ಣಾ? ಇದಕ್ಕೆ ಒಳಗಾದವರೆಲ್ಲ ದುಃಶೀಲರು. ಇದ ಹಿಡಿದು ಹಿಡಿಯದೆ ಬಿಟ್ಟು ಬಿಡದೆ ತನ್ನ ಮನಕ್ಕೆ ಶೀಲವಾಗಿಪ್ಪುದೆ ಅಚ್ಚಶೀಲ ಕಾಣಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೮. ಸೀಮೆ ಭೂಮಿ ಎಂದೇನೊ? ಹೋಮವನುರುಹಿದವಂಗೆ ಕಾಮದ ಕತ್ತಲೆ ಎಂದೇನೊ? ಕಾಲನ ಗೆಲಿದವಂಗೆ ನೇಮನಿತ್ಯವೆಂದೇನೊ?

ತಾನು ತಾನಾದವಂಗೆ ಶೀಲ ಶೀಲವೆಂದೇನೊ, ನಿಃಶೂನ್ಯನಾದ ಮಹಾಮಹಿಮಂಗೆ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ?

೭೯. ಹೊತ್ತಾರೆ ಎದ್ದು ಹೂವು ಪತ್ರೆ ಉದಕವ ತಂದು, ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡಿಹೆನೆಂದು, ಸೊರಟಿಯ ಮೊರಟಿಯ ಹರಡಿ ಕೈಕಾಲ ಮುಖವ ತೊಳೆದು, ವಿಭೂತಿಯ ಧರಿಸಿ, ರುದ್ರಾಕ್ಷಿಯ ತೊಟ್ಟು, ತನು ಶುದ್ಧವ ಮಾಡಿ, ಲಿಂಗಕ್ಕೆ ಮಜ್ಜನಕ್ಕೆರೆಯಬೇಕೆಂಬಿರಿ. ಈ ಮೊದಲು ತಂದ ಪತ್ರೆ ಪುಷ್ಪ ಉದಕವೆ ದೇವರೊ? ಈ ಹರಡಿಕೊಂಡಿರುವ ಸೊರಟಿ ಮೊರಟಿಗಳೆ ದೇವರೊ? ಈ ತೊಳೆದುಕೊಂಬ ಕೈಕಾಲು ಮುಖವೇ ದೇವರೊ? ಈ ಧರಿಸಿದ ವಿಭೂತಿ ರುದ್ರಾಕ್ಷಿಯೇ ದೇವರೊ? ನಿಮ್ಮ ಕೈಯಲ್ಲಿ ಇಪ್ಪುದೇ ದೇವರೊ? ನೀವೇ ದೇವರೊ? ಇವರೊಳಗೆ ಆವುದು ದೇವರೆಂಬಿರಿ? ಅರಿವುಳ್ಳವರು ನೀವು ಹೇಳಿರೋ. ದೇವರು ದೇವರು ಎಂದು ಒಂದಲ್ಲದೆ, ಎರಡುಂಟೆ? ಇಂತಿದನರಿಯದೆ, ಬರಿಸೂರೆ ಹೋದಿರಲ್ಲ. ಇನ್ನಾದರು ಅರಿದು ಬದುಕಿರೋ. ನಾನೊಂದ ಹೇಳಿದೆನು. ಇವೆಲ್ಲವನು ಮಾಡಬೇಕೆಂಬುದೀಗ ಲಿಂಗ. ಮಾಡುವದೀಗ ಜಂಗಮ. ಲಿಂಗ ಜಂಗಮವೆಂದರೆ ಒಂದೇ ಅಂಗಭೇದವು ನಮ್ಮ ಶರಣರು ಬಲ್ಲರಲ್ಲದೆ ಮರಣಬಾಧೆಗೊಳಗಾಗುವ ಮರ್ತ್ಯದ ಮನುಜರು ಅರಿಯರು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.



# ಪ್ರಸಾದಿಸ್ಥಲ.

## ಪ್ರಸಾದದ ಸ್ವರೂಪು.

೧. ಅನ್ನ ಉದಕವ ಕೊಂಡಿಹೆನೆಂದರೆ, ಭೂಮಿಯ ಹಂಗು. ಹೊನ್ನ ಹಿಡಿದಿಹೆನೆಂದರೆ, ಲಕ್ಷ್ಮಿಯ ಹಂಗು. ಹೆಣ್ಣು ಹಿಡಿದಿಹೆನೆಂದರೆ ಕಾಮನ ಹಂಗು. ಹಾಲು ಕೊಂಡಿಹೆನೆಂದರೆ ಹಸುವಿನ ಹಂಗು. ಹಣ್ಣು ಫಲಾದಿಗಳ ಕೊಂಡಿಹೆನೆಂದರೆ ತರುಮರದ ಹಂಗು. ತರಗೆಲೆಯ ಕೊಂಡಿಹೆನೆಂದರೆ ವಾಯುವಿನ ಹಂಗು. ಬಯಲ ಆಪೋಶಣ ಕೊಂಡಿಹೆನೆಂದರೆ ಆಕಾಶದ ಹಂಗು. ಇದನರಿದು, ಇವೆಲ್ಲವನು ಕಳೆದು, ವಿಶ್ವಬ್ರಹ್ಮಾಂಡಕ್ಕೆ ನಡೆ ನುಡಿ ಚೈತನ್ಯವಾದ ಜಂಗಮದ ಪಾದವಿಡಿದು, ಅವರು ಬಿಟ್ಟ ಪ್ರಸಾದ, ಉಟ್ಟ ವಸ್ತ್ರಲಿಗೆ, ಉಗುಳ್ದ ತಂಬುಲ, ಈ ತ್ರಿವಿಧವ ಕೊಂಡು ಎನ್ನ ಭವ ನಾಸ್ತಿಯಾಯಿತ್ತು. ಮರ್ತ್ಯಲೋಕದ ಮಹಾಗಣಂಗಳ ಸಾಕ್ಷಿಯಾಗಿ, ದೇವಲೋಕದ ಗಣಂಗಳ ಸಾಕ್ಷಿಯಾಗಿ, ನಾ ನಿಜಮುಕ್ತನಾದೆನಯ್ಯ ನೀವು ಸಾಕ್ಷಿಯಾಗಿ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೨. ಬ್ರಹ್ಮನ ಹುಟ್ಟು, ವಿಷ್ಣುವಿನ ಸ್ಥಿತಿ, ರುದ್ರನ ಲಯಕ್ಕೆ ಒಳಗಾದ ಮನುಜರೆಲ್ಲ ತಾವು ಪ್ರಸಾದಿ, ಪ್ರಾಣಲಿಂಗಿಗಳೆಂದು ನುಡಿದುಕೊಂಬಿರಿ. ಪ್ರಸಾದಿ ಸ್ಥಲ ಎಲ್ಲರಿಗೆಂತಾದುದಣ್ಣಾ? ಪ್ರಸಾದಿಸ್ಥಲ ಪರಮಸುಖ ಪರಿಣಾಮ. ಮನ ಮೀರಿದಪ್ಪಿ ತನುವನೆ ಪ್ರಸಾದವ ಮಾಡುವ ದೀಗ ಪ್ರಸಾದ. ಇದನರಿಯದೆ ಸದಮದವಾಗಿ ಮುಡಿ ನೋಡಿ ಒಡಲ ಕೆಡಿಸಿಕೊಂಬ ಜಡ ಮನುಜರ ನುಡಿಯ ಕೇಳಲಾಗದು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೩. ಕಾಯ ಕರಣಾದಿಗಳ ಏಕವ ಮಾಡಿದ ಪ್ರಸಾದಿ, ಪ್ರಾಣನಿಃಪ್ರಾಣವನೇಕವ ಮಾಡಿದ ಪ್ರಸಾದಿ, ಭಾವ ನಿರ್ಭಾವವನೇಕವ ಮಾಡಿದ ಪ್ರಸಾದಿ, ಮನಬುದ್ಧಿಚಿತ್ತಹಂಕಾರವನೇಕವ ಮಾಡಿದ ಪ್ರಸಾದಿ, ಸಪ್ತಧಾತು ಷಡುವರ್ಣವನೇಕವ ಮಾಡಿದ ಪ್ರಸಾದಿ, ಇಂತಿವೆಲ್ಲವನೇಕವ ಮಾಡಿದ ಪ್ರಸಾದಿ. ಈ ಪ್ರಸಾದವ ಕಂಡು, ಎನ್ನ ಭವ ನಾಸ್ತಿಯಾಯಿತ್ತು ಕಾಣಾ ಬಸವ ಪ್ರಿಯ ಕೂಡಲ ಚನ್ನ ಬಸವಣ್ಣಾ.

೪. ಆದಿಯ ತೋರಿದ, ಅನಾದಿಯ ತೋರಿದ, ಭಾವವ ತೋರಿದ. ಆದು ಹೇಗೆ ಎಂದರೆ, ಆದಿ ಲಿಂಗವೆಂದು ಅರುಹಿದಿರಿ. ಅನಾದಿ ಶರಣನೆಂದು ಅರುಹಿದಿರಿ. ಈ ಎರಡರ ಭಾವವೇ ಜಂಗಮವೆಂದು ಅರುಹಿದಿರಿ. ಈ ತ್ರಿವಿಧ ಪರಿಣಾಮವೆ ಪ್ರಸಾದವೆಂದರುಹಿದಿರಿ. ಇಂತೀ ಚತುರ್ವಿಧವು ಏಕವೆಂದು ತೋರಿದ ಲೋಕಾರಾಧ್ಯರು ಚನ್ನ ಮಲ್ಲೇಶ್ವರನ ಸಾಕಾರವೇ ರೂಪಾಗಿ, ನಾ ಬದುಕಿದೆನೈಯ್ಯಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೫. ಹಿಂದನರುಹಿ ಹಿಂದ ಹರಿದಿರಿ. ಮುಂದನರುಹಿ ಮುಕ್ತನ ಮಾಡಿದಿರಿ. ಸಂದು ಸಂಶಯವನಳಿದಿರಿ. ಗುರುಲಿಂಗಜಂಗಮವ ಒಂದೇ ಎಂದು ತೋರಿದಿರಿ. ಪ್ರಸಾದವೇ ಪರವೆಂದರುಹಿದಿರಿ. ಇಂತಿವರ ಪೂರ್ವಾಶ್ರಯವ ಕಳೆದು ಎನಗೆ ಏಕವ ಮಾಡಿ ತೋರಬೇಕಾಗಿ, ನೀವು ಒಂದು ಸಾಕಾರವ ತಾಳಿ ಬಂದಿರಿ. ಇದು ಕಾರಣ ನಿಮ್ಮ ಲೋಕಾರಾಧ್ಯರೆಂದು ನೆರೆನಂಬಿ ಸಲೆಸಂದು ನಿಮ್ಮ ಪಾದದೊಳು ಏಕವಾದೆನೈಯ್ಯಾ ಚನ್ನಮಲ್ಲೇಶ್ವರ. ಇದ ನಿಮ್ಮ ನರಿದ ಶರಣರೇ ಬಲ್ಲರು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೬. ಆಸೆಯನುಳಿದು ನಿರಾಸೆಯಲ್ಲಿ ನಿಂದು, ವೇಷವ ಮರೆದು, ಜಗದ ಹೇಸಿಯಾಟವ ತೊರೆದು, ವಿಶಾಸಲಾಗಿದ್ದ ಮನವನೆ ಲಿಂಗವ ಮಾಡಿ, ಗಾಸಿಗೊಳಗಾಗುವ ತನುವನೆ ಗುರುವ ಮಾಡಿ, ಇವಿಷ್ಟಕ್ಕು ಕರ್ತನಾಗಿರುವ ಪ್ರಾಣವನೆ ಜಂಗಮವ ಮಾಡಿ, ಈ ತ್ರಿವಿಧವನು ಏಕವ ಮಾಡುವ, ಆ ಭಾವವನೆ ಭಾವರುಚಿ ಪ್ರಸಾದವ ಮಾಡುವ. ಈ ತ್ರಿವಿಧವನರಿದು ಅಂಗವಿಸಿದವನೆ ಎನ್ನ ದೇವನೆಂದು ಕಾಂಬೆ ಕಾಣಾ, ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ ನೀವು ಸಾಕ್ಷಿಯಾಗಿ.

೭. ಅಂಗದ ಲಯ ಲಿಂಗದೊಳಗೆ, ಲಿಂಗದ ಲಯ ಅಂಗದೊಳಗೆ, ಇವೆರಡರ ಸಂಗ ಸುಖ ಜಂಗಮದೊಳಗೆ, ಏಕವಾಯಿತ್ತು. ಅಂದೆ ಪ್ರಸಾದದಿಂದ ರೂಪಾಯಿತ್ತು. ಮುಂದೆ ಪ್ರಸಾದದಲ್ಲಿ ಪರಿಪೂರ್ಣವಾಯಿತ್ತು. ಇದರಂದವ ಬಲ್ಲ ಶರಣರಿಗೆ ಎನ್ನ ತಂದೆಗಳಾಗಿಪ್ಪರು ಕಾಣಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೮. ಉರಗನ ಫಣಾಮಣಿಯ ಬೆಳಗಿನಲ್ಲಿ ನಿಂದ ಪ್ರಸಾದಿ, ಕರಿಯ ಕೊಂದ ಹರಿಯ ಬೆಳಗಿನೊಳಗೆ ನಿಂದ ಪ್ರಸಾದಿ, ಶಿರದ ಮೇಲೆ ನಿಂದ ಗಂಗೆಯ ಬೆಳಗಿನಲ್ಲಿ ನಿಂದ ಪ್ರಸಾದಿ, ಉರ ಮಧ್ಯದಲ್ಲಿಪ್ಪ ಪರಂಜ್ಯೋತಿಯ ಬೆಳಗಿನಲ್ಲಿ ನಿಂದ ಪ್ರಸಾದಿ, ಪೂರ್ವ ಪಶ್ಚಿಮ ಏಕವಾದ ಬೆಳಗಿನಲ್ಲಿ ನಿಂದ ಪ್ರಸಾದಿ, ಇಂತೀ ಘನವನೆಲ್ಲವನೊಳಗೊಂಡು, ಮಹಾ ಬೆಳಗಿನಲ್ಲಿ ನಿಂದ ಪ್ರಸಾದಿ. ಚನ್ನಮಲ್ಲೇಶ್ವರನ ಪ್ರಸಾದವ ಕೊಂಡು ನಾ ಉರಿಯುಂಡ ಕರ್ಪೂರದಂತಾದೆನಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣ.

೯. ನಾನೊಂದು ಸುಖವ ಕಂಡು, ಸುಯಿಧಾನಿಯಾಗಿ ನಿಂದೆ. ಸುಖವೆನಗೆ ಸುಖವಾಸನೆಯಾಗಿ ವೇಧಿಸಿತ್ತು. ಆ ವೇಧಿಸಿದ ಸುಖವ ನೋಡಲಾಗಿ, ಅದು ತಾನೆ ಬ್ರಹ್ಮನಾಗಿ ನಿಂದಿತ್ತು. ಆ ಬ್ರಹ್ಮದ ನೆಲೆಯ ನರಿದವರಿಗೆ ಹಮ್ಮು ಬಿಮ್ಮು ಮನ ನಾಸ್ತಿ ಅವರು ಸುಮ್ಮಾನದ ಸುಖಿಗಳು. ಒಮ್ಮನವಾಗಿ ನಿಮ್ಮನೆ ನೋಡಿ, ನಿಮ್ಮನೇ ಕೂಡಿದರೈಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣ.

---

## ಪ್ರಸಾದದ ವಿಧಗಳು.

೧೦. ಶುದ್ಧ, ಸಿದ್ಧ, ಪ್ರಸಿದ್ಧ, ಪ್ರಸಾದವೆಂದು ಹೆಸರಿಟ್ಟುಕೊಂಡು ಚನ್ನಾಗಿ ನುಡಿವಿರಿ. ಶುದ್ಧವಾದ ಮುಖ, ಸಿದ್ಧವಾದ ಮುಖ, ಪ್ರಸಿದ್ಧವಾದ ಮುಖ, ಅರಿದರೆ ನೀವು ಹೇಳಿರೋ. ಅರಿದು ಅರಿಯದೆ, ಅರಿಮರುಳುಗಳಿರಾ ನೀವು ಕೇಳಿರೊ. ಕಾಯಕರಣಾದಿಗಳ ಗುಣವಳಿದುದೆ ಶುದ್ಧ. ಜೀವನ ದೃಶ್ಯ ಕೆಟ್ಟು, ಜಗದ ವ್ಯಾಕುಳವಳಿದು, ನಿರಾಕುಳದಲ್ಲಿ ನಿಂದುದೆ ಸಿದ್ಧ. ಪ್ರಾಣದ ಭಯ ಮರಣದ ಭಯ ಮರಣಾದಿಗಳ ಹಿಂಗಿ ಭಾವವಳಿದು ಭವಕ್ಕೆ ಸವಿದುದೆ ಪ್ರಸಿದ್ಧ. ಈ ತೆರನನರಿಯದೆ, ಎತ್ತರ ತೆತ್ತರನಾಗಿ ನುಡಿವಿರಿ. ಬಲ್ಲವರೆನಿಸಿಕೊಂಡಿಹೆವೆಂದು ನಿಮ್ಮ ಬಲ್ಲತನ ಹಾಳಾಯಿತ್ತು. ನೀವು ಬರಿಸೂರೆಯ ಹೋಗುವುದನರಿಯದೆ, ಬರಿದೆ ಏಕೆ ಅರಚಾಡಿ ಸತ್ತಿರಿ ನೆರೆ ಮೂರು ಲೋಕವೆಲ್ಲ? ಇದನರಿದಾದರೂ

ಆರಿಗೂ ಕೊಡಬೇಡ, ಕೊಳಬೇಡ. ಮನಮುಟ್ಟಿ ಎರಗಿ ಬದುಕಿರಿ, ನಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೧. ಗುರುಪ್ರಸಾದ, ಲಿಂಗಪ್ರಸಾದ, ಜಂಗಮಪ್ರಸಾದ, ಅಚ್ಚ ಪ್ರಸಾದ, ಅರ್ಪಿತಪ್ರಸಾದ, ಸಹಭೋಜನ, ಆರರಲ್ಲಿ ಅರ್ಪಿತ, ಮೂರರಲ್ಲಿ ಮುಕ್ತವೆಂದು ಊರೆಲ್ಲರ ಮುಂದೆ ದೂರಿಯಾಡುವ ನಾಯಿ ಮನುಜ ರಿರಾ, ಹೀಗೇಕೆ ದೂರುವಿರಿ? ಗುರುವೆಷ್ಟು, ಲಿಂಗವೆಷ್ಟು, ಜಂಗಮವೆಷ್ಟು ಪ್ರಸಾದವೆಷ್ಟು, ಅರ್ಪಿತವೆಷ್ಟು, ಇದರ ಅವಧಾನವನರಿದ, ಶರಣಂಗೆ, ಒಂದಲ್ಲದೆ ಎರಡುಂಟೆ? ಅವು ಒಂದೆಂಬುವನಕ ಬಂಧನವು. ತತ್ವಾರ್ಥಕ್ಕೆ ಇದಿರಿಟ್ಟುಕೊಂಡಿಪ್ಪನಲ್ಲದೆ, ಅರಿದ ಶರಣಂಗೆ ಒಂದೆಂಬುದು ಸಂದೇಹ. ಈ ರೀತಿಯನರಿಯದೆ ತೂತು ಬಾಯೊಳಗೆ ಮಾತಿಗೆ ತಂದು ನುಡಿದಾ ಡುವ ಪಾತಕರ ಮೆಚ್ಚುವನೇ ನಮ್ಮ ಶರಣ ಬಸವ ಪ್ರಿಯ ಕೂಡಲ ಚನ್ನ ಬಸವಣ್ಣಾ?

---

## ಪ್ರಸಾದಿಯ ವರ್ತನೆ.

೧೨. ಹಸಿವಿನಾಸೆಗೆ ಅಶನವ ಕೊಂಬರು. ವಿಷಯದಾಸೆಗೆ ಹುಸಿಯ ನುಡಿವರು. ಹಸನಾಗಿ ವ್ಯಸನವ ಹೊತ್ತು, ಭಸಿತವ ಹೂಸಿ ವಿಶ್ವವ ತಿರುಗಿದರು. ಈ ಹುಸಿಯ ಬಿಟ್ಟು, ಮಾಯೆಯ ಮುಸಕವ ಮಾಣ್ದಲ್ಲದೆ ನಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣನ ಕೂಡಾ.

೧೩. ಹಾಲ ಕಂಡ ಬೆಕ್ಕು ಮೆಲ್ಲುಲೆ ತೆಗೆದು ಕುಡಿವುತ್ತಿರಲು, ಬಾಲನಿಗಿರ್ದ ಹಾಲ ಬೆಕ್ಕು ಕುಡಿವುತ್ತಿದೆ ಎಂದು ನಾರಿ ಕಂಡು, ಗುದಿ ಗೆಯಲಿ ಹೊಡೆದರೆ, ಏಳುತ್ತ ಬೀಳುತ್ತ ಕಾಲ್ಗೆಡೆದು ಓಡುವಂತೆ, ಎನ ಹೇಳುವೆಯಯ್ಯ? ಮರ್ತ್ಯದ ಮನುಜರು ಕರಣಂಗಳ ಹರಿಯ ಬಿಟ್ಟು, ತಮ್ಮ ಬಾಳುವೆಯ ಮರೆದು, ಕಾಲನ ಬಾಯಲ್ಲಿ ಅಳುತ್ತ ಮುಳುಗುತ್ತ ಲಿಪ್ಪುದನಾರು ಅರಿಯರು ನೋಡಾ ಬಸವ ಪ್ರಿಯ ಕೂಡಲ ಚನ್ನಬಸ ವಣ್ಣಾ?

೧೪. ತನುವಕೊಟ್ಟು ಭಕ್ತರಾದೆವೆಂಬರು. ಮನವಕೊಟ್ಟು ಭಕ್ತರಾದೆವೆಂಬರು. ಧನವ ಕೊಟ್ಟು ಭಕ್ತರಾದೆವೆಂಬರು. ತನು, ಮನ, ಧನವನೆಂತು ಕೊಟ್ಟರಿ ಹೇಳಿರಣ್ಣಾ? ನಿಮ್ಮ ಒಡವೆ ನಿಮ್ಮಲ್ಲಿ ಇದೆ. ಅದು ಹೇಗೆಂದರೆ ಬಲ್ಲವರು ನೀವು ಕೇಳಿ. ತನುವ ನೀವು ಕೊಟ್ಟರೆ ನೀವು ರೂಪಾಗಿ ಇರುವದಕ್ಕೇನು? ಮನವ ನೀವು ಕೊಟ್ಟರೆ ನೀವು ನಿಮಗೆ ನಡೆನುಡಿ ಚೈತನ್ಯವೇನು? ಧನವ ನೀವು ಕೊಟ್ಟರೆ ಕ್ಷುತ್ತಿಂಗೆ ಭಿಕ್ಷ ಸೀತಕ್ಕೆ ರಗಟೆ ಏನು? ಅಂತಲ್ಲ ಕೇಳಿರಣ್ಣಾ! ತನುವ ಕೊಟ್ಟುದಾವುದೆಂದರೆ, ಹಾಸಿ ಹೋದರೆ ಉಟ್ಟೆನು, ತೊಟ್ಟೆನೆಂಬ ಗುಣವಳಿದರೆ, ತನುವೆ ಗುರುವಾಯಿತ್ತು. ಮನವ ಕೊಟ್ಟುದಾವುದೆಂದರೆ, ವ್ಯಾಕುಳವನೆಲ್ಲ ಅಳಿದು ನಿರಾಕುಳವಾಗಿ ನಿಂದುದೆ ಮನವೇ ಲಿಂಗವಾಯಿತ್ತು. ಧನವ ಕೊಟ್ಟೆಹೆನೆಂಬುದಾವುದೆಂದರೆ, ಇಂದಿಗೆ ನಾಳಿಗೆ ಎಂಬ ಸಂದೇಹದ ಭಾವಕ್ಕೆ ಭಯಕ್ಕೆ ಭವವಳಿವುದುದೇ ಜಂಗಮವಾಯಿತ್ತು. ಇಂತಿದೀಗ ನಮ್ಮ ಮುನ್ನಿನ ಆದ್ಯರ ನಡೆನುಡಿ, ಮಾಟಕೂಟ. ಇದನರಿಯದೆ ಏನೊಂದು ಮಾಡಿದರೂ, ನೀಡಿದರೂ, ಕೊಟ್ಟರೂ, ಕೊಂಡರೆಯೂ, ವಾಯಕ್ಕೆ ವಾಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ,

೧೫. ಆಟದಲಿ ಕೆಲ ಹೊತ್ತುಗಳೆದು, ಕೂಟದಲಿ ಕೆಲ ಹೊತ್ತುಗಳೆದು, ನೋಟದಲಿ ಕೆಲ ಹೊತ್ತುಗಳೆದು, ಊಟದ ಹೊತ್ತಿಗೆ ಲಿಂಗವ ಕೂಡಿಹೆನೆಂಬವನೊಬ್ಬ ಊಟ ಮಾಟ ಕೂಟದಲಿ ಕೋಟಲೆಗೊಳುತ್ತಿದ್ದೆನೆಂಬುವನೊಬ್ಬ ಪೋಟ. ಇವರಿಬ್ಬರ ನೋಟ ಬೇಟಕ್ಕೆ ಸಿಕ್ಕದೆ ದಾಂಟಿ ಹೋದನು ನಮ್ಮ ಬಸವ ಪ್ರಿಯ ಕೂಡಲಚನ್ನಬಸವಣ್ಣಾ.

೧೬. ಮಿಾಸಲು ಸೂಸಲಾಗಿ, ದೋಸೆ, ಕಡುಬ ಹೊಯ್ದು, ಹಬ್ಬವ ಮಾಡಿಹೆನೆಂಬ ಹೇಸಿಗಳ ಮಾತ ಕೇಳಲಾಗದು. ಅದೇಕೆ ಎಂದರೆ, ಲಿಂಗ ಜಂಗಮದ ಬಾಸೆಗೆ ಸಲ್ಲದಾಗಿ ಇನ್ನು ಮಿಾಸಲಾವುದೆಂದರೆ, ಬಾಸೆಗೇರಿಸಿದ ತನುವೆ ಅಡ್ಡಣಿಗೆ, ಘನವೇ ಪರಿವಾಣ, ಮನ ಮಿಾಸಲೋಗರ. ಈ ಅನುವನರಿದು, ಮಹಾಲಿಂಗಕ್ಕೆ ಅರ್ಪಿತವ ಮಾಡುವನೆ ಸದ್ಭಕ್ತನು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೭. ಹುತ್ತಕೆ ಹಾಲು ತುಪ್ಪವನೆರದು, ಕೊಟ್ಟಿನ ಮೇಲೆ ಕೂಳ ನಿಕ್ಕಿ, ಒತ್ತಿ ಮಡಲದುಂಬಿ, ಆ ಹೊತ್ತಿಗೆ ಮನೆಯ ಮೇಲೆ ಕೂಳ

ಹಾಕಿ, ಕಟ್ಟಿ, ಬಡಿದುಕೊಂಡು, ಅಳುವ ಲೊಟ್ಟಿಗಳ ಹಟ್ಟಿಯು ಮೊಟ್ಟಿಲಾಗದು. ಅದೇನು ಕಾರಣವೆಂದರೆ, ಅವರು ನಿತ್ಯ ನಿತ್ಯ ವ್ಯತ್ಯಯವಾರಿಯ ಬಾಯತುತ್ತಹರೆಂದು ಎಮ್ಮ ಆದ್ಯರ ವಚನ ಸಾರುತಿಪ್ಪವು ನೋಡಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೮. ಅನ್ನವನಿಕ್ಕಿದರೇನು? ಹೊನ್ನ ಕೊಟ್ಟರೇನು? ಹೆಣ್ಣ ಕೊಟ್ಟರೇನು? ಮಣ್ಣ ಕೊಟ್ಟರೇನು? ಪುಣ್ಯ ಉಂಟೆಂಬರು. ಅವರಿಂದಾದೊಡವೆ ಏನು ಅವರೀವುದಕ್ಕೆ? ಇದಕ್ಕೆ ಪುಣ್ಯವಾವುದು, ಪಾಪವಾವುದು? ನದಿಯ ಉದಕವ ನದಿಗೆ ಅರ್ಪಿಸಿ, ತನ ತನಗೆ ಪುಣ್ಯ ಉಂಟೆಂಬ ಬಡಹಾರುವರಂತೆ ಸದಮಳ ಶಾಶ್ವತ ಮಹಾಘನಲಿಂಗವನರಿಯದೆ, ಇವೇನ ಮಾಡಿದರು ಕಡೆಗೆ ನಿಷ್ಫಲವೆಂಬಾತ ನಮ್ಮ ಬಸವ ಪ್ರಿಯ ಕೂಡಲ ಚನ್ನ ಬಸವಣ್ಣಾ.

೧೯. ಅಯ್ಯಾ, ಹುಟ್ಟಿದ ಮನುಜರೆಲ್ಲ ಹೊಟ್ಟೆ ಹೊಟ್ಟೆ ಎಂದು ಹೊಟ್ಟೆಗೆ ಹಸಿದು, ಹೊಟ್ಟೆಗೆ ಕುದಿದು, ಹೊಟ್ಟೆಗೆ ಹೊರೆದು, ಹೊಟ್ಟೆಗೆ ತುಂಬಿ, ತಾವು ಬಂದ ಬಟ್ಟೆಯನೆ ಅರಿಯದೆ ಕೆಟ್ಟಿತ್ತು ಜಗವೆಲ್ಲ. ಅದಂತಿರಲಿ. ಇನ್ನು ಆ ಶರಣರ ಮತವೆಂತೆಂದರೆ, ಹೊಟ್ಟೆ ಎಂಬುದನೆ ಮೆಟ್ಟಿಟ್ಟು. ತೂರಿ, ಅಲ್ಲಿದ್ದ ಗಟ್ಟಿಯಾಗಿರ್ದ ಪ್ರಸಾದವನೆ ಊಟವೆಂದು ಹಿಡಿದು, ಮುಟ್ಟಿ ನಿಮ್ಮೊಳೊಡವೆರೆದು, ಬಟ್ಟಬಯಲಾದರು ಕಾಣಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

## ಪ್ರಸಾದಿಯ ಪರಿಪೂರ್ಣತೆ.

೨೦. ಒಳಗೆ ತೊಳೆದು, ಹೊರಗೆ ಮರೆದ ಪ್ರಸಾದಿ, ಕಳೆವೊಳೆಯನೊಂದು ಮಾಡಿದ ಪ್ರಸಾದಿ, ಅಳಿಯ ಬಣ್ಣದ ಮೇಲಿದ್ದ ಅಮೃತವನುಂಡ ಪ್ರಸಾದಿ, ಕಳೆಯ ಬೆಳಗಿನ ಸುಳುಹಿನ ಸೂಕ್ಷ್ಮದಲ್ಲಿ ನಿಂದ ಪ್ರಸಾದಿ, ಇಂತಪ್ಪ ಪ್ರಸಾದಿಯ ಒಕ್ಕುಮಿಕ್ಕಿದ ಕೊಂಡ ಕಾರಣದಿಂದ ನಾನೆತ್ತ ಹೋದೆನೆಂದರಿಯೆನಯ್ಯಾ. ಬಸವಪ್ರಿಯ ಕೂಡಲ ಚನ್ನಬಸವಣ್ಣಾ. ನೀವೆ ಬಲ್ಲಿರಿ.

೨೧. ನಮ್ಮಂತುವ ತಿಳಿದು, ನೋಡಿದರೆ ಪೇಳಿಹೆನು. ಅದೆಂತೆಂದರೆ, ಮೇಲು ಕೀಳಾಯಿತ್ತು. ಕೀಳು ಮೇಲಾಯಿತ್ತು. ನಿರಾಳ ಆಳವಾಯಿತ್ತು. ಆಳ ನಿರಾಳವಾಯಿತ್ತು. ಉತ್ತರ ಪೂರ್ವವಾಯಿತ್ತು. ಪೂರ್ವ ಉತ್ತರ ವಾಯಿತ್ತು. ಗುರುವು ಶಿಷ್ಯನಾಯಿತ್ತು. ಶಿಷ್ಯ ಗುರುವಾಯಿತ್ತು. ಅರ್ಪಿತ ಅನರ್ಪಿತವಾಯಿತ್ತು. ಅನರ್ಪಿತ ಅರ್ಪಿತವಾಯಿತ್ತು. ಇಂತಪ್ಪ ಘನವ ವೇಧಿಸಿ ನುಡಿಯ ಬಲ್ಲರೆ ಆತನೇ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣ ಲಿಂಗಿ, ಶರಣ, ಐಕ್ಯ, ಆತ ಸರ್ವಾಂಗಲಿಂಗಿ, ಆತನಿರ್ದುದೇ ಕೈಲಾಸ, ನಡೆದುದೆ ಬಟ್ಟೆ, ನುಡಿದುದೆ ತತ್ವ, ಇಂತಪ್ಪ ಸರ್ವಾಂಗ ಪ್ರಸಾದಿಯ ಪ್ರಸಾದವ ಕೊಂಡು ಸರ್ವಾಂಗ ಶುದ್ಧವಾಯಿತ್ತು. ನಾ ನಿಮ್ಮ ಪಾದದೊಳು ನಿರ್ಮುಕ್ತನಾಗಿ ಏನೂ ಇಲ್ಲದಂತಾದೆನಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೨೨. ಹೊತ್ತು ಹೊತ್ತಿಗೆ ನಿತ್ಯರ ಸಂಗವ ಮಾಡಿ, ಕರ್ತುವೆಂಬುದನರಿದೆ. ನಾ ಭೃತ್ಯನೆಂಬುದನರಿದೆ. ಸತ್ಯವೆಂಬುದನರಿದು, ಸದಾಚಾರವಿಡಿದು ತುದಿ ಮೊದಲು ಕಡೆನಡುವೆ ಆದಿಅನಾದಿಗೆ ನಿಲುಕದ ಘನ ವೇದ್ಯ ಲಿಂಗವ ಕಂಡೆ. ಆ ಲಿಂಗವ ಸೋಂಕಲೊಡನೆ ಲಿಂಗದಂತಾದೆ. ಜಂಗಮವ ಮುಟ್ಟಿ ಪೂಜಿಸಲೊಡನೆ ಜಂಗಮದಂತಾದೆ. ಪ್ರಸಾದವ ಕೊಳ್ಳಲಾಗಿ, ಆ ಪ್ರಸಾದದಂತಾದೆ. ಇನ್ನು ಪರವಿಲ್ಲವೆಂದು ಪ್ರಸಾದದಲ್ಲಿಯೇ ತಲ್ಲಿಯ್ಯವಾದೆ. ಇದ ಬಲ್ಲವರು ನೀವು ಕೇಳಿ. ಎನ್ನ ಹಮ್ಮು ಬಿಮ್ಮು ಉಂಟೆನ್ನಬೇಡ. ಇದಕ್ಕೆ ದೃಷ್ಟವ ಹೇಳಿಹೆ ಕೇಳಿರಣ್ಣಾ! ಕೀಡಿ ತುಂಬಿಯ ಸ್ನೇಹದ ಹಾಗೆ. ಶರಣನಾದರೆ ಜ್ಯೋತಿ ಜ್ಯೋತಿಯ ಮುಟ್ಟಿದ ಹಾಗೆ. ದರ್ಪಣ ದರ್ಪಣದೊಳಗೆ ಅಡಗಿದ ಹಾಗೆ. ಇದರೊಪ್ಪವ ಬಲ್ಲವರು ತಪ್ಪದೆ ಎನ್ನಂಗ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೨೩. ಇಂತಪ್ಪ ಘನವ ನಗಲಿಸಿದ ಮಹಾಪ್ರಸಾದಿಯ ನಿಲವೆಂತಿಪ್ಪುದೆಂದರೆ, ಉರಿಯುಂಡ ಕರ್ಪುರದಂತೆ, ಶರಧಿಯ ಬೆರೆದ ಸಾರದಂತೆ, ನೀರೊಳಗೆ ಬಿದ್ದ ಆಲಿಯಂತೆ, ಉರಿಯ ಗಿರಿಯ ನೆಚ್ಚ ಅರಗಿನ ಬಾಣದಂತೆ, ಪರಿಮಳವನುಂಡ ಹರಿಯಂತೆ. ಇದರ ವಿವರವನರಿದರೆ, ಪರವ ಬಲ್ಲವ, ತನ್ನ ಬಲ್ಲವ, ಎಲ್ಲವು ತನ್ಮಯನಾಗಿರುವ. ಇಂತಪ್ಪ ಅಣುವಿಂಗಣುವಾಗಿ ನಿಂದ ಮಹಾ ಪ್ರಸಾದವ ನಾನೆತ್ತ ಬಲ್ಲೆನಯ್ಯ? ಇದ ಬಲ್ಲ ಪ್ರಸಾದಿ

ಗಳ ಸೊಲ್ಲಿನೊಳಗೆ ನಾನಡಗಿದೆನಯ್ಯಾ ನಿಮ್ಮ ಧರ್ಮ ನಿಮ್ಮ ಧರ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೨೪. ನಾ ಹುಟ್ಟಿದಂದಿಂದ, ಎನ್ನ ಹೊಟ್ಟೆಗೆ ಕಾಣದೆ, ಮೂರು ವಟ್ಟೆಯನೆ ಕಾದಿರ್ದೆನೈಯ್ಯಾ. ಹೊಟ್ಟೆಯ ಒಡೆಯರು ಹೊಟ್ಟೆಯ ಹೊಡೆದು ಹೋದರೆ ಎನ್ನ ಹೊಟ್ಟೆ ತುಂಬಿತ್ತು. ಹೊಟ್ಟೆಯ ಒಡೆಯರು ಹೊಟ್ಟೆಯ ಹೊಡೆದು ಹೋದರೆ, ಎನ್ನ ಹೊಟ್ಟೆ ಏಕೆ ತುಂಬಿತ್ತೆಂದು ನೋಡಿದರೆ, ಅಲ್ಲಿ ಬಟ್ಟೆ ಬಯಲಾಗಿದ್ದಿತ್ತು ಕಾಣಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.



# ಪ್ರಾಣಲಿಂಗಿಸ್ಥಲ.

## ಪ್ರಾಣಲಿಂಗಿಯ ಸ್ವರೂಪು.

೧. ಪ್ರಾಣಲಿಂಗಿ ಪ್ರಾಣಲಿಂಗಿ ಎಂದು ನುಡಿದಾಡುತಿಪ್ಪಿರಿ. ಪ್ರಾಣಲಿಂಗದ ನೆಲೆಯನಾರು ಬಲ್ಲರು? ಪ್ರಾಣಲಿಂಗಿಯಾದರೆ ವಾಯು ಪ್ರಾಣವನಿಲಿಸಿ, ಲಿಂಗ ಪ್ರಾಣವಾಗುವದೀಗ ಪ್ರಾಣಲಿಂಗ. ಪ್ರಾಣಲಿಂಗಿಯಾದರೆ, ಗುರುಲಿಂಗಜಂಗಮದ ಪಾದೋದಕ ಪ್ರಸಾದವ ತನ್ನೊಳರಿದು ಮೈಮರೆದು ಪರವಶನಾಗಿ, ಲಿಂಗದೊಳಗೆ ಬೆರಸುವದೀಗ ಪ್ರಾಣಲಿಂಗಿ. ಇದನರಿಯದೆ ವಾಯು ಪ್ರಾಣವಾಗಿ, ಬಾಯ ನುಡಿಯ ಬಲ್ಲಿದರಾಗಿ, ಬೊಗುಳಿಯಾಡುವ ಜಾವಳರ ಮಾತ ಮೆಚ್ಚುವನೆ, ನಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ?

೨. ಅಯ್ಯಾ, ಎನ್ನಂಗದಲಿಪ್ಪ ಅರಿವ ಕಂಡು ತೆಗೆದೆನ್ನ ಅಂಗಕ್ಕೆ ಹೊದಿಸಿದೆ. ಆ ಲಿಂಗದಲ್ಲಿಪ್ಪ ಅರಿವ ಕಂಡೆನ್ನ ಕಂಗಳು ನುಂಗಿತ್ತು. ಆ ಕಂಗಳೊಳಗಣ ತಿಂಗಳ ತಿರುಳ ಮಂಗಳದ ಮಹಾ ಬೆಳಗಿನ ಶೃಂಗಾರದೊಳು ನಾನೋಲಾಡುತಿಪ್ಪೆನಯ್ಯಾ. ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೩. ಅಂಗ ಲಿಂಗವೆಂದರಿದ ಬಳಿಕ, ಲಿಂಗ ಅಂಗವೆಂದರಿದ ಬಳಿಕ, ಇನ್ನೊಂದು ಸಂಗ ಉಂಟೆಂದು ಏಕೆ ಅರಸುವಿರಯ್ಯಾ? ಸಂಗ ಉಂಟೆಂಬನಕ, ಕಂಗಳ ಪಟಲ ಹರಿದುದಿಲ್ಲ. ಅದು ಮರವೆಗೆ ಬೀಜ. ಈ ಮರಹಿಂದಲೆ ನೆರೆ ಮೂರುಲೋಕವೆಲ್ಲ ಬರಿ ಸೂರೆ ಹೋಯಿತು. ಅರಿದ ಶರಣಂಗೆ ಅಂಗ ಲಿಂಗಸಂಬಂಧವಿಲ್ಲ. ಅಂಗ ಲಿಂಗ ಸಂಬಂಧವಳಿದ ಬಳಿಕ ಪ್ರಾಣ ಲಿಂಗಸಂಬಂಧ. ಲಿಂಗ ಪ್ರಾಣಿ ಇವನರಿದರೆ ಲಿಂಗ ಸಂಬಂಧಿ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೪. ಅಂಗಲಿಂಗವಾಯಿತ್ತೆಂಬಿರಿ, ಲಿಂಗಅಂಗವಾಯಿತ್ತೆಂಬಿರಿ. ಅಂಗಲಿಂದ ಸಂಬಂಧ ಎಲ್ಲರಿಗೆ ಎಂತಾಯಿತ್ತು ಹೇಳಿರಣ್ಣಾ. ಅಂಗಲಿಂಗ ಸಂಬಂಧವಾದರೆ, ಗುರುವಿನಲ್ಲಿ ಗುಪ್ತನಾಗಿರಬೇಕು. ಲಿಂಗದಲ್ಲಿ ನಿಷ್ಠನಾಗಿರಬೇಕು. ಜಂಗಮದಲ್ಲಿ ಅವಧಾನಿಯಾಗಿರಬೇಕು. ಇವ ಮೂರರಲ್ಲಿ ದೂರಾಗಿಪ್ಪರ ಎನಗೊಮ್ಮೆ ತೋರದಿರಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೫. ಲಿಂಗ ನಯನದಲ್ಲಿ ನೋಡುತ್ತ, ಲಿಂಗ ಜಿಹ್ವೆಯಲ್ಲಿ ನುಡಿವುತ್ತ, ಲಿಂಗ ಹಸ್ತದಲ್ಲಿ ಮುಟ್ಟುತ್ತ, ಲಿಂಗ ನಾಸಿಕದಲ್ಲಿ ವಾಸಿಸುತ್ತ, ಲಿಂಗಸ್ತೋತ್ರವ ಕೇಳುತ್ತ, ಲಿಂಗ ಪಾದದಲ್ಲಿ ನಡೆವುತ್ತ, ಸರ್ವಾಂಗ ಲಿಂಗಮಯವಾದ ಶರಣ ಸಂಗ ಸುಖದೊಳಗೆನ್ನನಿರಿಸಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣ.

೬. ಅಂಗ ಗುಣಂಗಳನೆಲ್ಲ ಅನಲಂಗಿಕ್ಕಿ ಲಿಂಗ ಗುಣವನೆ ಗಟ್ಟಿಮಾಡಿ ಕಂಗಳು ಲಿಂಗ ಕರಸ್ಥಲ ಜಂಗಮದ ಇಂಗಿತವನರಿದರೆ ಬಸವ ಪ್ರಿಯ ಕೂಡಲ ಚನ್ನಬಸವಣ್ಣ.

೭. ಭಕ್ತನೊಂದು ಕುಲ ಭವಿಯೊಂದು ಕುಲವೆಂಬರು. ಭಕ್ತನೆಂತಿಪ್ಪ, ಭವಿಯೆಂತಿಪ್ಪನೆಂದರೆ, ಆರು ಅರಿಯರು. ಇದು ಬಲ್ಲವರು ತಿಳಿದು ನೋಡಿ. ಭಕ್ತನೆಂದರೆ ಅಂಗ, ಭವಿ ಎಂದರೆ ಲಿಂಗ. ಈ ಎರಡರ ಸಕೀಲ ಸಂಬಂಧವನರಿದರೆ, ಆತನೆ ನಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೮. ಅವಿರಳ ಲಿಂಗವ ಕಂಡಿಹೆನೆಂದು ಅವರಿವರಲ್ಲಿನ್ನೇನ ಕೇಳುವಿರಿ? ಭವ ವಿರಹಿತ ಗುರಲಿಂಗಜಂಗಮದೊಳು ತಾವೆ ಬೆರೆಯ ತಲ್ಲೀಯವಾಗಿಪ್ಪಲ್ಲಿಗೆ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೯. ಮರದೊಳಗಣ ಕಿಚ್ಚು ಮರನ ಸುಡುತಿದ್ದಿತ್ತೈಯ್ಯ. ಮರ ಬೆಂದು ನಿಂದುರಿಯಿತ್ತು. ಮಣ್ಣು ಜರಿದು ಬಿದ್ದಿತ್ತು. ಉರಿ ಹೋಗಿ ನಂದಿತ್ತು. ಸ್ವಯಂ ಪ್ರಕಾಶವಾಗಿಪ್ಪ ಎಲೆ ಉಳಿಯಿತ್ತು. ಉರಿ ಬಂದು ಎನ್ನ ಕರಸ್ಥಲದಲ್ಲಿ ಅಡಗಿತ್ತು. ಇದ ಕಂಡು ನಾ ಬೆರಗಾಗಿ ನೋಡುತಿರ್ದೆನೈಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೦. ಆದಿಅನಾದಿ ಎಂದು ನೀವು ಗಾದೆಯಮಾತ ನುಡಿದಾಡುವಿರಿ. ಇದರ ಭೇದಾದಿ ಭೇದವ ಬಲ್ಲಿರೆ ನೀವು ಹೇಳಿರೋ. ಅಂಗವನೆ ಆದಿಯ ಮಾಡಿ, ಸಂಗವನೆ ಅನಾದಿಯ ಮಾಡಿ, ಈ ಎರಡರ ಮಧ್ಯದಲ್ಲಿಪ್ಪ ಲಿಂಗವ ಸ್ಥಾಪ್ಯವ ಮಾಡಿದವರಾರೋ? ಅಲ್ಲಿ ಮಾಂಗಲ್ಯಕ್ಕೆ ಮಂಗಲ್ಯವಾದ ಶೃಂಗಾರವ ಸಿಲಿಸಿದವರಾರೋ? ಅಲ್ಲಿಗೆರಡು ಕಂಗಳ ಧವಳಾರವ ಹೂಡಿದವರಾರೋ? ಈ ಕಂಗಳ ಧವಳಾರವದಿಂದ ನೋಡಿದವರು ಹೆರೆಹಿಂಗಲಾ

ರದೆ, ಆ ಲಿಂಗಗೂಡಾದರು ಕಾಣಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೧. ಅಯ್ಯ ಎನ್ನ ಹಲ್ಲ ಮರೆಯಲ್ಲಿಪ್ಪ ಬೆಲ್ಲವ ಕಂಡು, ಎಲ್ಲರು ಮೆಲ್ಲ ಬಂದರು. ಈ ಬೆಲ್ಲಗಳಿದ್ದರೆ ನಿಲ್ಲಲೀಸದೆ, ಎನ್ನ ಕಾಡುತಿದ್ದರೆಂದು ಆ ಬೆಲ್ಲವನಲ್ಲಿಯೆ ನುಂಗಿದರೆ, ಆ ಹಲ್ಲು ಮುರಿದು, ಮೆಲ್ಲ ಬಂದವರೆಲ್ಲ ಅಲ್ಲಿಯೆ ಬಯಲಾದರು. ನಾ ನಿಮ್ಮಲ್ಲಿ ಕೂಡಿ ಸ ಖಿಯಾಗಿದ್ದೆನಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೨. ರಾಗ ರಚನೆಯ ಬಲ್ಲೆನೆಂಬ ವ್ಯಂಗಿ ಮನುಜರಿರಾ, ನೀವು ಕೇಳಿ. ರಾಗವಾವುದು ರಚನೆಯಾವುದು, ಬಲ್ಲಿರೆ ನೀವು ಹೇಳಿರೋ. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ಈ ರಾಗದ್ವೇಷವ ಹಿಡಿದು, ಕೂಗಿಡುವುದೆಲ್ಲವು ರಾಗವೇ? ವೇದಪುರಾಣಾಗಮಶಾಸ್ತ್ರವನೋದಿ ಕಂಡವರ ಬೋಧಿಸುವವೆಲ್ಲ ರಚನೆಯೆ? ಅಲ್ಲ. ಇನ್ನು ರಾಗವಾವುದು ಎಂದರೆ ಝೇಂಕಾರದ ಪ್ರಣಮದ ನಾದವನರಿಯ ಬಲ್ಲರೆ ರಾಗ. ಇನ್ನು ರಚನೆಯಾವುದು ಎಂದರೆ, ಯೋಗಿ, ಜೋಗಿ, ಶ್ರವಣ, ಸನ್ಯಾಸಿ, ಕಾಳಾಮುಖಿ, ಪಾಶುಪತ ಷಡುದರ್ಶನಕ್ಕೆ ಶೃತವ ತೋರಿ ನುಡಿದು ದೃಷ್ಟವ ತೋರಿ ನಡೆದು ಅಲ್ಲದಿದ್ದರೆ ನೀತಿಯ ತೋರಿ ಮೆರೆವುದೀಗ ರಚನೆ. ಇದನರಿಯದೆ ನಾನು ರಾಗ ರಚನೆಯ ಬಲ್ಲೆನೆಂದು ನುಡಿವ ಮೂಗು ಹೋದ ಮೂಕೊರೆಯರ ಮೆಚ್ಚುವನೇ ನಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ?

೧೩. ಆಣವಮಲ, ಮಾಯಾಮಲ, ಕಾರ್ಮಿಕಮಲದೊಳಗಣ, ಆಟಕೋಟಲೆ ಅಡಗದೆ, ಕಂಡ ಕಂಡವರೊಳಗಣ ನುಡಿ ನೋಟ ಹಿಂಗದೆ, ಮಾಟಕೂಟ ಜಪ ಕೋಟಲೆಯಿಂದ ನಟಿಸಿ ಲಿಂಗವ ನೋಡಿ ಕೂಡಿಹೆನೆಂಬುವರ ಬದುಕೆಂತಾಯಿತೆಂದರೆ, ನೋಟ ಗಂಡನ ಮೂಕೊರಿತೆ ಹೆಂಡತಿ, ಬೇಟವ ಮಾಡಿದಂತಾಯಿತ್ತು ಕಾಣಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೪. ಕೂಟವಿಲ್ಲದ ಮಾಟ, ಬೇಟವಿಲ್ಲದ ನೋಟ, ಅರಿವಿಲ್ಲದ ಕೂಟ, ಓಟವಿಲ್ಲದ...ನಾಲ್ಕರ ಅನುವನರಿಯದೆ ನುಡಿವುದೆ ಜಗದಾಟ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೫. ಜಪ ತಪ ನೇಮ ನಿತ್ಯದಿಂದ ನಿಶ್ಚಿಂತ ರೂಪನ ಕಂಡೆ. ಏನೆಂಬಿರಿ? ಆ ಪರಾತ್ಪರದೊಳಗಾಡುವ ಶರಣರ ಪಾದ ನಖದೊಳ್ಬೆರೆಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣ.

೧೬. ಆಟ ಕೋಟಲೆ ಎಂಬ ರಾಟವಾಳವ ಮುರಿದು, ನೋಟ ನುಡಿಗಳೆಂಬುವ ಸೂತ್ರವರಿದು, ದಾಟಿ ಸಪ್ತಮುದವೆಂಟು, ನೋಟ ಬೇಟದೊಳು ಲಿಂಗದೊಳು ಬೆರೆದಿದ್ದರೆ ಬಸವ ಪ್ರಿಯ ಕೂಡಲ ಚನ್ನಬಸವಣ್ಣ.

೧೭. ಅಯ್ಯ ಎನ್ನಂಗದ ಮೇಲಿಪ್ಪಲಿಂಗವು ಕರ್ಪೂರದಂತಾಯಿತ್ತು. ಎನ್ನ ಪ್ರಾಣದ ಮೇಲಿಪ್ಪ ಲಿಂಗವು ಪರಂಜ್ಯೋತಿಯಂತಾಯಿತ್ತು. ಎನ್ನ ನಿಃಪ್ರಾಣದ ಮೇಲಿಪ್ಪ ಲಿಂಗವು ನಿರಂಜನದಂತಾಯಿತ್ತು. ಈ ತ್ರಿವಿಧವು ಏಕವಾದ ಭೇದವ ಹೇಳಿಹೆನು ಕೇಳಿರಣ್ಣಾ! ಎನ್ನ ಅಂಗದ ಮೇಲಿದ್ದ ಕರ್ಪೂರದಂತಿರ್ದ ಲಿಂಗ, ಪ್ರಾಣದ ಮೇಲಿಪ್ಪ ಪರಂಜ್ಯೋತಿ ಲಿಂಗವ ಬೆರೆಯಿತ್ತು. ಎನ್ನ ಪ್ರಾಣದ ಮೇಲಿಪ್ಪ ಪರಂಜ್ಯೋತಿ ಲಿಂಗ, ನಿಃಪ್ರಾಣದ ಮೇಲಿಪ್ಪ ನಿರಂಜನ ಲಿಂಗವ ಬೆರೆಯಿತ್ತು. ಈ ತ್ರಿವಿಧವು ಏಕವಾದ ಮೇಲೆ, ಒಂದಲ್ಲದೆ ಎರಡುಂಟೆ? ಇದಕ್ಕೆ ಸಂದೇಹ ಬೇರಿಲ್ಲವಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

## ಮನಸ್ಸಿನ ಏಕಾಗ್ರತೆ.

೧೮. ಒಳಹೊರಗೆಂಬೆರಡು ಬಟ್ಟೆಗಳೊಳು ಸುಳಿದು ಸೂಸುವ ಬೆಳಗನೆ ಕಂಡು ತಳುವಿಲ್ಲದೆ ಮನವನೆ ನೋಡಿ ಆ ಬೆಳಗಿನೊಳ್ಬೆರೆದರೆ ಬಸವ ಪ್ರಿಯ ಕೂಡಲ ಚನ್ನಬಸವಣ್ಣ.

೧೯. ಈಯನುವನರಿದು ಲಿಂಗವ ನೋಡಿ ಕೂಡಿಹೆನೆಂದರೆ ಮನವನೆಲ್ಲವ ನಿಲಿಸಿ ಇರಬೇಕು. ಈ ಘನ ಪರಾಕ್ರಮವುಳ್ಳ ಭಕ್ತರ ತನುವೆ ಲಿಂಗ ಬಸವಪ್ರಿಯ ಕೂಡಲ ಚನ್ನಬಸವಣ್ಣ.

೨೦. ಆಶಿರೋಷವೆಂಬ ದ್ವೇಷವ ಬಿಟ್ಟು, ದೋಷ ದುರಿತವ ಬಿಟ್ಟು, ಕ್ಲೇಶವ ಹರಿದು, ಸಾಸಿರ ಮುಖದೊಳು ಸೂಸುವ ಮನವ ನಿಲ್ಲಿಸಿ, ನಿರಾಶಿಕನಾಗಿ ನಿಂದರೆ, ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೨೧. ಹರಹರ ಎಂದು ಹತ್ತು ಬಾರಿ ಎನಬಹುದಲ್ಲದೆ ಹರಿವ ಮನವ ಮೆಟ್ಟಿ ಮನವ ಲಿಂಗದೊತ್ತಿನಲ್ಲಿ ನಿಂದಿರಲರಿಯದು ನೋಡಾ! ಇದು ಕಾರಣ ತನುವ ಗುರುವಿಂಗಿತ್ತು, ಮನವ ಲಿಂಗಕ್ಕಿತ್ತು, ಧನವ ಜಂಗಮಕ್ಕಿತ್ತು, ತ್ರಿವಿಧವನು ತ್ರಿವಿಧ ಕಿತ್ತಬಳಿಕ, ಒಂದಲ್ಲದೆ ಎರಡುಂಟೆ? ಇದು ಮುಂದೆ ಆವನಾನೊಬ್ಬ ಭಕ್ತನು ನೋಡಿ ನಡೆವುದಕ್ಕೆ ಇದೆ ಸಾಧನ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೨೨. ಮನವೆ ಮಾರುತನ ಒಡಗೂಡಿರ್ದು, ತನುವೆ ವಿಕಾರದೊಳಗಿರ್ದು, ಮನವೆಂತು ಕಂಡಿತ್ತೆಂಬಿರಿ? ಎಲೆ ಅಣ್ಣಗಳಿರಾ, ಘನವೆಂತಿಪ್ಪುದೆಂದರೆ, ಈ ತನುವ ಮರೆದು, ಹರಿವ ಮನವ ಲಿಂಗದಲಿ ನಿಲಿಸಿ, ಈ ಜನಿತಕ್ಕೆ ನಾನಿನ್ನಾರೆಂದು ತ್ರಿಕಾಲದಲ್ಲಿಯೂ ಎಮ್ಮ ಶರಣರಿಗೆ ನೆನೆವನೇ ನಿತ್ಯನು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

---

## ಶಿವಯೋಗ.

೨೩. ಹಾಲಸಾಗರದೊಳು ತೇಲಾಡುತಿದ್ದು ಚಿಲುಮೆಯ ನೀರಿಗೆ ಹರಿದಾಡಬೇಡ. ಮೇಲುಗಿರಿ ಶಿಖರದ ಪಶ್ಚಿಮದಿ ತೇಲಾಡುತಿರೆ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೨೪. ಈಡಾಪಿಂಗಳ ಸುಷುಮ್ನನಾಳದ ಗಾಢ ಅಗಮ್ಯವನರಿದು ನೋಡೆ, ಬ್ರಹ್ಮರಂಧ್ರವ ತಟಿ ಹಾಯ್ದು ಕೂಡಾಡಿ ಪಶ್ಚಿಮದೋಳ್ಬೆರೆದರೆ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೨೫. ಹಳಿಯ ಹುತ್ತದೊಳಗೆ ಒಂದು ಎಳಿಯ ಸರ್ಪನ ಕಂಡೆ. ಆ ಎಳಿಯ ಸರ್ಪ ಹೊರಟು, ಬೆಳಗು ಕತ್ತಲೆ ಎರಡ ನುಂಗಿತ್ತು. ಆ

ಎಳೆಯ ಸರ್ಪನ ಕಂಡು, ಅಲ್ಲಿರ್ದ ತಳಿರ ಮರನ ನುಂಗಿತ್ತು. ಆ ತಳಿರ ಮರನ ಕಂಡು, ಬೆಳಗು ನುಂಗಿತ್ತು. ಆ ಬೆಳಗ ಕಂಡು ನಾ ಒಳಗೆ ಹೊರಗೆ ಹೊಕ್ಕು ನೋಡಿದಡೆ, ಒಳಹೊರಗೆ ತೊಳತೊಳಗಿ ಬೆಳಗುತಿರ್ದೆನೈಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣ.

೨೬. ಆಧಾರದ ಕುಂಡಲಿ ಸರ್ಪನ ಮಂಡೆಯ ಮೆಟ್ಟಿ ನಿಲಲು, ಗಂಡರೆಳು ಕಾಲ ಕಾಮರಿಬ್ಬರು ಹತವಾದರು. ಅವರ ಹೆಂಡಿರುಗಳು ಮುಂಡೆ ಮುಚ್ಚಿದರು. ದಂಡೆಯ ಮುಡಿದರು. ತೊಂಡಿಲ ಹರಿದರು. ತಮ ಗಂಡರ ಕೂಡ ಸಮಾಧಿಯ ಹೊಕ್ಕರು. ಇವರ ಕಂಡು ನಾಚಿ ಬೆರಗಾಗಿ ಮುಂದೆ ನೋಡಲು, ಒಂದೂ ಇಲ್ಲದೆ ಸಂದು ಸಂಶಯ ವಳಿಯಲು, ಹೊಂಚದ ಬಟ್ಟೆಯನೆ ಹೊಂದಿದೆ. ಬಂದ ಬಟ್ಟೆಯನೊಲ್ಲದೆ ನಿಮ್ಮವರ ಚರಣದಲ್ಲಿ ಒಂದಿದೆನಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣ. ಇದ ರಂದವ ತಿಳಿದು ನೋಡಿದ ಶರಣರೇ ಬಲ್ಲರು.

೨೭. ಹುತ್ತದ ಮೇಲೊಂದದು ಕಸ್ತುರಿಯ ಮೃಗವ ಕಂಡೆ. ಅದಕ್ಕೆ ಉಧಯ ಅಸ್ತಮಯವಿಲ್ಲ. ಒದವಿದ ಅಮೃತವನುಂಬುದು. ಸದಮಲ ವಾಸನೆಯ ತೀಡುವುದು. ಆ ವಾಸನೆಯ ಬೆಂಬಳಿವಿಡಿದು, ನಾನು ಆ ವಾಸಕ್ಕೆ ಹೋಗಿ, ದೇಶದ ಹಂಗು ಮರೆದು, ಸಾಸಿರ ಮುಖವಾಗಿಪ್ಪ ಈಶನೊಳು ಲೇಸಿಂದ ಬೆರೆದು, ಮಿಸಲಳಿಯದೆ ಐಕ್ಯವಾದೆನೈಯ್ಯ ಒಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೨೮. ಬಯಲೇ ರೂಪಾಯಿತ್ತು. ನಿರ್ವಲೇ ನಿರೂಪಾಯಿತ್ತು. ಸರ್ವಾಂಗದೊಳು ಉರಿ ವೇಧಿಸಿತ್ತು. ಅಲ್ಲೊಂದು ಸದಮದ ಗಜ ಹಯನಾಯಿತ್ತು. ಅಮೃತವನೆ ಉಂಡಿತ್ತು. ಮಧುರಸವನೇ ಉಂಡಿತ್ತು. ನಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣನ ಕೂಡಿತ್ತು.

೨೯. ಅಂಗಕ್ಕೆ ಲಿಂಗಕ್ಕೆ ಪೊಂಗೆ ಪರಿಮಳದ ಶೃಂಗಾರದ ಹಾರ. ಕಂಗಳ ಬೆಳಗಿನಲ್ಲಿ ಮಂಗಳದ ಮಹಾ ಬೆಳಗಿರುತಿರಲು, ಇದ ಅಂಗ ವಿಸಿ ನೋಡಿ, ಎರಡರ ಸಂಗಸುಖವನೊಂದುಗೂಡಿ ತಾನೇ ಬೇರೆ ಲಿಂಗ ವಾಗಿ ನಿಂದು ಅಂಗವಳಿಯದೆ, ಬಿಂದು ತುಳುಕದೆ, ನಂದಿ ಮುಂದು ಗೆಡದ ಮುನ್ನ, ನಿಮ್ಮೊಳು ಒಂದಾದ ಲಿಂಗೈಕ್ಯವನರಿದು ಕಣ್ದೆರೆದು,

ಕರಗಿ ಅಲಿ ನೀರಾದಂತಾದೆನಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೩೦. ಅಶನ ವ್ಯಸನಕ್ಕಾಗಿ ಒಂದು ಪಶುವು ಹುಟ್ಟಿತ್ತು. ತನ್ನ ಸುಖವನರಿಯಲಾಗಿ, ತನಗೊಂದು ಶಿಸು ಹುಟ್ಟಿತ್ತು. ಆ ಶಿಸುವಿನ ಮೇಲಣ ಮೋಹದಿಂದ, ಮೊಲೆಯಲ್ಲಿ ಅಮೃತ ಪುಟ್ಟಿತ್ತು. ಅಮೃತವ ಸೇವಿಸಿ, ಆ ಶಿಸುವು ನಲಿದಾಡುವದ ಕಂಡು, ನಾನದರ ಬೆಂಬಳಿವಿಡಿದು ಹೋಗಿ, ಅದು ಕೊಂಬ ಅಮೃತವ ನಾ ಕೊಳ್ಳಲಾಗಿ, ಪರಮ ಸುಖ ಪರಿಣಾಮ ತಲೆದೋರಿತ್ತು, ಅದರ ನೆಲೆವಿಡಿದು, ತಲೆಹೊಲನಗನೇರಿ ನೋಡಲಾಗಿ, ಉಲುಹು ಅಡಗಿತ್ತು. ಪುರದಗಲಕೆ ನಿಂದಿತ್ತು. ಇಳಿದು ಬರುವುದಕ್ಕೆ ನಾ ಹಾದಿಯ ಕಾಣದೆ, ಅದರಲ್ಲಿಯೇ ನಾ ನಿರ್ಮುಕ್ತನಾದೆನೈಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣ.

೩೧. ಅಯ್ಯ ಆರು ಇಲ್ಲದ ಅರಣ್ಯದಲ್ಲಿ ನಾನಡಿ ಇಟ್ಟು ನಡೆವುತಿರ್ದೆನೈಯ್ಯ! ಮುಂದೆ ಬರ ಬರ ಮಹಾ ಸರೋವರವ ಕಂಡೆ. ಆ ಸರೋವರದೊಳಗೊಂದು ಹಿರಿಯ ಮೃಗವ ಕಂಡೆ. ಆ ಮೃಗಕ್ಕೆ ಕೊಂಬುಂಟು. ತಲೆ ಇಲ್ಲ. ಬಾಯುಂಟು. ಕಣ್ಣಿಲ್ಲ. ಕೈಯ್ಯುಂಟು. ಬೆರಳಿಲ್ಲ. ಕಾಲುಂಟು ಹೆಜ್ಜೆ ಇಲ್ಲ. ಒಡಲುಂಟು ಪ್ರಾಣವಿಲ್ಲ. ಇದ ಕಂಡು, ನಾ ಹವ್ವನೆ ಹಾರಿ ಹೆದರಿ ಬಿದ್ದೆನೈಯ್ಯ. ಆಗ ಎನ್ನ ಹೆತ್ತ ತಾಯಿ ಬಂದು ಎತ್ತಿ ಕುಳ್ಳಿರಿಸಿ ಚಿತ್ತ ಮೂಲಾಗ್ನಿಯ ಒತ್ತಿ ಉರುಹಿದರೆ, ಎಲ್ಲವು ಸುಟ್ಟು ಬಟ್ಟಬಯಲಾದವು. ಬಟ್ಟಬಯಲೊಳಗೆ ಅಡಿ ಇಟ್ಟು ನಡೆವಾಗ, ಮುಂದೆ ಇಟ್ಟಡಿಯ ಬಾಗಿಲೊಳಗೆ ಮತ್ತೊಂದು ಮೃಗವ ಕಂಡೆ. ತಲೆಯುಂಟು. ಕೊಂಬಿಲ್ಲ. ಕಣ್ಣುಂಟು. ಬಾಯಿಲ್ಲ. ಹಸ್ತವುಂಟು. ಕೈಯ್ಯಿಲ್ಲ. ಹೆಜ್ಜೆಯುಂಟು. ಕಾಲಿಲ್ಲ. ಪ್ರಾಣವುಂಟು. ಒಡಲಿಲ್ಲ. ಇದನು ಕಂಡು ನಾನಪ್ಪಿಕೊಳ್ಳ ಹೋದರೆ, ಮುಟ್ಟದ ಮುನ್ನವೆ ಎನ್ನನೆ ನುಂಗಿತ್ತು. ನುಂಗಿದ ಮೃಗ ಮಹಾಲಿಂಗದಲ್ಲಿಯೆ ಅಡಗಿತ್ತು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೩೨. ಅಯ್ಯಾ ಹಾಳೂರೊಳಗೊಂದು ಹಗೆಯ ಕಂಡೆನೈಯ್ಯ. ಆ ಹಗೆಯದ ಮೇಲೊಂದು ಬಾವಿ ಹುಟ್ಟಿತ್ತು. ಆ ಹಗೆಯದ ಬಾವಿಯ ನಡುವೆ ವಡಬಾಗ್ನಿ ಎಂಬ ಕಿಚ್ಚು ಹುಟ್ಟಿತ್ತು. ಆ ಹಗೆಯದ ಧಾನ್ಯವಂ

ತೆಗೆದು, ಬಾವಿಯ ನೀರ ಮೊಗೆಮೊಗೆದು ವಡಬಾಗ್ನಿ ಎಂಬ ಕಿಚ್ಚಿನೊಳಗೆ ಅಡಿಗೆಯ ಮಾಡಿಕೊಂಡು, ಉಂಡುಂಡು ಬಂದರು. ಹಲಬರು ಕೆಲಬರು ಉಂಡುಟ್ಟಾಡಿ ಗಂಡು ಗೆಲುವುದ ಕಂಡು ತಾಳಲಾರದೆ, ಕುಂಡಲಿಯ ಅಗ್ನಿಯನೆ ಎಬ್ಬಿಸಿ, ಉರುಹಿದರೆ ಇವರೆಲ್ಲ ದಹನವಾದರು. ಆ ಹಗೆಯು ಬಿದ್ದಿತ್ತು. ಬಾವಿಯು ಬತ್ತಿತ್ತು. ವಡಬಾಗ್ನಿ ಎಂಬ ಕಿಚ್ಚು ಕೆಟ್ಟಿತ್ತು. ಇದ ಕಂಡು ನಾನು ನಿರ್ಮೋಹಚಿನ್ಮೂರ್ತಿದಂತಿರ್ದೆನಯ್ಯ ಬಸವ ಪ್ರಿಯ ಕೂಡಲ ಚೆನ್ನಬಸವಣ್ಣಾ.

[illegible]೩. ಅತ್ತಿಗೆ ಸತ್ತಳು. ನಾದಿನಿಗೆ ಮೊರೆ ಇಲ್ಲ. ಅತ್ತೆಯ ಕಣ್ಣು ಅರಯಿತ್ತು. ಮಾವನ ಕಾಲು ಮುರಿಯಿತ್ತು. ಭಾವನ ಸಂದು ಸಂದುವೆಲ್ಲ ಮುರಿದವು. ಮೈದುನನ ಮೈಯ್ಯಲ್ಲಿ ಉರಿಯಿತ್ತು. ಹಿತ್ತಿಲ ಗೋಡೆ ಬಿದ್ದಿತ್ತು. ಪಶ್ಚಿಮದ ಬಾಗಿಲು ಬಯಲಾಯಿತ್ತು. ಇದ ನೋಡಿ ಕೂಡಿ, ನಾ ನಿಶ್ಚಿಂತ ನಿಜಲಿಂಗೈಕ್ಯನಾದೆನೈಯ್ಯ ಬಸವ ಪ್ರಿಯ ಕೂಡಲ ಚೆನ್ನ ಬಸವಣ್ಣಾ.

[illegible]೪. ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ ನಾಲ್ಕು ಪಥವನು ಏಕವ ಮಾಡಿ, ಊರ್ಧ್ವಮುಖವ ಮಾಡಿ, ಈಡಾ ಪಿಂಗಳ ನಾಳವಂ ಕಟ್ಟಿ, ಸುಷುಮ್ನ ನಾಳವಂ ಎತ್ತಿ, ಪುನಪವನ ಬಿಂದು ಒಡಗೂಡಿ, ಚಂದ್ರ ಸೂರ್ಯ ಶಿಖಿಯರುಂ ಮುಪ್ಪುರಿಯ ಮಾಡಿ, ಒಡಗೂಡಿ ಏಕವಾಗಿ ಹುರಿಗೂಡಿ ಮರ್ತ್ಯಲೋಕವ ಬಿಟ್ಟು, ದೇವಲೋಕವ ಮೆಟ್ಟಿನಿಂದು, ಭಾವ ಬಯಲಾಗಿ, ಬಯಕೆ ಸವದು ಇನ್ನು ಈ ಲೋಕದೊಳಗೆ, ಬಂದು ಬದುಕಿದೆನೆಂಬುದಕ್ಕೆ ಹೇಯ ಹುಟ್ಟಿ, ಇದಾವುದನೂ ಒಲ್ಲದೆ ಬಸವ ಪ್ರಿಯ ಕೂಡಲ ಚೆನ್ನಬಸವಣ್ಣಾ.

[illegible]೫. ಶೃಂಗಾರದ ಊರಿಗೆ ಒಂಬತ್ತು ಬಾಗಿಲು, ಐದು ದಿಡ್ಡಿ, ಎರಡು ತೋರಗಂಡಿ, ಐವರು ತಳವಾರರು, ಮೂವರು ಪ್ರಧಾನರು, ಇಬ್ಬರು ಶಾನಭೋಗರು, ಒಬ್ಬ ಅರಸು, ಅರಸಿಂಗೆ ಐವರು ಸೂಳೆಯರು. ಅವರ ಬಾಗಿಲ ಕಾವರು ಹತ್ತುಮಂದಿ, ಅವರ ಪಾರಿಪಡ ಕಳೆದವರು ಇಪ್ಪತ್ತೈದು ಮಂದಿ, ಅವರ ಭಂಡಾರ ಬೊಕ್ಕಸ, ಅಟ್ಟುಮಣಿಹ ಹರಿಮಣಿಹ, ಕಟ್ಟಿಗೆಯವರು ಭೋ ಹೋ ಎಂದು ಕೊಂಡಾಡುವರು. ಮುವತ್ತಾರು ಮಂದಿ ಚೂಣಿಯರು. ಹುಯ್ಯಲ ಕಾಲಾಳುಗಳು

ನೂರನಾಲ್ವತ್ತೆಂಟು. ಈ ಸಂಭ್ರಮದಲ್ಲಿ ಆ ಮನವೆಂಬ ಅರಸು ಸುಖ ಸಂತೋಷದಲ್ಲಿ ರಾಜ್ಯಂಗೆಯ್ಯುತ್ತಿರಲು, ಇತ್ತ ಶರಣ ತನ್ನ ತಾನೆ ಎಚ್ಚತ್ತು ನೋಡಿ, ಪಶ್ಚಿಮ ದ್ವಾರದ ಕದವ ಮುರಿದು, ಒಳಹೊಕ್ಕು ಒಳಗೆ ತೊಳಗಿ ಬೆಳಗುವ ಜ್ಯೋತಿರ್ಮಯಲಿಂಗವನೆ ಕಂಡು, ಆ ಲಿಂಗದ ಅಂಘ್ರಿಯನೆ ಹಿಡಿದು ಸಂಗ ಸುಖದೊಳಗೆ, ಒಂಬತ್ತು ಬಾಗಿಲಿಗೆ ಲಿಂಗವನೆ ಸ್ಥಾಪ್ಯವ ಮಾಡಲಾಗಿ, ಮನವೆಂಬ ಅರಸು ಒಳಗೆ ಸಿಕ್ಕಿದ ಆ ದಳ ಮುರಿದು ಬರುತ್ತಿರಲು, ದಾರಿಯ ಕಾಣದೆ ಕಣ್ಣುಗೆಟ್ಟು ಹೋದರು. ಮನವೆಂಬ ಅರಸನ ಹಿಡಿದು ಕಟ್ಟಿ, ತನ್ನ ಸೂಳೆಯರೈವರು, ಪ್ರಧಾನರೈವರು, ಶಾನಭೋಗರು, ಪಾರಿಪಡಕಳದವರು ಚಾ ಹೋ ಎಂದು ಉಘ್ಘಡಿಸುವರು. ಆನೆ ಕುದುರೆ ಇವರೆಲ್ಲರನು ಹಿಡಿಕಟ್ಟು ಮಾಡಿಕೊಂಡು, ಮಹಾಲಿಂಗವೆಂಬ ಅರಸಿಂಗೆ ತಂದೊಪ್ಪಿಸಿದೆನು. ಆ ಲಿಂಗವ ಕಂಡವರೆಲ್ಲ ಲಿಂಗವಂತೆ ಆದರು. ಇದು ಕಾರಣ ಶರಣಂಗೆ ಅಂಗಭೋಗವೆಲ್ಲ ಲಿಂಗಭೋಗವಾಯಿತ್ತು. ಲಿಂಗಭೋಗವೇ ಅರ್ಪಿತವಾಯಿತ್ತು. ಅರ್ಪಿತವೇ ಪ್ರಸಾದವಾಯಿತ್ತು. ಪ್ರಸಾದದೊಳಗೆ ಪರಿಣಾಮಿಯಾದ. ಇದು ಕಾರಣ ಪರವಿಲ್ಲೆಂದು ಅರಿಯಲಾಗಿ ಎನ್ನ ಗುಣಂಗಳೆಲ್ಲ ಉರಿ ಉಂಡ ಕರ್ಪುರದಂತಾಯಿತ್ತಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೩೬. ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞಾಚಕ್ರವೆಂಬ ಷಡಾಧಾರ ಚಕ್ರವನರಿದು, ಏರಿ ಏರಿ ಇಳಿದು ಆದಿಯ ನೋಡಿಕೊಂಡು ಆದಿ ಅನಾದಿ ಎಂಬ ಭೇದವ ನೋಡಿ, ಶೋಧಿಸಿ, ಸಪ್ತಧಾತುವಿನ ನೆಲೆಯ ಕಂಡು, ಮನಬುದ್ಧಿಚಿತ್ತವ ಏಕಹುರಿಯ ಮಾಡಿ, ಉತ್ಪತ್ತಿಸ್ಥಿತಿಲಯವೆಂಬ. ಕಾಲಮೂಲಾದಿಗಳ ಸುಟ್ಟು, ಧ್ಯಾನದಲ್ಲಿ ನಿಂದು, ಅಂಗಲಿಂಗಹಸ್ತ, ಮುಖ ಅರ್ಪಿತ ಅವಧಾನವೆಂಬ ಷಟ್ಸ್ಥಲವ ಮೆಟ್ಟಿನಿಂದು, ಆರರಿಂದ ಮೀರಿ ತೋರುವ ಬೆಳಗ ಕಂಡು, ನಾನು ಒಳಹೊಕ್ಕು ನೋಡಲಾಗಿ ಒಳಹೊರಗೆ ತೊಳತೊಳಗಿ ಬೆಳಗುತ್ತ ಇಳೆ ಬ್ರಹ್ಮಾಂಡ ತಾನೆಯಾಗಿರ್ದ ನಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೩೭. ಒಂದು ಹುತ್ತಕ್ಕೆ ಒಂಬತ್ತು ಬಾಯಿ, ಅಲ್ಲಿಪ್ಪ ಸರ್ಪನೊಂದೆ, ತಪ್ಪದೆ ಹತ್ತು ಬಾಯಲು ತಲೆಯ ಒಡೆವುದು. ಅಂಜಿ

ನೋಡಿದವರಿಗೆ ಸರ್ಪನಾಗಿಪ್ಪುದು. ಅಂಜದೆ ನೋಡಿದವರಿಗೆ ಒಂದೆ ಸರ್ಪನಾಗಿರುವುದು. ಇದುಕಾರಣವಾಗಿ ಸಂಜೆ ಮುಂಜಾನೆ ಎಂಬ ಎರಡಳಿದ ಶರಣಂಗೆ ಒಂದಲ್ಲದೆ ಎರಡುಂಟೆ? ಮೂರು ಲಿಂಗ ಆರು ಲಿಂಗ, ಮೂವತ್ತಾರು ಲಿಂಗ, ಬೇರೆ ಇನ್ನೂರು ಹದಿನಾರು ಲಿಂಗ ಉಂಟೆಂದು ಸಂತೆಯೊಳಗೆ ಕುಳಿತುಕೊಂಡು ಸಾರುತ್ತಿಪ್ಪರು. ಇದ ನಾನರಿಯೆ ನಾನರಿಯೆ. ಹೇಳುವದಕ್ಕೆ ಎನ್ನ ದೂರ ಕೇಳ್ಳೆಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೩೮. ನಾನೊಂದು ಊರಿಗೆ ಹಾದಿಯ ಕೇಳಿಕೊಂಡು ಹೋಗುತ್ತಿರಲಾಗಿ, ಮುಂದೆ ಅರಣ್ಯದೊಳಗೆ ಮೂರು ಬಟ್ಟೆ ಆಯಿತ್ತು. ಎರಡು ಪಥವ ಬಿಟ್ಟು ಒಂದು ಪಥವ ಹಿಡಿದು ಬರುತಿರಲು ಮುಂದೆ ಮೂರು ಬಟ್ಟೆಯು ಒಂದಾದವು. ಆ ಮೂರು ಬಟ್ಟೆಯ ಕೂಡಿದ ಬಳಿಯ ಒಂದು ಬೆಟ್ಟ ಹುಟ್ಟಿತ್ತು. ಆ ಬೆಟ್ಟವನಾರು ಏರಬಾರದು, ಇಳಿಯಬಾರದು. ಈ ಬೆಟ್ಟವ ಬಿಟ್ಟು ಹೋದರೆ, ಎನಗೆ ಪಥವಿಲ್ಲವೆಂದು ಸುತ್ತ ನೋಡಲಾಗಿ ಆರು ಮೆಟ್ಟನದೊಂದು ಏಣಿಹಾಕಿರುವದ ಕಂಡೆ. ಆ ಏಣಿಯ ಮೆಟ್ಟಮೆಟ್ಟ ಆ ಬೆಟ್ಟದ ತುಟ್ಟತುದಿಯನೇರಿದೆ. ಆ ತುಟ್ಟ ತುದಿಯನೇರಿ ನೋಡಲಾಗಿ ಬಟ್ಟಬಯಲಾದ್ದಿತು. ಆ ಬಟ್ಟ ಬಯಲೊಳಗೆ ಹೋಗುತಿರಲಾಗಿ ನಾ ಎತ್ತ ಹೋದೆನೆಂದರಿಯೆನಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣ.

೩೯. ಮೂರು ಮಣಿಗೆ ಒಂಬತ್ತು ದ್ವಾರ. ಬೇರೆ ಆರು ಸ್ಥಲಗಳು ಇರುತಿಹವು ನೋಡಾ. ಈರಾರು ಇಪ್ಪತ್ತೈದು ಮೀರಿ ತೋರುವ ಧನ ಒಂದು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೪೦. ಷಡಾಧಾರ ಚಕ್ರದ ಗಡಣೆಯ ನರಿದು ಷಡಕ್ಷರವನೇಕಾಕ್ಷರವ ಮಾಡಿ, ಒಡನಿಹ ಲಿಂಗವೆಂದೆಂಬುದನರಿದರೆ ದೃಢಭಕ್ತರೊಳಗಧಿಕ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

# ಶಿವಾನುಭವ.

ಸಂಪುಟ ೪.] (ಮಾಸಪತ್ರಿಕೆ) [ಸಂಚಿಕೆ ೪.



ಜುಲೈ ೧೯೨೯] [೧ ಆಷಾಢ ೧೮೫೧.

ವಿಜಾಪುರ.

ವಾ. ಚ. ೪ ರೂ. ೪ ಆ.

# ವಿಷಯಾನುಕ್ರಮಣಿಕೆ.



---

## ಶಿವಾನುಭವ.

ಇದು ವೀರಶೈವ ಧಾರ್ಮಿಕ ಉನ್ನತಿಯ ಬಗ್ಗೆ ಹೆಣಗಾಡುವ ಮೇಲ್ತರದ ಮಾಸಪತ್ರಿಕೆಯು. ಇದು ೬೪ ಪುಟಗಳುಳ್ಳದ್ದಿದ್ದು ಚಂದಾ ಮಾತ್ರ ೪ ರೂಪಾಯಿ. ಇದು ಪ್ರತಿ ತಿಂಗಳ ಮಧ್ಯಕ್ಕೆ ಹೊರಡುತ್ತದೆ. ಲೇಖಕರು ಚಿಕ್ಕ ಚಿಕ್ಕ ಲೇಖಗಳನ್ನು ಕಳಿಸಬೇಕು. ವೀರಶೈವರ ಉನ್ನತಿಯ ಪರವಾಗಿ ಯಾರು ಬೇಕಾದವರು ಬರೆದರೂ ಅವಕಾಶ ಸಿಗುವದು. ಕೆಲವರು ಇದರ ಹಿಂದಿನ ಸಂಚಿಕೆಗಳನ್ನು ಬೇಡುತ್ತಾರೆ. ಆದರೆ ೧-೨ ಸಂಚಿಕೆಗಳು ಸಿಗುವದೇ ಇಲ್ಲ. ೩ ರಿಂದ ೧೨ ವರೆಗೆ ಮಾತ್ರ ಸಿಗುತ್ತವೆ. ಬೇಕಾದವರು ಶೀವ್ರ ತರಿಸಿಕೊಳ್ಳಬಹುದು. ತಡವಾದರೆ ಪ್ರತಿಗಳು ಸಿಗಲಾರವು. ಯಾಕಂದರೆ ಪ್ರತಿಗಳು ಸ್ವಲ್ಪೇ ಉಳದಿವೆ. ಪ್ರತಿಯೊಂದು ಸಂಚಿಕೆಗೆ ೮ ಆಣೆ.

ಮ್ಯಾನೇಜರ.

# ಶಿವಾನುಭವ.

ವರ್ಷ ೪] ಜುಲೈ ೧೯೨೯ [ಸಂಚಿಕೆ ೪


## ರೇಣಾವಿಯ ಹತ್ತರಿರುವ ಶ್ರೀ ರೇವಣಸಿದ್ಧೇಶ್ವರ ಕ್ಷೇತ್ರವು.


ಲೇಖಕಃ—ಶ್ರೀ. ವೀರಭದ್ರಪ್ಪ ಹಾಲಭಾವಿ ಬಿ. ಎ. ಎಲ್. ಎಲ್. ಬಿ.
ಸಬ್ಬಜಜ್ಜ ವಿಜಾಪುರ.




ಮೂಲಪಂಚಾಚಾರ್ಯರು ವೀರಶೈವ ಮತಸ್ಥಾಪಕರೆಂದೂ ಇವರು ಬೇರೆ ಬೇರೆ ಯುಗಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಉದ್ಭವಿಸಿದರೆಂದೂ ಕಲಿಯುಗದಲ್ಲಿ ಇವರು ರೇವಣಾರಾಧ್ಯ, ಮರುಳಾರಾಧ್ಯ, ಪಂಡಿತಾರಾಧ್ಯ, ವಿಶ್ವಾರಾಧ್ಯ, ಏಕೋರಾಮಾರಾಧ್ಯ ಎಂಬ ಹೆಸರುಗಳಿಂದ ಪ್ರಸಿದ್ಧಿಯನ್ನು ಹೊಂದಿದರೆಂದೂ ಈ ಮತದ ಜನರಲ್ಲಿ ದೃಢವಾದ ನಂಬುಗೆಯಿರುವದು. ಈ ಆಚಾರ್ಯರ ಪೀಠಗಳು ಅನುಕ್ರಮವಾಗಿ ಬಾಳೇಹಳ್ಳಿ, ಉಜ್ಜಯನಿ, ಶ್ರೀಶೈಲ, ಕಾಶೀ ಮತ್ತು ಕೇದಾರ ಎಂಬ ಸ್ಥಳಗಳಲ್ಲಿ ಇರುವವು. ಇವರಲ್ಲಿ ಪ್ರತಿಯೊಬ್ಬರು ಬ್ರಹ್ಮಸೂತ್ರಗಳಿಗೆ ಒಂದೊಂದು ಭಾಷ್ಯವನ್ನು ಬರೆದಿರುವರೆಂಬದಾಗಿ ಹೇಳುತ್ತಾರೆ. ಆದರೆ ಇವುಗಳಲ್ಲಿ ಯಾವ ಭಾಷ್ಯವೂ ಉಪಲಬ್ಧವಿರುವದಿಲ್ಲ. ಈ ಆಚಾರ್ಯ ಪರಂಪರೆಗಳು ಇನ್ನೂ ಅವ್ಯಾಹತವಾಗಿ ಸಾಗಿ ಬಂದಿರುವವು. ಪರಂಪರೆಗಳಲ್ಲಿ ಅನೇಕರು ಮಹಾನುಭಾವಿಗಳಾಗಿ ಹೋಗಿರಬಹುದು. ಮೂಲಾಚಾರ್ಯರ ಅಥವಾ ಅವರ ಪರಂಪರೆಯ ಯಾವ ಆಚಾರ್ಯರ ಇತಿಹಾಸವೂ ನಮ್ಮ ಸಮಾಜದವರಿಗೆ ಸಹ ಗೊತ್ತಿರುವದಿಲ್ಲ. ಸಮಾಜದ ಏಳಿಗೆಗೆ ಈ ಇತಿಹಾಸದ ಜ್ಞಾನವು ಎಷ್ಟು ಅವಶ್ಯವೆಂಬುವದನ್ನು ಬೇರೆ ಹೇಳಬೇಕಾಗಿಲ್ಲ. ಈಗಿನ ಪರಿಸ್ಥಿತಿಯಲ್ಲಿಯಂತೂ ಈ ಜ್ಞಾನದ ಅವ

ಶ್ಯಕತೆಯು ಬಹಳೇ ಉಂಟು. ಇಷ್ಟು ಕಾಲದ ವರೆಗೆ ಈ ಜ್ಞಾನದ ಪ್ರಸಾರದ ವಿಷಯವಾಗಿ ಅನಾಸ್ಥೆಯು ಆಗಿರುವಂತೆ ಇನ್ನೂ ತುಸು ದಿವಸ ಅದು ಹೀಗೆಯೇ ಉಳಿದರೆ ಈ ಸಮಾಜವು ಛಿನ್ನ ವಿಚ್ಛಿನ್ನವಾಗಿ ಹೋಗುವದೆಂಬುವದರಲ್ಲಿ ಎಳ್ಳಷ್ಟಾದರೂ ಸಂಶಯವಿಲ್ಲ. ಈ ತರದ ಜ್ಞಾನವನ್ನು ಸಮಾಜದವರಲ್ಲಿ ಉಂಟು ಮಾಡಿಕೊಡಲಿಕ್ಕೆ ಮುಖ್ಯವಾಗಿ ಯೋಗ್ಯರಾದವರು ಆ ಆ ಪೀಠಗಳನ್ನು ಈಗ್ಗೆ ಅಲಂಕರಿಸಿರುವ ಆಚಾರ್ಯರೇ ಅಹುದು. ಹೀಗೆ ಮಾಡಲಿಕ್ಕೆ ಬೇಕಾಗುವ ಸಾಮುಗ್ರಿಗಳು ಆಯಾ ಪೀಠಗಳಲ್ಲಿ ಮುಖ್ಯವಾಗಿ ಇರಬಹುದು. ಇತರ ಸ್ಥಳಗಳಲ್ಲಿ ಅವು ದೊರೆಯುವದು ಅಪರೂಪ. ಈ ಕಾರ್ಯವು ಸಮಗ್ರವಾಗಿ ಪೂರೈಸಬೇಕಾದರೆ ಕೆಲವು ಕಾಲವು ಕಳೆಯಬಹುದು. ಆದರೂ ದೊರೆತಷ್ಟು ಮಾಹಿತಿಯನ್ನು ಪ್ರಸಿದ್ಧಿಸುತ್ತ ಹೋದರೆ ಮುಂದಿನ ಕಾರ್ಯಕ್ಕೆ ಅನುಕೂಲವಾಗುವದೆಂಬ ಹೇತುವಿನಿಂದ ಈ ಚಿಕ್ಕ ಲೇಖವನ್ನು ಸಮಾಜದವರ ಮುಂದೆ ಇಡುವ ಯತ್ನವನ್ನು ಮಾಡಿರುವೆನು.

ಮೂಲ ಪಂಚಾಚಾರ್ಯರಲ್ಲಿ ಒಬ್ಬರಾದ ಶ್ರೀ ರೇವಣಾರಾಧ್ಯರ ವಿಷಯವಾಗಿ ಇತರ ಆಚಾರ್ಯರಿಗಿಂತ ಹೆಚ್ಚು ಸಾಮುಗ್ರಿಗಳು ಉಪಲಬ್ಧವಿರುವಂತೆ ಕಂಡು ಬರುತ್ತದೆ. ವೀರಶೈವ ಮತತತ್ವಗಳನ್ನು ವಿವರಿಸಿರುವ ಸಿದ್ಧಾಂತ ಶಿಖಾಮಣಿ ಗ್ರಂಥದ ಕರ್ತರಾದ ಶಿವಯೋಗೀಶ್ವರವೆಂಬ ಶಿವಾಚಾರ್ಯನು ಹಿಂದಕ್ಕೆ ರೇವಣಸಿದ್ಧೇಶ್ವರನು ಅಗಸ್ತ್ಯಮುನಿಗೆ ಬೋಧಿಸಿದ ತತ್ವಗಳನ್ನೇ ತನ್ನ ಗ್ರಂಥದಲ್ಲಿ ವರ್ಣಿಸಿರುವೆನೆಂದು ಹೇಳಿರುವನು. ಇವರ ಚರಿತ್ರವನ್ನೊಳಗೊಂಡ ಗ್ರಂಥಗಳೆಂದರೆ:—

೧. ಸಿದ್ಧನಾಥ ಶಿವಾಚಾರ್ಯ ವಿರಚಿತ ರೇಣುಕವಿಜಯವೆಂಬ ಸಂಸ್ಕೃತ ಗ್ರಂಥವು (ವಿಕ್ರಮ ಶಕ ೧೦೯೯ ನೇ ಸಂವತ್ಸರದಲ್ಲಿ ರಚಿತವಾದದ್ದು.)

೨. ಮಲ್ಲಣ್ಣ ಕವಿಯಿಂದ ರಚಿತವಾದ ರೇವಣಸಿದ್ಧೇಶ್ವರ ಕಾವ್ಯ (ಶಾ. ಶ. ೧೪೧೩)

೩. ಬೊಮ್ಮರಸ ಕವಿವಿರಚಿತ ರೇವಣಸಿದ್ಧೇಶ್ವರ ಪುರಾಣ

೪. ಚನ್ನಬಸವ ಕವಿವಿರಚಿತ (ಶಾ. ಶ. ೧೪೫೦.) ರೇವಣಸಾಂಗತ್ಯ

ಬೊಮ್ಮರಸನು ತನ್ನ ಗ್ರಂಥವನ್ನು ಈಶಾನ್ಯ ಶಿವಗುರುಗಳು ಆದಿ

ಯಲ್ಲಿ ಗೀರ್ವಾಣ ಭಾಷೆಯಲ್ಲಿ ಆಮೇಲೆ ಹಂಪೆಯ ಹರೀಶ್ವರನು ರಘಟಾಕಾರದಿಂದ ಕನ್ನಡ ಭಾಷೆಯಲ್ಲಿ, ಬರೆದ ಗ್ರಂಥಗಳ ಸಹಾಯದಿಂದ ಬರೆದಿರುವೆನೆಂದು ಹೇಳಿರುವನು. ರೇವಣಸಾಂಗತ್ಯದ ಕರ್ತನಾದ ಚನ್ನಬಸವನು ತನ್ನ ಗ್ರಂಥದ ಕಥೆಯನ್ನು ರೇಣುಕಾರಾಧ್ಯ ಚರಿತ್ರವೆಂಬ ಸಂಸ್ಕೃತ ಗ್ರಂಥದಿಂದ ಸಂಗ್ರಹಿಸಿರುವೆನೆಂದು ಬರೆದಿರುವನು. ಈ ಸಂಸ್ಕೃತ ಗ್ರಂಥವಾಗಲೀ, ಈಶಾನ್ಯ ಶಿವಗುರುಗಳ ಮತ್ತು ಹರೀಶ್ವರನ ಗ್ರಂಥಗಳಾಗಲೀ ಈ ವರೆಗೂ ಉಪಲಬ್ಧವಾಗಿರುವದಿಲ್ಲ. ಮಲ್ಲಣ್ಣ ಕವಿಯ ಹಸ್ತಲಿಖಿತ ಗ್ರಂಥವು ಮದ್ರಾಸ ಗವ್ಹರ್ನಮೆಂಟ ಓರಿಯಂಟಲ ಲಾಯಬ್ರರಿಯಲ್ಲಿರುವದು. ಆದರ ಪ್ರತಿಯು ನನಗೆ ನೋಡಲಿಕ್ಕೆ ದೊರೆತಿರುವದಿಲ್ಲ.

ಬೊಮ್ಮರಸನ ಪುರಾಣದಲ್ಲಿಯೂ ರೇವಣ ಸಾಂಗತ್ಯದಲ್ಲಿಯೂ ರೇವಣಸಿದ್ಧೇಶ್ವರನ ವಿಷಯವಾಗಿ ವಿವರಿಸಿರುವ ಸಂಗತಿಗಳಲ್ಲಿ ಹೆಚ್ಚು ಕಡಿಮೆಯಿಲ್ಲ. ಈ ಸಂಗತಿಗಳು ರೇಣುಕ ವಿಜಯದಲ್ಲಿ ವಿವರಿಸಿರುವ ಸಂಗತಿಗಳಿಂದ ಕೆಲ ಕೆಲವು ಅಂಶಗಳಲ್ಲಿ ಭಿನ್ನವಾಗಿರುತ್ತವೆ. ಈ ಎಲ್ಲ ಗ್ರಂಥಗಳನ್ನು ಪರಿಶೀಲಿಸಿ ಇವುಗಳಲ್ಲಿಯ ನಿಜವಾದ ಐತಿಹಾಸಿಕ ಸಂಗತಿಗಳನ್ನು ವಿಂಗಡಿಸುವದು ಸುಲಭಸಾಧ್ಯವಲ್ಲ. ಈ ಕಾರ್ಯವು ಶೋಧಕರಿಂದ ಕ್ರಮೇಣ ಕೈಕೊಳ್ಳಲ್ಪಡಬಹುದು. ಈಗ ನಾನು ಕಂಡ ಗ್ರಂಥಗಳಲ್ಲಿ ಎಷ್ಟೋ ಸ್ಥಲಗಳ ಉಲ್ಲೇಖವಿರುವದು. ಅವುಗಳಲ್ಲಿ ಒಂದು ಮಂಗಳಮಡವೆಂಬುವದು. ಈ ಸ್ಥಲದಲ್ಲಿ ರೇವಣಸಿದ್ಧೇಶ್ವರನು ತನ್ನ ಮುಖ್ಯ ವಸತಿಯನ್ನು ಮಾಡಿದಂತೆ ಕಂಡು ಬರುತ್ತದೆ. ಮಂಗಳಮಡವೆಂಬುವದು ಪಂಢರಪುರದ ಹತ್ತರ ಇರುವ ಮಂಗಳವೇಢೆಯು ಇರಬಹುದು. ಅಥವಾ ಅದು ಮಂಗಳಂ ಕಲ್ಯಾಣಂ ಶುಭಂ ಎಂಬ ಕೋಶದ ಆಧಾರದ ಮೇಲಿಂದ ಕಲ್ಯಾಣ ಪಟ್ಟಣವಾಗಿರಬಹುದು. ಆಗಿನ ಕಾಲಕ್ಕೆ ಮಂಗಳಮಡದಲ್ಲಿ ಬಿಜ್ಜಳ ಭೂಪತಿಯು ಆಳುತ್ತಿದ್ದನೆಂದು ಉಲ್ಲೇಖಿಸಿರುವದರಿಂದ ಇದು ಕಲ್ಯಾಣವೇ ಇರಬಹುದೆಂಬ ನಿರ್ಣಯವನ್ನು ದೃಢಪಡಿಸುತ್ತದೆ. ಈ ವಿಷಯವಾಗಿ ಇನ್ನೂ ಹೆಚ್ಚು ಶೋಧ ಮಾಡುವ ಅವಶ್ಯಕತೆಯಿರುವದು. ಈ ಮಾತನ್ನು ನನ್ನ ಒಬ್ಬ ಮಿತ್ರರ ಮುಂದೆ ತೆಗೆದಾಗ್ಗೆ ಅವರು ಸಾತಾರೆ ಜಿಲ್ಹೆಯ ವಿಟಾ ತಾಲೂಕಿನಲ್ಲಿ ರೇಣಾವೀಯಂಬ ಗ್ರಾಮದ ಹತ್ತರ ಒಂದು ಪುರಾತನವಾದ ರೇವಣಸಿದ್ಧೇಶ್ವರ ದೇವಸ್ಥಾನವಿರುವದೆಂದು ಹೇಳಿದರು. ಹೋದ ೧೯೩೮ ನೇ ನಾತಾಳ

ಹಬ್ಬದಲ್ಲಿ ಅದನ್ನು ನಾನು ನೋಡಲಿಕ್ಕೆ ಹೋಗಿದ್ದೆನು. ಆ ಸ್ಥಳದ ಸಂಕ್ಷಿಪ್ತ ವರ್ಣನೆಯೇ ಈ ಲೇಖದ ಉದ್ದೇಶವು.

ಮದ್ರಾಸ ಮತ್ತು ಸದರ್ನ ಮರಾಠಾ ರೇಲ್ವೆಯ ದಾರಿಯಮೇಲೆ ಮಿರಜಿಯಿಂದ ಎರಡುವರೆ ತಾಸಿನ ಪ್ರವಾಸದ ಅಂತರದಮೇಲೆ ಕರಾಡ ಸ್ಟೇಶನವಿರುವದು. ಅಲ್ಲಿಂದ ವಿಟಾ ಎಂಬ ಆ ತಾಲೂಕಿನ ಮುಖ್ಯಸ್ಥಳವು ಸುಮಾರು ೨೨ ಮೈಲುಗಳ ಅಂತರದ ಮೇಲಿರುವದು. ಈಗಿನ ಕಾಲದಲ್ಲಿ ಮೋಟಾರದ ಸಹಾಯದಿಂದ ಎಲ್ಲಕಡೆ ಪ್ರವಾಸಕ್ಕೆ ಬಹಳ ಅನುಕೂಲವಾಗಿರುವಂತೆ, ಅಲ್ಲಿಯಾದರೂ ಈ ಅನುಕೂಲತೆಯುಂಟು. ವಿಟಾದಿಂದ ಪೂರ್ವಕ್ಕೆ ಸುಮಾರು ೪ ಮೈಲುಗಳ ಅಂತರದ ಮೇಲೆ ಒಂದು ಸಣ್ಣ ಸಣ್ಣ ಗುಡ್ಡಗಳ ಸಾಲು ಇರುವದು. ಆ ಗುಡ್ಡಗಳಲ್ಲಿ ಒಂದರ ಸಪಾಟ ಪ್ರದೇಶದ ಮೇಲೆ ವಿಟಾಪಟ್ಟಣದಿಂದ ಸುಮಾರು ೫ ಮೈಲುಗಳ ಅಂತರದಮೇಲೆ ಮೂಲಸ್ಥಾನವೆಂಬ ದೇವಾಲಯವು ಹತ್ತುವದು. ಇದರ ಆವಾರವು ೬೦ ಮೊಳ ಉದ್ದಾಗಿಯೂ ೪೦ ಮೊಳ ಅಗಲಾಗಿಯೂ ಇದ್ದು ಅದರ ಒಳಮಗ್ಗಲಿಗೆ ಸುತ್ತಲು ಪೌಳಿಗಳಿವೆ. ಆವಾರದ ಮಹಾದ್ವಾರವು ಪೂರ್ವದಿಕ್ಕಿಗೆ ಇದ್ದು ಅದರ ಮೇಲೆ ನಗಾರಖಾನೆ ಇರುತ್ತದೆ. ಆವಾರದ ಹೊರಮಗ್ಗಲಿನಲ್ಲಿ ಸುತ್ತುಮುತ್ತಲು ಕೆಲವು ಸಾಧುಗಳ ಸಮಾಧಿಗಳವೆ. ದೇವಾಲಯದ ಮುಖವು ಉತ್ತರದಿಕ್ಕಿಗಿರುವದು. ಅದರ ಸಭಾಮಂಟಪವು ಮೂರು ಅಂಕಣ ಚೌಕಾಗಿದ್ದು ಅದನ್ನು ಕಟ್ಟಿಸಿ ಸುಮಾರು ೫೦ ವರ್ಷಗಳಾಗಿರಬಹುದು. ಅದರ ಹಿಂಭಾಗದ ಕಟ್ಟಡವು ಸಹ ಮೂರು ಅಂಕಣ ಚೌಕಾಗಿದ್ದು ಹಿಂದಿನ ಸಾಲಿನ ನಡುವಿನ ಅಂಕಣದಲ್ಲಿ ಗರ್ಭಗುಡಿಯ ದ್ವಾರವದೆ. ಈ ಭಾಗವು ಪುರಾತನವಾದದ್ದಿರುವದು. ಗರ್ಭಗುಡಿಯು ಒಂದೇ ಅಂಕಣದ್ದಿದ್ದು ಅದರ ಮಧ್ಯದಲ್ಲಿ ೭ ಗೇಣು ಅಗಲಾದ ಗದ್ದಿಗೆಯ ಮೇಲಿರುವ ಒಂದು ಸ್ವಯಂಭುಶಿಲೆಗೆ ರೇವಣೇಶ್ವರನೆನ್ನುತ್ತಾರೆ. ಪೂಜಾರಿಗಳು ಜಂಗಮರು. ಇವರ ಮನೆಗಳಷ್ಟೇ ದೇವಾಲಯದ ಹೊರಮಗ್ಗಲಿಗೆ ಇರುವವು. ದೇವಾಲಯಕ್ಕೆ ೪೦ ರೂಪಾಯಿ ಕಂದಾಯದ ಇನಾಮು ಭೂಮಿ ಇರುವದು. ೧೧ ನಂದಾದೀವಿಗೆಗಳು ಭಕ್ತರಿಂದ ಇಡಲ್ಪಟ್ಟವೆ. ಪ್ರತಿಸೋಮವಾರ ಮತ್ತು ಗುರುವಾರ ವಸ್ತ್ರಾಲಂಕಾರ ಸಹಿತ ವಿಶೇಷ ಪೂಜೆಯೂ ಉಳಿದ ದಿವಸಗಳಲ್ಲಿ ಸಾದಾ ಪೂಜೆಯೂ ನಡಿಯುತ್ತದೆ. ಶ್ರಾವಣಮಾಸದಲ್ಲಿಯೂ

ಶಿವರಾತ್ರಿಯಲ್ಲಿಯೂ ಉತ್ಸವಗಳು ನಡಿಯುತ್ತವೆ. ಈ ಉತ್ಸವಗಳ ಖರ್ಚಿನ ಸಲುವಾಗಿ ಸರಕಾರದಿಂದ ಪ್ರತಿವರ್ಷ ೧೨ ರೂಪಾಯಿಗಳು ದೊರೆಯುತ್ತವೆ.

ಮೂಲಸ್ಥಾನದಿಂದ ಸುಮಾರು ಒಂದು ಮೈಲಿನ ಅಂತರದಲ್ಲಿ ಸದರವೆಂಬ ಮುಖ್ಯ ದೇವಾಲಯವಿರುವದು. ಇಲ್ಲಿಂದ ಮುಂದೆ ರೇಣಾವಿಯೆಂಬ ಗ್ರಾಮವು ಸುಮಾರು ಅರ್ಧಮೈಲಿನ ಮೇಲೆ ಅದೆ. ದೇವಾಲಯದ ಆವಾರವು ಉತ್ತರ ದಕ್ಷಿಣ ೧೦೨ ಮೊಳ ಪೂರ್ವ ಪಶ್ಚಿಮ ೮೫ ಮೊಳವಿದ್ದು ಒಳಮಗ್ಗಲು ಸುತ್ತಲು ಪೌಳಿಗಳಿವೆ. ಆವಾರದ ಗೋಡೆಯು ಭದ್ರವಾಗಿಯೂ ಎತ್ತರವಾಗಿಯೂ ಇರುವದರಿಂದ ಕೋಟೆಯ ಗೋಡೆಯಂತೆ ಕಾಣುತ್ತಿರುವದು. ಮಹಾದ್ವಾರವು ಉತ್ತರದಿಕ್ಕಿಗಿದ್ದು ಅದರ ಮೇಲೆ ನಗಾರಖಾನೆ ಇರುವದು. ಆವಾರದ ಗೋಡೆಯನ್ನು ಬಾಗಲಕೋಟೆಯ ಹುಂಡೆಕಾರ ಮನೆತನದವರು, ಉಪಳಾಯಿಯ ವಾಳ್ವೆ(ಪತ್ತಾರ) ಎಂಬ ಮನೆತನದವರೂ, ಮಹಾದ್ವಾರವನ್ನು ಸಾತಾರೆಯ ಸಾಖರೆ ಎಂಬ ಮನೆತನದವರೂ ಕಟ್ಟಿಸಿದರೆಂದು ಹೇಳುತ್ತಾರೆ. ಆವಾರದ ಗೋಡೆಯು ಹೊರಮಗ್ಗಲಿನಲ್ಲಿಯೂ ಒಳಗಿನ ಅಂಗಣದಲ್ಲಿಯೂ ಎತ್ತರವಾದ ದೀಪಸ್ತಂಭಗಳಿರುವವು ಇವುಗಳಲ್ಲಿ ಒಂದು ಅಷ್ಟಕೋನಿನ ಸ್ತಂಭವು ಬಹು ಸೊಗಸಾಗಿರುವದು. ಸಭಾಮಂಟಪವು ಮೂರು ಅಂಕಣ ಅಗಲಾಗಿಯೂ ನಾಲ್ಕು ಅಂಕಣ ಉದ್ದಾಗಿಯೂ ಇರುವದು. ಇದನ್ನು ಇತ್ತಿತ್ತಲಾಗಿ ಕಟ್ಟಿಸಿರುವರು. ಗರ್ಭಗುಡಿಯು ಮುಂದೆ ಮೂರು ಹಿಂದೆ ಮೂರು ಹೀಗೆ ಒಟ್ಟು ಆರು ಅಂಕಣದ್ದಿರುವದು. ಈ ಭಾಗವು ಪುರಾತನವಾದದ್ದಿದ್ದು ಕಟ್ಟಡವು ಹೇಮಾಡಪಂಥೀ ಮಾದರಿಯದಿರುತ್ತದೆ. ಹಿಂದಿನ ಮೂರು ಅಂಕಣಗಳೊಳಗಿನ ಬಲಗಡೆಯ ಎರಡು ಅಂಕಣಗಳ ತುಂಬೆಲ್ಲ ವಿಸ್ತಾರವಾಗಿಯೂ ಎತ್ತರವಾಗಿಯೂ ಇರುವ ಒಂದು ಸ್ವಯಂಭುಶಿಲೆಗೆ ರೇವಣಸಿದ್ಧೇಶ್ವರನೆಂದು ಕರೆಯುತ್ತಾರೆ. ಈ ಶಿಲೆಯು ಸದಾಕಾಲ ತೇವಿನಿಂದ ಹಸಿಯಾಗಿರುತ್ತದೆ. ಮತ್ತು ಅದರ ಮಧ್ಯದಲ್ಲಿರುವ ಹೊದರಿನಲ್ಲಿ ಲಿಂಗಾಕಾರವಿದ್ದು ಅದು ಯಾವತ್ತು ನೀರಿನಿಂದ ತುಂಬಿರುತ್ತದೆ. ಗರ್ಭಗುಡಿಯ ಹಿಂಭಾಗದ ಗೋಡೆಯ ಹಿಮ್ಮಗ್ಗಲಿನಲ್ಲಿರುವ ಗುಡಿಯ ಭಾಗವು ನಾಲ್ಕು ಕಡೆ ಗೋಡೆಗಳಿಂದ ಮುಚ್ಚಲ್ಪಟ್ಟಿರುತ್ತದೆ. ಈ ಭಾಗದೊಳಮಗ್ಗಲಿನಲ್ಲಿ ಏನಿರುವದೆಂಬದು ಯಾರಿಗೂ ಗೊತ್ತಿರುವದಿಲ್ಲ. ಈ ಭಾಗದ ಮೇಲೆಯೇ ಎತ್ತರವಾದ ಶಿಖರವಿರುವದು.

ಈ ರೀತಿಯಾಗಿ ನಾಲ್ಕು ಕಡೆ ಮುಚ್ಚಲ್ಪಟ್ಟಿರುವ ದೇವಾಲಯದ ಭಾಗಗಳು ಈ ಪ್ರಾಂತದಲ್ಲಿಯೂ ಕೆಲವು ಕಡೆ ಕಂಡು ಬರುತ್ತವೆ. ಈ ಭಾಗಗಳು ಯಾಕೆ ಮುಚ್ಚಲ್ಪಟ್ಟಿರುತ್ತವೆಂಬದರ ಕಾರಣವು ಯಾರಿಗೂ ಗೊತ್ತಿರುವದಿಲ್ಲ. ಅವುಗಳಲ್ಲಿ ಏನಿರುವದೆಂಬದನ್ನು ತೆಗೆದು ನೋಡಿದರೆ ತಮಗೇನಾದರೂ ಅಪಾಯವು ಸಂಭವಿಸುವದೆಂಬ ಭೀತಿಯಿಂದ ಯಾರಿಗೂ ಹಾಗೆ ಮಾಡಲಿಕ್ಕೆ ಧೈರ್ಯವಾಗುವದಿಲ್ಲ.

ಗರ್ಭ ಗುಡಿಯು ಎಡಮಗ್ಗಲಿಗೆ ಒಂದು ಸಣ್ಣ ಕಟ್ಟಡದಲ್ಲಿ ತೊಡೆ ಮಟ್ಟ ಎತ್ತರವಾದ ಒಂದು ಸ್ವಯಂಭು ಮೂರ್ತಿಯದೆ. ಇದಕ್ಕೆ ಮರುಳಸಿದ್ಧನೆಂದು ಕರೆಯುತ್ತಾರೆ. ಸಭಾಮಂಟಪದ ಮುಂದುಗಡೆ ಬಲಭಾಗದಲ್ಲಿ ನೆಲದ ಕೆಳಗಿನ ಒಂದು ಗುಹೆಯಲ್ಲಿ ೫ ಗೇಣು ವ್ಯಾಸದ ಒಂದು ದುಂಡನ್ನು ಸ್ವಯಂಭು ಮೂರ್ತಿಗೆ ಏಕೋರಾಮನೆಂತಲೂ, ಭಿಸ್ವಡಸಿದ್ಧನೆಂತಲೂ ಅನ್ನುತ್ತಾರೆ.

ರೇಣಾವಿಯು ಇನಾಮು ಗ್ರಾಮವಿದ್ದು ಅದರ ಉಪಭೋಗವನ್ನು ಅಲ್ಲಿಯ ಇನಾಮುದಾರರು ಮಾಡುತ್ತಾರೆ. ಗ್ರಾಮದ ಉತ್ಪನ್ನವು ೧೫೨೩ ರೂಪಾಯಿಗಳಿದ್ದು ಇವುಗಳಲ್ಲಿ ೨೯೨ ರೂಪಾಯಿಗಳು ದೇವಾಲಯದ ಕಾರ್ಯಕ್ಕೆ ವಿನಿಯೋಗವಾಗುತ್ತವೆ. ದೇವಾಲಯದ ಪೂಜಾರಿಯು ಈಗ ಗೊರವನಿರುವನು. ಇವನಿಗೆ ಇನಾಮು ವು ಇರುವದಿಲ್ಲ. ಪೂರ್ವಕಾಲದಲ್ಲಿ ಪೂಜಾರಿಯು ಜಂಗಮನಿದ್ದನು. ಇವನ ಮನೆತನಕ್ಕೆ ಪೋಟ ಇನಾಮು ವು ಇನ್ನೂ ನಡೆಯುತ್ತದೆ. ಇವನ ಮನೆತನದವರು ಈಗಾದರೂ ಪೂಜೆಯ ಕಾಲದಲ್ಲಿ ಶಂಖವನ್ನು ಊದುತ್ತಾರೆ. ಮತ್ತು ಆರುತಿಯ ವೇಳೆಯಲ್ಲಿ ಅವಶ್ಯವಾಗಿ ಇವರು ಬೇಕಾಗುತ್ತಾರೆ.

ಗೊರವನ ಮನೆತನಕ್ಕೆ ಪೂಜಾರಿಯ ಕೆಲಸವು ಹ್ಯಾಗೆ ಹೋಯಿತೆಂಬುವದಕ್ಕೆ ಒಂದು ಐತಿಹ್ಯವುಂಟು. ಅದೇನಂದರೆ ಸಾತಾರೆಯ ಶಾಹೂ ಮಹಾರಾಜನ ಕಾಲದಲ್ಲಿ ಪೂಜೆಯ ಪಕ್ಕಿನ ವಿಷಯವಾಗಿ ಜಂಗಮನಿಗೂ ಗೊರವನಿಗೂ ನ್ಯಾಯವು ಹುಟ್ಟಿ ಇದು ಶಾಹೂ ಮಹಾರಾಜನ ಕಡೆಗೆ ಹೋಯಿತು. ಆಗ ಮಹಾರಾಜನು ರೇಣಾವೀ ಗ್ರಾಮದ ದೇಶಪಾಂಡೆ, ದೇಶಮುಖ ಮುಂತಾದ ಗ್ರಾಮ ಮಂಡಳಿಗೆ ದೇವರು ಇವರಿಬ್ಬರೊಳಗೆ ಯಾರಿಗೆ ಕೌಲು ಕೊಡುತ್ತಾನೋ ಅವನಿಗೆ ಪೂಜೆಯು

ಹಕ್ಕನ್ನು ಕೊಡತಕ್ಕದ್ದು, ಅದನ್ನು ನೀವು ನೋಡಿಬಂದು ತಿಳಿಸಿರೆಂದು ಅಪ್ಪಣೆ ಮಾಡಲು ಅವರು ದೇವರು ಗೊರವನ ಹೆಸರಿಗೆ ಕೌಲು ಕೊಟ್ಟ ನೆಂದು ತಿಳಿಸಿದರು. ಆದರಿಂದ ಗೊರವನಿಗೆ ಪೂಜೆಯ ಹಕ್ಕು ಪ್ರಾಪ್ತ ವಾಗಿ ಈ ವರೆಗೆ ಅದು ಅವನ ಮನೆತನದಲ್ಲಿಯೇ ನಡೆದು ಬಂದಿರುವದು.

ದೇವಾಲಯದ ಹಿಂಭಾಗದಲ್ಲಿ ಒಂದು ಗುಹೆಯು ಇರುವದು. ಇದು ಬಹಳ ದೂರದ ವರೆಗೆ ಹೋಗಿತ್ತೆಂತಲೂ, ಜನರು ಒಳಗಿನ ಭಾಗದಲ್ಲಿ ಹೋಗಿ ಅಪಾಯ ಪಡಬಹುದೆಂದು ಈ ಭಾಗವನ್ನು ಮುಚ್ಚಿ ರುವರೆಂತಲೂ ಹೇಳುತ್ತಾರೆ. ಈ ಗುಡ್ಡದ ಮೇಲೆ ಒಂದು ನಾಗವು ಸುತ್ತಲು ಸುಗಂಧವನ್ನು ಬೀರುತ್ತಿತ್ತೆಂತಲೂ ವದಂತಿಯುಂಟು. ಈ ನಾಗದ ಕುರುಹಿಗಾಗಿ ಗುಹೆಯ ಮೇಲೆ ಗಚ್ಚಿನಿಂದ ಒಂದು ದೊಡ್ಡ ನಾಗದ ಆಕಾರವನ್ನು ಮಾಡಿರುವರು. ಈಗಾದರೂ ಸಾಧು ಜನರು ಈ ಗುಹೆಯಲ್ಲಿ ಬಂದು ವಾಸಿಸುತ್ತಾರೆ.

ಈ ದೇವಾಲಯದಿಂದ ೫ ಮೈಲುಗಳ ಅಂತರದ ಮೇಲೆ ರಾಕ್ಷೇ ಚೀವಾಡೀ ಎಂಬ ಗ್ರಾಮದಲ್ಲಿ ಒಂದು ರೇವಣಸಿದ್ಧೇಶ್ವರನ ಗುಡಿ ಇರು ವದು. ಸಮೀಪದಲ್ಲಿಯೇ ರೇವಣಗಾವ ಎಂಬ ಗ್ರಾಮದಲ್ಲಿ ದೇವರ ಪಾದುಕೆಗಳಿರುವವು. ಈ ಎರಡೂ ಗ್ರಾಮಗಳಲ್ಲಿ ಪೂಜಾರಿಯು ಜಂಗ ಮನಿದ್ದು ಪೂಜೆಯ ಸಲುವಾಗಿ ಇನಾಮ ಭೂಮಿಯದೆ. ರೇವಣಗಾ ವದಲ್ಲಿ ಗೊರವ ಮುಂತಾದ ಇತರ ಸೇವಕರಿಗಾದರೂ ಇನಾಮ ಭೂಮಿ ಗಳವೆ.

ಸದರ ಸ್ಥಾನಕ್ಕೆ ರೇವಣಿಯೆಂದೂ ಕರೆಯುತ್ತಾರೆ. ಇಲ್ಲಿಯಾದರೂ ಶ್ರಾವಣಮಾಸದಲ್ಲಿಯೂ ಶಿವರಾತ್ರಿಯಲ್ಲಿಯೂ ಉತ್ಸವಗಳು ನಡೆಯು ತ್ತವೆ. ಶಿವರಾತ್ರಿಯ ಉತ್ಸವದ ಕಾಲಕ್ಕೆ ದೊಡ್ಡ ಜಾತ್ರೆಯು ನೆರೆಯು ತ್ತದೆ. ಎರಡೂ ಜಾತ್ರೆಗಳಲ್ಲಿ ತಾಸಗಾಂವ ತಾಲೂಕಿನೊಳಗಿನ ಹತ್ನೂರ ಎಂಬ ಗ್ರಾಮದ ಮಠದ ಸ್ವಾಮಿಗಳಿಗೆ ಅಗ್ರಸ್ಥಾನದ ಮರ್ಯಾದೆಯುಂಟು. ಆ ಸಮಯಗಳಲ್ಲಿ ರಾಕ್ಷೇಚೀವಾಡೀ, ಮೂಲಸ್ಥಾನ ಮತ್ತು ಸದರ ಸ್ಥಾನಗಳಲ್ಲಿ ದೇವರ ನುಡಿಯಾಗುತ್ತದೆ. ಇದಕ್ಕೆ ಮರಾಠಿಯಲ್ಲಿ ಭಾಕ ಣೂಕ ಎಂತ ಅನ್ನುತ್ತಾರೆ. ಈ ನುಡಿಯನ್ನು ಹೇಳುವ ಜಂಗಮನು ನುಡಿಯು ತೀರಿದ ಮೇಲೆ ದೇವರಿಗೆ ಪ್ರದಕ್ಷಿಣೆಯನ್ನು ಹಾಕಿ ನಂತರ ಹತ್ನೂರ ಸ್ವಾಮಿಗಳಿಗೆ ನಮಸ್ಕಾರ ಮಾಡಿದ ಮೇಲೆ ಶಾಂತನಾಗುತ್ತಾನೆ.

ರೇವಣೀ ಕ್ಷೇತ್ರವು ಜಾಗೃತ ಸ್ಥಾನವಿದ್ದು ಸುತ್ತು ಮುತ್ತಲಿನ ಗ್ರಾಮಗಳ ಎಲ್ಲ ಜಾತಿಗಳ ಜನರು ಇಲ್ಲಿಯ ದೇವಸ್ಥಾನಕ್ಕೆ ನಡಕೊಳ್ಳುತ್ತಾರೆ. ರೇಣಾವೀ ಗ್ರಾಮದಲ್ಲಂತೂ ಮುಸಲ್ಮಾನರನ್ನು ಹಿಡಿದು ಯಾವ ಧರ್ಮದ ಅಥವಾ ಜಾತಿಯ ಜನರಲ್ಲಿ ಮದ್ಯ ಮಾಂಸದ ಸೇವನೆ ಇಲ್ಲ. ಈ ಗ್ರಾಮದಲ್ಲಿ ಜನ್ಮ ತಾಳಿದವರು ಎರಡನೇ ಕಡೆ ಹೋದರೂ ಸಹ ಈ ನಿರ್ಬಂಧವನ್ನು ಪಾಲಿಸುತ್ತಾರೆ. ಇದನ್ನು ಮುರಿದವರಿಗೆ ಏನಾದರೊಂದು ಅಪಾಯವಾಗುವದೆಂದು ಅಲ್ಲಿಯ ಜನರಲ್ಲಿ ದೃಢವಾದ ನಂಬಿಕೆ ಇರುವದು. ಇದರ ವಿಷಯವಾಗಿ ಪ್ರತ್ಯಕ್ಷ ಮನಗಂಡವರು ಎಷ್ಟೋ ಜನರಿರುವರು. ಈ ಕ್ಷೇತ್ರದ ಸಮೀಪದಲ್ಲಿ ಇಳುಕೊಂಡವರು ಸಹ ಈ ನಿಯಮವನ್ನು ಮುರಿಯಲಿಕ್ಕಾಗದು. ಹೀಗೆ ಮಾಡಿದ್ದರ ಪರಿಣಾಮವು ಏನಾಗುತ್ತದೆಂಬದರ ಒಂದೆರಡು ಉದಾಹರಣೆಗಳನ್ನು ರೇಣಾವಿಯ ಪಾಟೀಲನಾದ ರಾಮಜಿ ಕೃಷ್ಣಾಜಿ ಎಂಬವನೂ ಅಲ್ಲಿಯ ಇತರ ಜನರೂ ನನಗೆ ಹೇಳಿದರು. ಕೆಲವು ವರ್ಷಗಳ ಹಿಂದೆ ಒಮ್ಮೆ ಆ ಭಾಗದ ಇಲಾಖೆ ಸಾಹೇಬರು ತಮ್ಮ ಪಾಳಯವನ್ನು ಗ್ರಾಮದ ಹತ್ತರ ಊರಿದ್ದರು. ಆ ಕಾಲಕ್ಕೆ ಅವರ ಸಿಪಾಯರು ಯಾರಿಗೂ ತಿಳಿಯಗೊಡದೆ ಕೋಳಿಗಳನ್ನು ದೊರಕಿಸಿ ಅವುಗಳ ಪಾಕಮಾಡಿ ಮುಚ್ಚಿಟ್ಟಿದ್ದರು. ಊಟದ ಕಾಲಕ್ಕೆ ಅದನ್ನು ತೆಗೆದು ನೋಡಲಾಗಿ ಅದರ ಮೇಲೆ ಒಂದು ನಾಗರ ಹಾವು ಬಂದು ಕೂತಿತ್ತು. ಇದು ತಿಳಿದ ಕೂಡಲೆ ಸಾಹೇಬರು (ಇವರು ಹಿಂದೂ ಧರ್ಮದವರಿದ್ದರು.) ಸಿಪಾಯರಿಗೆ ಸಿಟ್ಟುಮಾಡಿ ಬೇರೆ ಅಡಿಗೆಯನ್ನು ಮಾಡಿಕೊಳ್ಳಲಿಕ್ಕೆ ಹೇಳಿದರು. ಈ ಸಂಗತಿಯು ಅಲ್ಲಿಯ ಜನರು ಸಮಕ್ಷ ನೋಡಿದ್ದಿರುತ್ತದೆ. ಇನ್ನೊಂದು ಉದಾಹರಣೆಯು ಈಗಿನ ಪಾಟೀಲನ ತಂದೆಯ ಕಾಲದ್ದು. ಒಮ್ಮೆ ಜಿಲ್ಲೆಯ ಯುರೋಪಿಯನ್ ಮುಖ್ಯಾಧಿಕಾರಿಗಳು ಆ ಭಾಗಕ್ಕೆ ಸಂಚಾರಕ್ಕೆ ಬಂದಾಗ್ಗೆ ದೇವಾಲಯದ ಹತ್ತರ ಒಂದು ಗಿಡದ ಕೆಳಗೆ ತಮ್ಮ ಡೇರೆಯನ್ನು ಹೊಡೆಯಲಿಕ್ಕೆ ಅಪ್ಪಣೆ ಇತ್ತರು. ಈ ಸಂಗತಿಯು ಊರ ನಿವಾಸಿಗಳಿಗೆ ತಿಳಿದ ಕೂಡಲೆ ಅವರು ಮಾಂಸಾಹಾರಿಗಳಿರುವದರಿಂದ ಮುಂದೇನಾದರೂ ಅರಿಷ್ಟವು ಸಂಭವಿಸಬಹುದೆಂದು ಬಗೆದು ಅವರಿಗೆ ಬೇರೆ ಕಡೆ ತಮ್ಮ ಡೇರೆಯನ್ನು ಹೊಡಿಸಬೇಕೆಂದು ಹೇಳಿಕೊಂಡರು. ಈ ಮಾತಿನ ಮೇಲೆ ಸಾಹೇಬರ ನಂಬಿಗೆಯುಂಟಾಗದೆ ಮೊದಲೇ ಗೊತ್ತು ಮಾಡಿದ ಸ್ಥಳದಲ್ಲಿ ಡೇರೆಯನ್ನು ಹೊಡಿಸಿದರು. ಮುಂದೆ ಅವರ ಅಡಿ

ಗೆಯ ಆಳುಗಳು ದಿನಕ್ರಮದಂತೆ ಕೋಳಿಗಳನ್ನು ತರಿಸಿ ಅವುಗಳನ್ನು ಪಾಕಕ್ಕೆ ಸಿದ್ಧಮಾಡಿಟ್ಟು ಬೇರೆ ಕೆಲಸಕ್ಕೆ ಹೋದರು. ಸಾಯಂಕಾಲಕ್ಕೆ ಸಾಹೇಬರೂ ಅವರ ಪತ್ನಿಯವರೂ ಅಡ್ಡಾಡಲಿಕ್ಕೆ ಹೋದವರು ತಿರುಗಿ ಬರುವಷ್ಟರಲ್ಲಿ ಡೇರೆಯ ಸುತ್ತಲೂ ಎತ್ತನೋಡಿದತ್ತ ಸರ್ಪಗಳ ಸುಳಿದಾಟವೇ ಕಣ್ಣಿಗೆ ಬೀಳಹತ್ತಿತು. ಇದನ್ನು ಕಂಡು ಸಾಹೇಬರು ಗಾಬರಿಯಾಗಿ ಕೂಡಲೆ ತಮ್ಮ ಪಾಳಯವನ್ನು ಅಲ್ಲಿಂದ ಕಿತ್ತುಕೊಂಡು ಎರಡನೇ ಕಡೆಗೆ ಹೋಗಬೇಕಾಯಿತು. ಈ ಉದಾಹರಣೆಗಳಿಂದ ಆ ಕ್ಷೇತ್ರದ ಮಹತ್ವವು ಎಷ್ಟಿರುವದೆಂಬುದು ಒಡೆದು ಕಾಣುವಂತಿದೆ.

ನಾನು ನೋಡಿದ ಗ್ರಂಥಗಳಲ್ಲಿ ರೇವಣಸಿದ್ಧೇಶ್ವರನ ವಿಷಯವಾಗಿ ಕೆಲಕೆಲವು ಸಂಗತಿಗಳಬಗ್ಗೆ ಒಡಂಬಡಿಕೆಯು ಇಲ್ಲದಿದ್ದರೂ ಕೆಳಗೆ ಕಾಣಿಸಿದ ಸಂಗತಿಗಳ ವಿಷಯವಾಗಿ ಏಕಮತವಿರುತ್ತದೆ. ರೇವಣಸಿದ್ಧೇಶ್ವರನು ರೇಣುಕನ ಅವತಾರವು. ಈತನು ಪರಶಿವನ ಅಪ್ಪಣೆಯ ಮೇರೆಗೆ ವೀರಶೈವ ಮತ ಪ್ರಸಾರ ಮಾಡುವದಕ್ಕಾಗಿ ನಿಜಾಮು ಇಲಾಖೆಯೊಳಗಿನ ಕೊಲ್ಲಿಪಾಕಿ ಕ್ಷೇತ್ರದ ಸೋಮೇಶ್ವರ ಲಿಂಗದಲ್ಲಿ ಉದ್ಭವಿಸಿದನು. ಅಲ್ಲಿಂದ ಮೊದಲು ಅವನು ಮಲಯಾಚಲಕ್ಕೆ ಸಾಗಿ ಅಲ್ಲಿ ವಾಸಿಸುತ್ತಿದ್ದ ಅಗಸ್ತ್ಯ ಮುನಿಗೆ ವೀರಶೈವ ಮತಸಿದ್ಧಾಂತವನ್ನು ಬೋಧಿಸಿ ಅಲ್ಲಿಂದ ಚೋಳದೇಶ, ಲಂಕಾದ್ವೀಪ, ಕಕುದ್ಗಿರಿ, ಕೊಲ್ಲಾಪುರ, ಶ್ರೀಶೈಲ ಉಜ್ಜಯಿನಿ, ಕಾಶಿ, ಹಿಮವತ್ಪರ್ವತ ಮುಂತಾದ ಸ್ಥಳಗಳಿಗೆ ಸಂಚರಿಸಿ ಅಲ್ಲಲ್ಲಿ ಅನೇಕ ಪವಾಡಗಳನ್ನು ಮಾಡಿ, ವೀರಶೈವ ಮತತತ್ವಗಳನ್ನು ಪ್ರಚಾರಗೊಳಿಸಿ, ೭೦೦ ವರುಷ ಪ್ರತ್ಯಕ್ಷವಾಗಿಯೂ, ಅಷ್ಟೇ ವರುಷ ಗುಪ್ತವಾಗಿಯೂ ಈ ಭೂಲೋಕದಲ್ಲಿ ವಾಸಿಸಿ ಕಡೆಗೆ ಕೊಲ್ಲಿಪಾಕಿಯ ಸೋಮೇಶ್ವರ ಲಿಂಗದಲ್ಲಿಯೇ ಐಕ್ಯವಾದನು. ಈತನು ಈ ಲೋಕದಲ್ಲಿ ನೆರವೇರಿಸಿದ ಕಾರ್ಯದ ಕುರುಹುಗಳು ದೇಶದ ನಾನಾ ಭಾಗಗಳಲ್ಲಿ ದೊರೆಯುತ್ತವೆ. ಈ ಭಾಗಗಳಲ್ಲಿ ರೇಣಾವಿ ಎಂಬುವದು ಒಂದು.

ರೇವಣಸಿದ್ಧೇಶ್ವರನು ಈ ಭಾಗದಲ್ಲಿ ಮೊದಲು ರಾಕ್ಷೇಚೀವಾಡಿಗೆ ಬಂದು ಅಲ್ಲಿಂದ ಮೂಲಸ್ಥಾನಕ್ಕೆ ಮುಂದೆ ಸದರ ಸ್ಥಾನಕ್ಕೆ ಬಂದನೆಂದು ಅಲ್ಲಿಯ ಜನರಲ್ಲಿ ಪ್ರತೀತಿ ಇರುವದು. ಈ ಕ್ಷೇತ್ರವಿರುವ ಗುಡ್ಡದ ತಪ್ಪಲು ವಿಸ್ತಾರವಾಗದಿದ್ದರೂ ಅಲ್ಲಿ ನೀರಿನ ವಿಪುಲತೆ ಇಲ್ಲ. ಗಾಯಮುಖ, ಹಿರಣ್ಯತೀರ್ಥ, ಮಾತಂಗತೀರ್ಥ, ಪಾತಾಳತೀರ್ಥ

ಎಂಬ ನಾಲ್ಕು ತೀರ್ಥಗಳಿದ್ದರೂ ಪಾತಾಳ ತೀರ್ಥದಲ್ಲಿ ಮಾತ್ರ ನೀರು ವರ್ಷೆಲ್ಲ ಉಳಿಯುತ್ತದೆ ಎರಡೂ ದೇವಾಲಯಗಳ ಹತ್ತರ ಒಂದೊಂದು ಬಾವಿಯುದೆ. ನೆಳಲು ಸಹ ವಿಶೇಷವಿರುವದಿಲ್ಲ.

ಸರಕಾರದವರು ಪ್ರಸಿದ್ಧಿಸಿದ ಸಾತಾರಾ ಗ್ಯಾಝೇಟಿಯರ ಎಂಬ ಪುಸ್ತಕದಲ್ಲಿ ಈ ಕ್ಷೇತ್ರದ ವಿಷಯವಾಗಿ ಉಲ್ಲೇಖವಿರುವದು. ಹ್ಯಾಗಂದರೆ:-- ರೇಣಾವಿಯ ಹತ್ತರ ರೇವಣಸಿದ್ಧನೆಂಬ ಒಬ್ಬ ಸಾಧು ಪುರುಷನ ಪ್ರಸಿದ್ಧವಾದ ಪುರಾತನ ದೇವಾಲಯವದೆ. ಇವನು ದತ್ತಾತ್ರಯನಿಂದ ಅನುಗ್ರಹೀತನು. ಮತ್ತು ಲಿಂಗಾಯಿತರಿಗೆ ವಿಶೇಷ ಪ್ರೀತಿಪಾತ್ರನು. ಇವನು ಎಷ್ಟೋ ಅದ್ಭುತ ಕಾರ್ಯಗಳನ್ನು ಮಾಡಿದನೆಂದು ಹೇಳುತ್ತಾರೆ. ಅವುಗಳೊಳಗಿನದೊಂದನ್ನು ಇಲ್ಲಿ ವಿವರಿಸುತ್ತೇವೆ. ಅದು ಯಾವದೆಂದರೆ:-- ವಿಟಾ ಗ್ರಾಮದಲ್ಲಿ ಒಬ್ಬ ಬ್ರಾಹ್ಮಣನಿರುತ್ತಿದ್ದನು. ಅವನು ಏಳು ಮಕ್ಕಳು ಒಬ್ಬರಹಿಂದೊಬ್ಬರು ತೀರಿದ್ದರು. ರೇವಣಸಿದ್ಧೇಶನು ಈ ಬ್ರಾಹ್ಮಣನ ಮನೆಯಲ್ಲಿ ಬಂದು ಇಳುಕೊಂಡು ಆತನ ಮಕ್ಕಳು ಈ ರೀತಿ ತೀರಿದ್ದನ್ನು ಕೇಳಿ ಕಡೆಯ ಮಗನನ್ನು ಏಳು ತುಂಡು ಮಾಡಲಿಕ್ಕೆ ಆತನ ಹೆಂಡತಿಗೆ ಅಪ್ಪಣೆ ಮಾಡಿದನು. ಆಕೆಯು ಹಾಗೆ ಮಾಡಲಾಗಿ ಆ ಏಳು ತುಂಡುಗಳಿಂದ ಏಳು ಜನ ಮಕ್ಕಳನ್ನು ಹುಟ್ಟಿಸಿದನು. ಅವನು ಅಮರತ್ವವನ್ನೆ ಪಡೆದನೆಂತಲೂ, ಇನ್ನೂ ಆ ಸ್ಥಳದಲ್ಲಿ ಸಂಚರಿಸುತ್ತಾನೆಂತಲೂ ಜನರ ನಂಬಿಕೆ ಇರುವದು.

ರೇಣಾವೀ ಗ್ರಾಮದ ನಿವಾಸಿಗಳಾದ ಲಕ್ಷ್ಮಣ ವಿಠು ದೇಶಪಾಂಡೆ ಎಂಬವರಲ್ಲಿ ಸಿದ್ಧಾಂತಸಾರವೆಂಬ ಶ್ಲೋಕ (ಓವೀ) ಬದ್ಧ ಮರಾಠೀ ಗ್ರಂಥವಿರುವದು. ಇದು ಸುಮಾರು ೩೦೬ ವರ್ಷಗಳ ಹಿಂದೆ ರಚಿಸಲ್ಪಟ್ಟಂತೆ ಕಾಣುತ್ತದೆ. ಇದರಲ್ಲಿ ರೇವಣಸಿದ್ಧೇಶ್ವರ, ಮರುಳಸಿದ್ಧೇಶ್ವರ, ಪಂಡಿತಾರಾಧ್ಯ, ಮತ್ತು ಏಕೋರಾಮಾರಾಧ್ಯ ಎಂಬ ಚತುರಾಚಾರ್ಯರ ಉಲ್ಲೇಖವಿರುವದು. ಆದರೂ ಇವರ ವಿಷಯಕ್ಕೆ ನಿಶ್ಚಯಾತ್ಮಕವಾಗಿ ಈ ಗ್ರಂಥದಲ್ಲಿ ಏನೂ ಹೊರಡುವದಿಲ್ಲ.

---

# ಚೌಡದಾನಪುರದ ಶಿಲಾಶಾಸನಗಳು.

(ಪುಟ ೧೧೮ ರಿಂದ ಮುಂದೆ ಸಾಗಿದ್ದು.)

ಲೇಖಕ:- ಶಿ. ಚ. ನಂದಿಮಠ ಎಮ್. ಎ. ಎಮ್. ಆರ್. ಎ. ಎಸ್. ಲಂಡನ.



೧

ಕನ್ನರದೇವರು ಶಿಲಾಶಾಸನ ನಂ ೪ ಚೌಡದಾನಪುರದ ಮುಕ್ತೇಶ್ವರ ಗುಡಿಯಲ್ಲಿ ಮ॥ ಇಲಿಯಟ್ಟರವರ ಹಸ್ತಪ್ರತಿ. ಪಾನ ೨೨೮

ವಿಳಾಸದ ಮೇಲೆ ಬರೆದ ಅಕ್ಷರಗಳಿಲ್ಲಿ. ಕಾಲ ಕನ್ನರದೇವ ವರ್ಷ (ವರ್ಷವನ್ನು ಸೂಚಿಸುವ ಭಾಗವು ಹೋಗಿದೆ) ಸಿದ್ಧಾರ್ಥಿಸಂವತ್ಸರ ಚೈತ್ರ ವ॥ ೧೫ ಸೋಮವಾರ ಸೂರ್ಯಗ್ರಹಣದಲ್ಲಿ ಚೌಡಿಸೆಟ್ಟಿಯರ ಕರಣದ ನಾಗರಸನ ತಮ್ಮ ಭಾನುದೇವ ಮೊದಲಾದವರು ಶಿವದೇವರಿಗೆ ಭೂಮಿ ಬಿಟ್ಟಬಗ್ಗೆ ಉಲ್ಲೇಖವಿದೆ. ಕನ್ನರದೇವನು ಕ್ರಿ. ಶ. ೧೨೪೭ ರಿಂದ ೧೨೬೦ರ ವರೆಗೆ ಆಳಿದನೆಂದು ಆತನ ಶಿಲಾಶಾಸನಗಳಿಂದ ಕಂಡು ಬರುವುದು. ಸಿದ್ಧಾರ್ಥಿಸಂವತ್ಸರವು ಶಕ ೧೧೮೧ (ಕ್ರಿ. ಶ. ೧೨೫೯)ರಲ್ಲಿ ಬರುವುದರಿಂದ, ಈ ಶಾಸನವು ಆತನ ಆಳಿಕೆಯ ಕಡೆಯ ವರುಷದಲ್ಲಿ ಹುಟ್ಟಿದೆ.

೨

ಮಹಾದೇವರಸ ಶಿಲಾಶಾಸನ ನಂಬರ ೧. ರಾಣೇಬೆನ್ನೂರ ತಾಲೂಕ ಚೌಡದಾನಪುರ ಗೋಪದೇವನ ಮುನೀಗುಡಿ ವೀರಭದ್ರದೇವರ ಬೆನ್ನ ಹಿಂದೆ ಬರೆದ ಶಾಸನವೆಂದು ಮ. ಇಲಿಯಟ್ಟರ ಹಸ್ತಪ್ರತಿಯಲ್ಲಿ ಅದೆ. ಹಸ್ತಪ್ರತಿ ಪಾನುಗಳು ೨೫೯ರಿಂದ ೨೪೦. ಆದಿಯಲ್ಲಿ ಶಿವಸ್ತುತಿ ನಂತರ

ಬಾಲೆಲಿದು ಕಳಾಭೂಷಿತ। ಮೌಳಿ ಶ್ರೀ ಕಲ್ಲಿನಾಥನವನೀಜನಮಂ।
ಪಾಲಿಸುಗೆ ಶರಧಿ ಶಶಿತಾ। ರಾಳಿ ಕುಲಂದಿಗ್ಗಜಂಗಳಿರ್ಪನ್ನೆವರಂ॥

ಸ್ವಸ್ತಿ ಸಮಸ್ತ ದಿವಿಜದನುಜ ಖಚರ ಖೇಚರ ಗಂಧರ್ವ ಕಿನ್ನರಕಿಂಪುರುಷ ಸಿದ್ಧಮುನೀಂತ್ರ ಫಣೀಂದ್ರ ಗಣೇಂದ್ರ ಪ್ರಮಥ ಪ್ರಚಂಡ ಪ್ರಣೀತ ವಿವಿಧ ನೃತ್ಯಗೀತ ವಾದ್ಯ ವಿದ್ಯಾ ವೀಣಾ ವೇಣುನಾದ ವಿನೋದ ಪ್ರಸಂನ ವರದಾನಿ ಮಲ್ಲಿಕಾರ್ಜುನಂ॥

ಕಂದ॥ ಶಿರಿ ಹಿರಿಯೊಳಿರ್ದು ತಂನಯು। ಭರಣವೆ ಶರಣೆಂಬ ವೀರಶಿವದೇವರಿಗಾ। ಚ್ಚರಿಯ ಮನಿಪ್ಪಾ ಪಶ್ಚಿಮ। ವರವಾಹಿನಿ ತುಂಗಭದ್ರೆಯಂ ತೋರುತ್ತಂ॥ ಆ ದೇಶದಿಂದ ನಡೆ ನೀ। ನಾ ದೇಶಕ್ಕೆಲ್ಲ ಮುಕ್ತನಾಥನೊಳೆಂದು ಮಾ। ಮಾದೇವಿ ಸಹಿತ...ಸ। ಮಾಧಾನ ದೊಳರ್ಚಿಸುವುದೆನಲ್ಕಡೆತಂದಂ। ಅನವರತ ಲಿಂಗಸಂಜ್ಞವ। ನನುಕರಿಸಿ ಯನ್ಯರಿಗಾಸೆ ಮಾಡದೆ ಮುಕ್ತೇ। ಶನ ನಪ್ರತಿಮದೆನಿಪ ಪೂ। ಜನೆಯಿಂದರ್ಚಿಸು. ತೊನೆವಂತು ಕರಗಳನು। ಅನುಮಾನಿಪನಡಿಗಡಿಗೆ ಶೃತಿಗಳೊಳುಪೆಗಳಂ। ನೆನೆ ನೆನೆದು ಮೂರ್ತಿಗೊಳಿಸುವ। ಘನತರ ಶಿವಲಿಂಗ ತತ್ವವಂ ಶಿವದೇವಂ॥ ಪರದೈವ ಮಾನ ಮರ್ದನ। ಪರದೈವಘರಟ್ಟಧಿಟ್ಟ ಪರದೈವ ಕುಭೂ। ಧರ ವಜ್ರ ಪಾತನೆನಿಪಂ। ಹರಗಣ ತೇಜ ಪ್ರಭಾವದಿಂ ಶಿವದೇವಂ॥ ಅಂತಾ ಶಿವದೇವರು ಶಿವಗಣಾಜ್ಞಾ ಸುಖದೊಳಿರುತ್ತಮಿರೆಯಿರೆ॥

ಕಾರುಣಿಕರೆನಿಪರೊಳು ಶಾಂ। ಕಾರುಣಿಕರೆನಿಪ ಸಿದ್ಧರೇವಣದೇವರ। ಕಾರುಣ್ಯದ ಶಿಶು ಭಕ್ತ್ಯಾ। ಚಾರದ ಬಲ್ಲಾಳದೇವ ಲೊಕ್ಕಿಯೊಳಿಸೆವಂ। ಮಿಕ್ಕ ಶಿವಭಕ್ತ ಸುಖದಿಂ। ದುಕ್ಕಿ ಮಹದೇವಭಾವಭರದಿಂ ಜಗಮಂ। ಲೆಕ್ಕಿಸದೆ ಗಣಸುಖದೊಳಿಹ। ವೊಕ್ಕಿಯ ಬಲ್ಲಾಳದೇವ ತೊರಗಲೆನಾಡೊಳ್॥

ಅಂತಿರುತ್ತಮಿರ್ದು॥

ಒದವಿದ ಶಿವಭಕ್ತಿಯ ಸಂ। ಪದಮಂ ಕಲ್ಲರಸನರಸಿ ಕನ್ನಾದೇವಿಗೆ। ಮುದದಿಂದ ವಿತ್ತ ಬಲ್ಲಾ। ಳದೇವಂ ಜಂಗಮ ಸುಖೈಕಗುಣಸದ್ಭಾವಂ। ಆಸತಿ ಕನ್ನಾದೇವಿಯು। ಶ್ರೀಸುಖಸಂಪದ ವಿಳಾಸ ವಿಭವಾದಿಗಳಂ। ಬಾಸಣಿಸದೆಶಿವಗಣಂಗಳಿ। ಗೋಸರಿಸದೆ ಮಾಡಿ ನೋಡಿ ಸುಖಿಸುತ್ತಿರ್ಪಳ್॥
ವ॥ ತದನಂತರಂ॥

ಕಮಲಾಶಯುದಿ ನಿಜಪತಿ। ಧರ್ಮಧ್ವಜ ದೇವಲೋಕವನೆ ತಾನೈದಲ್॥ ಧರ್ಮಜ್ಞದೇವಿ ಕಂಸರೆ। ಕರ್ಮರಿಯಂ ಪಂಯುಲುಜ್ಜಗಂ ಗೆಯುವನ್ನಂ॥ ಪರಮಗುರು ಸಿದ್ಧರೇವಣ। ಸಿರಿ ಗಿರಿಯುನಿವಾಸನಾಜ್ಞೆಯಿಂ ಬೆಸಸಿದನ। ಚ್ಚರಿಯ ಮನೆಯಪ್ಪ ಮುಕ್ತೇ। ಶ್ವರಲಿಂಗದೊಳಲ್ಲಿ ತುಂಗಭದ್ರೆಯ ತಡಿಯೊಳ್॥
ಇಂತೆನೆ॥

ಆನೇನನೆನದೆ ಸದ್ಗುರು। ತಾನೇನಂ ತೋರಿದ ವಿಚಿತ್ರಮೆನುತ್ತುಂ। ಮಾನಿನಿ ಕಂನಾದೇವಿಯು। ರಾನಂದದಿ ಬಂದು ಮುಕ್ತನಾಥನ ಕಂಡರ್॥ ಅಂತಾ ಮುಕ್ತಿಕ್ಷೇತ್ರದಲ್ಲಿರ್ದು ಪಿಂಗದೆ ಲಿಂಗಜಂಗಮಾರ್ಚನೆ ತತ್ಪರೆಯಾಗಿರೆ॥

ಶಿವಯೋಗಿ............................................।
ಗೆವೀರ ಕನ್ನಾದೇವಿ। ಭುವನವರಿಯಲ್ಕೆ ಕಲಿದೇವರ ಸ್ಥಾಪಿಸಿದಳ್॥

ಸ್ವಸ್ತಿ ಶ್ರೀಮತು ಯಾದವ ನಾರಾಯಣ ಪ್ರೌಢಪ್ರತಾಪ ಚಕ್ರವರ್ತಿ ಮಹಾದೇವರಾಯ ರಾಜ್ಯಪ್ರವರ್ಧಮಾನ ಮಾಚಂದ್ರಾರ್ಕ ತಾರಾಂಬರಂ ಸಲ್ಲುತ್ತಮಿರೆ। ಸ್ವಸ್ತಿಸಮಸ್ತ ಪ್ರಶಸ್ತಿಸಹಿತಂ। ಮಹಾಮಂಡಲೇಶ್ವರಂ। ಉಜ್ಜಯನಿಪುರವರಾಧೀಶ್ವರಂ। ವಟಕಲ್ಪವೃಕ್ಷಲಾಂಛಿತ ವಿಜಯಧ್ವಜಂ। ಭುವನದಕ್ಷಣ್ಯೈಕದಕ್ಷದಕ್ಷಿಣ ಭುಜಂ। ಚಂದ್ರಗುರುಪದ ಪಯೋಧರಧ್ವಾನಾನಂದಿತ ಮಯೂರಂ। ಮಾನನೀ ಮಾನ ಸರ್ವಸ್ವ ಸೂರೆಕಾರಂ। ರಣದೊಳ್ ಧೀರಂ। ಮಂಡಲಿಕ ಭೈರವಂ। ಆನಂದಿತ ಯುವತೀನಾಯಕನಿರವಂ। ಪಂನಿರ್ಬರಗಂಡಂ। ಸಮರಶೌಂಡಂ। ಶರಣಾಗತ ವಜ್ರಪಂಜರಂ। ಆಹವಾದಿತ್ಯ ಪುತ್ರಂ। ವೀರ............ ಪುಣ್ಯಮಂ ಪಡೆದು ಲಿಂಗೋತ್ಸವ ಸಮಯದಲ್ಲಿ......ಮುಕ್ತಿಕ್ಷೇತ್ರದಲ್ಲಿ ಪ್ರತಿಷ್ಠೆಯಂ ಮಾಡಿದ ಕಲ್ಲಿದೇವರಿಗೆ ಸರ್ವ ಶ್ರೀಕಾರ್ಯಾರ್ಥವಾಗಿ ಶ್ರೀಮನ್ಮಹಾಪ್ರಭು ಪೂಲಿಯ ಹಳ್ಳಿಯ ಮುದ್ದಗೌಡನಿಂ ಶಕ ವರುಷ ೧೧೮೪ ನೇಯ ದುಂದುಭಿ ಸಂವತ್ಸರದ ಕಾರ್ತಿಕ ಶು॥ ೧೫ ಸೋಮವಾರದಂದು ಒಡೆಯರ ಪಾದ ಸಮಕ್ಷಮದಲ್ಲಿ ಸರ್ವ ನಮಸ್ಯವಾಗಿ ಹಳಿಯ ಜೋಯಿಗೌಡನ ಕೇಯಂ ಗುತ್ತರಸದೇವಂ ಧಾರಾಪೂರ್ವಕವಾಗಿ ಬಿಟ್ಟನು. ನಂತರ ಸೀಮಾ ವರ್ಣನೆ. ಅಂತ್ಯದಲ್ಲಿ "ಇಂತೀ ಧರ್ಮವ ಶಿವದೇವ ಗಣಂಗಳು ಪಾಲಿಸುವರು" ಎಂದಿದೆ.

೩

ಮಹಾದೇವರಸರ ಶಿಲಾಶಾಸನ ನಂ. ೨ ರಾಣೇಬೆನ್ನೂರ ತಾಲೂಕ ಚೌಡದಾನಪೂರ ಮುಕ್ತೇಶ್ವರ ಗುಡಿಯಲ್ಲಿ ಮ. ಇಲಿಯಟ್ಟರ ಹಸ್ತಪ್ರತಿ ಪಾನುಗಳು ೨೪೧-೨೪೨.

ಓಂ ನಮಃಶಿವಾಯ। ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ। ತ್ರೈಳೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ॥

ಶಬ್ದಾದಯೋಪಿ ಗೃಹ್ಯಂತೇ ಕ್ರಿಯಂತೇ ವಚನಾದಯಃ। ಅಖಿಲಂ ಘ್ರಾಪಿ ಸರ್ವೇಷಾ ಮಾಜ್ಞಾ ಶಂಭೋರ್ಗರೀಯಸೀ ॥

ಸ್ವಸ್ತಿಶ್ರೀ ಜಯ ಮಂಗಳಪ್ಪದ ಮಹಾದೇವೆ ಶೃತಿವ್ರಾತದಿಂ। ಪ್ರಸ್ತುತ್ಯ ಪ್ರಭು ಸುಸ್ಥಿರಾಯುವ ನಖಂಡಾನಂದ ಸಂಪ್ರೀತಿಯಂ। ವಸ್ತು ಸ್ತೋಮವು ನುಡುಪ ಕೀರ್ತಿಯನುದಾರೈಶ್ವರ್ಯ ಶೌರ್ಯವುಂ। ವಿಸ್ತೀರ್ಣಾವನಿ ಮಂಡಲಕ್ಕನುದಿನಂ ಕೂತಿರ್ಗೆ ಮುಕ್ತೇಶ್ವರಂ ॥

ಶಾರ್ದೂಲ ವಿಕ್ರೀಡಿತ, Metrically defeetive.

ಸ್ವಸ್ತಿ ಸಮಸ್ತ ಸುರಾಸುರ ಕಿರೀಟಕೋಟಿ ಖಚಿತ ಮಣಿಮರೀಚಿ ರೋಚೀ ದಾಮವಿರಾ ಜಿತಾಭರಣಾಂ ಅಚಿಂತ್ಯ ಗುಣಾಭರಣಾಂ। ಅನಂತ ಬ್ರಹ್ಮಾಂಡ ಖಂಡನಿವಾಸ ನಿಜಭವನಂ। ಇಚ್ಛಾ ಮಾತ್ರಕೃತ ಚತು ರ್ದಶ ಭುವನಂ। ಋಗ್ಯಜುಸ್ಸಾಮಾಥರ್ವಣ ವೇದ ವೇದಾರ್ಥ ಸ್ಮೃತಿ ಪುರಾಣ ಧರ್ಮ ಶಾಸ್ತ್ರೋಪಗೀಯಮಾನ ಶುಭಚರಿತಂ। ನಿಜಶಕ್ತಿ ಕಳಾಮಾತ್ರ ವಿಮೋಹಿತ ಲಿಲಾ ಚರಿತಂ। ಪ್ರಮಥಗಣ ಮನಸ್ಸ ರೋಜ ರಾಜಹಂಸಂ। ಸಮುತ್ತುಂಗ ಜಟಾಜೂಟ ಭೂಷಿತಚಂದ್ರ ಕಳಾವತಂ ಸಂ। ಶ್ರೀ ಪಾರ್ವತೀ ವದನ ಪಂಕಜರಾಜ ಮಿತ್ರಂ। ಶರ ಣಾಗತ ತಾಪತ್ರಿತಯ ರೌದ್ರರುಂದ್ರ ವಿದ್ರಾವಣ ಕಾರುಣ್ಯ ಛತ್ರನಪ್ಪ ಶ್ರೀಮನ್ಮಹಾದೇವಂ ದಿವ್ಯ ಸಿಂಹಾಸನಾರೂಢನಾಗಿ ಪಾರ್ವತೀ ಸಹಿತ ಮಿರಲೊಂದಿನಂ ॥ ನಂದಿನಾಥ ವೀರಭದ್ರ ಭದ್ರಕಾಳ ಮಹಾಕಾಳ ಭೃಂಗೀಶ ಪ್ರಮುಖಾ ಸಂಖ್ಯಾತ ಗಣಂಗಳಿಂ ಸಂಸೇವ್ಯ ಮಾನನಾಗಿ ಶ್ರೀ ಕೈಲಾಸದಲ್ಲಿ ಒಡ್ಡೋಲಗಂಗೊಟ್ಟು ಸುಖಸಂಕಥಾ ವಿನೋದದಿಂ ದಿದ್ದ ಸುಪ್ರಸ್ಥಾವ ಸಮಯದೊಳು ॥ ಆ ವುಮಾ ಮಹೇಶ್ವರಂ ಗಣಂ ಗಳಿಗೆ ಪ್ರಸಂನನಾಗಿ ಇಂತೆಂದಂ ॥

ಇದೆ ನಾಲ್ಕುಂ ವೇದದಾರುಂ ಬಗೆವಡೆ ದಿಟದಿಂ ಸರ್ವ ಶಾಸ್ತ್ರಾರ್ಥ ಪಾರಂ। ಪದಪಿ ಸ್ಮೃತ್ಯಾರ್ಥಪಾರಂ ತ್ರಿಭುವನ ಭುವನಜ್ಞಾನ ವಿಜ್ಞಾನ ಪಾರಂ। ಸದುವಾಕ್ಯಾರ್ಥಮಪಾರಂ ಪ್ರಣವ ಸಮುದಿತಂ ಧ್ಯಾನಭಾ ವೈಕಪಾರಂ। ವಿದಿತಂ ಶ್ರೀ ಜ್ಯೋತಿ ಲಿಂಗಾಮರ ಕರುಣೋತ್ಪನ್ನ ಭಕ್ತಿ ಪ್ರಸಾದರ್॥

ಮತ್ತೇಭ. Metricaller. ಮಾತ್ರಾದೋಷ.

ಎನೆನೆಗಳ್ದದ್ರಿಜೆ ಬಿನ್ನಪಂ ಶಿವ ಜಗಕ್ಕೀ ಮಾರ್ಗಮಂ ತೋರಬೇಕೇ। ಳ್ಕೆನಲಾಗ ಪ್ರಭು ನಂದಿನಾಥನ ಮೊಗಂ ನೋಡಲ್ಕೆ ಶ್ರೀ ಸಂಗಮೇ ॥ ಶನ ಪುತ್ರಂ ಬಸವಯ್ಯಂ ಬಂಕನದರಿಂ ಶಿವ ಮುದ್ದುದೇವಂ ಜನ। ಕ್ಕನಿ ಮಿತ್ತಂ ಶಿವದೇವನಾಗಿಯುಂ ಗಣ ಶ್ರೀ ಪಾದಮಂ ತೋರುವೆಂ ॥

[ಮತ್ತೇಭ ಮಾತ್ರಾದೋಷ ಅಕ್ಷರಗಳು ಕಡಿಮೆಯವೆ.]

ಅದೆಂತೆಂದಡೆ ॥

ಕಂ॥ ಅವನತ ಕಂದರರಾಗಿಯೆ। ದಿವಜರ್ಶಿವಂ ರಾತ್ರಿಮಾಡಿ ದಾಪ ದದೊಳ್। ಧವಳೇಶ್ವರಾಖ್ಯ ಲಿಂಗದೊ। ಳವಿರಳ್ ಶಿವಮುದ್ದುದೇವ ಮುನಿಪತಿಯಿಪ್ಪಂ॥ ಅವ್ಯಕ್ತ ಶಂಕರ ನಾನತಿ। ಸುವ್ಯಕ್ತಂ ಮಾಡಿ ತೋರ್ಪೆ ನೆನುತೀಜಗದೊಳ್। ದಿವ್ಯಾಧವಳೇಶಲಿಂಗವ। ನಚ್ಚಿಯ ಶಿವಮುದ್ದು ಮುನಿವರಂ ಭಾವಿಸುವನ್॥

(ಇಲ್ಲಿ ಪ್ರಾಸವು ತಪ್ಪಿದೆ.)

ಶಿವಮುದ್ದು ವ್ರತಿಪತಿಗೀ। ದಿವಿಜೇಂದ್ರ ಪದಂಗಳೆಂಬವೇಂ ಪಾಸ ಟಿಯೇ। ಜವನ ಕಲಿಕಾಲ ಕಲುಷವ। ತವಿಸುವ ನೆವದಿಂದ ಮೂರ್ತಿ ಯಂ ತಾಳಿದಂ॥ ಕೇಶವ ಜಿನಚೌಡಾದಿಗ। ಳೀಶನೆ ಕಿರುದೇವತಿ...... ದಾಶಿವ ಮುದ್ದು ವ್ರತಿಪಮ। ಹೇಶಾನನೊಲಿದೊಲ್ಪೆಸಿದ ಜಗತ್ರಯುಮ

ರಿಯಲ್॥ ಅಮರಗಣ ಚರಣಕೋಮಲ। ವಿಮಲದೊಳುತ್ಪಲ್ಲ ಕಮಲಯುಗಳಸರಾಗ। ಪ್ರಮುದಿತ ಮನದ್ವಿರೇಫೋ। ಪಮೆಯಿಂ ಶಿವ ಮುದ್ದುದೇವ ಮುನಿಪತಿ

ಯಿಪ್ಪಂ॥ ಹವಣಿಸಿ ಬಾರದಗ್ರಜ ಕುಲೋದ್ಭವನಾಗಿ ವಿಧಾತ್ರ ವಿಂದ ಸಂ। ಭವಿಸಿದ ನಾಲ್ಕು ಸೃಷ್ಟಿಯೊಳೆ ಪುಟ್ಟಿದನೆಂಬಡೆ ಜಯುತ್ತೇ ಸ್ತ್ರಿಯಾ। ... ಮೊದಲಾದ ಪಂಡಿ ...... ಯೊಳ್ಪತಿನಲ್ಲ ಭಾವಿಸಲ್। ಭುವ ನೊಲವಿಂದ ವೀರಶಿವದೇವ ಗಣೇಶ್ವರನಾಗಿ ತೋರ್ದನ್॥

(ಸರಸೀ ಛಂದಸ್ಸು ಮಾತ್ರಾದೋಷ.)

ವ॥ ಎಂದು ತನ್ನೊಳಪರಿಭಾನಿಸು ಇಂತೆಂದಂ॥

ಕಂ॥ ಸುರನದಿಯೆ ತುಂಗಭದ್ರಾ। ವರನದಿ ಸುರಸಮಿತಿ ವಿಪ್ರಗ ಣನಿಕರವು ಆ। ಸುರಗಿರಿ ಮಹೇಶ ಭವನಂ। ಧರೆಯೊಳ್ಕವಿಲಾಸ ಮೆನಿಪ ಮುಕ್ತಿಕ್ಷೇತ್ರಂ॥ ಆ ಮುಕ್ತಿಕ್ಷೇತ್ರದೊಳಿರ್ದು। ವೈಮೆಯ ಮೆರೆಯಬೇ ಕೆನುತ್ತ ಜ್ಞರು

ನುಡಿಯಲ್ಸ್ವ॥ ಮೀ ಮುಕುತೇಶ್ವರನೀವರ। ಧಾಮಶ್ರೀಜ್ಯೋತಿ ಲಿಂಗನೆಂದೊಲವಿಂದಂ॥

ಶಕವರುಷ ೧೧೪೮ನೇಯ ಪಾರ್ಥಿವ ಸಂವತ್ಸರದ ಭಾದ್ರಪದ ಶುದ್ಧ ೧೫ ಸೋಮವಾರ ಚಂದ್ರೋಪರಾಗ ಪುಣ್ಯತಿಥಿಯ ಮಧ್ಯಾಹ್ನ ಸಮಯದೊಳು ಬಂದು ಮುಕ್ತಿ ಕ್ಷೇತ್ರಮಂಪೊಕ್ಕು॥

ಕಂ॥ ವಿರಚಿಸಿದಂ ಕೈಲಾಸದ। ಚರಿತ್ರಂ ಶ್ರೀ ವೀರಭದ್ರನಂ ಶ್ರೀ ಪದಮಂ। ಸ್ಮರಿಸುವ ವೀರವ್ರತಮಂ। ಧರಿಸಿದ ನತುಳಬಲಂ ವಿಕ್ರಮ... ಶಿವಂ॥ ಸೀಮೆಯನುಲ್ಲಂಘಿಸದುದೆ। ನೇಮಂ ಧರೆಗೊರಗದಿಪುದೇ ಸಲೆ ನಿಯಮಂ। ಕಾಮಿಸದಿಪುದೇ ನೇಮಂ। ಸ್ವಾಮಿ ಮಹಾದೇವನಿತ್ತೊಡ್ಡೋಲಗ ನೇಮಂ॥ ಅದರಿಂದ ಭೂತಂಗಳಂ। ಬೆದರಿಸಿ ಬೆನ್ನತ್ತಲುಟ್ಟದಂಬರವನ್ನಂ। ಕೆದರುವ ಬೆಚ್ಚದ ದೈವವ। ಮುದದಿಂ ಶ್ರೀಪರುಶನಾತ್ಮಜಂ ಶಿವದೇವಂ॥ ಮಾರಿದುರೆಯಾಗಿ ಲಿಂಗದ। ಸಾರೆವರಂ ಬರಲು ತುಂಗಭದ್ರೆಯ ಪಡೆ ಹೋ। ಸಾರೆಂತು ಜರಿದು ನೂಂಕಿದ। ವೀರ ಗಣಂಗಳ ಕುಮಾರನೀ ಶಿವದೇವಂ॥ ಶಿವ ಪದವನೆಯ್ದು ಮಡೆಮಾ। ರ್ಗವಿದೆಯೆನುತ್ತ ಖಗಜಗಕ್ಕೆ ತೋರುವ ನೆವದಿಂ। ದವಿರಳವಾಗಿರೆ ನಲವಿಂ। ಶಿವ ಕಟ್ಟೆಯ ಕಟ್ಟಿ ತೋರಿದಂ ಶಿವದೇವಂ॥ ಹವಣಿಸಲರಿದೆನಿಸುವ ಶಿವ। ಕವಿಲಾಸವನಖಿಳ ದೇವತಾಪಡೆ ಸಹಿತಂ। ಭುವನಕ್ಕೆ ತಂದು ಶಿವಸುಖ। ಭವನದ ನೆವದಿಂದ ರಚಿಸಿದಂ ಶಿವದೇವಂ॥ ತ್ರಯಿಯಂ ನೆಲೆಗೊಳಿಸಿದ ವ್ಯಾ। ತ್ರಿಯುಗದಿಂ ಮೂರು ಭುವನಮಂ ನಿಲಿಸಿದವೊಲ್। ತ್ರಯಭುವನ ಕೊಯ್ಯಿಂರುದ್ರ। ಪ್ರಿಯಭುವನವ ನೊಲಿದು ಮಾಡಿಸಿದ ಶಿವದೇವಂ॥ ಆಕಳಶಾಂತಂಬರೆ ಮೂ ಲೋಕವರಿಯೆ ಜೀರ್ಣವಾದ ಶಿವಭವನಂಮತ್ತಾ ಕಲಶಂಬಂರೆ ಶಿಲೆಯಿಂ ಲೋಕೋತ್ತಮವಾಗಿ ಮಾಡಿಸಿದ ಶಿವದೇವಂ॥

ಶಿವದೇವವ್ರತೀಂದ್ರ ಸುಲಿಂಗಾರ್ಚನ ಕಳಾಲಯವ ಅಚಿಂತ್ಯಂ ಸರ್ವಶಾಸ್ತ್ರಾಧಾರಯುತಂ ಅನನ್ಯೋಪಮ್ಯಂ ಅಗೋಚರಂ॥

ಆಳಬ್ಬಳಬ್ಬೆಯ ಜಾಣೆ। ಕಳದಡಿಟ್ಟೆ ಭಕ್ತಿಭಾವ ಸಂಪನ್ನ। ಕಲಿಖಳ ಕಳಣಿಮಹಣ। ಬಲಿಸದ್ಗುಣಸಾಯ ಮೋಚಮರ್ಕ ಶಿವದೇವಂ॥(?) ಆರುಂದರುಶನಮಂ ಬಲಿ। ಪುರೆಮೊರೆವ ಶಿವಗಣಜ್ಞ ಚಿಂತಾಮಣಿ ಷೇ। ಸಾರೆ ಶಿವದೇವ ಮುನಿಪತಿ। ತೋರಿಮೊರೆದಂ ಲಿಂಗಜಂಗಮೈಕ್ಯ ಕ್ರಮಮಂ॥

ಮತ್ತಂ ಪುರಾತರ ಚರಿತ್ರದಿಂ.........ವಿಚಿತ್ರವಾಗಿ ಲಿಂಗಾರ್ಚನೆ ಯುಂಗೈಯುತ್ತ ಮಿರೆಯಿರೆ॥

ಸ್ವಸ್ತಿ ಶ್ರೀಮತು ಯಾದವ ನಾರಾಯಣ ಭುಜಬಲ ಪ್ರತಾಪಚಕ್ರವರ್ತಿ ಶ್ರೀ ವೀರಮಹಾದೇವರಾಯ ವಿಜಯರಾಜ್ಯವುದಯದ ೩ನೇಯ ದುಂದುಭಿಸಂ। ವ ವೈಶಾಖ ಶು॥ ೧೫ ಸೋಮವಾರ ಸೋಮಗ್ರಹಣದಲ್ಲಿ ಸ್ವಸ್ತಿಶ್ರೀ ಸಮಸ್ತ ಪ್ರಶಸ್ತಿ ಸಹಿತಂ ಇಲ್ಲಿಂದ ಹಿಂದಿನ ಶಾಸನದಲ್ಲಿದ್ದ ಗುತ್ತರಸನ ಬಿರುದಾವಳಿಗಳಂತೆಯೇ ಬಿರುದುಗಳಿವೆ. ನಂತರ ಆಹವಾದಿತ್ಯಂ। ವಿಕ್ರಮಾದಿತ್ಯಂ। ಆ ಲಿಂಗಾನುನಯುದಿಂ ಸಂಜಾತ......... ವಿಕ್ರಮಾದಿತ್ಯ ವಿಖ್ಯಾತನಿರ್ಜಭುಜ ವಿಜಯೋಪೇತರ್ಪನ್ನೆರಡು ಮಂಡಲಿಕರಗಂಡರ್॥

ಆ ವಿಕ್ರಮಂಗೆ ವ್ಯೆಳಲ। ದೇವಿಗೆ ಮುದಿಸಿದರು ಮಾರಕಂಠೀರವ ಮಾ। ತ್ರಾ ವಿಕ್ರಮಾನುಜಾತಂ। ಶ್ರೀ ಗುತ್ತಂ ನಿಜಭುಜೈಕ ವೀರಮನಾದಂ॥

(ಪ್ರಾಸದೋಷ, ಮಾತ್ರಾದೋಷ)

ಅಂತಾಗುತ್ತ ನೃಪಾಲನ ವಿಶಾಲವಕ್ಷಸ್ತಳದೊಳನವರತಂ, ಸಿರಿ ನಿಜ ಭುಜಾಸಿಧಾರೆಯೊಳ್ ವಿಜಯಶ್ರೀಯೊಲಿಪ್ಪುದರಿಂ ವೀರವಿತರಣ ತ್ಯಾಗ ಭೋಗಂಗೈಯ್ಯುತ್ತಂ ನಿಜರಾಜಧಾನಿ ಗುತ್ತವೊಳಲ ನೆಲೆವೀಡಿನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆಯ್ಯುತ್ತಮಿದುರ್ ಶ್ರೀ ಶಿವದೇವರ ಕಾರುಣ್ಯಮಂ ಪಡೆದು ಶ್ರೀ ಸೋಮನಾಥ ಲಿಂಗಲಬ್ಧವರ ಪ್ರಸಾದನಾಗಿದ್ದವಸರದೊಳು ಮನೋತ್ಸಾಹದಿಂ ಬರಿಸಿದ ಶಾಸನಕ್ರಮವೆಂತೆಂದಡೆ॥ ಮುನ್ನಂಹಿರಿಯ ಜೋಯಿದೇವರಸರು ಚಿಕ್ಕ ಕುರುವತ್ತಿನಗ್ರಹಾರವಾ ತ್ರಿಭುವನಮಲ್ಲದೇವ ಪರಮವಿಶ್ವಾಸಿ ವಣಂಬೆನಾಯಕನ ಪ್ರೇರಣೆಯುಂ ಆಗಾಮಿರಕ್ಷಣಸಹಿತಂ ತಾಂಬ್ರ ಶಾಸನದಲ್ಲಿ ಬರಸಿ ಕುಳವ ಕಡಿದು ಕಲ್ಲು ನಟ್ಟು ಸರ್ವನಮಸ್ಯಮಾಡಿ ಶಿವದೇವರ ಶಿಲಾಕಾರ್ಯಕ್ಕೆ ಆರಾಧಿಸಿದ ವೃತ್ತಿ ಕಮ್ಮತು. ಉಳಿದ ಭಾಗದಲ್ಲಿ ಭೂಮಿಯ ಸೀಮಾ ವರ್ಣನೆಗಳಿವೆ.

ಕಾಳಯುಕ್ತಿ ಸಂ। ಕಾರ್ತಿಕ ಶುದ್ಧ ೮ ಸೋಮವಾರ ಒಂದು ವೃತ್ತಿಯನ್ನು ಬಿಟ್ಟಿದ್ದಾರೆ. ಅಂತ್ಯದಲ್ಲಿ ಶ್ರೀ ಗುತ್ತರಸದೇವನು ಅಶೇಷ

ಮಹಾಜನಂಗಳಿಗೆ ಅರ್ಥವ ಕೊಟ್ಟು ಕುಳವ ಕಡಿಸಿ ಕಲ್ಲು ನಟ್ಟು ಸರ್ವನಮಸ್ಯವಮಾಡಿ ಶ್ರೀ ಶಿವದೇವರಿಗೆ ಆರಾಧಿಸಿದನು ಎಂದಿದೆ.

೪

ಮಹಾದೇವರಾಯರ ಶಿಲಾಶಾಸನ ನಂ ೩. ಜೌಡದಾನಪೂರ ಮುಕ್ತೇಶ್ವರನ ಗುಡಿಯಲ್ಲಿ ಮ. ಇಲಿಯಟ್ಟರ ಹಸ್ತಪ್ರತಿ ಪಾನ ೨೪೩-೨೪೪.

ಹಿಂದಿನ ಶಾಸನಗಳಂತೆಯೇ ಶಿವಸ್ತುತಿ, ಮುಕ್ತೇಶನ ಸ್ತುತಿ. ಅಸಂಖ್ಯಾತರಾದ ಅಮರಗಣಂಗಳು ಕೈಲಾಸದಲ್ಲಿ ಸುಖದಿಂದೊಡ್ಡೋಲಗಂಗೊಂಡ ಭವಾನೀ ವಲ್ಲಭನನ್ನು ಪರಿಪರಿಯಾಗಿ ಸ್ತುತಿಸುತ್ತಾರೆ. ಶಿವನು ಪ್ರಸಂನನಾಗಿ ಸ್ತುತಿಸಲು ಕಾರಣವೇನೆಂದು ಕೇಳಲು ಅವರು "ಕಲಿಕಾಲ ಹೆಚ್ಚಿದೆ. ಧರ್ಮವಡಗಿತು. ಚಾರ್ವಾಕ ಸೌಗತ ಮತಗಳು ಬೆಳೆಯುಹತ್ತಿವೆ. ಅವುಗಳಿಂದ ಲೋಕವನ್ನು ಪಾಲಿಸುವದಾಗಬೇಕು" ಎಂದು ಬಿನ್ನೈಸಿಕೊಳ್ಳುವರು. ಶಿವನು ಒಪ್ಪಿಕೊಂಡು

ಕಂ॥ ಅಕ್ಷಯನಿದಾನ ಮುಕ್ತಿಯ। ದೀಕ್ಷಾಸ್ಥಳ ತುಂಗಭದ್ರೆ ಪಶ್ಚಿಮಮುಖದಿನ। ಘಕ್ಷಯಮುಂಮಾಡಲ್ತ। ದ್ದಕ್ಷಿಣ ತಟದಲ್ಲಿ ಮೆರೆಗುಮುಕ್ತಿಕ್ಷೇತ್ರಂ॥ ಅಲ್ಲಿಂದ ಮೂರು ಲೋಕದ। ರೆಲ್ಲರ ಪಾವನವಮಾಳ್ಪೆನೆನುತ ಗಜಾತ। ವಲ್ಲಭನವತರಿಸಿದ ಭೂ। ವಲ್ಲಭನನುರಾಗಮಪ್ಪಿನಂ ಮುಕ್ತೀಶಂ॥ ಲಿಂಗವವತರಿಸಿ ತಾನಾ। ಪಿಂಗದೆ ನಾನಾ ವಿಪ್ರವೃಂದ ಸಂಖ್ಯಾತಭರ್ಗ। ರಂಗಕೆ ಬರಲಿಕ್ಕಮರಗ। ಣಂಗಳವಂಾಜ್ಞೆಯಿಂದ ಶಿವದೇವಂ॥

[ಮಾತ್ರ ಪಿಚ್ಛಿತ್ತಿ]

ಉದಯಿಸಿದನಗ್ರಜನ್ಮದ। ಪದದೊಳ್ತನುಗುಣವನೊಂದದೆಲ್ಲಾಗಮದೊಳ್। ಮದನವಿರೋಧಿಧೌತೋದಿ। ತ ದೇವನೆನುತ್ತ ತಿಳಿದು ಶ್ರೀ ಶಿವದೇವಂ॥ ಆಶ್ರಮನಾಲ್ಕುಂ ತೀಯೆ ಯ॥ ನಾಶ್ರಮ ನಾಶ್ರಮಮನೆಯ್ದುದುದಾಶ್ರಮದಿಂಶಿ। ವಾಶ್ರಮವೆ ವಿಹಿತವೆಂದ। ತ್ಯಾಶ್ರಮಮಂಧರಿಸಿ ಮೆರೆದ ಶ್ರೀ ಶಿವದೇವಂ। ಲಿಂಗವನಪ್ಪಿದ ತೋಳ್ಗಳ್। ನಗನಯರನಪ್ಪೆನಲಪಿನೋಡೆ೯.ಡೆಮಾ। ನಂಗೊಡೆನೆನುತಾರ್ಯನುತಮ। ಭಂಗವ್ರತಿ ಶಂಕರಗೆ ಭಾಷೆಯುಕೊಟ್ಟಂ॥ ತಲೆದಂಡಸ್ವರ್ಗಮುಕ್ತಿಯ। ಫಲವನಪೇಕ್ಷಿಸದೆನಾದಡೆ ಶಂಕರ ಕೇಳ್। ಸಲೆಪುಣ್ಯಪಾಪವೆರಡರ। ಫಲವಿಲ್ಲದ ನಿತ್ಯ ಪೂಜೆಯಂಮಾಡಿದಪೆಂ॥ ಆಸೆಯ ಪಾಶಮಂ ಹರಿದು ರೋಷದ ಮೀಶಯಕಿತ್ತು ಕಾಮದ್ವೇಷರೆಂದು ಲೋಭಮದನೆಂಬುವನಟ್ಟಿತ ಮಾನಮೋಹ ತ್ರ। ಷ್ಣಾಸ

ಬಲಂಗಳಂ ಜರಿದು ಬೊಗ್ಗಿಸಿ ಗೆಲ್ದರಿ ತುತ್ತು ಮಾಡಿದಂ। ದೂಷಕ ಧೂಮಕೇತು ಶಿವದೇವನ ತರ್ಕ್ಯ ಗುಣಪ್ರಭಾವಂ॥

[ಉತ್ಪಲ. ಮಾತ್ರಾ ವಿಚ್ಛಿತ್ತಿ]

ಮೆಚ್ಚಿದ ಕಲಿಕೆಯ ನುರಿಯಂ। ಕಟ್ಟಿದ ನೂರೆಂಟು ಬೂದಿ ಗೊನ್ನ ಮಶಿವಯಂ। ಧಿಟ್ಟಂ ವಿಭೂತಿಯ ತಿಲಕ। ಕಟ್ಟಾಳ್ಪಲದಂಕ ಮನದೊಳತಿ ನಿಶ್ಶಂಕಂ॥ ಜಲ ಮೊದಲಾಗಿರೆಪ್ಪತ್ತು। ಜ್ವಲಯೆನಿಪ ಸ್ಥಾನಮೆಂಟು ಪತ್ತರೊಳಿದೆ ನೀ ಮರ್ಗಳೆರೆನಿಪುದೆಂದು ಭಸ್ಮದಿ। ತಳೆದಂ ಕರ್ಮಠನೇಮುನೀ ಶಿವದೇವಂ॥

ಲಂಕೆಗೆ ಝಂಕೆಗೆ ಮನನೊಳ್। ಶಂಕಿಸಿದಡೆ ನಿನ್ನ ಭಕ್ತರಾಣೆಲೆ ಪಶುಪತಿ। ಶಂಕರನೊಳಾದಡಂಬ। ಡಂಕೇಳಿ ಬೇಡಿದಡೆ ಯನ್ನ ತಲೆಯೇದಂಡಂ॥ ಅಣಕ ದಣಿಲಿಗೆ ಮುಂಕಣಿ। ಸೆಣಸುವ ವಾದಿಂಗೆ ಬಾಯಿ ಸರಿ ಜಗವರಿಯೆ। ಗುಣಿ ಸಕಳ ವೇದಶಾಸ್ತ್ರದ ಕಣಿ ಶಿವತತ್ವಾನುಭಾವನೀ ಶಿವದೇವಂ॥

ವೃ॥ ಶಿವಸದ್ವಿದ್ಯೆಯೆ ವಿದ್ಯೆಯೆಂದು ಶಿವಭಾವಂಭಾವಮೆಂಗ್ಧಂದುಮಾ। ಶಿವಮಂತ್ರಂಗಳೆ ಮಂತ್ರವೆಂದು ಶಿವಮೂರ್ತಿ ಧ್ಯಾನವೇ ಧ್ಯಾನದಿಂ। ಶಿವನಿತ್ಯೋತ್ಸವ ಮುತ್ಸವಂ ಶಿವಕಥಾಳಾಪಂಗಳಾಳಾಪಮಿ। ಕ್ಕುವ ಸೇವ್ಯಂಗಳೆನುತ ವೀರ ಶಿವದೇವಂ ತಾಳ್ದವೀರವ್ರತಂ॥

[ಮತ್ತೇಭ ವಿಕ್ರೀಡಿತ.]

ಶಿವನಂ ತೋರುವ ಮಾರ್ಗ ಮಾರ್ಗ ಶಿವಸದಾಚಾಚಾರಂಗಳಾಚಾರವೀ। ಶಿವಸಂಯೋಗವೆ ಯೋಗ ನಿತ್ಯ ಶಿವಪೂಜಾ ಕರ್ಮವೇ ಕರ್ಮವೀ। ಶಿವನೇ ದೇವನನ್ಯವಿಷಯಂ ಬೇರಿಲ್ಲ ಹೊಲ್ಲಂದು ಶ್ರೀಶಿವದೇವಪ್ರ। ಭುವೆತ್ತಿದಂಧ್ವಜಪತಾಕೋದ್ದಂಡ ಮಾದಂಡಮಂ

[ಮತ್ತೇಭ, ಮಾತ್ರಾವಿಚ್ಛಿತ್ತಿ]

ಎಲೆಗಳಪವಾದಿ ವೈಷ್ಣವಂಗಧಿಪ ವೈಷ್ಣವಗಷ್ಣವ ಸೌರಗೌಷ್ವರಮಾ। ಹೇಲಿ ಗಳಪವಾದಿ ಬೊಂಮಗಿಮ್ಮ ನಿಗಮಾರ್ಥವನರಿಯದೆ ಯಜ್ವಗಿಜ್ವ ಬೇ। ಡೆಲೆಗಳಪವಾದಿ ಬುದ್ಧಗಿದ್ಧ ಬರಿಯಾಗಮ ಗೀಗಮ ಮಂತ್ರವಾದಿ ಸಾ। ಕುಲಿಯದಿರೆಂದು ಬಗ್ಗಿಪ-ಪುದು ಶ್ರೀಶಿವದೇವನ ಕಾಲಹೊಂದೊಡರು॥

[ಮೂಲಕವಿಯು ಚಂಪಕ ಮಾಲೆಯಲ್ಲಿ ರಚಿಸಿದಂತೆ ತೋರುವುದು ಮಾತ್ರಾ ವಿಚ್ಛಿತ್ತಿ, ಅಕ್ಷರ ಬಾಹುಲ್ಯ ಮತ್ತು ಬೇರೆದೋಷ]

ಬೆರಳಂ ಕಚ್ಚಿ ಕರಂಗಳಂ ಮುಗಿದು ಬಾಯ್ಯಂ ಪಾಯ್ಯುವಂತೆಂಮ್ಮಾ ಕ್ಕರದಿಂ ಮುಚ್ಚುತ ಬಾಯುವಿಟ್ಟು ಕುಸಿದುಂ ವೈಯಿಕ್ಕುತಂ ಪಲ್ಗಳಂ। ಕಿರಿದುಂ ಜೀಯ ಶರಣಾರ್ಥಿ ಯಂದನುದಿನಂ ಷಡ್ದರ್ಶನಂ ಬಾಟುಲಿ। ಭರದೊಳ್ತಳ್ತುಲಿವುತ್ತ ಮಿರ್ದುವನಿಶಂ ಶಿವದೇವ ಮಾಮಾಂಘ್ರಿಯೊಳ್॥

[ಮತ್ತೇಭ, ಮಾತ್ರಾ ವಿಚ್ಛಿತ್ತಿಃ]

ಮತ್ತೆಂದುಟ್ಟಿಘರಟ್ಟಿ ಲಿಂಗಕೆ ಕಟ್ಟಿದುರಿಕೆಯುಂ ಕೊಟ್ಟು ಭಾಷೆ ದಿಟ್ಟ ವಾರಿಯು ಕಟ್ಟಾಳು ಶಿವದೇವಂ ಶ್ರೀ ಜ್ಯೋತಿನಾಥನೇ ಮುಕ್ತಿನಾಥನೆಂದರಿದು ಉಭಯ ಕರ್ಮದ ಬೇರಂ ಕೊರಿದು ಮದನ ಶರಂಗಳಂ ಮುರಿದು ಮುಪಾಯ ಪಾಶಂಗಳಂ ಪರಿದು॥

ಕಂದ॥ ಮಾನಸ ವಾಚಕ ಕಾಯಕ। ಯೇನುಂಟಾದಡವೆ ನಿನ್ನ ಭಕ್ತರೊಳನಿಶಂ। ಸಾನಂದದಿಂ ಮಾಳ್ಪೆಂ। ನಾನನ್ಯವ ನೆನೆಯೆ ನುಡಿಯೆ ಮಾಡೆಂ ಕೂಡೆಂ॥

ವ॥ ಇಂತೆನುತ್ತ ದೇವಲೋಕದಲ್ಲಿ ಕೊಟ್ಟ ಪ್ರತಿಜ್ಞೆಯುಂ ತಿಳದು॥

ನಿಟ್ಟಿಸಿ ನೋಡುವ ಮುಳಿದಾ। ನುಷ್ಠಾನಂ ಪೋಲ್ವವೆಂದು ಕಂಡ ಶಿವಪದಾ। ನಿಷ್ಠೆ ನೆಲೆಗೊಳಲು ಶ್ರೇಷ್ಠಾ। ನುಷ್ಠಾನವ ಮಾಳ್ಪನನುದಿನಂ ಶಿವದೇವಂ॥ ಲಿಂಗಕ್ಕೆ ಜಂಗಮಕ್ಕೆ। ಪಿಂಗದೆ ದಾಸತ್ವ ಮಾಳ್ಪುದೇಂ ಬೆಸಸಿದನಾ। ಸಂಗನಬಸವಂ ಬೆಸಸೆ ಮ। ನಂಗೊಂಡರ್ಚಿಸುವನು ಭಯ ಲಿಂಗವ ಮುದದಿಂ॥ ವೃಡಗಣ ವರಪ್ರಸಾದ ಮ। ಪಡೆದಂ ಜಗವರಿಯಲೆಂದು ಸಂಗನಬಸವಂ। ಪಡೆದಾ ಪ್ರಸಾದ ಸಿದ್ಧಿಯ ಕಡುವೀರವ್ರತದಿ ಪಡೆದನೀ ಶಿವದೇವಂ॥

ವ॥ ಮತ್ತಂ ಸತ್ಯಗಣಂಗಳ ನಿತ್ಯಪ್ರಸಾದ ಸಂಪನ್ನನಾಗಿ ಹಿಂಗದೆ ಲಿಂಗಾರ್ಚನೆಯುಂ ಗೈಯ್ಯುತ್ತ ಮಿರೆಯಿರೆ॥

ಸ್ವಸ್ತಿಶ್ರೀಮತು ಯಾದವ ನಾರಾಯಣಂ ಭುಜಬಲ ಪ್ರೌಢ ಪ್ರತಾಪ ಚಕ್ರವರ್ತಿ ಶ್ರೀವೀರ ಮಹಾದೇವರಾಯ ವಿಜಯರಾಜ್ಯ ಪ್ರವರ್ಧಮಾನಯಾ ಚಂದ್ರಾರ್ಕತಾರಂ ಬರಯುದಿತೋದಿತ ಒರುತ್ತಿರೆ॥ ಸ್ವಸ್ತಿ ಪ್ರಶಸ್ತಿ ಸಹಿತಂ ಶ್ರೀಮನ್ಮಹಾಮಂಡಲೇಶ್ವರಂ ಇಲ್ಲಿ ಗುತ್ತರಸನ ಪೂರ್ವಜರ ಬಿರುದುಗಳು ಹಿಂದಿನ ಶಾಸನಗಳಂತೆಯೆ ಅವೆ. ನಂತರ ಶ್ರೀ ಪರಶುಲಿಂಗ ಗಳಗನಾಥ ದೇವರ ದಿವ್ಯ ಶ್ರೀಪಾದಪದ್ಮಾ

ರಾಧಕನುಮಪ್ಪ ಶ್ರೀವೀರ ವಿಕ್ರಮಂಗಂ ಮಹಾದೇವಿಯರ್ಗಂ ಪುಟ್ಟಿದ ವಿಕ್ರಮಾಂಕನ ಪ್ರಭಾವಮೆಂತೆಂದಡೆ||

ಧರ್ಮದ ಪೇರ್ಮನೆ ಸತ್ಯದ। ನಿರ್ಮಳತೆಯ ಗೊತ್ತು ಕವಿಜನಂಗಳ ಕರೆದ। ಕೀರ್ತಿಯ ತಾಯ್ಮನೆ ಜಾಣಿನ। ನಿರ್ವಾಣದ ರತ್ನ ಕಲಶ ವಿಕ್ರಮಭೂಪಂ॥

ಆ ವಿಕ್ರಮ ನೃಪಂಗೆ ವೈಳಲ ದೇವಿಯರ್ಗಂ ಪುಟ್ಟಿದ ಗುತ್ತ ನೃಪನ ಪ್ರಭಾವಮಂ ಪೊಗಳ್ವಡೆ।

ದಿಕ್ಕಾಂತಾ ಜನತಾ ಲಲಾಟ ಪಟಲಾ ಪ್ರೋದ್ಭಾಸಿ ರತ್ನೋಜ್ವಲಾ। ದರ್ಶಿಸ್ಸಜ್ಜನ ಚಿತ್ತವೃತ್ತಿ ವಿಭವಃ ಪ್ರಖ್ಯಾತ ಕೀರ್ತಿಧ್ವಜಃ| ಸತ್ಯೋತ್ಸಾಹ ಸುಖಾಬ್ಧಿ ವರ್ಧನಯಶಃ ಕೌಮೋದಿನೀ ವಲ್ಲಭಃ। ಶ್ರೀಮಾನ್ ಭೂಪತಿ ವಿಕ್ರಮಾಂಕ ತನುಜಃ ಶ್ರೀಗುತ್ತ ಭೂಪಾಲಕಃ॥

(ಶಾರ್ದೂಲ.)

ಕಂದ॥ ಆ ವಿಕ್ರಮನ ಪರಾಕ್ರಮ। ಮಾವಿಕ್ರಮ .........ಗೊಗೆಯ ಬುಧ। ಗೀರ್ವಡೆಯೊಳು ಶರಣೆಂದರ್। ಕಾವೆಡೆಯೊಳ್ಗುತ್ತ ಭೂಮಿಪಂಗಾಸರಿಯೇ।

ಮಲದವಿರೋಧಿ ವೈರಿಗಳ ಗಂಡ ರಣಾಂಗಣದೊಳಡರ್ದ ಬೆಂ। ಬಲವನೆ ಪೋರ್ದದಿಂ ತಡೆಯಾಗಿದ್ದರ ಗಂಡ ಮಿಡಿರ್ಚಿ ಚುರ್ಚಿಕ। ಕ್ಕುಲತೆಯ ಮಾಡುವರ್ಗಳದ ವೀರರ ಗಂಡಂ ಸಾಹಸಕ್ಕೆ ಮೆಯ್ಗಲಿ ಯೆನಿಸಿರ್ಪ ತುಂಡರೊಳು ಗಂಡರ ಗಂಡಂ ಗುತ್ತ ಭೂಭುಜಂ॥

[ಚಂಪಕ. ಮಾತ್ರಾವಿಚ್ಛಿತ್ತಿಃ]

ಮತ್ತಂ ಪರದಿಗ್ವಲಯಂಗಳಾಲಯಂಗಳಿಂ ಪರ್ಬಿದ ಕೀರ್ತಿಕಾಂತೆಯಂ ವೀರವಿತರಣಂಗಳಿಂ ಪೊಗಳಿಸಿಕೊಳುತ್ತ ನಿಜರಾಜಧಾನಿ ಗುತ್ತವೊಳಲೊಳ್ ಸುಖದಿಂ ರಾಜ್ಯಂಗೈವುತ್ತಮಿರ್ದ॥

ಕಂದ॥ ಚಂಡಾಯು ಪಂನಿತ್ಸರ। ಮಂಡಲಿಕರ ಗಂಡನೆಂಬ ಜಸಮೆಸೆಯಿತು ಭೂ। ಮಂಡಲವರಿಯಲು ಶಿವನೇ। ಗಂಡನೆನಿಪುದ್ದ ಕೀರ್ತಿಯಂ ಪಡೆದಿರ್ಪನ್ ॥

ಇಂತೆನುತ್ತ ತನ್ನೊಳ್ಪರಿಭಾವಿಸಿ ನೋಡಿ||

ಕಂದ॥ ಧಾರುಣಿಯೊಳುಗ್ರ ತಪದಿಂ। ವೀರ್ಯೈಶ್ವರ್ಯವನು ಪಡೆದ ಶಿವದೇವಯ್ಯನ ಕಾರುಣ್ಯವೆನಗೆ ಜೀವನ। ಬೇರಿಲ್ಲೆಂದರಿದು ತತ್ಪ್ರಸಾದವ ಪಡೆದಂ॥

ಅಂತು ಶಿವಗಣ ಪ್ರಸಾದದಿಂ ಶ್ರೀ ಶಿವದೇವರ ಕಾರುಣ್ಯಮಂ ಪಡೆದು ಶ್ರೀ ಸೋಮನಾಥ ಲಿಂಗವನವಧರಿಸಿಕೊಂಬ ಸಮಯದಲ್ಲಿ ಗುತ್ತರಸರು ಶ್ರೀ ಶಿವದೇವರ ಶಿವಪಾದಂಗಳಿಗೆಯಾರಾಧನೆಯ ಮಾಡಿ ಶಿವಪುರಕ್ಕೆ ಬೇವುಳಹೊಲದಿಂ ಬಡಗಣದಲ್ಲಿ ಗಂಗನಾಡುಮತ್ತರು ಎರೆಯ ಕೇಯನಿಕ್ಕಿದಡಾ ಬೊಮ್ಮಗೌಂಡಕರಂಗಳೆತ್ತಿ ಮಹಾಪ್ರಸಾದ ಜೀಯಾಯೆಂದು ಗುತ್ತಳ್ನಾಡ ಪ್ರಭುಗಳ ಮುಂದೆ ಕೈಕೊಂಡು ತನ್ನ ಸ್ಥಳದ ಹೆಗ್ಗಡೆ ಮುದ್ದಯ್ಯ ಮುಖ್ಯ ಸಮಸ್ತ ಪ್ರಜಾಪ್ರಕೃತಿಯಿಂದ ಹಿಟ್ಟ ಪಂಚಮಠನಖರ ಮುಮ್ಮುರಿದಂಡಸಹಿತ ಬಂದು ತನ್ನ ಗೌಂಡಗೇಯಂ ಬಡಗಣ ಬಸವನ ಮೂಡಲು ಚಿಕ್ಕಕುರುವತ್ತಿಯ ಹೊಲ--- ಈ ಪ್ರಕಾರ ಸೀಮಾವರ್ಣನೆಯದೆ. ನಂತರ--- ಶಕವರ್ಷ ೧೧೮೪ ನೇಯ ದುಂದುಭಿ ಸಂವತ್ಸರದ ವೈಶಾಖ ಶು॥ ೧೫ ಸೋಮವಾರ ಸೋಮಗ್ರಹಣದಂದು ಶ್ರೀಮದಮರಗಣಂಗಳ ನಿಜಸಿಂಹಾಸನವಪ್ಪ ಮುಕ್ತಿಕ್ಷೇತ್ರ ಭೂಕೈಲಾಸವಿದೆಂದು ಶ್ರೀ ಶಿವದೇವರು ಜಗದ್ಧಿತಾರ್ಥವಾಗಿ ರಚಿಸಿದ ಶಿವದೇವಪುರಕ್ಕೆ ಪ್ರತಿವರ್ಷ ಬರುತ್ತಂ ಬಹುದು ಅದು ಸರ್ವಮಾನ್ಯ॥ ಆ ಮಾನ್ಯ ಜಯಮಾನ್ಯ ವಿಜಯಮಾನ್ಯಂ॥

ಮತ್ತಂ ಸ್ವಸ್ತಿಸಮಧಿಗತ ಪಂಚಮಹಾಶಬ್ದ ದ್ವಾರಾವತಿ ಪುರವರಾಧೀಶ್ವರಂ। ಸುವರ್ಣಗರುಡಧ್ವಜಂ। ವಿಷ್ಣುವಂಶೋದ್ಭವಂ। ಯಾದವಕುಲಕಮಲ ಕಲಿಕಾವಿಕಾಸಭಾಸ್ಕರಂ। ಅರಿರಾಯ ಜಗಜ್ಝಂಪಂ। ಮಾಳವರಾಯಮದನ ತ್ರಿಣೇತ್ರಂ। ಗೂರ್ಜರರಾಯ ಭಯಜ್ವರಂ। ಚೋಳರಾಯ ದಿಶಾಪಟಂ। ತೆಲುಂಗರಾಯ ಸ್ಥಾಪನಾಚಾರ್ಯ ಇತ್ಯಾದಿ ನಾಮಾವಳಿ ಸಮಾಲಂಕೃತ ಶ್ರೀಮತ್ ಪ್ರೌಢ ಪ್ರತಾಪಚಕ್ರವರ್ತಿ ಶ್ರೀ ಮಹಾದೇವರ ವಿಜಯರಾಜ್ಯ ಪ್ರವರ್ಧಮಾನಮಾಚಂದ್ರಾರ್ಕತಾರಂಬರಂ ಸಲ್ಲುತ್ತಮಿರೆ॥

ಕಂದ॥ ದಕ್ಷಿಣ ದಿಕ್ತಟ ವಿಲಸಿತ। ಲಕ್ಷ್ಮಿಗೆ ನೀನಧಿಪನೆಂದು ಯಾದವಭೂಪಂ ರಕ್ಷಿಸಿ ಬೆಸಗಲು ಮುದದಿಂ। ರಕ್ಷಿಪ ತೊರಗಲೆಯ ದೇವರಸ ಜನಪದಮಂ॥

ವ॥ ಶ್ರೀ ಶಿವದೇವರು ಮಾಡುವ ಲಿಂಗಜಂಗಮ ಸಮಾರಾಧನೆಗೆ ಸರ್ವಭಾವದಿಂ ಶುಶ್ರೂಷೆಯ ಮಾಳ್ಪುದೆಂದು ಶ್ರೀ ಮಹದೇವರಾಯ ನಿರೂಪಂಗೊಡೆ

ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾ ಪ್ರಧಾನಂ ಸರ್ವಾಧಿಕಾರಿ ತೊರಗಲೆಯ ದೇವರಸರು ಶ್ರೀಮದ್ದಕ್ಷಿಣವಾರಾಣಸಿಯಾಗಿ ಪಶ್ಚಿಮ ವಾಹಿನಿ ತುಂಗಭದ್ರೆಯ ದಕ್ಷಿಣತೀರದೊಳೆ ಶಿವಮುಕ್ತಿ ಕ್ಷೇತ್ರ ನಿವಾಸರಪ್ಪ ಶ್ರೀ ಶಿವದೇವರ ಲಿಂಗದರ್ಶನಾರ್ಥಂ ಬಂದು ರುಧಿರೋದ್ಗಾರಿ ಸಂ। ದ ಜೇಷ್ಠ ಬಹುಳ ಪಂಚಮಿ ಆದಿವಾರ ಷಡಶೀತಿ ಮುಖ ಸಂಕ್ರಾಂತಿ ತತ್ಕಾಲದಲಿ ಬೆಳುವಳ ಬಡಗಣ ಹೊಲದಲ್ಲಿ ಬಿಟ್ಟವೃತ್ತಿ ಅಕೇಯನು ಒಡೆಯ ಬಸವಯ್ಯಂಗೆ ಸರ್ವನಮಸ್ಯವಾಗಿ ಕೊಟ್ಟರು.॥ ಶ್ರೀ ಶಿಂಹಣ ವರ್ಷದ ಶುಭಕೃತುಸಂವತ್ಸರ ಪುಷ್ಯ ಶು॥ ೩ ಶುಕ್ರವಾರ.

೫

ಮಹಾ ದೇವರಸರ ಶಿಲಾಶಾಸನ ನಂ. ೫ ರಾಣೇಬೆನ್ನೂರ ತಾಲೂಕ ಚೌಡದಾನಪುರದ ಮುಕ್ತೇಶ್ವರ ಗುಡಿಯಲ್ಲಿ ಮ. ಇಲಿಯಟ್ಟರ ಹಸ್ತ ಪ್ರತಿ ಪಾನ ೨೪೪

ಓಂ ನಮಃ ಶಿವಾಯ। ಮುದದಿಂ ಪಾಲಿಸುಗೊರ್ವೀ। ಪದಚಂದ್ರ ಮರ್ಕತಾರಂಬರ। ಮಾ ಗಿರಿಜಾ। ವದನಾಂಬುಜಾತ ಮಿತ್ರಂ। ತ್ರಿದಶೇಶ್ವರ ಮುಕ್ತನಾಥದೇವರ ದೇವಂ॥

ಶ್ರೀಮತು ಸ್ವಸ್ತಿ ಯಾದವ ನಾರಾಯಣ ಪ್ರೌಢ ಪ್ರತಾಪಚಕ್ರವರ್ತಿ ಶ್ರೀ ವೀರ ಮಹದೇವರಾಯ ರಚಿಸದಂ। ಸ್ವಸ್ತಿ ಶ್ರೀಮನ್ಮಹಾ ಪ್ರಧಾನಂ ಸರ್ವಾಧಿಕಾರಿ ತೊರಗಲೆಯ ದೇವರಸರು ಕಟಕದಿಂ ಬಂದು ಸ್ವಸ್ತಿ ಶ್ರೀಮದಾರೂಢಪ್ರತಿ ಶಿವಯ್ಯ ಶಿವಸಿದ್ಧದೇವಂಗೆ ಸಾಷ್ಟಾಂಗ ಪ್ರಣಾಮಪೂರ್ವಕಂ ಬಿನ್ನಪಂಗೈದಿಂತೆಂದಂ॥

ಒಂದುಗ್ರಾಮವ ಕೊಡುವೆಂ। ತೆಂದೆದುಪತಿ ಮಹಾದೇವಂ ಬೆಸಸೆ ತಾನಾ। ನಂವದಿ ಪತಿಕರಿಸಲುಬೇ। ಕೆಂದಡೆ ಶಿವಯೋಗ ಸಿದ್ಧನಗುಶಿಂತೆಂದಂ॥ ತ್ರಿಭುವನವೆಮ್ಮದು ಬರಿಯ। ಪ್ರಭುತ್ವವು ಶ್ಲಾಘ್ಯವೇ ಮೊದಲಿದು... ಮಾಣೆಂದ ಭಯಂಕರ ಸಿದ್ಧನೆನಲಾ। ಶುಭಲಕ್ಷಣ ದೇವರಾಜ ಮರಳಿಂತೆಂದಂ॥

ದೇವರು ಕೊಟ್ಟುದಲ್ಲವಿರಲಪ್ಪುದೆ ದೇವನೆ ಮೊಡೆಸಿದ್ಧಯ್ಯಂ। ಶ್ರೀ ವಿಭವಂಗಳಿಂ ಮನುಜಲೋಕದಧೀಶ್ವರರಿತ್ತುದಲ್ಲ ದೊಂ। ದೇ ವಿರಲಪ್ಪುದುತ್ತಮ ಪದಾರ್ಥಚಯಂಗಳವಲ್ಲದಾತ್ಮಜಾ। ಭಾವಕರಾರ್ಥ ವಿತ್ತಡದನೊಲ್ಲೆನೆನಿಪ್ಪುಡು ಧರ್ಮವಪ್ಪುದೇ?॥

(ಉತ್ಪಲಮಾಲೆ)

ಎಂದಮೃತೋದರ ಪ್ರಭವ ದೇವನೃಪ ನುಡಿದದೊಂದು ವಾಕ್ಯದೊಳ್। ಬಂದಖಿಳಾಗಮಾರ್ಥ ನೆಲಸಿರ್ದುದು ಶಾಸ್ತ್ರದಿ ಸರ್ವಸಂಪದಂ। ಸಂದುದು ವೈದಿಕಾರ್ಥ ವಡಗಿರ್ದುದು ಧರ್ಮದ ಪೇರ್ಮೆವೆತ್ತದೇ। ನೆಂದಪೆನೆಂದು ತನ್ನೊಳನುಮಾನಿಸುತಂ ಶಿವದೇವರೆಂದಪರ್॥

(ಉತ್ಪಲಮಾಲೆ)

ಆರಾಧಿಸುವವ ನೀನೆನೆಲೆ। ದಾರಾಧಿಸಿಕೊಂಬನೀಶ್ವರಮೇನಾನುಮಂ। ಆರಾಧಿಸಿ ಕೈಕೊಂಬಂ। ವೀರೇಶ್ವರನೆಂದು ಸಿದ್ಧನೇಮಿಸಲೊಲವಿಂ॥ ನಂತರ ದೇವರಾಜನು ಹತ್ತು ಹಳ್ಳಿಗಳನ್ನು ಕೊಟ್ಟು ಆರಾಧಿಸಿದನು. ಗುತ್ತರಸನು ತಾಯಿ ವೈಳಲದೇವಿಯರ ಕೈಯಲು ಧಾರೆಯಂಕೊಂಡು ಆರಾಧಿಸಿದನು. ದಾನವಾಗಿ ಕೊಟ್ಟ ಊರುಗಳ ಸೀಮೆ. ಕಾಲ ಶಕ ೧೧೮೬ನೇಯ ರಕ್ತಾಕ್ಷಿ ಸಂವತ್ಸರ ಪುಷ್ಯ ಬಹುಳ ಆದಿತ್ಯವಾರ ಶ್ರವಣಾ ನಕ್ಷತ್ರ ವ್ಯತಿಪಾತಂ ಕೂಡಿದ ಧನೋದಯ ಪುಣ್ಯತಿಥಿಯಲ್ಲಿ ಅಂತ್ಯದಲ್ಲಿ ಇಂತೀ ಹತ್ತು ಗ್ರಾಮಗಳಲ್ಲಿ ದೇವರಸರು ಶಿವದೇವರಿಗೆ ಸಮಾರಾಧನೆಯ ಮಾಡಿದ ಧರ್ಮವು ಆಚಂದ್ರಾರ್ಕಪರಿಯಂತರಂ ಸರ್ವನಮಸ್ಯವಾಗಿ ಗುತ್ತಳನಾಡ ಪ್ರಭುಗಾವುಂಡಂಗಳು ಸಲಿಸುವರು ಎಂದಿದೆ.

ಈ ಶಾಸನಗಳಲ್ಲದೆ ಇನ್ನೂ ಒಂದು ಶಾಸನವು ಇದೇ ಊರಲ್ಲಿ ನದೀ ತೀರದಲ್ಲಿರುವ ಈಶ್ವರನ ಗುಡಿಯಲ್ಲಿ ಅದೆ. ಅದರ ಬಹುತರ ಮಹತ್ವದ ಭಾಗವನ್ನೆಲ್ಲ "ಮುಕ್ತೇಶ್ವರ" ದೇವರ ವಿಷಯಕ್ಕೆ ಬರೆಯುವಾಗ ಹೇಳಿದ್ದೇವೆ. ಅದು ಮ. ಇಲಿಯಟ್ಟರ ಪ್ರತಿಯ ಸಂಕೀರ್ಣಶಾಸನ ನಂ. ೧೭ ಅದೆ.

ಮೇಲಿನ ಶಾಸನಗಳ ಅವತರಣಿಕೆಗಳಲ್ಲಿ ಆಯಾ ಶಿಲಾಶಾಸನಗಳ ಮಹತ್ವದ ಭಾಗಗಳನ್ನೆಲ್ಲ ಉದ್ಧರಿಸಿ ಕೊಟ್ಟಿರುವೆವು. ಮ. ಇ. ರವರ ಹಸ್ತ ಪ್ರತಿಯಲ್ಲಿ ಅಸಂಖ್ಯವಾದ ತಪ್ಪುಗಳಿವೆಯೆಂದು ಮೊದಲೇ ಹೇಳಿರುವೆವು. ಈ ಅವತರಣಿಕೆಗಳನ್ನು ಓದಿದ ಪಂಡಿತರಿಗೆ ಅದು ಸುಲ

ಭವಾಗಿ ಕಂಡು ಬರುವುದು. ಮೂಲ ಪ್ರತಿಯಲ್ಲಿರುವ ಅಕ್ಷರ ದೋಷಗಳನ್ನೂ ಕೆಲವು ಕಡೆಗೆ ಶಬ್ದ ದೋಷಗಳನ್ನೂ ಮೂಲ ಶಾಸನಗಳ ಆಶಯವನ್ನು ಕೆಡಿಸದೆ, ನಮಗೆ ತಿಳಿದಂತೆ, ಅನೇಕ ಕಡೆಗೆ ತಿದ್ದಿರುವೆವು. ಇದರಿಂದ ಮೂಲ ಶಾಸನಗಳ ಆಶಯವನ್ನು ಕೆಡಿಸಿರುವೆಂದಾಗಲೀ, ಅಥವಾ ಹೆಚ್ಚಿಗೇನಾದರೂ ಕೂಡಿಸಿರುವೆಂದಾಗಲೀ ಪಂಡಿತರು ತಿಳಿಯಕೂಡದೆಂದು ನಮ್ಮ ಪ್ರಾಮಾಣಿಕವಾದ ನಮ್ರ ವಿನಂತಿಯು. ಏನಾದರೂ ಸ್ವಲ್ಪ ಹೆಚ್ಚು ಕಡಿಮೆಯಾದೀತೆಂಬ ಭಯದಿಂದಲೇ ಛಂದಸ್ಸಿನ ದೋಷಗಳನ್ನು ಹಾಗೇ ಇರಗೊಡಬೇಕಾಯಿತು.

तं सन्तः श्रोतुमर्हन्ति सदसद्व्यक्ति हेतवः।
हेम्नः संलक्ष्यते ह्यग्नौ विशुद्धि श्यामिकापि वा ॥



# ಹೇ ದೇವ! ಹೊರಗಾರು ಒಳಗಾರು ಎಲ್ಲೆಡೆಯೂ ನೀನೇ ಇರುವೆ.



ಭಾ. ಪ. ಪೊಟ್ಟಮೊದಲೊಳು ನಿನ್ನೊಳಡಗಿದ ।
ಸೃಷ್ಟಿಯನು ಪೊರದೂಡುತದರೊಳು ।
ಅಟ್ಟಹಾಸದೊಳಿರುತ ಮೆರೆಯುವೆ ಸರ್ವಮಯನೆನಿಸಿ॥
ನಿಷ್ಠೆಯಿಲ್ಲದೆ ದೇವ ನಿಮ್ಮನು ।
ದಿಟ್ಟಿಯಿಂದಲಿ ಕಾಂಬೆನೆಂದವ ।
ರೆಷ್ಟು ಹುಡುಕಿದಡೇನು ಕಾಂಬುದೆ ನಿನ್ನ ನಿಜದಿರವು॥೧॥

ಹಣ್ಣಿನೊಳಗಿಹ ರುಚಿಯು ನೀನೇ ।
ಹಣ್ಣನಾಸ್ವಾದಿಪನು ನೀನೇ ।
ನಿನ್ನನುಳಿದಾರಸನೆಗೆಂತಿರುತಿಹುದು ರುಚಿನಿಕರ॥
ಕಣ್ಣಿನಿಂ ಕಾಂಬುವದು ನೀನೇ ।
ಕಣ್ಣಿನಿಂ ಕಾಣುವನು ನೀನೇ ।
ಕಣ್ಣಿನೋಳ್ನೀನಿಲ್ಲದಿರಲಾ ಕಳೆಯದೆಂತಿಹುದು ॥೨॥

ಪರಿಕಿಸಲು ಪೊರಗೊಳಗೆ ನೀನಿರು ।
ತಿರುವೆಯಲ್ಲವೆ ಪೆರತನೇನನು ।
ಮರಿಯೆ ನಾನೀತಿರೆಯದೆಲ್ಲವು ನಿನ್ನ ರೂಪಹುದು ।
ಮರೆವೆಯಿಂದಲಿ ಜೀವನೆನಿಸಿದೆ ।
ಅರುಹಿನಿಂದಲಿ ದೇವನೆನಿಸಿದೆ ।
ಅರುಹೆಗುರುವಾಗೆನ್ನನೀನುದ್ಧರಿಸಿದೆಲೆದೇವ ॥೩॥

ಗುರುನಂಜಪ್ಪ ನೀಲಪ್ಪ ಕಟ್ಟೀಮನಿ.



# ಧಾರ್ಮಿಕ ಸ್ವಾತಂತ್ರ್ಯ.

(ಶ್ರೀ- ವೀರಪ್ಪ ಬಸವಪ್ಪ ಬಿಳೇಅಂಗಡಿಬಿ. ಎ.ಎಲ್. ಎಲ್. ಬಿ. ಹುಬ್ಬಳ್ಳಿ)



No slavery is more harmful than that of mind, no sin is greater than keeping human beings in per petual bondage. It is bad enough to enslave people, but to create and perpetuate circumstances to prevent them from breaking their claims and becoming free is infamous."

Lala Lajpatrai.

ಮೇಲಿನ ಲಾಲಾ ಲಜಪತರಾಯರ ಉಕ್ತಿಯ ಅರ್ಥ— "ಒಬ್ಬನ ಮನಸ್ಸಿನಲ್ಲಿ ಕೀಳು ಭಾವನೆಯನ್ನು ಹುಟ್ಟಿಸುವಂಥ ಮಾನಸಿಕ ದಾಸ್ಯತ್ವಕ್ಕಿಂತ ಹೆಚ್ಚಿಗೆ ಅನಿಷ್ಟಕಾರಕವಾದ ಅಪಾಯಕಾರಕವಾದ ದಾಸ್ಯತ್ವವು ಬೇರೊಂದಿಲ್ಲ. ಲೋಕದ ಜನರನ್ನು ಸರ್ವದಾ ಕೀಳು ಭಾವನೆಯಲ್ಲಿರಿಸುವಂಥ ಪಾಪಕ್ಕಿಂತಲೂ ಹೆಚ್ಚಿನ ಪಾಪವಿಲ್ಲ. ಜನರನ್ನು ಗುಲಾಮರಾಗಿ ಮಾಡುವದೇ ಮೊದಲು ಕೆಟ್ಟದ್ದು. ಆದರೆ ಜನರು ಸ್ವತಂತ್ರರಾಗಿ ತಮ್ಮ ದಾಸ್ಯತ್ವದ ಶೃಂಖಲೆಗಳನ್ನು ಮುರಿಯಗೊಡದಂತೆ ಪರಿಸ್ಥಿತಿಯನ್ನುಂಟು ಮಾಡಿ ಆ ಸ್ಥಿತಿಯನ್ನೇ ಸ್ಥಿರಗೊಳಿಸಲೋಸುಗ ಮಾಡುವ ಯತ್ನಗಳೆಲ್ಲ (ಮಾಡುವವರಿಗೆ) ಅತ್ಯಂತ ಅಪಮಾನಕಾರಕವುಳ್ಳವಾಗಿವೆ"

ಒಬ್ಬನ ಗುಲಾಮನಾಗಿರುವದು- ಅದು ಧಾರ್ಮಿಕ, ಸಾಮಾಜಿಕ, ರಾಜಕೀಯ ಅಥವಾ ಔದ್ಯೋಗಿಕ ಯಾವದೇ ಸ್ವರೂಪದ್ದಿದ್ದರೂ ದೇಶಕ್ಕೂ, ರಾಷ್ಟ್ರಕ್ಕೂ, ಸಮಾಜಕ್ಕೂ, ವ್ಯಕ್ತಿಗೂ ವಿಘಾತಕವಾಗದೇ ಇರದು. ಸಾಮಾಜಿಕ ಮತ್ತು ರಾಜಕೀಯ ವ್ಯವಹಾರಗಳಲ್ಲಿ ದಾಸ್ಯತ್ವ ಅಥವಾ ಗುಲಾಮತನವು ಕಂಡುಬಂದರೆ, ಅದು ಅಷ್ಟಕ್ಕೇನೆ ಸಂಬಂಧಿಸಿರದೆ, ಇತರ

ವ್ಯವಹಾರಗಳಲ್ಲಿಯೂ ಸೇರಿಕೊಳ್ಳುವದು. ಯಾವದೊಂದು ಸಮಾಜದವರು ಧಾರ್ಮಿಕ ಮತ್ತು ಸಾಮಾಜಿಕ ವ್ಯವಹಾರಗಳಲ್ಲಿ ಸ್ವಾತಂತ್ರ್ಯ ಮತ್ತು ಸಮಾನತೆಯ ತತ್ವಾವಲಂಬಿಗಳಾಗಿದ್ದರೆ, ಅದು ಪರಕೀಯರ ದಾಸ್ಯತ್ವದಲ್ಲಿ ಬಹುದಿನ ತಾಳಿಕೊಂಡಿರಲಾರದು. ಯಾವದೊಂದು ದೇಶವು ಪರಕೀಯರ ಸ್ವಾಧೀನವಾದರೆ ಅದಕ್ಕೆ ನಾವು ಅದನ್ನು ಗೆದ್ದುತಕ್ಕೊಂಡರೆಂದು ಹೇಳುತ್ತೇವೆ. ಈ ರಾಜಕೀಯ ಕ್ರಿಯೆಯು ಪ್ರಾರಂಭವಾಗುವ ಪೂರ್ವದಲ್ಲಿಯೇ ಆ ದೇಶವು ಸಾಮಾಜಿಕ ಮತ್ತು ಧಾರ್ಮಿಕ ವ್ಯವಹಾರಗಳಲ್ಲಿ ಸ್ವಾತಂತ್ರ್ಯ ನಷ್ಟವಾಗಿದ್ದಿತೆಂದು ಅನುಮಾನಿಸಬಹುದು. ಸಾರಾಂಶ, ಜನರ ಧಾರ್ಮಿಕ ಸಾಮಾಜಿಕ ದಾಸ್ಯತ್ವವೇ ಅವರ ರಾಜಕೀಯ ಪಾರತಂತ್ರ್ಯಕ್ಕೆ ಮೂಲಕಾರಣವಾಗಿರುವದು. ಧಾರ್ಮಿಕ ಮತ್ತು ಸಾಮಾಜಿಕ ಗುಲಾಮತನವನ್ನು ನಷ್ಟಗೊಳಿಸದೆ ಕೇವಲ ರಾಜಕೀಯ ದಾಸ್ಯತ್ವವನ್ನು ತೆಗೆದು ಹಾಕುವ ಕಾರ್ಯವು ಎಂದೂ ಯಶಸ್ವಿಯಾಗಲಾರದು. ಈ ಮಾತು ಮನುಷ್ಯ ಸ್ವಭಾವ ವಿರುದ್ಧವಾದದ್ದು. ಯುರೋಪದಲ್ಲಿ ಧರ್ಮ ಗುರುವಾದ ಪೋಪನ ಅಧಿಕಾರವನ್ನು ನಿಯಂತ್ರಿತವಾಗಿ ಮಾಡಲುಜ್ಜುಗಿಸಿದ ಧರ್ಮ ಸುಧಾರಕರೇ ಕಡೆಗೆ ಅರಸನ ಅಧಿಕಾರವನ್ನು ನಿಯಂತ್ರಿತವಾಗಿ ಮಾಡಿಬಿಟ್ಟರು. ದಾಸ್ಯ ವಿಮೋಚನಾರ್ಥವಾಗಿ ಹೊರಟ ಕರ್ಮವೀರನು ಯಾವದೇ ಬಾಬಿನಲ್ಲಿ ದಾಸ್ಯತ್ವ ಕಂಡರೂ ಅದನ್ನು ನಿರ್ಮೂಲ ಮಾಡಲಿಕ್ಕೆ ಸಿದ್ಧನಾಗುತ್ತಾನೆಂಬದು ಮಹಾತ್ಮಾ ಗಾಂಧಿ ಯವರ ಜೀವನ ಚರಿತ್ರೆಯಿಂದ ಸ್ಪಷ್ಟವಾಗುತ್ತದೆ.

ಹಿಂದುಸ್ಥಾನದಲ್ಲಿ ರಾಜಕೀಯ ಪಾರತಂತ್ರ್ಯವು ಹೋಗಿ ಅದರ ಬದಲು ಪೂರ್ಣ ಸ್ವಾತಂತ್ರ್ಯವೂ ಲೋಕಸತ್ತೆಯೂ ಉಂಟಾಗಬೇಕೆಂದು ಸರ್ವತ್ರ ಪ್ರಯತ್ನಗಳು ನಡೆದಿವೆ. ಈ ರಾಜಕೀಯ ಚಳವಳಿಗೆ ಸಮಾಜೈಕ್ಯವೇ ಮೇಲಾದ ಉಪಾಯವೆಂದು ಬಗೆದು ಹಿಂದು ಮಹಾಸಭೆಯವರೂ, ಆರ್ಯಸಮಾಜ ಪಂಥದವರೂ, ಹಿಂದೂಮಿಶನ್ ಮಾರ್ಗಾನುಯಾಯಿಗಳೂ ಸರ್ವತ್ರ ಕಾರ್ಯಾರಂಭದಲ್ಲಿ ತತ್ಪರರಾಗಿರುವರು. ಹಿಂದುಗಳಲ್ಲಿ ಪರಸ್ಪರ ಸಹಕಾರಿತ್ವವಿಲ್ಲದೆ ರಾಜಕೀಯ ಚಳವಳಿಗೆ ಯಶಸ್ಸು ದೊರಿಯಲಾರದೆಂದು ಇವರಲ್ಲಿ ಪೂರ್ಣಮನವರಿಕೆಯಾಗಿದೆ. ಈ ಸಮಾಜೈಕ್ಯವೆಂಬ ಮಹತ್ಕಾರ್ಯವನ್ನು ದೇಶದಲ್ಲಿ ಪ್ರಸ್ಥಾಪಿತ

ಮಾಡಲು ಮುಂದುವರಿದವರೆಂದರೆ ಆಯಾ ದೇಶದಲ್ಲಿಯ ಧರ್ಮಸಂಸ್ಥೆಗಳು.

ಯಾವದೊಂದು ದೇಶದಲ್ಲಿಯಾದರೂ ಧರ್ಮ ಸಂಸ್ಥೆಗಳು ಸಮಾನತೆಯ ಆಧಾರ ಸ್ತಂಭಗ ಮೇಲೆ ಕಟ್ಟಲ್ಪಡದಿದ್ದರೆ, ಅಲ್ಲಿ ಸಮಾಜೈಕ್ಯದ ಬದಲು ಸಮಾಜದಲ್ಲಿ ಪರಸ್ಪರ ದ್ವೇಷಾಸೂಯೆಗಳುಂಟಾಗಿ ಸಮಾಜದ ಘಟಕಗಳಲ್ಲಿ ವಿಗಾನತ್ವವು *(Disharmony)* ಹೆಚ್ಚುವದು. ಇದು ಸರ್ವ ಪ್ರಪಂಚದಲ್ಲಿ ಮನಗಂಡ ಮಾತು. ಯುರೋಪದಲ್ಲಿ ಮಧ್ಯಯುಗೀಯ ಕಾಲದಲ್ಲಿ ಧಾರ್ಮಿಕ ಮಠಗಳಲ್ಲಿ ಹರಡಿದ ನೈತಿಕ ಅನಾಚಾರವೂ, ಧರ್ಮ ಗುರುವೆನಿಸಿದ ಪೋಪನ ಮೋಸತನವೂ, ಹಿಂದುಸ್ತಾನದಲ್ಲಿ ಧರ್ಮದ ಹೆಸರಿನಿಂದ ಸಂಚರಿಸುವ ಅರುಲಕ್ಷ ಬಾವಾಬೈರಾಗಿಗಳೂ ಸಾವಿರಾರು ಭಿಕ್ಷುಕರ ಪರಾವಲಂಬನ ಜೀವನ ಕ್ರಮವೂ, ತೀರ್ಥ ಕ್ಷೇತ್ರಗಳಲ್ಲಿ ಪೂಜಾರಿ ವರ್ಗದವರಿಂದ ಆಗತಕ್ಕ ಆರ್ಥಿಕ ಬಲತ್ಕಾರವೂ, ಮಠಮಾನ್ಯಗಳಿದ್ದುಕೊಂಡು ಸಮಾಜ ಹಿತಚಿಂತನ ಕಾರ್ಯದಲ್ಲಿ ಮನಸ್ಸು ಹಾಕದೆ, ಐಷ ಆರಾಮದಿಂದ ಪ್ರಪಂಚಿಕರಿಗಿಂತಲೂ ಮಿಗಿಲಾಗಿ ಸುಖದಿಂದ ಮೆರೆಯುವ ಮಠಾಧಿಪತಿಗಳ ಸ್ವೇಚ್ಛಾಚಾರವೂ ಸಮಾಜದಲ್ಲಿ ಕಾಣುವ ಅಸ್ಪೃಶ್ಯತೆಯೂ ಇವೆಲ್ಲ ಸಂಗತಿಗಳನ್ನು ವಿವೇಚನೆ ಮಾಡಿದಲ್ಲಿ ಕಂಡುಬರುವದೇನಂದರೆ, ಈ ಧರ್ಮಸಂಸ್ಥೆಗಳು ಅಶುದ್ಧವಾಗಿರೋಣದರಿಂದ ಇದರ ಪರಿಣಾಮವು ಸಮಾಜದ ಮೇಲೆ ಎಷ್ಟು ವಿಘಾತಕವಾಗುತ್ತ ನಡೆದಿದೆ ಎಂಬುದು ಎಲ್ಲರೂ ವಿಚಾರ ಮಾಡತಕ್ಕ ಮಾತಾಗಿದೆ. ನಾಸ್ತಿಕರ ದೃಷ್ಟಿಯಿಂದ ನಾವು ನಮ್ಮ ಸಂಸ್ಥೆಗಳ ಬಗ್ಗೆ ವಿಚಾರ ಮಾಡತಕ್ಕದ್ದಲ್ಲ; ಯಾಕಂದರೆ ಮಾನವ ಪ್ರಾಣಿಗಳಲ್ಲಿ ಧಾರ್ಮಿಕ ಭಾವನೆಯು ಜಾಗೃತವಾಗಿರುವ ತನಕ ಧರ್ಮಸಂಸ್ಥೆಗಳ ಅವಶ್ಯಕತೆಯು ಬಹುಸಂಖ್ಯಾಕರಿಗೆ ಇರುವದು. ಶಾಸನ ಸಂಸ್ಥೆಗಳಂತೆ ಧರ್ಮ ಸಂಸ್ಥೆಗಳು ಸಹ ಜನರಲ್ಲಿ ಸ್ವಾಸ್ಥ್ಯ, ಶಾಂತಿ, ಸುವ್ಯವಸ್ಥೆ ಮೊದಲಾದವುಗಳನ್ನು ಕಾಪಾಡುವದು ಅತ್ಯಾವಶ್ಯವು. ಶಾಸನ ಸಂಸ್ಥೆಗಳು *(Legislative councils vnd Assemblies.)* ಲೋಕನಿಯಂತ್ರಿತವಾಗಿದ್ದರೆ ಮಾತ್ರ ಅವುಗಳಿಂದ ಜನರ ಉನ್ನತಿಯ ಕಾರ್ಯಗಳುಂಟಾಗುವದು ಹೇಗೆ ಶಕ್ಯವೋ, ಅದರಂತೆಯೇ ಯಾವದೊಂದು ದೇಶದ ಧರ್ಮಸಂಸ್ಥೆಗಳು ಆ

ಸಂಸ್ಥೆಗಳ ಪರಿಪೋಷಕರಿಂದ (ಅದರ ಶಿಷ್ಯರಿಂದ) ನಿಯಂತ್ರಿತವಾದರೆ ಮಾತ್ರ ಅವು ಜನೋಪಕಾರಿಯಾಗುವವು. ×

ಧರ್ಮ ಗುರುಗಳ ಆನುವಂಶಿಕತ್ವ ಅಂದರೆ ತಂದೆಯು ಗುರುತ್ವಕ್ಕೆ ಮಗನೂ ಅಂಣತಮ್ಮಂದಿರೂ ಅವರ ಮಕ್ಕಳೂ ಅಧಿಕಾರಿಗಳಾಗಬೇಕೆಂಬ ಸಂಪ್ರದಾಯವೂ, ಧರ್ಮ ಗುರುಗಳ ಜ್ಞಾನ ಸಂಬಂಧದ ಗುತ್ತಿಗೆ ಅಂದರೆ ಧರ್ಮ ಗುರುಗಳೇ ಅವರ ಮಕ್ಕಳೇ ಮಾತ್ರ ಪಾಠಶಾಲೆಯಲ್ಲಿ ಓದಬೇಕು. ಇತರರು ಜ್ಞಾನ ಸಂಪಾದನೆಗೆ ಅನರ್ಹರು ಅಯೋಗ್ಯರು ಎಂಬ ತಿಳುವಳಿಕೆಯೂ, ಸಂಸ್ಕಾರ ವಿಧಿಯನ್ನು ಉಳಿದ ಧರ್ಮ ವಿಷಯಗಳನ್ನು ಮೃತಭಾಷೆಯಲ್ಲಿ ಬರೆದಿಡುವ ಪದ್ಧತಿಯೂ, ಮತ್ತು ಜನ್ಮದಿಂದಲೇ ಉಚ್ಚ ನೀಚತನವೆನಿಸುವದೂ ಇವೆಲ್ಲವು ಯಾವ ದೇಶದ ಧರ್ಮ ಸಂಸ್ಥೆಗಳಲ್ಲಿ ಸೇರುವವೋ, ಆ ದೇಶದ ಧರ್ಮಸಂಸ್ಥೆಗಳಿಂದ ಸಮಾಜ ಸುರಕ್ಷತೆಯೂ ಅಭ್ಯುದಯವೂ ಆಗದೆ, ಸಮಾಜದಲ್ಲಿ ಪರಸ್ಪರ ಕಲಹವೂ ಅಸಹಕಾರಿತೆಯೂ ದ್ವೇಷಾಸೂಯಗಳೂ ಮಾತ್ರ ಬೆಳೆದು ಆ ಸಮಾಜವನ್ನೂ ದೇಶವನ್ನೂ ರಸಾತಳಕ್ಕಿಳಿಸುವವು.

ನಮ್ಮ ಭರತ ಭೂಮಿಯಲ್ಲಿದ್ದ ಧರ್ಮ ಸಂಸ್ಥೆಗಳ ಪ್ರಾಚೀನ ಸ್ವರೂಪವು ಬಹು ಪವಿತ್ರವಾದದ್ದೂ ಸಮಾಜೋದ್ಧಾರಕವಾದದ್ದೂ ರಾಷ್ಟ್ರಸಂವರ್ಧಕವಾದದ್ದೂ ಇತ್ತು. ಈಗ ಮಾತ್ರ ಆ ಧರ್ಮ ಸಂಸ್ಥೆಗಳು ಅಜ್ಞ ಜನರ ಸಂಪರ್ಕದಿಂದ ಅಂದರೆ ಪುರೋಹಿತ ವರ್ಗದವರ ಅಜ್ಞಾನದಿಂದ ಮಲಿನವಾಗಿಯೂ ಹಿಂದುಳಿದವುಗಳಾಗಿಯೂ ಬಹುಶಃ ಮೃತಪ್ರಾಯವಾಗಿಯೂ ಇರುತ್ತವೆ. ಈ ಕಾರಣದಿಂದ ಹಿಂದೂ ಸಮಾ

---

× ವೀರಶೈವರಲ್ಲಿ ಯಾವದೊಂದು ವಿರಕ್ತಆಶ್ರಮಕ್ಕಾಗಿ ಇಲ್ಲವೆ ಹಿರೇಮಠದ ಪಟ್ಟಚರಂತಿಗಾಗಲಿ ಸತ್ಕುಲಶೀಲಸಂಪನ್ನರನ್ನೂ ಆಯಾ ಸ್ಥಳದ ಜವಾಬದಾರಿಯನ್ನು ನಿತ್ತರಿಸಿಕೊಂಡು ತಮ್ಮ ಆಚರಣೆಯಲ್ಲಿ ಬಂಧುರರಾದ ಯೋಗ್ಯ ವಟುಗಳನ್ನು ಸಮಾಜದಲ್ಲಿ ಆರಿಸಿ ತಂದು ಆಶ್ರಮ ಇಲ್ಲವೆ ಪಟ್ಟ ಕೊಡುವ ಸಂಪ್ರದಾಯವು ಬಹು ಪುರಾತನ ಕಾಲದಿಂದ ನಡೆದು ಬಂದದೆ. ಇದಕ್ಕೆ ಸರ್ವಭಕ್ತಮಹೇಶ್ವರರೆಂಬ ದೈವದವರು ಕಲೆತು ಸರ್ವಾನುಮತದಿಂದ ಯೋಗ್ಯನಾದ ವಯಸ್ಕಾದ ಶಿವಯೋಗ ಸಾಧನೆಯಲ್ಲಿದ್ದವನನ್ನು ಆರಿಸಿತಂದು ಆಶ್ರಮ ಕೊಡುತ್ತಿದ್ದರು. ಈಗ ಮಾತ್ರ ನಮ್ಮ ಧರ್ಮಸಂಸ್ಥೆಗಳು ಯಾವನೋ ಒಬ್ಬ ಬೀದಿಯ ಬಾಲಕನಿಗೆ [ಅಂದರೆ ಯಾವ ಶಿವಾನುಭವ ಶಾಸ್ತ್ರದ ಗೋಜಿಗೆ ಬೀಳದ ಲೌಕಿಕ ಜ್ಞಾನವೂ ಇಲ್ಲದ ನೀತಿಯೆಂದರೇನು ಧರ್ಮವೆಂದರೇನು ಇದರ ವಿವೇಚನೆಯಿಲ್ಲದ ಶುದ್ಧ ಹುಂಬನಿಗೆ] ಸ್ಥಳಕೊಡುವ ಹವ್ಯಾಸದಲ್ಲಿ ಇರುವದರಿಂದ, ವೀರಶೈವ ಸಮಾಜೋನ್ನತಿಯ ಕಾರ್ಯಕ್ಕೆ ವಿಘ್ನ ಉಂಟಾಗದೆ ಇರಲಾರದು.

ಜವು ಶತಶಃ ವಿದೀರ್ಣವಾಗಿ (ಒಡೆದು) ೧೮೫ ಬೇರೆ ಬೇರೆ ಭಾಷೆಯ ನ್ನಾಡುವ ೨೫೦೦ ಬೇರೆ ಬೇರೆ ಜಾತಿಯವರೆಂದು ಕರೆಯಿಸಿಕೊಳ್ಳುವ ಜನರಿಂದ ರಚಿತವಾಗಿದೆ. "ಧಾರಣಾತ್ತು ಧರ್ಮಃ; ಯತೋಭ್ಯುದಯ ನಿಶ್ರೇಯಸಸಿದ್ಧಿಃ ಸ ಧರ್ಮಃ" ಎಂಬದಾಗಿ ಧರ್ಮದ ವ್ಯಾಪಕ ಲಕ್ಷಣವು ನಮ್ಮ ಧರ್ಮ ಗ್ರಂಥಗಳಲ್ಲಿ ಹೇಳಿದೆ. ಧರ್ಮದ ಧ್ಯೇಯವು ಸಮಾಜದ ಸರ್ವ ಘಟಕಗಳ ಪ್ರಗತಿಯನ್ನುಂಟು ಮಾಡತಕ್ಕದ್ದಿರಬೇಕು, ಎಂದು ನಿಶ್ಚಯವಾದ ಮೇಲೆ ಭಕ್ತಿ, ಜ್ಞಾನ, ಜಪತಪ, ದಯಾ, ಶುಚಿರ್ಭೂತತನ, ಸತ್ಯಸಂಧತೆ, ಶಮದಮಾದಿ ದೈವೀಗುಣ ಸಂಪತ್ತಿಯನ್ನು ತನ್ನಲ್ಲಿ ತೋರಿಸುವದು ಅವಶ್ಯಕವೆಂದು ಪ್ರತಿಯೊಬ್ಬನು ನಿಶ್ಚಯಿಸುವನು. ನಮ್ಮ ದೇಶದ ಧರ್ಮಕ್ಕೆ ಹಿಂದುಧರ್ಮವೆಂದು ಹೆಸರಿರದೆ ಸನಾತನ ಧರ್ಮ ಅಥವಾ ಮಾನವ ಧರ್ಮವೆಂದು ಸಂಜ್ಞೆಯಿದೆ. ಇದರ ಲಕ್ಷಣವು ಗ್ರಂಥ ಗಳಲ್ಲಿ ಕೆಳಗಿನಂತೆ ಅದೆ.

"ಭಕ್ತಿಃ ಜ್ಞಾನಂ ದಯಾಶೌಚಂ ತಪಃ ಸತ್ಯಂ ದಮಃ ಶಮಃ।
ಅದ್ವೇಷೋ ವಿನಯೋನ್ಯಾಯಃ ಏಷ ಧರ್ಮ ಸನಾತನಃ॥"

ಯಾವ ಪ್ರಾಣಿಗಳೊಡನೆ ದ್ವೇಷಭಾವವನ್ನು ತಾಳದೆ, ತನ್ನ ಜಾತಿಯೇ ಮಿಗಿಲೆಂದು ಗರ್ವಿಷ್ಠನಾಗದೆ, ಸರ್ವರೊಡನೆ ವಿನಯ ಸಂಪ ನ್ನನೂ ನ್ಯಾಯಪಕ್ಷಪಾತಿಯೂ ಆದವನೇ ಸನಾತನ ಧರ್ಮದ ನಿಜ ವಾದ ಅನುಯಾಯಿಯು.

ಧರ್ಮ ಸಂಸ್ಥೆಗಳ ಆತ್ಮವೆಂದರೆ ನೀತಿ ಧರ್ಮವು. *(Higher Ethics)*. ಈ ನೀತಿ ಧರ್ಮವನ್ನು ಪ್ರತಿಯೊಬ್ಬ ವ್ಯಕ್ತಿಯು ಪಾಲಿಸ ಬೇಕೆಂದು ಸನಾತನ ಧರ್ಮವು ಸಾರುತ್ತದೆ. ಧರ್ಮ ಸಂಸ್ಥೆಗಳ ಆತ್ಮವು ನೀತಿ ಧರ್ಮವು. ಅವುಗಳ ದೇಹವೆಂದರೆ, ದಯಾ ಧರ್ಮ ಅಥವಾ ದಾನ ಧರ್ಮ, ಅವುಗಳ ವಸ್ತ್ರಾಭರಣಗಳೆಂದರೆ ದೇವಧರ್ಮ ಮತ್ತು ಆಚಾರ ಧರ್ಮ ಪ್ರತ್ಯೇಕ ಧರ್ಮ ಸಂಸ್ಥೆಗಳ ದೇವಧರ್ಮ ಮತ್ತು ಆಚಾರ ಧರ್ಮವು ಆಯಾ ಸಂಸ್ಥೆಗಳ ಸಾಧನ ಮಾರ್ಗದ ಕಲ್ಪನೆಯಲ್ಲಿ ಸಮಾವೇಶವಾ ಗುತ್ತವೆ. ಈ ಕಲ್ಪನೆಯಾದರೂ ಆಯಾ ದೇಶ ಕಾಲ ಸ್ಥಿತಿ ಪರಸ್ಪರ ಮತ್ತು ಅವರವರ ಬೌದ್ಧಿಕ ಉನ್ನತಿಯ ಮೇಲಿಂದ ಭಿನ್ನ ಭಿನ್ನವಾಗಿ ಕಾಣುತ್ತದೆ. ಧರ್ಮಗ್ರಂಥ ಧರ್ಮಾಚಾರ ಪುರೋಹಿತವರ್ಗ ದೇವರ ಮೇಲಿನ ವಿಶ್ವಾಸ ಮತ್ತು ಅವುಗಳ ಪೂಜೆ ಮುಂತಾದವುಗಳು ದೇವ

ಧರ್ಮದ ಸಂಜ್ಞೆಯಲ್ಲಿ ಅಂತರ್ಭಾವವಾಗುತ್ತವೆ. ಸ್ನಾನಸಂಧ್ಯಾ, ಹೋಮ ಹವನ, ಜಪತಪ, ಯಜ್ಞಯಾಗ, ತೀರ್ಥಯಾತ್ರೆ, ಶ್ರಾದ್ಧಪಕ್ಷ ಮುಂತಾದವುಗಳು ಆಚಾರ ಧರ್ಮದಲ್ಲಿ ಸಮಾವೇಶವಾಗುವವು. ದೇವಧರ್ಮ, ನೀತಿಧರ್ಮ, ದಯಾಧರ್ಮ ಮತ್ತು ಆಚಾರಧರ್ಮ ಇವೆಲ್ಲ ಧರ್ಮದ ಬೇರೆ ಬೇರೆ ಅಂಗಗಳು. ಈ ಅಂಗಗಳ ಉನ್ನತಿ ಅವನತಿಗಳ ಮೇಲೆ ಧರ್ಮದ ಉನ್ನತಿ ಅವನತಿಯು ಅವಲಂಬಿಸಿರುವದು.

ನಮ್ಮ ಪೂರ್ವಜರು ಹಿಂದುಸ್ಥಾನದಲ್ಲಿ ನೆಲೆಗೊಂಡ ಧರ್ಮಕ್ಕೆ ಹಿಂದೂಧರ್ಮವೆಂದು ಕರೆಯದೆ ಸನಾತನಧರ್ಮ ಅಥವಾ ಮಾನವ ಧರ್ಮವೆಂದು ಹೇಳಿರುವರು. ದೇಶವಂಶ ಅಥವಾ ವಿಭೂತಿ ಇವರ ಹೆಸರನ್ನು ಧರ್ಮಕ್ಕಿಡದೆ ಬಹು ವ್ಯಾಪಕವಾದ ಹೆಸರನ್ನು ಅದಕ್ಕೆ ಇಟ್ಟು ತಮ್ಮ ದೂರದರ್ಶಿತ್ವವನ್ನು ತೋರಿಸಿರುವರು. ಜ್ಞಾನವು ಹೇಗೆ ಸಮಜಗತ್ತಿನಲ್ಲಿ ಏಕ ಪ್ರಕಾರವಾಗಿರುವದೋ ಅದರಂತೆ ಧರ್ಮವೂ ಏಕ ಪ್ರಕಾರವಾಗಿದ್ದು ಧರ್ಮದ ಸಾಧನೆಗಳು ಮಾತ್ರ ಭಿನ್ನ ಭಿನ್ನವಾಗಿರುತ್ತವೆ. ಈ ದೃಷ್ಟಿಯಿಂದ ನಮ್ಮ ಧರ್ಮವನ್ನು ಪರೀಕ್ಷಿಸಿದಲ್ಲಿ, ಅದು ರಾಷ್ಟ್ರೀಯ ಧರ್ಮ ಇಷ್ಟೇ ಆಗದೆ ಅಂತರ ರಾಷ್ಟ್ರೀಯ ಧರ್ಮವಾಗಲಿಕ್ಕೂ ಅಡ್ಡಿ ಇಲ್ಲ. ಆದರೆ ನಮ್ಮ ಪೂರ್ವಜರ ವ್ಯಾಪಕವಾದ ದೃಷ್ಟಿಯು ಬದಲು ಆಧುನಿಕರಲ್ಲಿ ಪರಂಪರಾಗತವಾಗಿ ಬಂದ ನೀತಿಧರ್ಮ ದಯಾಧರ್ಮ ಮೊದಲಾದವು ಲೋಪವಾಗಿ, ದೇಶಾಚಾರ ಕುಲಾಚಾರ ಮೊದಲಾದವುಗಳಿಗೆ ಪ್ರಾಧಾನ್ಯವು ಬಂದದ್ದರಿಂದ ಸನಾತನ ಧರ್ಮಸ್ವರೂಪವು ಈಗ ಮರೆಮಾಜಿ ಹೋಗಿದೆ. ಈಗಿನ ಹಿಂದುಧರ್ಮಕ್ಕೆ "ಬ್ರಾಹ್ಮಣ ಮುಖೀ ಜಾತಿ ಧರ್ಮ" ವೆಂದು ಕರೆದರೆ ಅದು ಹೆಚ್ಚು ಶೋಭಿಸುವದು. ಈ ಬ್ರಾಹ್ಮಣ ಮುಖೀ ಜಾತಿ ಧರ್ಮದ ಪ್ರಮಾಣ ಗ್ರಂಥವೆಂದರೆ "ಜಾತಿ ಭೇದರೂಪೀ ಗೀತಾ" ಅನುವಂಶಿಕ ವರ್ಣವ್ಯವಸ್ಥೆಯ ದೆಸೆಯಿಂದ ಉಂಟಾದ ಸಂಘಭೇದ, ವಂಶಭೇದ, ಆಚಾರಭೇದ ಮುಂತಾದವುಗಳಿಂದುಂಟಾದ ಸಾವಿರಾರು ಜಾತಿಗಳು ಮತ್ತು ಈ ಜಾತಿಗಳಲ್ಲಿ ಪರಸ್ಪರ ಅನ್ನೋದಕ ವ್ಯವಹಾರಗಳು ವಿವಾಹ ಸಂಬಂಧವೂ ಆಗದೆ, ಎಲ್ಲರೂ ತಮ್ಮಷ್ಟಕ್ಕೆ ತಾವೇ ಇರಹತ್ತಿದ್ದರಿಂದ ಮತ್ತು ಕುಲಾಚಾರ ಜಾತ್ಯಾಚಾರಗಳನ್ನು ಕಾಯ್ದುಕೊಂಡಿರುವದರಿಂದ ಇವೇ ಸನಾತನ ಧರ್ಮದ, ಧರ್ಮವೃತ್ತಿಗಳೋ ಏನೋ ಎಂಬಂತೆ ಭಾಸವಾಗುತ್ತವೆ.

ಈ ತರದ ಧರ್ಮವೃತ್ತಿಗಳು ಸನಾತನ ಧರ್ಮಕ್ಕೆ ಕಲಂಕವನ್ನು ಹಚ್ಚತಕ್ಕವಾಗಿವೆ. ಈಗಿನ ಹಿಂದುಧರ್ಮವು (ಹಿಂದೂ ಜನರು ಈಗ ಪಾಲಿಸುವ ಧರ್ಮವು) ಅರಾಷ್ಟ್ರೀಯ, ಸಂಕುಚಿತ ಮತ್ತು ಅನುದಾರಸ್ವರೂಪದಿದ್ದು, ಇದು ಧರ್ಮವೆನಿಸಿಕೊಳ್ಳಲು ಯೋಗ್ಯವಿಲ್ಲ. ಈಗಿನ ಧರ್ಮದ ಪ್ರಮಾಣಗಳು ವೇದ, ಉಪನಿಷತ್ತು, ಗೀತೆ ಮತ್ತು ಪುರಾಣ ಇವುಗಳಲ್ಲಿ ದೊರೆಯುವದಿಲ್ಲ. ಆದರೆ ಕ್ರಿ. ಶ. ೩-೪ ಶತಮಾನದ ಪೂರ್ವದಲ್ಲಿ ಬರೆಯಲ್ಪಟ್ಟ ಮನುಸ್ಮೃತಿಯು ಮಾತ್ರ ಹೆಚ್ಚು ಕಡಿಮೆ ಪ್ರಮಾಣದಿಂದ ಈಗಿನ ಆಚಾರಧರ್ಮವನ್ನು ಎತ್ತಿ ಹಿಡಿಯುತ್ತದೆ.

ಶಾಸ್ತ್ರೀಯ ಚಿಕಿತ್ಸೆ, ಬುದ್ಧಿವಾದ ಮತ್ತು ವೇದೋಪನಿಷದದಲ್ಲುಕ್ತವಾದ ಧರ್ಮ ಇವುಗಳ ಆಧಾರದಿಂದ ಈಗಿನ ಆಚಾರ ಧರ್ಮವನ್ನು ಪರೀಕ್ಷಿಸಿದಲ್ಲಿ ಅದು ಈ ಸನಾತನ ಧರ್ಮಕ್ಕೆ ಅತಿ ವಿರೋಧವಾದದ್ದೂ ಜಾತಿ ಭೇದವನ್ನು ಹುಟ್ಟಿಸಲಿಕ್ಕೆ ಕಾರಣೀಭೂತವಾದದ್ದೂ ಎಂದು ಸ್ಪಷ್ಟವಾಗಿ ಕಾಣುವದು. ಹಿಂದೂ ಸಮಾಜದಲ್ಲಿ ಈಗ ತಲೆದೋರುವ ಆಚಾರಧರ್ಮದ ಮೂಲಕ ಅನೇಕ ನಿಕೃಷ್ಟ ಜನ ಸಮೂಹದ ಮತ್ತು ಸ್ತ್ರೀಯರ ದಾಸ್ಯತ್ವವೂ, ಧರ್ಮ ಗುರುಗಳೆನ್ನಿಸಿಕೊಳ್ಳುವವರ ಅನಿಯಂತ್ರಿತ ಸತ್ತೆಯೂ ಬೆಳೆದಿದೆ ಎನ್ನಲಿಕ್ಕೆ ಅಡ್ಡಿಯಿಲ್ಲ. ಇದರ ಪೂರ್ಣ ವಿವೇಚನೆಯನ್ನು ಮಾಡುವದು ಅತ್ಯಾವಶ್ಯಕವಿದೆ.

## ಸಾಮಾಜಿಕ ದಾಸ್ಯತ್ವದ ಪ್ರಕಾರ.

ಆನುವಂಶಿಕ ವರ್ಣಾಶ್ರಮ ವ್ಯವಸ್ಥೆಯು ಸಾಮಾಜಿಕವಾಗಿ ಮಧ್ಯಯುಗೀಯ ಕಾಲದಲ್ಲಿ ತಲೆದೋರಿತು. ವಿದ್ಯೆಯ ಆರಾಧನೆಯನ್ನು ಮಾಡುವವರು ಬ್ರಾಹ್ಮಣರು. ಕ್ಷತ್ರವೃತ್ತಿಯಿಂದ ಜೀವಿಸುವವರು ಕ್ಷತ್ರಿಯರು. ವ್ಯಾಪಾರ ಉದ್ದಿಮೆ ಕಾರಾಗಿರಿ ಅಂದರೆ ಕಲಾಕೌಶಲ್ಯಗಳಲ್ಲಿ ತೊಡಗಿದವರು ವೈಶ್ಯರು. ಒಕ್ಕಲತನ ಮತ್ತು ಕೂಲಿ ಇವುಗಳಿಂದ ಉದರನಿರ್ವಾಹ ಸಾಗಿಸುತ್ತಿದ್ದವರು ಕೂಲಿಕಾರ ವರ್ಗದವರು. ಹೀಗೆ ನಾಲ್ಕು ತರದಿಂದ ಜೀವಿಸುತ್ತಿದ್ದವರು ಪೂರ್ವದಲ್ಲಿ ಮತ್ತು ಈಗ್ಗೂ ಎಲ್ಲ ದೇಶಗಳಲ್ಲಿ ಕಂಡುಬರುವರು. * ಪರಸ್ಪರ ಬಳಕೆಯ ಅಭಾವದ ದೆಶೆಯಿಂದ,

---

* It is common knowledge that the Vedas recognize no caste in their modern cannotation. The four classes of society mentioned therein, the Brahmin, the Kshatriya, the Vaishya, and the Sudra. were merely the four estates of the realm, corresponding to the clergy, the noblesse the Bourgeoisie, and the peasantry in midiaeval Europe. (Sir P. C. Roy)

ಮುದ್ರಣಕಲೆಯು ಇಲ್ಲದಿದ್ದಾಗ ಮತ್ತು ಜನರಲ್ಲಿ ವಿದ್ಯಾಪ್ರಸಾರವಿಲ್ಲದೆ, ರಾಜರು ಅನಿಯಂತ್ರಿತರಾಗಿದ್ದಂತೆ, ಈ ನಾಲ್ಕು ವರ್ಗಗಳು ಮಧ್ಯಯುಗದಲ್ಲಿ ಆನುವಂಶಿಕ ಸ್ವರೂಪವನ್ನು. ರಾಜಸತ್ತೆಯು ಆನುವಂಶಿಕವಾಗಿ ಒಬ್ಬ ಅರಸನ ಮರಣದನಂತರ ಅವನ ಮನೆತನದಲ್ಲಿ ಜನಿಸಿದವನೇ ರಾಜನಾಗುತ್ತ ಬಂದಂತೆ, ಬೇರೆ ಬೇರೆ ಉದ್ಯೋಗದಲ್ಲಿ ನಿರತವಾದ ಸಂಘಗಳು *(Trade guilds)* ಜಾತಿಗಳೆಂದು ಕರೆಯಲ್ಪಟ್ಟವು. ತೊಗಲಿನ ಜೋಡುಗಳನ್ನು ಮಚ್ಚಿಗನೂ, ಮಾಂಸ ವಿಕ್ರಯ ಮಾಡುವವನು ಕಟಕರವನೂ, ಅತ್ಯಂತ ನೀಚ ಕೆಲಸವೆಂದು ಸಮಾಜದವರಿಂದ ತಿಳಿಯಲ್ಪಟ್ಟ ಹೊಲಸು ಗಟಾರದ ಬಳಿಯುವ ಕೆಲಸ ಮಾತತಕ್ಕ ಭಂಗೀ ಜನರೂ ಇವರೆಲ್ಲರೂ ಒಂದು ಕಾಲದಲ್ಲಿ ಜಯಿಸಲ್ಪಟ್ಟ ರಾಷ್ಟ್ರದಲ್ಲಿದ್ದ ಕಡಿಮೆ ತರದ ಜನರಿದ್ದರೆಂದು *(Serfs)* ತಿಳಿದುಬರುತ್ತದೆ. ಹಿಂದುಸ್ಥಾನದಲ್ಲಿ ಈಗ ವರ್ಣಾಶ್ರಮ ವ್ಯವಸ್ಥೆಯು ಹ್ಯಾಗೆ ನಮ್ಮ ದೃಷ್ಟಿಗೆ ಬೀಳುತ್ತದೋ ಇದರಂತೆಯೆ ಸ್ವಲ್ಪ ಹೆಚ್ಚು ಕಡಿಮೆ ಪ್ರಮಾಣದಿಂದ ಯುರೋಪಖಂಡದಲ್ಲಿಯೂ ವರ್ಣಾಶ್ರಮ ವ್ಯವಸ್ಥೆಯು ಮಧ್ಯಯುಗೀಯ ಕಾಲದಲ್ಲಿತ್ತು. ಆದರೆ ೧೮-೧೯ ನೇ ಶತಮಾನದಲ್ಲಿ ಯುರೋಪಖಂಡದಲ್ಲಿ ಸಂಭವಿಸಿದ ಉದ್ಯಮಕ್ರಾಂತಿ; ಜ್ಞಾನಕ್ರಾಂತಿ; ರಾಜ್ಯಕ್ರಾಂತಿ ಮತ್ತು ಧರ್ಮಕ್ರಾಂತಿ ಒಂದೇ ಮನೆತನದಲ್ಲಿ ಒಂದೇ ಪ್ರಕಾರದ ಉದ್ಯೋಗ ಮಾಡುವ ಸ್ಥಿತಿಯು ಪಲ್ಲಟಿಸಿ, ಬೇರಾದವರು ತಮ್ಮ ಬುದ್ಧಿಚಾತುರ್ಯ ಮತ್ತು ಮನಸ್ಸಿನ ಒಲವು ಇವುಗಳಿಗನುಸರಿಸಿ ಬೇಕಾದ ಉದ್ಯೋಗ ಮಾಡಲಿಕ್ಕೆ ಹತ್ತಿದ್ದರಿಂದ, ಅರ್ಥಾತ್ ಪಾದ್ರಿಗಳ ಮನೆತನದವರು ವ್ಯಾಪಾರ ಮಾಡಹತ್ತಿದ್ದರಿಂದ, ವ್ಯಾಪಾರಸ್ಥ ಮನೆಯವರೂ ಕೂಲಿಕಾರ ವರ್ಗದವರೂ ಒಕ್ಕಲಿಗರೂ ವಿದ್ಯಾವಿಭೂಷಿತರಾಗಿ ಕೆಲವರು ದೈವಿಕ ಜ್ಞಾನ ಸಂಪಾದನೆ ಮಾಡಿಕೊಂಡು ಸಮಾಜದಲ್ಲಿ ಧರ್ಮ ಬೋಧಕರಾಗಿಯೂ ವಿಶ್ವವಿದ್ಯಾಲಯದ ಅಧ್ಯಾಪಕರಾಗಿಯೂ ಜೀವಿಸತೊಡಗಿದ್ದಾರೆ. ಹೀಗೆ ಮೇಲಿನ ನಾಲ್ಕು ಕಾರಣಗಳ ಯೋಗದಿಂದ ಇತ್ತಲಾಗಿ ವಂಶಪರಂಪರಾಗತವಾಗಿ ಬಂದಂಥ ವರ್ಣವ್ಯವಸ್ಥೆಯು ಇಲ್ಲದಂತಾಗಿ, ಸಮಾಜರಚನೆಯು ಸ್ವಾತಂತ್ರ್ಯ, ಸಮತೆ ಬಂಧುಭಾವ ಮತ್ತು ಸ್ವಯಂ ನಿರ್ಣಯ ಈ ತತ್ವಗಳನ್ನನುಸರಿಸಿ ಪ್ರಾರಂಭವಾಗಿದೆ. ಕೀಳು ಉದ್ಯೋಗ ಮಾಡುವವನೆಂದು ನಮ್ಮ ಹಿಂದೂ ಜನರು ಕಲ್ಪಿಸುತ್ತಿರುವದನ್ನೂ ಕೂಡ

ಯುರೋಪದಲ್ಲಿ ತನ್ನ ಬುದ್ಧಿಮತ್ತೆಯಿಂದ ಮಂತ್ರಿಯಾಗಲಿಕ್ಕೆ ಅಥವಾ ದೊರೆಮನೆತನದವನಾಗಲಿಕ್ಕೆ ಯಾವ ಪ್ರಕಾರದ ಕಾಯಿದೆಯು, ಸಾಮಾಜಿಕ ಇಲ್ಲವೆ ಧಾರ್ಮಿಕ ಪ್ರತಿಬಂಧವಿರುವದಿಲ್ಲ. ಉದಾ— ಲಾಯಿಡ ಜಾರ್ಜನೆಂಬವನು ಮಚ್ಚಿಗಾರ ಉದ್ಯೋಗ ಮಾಡುತ್ತ ಸಾಮ್ರಾಜ್ಯಸರಕಾರದ ಮಂತ್ರಿಯಾದನು. ಇದರಂತೆ ಅನೇಕರು ಕೀಳು ಕಸಬು ಮಾಡಿದವರು ಉಚ್ಚಸ್ಥಾನಕ್ಕೆ ಮುಟ್ಟಿರುತ್ತಾರೆ. ಇದೇ ಪರಿಸ್ಥಿತಿಯು ನಮ್ಮ ಹಿಂದುಸ್ಥಾನದಲ್ಲಿ ಆಗಬೇಕಾದರೆ ಮೇಲಿನ ನಾಲ್ಕು ಪ್ರಕಾರದ ಸಂಕ್ರಮಣ ಉಂಟಾಗಬೇಕು. ಆದರ ಉಷಃಕಾಲವು ಈಗ ಭರತಖಂಡದಲ್ಲಿ ಕಾಣಹತ್ತಿರುವದು. ಈ ಸಂಕ್ರಮಣದ ಮಧ್ಯಾನ್ಹ ಕಾಲವು ಬೇಗನೆ ಬರುವ ಚಿನ್ಹಗಳು ತೋರಹತ್ತಿವೆ. ಆಗ್ಗೆ ವರ್ಣಾಶ್ರಮ ಧರ್ಮಗಳೂ ಚಾತುರ್ವರ್ಣ್ಯ ವ್ಯವಸ್ಥೆಯೂ ಆ ದಿವ್ಯ ತೇಜಸ್ಸಿನ ಮುಂದೆ ನಿಲ್ಲಲಾರದೆ ಸುಟ್ಟು ಹೋಗುವವು. ಇದರಲ್ಲಿ ತಿಲಮಾತ್ರವೂ ಸಂದೇಹವಿಲ್ಲ.

ನಮ್ಮ ಪೂರ್ವಕಾಲದ ಋಷಿಗಳ ಚಾತುರ್ವರ್ಣ್ಯ ವ್ಯವಸ್ಥೆಯ ಕಲ್ಪನೆಯು ಮನುಸ್ಮೃತಿಯಂತೆ ಎಂದೂ ಇದ್ದಿಲ್ಲ. ಯುರೋಪದವರಂತೆ ನಮ್ಮ ಪೂರ್ವಜರು ಮುಕ್ತ ಚಾತುರ್ವರ್ಣ್ಯ ವ್ಯವಸ್ಥೆಯ ಪುರಸ್ಕರ್ತರಿದ್ದರು. ಈ ವಿಷಯವಾಗಿ ಅನೇಕ ಆಧಾರಗಳನ್ನು ಕೊಡಬಹುದು. ಅವುಗಳಲ್ಲಿ ಮುಖ್ಯವಾಗಿ ಮಹಾಭಾರತ ಶಾಂತಿಪರ್ವದಲ್ಲಿ ಭಾರದ್ವಾಜ ಋಷಿಯ ವಿಚಾರಗಳನ್ನು ಇಲ್ಲಿ ಉಲ್ಲೇಖಿಸುತ್ತೇನೆ.

“ನವಿಶೇಷೋಸ್ತಿ ವರ್ಣಾನಾಂ ಸರ್ವಂ ಬ್ರಾಹ್ಮಮಿದಂ ಜಗತ್ ।
ಬ್ರಹ್ಮಣಾ ಪೂರ್ವಸೃಷ್ಟೋಹಿ ಕರ್ಮಭಿಃ ವರ್ಣತಾಂಗತಂ ॥×

---

× ಶೃಣುಯಕ್ಷ ಕುಲಂತಾತನ ಸ್ವಾಧ್ಯಾಯೊನ ಚ ಶ್ರುತಮ್ ।
ಕಾರಣಂ ಹಿ ದ್ವಿಜತ್ವೇಚ ವೃತ್ತಮೇವನ ಸಂಶಯಃ ॥

ಅರ್ಥ–ತಂದೆಯ ಕುಲವಾಗಲಿ ಶಾಸ್ತ್ರಾಭ್ಯಾಸವಾಗಲಿ ವೇದಾಧ್ಯಯನವಾಗಲಿ ಬ್ರಾಹ್ಮಣ್ಯಕ್ಕೆ ಕಾರಣವಲ್ಲ. ಆತನ ವೃತ್ತಿಯೇ (ಗುಣಕ್ರಿಯೆಗಳೊಂದೇ) ಮಾತ್ರ ಬ್ರಾಹ್ಮಣ್ಯತ್ವಕ್ಕೆ ಮುಖ್ಯ ಲಕ್ಷಣವಾಗಿದೆ. ಎಂದು ಮಹಾಭಾರತ ವನಪರ್ವ ಅಧ್ಯಾಯ ೩೧೨ ಶ್ಲೋಕ ೧೦೩ರಲ್ಲಿ ಹೇಳಿದೆ.

“ಯಸ್ಯಯಲ್ಲಕ್ಷಣಂ ಪ್ರೋಕ್ತಂ ಪುಂಸೋವರ್ಣಾಭಿವ್ಯಂಜಕಮ್ ।
ಯದನ್ಯತ್ರಾಪಿದೃಸ್ಯೇತ ತತ್ತೇನೈವ ವಿನಿರ್ದಿಶೇತ್ ॥

ಎಂದರೆ ಈ ದೃಷ್ಟ ಪ್ರಪಂಚದಲ್ಲಿ ಮೊದಲು ಎಲ್ಲರೂ ಬ್ರಹ್ಮದೇವನಿಂದ ನಿರ್ಮಿಸಲ್ಪಟ್ಟ ಕಾರಣ ಬ್ರಾಹ್ಮಣರೇ. ಆ ಮೇಲೆ ಕರ್ಮಗಳ ಅನುರೋಧದಿಂದ ವರ್ಣಗಳುಂಟಾದವು. ಈ ಬ್ರಾಹ್ಮಣರಲ್ಲಿ ಯಾರು ರಜೋಗುಣ ವಿಶಿಷ್ಟರಾಗಿ ವಿಷಯೋಪಭೋಗಗಳ ಮೇಲೆ ಪ್ರೀತಿಯೂ, ಕೋಪಿಷ್ಠತನವೂ, ಸಾಹಸ ಕರ್ಮಗಳ ಮೇಲೆ ಲಾಲಸೆಯೂ ಉಂಟಾದವರಿದ್ದರೋ ಅವರು ಕ್ಷತ್ರಿಯರಾದರು. ರಾಜಸ ಮತ್ತು ತಾಮಸಗುಣ ಸಮ್ಮಿಶ್ರಣದಿಂದ ಬ್ರಾಹ್ಮಣರೇ ಪಶುಪಾಲನ ಮತ್ತು ಒಕ್ಕಲತನ ಉದ್ಯೋಗ ಮಾಡಿ ತಮ್ಮ ಚರಿತಾರ್ಥ ಸಾಗಿಸಿ ಸಾತ್ವಿಕ ವೃತ್ತಿಯಿಂದ ಜೀವಿಸುವದನ್ನು ಬಿಟ್ಟ ಕಾರಣ ವೈಶ್ಯರಾದರು. ಆ ಮೂಲ ಬ್ರಾಹ್ಮಣರಲ್ಲಿ ತಮೋಗುಣ ವಿಶಿಷ್ಟರಾದವರು ಹಿಂಸಾ ಮತ್ತು ಅಸತ್ಯ ಇವುಗಳಲ್ಲಿ ಆಸಕ್ತರಾಗಿ, ಲೋಭದಿಂದ ಬೇಕಾದ ಕರ್ಮಗಳನ್ನು ಮಾಡಿ ಉಪಜೀವಿಸುವವರಾದ ಕಾರಣ, ಅಂತಹ ಬ್ರಾಹ್ಮಣರೇ ಶೂದ್ರರಾದರು. ಸಾರಾಂಶ ಆಯಾ ಕರ್ಮಗಳ ಯೋಗದಿಂದ ಭಿನ್ನ ಭಿನ್ನ ವರ್ಣಗಳಾದವು. ಆದರೂ ಆಯಾ ವರ್ಣದವರಿಗೆ ಪಂಚಮಹಾ ಯಜ್ಞಗಳನ್ನು ಮಾಡುವ ಅಡ್ಡಿಯು ಅವರಿಗೆಂದೂ ಇದ್ದಿಲ್ಲ."

ಮೇಲಿನ ಮಹಾಭಾರತದ ಶ್ಲೋಕದಿಂದ ಆನುವಂಶಿಕತ್ವದಿಂದಲೂ ಪರಿಸ್ಥಿತಿ ಭೇದದಿಂದಲೂ ಶಿಕ್ಷಣ ಯೋಗದಿಂದಲೂ ಗುಣಕರ್ಮ ವಿಭಾಗದ ಮೂಲಕ ನಾಲ್ಕು ವರ್ಣಗಳ ವ್ಯವಸ್ಥೆಯು ಯುರೋಪದಲ್ಲಿಯೂ ಹಿಂದುಸ್ಥಾನದಲ್ಲಿಯೂ ಹೇಗೆ ಪ್ರಸ್ಥಾಪಿತವಾಯಿತೆಂಬದನ್ನು ಭಾರದ್ವಾಜನು ಮಾರ್ಮಿಕವಾಗಿ ವರ್ಣಿಸಿದ್ದಾನೆ. ಸಮಾಜ ಹಿತಕ್ಕಾಗಿ ಯಾರಾದರೊಬ್ಬರು ಬ್ರಾಹ್ಮಣರೂ, ಯಾರಾದರೊಬ್ಬರು ಕ್ಷತ್ರಿಯರೂ ಯಾರಾದರೊಬ್ಬರು ವೈಶ್ಯರೂ ಯಾರಾದರೊಬ್ಬರು ಶೂದ್ರರೂ ಅಂದರೆ ಸಮಾಜದಲ್ಲಿ ಮಾಡಬೇಕಾದ ವ್ಯವಹಾರಗಳನ್ನು ಯಾರಾದರೊಬ್ಬರು ಮಾಡಲಿಕ್ಕೇ ಬೇಕಾಗುವದು. ಸರ್ವವರ್ಗಗಳು ಆಯಾ ದೃಷ್ಟಿಯಿಂದ ಮಹ

---

ಅರ್ಥ:—ವರ್ಣಗಳನ್ನು ಸೂಚಿಸುವಂಥ ಲಕ್ಷಣಗಳು ಬೇರೆಡೆಯಲ್ಲಿ ಕಂಡದ್ದಾಪರೆ, ಅಂಥವರನ್ನು ಆಯಾವರ್ಣದವರೆಂದೇ ಗುರ್ತಿಸಬೇಕು. ಅಂದರೆ ಬ್ರಾಹ್ಮಣನಲ್ಲಿರತಕ್ಕ ಲಕ್ಷಣಗಳು ಶೂದ್ರನಲ್ಲಿ ಕಂಡರೆ, ಆ ಶೂದ್ರನು ಬ್ರಾಹ್ಮಣನೆಂದು ಬ್ರಾಹ್ಮಣನು ಶೂದ್ರನೆಂದು ಹೇಳಬೇಕು. ಎಂದು ಮಹಾಭಾರತ ವನಪರ್ವ ಅಧ್ಯಾಯ ೧೮೦ ಶ್ಲೋಕ ೩೫ ರಲ್ಲಿ ಹೇಳಿವೆ.

ತ್ವವುಳ್ಳವು ಇರುತ್ತವೆ. ರಾಜರಾದವರಲ್ಲಿ ಈಶ್ವರದತ್ತ ಹಕ್ಕು ಅಥವಾ ಗುತ್ತಿಗೆಯು ಯುರೋಪದ ಮಧ್ಯಯುಗದಲ್ಲಿ ಅಂದರೆ ಕ್ರಿ. ಶ. ೧೩ನೇ ಶತಮಾನದಲ್ಲಿ ಪ್ರಚಲಿತವಿದ್ದ ಮತವು ಹೇಗೆ ತ್ಯಾಜ್ಯವೂ ಗರ್ಹಣೀಯವೂ ಇರುತ್ತದೋ ಹಾಗೆ ಬ್ರಾಹ್ಮಣ ಜಾತಿಯಲ್ಲಿ ಮಾತ್ರ ಧರ್ಮಜ್ಞಾನ ವಿಷಯವಾಗಿ ಅವರ ವಂಶದ ಹಕ್ಕು ಅಥವಾ ಗುತ್ತಿಗೆಯು ಇರುತ್ತದೆಂಬ ಮತವು ಅಷ್ಟೇ ತ್ಯಾಜ್ಯವೂ ಗರ್ಹಣೀಯವೂ ಆಗಿರುತ್ತದೆ. ನಮ್ಮ ಪ್ರಾಚೀನ ಧರ್ಮಗ್ರಂಥಗಳಲ್ಲಿ ಈ ಪಾಖಂಡಿ ಮತಕ್ಕೆ ಎಲ್ಲಿಯೂ ಆಧಾರಗಳು ಸಿಗುವದಲ್ಲ.

(ಮುಂದೆ ಸಾಗುವದು.)

---

# ಬಸವಪ್ರಭು ಮಹಾಸ್ವಾಮಿಗಳು ತೇರದಾಳ.

---

## (ಗ್ರಂಥವಿಮರ್ಶೆ:— ಪ್ರಭುದೇವರ ಪದ್ಯಗಳು.)

ಶ್ರೀ॥ ಮ॥ ಬುದ್ದಯ್ಯ ಮಗೆಯ್ಯ ಪುರಾಣಿಕ ಇವರು ಸಾಂಗಲಿ ಸಂಸ್ಥಾನ ತೇರದಾಳದಲ್ಲಿರುವ ಶ್ರೀಪ್ರಭುದೇವರ ಮಠದಲ್ಲಿ ದೊರೆದ ಮೂವರು ಕವಿಗಳು ರಚಿಸಿದ ಪದ್ಯಗಳನ್ನು ಶೋಧಿಸಿ ಈ ಪುಸ್ತಕದಲ್ಲಿ ಪ್ರಸಿದ್ಧಿಸಿರುವರು. ಈ ಮೂರು ಕವಿಗಳ ಹೆಸರುಗಳು ಯಾವವೆಂದರೆ:- ಮಗೆಪ್ಪ ದೇಸಾಯಿ, ಗುರುಬಸವ, ಮತ್ತು ಚನ್ನಪ್ಪ ಇವರ ಮುದ್ರಿಕೆಗಳು ಅನುಕ್ರಮವಾಗಿ ಮಗಿಯ ನರೇಂದ್ರ, ಗುರುಬಸವ ಮತ್ತು ಚನ್ನ ಶ್ರೀಪ್ರಭು ಎಂದು ಇರುತ್ತವೆ. ಇವರೆಲ್ಲರೂ ೧೫ ನೇ ಶತಮಾನದ ಕವಿಗಳಿದ್ದು ಅವರು ಶ್ರೀ ಅಲ್ಲಮಪ್ರಭು, ಮತ್ತು ಅವರ ತರುವಾಯ ೧೨ನೇ ಪೀಠಸ್ಥರಾದ ಶ್ರೀ ಬಸವಪ್ರಭು ಇವರ ಸ್ತುತಿಪರ ಪದ್ಯಗಳನ್ನು ರಚಿಸಿರುತ್ತಾರೆ. ಈ ಪದ್ಯಗಳನ್ನ ಶ್ರೀ॥ ಮ॥ ಬುದ್ದಯ್ಯನವರು ಪರಿಶೋಧಿಸಿ ಅವುಗಳಲ್ಲಿ ಕೆಲವುಗಳನ್ನು ಮಾತ್ರ ಈ ಚಿಕ್ಕ ಪುಸ್ತಕದಲ್ಲಿ ಪ್ರಸಿದ್ಧಿಸಿರುತ್ತಾರೆ. ಈ ಬಗೆಯ ಸಂಶೋಧನ ಕಾರ್ಯವು ಯಾವಾಗಲೂ ಕಷ್ಟ

ತರವಾದದ್ದು. ಆದರೂ ಶ್ರೀ॥ ಮಾ॥ ಬುದ್ಧಯ್ಯನವರು ಈ ಕಾರ್ಯ ವನ್ನು ಕೈಕೊಂಡು ವೀರಶೈವ ಮೂವರು ಕವಿಗಳ ಹೆಸರುಗಳನ್ನು ಪ್ರಕಾಶ ಪಡಿಸಿದ್ದಕ್ಕೆ ನಾವು ಅವರನ್ನು ಅಭಿನಂದಿಸುತ್ತೇವೆ.

ಈ ಯಾವತ್ತರ ಪದ್ಯಗಳು ಸುಲಲಿತವಾಗಿವೆ ಭಕ್ತಿರಸಪರಿಪೂ ರ್ಣವಾಗಿವೆ. ಭಾಷೆಯು ಬಹು ಸರಳವೂ ಸುಲಭವೂ ಆಗಿರುವದರಿಂದ ಪದ್ಯಗಳು ಚಿತ್ತಾಕರ್ಷಕವಾಗಿವೆ. ಇದರಲ್ಲಿ ಶ್ರೀಮದನಾದಿ ಅಲ್ಲಮ ಪ್ರಭುದೇವರ ಸುಂದರ ಸ್ತೋತ್ರಗಳಲ್ಲದೆ, ಅವರ ತರುವಾಯ ಶೂನ್ಯ ಸಿಂಹಾಸನ ಮಹಾಪೀಠಕ್ಕೆ ಅಧಿಕಾರಾರೂಢರಾದ ಶ್ರೀಬಸವಪ್ರಭು ಸ್ವಾಮಿ ಗಳವರ ಸ್ತೋತ್ರಗಳೂ ಬಂದಿರುತ್ತವೆ. ಈ ಮೇಲ್ಕಂಡ ಮೂವರೂ ಕವಿ ಗಳು ಸಮಕಾಲೀನರೆಂಬದು ಅವರ ಪದ್ಯಗಳಿಂದಲೇ ಗೊತ್ತಾಗುತ್ತದೆ. ಮತ್ತು ಅವರೆಲ್ಲರೂ ಶ್ರೀಬಸವಪ್ರಭು ಇವರ ಪರಮ ಭಕ್ತರೆಂತಲೂ ಅವುಗಳಿಂದ ತಿಳಿದುಬರುತ್ತದೆ.

ಈ ಬಸವಪ್ರಭು ಸ್ವಾಮಿಗಳು ಆ ಕಾಲಕ್ಕೆ ಅತ್ಯಂತ ಪ್ರಸಿದ್ಧ ರಾಗಿದ್ದರು. ಶ್ರೀ ಮನ್ನಿರಂಜನ ವಂಶರತ್ನಾಕರವೆಂಬ ಗ್ರಂಥದಲ್ಲಿ ಇವರ ಬಗ್ಗೆ ಉಪಲಬ್ಧವಿರುವ ವೃತ್ತಾಂತವೇನೆಂದರೆ:— ಅವರು ಶ್ರೀ ಅಲ್ಲಮ ಪ್ರಭುವಿನ ತರುವಾಯ ೧೨ನೇ ಪಟ್ಟದ ಸ್ವಾಮಿಗಳು. ಅವರ ಹಿಂದಿ ನವರು ತಿಪ್ಪೆ ರುದ್ರ ಮಹಾಸ್ವಾಮಿಗಳವರು. (ಈ ಸ್ವಾಮಿಗಳವರ ಗದ್ದಿ ಗೆಯು ಮೈಸೂರು ಜಿಲ್ಹಾ ನಾಯಕನ ಹಳ್ಳಿಯಲ್ಲಿ ಈಗ್ಗೆಯೂ ಅತ್ಯಂತ ಪ್ರಸಿದ್ಧವಾಗಿದೆ.) ಶ್ರೀ ಬಸವಪ್ರಭುಗಳು ಪಟ್ಟವೇರಿದ ತರುವಾಯ ಕೆಳದೀ ದೇಶಕ್ಕೆ ಬಂದು ಅಲ್ಲಿ ಕೆಲಕಾಲವಿದ್ದು ಅಲ್ಲಿಯವರಿಗೆ ಜ್ಞಾನೋಪದೇ ಶವನ್ನು ಮಾಡುತ್ತ ಅನೇಕ ಮಹಿಮೆಗಳನ್ನು ತೋರಿಸಿದರು. ಅಲ್ಲಿಂದ ಹಿರೇಸೂರು ಕಿರೇಸೂರು (ಬಾಗಲಕೋಟ ತಾಲೂಕು) ಗ್ರಾಮಗಳಿಗೆ ಬಂದು ಅಲ್ಲಿ ತಮ್ಮ ಕುರುಹುಗಳನ್ನು ಇಟ್ಟು, ಹುಕ್ಕೇರಿ ಸೀಮೆಗೆ ಬಂದು ಅಲ್ಲಿರುವ ಜೈನಮತಸ್ಥರಿಗೆ ಶಿವಮತವನ್ನು ಬೋಧಿಸಿ ತಮ್ಮ ಭಕ್ತರನ್ನು ಮಾಡಿಕೊಂಡರು. ಅಲ್ಲಿಂದ ಹನಗಂಡಿ (ಸಂಸ್ಥಾನ ಸಾಂಗಲಿ—ರಬಕವಿ ಯಿಂದ ೨ ಮೈಲು) ಎಂಬ ಗ್ರಾಮಕ್ಕೆ ಚಿತ್ತೈಸಿ ಅಲ್ಲಿದ್ದ ಜೈನ ಅರಸ ನಿಗೆ ಲಿಂಗಧಾರಣೆಯನ್ನು ಮಾಡಿಸಿದರು. ಅಲ್ಲಿಂದ ಅದಕ್ಕೆ ಸಮೀಪ ವಾಗಿರುವ ತೇರದಾಳ ಗ್ರಾಮಕ್ಕೆ ಬಂದು ಅಲ್ಲಿಯೇ ನಿರ್ವಯಲಾ ದರು. ಆ ಸಮಯದಲ್ಲಿ ಅಲ್ಲಿಯ ಭಕ್ತರ ಇಚ್ಛೆಯು ಮೇರೆಗೆ ತಮ್ಮ

ಕಮಂಡಲುವಾದ ಮಗಿಯನ್ನೂ ಹಾವುಗೆ, ಬೆತ್ತವನ್ನೂ ತಮ್ಮ ಕುರುಹಾಗಿ ಇಟ್ಟರು. ಆ ಸ್ಥಳದಲ್ಲಿ ಭಕ್ತರು ಒಂದು ಮಠವನ್ನು ಕಟ್ಟಿಸಿ ಅಲ್ಲಿ ಆ ಮಗಿಯನ್ನೂ ಬೆತ್ತಹಾವುಗೆಗಳನ್ನೂ ಇಟ್ಟು ಈಗಲೂ ಪೂಜಿಸುತ್ತಿರುವರು ಈ ಮಠಕ್ಕೆ ಪೂಜೋತ್ಸವಗಳು ವಿಶೇಷವಾಗಿ ಜರಗುತ್ತಿದ್ದು ಅದಕ್ಕೆ ಬಹಳ ಭೂಮಿಯು ಇನಾಮವಾಗಿ ಈಗ್ಗೆಯೂ ನಡೆಯುತ್ತದೆ.

ಮೇಲ್ಕಂಡ ವೃತ್ತಾಂತಗಳು ಈ ಮೂರೂ ಕವಿಗಳು ರಚಿಸಿರುವ ಪದ್ಯಗಳಿಂದ ಸಮರ್ಥನೆಯನ್ನು ಹೊಂದುತ್ತವೆ. ಈ ಕವಿಗಳಲ್ಲೊಬ್ಬನಾದ ಮಗಿನರೇಂದ್ರನೇ ಮಹಾಸ್ವಾಮಿಗಳಿಂದ ದೀಕ್ಷೆ ಹೊಂದಿದ ಹನಗಂಡಿ ಘೋರಿಯು. ಅವನು ತಾನು ಈ ಮಗಿ ಪ್ರಭುವಿನಿಂದ ವರವನ್ನು ಪಡೆದೆನೆಂತಲೂ, ತಾನು ಅವರ ಶಿಸುವೆಂತಲೂ ಮೇಲಿಂದ ಮೇಲೆ ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ. ಈ ಹನಗಂಡೀ ದೇಸಾಯರು ಮೊದಲಿಗೆ ಜೈನರಿದ್ದು ಬಸವಪ್ರಭುವಿನಿಂದ ವೀರಶೈವ ದೀಕ್ಷೆಯನ್ನು ಹೊಂದಿದರು. ಆದರೆ ಮಧ್ಯದಲ್ಲಿ ಯಾವಾಗಲೋ ಅವರು ಪುನಃ ಜೈನಧರ್ಮವನ್ನು ಸ್ವೀಕರಿಸಿ ಅದರಂತೆಯೇ ಈಗ ಆಚರಿಸುತ್ತಲಿದ್ದಾರೆ. ಹೀಗಿದ್ದರೂ ಅವರು ತೇರದಾಳದಲ್ಲಿಯ ಶ್ರೀಬಸವಪ್ರಭುವಿನ ಗದ್ದಿಗೆಗೆ ಕೇವಲ ಭಕ್ತಿಪೂರ್ವಕವಾಗಿ ನಡೆದುಕೊಳ್ಳುತ್ತಾರೆ. ಮತ್ತು ಈಗಿನ ಅಲ್ಲಿಯ ದೇಸಾಯರಾದ ಶ್ರೀಮಂತ ಪಾಯಪ್ಪ ಉರ್ಫ ಅಪ್ಪಾಸಾಹೇಬರು ತಮ್ಮ ಪೂರ್ವಜರಾದ ಮಗೆಪ್ಪನವರು ರಚಿಸಿದ ಈ ಪದ್ಯಗಳನ್ನು ಬಹಿರಂಗಗೊಳಿಸಲು ಶಿ। ಮೂ॥ ಬುದ್ದಯ್ಯನವರಿಗೆ ಸಹಾಯವನ್ನು ಮಾಡಿದ್ದರ ಮೇಲಿಂದ ಮಠದ ಮೇಲೆ ಅವರಿಗಿದ್ದ ಆದರವು ವ್ಯಕ್ತವಾಗುತ್ತದೆ.

೫೯ನೇ ಪದ್ಯದಲ್ಲಿ ಶ್ರೀಬಸವಪ್ರಭು ಸ್ವಾಮಿಗಳು ಗೋಕಾವಿಯ ಹತ್ತರಿರುವ ಗೂಗಿಯ ಕೊಳ್ಳಕ್ಕೆ ಹೋದದ್ದೂ, ಪುಟ ೪೦, ೪೫ ರಲ್ಲಿ ಅವರು ಲಖುಮೇಂದ್ರನ ಆಲಯಕೆ ಬಂದದ್ದೂ ಉಲ್ಲೇಖಿಸಲ್ಪಟ್ಟವೆ. ಈ ಲಖುಮೇಂದ್ರನೆಂದರೆ ಆಗಿನ ಹುಕ್ಕೇರಿನಾಡಿನ ಪ್ರಭುಗಳಾದ ಈಗಿನ ಒಂಟಮೂರಿ ದೇಸಾಯರ ಪೂರ್ವಜರೊಬ್ಬರು. ಈ ದೇಸಾಯ ವಂಶಜರು ಈಗಲೂ ಈ ತೇರದಾಳದ ಬಸವಪ್ರಭುದೇವರ ಮಠಕ್ಕೆ ಅತ್ಯಂತ ಭಕ್ತಿಪೂರ್ವಕವಾಗಿ ನಡೆಯುತ್ತಲಿರುವರು. ಪುಟ ೩೭ ರಲ್ಲಿಯ ೩ನೇ ಪದ್ಯದಲ್ಲಿ ಸ್ವಾಮಿಗಳಿಂದ "ಪ್ರಜ್ವಲಿಸಿತು ಪ್ರಭೆ ಪುಣ್ಯದ ಮಲೆನಾಡು" ಎಂದು ಇದ್ದು, ಇದು ಅವರು ಕೆಳದಿ ನಾಡಿನಲ್ಲಿದ್ದದ್ದರ ಉಲ್ಲೇಖವಾಗಿರಬೇಕು.

ಈ ಮೇರೆಗೆ ಶ್ರೀಬಸವಪ್ರಭುಗಳು ಪೂರ್ವಕಾಲದಲ್ಲಿ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಸಂಚರಿಸಿ ಪರಮತಸ್ಥರ ಮೇಲೆ ಸಹ ತಮ್ಮ ಪ್ರಭಾವವನ್ನು ಬೀರಿ ರಾಜರನ್ನು ಸಹ ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡಿದ್ದು ಈ ಪದ್ಯಗಳಿಂದ ಗೊತ್ತಾಗುತ್ತದೆ. ಇಂಥ ಗ್ರಂಥವನ್ನು ಪ್ರಕಟಪಡಿಸಿದ್ದಕ್ಕಾಗಿ ಶ್ರೀ॥ ಮೂ॥ ಬುದ್ದಯ್ಯನವರು ಎಲ್ಲರ ಕೃತಜ್ಞತೆಗೆ ಪಾತ್ರರಾಗಿರುವರು. ಮತ್ತು ವೀರಶೈವರೆಲ್ಲರೂ ಈ ಪದ್ಯಗಳನ್ನು ಸಂಗ್ರಹಿಸಿ, ಈ ಕವಿಗಳ ಉಳಿದ ಪದ್ಯಗಳನ್ನು ಸಂಗ್ರಹಿಸಲು ಶಿ॥ ಮೂ॥ ಬುದ್ದಯ್ಯನವರಿಗೆ ಉತ್ತೇಜನ ಕೊಡುವರೆಂದು ನಾವು ಹಾರೈಸುತ್ತೇವೆ.



ಶಿವಾನುಭವ ಗ್ರಂಥಮಾಲಾ ನಂ॥ ೧೭

# ಹಡಪದಪ್ಪಣ್ಣನ

## ವಚನಗಳು.



ಸಂಪಾದಕರು

ಡಾ॥ ಸಾ॥ ಫ. ಗು. ಹಳಕಟ್ಟಿ

ಬಿ. ಏ. ಎಲ್. ಎಲ್. ಬಿ. ವಕೀಲ

ವಿಜಾಪುರ.



ಬೆಲೆ ೭ ಆಣೆಗಳು.

# ಪ್ರಸ್ತಾವನೆ.

ಹಡಪದಪ್ಪಣ್ಣನ ವಚನಗಳು ನಮಗೆ ದೊರೆದ ಎರಡು ಪ್ರತಿಗಳ ಆಧಾರದಿಂದ ಸಿದ್ಧಮಾಡಲ್ಪಟ್ಟಿವೆ. ಇವುಗಳಲ್ಲಿ ಒಂದು ಪ್ರತಿಯು ರಾ॥ ರಾ॥ ಮಂಜಪ್ಪ ಹರ್ಡೇಕರ ಇವರಿಗೆ ಇಂಡೀ ತಾಲೂಕು ಹತ್ತರಕಿ ಗ್ರಾಮದಲ್ಲಿ ದೊರೆತದ್ದು, ಮತ್ತು ಇನ್ನೊಂದು ಪ್ರತಿಯು ರಾ॥ ರಾ॥ ಶಿವಲಿಂಗಪ್ಪ ಮುದ್ದೇಬಿಹಾಳ ಪೆನಶನ್ಡ ಮಾಸ್ತರ ಮು॥ ವಿಜಾಪುರ ಇವರು ನಮಗೆ ತಂದು ಕೊಟ್ಟದ್ದು ಇರುತ್ತವೆ. ಈ ಎರಡೂ ಪ್ರತಿಗಳಿಂದ ಈ ಪುಸ್ತಕವನ್ನು ರಚಿಸಲಿಕ್ಕೆ ನಮಗೆ ಬಹಳ ಸಹಾಯವಾಯಿತು. ಇವುಗಳನ್ನು ನಮಗೆ ತಂದುಕೊಟ್ಟದ್ದಕ್ಕೋಸ್ಕರ ಈ ಉಭಯ ಮಹನೀಯರಿಗೆ ನಾವು ಬಹಳ ಅಭಾರಿಯಾಗಿದ್ದೇವೆ.

ಹಡಪದಪ್ಪಣ್ಣನ ವೃತ್ತಾಂತವು ನಮಗೆ ಇನ್ನೂ ತಿಳಿದಿರುವದಿಲ್ಲ. ಆದರೆ ಷಟ್‌ಸ್ಥಲದ ತತ್ವಗಳು ಬಹು ಸುಲಭ ಭಾಷೆಯಲ್ಲಿ ಈ ವಚನಗಳ ಮೂಲಕವಾಗಿ ವಿವರಿಸಲ್ಪಟ್ಟಿವೆ. ಈ ಗ್ರಂಥವು ಎಲ್ಲ ಜನರಿಗೆ ಉಪಯೋಗವಾಗಬಹುದೆಂದು ಎಣಿಸಿ ನಾವು ಇದನ್ನು ಈಗ ಪ್ರಸಿದ್ಧಿಸಿದ್ದೇವೆ. ಈತನ ಹೆಂಡತಿಯಾದ ಲಿಂಗಮ್ಮನೂ ಒಳ್ಳೇ ಪಂಡಿತಳಾಗಿದ್ದಳು. ಆಕೆಯ ಒಂದು ವಚನವೂ ಉಪಲಬ್ಧವಿದೆ.

ವಿಜಾಪುರ
೯–೭–೨೯

ಫ. ಗು. ಹಳಕಟ್ಟಿ
ಸಂಪಾದಕ.

# ಶರಣಸ್ಥಲ.

## ಶರಣನ ಲಕ್ಷಣಗಳು.

೧. ಜಂಗಮಲಿಂಗ ಎಂತಹನು ಎಂದರೆ, ಅಂತರಂಗದಲ್ಲಿ ಅರಿವು, ಬಹಿರಂಗದಲ್ಲಿ ಶಮೆ, ದಮೆ, ಸರ್ವಶಾಂತಿ ಎಡೆಗೊಂಡು, ತನ್ನ ನಂಬಿದ ಸಜ್ಜನ ಸದ್ಭಕ್ತರಿಗೆ, ಭಾವಕ್ಕೆ ಜಂಗಮವಾಗಿ, ಪ್ರಾಣಕ್ಕೆ ಲಿಂಗವಾಗಿ, ಕಾಯಕ್ಕೆ ಗುರುವಾಗಿ, ಪ್ರಾಣಕ್ಕೆ ಬಂದ ಪದಾರ್ಥವ ಲಿಂಗಾರ್ಪಿತವ ಮಾಡುತ್ತ, ಬಾರದ ಪದಾರ್ಥವ ಮನದಲ್ಲಿ ನೆನೆಯದೆ, ಮಾನವರ ಬೇಡದೆ, ಬಡಭಕ್ತರ ಕಾಡದೆ, ಒಡನೆ ಇಹ ಘನವನರಿದು, ದೃಢಭಕ್ತರೊಳು ಲಿಂಗವಾಗಿ ಏನು ನುಡಿದರೂ ನಿಕ್ಷೇಪಿಸಿ, ನಿರ್ಗಮನಿಯಾಗಿ ಸುಳಿಯಬಲ್ಲರೆ, ಆತ ಲಿಂಗ ಜಂಗಮ. ಅದಕ್ಕೆ ನಮೋ ನಮೋ ಎಂದು ಭವಂ ನಾಸ್ತಿಯಾಯಿತ್ತು ಕಾಣಾ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೨. ಶ್ರೋತ್ರ, ನೇತ್ರ, ಜಿಹ್ವೆ, ತ್ವಕ್ಕು, ಘ್ರಾಣವೆಂಬ ಬುದ್ಧೀಂದ್ರಿಯಂಗಳನರಿದು, ವಾಕ್ಕು, ಪಾಣಿ, ಪಾದ, ಪಾಯು, ಗುಹ್ಯವೆಂಬ ಕರ್ಮೇಂದ್ರಿಯವ ತೊರೆದು, ಗಂಧ, ರಸ, ರೂಪು, ಶಬ್ದ, ಸ್ಪರ್ಶನ, ಶಬ್ದವೆಂಬ ಪಂಚೇಂದ್ರಿಯವ ಜರಿದು, ಮನ ಬುದ್ಧಿ ಚಿತ್ತ ಅಹಂಕಾರವೆಂಬ ಚತುಷ್ಟಯ ಕರಣಂಗಳ ಮೆಟ್ಟಿ, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರವೆಂಬ ಅರಿ ಷಡ್ವರ್ಗವಂ ಸುಟ್ಟು, ತನುವ್ಯಸನ, ಮನವ್ಯಸನ ಧನವ್ಯಸನ, ವಾಹನವ್ಯಸನ, ಉತ್ಸಾಹವ್ಯಸನ, ಸೇವಕ ವ್ಯಸನ, ಮತ್ಸರವ್ಯಸನವೆಂಬ ಸಪ್ತವ್ಯಸನಂಗಳ ಸ್ವಪ್ನದಲ್ಲಿ ನೆನೆಯದೆ ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶ, ಚಂದ್ರ, ಸೂರ್ಯರು ಆತ್ಮರೆಂಬ ಇಂತೀ ಅಷ್ಟಮದವ ಹಿಟ್ಟುಗುಟ್ಟಿ, ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾದ, ಕೂರ್ಮ, ಕ್ರಕರ, ದೇವದತ್ತ, ಧನಂಜಯವೆಂಬ ದಶವಾಯುವ ಕೆಡೆ ಮೆಟ್ಟಿ, ಸಂಸಾರವ ಒಡಹಾಯ್ದು, ಜಗವ ಹೊದ್ದದೆ, ತಾನೊಂದು ಕಡೆಯಾಗಿ ನಿಂದು, ಮಾಯೆಗೆ ಒಡೆಯನಾಗಿ, ಆ ಮಹಾ ಘನವ ಸೂರೆಗೊಂಡ ಶರಣಂಗೆ ನಮೋ ನಮೋ ಎಂದು ಬದುಕಿದೆನಯ್ಯ ಬಸವಪ್ರಿಯ ಕೂಡಲ ಚನ್ನಬಸವಣ್ಣಾ, ನಿಮ್ಮ ಧರ್ಮ ನಿಮ್ಮ ಧರ್ಮ.

೩. ಆಸೆಯುಳಿದು, ನಿರಾಸೆಯಲ್ಲಿ ನಿಂದು, ವೇಷವು ಜರಿದು, ಸರ್ವವು ಮರೆದು, ಈ ಗುಣತ್ರಯುಮಂ ತೊರೆದು ನಿರಾಸೆಯ ಮೇಲೆ ನಿಂದರೆ, ಅದೇ ಶರಣಂಗೆ ಸರಿ ಎಂಬೆ ಬಸವ ಪ್ರಿಯ ಕೂಡಲ ಚನ್ನ ಬಸವಣ್ಣಾ.

೪. ಶರಣು ಶರಣೆಂದು ನುಡಿದಾಡುವರು. ಶರಣಸ್ಥಲ ಎಂತಿಪ್ಪು ದೆಂದರಿಯರು. ಅನ್ನವನಿಕ್ಕಿದವರೆಲ್ಲ ಶರಣರೆ? ಹೊನ್ನ ಕೊಟ್ಟವರೆಲ್ಲ ಶರಣರೆ? ಹೆಣ್ಣು ಹೊನ್ನು ಕೊಟ್ಟವರೆಲ್ಲ ಶರಣರೆ? ಅಲ್ಲ. ಅದಕ್ಕೆ ಪುಣ್ಯದ ಫಲ ಉಂಟು. ಅದಂತಿರಲಿ. ಶರಣನಾದಡೆ ತನ್ನ ಮರಣ ಬಾಧೆಯ ಗೆಲ್ಲಬೇಕು. ಮರಣ ಬಾಧೆಯ ಗೆದ್ದ ಶರಣರ ಕಂಡ ಅನುವೇ ಅಂಗ, ಮನವೇ ಸುಸಂಗ, ಅವರು ಹಿಡಿದ ಧನವೇ ಪದಾರ್ಥ. ಇದೀಗ ನಮ್ಮ ಮುನ್ನಿನ ಶರಣರ ನಡೆ. ಇದನರಿಯದೆ ಮನೆ ಮನೆಗೆ ಶರಣರು ತನ ತನಗೆ ಶರಣರೆಂದು ನುಡಿದಾಡುವ ಈ ಬಿನುಗರ ನುಡಿಯ ಮೆಚ್ಚುವನೆ ನಮ್ಮ ಅಪ್ಪಣ್ಣ ಪ್ರಿಯ ಚನ್ನಬಸವಣ್ಣಾ?

೫. ಕುದುರೆಯ ಕುಪ್ಪಟ ಘನವಾಯಿತ್ತು. ಆನೆಯ ಹರಿ ದಾಟ ನಿಲಬಾರದು. ಒಂಟೆಯ ಕತ್ತು ನೆಟ್ಟಗಾಯಿತ್ತು. ಬಂಟರ ಹರಿದಾಟ ಉಂಟು. ಕಟ್ಟಿಗೆಯವರು ಉಗ್ಗಡಿಸುತ್ತ, ಭಟರುಗಳು ಪೊಗಳುತ್ತ, ಸಕಲ ವಾದ್ಯ ರಭಸದೊಳಗೆ ಸಂದಳಿಯೆಂಬ ಅಂದಳದ ಮೇಲೆ ಚಂದವಾಗಿ ಮನೋರಾಜ್ಯಂಗೆಯ್ವುತ್ತಿರಲು, ಈ ಸುಖವನೊ ಲ್ಲದೆ, ಮುಂದೆ ದುಃಖ ಉಂಟೆಂದು, ಶರಣನರಿದು, ತಲೆ ಎತ್ತಿ ನೋಡಿ, ಘನಗುರುವಿನ ಹಸ್ತದಿಂದ ಅನುಜ್ಞೆಯಂ ಪಡೆದು, ಧ್ಯಾನ ಧಾರಣ ಸಮಾಧಿಯಿಂದ ತಿಳಿದು ನೋಡಲಾಗಿ, ಇತ್ತ ಶೂನ್ಯವೆಂಬ ಪಟ್ಟಣ ದೊಳಗೆ ಅನಾಮಿಕನೆಂಬ ಲಿಂಗ, ಅರಸು, ಆ ಅರಸಿನ ಗೊತ್ತುವಿಡಿದು ಇತ್ತಲೆ ಮನವೆಂಬ ಅರಸನು ಹಿಡಿಯಲಾಗಿ ಹಿಡಿದು, ಆನೆ, ಕುದುರೆ, ಸೇನೆಯನೆಲ್ಲ ಸೂರೆಗೊಂಡು, ಭಂಡಾರ ಬೊಕ್ಕಸ ಅರಮನೆಯನ್ನೆಲ್ಲ ಸುಟ್ಟು ಬಟ್ಟಬಯಲ ಮಾಡಿದ ನಮ್ಮ ಬಸವ ಪ್ರಿಯ ಕೂಡಲ ಚನ್ನಬ ಸವಣ್ಣ

೬. ಈ ಜಗದೊಳಗಣ ಆಟವ ನೋಡಿದರೆ, ಎನಗೆ ಹಗರಣ ವಾಗಿ ಕಾಣಿಸುತ್ತಿದೆ. ಅದೇನು ಕಾರಣವೆಂದರೆ, ಹಿಂದಣ ಮುಕ್ತಿಯ ನರಿಯರು. ಮುಂದಣ ಮುಕ್ತಿಯ ನರಿಯರು. ಬಂದ ಬಂದ ಭವದಲ್ಲಿ

ಮುಳುಗುತ್ತಲಿದ್ದಾರೆ. ನಾನಿದರಂದವನರಿದು, ದ್ವಂದ್ವವ ಹರಿದು, ಜಗದ ನಿಂದೆ ಸ್ತುತಿಯ ಸಮಗಂಡು, ಹಿಂದ ಹರಿದು ಮುಂದನರಿದು, ಸದಮಳಾನಂದದಲ್ಲಿ ನಿಂದು, ಸಚ್ಚಿದಾನಂದದಲ್ಲಿ ಐಕ್ಯವಾಗಿ, ಸತ್ಯ ಶರಣರ ಪಾದದಲ್ಲಿ ನಿರ್ಮುಕ್ತನಾದೆನೈಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೭. ಯೋಗದಿಂದರಿದಿಹೆನೆಂಬಿರಿ. ಓದಿನಿಂದರಿದಿಹೆನೆಂಬಿರಿ. ವೇದದಿಂದರಿದಿಹೆನೆಂಬಿರಿ. ಶಾಸ್ತ್ರದಿಂದರಿದಿಹೆನೆಂಬಿರಿ. ಕೇಳಿರಣ್ಣಾ. ಯೋಗದಂತದು ಅಲ್ಲ, ಓದಿನಂತದು ಅಲ್ಲ ವೇದದಂತದು ಅಲ್ಲ ಶಾಸ್ತ್ರದಂತದು ಅಲ್ಲ. ಶರಣಸ್ಥಲಬೇರೆ. ಅದೆಂತೆಂದೊಡೆ, ಗಂಡಳಿದು ಹೆಣ್ಣಾಗಬೇಕು. ಹೆಣ್ಣಳಿದು ಗಂಡಾಗಬೇಕು. ಉಂಡೆನುಟ್ಟೆನೆಂಬ ಹಂಗಳಿದು, ಈ ಲೋಕದ ಸಂದೇಹವಳಿದ ಶರಣಂಗೆ ನಮೋ ನಮೋ ಎನುತಿರ್ದೆನೈಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ

೮. ಭಕ್ತಿಯ ಮಾಡಿಹೆನೆಂಬುವರೆಲ್ಲ ಭಾಗ್ಯವಂತರಾದರು. ಮುಕ್ತಿಯ ಸಾಧಿಸಿಹೆನೆಂಬುವರೆಲ್ಲ ಮೂವಿಧಿಗೊಳಗಾದರು. ತತ್ವವನರಿದಿಹೆನೆಂಬುವರೆಲ್ಲ ತರ್ಕಿಗಳಾದರು. ವಿರಕ್ತಿಯ ಮಾಡಿಹೆನೆಂಬುವರೆಲ್ಲ ವೈರಾಗಿಗಳಾದರು. ಇಂತೀ ಚತುರ್ವಿಧದೊಳಗಾವಂಗವು ಅಲ್ಲ ನಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

---

## ಶರಣನ ಅರಿವು.

೯. ತನ್ನ ತಾನರಿದವರು ಎಂತಿಪ್ಪರೆಂದರೆ, ಕನ್ನಡಿಗೆ ಕನ್ನಡಿಯ ತೋರಿದಂತಿಪ್ಪರು. ಕಣ್ಣಲಿ ನೋಡಿದರೆ ಮನದಲ್ಲಿ ಹಳಚದಂತಿಪ್ಪರು. ಕುಂದಣದ ಚಿನ್ನವ ಪುಟಕೆ ಹಾಕಿದಂತಿಪ್ಪರು. ಅದಂತಿರಲಿ, ಮುಂದೆ ಮೀರಿದ ಘನವು ಅಗಮ್ಯವಾಯಿತ್ತು.. ಇದನರಿಯಬಾರದು. ಇನ್ನು ತನ್ನ ತಾನರಿಯದವರು ಎಂತಿಪ್ಪರೆಂದರೆ, ಕೇಳಿ. ಚಿನ್ನ ಬಣ್ಣವಿಟ್ಟಂತಿಪ್ಪರು ಕಾಣಾ ಬಸವಪ್ರಿಯ ಕೂಡಲ ಚನ್ನ ಬಸವಣ್ಣಾ.

೧೦. ಅಯ್ಯ ಅರಗಿನ ಮರದ ಮೇಲೆ ಗಿರಿ ಹುಟ್ಟಿತಯ್ಯಾ. ಆ ಗಿರಿಯ ತಪ್ಪಲಲ್ಲಿ ಸಪ್ತ ಶರಧಿಗಳಿಪ್ಪವು. ಆ ಶರಧಿಯ ನಡುವೆ ತರು

ಮರ ಗಿರಿ ಗಂಹರ ಖಗ ಮೃಗಂಗಳಿಪ್ಪವು. ಈ ಭಾರವ ತಾಳಲಾರದೆ, ಅರಗಿನ ಮರದಡಿಯಲಿರ್ದ ಪರಮ ಜ್ಞಾನವೆಂಬ ಉರಿ ಎದ್ದು ಅರಗಿನ ಮರ ಮುರಿದೊರಗಿತ್ತು. ಗಿರಿ ನೆಲಕೆ ಬಿದ್ದಿತ್ತು. ಸಪ್ತ ಶರಧಿಗಳು ಬತ್ತಿದವು. ಅಲ್ಲಿರ್ದ ತರು ಮರ ಗಿರಿ ಖಗ ಮೃಗಾದಿಗಳೆಲ್ಲ ದಹನವಾದವು. ಇದ ಕಂಡು ನಾ ನಿಮ್ಮೊಳು ಬೆರಗಾಗಿ ನೋಡುತಿರ್ದೆನೈಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೧. ಅಂಗದ ಮೇಲೆ ಲಿಂಗವಿದ್ದವರೆಲ್ಲರು ಸರಿಗಾಣಬೇಕೆಂಬರು. ಲಿಂಗಲಾಂಛನಧಾರಿಗಳೆಲ್ಲ ಶರಣಂಗೆ ಸರಿಯೆ? ಶರಣರ ಸಂಗ ಎಂತಿಪ್ಪದೆಂದರೆ, ಪರಮ ಜ್ಞಾನವೆಂಬ ಉರಿಯನೆ ಉಟ್ಟು, ಉರಿಯನೆ ತೊಟ್ಟು, ಉರಿಯನೆ ಉಂಡು, ಉರಿಯನೆ ಹಾಸಿ, ಉರಿಯನೆ ಹೊದ್ದು, ನಿರವಯಲಾದ ಶರಣಂಗೆ ನರರುಗಳ ಸರಿ ಎನ್ನಬಹುದೆ? ಹರಿಗೆ ಕರಿ ಸರಿಯೆ? ಉರುಗಗೆ ವೊಳ್ಳೆ ಸರಿಯೆ? ಮರುಗಕ್ಕೆ ಗರುಗ ಸರಿಯೆ? ಇಂತೀ ನಿರ್ವಯಲಾದ ಶರಣಂಗೆ ಮರ್ತ್ಯದ ನರ ಗುರಿಗಳು ಸರಿ ಎಂದರೆ, ನಾಯಕ ನರಕದಲ್ಲಿಕ್ಕುವ ನಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೨. ಧರೆಯೊಳಗೆ ಹುಟ್ಟಿದವರೆಲ್ಲ ಬಲ್ಲೆನೆಂದು ಬಲ್ಲತನಕ್ಕೆ ಗೆಲ್ಲ ಸೋಲಕ್ಕೆ ಹೋರಿ ಸಲ್ಲದೆ ಹೋದರು ನಮ್ಮ ಶರಣರಿಗೆ. ಅದೇನು ಕಾರಣವೆಂದರೆ, ಇವರೆಲ್ಲ ಪುರಾಣದ ಪುಂಡರು. ಶಾಸ್ತ್ರದ ಸಟೆಯರು. ಆಗಮದ ತರ್ಕಿಗಳು. ವೇದದ ಹಾದರಿಗರು. ಬೀದಿಯ ಪಸರದ ಸಂತೆಯ ಸುದ್ದಿಯ ಗೊತ್ತಿಗರು. ಇಂತಿವರಾರು ಲಿಂಗದ ನೆಲೆಯನರಿಯರು. ಹಿಂದೆ ಹೋದ ಯುಗಂಗಳಲ್ಲಿ ಹರಿಬ್ರಹ್ಮರು ವಾದಿಸಿ ನಮ್ಮ ದೇವನ ಕಾಣದೆ ಹೋದರು. ಇದಕ್ಕೆ ಶೃತಿ ಸಾರುತ್ತಿದೆ. ದೇವ ದಾನವ ಮಾನವರು ಕಾಲ ಕಾಮಾದಿಗಳ ಆರಾಧಿಸಿ ನಮ್ಮ ದೇವರ ಕಾಣದೆ ಹೋದರು. ನಿಮ್ಮ ಪಾಡೇನು? ಅರಿ ಮರುಳುಗಳಿರಾ! ನಮ್ಮ ದೇವನ ಕಂಡೆನೆಂದರೆ ನೋಟಕಿಲ್ಲ. ನೆನಹಿಗಿಲ್ಲ. ತನುವಿಗಿಲ್ಲ. ಸಾಧಕರಿಗಿಲ್ಲ. ಭಾವನೆಗಿಲ್ಲ. ಇಂತಪ್ಪ ದೇವನ ಒಡಲ ಹಿಡಿವರ ಕಂಡೆನೆಂದರೆ ಆಗದು. ಇದರ ಬಿಡುಮುಡಿಯನರಿದು ಅಂಗೈಸುವ ಶರಣರ ಸಂಗದೊಳಗೆ ಎನ್ನ ಕಂಗಳು ಲಿಂಗವಾಗಿ, ಕರವೇ ಜಂಗಮವಾಗಿ, ಇಹ ಪರದೊಳಗೆ ಪರಿಪೂರ್ಣವಾದೆನೈಯ್ಯ. ನಿಮ್ಮ ಧರ್ಮ ನಿಮ್ಮ ಧರ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೩. ಹುಟ್ಟಿದ ಮನುಜರೆಲ್ಲ ಹೊಟ್ಟೆಯ ಹೊರೆವುದೇನು ಸೋಜಿಗವೊ? ಹುಲುಹೆಣನ ಸುಟ್ಟು, ಹೊಲೆಯನು ಹೊಟ್ಟೆಯ ಹೊರೆವುತ್ತಲವನೆ ಸಂತೆಯಲಿ ಎದೆಯ ಮೇಲೆ ಕಲ್ಲ ಹಾಕಿಕೊಂಬವನು ಹೊಟ್ಟೆಯ ಹೊರೆವುತ್ತಲವನೆ ಉಲಿ ಉಲಿದು ಕಂಡವರಿಗೆ ಹಲುಗಿರಿವವನು ಹೊಟ್ಟೆಯಹೊರವುತ್ತ ಅವನು ಈ ಲಿಂಗದ ನೆಲೆಯನರಿಯದವರು ಇವರೊಳು ಸಲುವರಲ್ಲದೆ ಎಮ್ಮ ಶರಣರಿಗೆ ನಿಲುಕರು ನೋಡಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೪. ಆಚಾರದರಿವು ಆಗಮವ ಕೂಡಿಕೊಂಡಿಹುದು. ವಿಚಾರದರಿವು ಶಾಸ್ತ್ರವ ಕೂಡಿಕೊಂಡಿಹುದು. ಲಿಂಗಾಚಾರದರಿವು ಅಂಗಭೋಗವ ಕೂಡಿಕೊಂಡಿಹುದು. ಆದಿ ವಿಚಾರದರಿವು ಜ್ಞಾನವ ಕೂಡಿಕೊಂಡಿಹುದು. ಈ ಚತುರ್ವಿಧದೊಳಗೆ, ಆವಂಗವು ಅಲ್ಲ. ಎಮ್ಮ ಶರಣರ ಪರಿ ಬೇರೆ. ಅದೆಂತೆಂದರೆ, ಗುರು ಕರದಲ್ಲಿ ಹುಟ್ಟಿದರು. ಲಿಂಗದಲ್ಲಿ ಬೆಳೆದರು. ಜಂಗಮದ ಸಂಗವ ಮಾಡಿದರು. ಪ್ರಸಾದದಲ್ಲಿ ಅಡಗಿದರು ಇದೀಗ ನಮ್ಮ ಶರಣರ ನಡೆ ನುಡಿ ಅರಿವು ಆಚಾರ ಲಿಂಗೈಕ್ಯ. ಈ ಚತುರ್ವಿಧವು ಹೊರತಾಗಿ, ಅವರೊಬ್ಬರು ಸಾಧಿಸಿ ಎಂದರೆ, ಸಾಧಕರಿಗೆ ಸಾಧ್ಯವಲ್ಲ. ಭೇದಕರಿಗೆ ಭೆದ್ಯವಲ್ಲ. ಅರಿವಿಂಗೆ ಅಪ್ರಮಾಣು, ವಾಙ್ಮನಕ್ಕಗೋಚರ. ಆಗಮ ಶಾಸ್ತ್ರಂಗಳು ಅರಸಿ ಕಾಣವು. ಇದು ಕಾರಣವಾಗಿ, ಎಮ್ಮ ಶರಣರು ಗುರು, ಲಿಂಗ, ಜಂಗಮ, ಪ್ರಸಾದ ಈ ಚತುರ್ವಿಧವಿಡಿದು, ಅಚಲ ಪದವನೆಯ್ದಿದರು. ಇದಕೆ ನೀವೇ ಸಾಕ್ಷಿಯಾಗಿ, ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೫. ತನ್ನ ಮನೆಯನರಿಯದೆ ತವರ ಮನೆಗೆ ಹಾರುವ ಹೆಣ್ಣಿನಂತೆ, ಭಿನ್ನವಿಟ್ಟು ನೋಡಿಹೆನೆಂದು, ನಿಮ್ಮನರಿಯದೆ ಕೆಟ್ಟಿತು ಜಗವೆಲ್ಲ. ಅದಂತಿರಲಿ. ಇನ್ನು ತನ್ನ ತಾನರಿದವಂಗೆ ತನುವೇ ಲಿಂಗ, ಮನವೇ ಪುಷ್ಪ. ಈ ಅನುವನರಿದು, ಘನವ ನೆಮ್ಮಿದ ಶರಣರ ಎನಗೊಮ್ಮೆ ತೋರಯ್ಯ ನಿಮ್ಮ ಧರ್ಮ ನಿಮ್ಮ ಧರ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೬. ಭಕ್ತಿಯ ಮಾಡಿಹೆನೆಂಬವರೆಲ್ಲ ಭಾಗ್ಯವಂತರಾದರು. ಮುಕ್ತಿಯ ಸಾಧಿಸಿಹೆನೆಂಬವರೆಲ್ಲ ಮೂವಿಧಿಗೊಳಗಾದರು. ತತ್ವವನರಿದಿಹೆನೆಂಬವರೆಲ್ಲ ತರ್ಕಿಗಳಾದರು. ವಿರಕ್ತಿಯ ಮಾಡಿಹೆನೆಂಬವರೆಲ್ಲ ವೈರಾ

ಗಿಗಳಾದರು. ಈ ಚತುರ್ವಿಧದೊಳಗೆ ಆವಂಗವೂ ಅಲ್ಲ. ಎಮ್ಮ ಬಸವ ಪ್ರಿಯ ಕೂಡಲ ಚನ್ನ ಬಸವಣ್ಣನಲ್ಲಿ ಶರಣರ ಪರಿ ಬೇರೆ.

೧೭. ನೀವು ಹೊತ್ತಿಪ್ಪ ವೇಷದಲ್ಲಿ ತತ್ವವ ತಿಳಿದು ನೋಡಿರಣ್ಣಾ ಜ್ಞಾನ ಬಿತ್ತಿಗಿಯ ಮೇಲೆ ನಿಂದು, ಅಂಗದ ನಿಚ್ಚಣಿಕೆಯನಿಕ್ಕಿ, ಒತ್ತಿ ನಿಂದರೆ ಉತ್ತರ ಜ್ಞಾನವೆಂಬುದು ನಿಮ್ಮ ಒತ್ತಿನಲ್ಲಿಪ್ಪುದು. ಇದ ನೋಡಿದರೆ ನಿಶ್ಚಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೮. ವೇದವನೋದಿದವರೆಲ್ಲ ನಮ್ಮ ಶರಣರು ಹೋದ ಹಾದಿಯನರಿಯದೆ, ನಾಹಂ ಎಂದು ಅಹಂಕರಿಸಿ, ಅನಿತ್ಯದೇಹಿಗಳಾಗಿ, ಅನಾಮಿಕರಾಗಿ ಹೋದರು. ಶಾಸ್ತ್ರವನೋದಿದವರೆಲ್ಲ, ನಮ್ಮ ಶರಣರು ಹೋದ ಹಾದಿಯನರಿಯದೆ, ಶ್ರವಣ, ಸನ್ಯಾಸಿ, ಯೋಗಿ, ಜೋಗಿಯಾಗಿ ಹೀಗೆ ಕೆಲಬರು ಕೆಟ್ಟರು. ಆಗಮವ ನೋದಿದವರೆಲ್ಲ ನಮ್ಮ ಶರಣರು ಹೋದ ಹಾದಿಯನರಿಯದೆ ಕ್ರಿಯಾ ಪಾದ ಚರ್ಯಪಾದ, ಜ್ಞಾನಪಾದವೆಂದು ನಾನಾ ಪರಿಯ ಕರ್ಮಭಕ್ತಿಯ ಮಾಡಿ, ಲಿಂಗ ಜಂಗಮದ ಮರ್ಮವ ನರಿಯದೆ, ಅಧರ್ಮಿಗಳಾಗಿ ಹೋದರು. ಪುರಾಣವನೋದಿದವರೆಲ್ಲ ನಮ್ಮ ಪುರಾತರು ಹೋದ ಹಾದಿಯನರಿಯದೆ, ಪುರದ ಬೀದಿಯೊಳಗೆ ಮಾತು ಕಥೆಯ ಪಸಾರವನಿಕ್ಕಿ ಮಾಡಿ ಫಲಪದ ಮುಕ್ತಿಗೆ ಸಲ್ಲದೆ ಹೋದರು. ಇದು ಕಾರಣ ಈ ಚತುರ್ವಿಧದೊಳಗಾವಂಗವು ಅಲ್ಲ. ಎಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣನ ಶರಣರ ಪರಿ ಬೇರೆ.

೧೯. ಹೆತ್ತವರೇ ಹೆಸರಿಡಬೇಕಲ್ಲದೆ, ತೊತ್ತಿರು ಬಂಟರು ಎತ್ತ ಬಲ್ಲರೊ? ಕರ್ತೃ ನಿಮ್ಮ ನೆಲೆಯ ನಿಮ್ಮ ಒತ್ತಿನಲಿಪ್ಪ ಶರಣರು ಬಲ್ಲರಲ್ಲದೆ, ಈ ಸತ್ತು ಹುಟ್ಟುವ ಮನುಜರೆತ್ತ ಬಲ್ಲರೊ? ನಿತ್ಯವಪ್ಪ ಮಹಾ ಘನ ಗುರುಮಾತ ನೀನೆ ಬಲ್ಲೆ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೨೦. ನಿಷ್ಠೆಯ ಮೆರದರೇನೈಯ್ಯ? ಲೋಕದ ಮನುಜರ ದೃಷ್ಟಿಗೆ ಸಿಲ್ಕಿ ಭ್ರಷ್ಟೆದ್ದು ಹೋದರು. ತನು ಕಷ್ಟಮಾಡಿದರೇನೈಯ್ಯ ಮನನಿಷ್ಠವಾಗದನ್ನಕ್ಕ? ತನು ಮನವೆರಡು ನಷ್ಟವಾಗಿ, ಘನವ ನೆಮ್ಮಿ ನಿಮ್ಮ ನೆನಹು ನಿಷ್ಪತ್ತಿಯಾದ ಶರಣರ ಎನಗೊಮ್ಮೆ ತೋರಯ್ಯ ನಿಮ್ಮ ಧರ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೨೧. ಆಚಾರದ ಅರಿವು ಹೊರಗಾದ ಮೇಲೆ, ಅಂಗದ ಮೇಲೆ ಲಿಂಗವಿದ್ದು ಫಲವೇನು? ಕುರುಡನ ಕೈಯ್ಯ ಕನ್ನಡಿ ಇದ್ದ ಹಾಗೆ, ಬರಡಾವಿಗೆಶಿಸು ಹುಟ್ಟಿದ ಹಾಗೆ, ಕರಡಿಗೆ ಕಣ್ಣು ಬೇನೆ ಬಂದ ಹಾಗೆ ಕುರುಡಿಗೆ ಮಕ್ಕಳಾದ ಹಾಗೆ, ದೀನನ ಮನೆಯಲ್ಲಿ ಹೊನ್ನಿದ್ದ ಹಾಗೆ, ಇವರೇನ ಮಾಡಿದರೇನು? ತಮ್ಮ ಹಾನಿವೃದ್ಧಿಯನರಿಯದನ್ನಕ್ಕ ಕಾಲ ಕಾಮಾದಿಗಳ ಬಾಯೊಳಗೆ ಸಿಕ್ಕಿ. ಅಗಿದಗಿದು ತಿನಿಸಿಕೊಳುತಿಪ್ಪರಲ್ಲದೆ, ಎನ್ನ ದೇವ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ

೨೨. ಶರಣರಿಗೆ ಭವವುಂಟೆಂದು ಮರ್ತ್ಯದಲ್ಲಿ ಹುಟ್ಟಿದ ಭವ ಭಾರಿಗಳು ನುಡಿದಾಡುವರು. ತಮ್ಮ ಹುಟ್ಟ ತಾವರಿಯರು. ತಾವು ಮುಂದೆ ಹೊಂದುವದನರಿಯರು ಇವರು ಬಂದ ಬಂದ ಭವಕ್ಕೆ ಕಡೆ ಮೊದಲಿಲ್ಲ. ಇಂತಪ್ಪ ಸಂದೇಹಿಗಳು ನಮ್ಮ ಶರಣರ ಹುಟ್ಟ ಬಲ್ಲೆ ನೆನಬಹುದೆ? ತನ್ನನರಿದವನಲ್ಲದೆ ಇದಿರನರಿಯರು. ಈ ಉದರ ಪೋಷಕರೆಲ್ಲರೂ ಇದ ಬಲ್ಲೆನೆಂಬುದು ಹುಸಿ. ಇದಬಲ್ಲವರು ಬಲ್ಲರ ಲ್ಲವೆ, ಸೊಲ್ಲಿಗಭೇದ್ಯನ ನಾನೆತ್ತ ಬಲ್ಲೆ? ಎನ್ನ ಗುರು ಚನ್ನಮಲ್ಲೇ ಶ್ವರನೇ ಬಲ್ಲ. ಇನ್ನು ನಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣನೇ ಬಲ್ಲ.

---

## ಶರಣನ ಸ್ಥಿತಿ.

ಮಹಾ ಘನ ನೆಲೆಗೊಂಡಿಪ್ಪ ಶರಣನ ನೆಲೆ ಎಂತಿಪ್ಪದೆಂದರೆ, ನೆಲದಮರೆಯ ನಿಧಾನದಂತೆ, ತಿಲದ ಮರೆಯ ತೈಲದಂತೆ, ಮುಗಿಲ ಮರೆಯ ಮಿಂಚಿನಂತೆ, ನೀರೊಳಗಣ ಕಿಚ್ಚಿನಂತೆ, ಕಾಷ್ಠದೊಳಗಣ ಅಗ್ನಿಯಂತೆ, ತೃಣದೊಳಗಡಗಿದ ಚೈತನ್ಯದಂತೆ, ಈ ವಿಶ್ವದೊಳು ಇದ್ದು ಇಲ್ಲದಂತಿಪ್ಪ ಮಹಾ ಘನವ ನಿಮ್ಮ ಶರಣರು ಬಲ್ಲರಲ್ಲದೆ, ಮರ್ತ್ಯದ ಮರಣ ಬಾಧೆಗೊಳಗಾದ ಮನುಜರೆತ್ತಬಲ್ಲರು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ?

೩೪. ಹೊತ್ತು ಹೋಗದ ಮುನ್ನ ನೀವು ಸತ್ತಂತೆ ಇರಿರೋ. ಸತ್ತಂತೆ ಇದ್ದಲ್ಲದೆ ತತ್ವವ ಕಾಣಬಾರದು. ತತ್ವವ ಕಂಡಲ್ಲದೆ ಮನ

ಬತ್ತಲೆಯಾಗದು. ಮನ ಬತ್ತಲೆಯಾದಲ್ಲದೆ ಘನವ ಕಾಣಬಾರದು. ಘನವ ಕಂಡಲ್ಲದೆ ನಿಮ್ಮ ನೆನಹು ನಿಷ್ಪತ್ತಿಯಾಗದು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೨೫. ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶ, ಚಂದ್ರ, ಸೂರ್ಯ, ಸೋಮ, ಮಂಗಳ, ಬುಧ, ಬೃಹಸ್ಪತಿ, ಶುಕ್ರ, ಶನಿ, ಇವು ಮೊದಲಾದ ಪಂಚತತ್ವ ನವಗ್ರಹಂಗಳಿಲ್ಲದಂದಿನ, ನಕ್ಷತ್ರಂಗಳಿಲ್ಲದಂದಿನ, ಸಪ್ತ ಸಮುದ್ರಂಗಳಿಲ್ಲದಂದಿನ, ಸಪ್ತಕುಲ ಪರ್ವತಂಗಳು ಇಲ್ಲದಂದಿನ, ಸಪ್ತ ಮುನಿವರ್ಗಂಗಳು ಇಲ್ಲದಂದಿನ, ಹರಿಬ್ರಹ್ಮ, ಕಾಲಕರ್ಮ ದಕ್ಷಾದಿಗಳಿಲ್ಲದಂದಿನ, ರುದ್ರಕೋಟಿ, ಸದಾಶಿವನಿಲ್ಲದಂದಿನ, ಏನೂ ಏನೂ ಇಲ್ಲದಂದಿನ, ಶೂನ್ಯ ನಿಶ್ಶೂನ್ಯಕ್ಕೆ ನಿಲುಕದ ಮಹಾಘನವ, ನಾನು ಬಲ್ಲೆ ತಾನು ಬಲ್ಲೆನೆಂದು ನುಡಿವ ಹೀನ ಮನುಜರ ಕೂಗಾಟ ಬೇಟಕ್ಕೆ ನಾಯಿ ಬೊಗುಳಿದಂತಾಯಿತ್ತು. ಆ ತುಟ್ಟ ತುದಿಯಲ್ಲಿಪ್ಪ ಘನವ ಮುಟ್ಟಿ ಹಿಡಿದು ಬಂದ ಶರಣರು ಬಲ್ಲರಲ್ಲದೆ, ಬಹು ವಾಕ್ಯಜಾಲವ ಕಲಿತು ಕೊಂಡು ಗಟ್ಟಿತನದಲ್ಲಿ ಬೊಗಳಿಯಾಡುವ ಮಿಟ್ಟಿಯ ಭಂಡರೆತ್ತ ಬಲ್ಲರು ನಮ್ಮ ಶರಣರ ಸುದ್ದಿಯ ಬಸವಪ್ರಿಯ ಕೂಡಲ ಚನ್ನಬಸವಣ್ಣಾ?

೨೬. ಅಂಗವ ಮರೆದು ಲಿಂಗವ ಕೂಡಿ, ಸಂಗವ ಮರೆದು, ಜಂಗಮವ ಕೂಡಿ, ಗುಣವ ಮರೆದು ಗುರುವ ಕೂಡಿ, ಪರವ ಮರೆದು ಪ್ರಸಾದವ ಕೂಡಿ, ಹರುಷವ ಮರೆದು ಹರನ ಕೂಡಿ, ಬೆರಸಿ ಬೇರಿಲ್ಲದಿಹ ನಿಜ ಶರಣಂಗೆ ನಮೋ ನಮೋ ಎಂಬೆ ಬಸವ ಪ್ರಿಯ ಕೂಡಲಚನ್ನ ಬಸವಣ್ಣಾ.

೨೭. ಜಗದೊಳಗೆ ಹುಟ್ಟಿದವರಿಲ್ಲ ಹಗರಣಿಗರಾಗಿ ಹುಟ್ಟಿದರಲ್ಲದೆ ಜಗವ ಗೆಲ್ಲಲರಿಯದೆ, ನಗೆಗೆಡೆಯಾಗಿ ಹೋದರು. ಎಮ್ಮ ಶರಣರು ಅಂತಲ್ಲ ಕೇಳಿರಣ್ಣಾ! ಜಗದಲ್ಲಿಯೇ ಹುಟ್ಟಿ, ಜಗದಲ್ಲಿಯೇ ಬೆಳೆದು, ಜಗದಂತೆ ಇದ್ದು, ಈ ಜಗವ ಗೆದ್ದು ಹೋಗುವರು ನಿಗಮಶಾಸ್ತ್ರ ಸಾಕ್ಷಿಯಾಗಿ. ಚನ್ನಮಲ್ಲೇಶ್ವರ ನಿನಗಾಯಿತ್ತಯ್ಯಾ. ಅಂತಪ್ಪ ಚನ್ನಮಲ್ಲೇಶ್ವರನ ಪಾದವಿಡಿದು ಅವರು ಹೋದ ಹಾದಿಗೊಂಡು ಹೋಗುವವನಲ್ಲದೆ, ಈ ಮೇದಿನಿಯೊಳಗೆ ಕಾಮಕಾಲಾದಿಗಳ ಬಲೆಯೊಳಗೆ ಸಿಕ್ಕಿಬಿದ್ದು ಹೋದೆನಾದರೆ ನಿಮ್ಮ ಪಾದಕ್ಕೆ ಅಂದೇ ದೂರವಯ್ಯಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೨೮. ಮಿಥ್ಯವನರಿದವರಿಲ್ಲ ತತ್ವಕ್ಕೆ ಅಂದೇ ಹೊರಗು. ತಥ್ಯವನರಿದ ಶರಣರು ಸತ್ತಂತೆ ಇರಬೇಕು. ತಥ್ಯ ಮಿಥ್ಯ ಎರಡಳಿದ ಶರಣಂಗೆ ಮತ್ತೊಂದು ಬಾರಿ ನಮೋ ನಮೋ ಎಂಬೆ ಬಸವ ಪ್ರಿಯ ಕೂಡಲ ಚನ್ನ ಬಸವಣ್ಣಾ.

೨೯. ಕರವನರಿದಂಗೆ ಕಮಲದ ಹಂಗೇಕೋ? ಇರವನರಿದಂಗೆ ಪರದ ಹಂಗೇಕೊ? ಪರವನರಿದಂಗೆ ಇರವದ ಹಂಗೇಕೊ? ಇಹ ಪರವೆಂಬ ಉಭಯವಳಿದ ಶರಣಂಗೆ ಮರ್ತ್ಯದ ನರರ ಹಂಗೇಕೊ ಹೇಳಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ?

೩೦. ಮನವನರಿದಂಗೆ ಮತದ ಹಂಗೇಕೊ? ನಿತ್ಯವನರಿದಂಗೆ ತೀರ್ಥದ ಹಂಗೇಕೊ? ಪರಮಾರ್ಥವನರಿದಂಗೆ ಪ್ರಸಾದದ ಹಂಗೇಕೊ? ಜ್ಯೋತಿಯನರಿದಂಗೆ ಕತ್ತಲೆಯ ಹಂಗೇಕೊ? ಲೋಕವನರಿದಂಗೆ ವ್ಯಾಕುಲದ ಹಂಗೇಕೊ? ಈ ತೆರನನರಿದಂಗೆ ಮುಂದಾವ ಭೀತಿಯುಂಟು ಹೇಳಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ?

೩೧. ಅವಲೋಹವ ಪರುಷ ಮುಟ್ಟಲು, ಸುವರ್ಣವಾಗುತ್ತಿದೆ. ಕಬ್ಬಿಣಕ್ಕೆ ಇದ್ದಲಿಯ ಹಾಕಿ ಅಗ್ನಿಯನಿಕ್ಕಿ, ಕಾವುಗೊಳಲಾಗಿ, ಕರಗಿ ನೀರಾಗುತ್ತಿದೆ. ಹಾಲಿಗೆ ನೀರ ಹೊಯ್ದರೆ, ಅದು ಏರುವ ಭೇದವ ನಾರು ಅರಿಯರು. ಶರಣರು ತನುವಿಡಿದಿದ್ದರೂ ಇದ್ದವರಲ್ಲ. ಅದು ಹೇಗೆಂದರೆ ಹಿಂದಣ ದೃಷ್ಟದ ಪರಿಯಲ್ಲಿ ಲಿಂಗವ ಹಿಡಿದಂಗಕ್ಕೆ ಬೇರೊಂದು ಸಂಗ ಸುಖ ಉಂಟೆ? ಅದು ಕಾರಣ, ಸರ್ವಾಂಗ ಲಿಂಗಿಯಾದ ಶರಣನು ಮುಟ್ಟದ, ತಟ್ಟದ, ಕೇಳದ, ನೋಡದ, ನುಡಿದ, ಸೋಂಕಿದನೆನ್ನಬೇಡ. ಅದು ಕಾರಣ ಕಬ್ಬಿಣ ನೀರುಂಡಂತೆ ಅರ್ಪಿತವ ಬಲ್ಲ ಐಕ್ಯಂಗೆ ಪ್ರೈಯಿಲ್ಲ ಬಾಯಿ. ಇದರ ಭೇದವ ನಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣನೇ ಬಲ್ಲ.

೩೨. ಹಗಲು ಗೂಗೆಗೆ ಇರುಳಾಗಿಪ್ಪುದು. ಇರುಳು ಕಪಟಿಗೆ ಹಗಲಾಗಿಪ್ಪುದು. ಇದು ಜಗದಾಟ. ಈ ಹಗಲು ಇರುಳೆಂಬ ಉಭಯವಳಿದು ನಿಗಮಂಗಳಿಗೆ ನಿಲುಕದ ಸಗುಣ ನಿರ್ಗುಣ ಅಗಮ್ಯ ಅಗೋಚರವಪ್ಪ ಮಹಾ ಘನ ಗುರುವಿನ ನೆಲೆಯ ನಿಮ್ಮ ಶರಣರು ಬಲ್ಲರಲ್ಲದೆ

ಮರ್ತ್ಯದ ಮರಣ ಬಾಧೆಗೊಳಗಾಗುವ ಮನುಜರೆತ್ತ ಬಲ್ಲರು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ?

೩೩. ಹುತ್ತದ ಮೇಲಣ ಸರ್ಪ ಸತ್ತಿತ್ತೆಂದು ಮುಟ್ಟಿ ಬಾಳ್ದ ಮನುಜರುಂಟೆ? ಒತ್ತಿಗೆ ಬಂದ ವ್ಯಾಘ್ರನನಪ್ಪಿಕೊಂಡ ಮನುಜರುಂಟೆ? ತತ್ವವ ಬಲ್ಲ ಶರಣರು ಸತ್ತ ಹಾಗೆ ಇದ್ದರೆ, ಇವರು ಕತ್ತೆಯ ಮನುಜರೆಂದು ಮರ್ತ್ಯದವರು ಒತ್ತಿ ನುಡಿದರೆ ಅವರೆತ್ತ ಬಲ್ಲರೊ? ಅವರ ನುಡಿದವರು ಅತ್ತಲೂ ಅಲ್ಲ, ಇತ್ತಲೂ ಅಲ್ಲ ನೋಡಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೩೪. ಎಡಬಲವೆಂದೇನೊ ನಿಮ್ಮ ಅಡಿಗಳನರಿದವಂಗೆ? ಕಡೆ ನಡುವೆಂದೇನೋ ಮೃಡನ ಹಾಡುವಂಗೆ? ಕುಲ ಛಲವೆಂದೇನೊ ಮನದ ಹೊಲೆಯ ಕಳೆದವಂಗೆ? ತಲೆಕಾಲೆಂದೇನೊ ಮಾಯೆಯ ಬಲೆಯ ನುಸುಳಿದವಂಗೆ? ಕಲಿಯುಗದ ಕತ್ತಲೆಯ ದಾಂಟಿದವಂಗೆ, ನಿಮ್ಮ ನೆಲೆಯ ನರಿದ ಶರಣಂಗೆ ಇನ್ನು ಸ್ಥಲನೆಲೆ ಆವುದುಂಟು ಹೇಳಾ ಬಸವ ಪ್ರಿಯ ಕೂಡಲಚನ್ನಬಸವಣ್ಣಾ?

೩೫. ತಲೆ ಇಲ್ಲದ ಮುಂಡ, ಮೊಲೆ ಇಲ್ಲದಾವು, ಜಲವಿಲ್ಲದ ಕೆರೆ, ನೆಲೆ ಇಲ್ಲದ ನಂಟ, ಕಲಿ ಇಲ್ಲದ ಬಂಟ, ಇವು ಐದ್ದರ ಕಲೆಯ ನರಿಯದೆ ನುಡಿವ ಮನುಜನೆಂತುಂಟು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ?

---

## ಶರಣನ ಸಾಮರಸ್ಯ ಭಾವವು.

೩೬. ಅಯ್ಯ ಲಿಂಗವ ಪೂಜಿಸಿಹೆನೆಂದು ಅಂಗದ ಕುರುಹ ಮರೆದೆ. ಜಂಗಮವ ಪೂಜಿಸಿಹೆನೆಂದು ಪ್ರಾಣದ ಕುರುಹ ಮರೆದೆ. ಪ್ರಸಾದವ ಕೊಂಡಿಹೆನೆಂದು ಪರವ ಮರೆದೆ. ಈ ತ್ರಿವಿಧದ ಭೇದವನು ಶ್ರುತಿ ಸ್ಮೃತಿಗಳರಿಯವು. ಹರಿಹರ ಬ್ರಹ್ಮ ದೇವದಾನವ ಮಾನವರು ಅರಿಯರು. ನಮ್ಮ ಶರಣರೆ ಬಲ್ಲರು. ಇವ ಬಲ್ಲ ಶರಣ ಚನ್ನಮಲ್ಲೇಶ್ವರ ಹೋದ ಹಾದಿಯಲ್ಲದೆ, ಎನಗೆ ಬೇರೊಂದು ಹಾದಿ ಇಲ್ಲ

ವಯ್ಯಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ. ಇದಕ್ಕೆ ಮರ್ತ್ಯಲೋಕದ ಮಹಾ ಗಣಂಗಳೇ ಸಾಕ್ಷಿ.

೩೭. ಶರಣನ ಅಂಗವು ಎಂತಿಪ್ಪುದೆಂದರೆ, ವಾರಿಕಲ್ಲು ನೀರೊಳಗೆ ಬಿದ್ದಂತೆ. ಸಾರ ಒಲಿದು, ಶರಧಿಯು ಕೂಡಿದಂತೆ. ಅರಗಿನ ಬೊಂಬೆಗೆ ಉರಿಯು ಸರವ ಮಾಡಿದಂತೆ. ಪರಿಮಳವ ಕೂಡಿದ ವಾಯುವಿನಂತೆ. ಆಡಂಬರವ ಮಾಡಿ ತೋರಿದ ಆಕಾಶದಂತೆ. ಇದೀಗ ಶರಣರಂಗ. ಇದರಂದವ ತಿಳಿದರೆ ಐಕ್ಯ. ಇದರೊಳು ನಿಶ್ಚಿಂತನಾದರೆ ನಿರವಯವು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೩೮. ಆಕಾಶವನು ಶುಕ್ತಿಯು ಹಾಗೆ ಆಟಗೋಲ ಹಂಗುಂಟೆ? ಏಕ ಮನವ ನಿಲಿಸುವರೆ, ಬೇರೊಂದು ಸಾಕಾರ ಉಂಟೆ? ಬೇಕು ಬೇಡೆಂಬ ವೆರಡಳಿದವಂಗೆ, ಇಹ ಲೋಕದ ಹಂಗುಂಟೆ? ಈ ಚೋಕೆ ನಿಮ್ಮೊಳು ಏಕವಾಗಿಹ ಶರಣಂಗಲ್ಲದೆ, ಲೋಕದ ಮಾನವರಿಗುಂಟೆ? ನಿಮ್ಮ ನೆಲೆಯ ನರಿವುದು ಬಸವ ಪ್ರಿಯ ಕೂಡಲ ಚನ್ನ ಬಸವಣ್ಣಾ.

೩೯. ಎಮ್ಮ ಶರಣರು ಗುರುಸ್ಥಲನಾಸ್ತಿಯಾಯಿತ್ತೆಂಬರು. ಅದೇನು ಕಾರಣವೆಂದರೆ ತಮ್ಮ ಗುಣ ಅವಗುಣವಿಲ್ಲವಾಗಿ. ಲಿಂಗಸ್ಥಲ ನಾಸ್ತಿಯಾಯಿತ್ತೆಂಬರು. ಅಂಗಗುಣವಳಿಯಿತ್ತಾಗಿ. ಜಂಗಮಸ್ಥಲ ನಾಸ್ತಿಯಾಯಿತ್ತೆಂಬರು. ಅದೇನು ಕಾರಣ? ಭಾವ ಬಯಲಾಯಿತ್ತಾಗಿ. ಪ್ರಸಾದಿಸ್ಥಲ ನಾಸ್ತಿಯಾಯಿತ್ತೆಂಬರು. ಪರವು ತಮ್ಮಲ್ಲಿ ನಿಂದ ಕಾರಣ. ಇಂತೀ ಸರ್ವಾವಧಾನಿಗಳೆಲ್ಲರು ನಮ್ಮ ಶರಣರು. ಇಂತು ಸರ್ವಾಚಾರ ಸಂಪನ್ನರೈಯ್ಯಾ ನಮ್ಮ ಶರಣರು. ಇಂತು ಸರ್ವಾಂಗ ಲಿಂಗಿಗಳೈಯ್ಯಾ ನಮ್ಮ ಶರಣರು. ಇಂತಪ್ಪ ಶರಣ ಸನ್ನಿಹಿತ ಚನ್ನಮಲ್ಲೇಶ್ವರನ ಪಾದವ ನಂಬಿದ ಕಾರಣ ನಾ ಹೋದ ಹಾದಿಯನಾರು ಅರಿಯರೈಯ್ಯಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೪೦. ಯೋಗಾಂಗ ಭೋಗಾಂಗ ತ್ಯಾಗಾಂಗ, ಈ ತ್ರಿವಿಧವನು ಮರೆದು, ಭಕ್ತಿಯೋಗದ ಮೇಲೆ ನಿಂದು, ರಾಜಯೋಗದ ಮೇಲೆ ನಿಂದು, ನಡೆದು ನುಡಿದು ತೋರುವರು ನಮ್ಮ ಶರಣರು. ಗುರುಲಿಂಗ ಜಂಗಮವು ಈ ತ್ರಿವಿಧವನು ಸುಖ ದುಃಖ ಚಿಂತೆ ಸಂತೋಷವೆಂಬುವ ಕಳೆದು, ಉತ್ಪತ್ತಿ ಸ್ಥಿತಿ ಲಯವೆಂಬುವ ಸುಟ್ಟು ದೃಶ್ಯ ದೃಶ್ಯನಿಜ

ವೆಂಬ ತ್ರಿಕರಣವ ಏಕವ ಮಾಡಿ, ಪಿಂಡಾಂಡ ಬ್ರಹ್ಮಾಂಡ ಒಂದೆಂಬುದನರಿದು, ಸಂದ ಹರಿದು ನಿಂದ ನಿಜಾನಂದದಲ್ಲಿ ಹಿಂದು ಮುಂದೆಂಬುದನರಿಯದೆ, ನಿಮ್ಮೊಳೊಂದಾದ ಲಿಂಗೈಕ್ಯಂಗೆ ವಂದಿಸಿ ವಂದಿಸಿ ಎನ್ನ ಬಂಧನ ಹರಿದು ನಾನು ಬಟ್ಟಬಯಲಾದೆನಯ್ಯಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೪೧. ನುಡಿದರೇನೈಯ್ಯಾ ನಡೆ ಇಲ್ಲದನ್ನಕ್ಕ? ನಡೆದರೇನೈಯ್ಯಾ ನುಡಿ ಇಲ್ಲದನ್ನಕ್ಕ? ಈ ನಡೆನುಡಿಯರಿದು ಏಕವಾಗಿ ತಾವು ಮೃಡ ಸ್ವರೂಪರಾದ ಶರಣರಡಿಗೆರಗಿ ನಾನು ಬದುಕಿದೆನೈಯ್ಯಾ ಬಸವ ಪ್ರಿಯ ಕೂಡಲಚನ್ನಬಸವಣ್ಣಾ.

೪೨. ಓದಿದರೇನಯ್ಯಾ? ಗಾದೆಯಮಾತಾಯಿತ್ತು. ಹಾಡಿದರೇನಯ್ಯಾ? ಹರಟೆಯ ಕಥೆಯಾಯಿತ್ತು. ನೋಡಿದರೇನೈಯ್ಯಾ? ಭೂತದಂತಾಯಿತ್ತು. ಇದರ ಭೇದಾದಿ ಭೇದವನರಿದು, ಲಿಂಗದಲ್ಲಿ ಸಾಧನೆಯ ಮಾಡುವ ಶರಣರ ಪಾದಕ್ಕೆರಗಿ ನಾನು ಬದುಕಿದೆನು ಕಾಣಾ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೪೩. ಹಾವ ಹಿಡಿವುದ ಹಾವಾಡಿಗ ಬಲ್ಲನಲ್ಲದೆ, ಕಡೆಯಲಿದ್ದ ಜಾವಳಿಗನೆತ್ತ ಬಲ್ಲನು? ನೋವು ಬಂದರೆ ವ್ಯಾಧಿಯಲಿ ನರಳುವಾತ ಬಲ್ಲನಲ್ಲದೆ, ಕಡೆಯಲಿಪ್ಪ ದುರುಳನೆತ್ತ ಬಲ್ಲನು? ದೇವ ನಿಮ್ಮ ಶರಣನು ಬೆರೆದಿಪ್ಪ ಬೇದವ ನೋವುತ್ತ ಬೇವುತ್ತ ಧಾವತಿಗೊಳುತಿಪ್ಪ ಗಾವಿಲರೆತ್ತ ಬಲ್ಲರು ಲಿಂಗೈಕ್ಯರನುವ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ?

## ತಾಮಸ ಜಂಗಮರು.

೪೪. ಜಗದೊಳಗೆ ಹುಟ್ಟಿ ಜಗದ ಹಂಗಿಗರಾಗಿ, ನಾವು ಜಂಗಮ ನಾವು ಭಕ್ತರೆಂಬ ನುಡಿಗೆ ನಾಚರು ನೋಡಾ! ಅಪ್ಪುವಿನ ಘಟವ ಹೊತ್ತುಕೊಂಡು ಅನ್ನಪಾನಂಗಳಿಗೆ ಅನುಸರಿಸಿ ನಡೆವುತ್ತ, ಹೊನ್ನು, ಹೆಣ್ಣು, ಮಣ್ಣು ನೀವವರ ಬಾಗಿಲ ಕಾಯ್ದು ಅಣ್ಣಗಳ ವೇಷಕ್ಕೆ ಶರಣಾರ್ಥಿ. ಅವರ ಆಶಾಪಾಶವ ಕಂಡು, ಹೇಸಿತ್ತೆನ್ನ ಮನವು. ಅದಂತಿ

ರಲಿ, ಅದು ಬ್ರಹ್ಮನ ಹುಟ್ಟು, ವಿಷ್ಣುವಿನ ಸ್ಥಿತಿ, ರುದ್ರನ ಲಯಕ್ಕೊಳಗಾಗಿ ಹೋಯಿತ್ತು. ಅಂತಲ್ಲ ಕೇಳಿರಣ್ಣ. ಜಂಗಮವಾದರೆ, ಜಗದೊಳಗೆ ಹುಟ್ಟಿ, ಜಗದ ಹಂಗ ಹರಿದು, ಹೊನ್ನು, ಹೆಣ್ಣು, ಮಣ್ಣು ಕಣ್ಣಲಿ ನೋಡಿ ಕಾಮಿಸದೆ, ಮನದಲ್ಲಿ ನೆನೆಯದೆ, ಮಾಯವನುಣ್ಣದೆ, ಆಶೆಗೊಳಗಾಗದೆ, ವೇಷವ ಹೊರದೆ, ದೇಶದ ಮನುಜರ ಸುತ್ತಿದ ಪಾಶಕ್ಕೆ ಹೊರಗಾಗಿ ಸುಳಿವ ಜಂಗಮವ ಈಶನೆಂಬೆ ಕಾಣಬೆ. ಆ ಜಂಗಮಕ್ಕೆ ಅರ್ಥ, ಪ್ರಾಣ, ಅಭಿಮಾನವನೊಪ್ಪಿಸಿ ತಪ್ಪದೆ ಒಡೆಯನೆಂದರಿದು, ಮಾಡುವ ಭಕ್ತನ ಎಂತಿಪ್ಪನೆಂದು ಕಾಂಬೆ. ಇದನೆಂತಾದರೂ ಒಪ್ಪುಗೊಳ್ಳ ಎನ್ನ ಬಸವ ಪ್ರಿಯ ಕೂಡಲ ಚನ್ನಸಂಗನ ಬಸವಣ್ಣನಲ್ಲಿ ಶರಣಗಣಂಗಳು.

೪೫ ವೇಷವ ಹೊತ್ತು, ಆಶೆ ರೋಷವ ಬಿಡದೆ, ದೇಶವ ತಿರುಗಿ, ಹೊರವೇಷದ ವಿಭೂತಿ ರುದ್ರಾಕ್ಷಿ ಕಾವಿ ಕಾಷಾಯಾಂಬರವ ಧರಿಸಿ, ಫಲವೇನು? ಕಾಮ ಕೆಡದು, ಕ್ರೋಧ ಬಿಡದು, ಲೋಭ ಹಿಂಗದು, ಮೋಹ ನಿಲ್ಲದು, ಮದ ಹೆರೆಸಾರದು, ಮತ್ಸರ ಬೆಂದು ಹೋಗದು. ಇವೆಲ್ಲ ಸಹಿತ ಜಂಗಮಭಕ್ತರೆಂದು ಸುಳಿವವರ ಕಂಡು ನಾಚಿತ್ತು ಎನ್ನ ಮನ. ಭಕ್ತಜಂಗಮದ ಘನವನೇನೆಂದು ಉಪಮಿಸುವೆ? ರೂಪಿನ ಹಾಗೆ, ನೆಳಲಿನ ಹಾಗೆ, ದೇಹದ ಹಾಗೆ, ಪ್ರಾಣದ ಹಾಗೆ, ಭಾವದ ಹಾಗೆ, ನಿರ್ಭಾವದ ಹಾಗೆ, ಉರಿಯ ಹಾಗೆ, ಕರ್ಪೂರದ ಹಾಗೆ, ಅವಿಯ ಹಾಗೆ, ನೀರ ಹಾಗೆ, ಎರಡೊಂದಾದರೆ ತೆರಹಿಲ್ಲ. ಆ ನಿಲುವಿಂಗೆ ನಮೋ ನಮೋ ಎನುತಿರ್ದೆ ಕಾಣಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೪೬. ಜಂಗಮ ಜಂಗಮವೆಂದು ನುಡಿದು, ಜಗದ ಹಂಗಿಗರಾಗಿ ಇರಲಾಗದು. ಜಗದ ಕರ್ತನ ಕೈಯ್ಯಲ್ಲಿ ಹಿಡಿದುಕೊಂಡು ಜಂಗುಳಿಗಳ ಬಾಗಿಲ ಕಾಯಲಾಗದು. ಜಂಗಮದ ಸುಳುಹು ಎಂತಿರಬೇಕೆಂದರೆ, ತನ್ನ ನಂಬಿದ ಸಜ್ಜನರ ಸದ್ಭಕ್ತರಲ್ಲಿಗೆ ಲಿಂಗವಾಗಿ ಗಮಿಸಿ, ತಾ ಕಂಡ ಲಿಂಗಾಂಗವನು ಅಲ್ಲಿಯೇ ನಿಕ್ಷೇಪಿಸಿ, ತಾ ನಿರ್ಗಮನಿಯಾಗಿ ಸುಳಿಯಬಲ್ಲರೆ, ಜಂಗಮಲಿಂಗವದು. ಇಂತಲ್ಲದೆ ಕಂಡವರ ಕಾಡಿ ಬೇಡಿ ಕೊಟ್ಟರೆ, ಕೊಂಡಾಡಿ ಕೊಡದಿದ್ದಡೆ ಜರಿದು, ತಾಗು ನಿರೋಧಕ್ಕೆ ಗುರಿಯಾಗಿ, ನೋವುತ್ತ ಬೇವುತ್ತ ಧಾವುತಿಗೊಂಬ ಗಾವಿಲರ ಎಂತು ಜಂಗಮವೆಂಬೆ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ?

೪೭ ನಾವು ಜಂಗಮವೆಂಬರು. ತಾವು ಭಕ್ತರೆಂಬರು. ಭಕ್ತ ಜಂಗಮದ ನಿಲುಕಡೆ ಎಂತಿರಬೇಕೆಂದರೆ, ಮೂರು ವಿಡಿದು ಮೂರ ನರಿದಡೆ ಭಕ್ತನೆಂಬೆ. ಮೂರ ಬಿಟ್ಟರೆ, ಮೂರ ಕಂಡರೆ, ಜಂಗಮವೆಂಬೆ. ಈ ಉಭಯವು ಒಂದಾದ ಭೇದವೆಂತೆಂದರೆ, ಭಕ್ತನ ನಡೆ ನುಡಿಯಲ್ಲಿ ಕವಲು ದೋರುತಿರ್ದಡೆ, ಹೀಗಲ್ಲವೆಂದು ಆ ಸ್ಥಲಕ್ಕೆ ತಕ್ಕ ಹಾಗೆ ನಿಲುಕಡೆಯ ತೋರಿ ಕೊಟ್ಟು, ಆತನಲ್ಲಿದ್ದ ಕರ್ಮವು ತನ್ನ ಮುಟ್ಟದಂತೆ, ಅವನ ತಟ್ಟದಂತೆ, ಈ ಉಭಯಕ್ಕೊಡೆಯನಾಗಿ ನಿಂದರೆ, ಜಂಗಮ ಲಿಂಗವೆಂಬೆ. ಆದೆ ಅಯ್ಯಾ ಎಂದರೆ ಕೈಕೊಂಡು, ಮನದಲ್ಲಿ ಪ್ರಪಂಚವಿಲ್ಲದೆ ಆ ಜಂಗಮಲಿಂಗದಲ್ಲಿ ಅಡಗಿದರೆ ಭಕ್ತನೆಂಬೆ. ಇಂತಾದರೆ ಆ ಭಕ್ತ ಜಂಗಮಕ್ಕೆ ನಮೋ ನಮೋ ಎಂಬೆ. ಇಂತಲ್ಲದೆ ಇದ್ದವರ ಎನ್ನತ್ತ ತೋರದಿರಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೪೮. ಪುರಾತರು ಪುರಾತರು ಎಂದು, ಪುರಾಣದೊಳಗಣ ಕಥೆಯನೆ ಕಲಿತುಕೊಂಡು, ಪುರದ ಬೀದಿಯೊಳಗೆ ಹರದರಂತೆ ಮಾತಿನ ಹಸಾರವನಿಕ್ಕಿ ಮಾರುವ ಅಣ್ಣಗಳಿರಾ, ನೀವು ಕೇಳಿರೋ. ಅಂದು ಹೋದವರ ಸುದ್ದಿಯ ನುಡಿದರೆ ಇಂದು ಬಂದರೋ ನಿಮಗೆ ಇಂದು ಬಂದವರ ನರಿಯದನ್ನಕ್ಕ ಅಂದು ಹೋದವರು ಇಂದು ಬಂದವರು ಒಂದೇ ಎಂದರಿದ ಭಕ್ತರ ಆಚರಣೆಯ ತೋರಿ ಬದುಕಿಸಯ್ಯಾ ಬಸವ ಪ್ರಿಯ ಕೂಡಲಚನ್ನಬಸವಣ್ಣಾ.

೪೯. ಅಂತರಂಗದಲ್ಲಿ ಆಸೆ, ಬಹಿರಂಗದಲ್ಲಿ ಕ್ರೋಧ. ಭಾವಕ್ಕೆ ವೇಷ ಪ್ರಾಣಕ್ಕೆ ರೋಷ, ಕಾಮಕ್ಕೆ ಮದ, ಇಂತಿವನಿಂಬಿಟ್ಟು ಕೊಂಡು ನಾವು ಜಂಗಮವೆಂದು ಸುಳಿದರೆ, ಹ್ಯೇಯವಿಲ್ಲದ ಭಕ್ತರು ವೇಷವ ಕಂಡು ಪೂಜೆಯ ಮಾಡಿದರೆ, ಅಶನಕ್ಕೆ ಅನ್ನವನಿಕ್ಕಿದರೆ, ಸೀತಕ್ಕೆ ರಗಟೆಯ ಕೊಟ್ಟರೆ, ಅವರಿಗದು ಸಹಜ. ನಿಮ್ಮ ನೀವು ನೋಡಲಿಲ್ಲವೆ? ನಾವು ದೇವರಾದೆವೆಂದು ವಿಚಾರಿಸಿ ನೋಡಿ ಉಭಯವ ಮೆಟ್ಟಿ ನಿಂದು ಅಭವನೆಂಬ ಹೆಸರಿಗೆ ಸಂದವರಿಗೆ ಸುಲಭದಿಂದ ಜಗವೆಲ್ಲವು ನಮೋ ನಮೋ ಎಂಬುದು. ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ ಈ ಉಭಯದ ಭೇದವ ನೀವೆ ಬಲ್ಲಿರಿ.

೫೦. ನುಡಿದ ನುಡಿಗೆ ನಡೆ ಇಲ್ಲದಿದ್ದರೆ ಮೃಡನ ಶರಣರು ಕೆಡೆ ನುಡಿದಲ್ಲದೆ ಮಾಣರು. ಎಮ್ಮ ಶರಣರು ಮತ್ತೆ ಹೊಡೆಗೆಡೆದು ಎನ್ನ

ನುಡಿದು, ಹೊಡೆದು, ರಕ್ಷಿಸಿದಿರಲ್ಲ. ಎನ್ನ ಒಡೆಯರು ನೀವಹುದೆಂದು ಬಿಡದೆ ಅವರ ಬೇಡಿಕೊಂಬೆ. ಇದೀಗ ನಮ್ಮ ಶರಣರ ನಡೆನುಡಿ. ಅದಂತಿರಲಿ. ಅದಕೆ ನಮೋ ನಮೋ ಎಂಬೆ. ಈ ಪೊಡವಿಯೊಳು ಹುಟ್ಟಿದ ಮನುಜರೆಲ್ಲರು ಒಡೆಯರೆಂದು ಪೂಜೆಯ ಮಾಡಿ, ತುಡುಗುಣಿ ನಾಯಿಯಂತೆ ಒಕ್ಕುದ ಮಿಕ್ಕುದ ನೆಕ್ಕಿ, ತಮ್ಮ ಇಚ್ಛೆಗೆ ನುಡಿದರೆ ಒಳ್ಳಿದನೆಂಬರು. ಸತ್ಯವ ನುಡಿದರೆ, ಸಾಯುಲವನೆಲ್ಲಿಯ ಶರಣ? ಇವನೆಲ್ಲಿಯ ಜಂಗಮ? ಇವರ ಕೂಡಿದ ಮನೆ ಹಾಳೆಂದು, ಕಂಡ ಕಂಡವರ ಕೂಡ ಹೇಳಿಯಾಡುವ, ಈ ಕಾಳು ಮನುಜರನು, ಲಿಂಗ ಜಂಗಮವೆಂದು ನುಡಿದು ಕೂಡಿಕೊಂಡು ಹೋದರೆ, ತನ್ನ ತನ್ನ ಪದಾರ್ಥವ ಹಿಡಿದರೆ, ಒಡೆಯನೇ ಬದುಕಿದೆ, ತ್ರಾಹಿ ಎಂಬ ಮೂಢ ಶರಣರನು ಈ ಅಡದು ಕಟ್ಟಿಕೊಂಡಿರುವ, ಹಡಿಕಿ ಮನುಜರನು ಸರಿಗಂಡಡೆ, ನಾಯಕ ನರಕದಲ್ಲಿಕ್ಕುವ ನಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೫೧. ಅಯ್ಯ ನಿಮ್ಮ ಶರಣರು ವೇಷವ ತೋರಿ ಗ್ರಾಸವ ಬೇಡುವರಲ್ಲ. ದೇಶವ ತಿರುಗಿ ಕಲಿತ ಮಾತ ನುಡಿವರಲ್ಲ. ಲೇಸಾಗಿ ನುಡಿವರು. ಆಶೆ ಇಲ್ಲದೆ ನಡೆವರು. ರೋಷವಿಲ್ಲದೆ ನುಡಿವರು. ಹರುಷವಿಲ್ಲದೆ ಕೇಳುವರು. ವಿರಸವಿಲ್ಲದೆ ಮುಟ್ಟುವರು. ಸರಸವಿದ್ದಲ್ಲಿಯೇ ವಾಸಿಸುವರು. ಇಂತಪ್ಪ ಬೆರಸು ಬೇರಿಲ್ಲದ ನಿಜೈಕ್ಯಂಗೆ ನಮೋ ನಮೋ ಎಂಬೆ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ. ಇಂತಪ್ಪ ಶರಣರ ನೆಲೆಯ ನಾನೆತ್ತ ಬಲ್ಲೆನಯ್ಯ?

೫೨. ಅಯ್ಯ ಧರೆಯ ಮೇಲೆ ಹುಟ್ಟಿದವರೆಲ್ಲ ವಾಕ್ಯಜಾಲವ ಕಲಿತುಕೊಂಡು, ಅನುಭಾವವ ಬಲ್ಲೆನೆಂದು ನುಡಿವರು. ಅನುಭಾವವೆಂತಿಪ್ಪುದೆಂದರಿಯರು. ತೂರ್ಯಾ ತೂರ್ಯ ನುಡಿಯ ಪರಾತ್ಪರದ ನುಡಿ ಎಂದು ಬಿದಶರಣರ ವಾಕ್ಯವ ಕಲಿತುಕೊಂಡು ನುಡಿದಾಡುವರು. ತೂರ್ಯಾ ತೂರ್ಯವೆಂಬುದು ನಾಮರೂಪಿಗುಂಟೆ? ಪರಾತ್ಪರವೆಂಬ ವಾಕ್ಯ ಮನಸಿಂಗುಂಟೆ? ಹೆಸರಿಗೆ ಬಾರದ ಘನವೆಂದು ನೀವೆ ಹೇಳುತಿರ್ದು ಮತ್ತೆ ಹೆಸರಿಗೆ ತಂದು ನುಡಿದಾಡುವರು. ಇದು ಹುಸಿಯೋ ದಿಟವೋ? ಇದು ಹಸುಮಕ್ಕಳಾಟ. ಸಸಿನೆ ನೆನೆದು ಬದುಕಿದೆ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

193 ೫೩. ಸುಖಾನುಭಾವ ಲಿಂಗಾನುಭಾವವೆಂದು ನುಡಿದಾಡುತಿಪ್ಪಿರಿ. ಲಿಂಗದ ನೆಲೆಯನಾರು ಬಲ್ಲರು? ಆರು ಲಿಂಗ ಮೂರುಲಿಂಗ ಮೂವತ್ತಾರು ಲಿಂಗ, ಬೇರೆ ಇನ್ನೂರ ಹದಿನಾರು ಲಿಂಗವೆಂದು ಎಮ್ಮ ಶರಣರು ಸಾರಿ ಹೋದ ವಾಕ್ಯವನೆ ಮಾಡುತಿಪ್ಪರಲ್ಲದೆ, ಬೇರೆ ಇಪ್ಪತ್ತೊಂದು ಮಹಾ ಘನಲಿಂಗವನಾರು ಅರಿಯರು ನಿಮ್ಮ ಶರಣರಲ್ಲದೆ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

194 ೫೪. ಓದಲೇಕೊ ಲಿಂಗದ ಭೇದಾದಿ ಭೇದವನರಿದವಂಗೆ? ಹಾಡಲೇಕೊ ಹರನ ಕಂಡಾತಂಗೆ? ಬೇಡಿ ಕಾಡಲೇಕೊ ನೋಡುವಕಂಗಳಿಗೆ ತೃಪ್ತಿಯಾದವಂಗೆ? ನೀಡಿ ಮಾಡಲೇಕೊ ಉಡುವಾತನು ಉಂಬಾತನು ಏಕವಾದ ಮೇಲೆ? ಮುಂದು ನೋಡುವರಾರುಂಟು ಹೇಳಾ ಬಸವಪ್ರಿಯ ಕೂಡಲಚನ್ನಬಸವಣ್ಣಾ?

195 ೫೫. ಹೆಸರಿಗೆ ಬಾರದ ಘನವ ಹೆಸರಿಗೆ ತಂದು, ನುಡಿದಾಡುವ ಶಿಶುವಾಯರ ಮಾತ ಕೇಳಲಾಗದು. ಅದೇನು ಕಾರಣವೆಂದರೆ, ಈ ಪಶುಗಳೇನು ಬಲ್ಲರು? ಬಸವನೆಂತಿಪ್ಪನೆಂಬುದ ವಸುಧೆಯ ಮನುಜರೆತ್ತಬಲ್ಲರು? ಇದು ಹುಸಿ ಹುಸಿ. ನಿಮ್ಮಾಣೆ ನಿಮ್ಮ ಪ್ರಮಥರಾಣೆ. ಆ ಬಸವನ ನೆಲೆಯ ಬಸವಾದಿ ಪ್ರಮಥರೆ ಬಲ್ಲರಲ್ಲದೆ ಈ ಹುಸಿಮಾಯೆಗೊಳಗಾದ ಸೂತಕರೆತ್ತಬಲ್ಲರು ನಿಮ್ಮ ಶರಣರ ಸುದ್ದಿಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ?

196 ೫೬. ರಾಗವ ಹಾಡಿದವರೆಲ್ಲರು ರೋಗ ರುಜಿನಕ್ಕೆ ಒಳಗಾಗಿ ಸತ್ತುಹೋದರು. ರಚನೆ ಮಾಡಿದವರೆಲ್ಲ ಸುಚಿತ್ತ ಕೆಟ್ಟು ನಿಂದೆಕುಂದೆಗೊಳಗಾಗಿ ಸತ್ತುಹೋದರು. ರಾಗ ರಚನೆಯ ಬಿಟ್ಟು, ಮೂಗ ಮುಗ್ಧರಾಗಿಪ್ಪವರ ನಾನಾರನು ಕಾಣೆ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

197 ೫೭. ಹಲವಂದ ಚಂದದಲ್ಲಿ ಹಾಡಿದರೇನೈಯ್ಯ ಲಿಂಗದ ನೆಲೆಯನರಿಯದನ್ನಕ್ಕ? ಕಲಿಯಾಗಿ ವೈರಾಗ್ಯ ತಲೆಗೇರಿ ಹರಿದಾಡಿದರೇನೈಯ್ಯ? ಮಾಯೆಯ ಬಲೆಯ ನುಸುಳಿಸಿದಲ್ಲದೆ ನಿಮ್ಮ ನೆಲೆಯ ಕಾಣಬಾರದು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

198 ೫೮. ಶ್ರೀ ಜಂಗಮಲಿಂಗ ಎಂತಿಹನೆಂದಡೆ, ಇಂತೀ ಅಜಾಂಡ ಬ್ರಹ್ಮಾಂಡವು ತನ್ನ ಕುಕ್ಷಿಯೊಳು ನಿಕ್ಷೇಪವಾಗಿ, ತಾ ನಿರ್ಗಮನಿಯಾಗಿ ಲಿಂಗರೂಪಾಗಿ ಸುಳಿಯಬಲ್ಲರೆ, ಜಂಗಮ ಲಿಂಗವೆಂಬೆ. ಅದಕ್ಕೆ ನಮೋ

ನವೋ. ಆ ನಿಲವಿಂಗೆ ಭವವಿಲ್ಲ ಬಂಧನವಿಲ್ಲ. ಇಂತಲ್ಲದೆ ವೇಷವ ಹೊತ್ತು ಹೊರವೇಷದ ವಿಭೂತಿ ರುದ್ರಾಕ್ಷಿಯ ತೊಟ್ಟು, ಕಾಸುವಿಗೆ ಕೈಯ್ಯಾಂತು ವೇಶಿದಾಶಿಯರ ಬಾಗಿಲ ಕಾಯ್ದು, ಲೋಕದೊಳಗೆ ಗಾಸಿಯಾಗಿ ಜಂಗಮವೇಷಕ್ಕೆಲ್ಲ ಭಂಗವ ಹೊರಿಸಿ, ಕಣ್ಣುಗಾಣದೆ ಜಾರಿಬಿದ್ದು, ದೂರಿಂಗೆ ಬಂದು, ಈ ಮೂರರಕ್ಕೊಳಗಾಗಿ, ಪಾರಾಗಿ ಹೋಗುವರ ವೇಷಕ್ಕೆ ಶರಣಾರ್ಥಿ. ಅವರು ಸುತ್ತಿರ್ದ ಪಾಶವ ಕಂಡು ಹೇಸಿತ್ತೆನ್ನ ಮನ. ನಿಮ್ಮಾಣೆ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

199 ೫೯. ಹುಸಿಯ ಹಟ್ಟಿಯಲಿಪ್ಪ ಸೊನಗ ಹಾಕಿದ ಹಿಟ್ಟಿಗೆ ಬೊಗಳುವಂತೆ, ಆರಾದರು ಕೊಟ್ಟುದೊಂದು ಮಾಟುಹಾಸಿಗೆ, ಅವರಿಚ್ಚೆಗೆ ಬೊಗಳುವ ಖೊಟ್ಟಿಗಳ ಮಾತ ಕೇಳಲಾಗದು. ಅದೇನು ಕಾರಣವೆಂದರೆ, ಮುಟ್ಟಿ ಅವರ ಸಂಗವ ಮಾಡುವ ಮನುಜಗೆ, ಕರ್ಮ ಕಟ್ಟಿಹುದಲ್ಲದೆ ಮಾಣದು ನೋಡಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

200 ೬೦. ಮರ್ತ್ಯಲೋಕದ ಮಹಾ ಗಣಂಗಳು ನೀವು ಕೇಳಿರೈಯ್ಯಾ. ಅದೇನು ಕಾರಣವೆಂದರೆ, ಗುರುವೆನ್ನದು, ಲಿಂಗವೆನ್ನದು, ಜಂಗಮವೆನ್ನದು, ಪ್ರಸಾದವೆನ್ನದು, ಈ ಚತುರ್ವಿಧವು ಎನ್ನದಾದ ಕಾರಣದಿಂದ ಇದರ ಹಾನಿವೃದ್ಧಿ ಎನ್ನದಾದ ಕಾರಣದಿಂದ, ಕಂಡುದ ನುಡಿವೆನಲ್ಲದೆ, ಜಗದಂತೆ ಮಿಥ್ಯಾಳಾಪವಾಗಿ ನುಡಿವನಲ್ಲ. ಮುಂದೆ ಸತ್ತುಗಿತ್ತು ಹುಟ್ಟುವನಲ್ಲ. ಮುಂದೆ ಹೊತ್ತುದ ಹುಸಿಮಾಡಿ, ಮತ್ತೊಂದು ದಿಟ ಮಾಡುವನಲ್ಲ. ಅದನೇನು ಕಂಡವರು ಕಂಡಂತೆ ನುಡಿವರು, ಉಂಡವರು ಉಂಡಂತೆ ತೇಗುವರು, ಎಂಬುದ ನೀವು ಅರಿದುಕೊಳ್ಳಿ. ಪಂಚಾಚಾರಕ್ಕೊಳಗಾದ ಶಿವಭಕ್ತರು ಎಮ್ಮಲ್ಲಿ ಹಿಂಚುಮುಂಚು ನೋಡಬೇಡ. ನಿಮ್ಮ ಪ್ರಪಂಚನೆಯ ಹರಿದುಕೊಂಡು, ನಿಮ್ಮಲ್ಲಿರ್ದ ಭವಿಗಳನೆ ಭಕ್ತರ ಮಾಡಿ ವಿವರಿಸಿ ನೋಡಲಾಗಿ, ನಾ ನೀನೆಂಬುವದಕ್ಕಿಲ್ಲ. ಆ ಉಭಯದ ಗೊತ್ತ ಮೆಟ್ಟಲಾಗಿ, ಭಕ್ತಜಂಗಮ ಒಂದೆ ಅಂಗ. ಅದಕ್ಕೆ ನಿಶ್ಚಿಂತ ನಿಜೈಕ್ಯವು. ಆ ನಿಲುವಿಂಗೆ ನಮೋನಮೋ ಎನುತಿರ್ದೆ ಬಸವ ಪ್ರಿಯ ಕೂಡಲ ಚನ್ನಸಂಗನಬಸವಣ್ಣಾ.

201 ೬೧. ಹಂಚುಕಂಥೆ, ಅತೀತ, ವಿರಕ್ತರು, ಸ್ಥಲದವರು, ಎಂದು ನುಡಿದಾಡುವರು. ಜಂಗಮ ಒಂದೆ, ಲಿಂಗ ಒಂದೆ, ಗುರು ಒಂದೆ. ಎನ್ನ

ಪರಮಾರಾಧ್ಯರು ಬಸವಣ್ಣಾ ತನ್ನ ಲೀಲೆಯಿಂದ ಒಂದ ಮೂರು ಮಾಡಿ ತೋರಿದ, ಮೂರನೊಂದು ಮಾಡಿತೋರಿದ. ಆ ಒಂದು ನಾಮರೂಪಿಗಿಲ್ಲ. ಇದರಂದವ ಬಲ್ಲ ಶರಣರು ತಿಳಿದು ನೋಡಿ. ಇದನರಿಯದೆ ಸ್ಥಲನೆಲೆಯುಂಟೆಂದು, ಹೊಲಬುಗಾಣದೆ ಹೋರಾಡಿ, ಭವಭಾರಿಗಳಾಗಬೇಡಾ! ಭವ ವಿರಹಿತ ನಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣಂಗೆ. ಬಯಕೆ ಸವೆದು ಭಾವ ಬಯಲಾಗಿ ನಮೋನಮೋ ಎಂದು ಬದುಕಿದೆ. ನೀವು ಬದುಕಿರೋ.

೨೦೨

೬೨. ಗುರು ಗುರು ಎಂದು ನುಡಿದಾಡುತಿಪ್ಪರು. ಆ ಗುರು ನೆಲೆ ಎಂತಿಪ್ಪುದೆಂದರಿಯರು. ಆ ಗುರು ನೆಲೆ ಎಂತೆಂದರೆ, ಪರಮ ಸುಖ ಪರಿಣಾಮ ತಲೆಗೇರಿ ನೆಲೆಗೊಂಬುದೆ ಗುರು ನೆಲೆ. ಪರ ಸಮಾಧಿಯೊಳಗೆ ಚರಿಸುವ ಗುರು ಲಿಂಗ ಜಂಗಮ ಪಾದೋದಕ ಪ್ರಸಾದವನರಿದಿಪ್ಪುದೆ ಗುರು ನೆಲೆ. ಇದನರಿಯದೆ ಮನಕೆ ಬಂದಂತೆ ಕಾಯವೇ ಗುರು ಪ್ರಾಣವೇ ಲಿಂಗ ಭಾವವೇ ಜಂಗಮವೆಂದು ನುಡಿದಾಡುವ ಗಾವಿಲರ ಮಾತ ಕೇಳಲಾಗದು ಎಂದಾತ ನಮ್ಮ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

# ಐಕ್ಯಸ್ಥಲ.

೧. ಈ ಮಹಾಘನ ನೆಲೆಗೊಂಡಿಪ್ಪ ಶರಣನ ನೆಲೆ ಎಂತಿಪ್ಪುದೆಂದಡೆ, ಪೃಥ್ವಿ ಪೃಥ್ವಿಯನೆ ಕೂಡಿ, ಅಪ್ಪು ಅಪ್ಪುವನೆ ಕೂಡಿ, ಅಗ್ನಿ ಅಗ್ನಿಯನೆ ಕೂಡಿ, ವಾಯು ವಾಯುವನೆ ಕೂಡಿ, ಆಕಾಶ ಆಕಾಶವನೆ ಕೂಡಿ, ಪಂಚತತ್ವವೆಲ್ಲ ಹಂಚು ಹರಿಯಾಗಿ, ಹಿಂಚು ಮುಂಚು ಮಾಡುವ ಮನದ ಸಂಚಲವಡಗಿ, ಕರ್ಮದ ಗೊಂಚಲು ನಿಂದ ನಿಶ್ಚಿಂತ ನಿಜೈಕ್ಯಂಗೆ ನಮೋ ನಮೋ ಎನುತಿರ್ದೆ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೨. ಬಟ್ಟಬಯಲ ತುಟ್ಟತುದಿಯ ನಟ್ಟನಡುವಣ, ಕಟ್ಟ ಕಡೆಯ ಮೆಟ್ಟಿ ನೋಡಿ ಉಟ್ಟುದನಳಿದು ಬಟ್ಟಬತ್ತಲೆಯಾದೆ. ಇನ್ನು ಬಿಟ್ಟುದ ಹಿಡಿಯಬಾರದು. ಹಿಡಿದುದ ಬಿಡಬಾರದು. ಇದಕ್ಕೆ ಒಡೆಯನಾವನೆಂದು ನೋಡಲಾಗಿ ನೋಡಿಹೆನೆಂದರೆ ನೋಟಕ್ಕಿಲ್ಲ. ಕೂಡಿಹೆನೆಂದರೆ ಕೂಟಕ್ಕಿಲ್ಲ. ಹಿಡಿದಿಹೆನೆಂದರೆ ಹಿಡಿಹಿಗಿಲ್ಲ. ಪೂಜಿಸಿಹೆನೆಂದರೆ ಪೂಜೆಗಿಲ್ಲ. ಇದನೆಲ್ಲಗೆ ಓಜೆಯಿಂದ ನೋಡಲಾಗಿ, ನೋಡುವ ನೋಟವು ತಾನೆ, ಕೂಡುವ ಕೂಟವು ತಾನೆ, ಹಿಡಿವುದು ಆ ಹಿಡಿಗೆ ಸಿಕ್ಕಿಕೊಂಬುದು ತಾನೆ, ಪೂಜಿಸುವುದು ಪೂಜೆಗೊಂಬುದು ತಾನೆ. ನಾನಿದರ ಭೇದವನರಿದು ಆದಿ ಅನಾದಿಯನು ಏಕವ ಮಾಡಿ ನಾನಲ್ಲೇ ಐಕ್ಯನಾದೆನಯ್ಯ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೩. ಅಯ್ಯ ಎನಗೆ ಬಸವಪ್ರಿಯನೆಂದರು ನೀನೆ, ಕೂಡಲ ಚನ್ನಬಸವಣ್ಣನೆಂದರೂ ನೀನೆ, ಗುರುವೆಂದರೂ ನೀನೆ ಲಿಂಗವೆಂದರೂ ನೀನೆ, ಜಂಗಮವೆಂದರೂ ನೀನೆ, ಪ್ರಸಾದವೆಂದರೂ ನೀನೆ. ಅದೇನು ಕಾರಣವೆಂದರೆ, ನೀ ಮಾಡಲಾಗಿ ಅವೆಲ್ಲವು ನಾಮರೂಪಿಗೆ ಬಂದವು. ಅದು ಕಾರಣ ನಾನೆಂದರೆ ಅಂಗ, ನೀನೆಂದರೆ ಪ್ರಾಣ. ಈ ಉಭಯವನು ನೀವೆ ಅರುಹಿದಿರಾಗಿ, ಇನ್ನು ಭಿನ್ನವಿಟ್ಟು ನೋಡಿದೆನಾದರೆ, ಚನ್ನಮಲ್ಲೇಶ್ವರ ನೀವೆ ಬಲ್ಲಿರಿ. ಎಮ್ಮ ಬಸವಪ್ರಿಯ ಕೂಡಲ ಚನ್ನಬಸವಣ್ಣನಲ್ಲಿ ಏಕವಾದ ಕಾರಣ ಎನಗೆ ಭವವಿಲ್ಲ ಬಂಧನವಿಲ್ಲ. ಅದಕ್ಕೆ ನೀವೆ ಸಾಕ್ಷಿ.

೪. ವೇದ ಪುರಾಣಾಗಮಶಾಸ್ತ್ರ ನಾದದ ಸೊಮ್ಮೆಂಬಿರಿ. ಆ ನಾದದಿಂದ ಆಕಾಶ ಪುಟ್ಟಿತ್ತು. ಆಕಾಶದಿಂದ ವಾಯು ಪುಟ್ಟಿತ್ತು. ವಾಯುವಿನಿಂದ ಅಗ್ನಿ ಪುಟ್ಟಿತ್ತು. ಅಗ್ನಿಯಿಂದ ಅಪ್ಪು ಪುಟ್ಟಿತ್ತು. ಅಪ್ಪುವಿನಿಂದ ಪೃಥ್ವಿ ಪುಟ್ಟಿತ್ತು. ಪೃಥ್ವಿಯಿಂದ ಇರುವೆ ಕಡೆಯಾಗಿ ಎಂಬತ್ತು ನಾಲ್ಕುಲಕ್ಷ ಜೀವಂಗಳು ಪುಟ್ಟಿದವು. ಅದೇನು ಕಾರಣವೆಂದಡೆ, ರಸಗಂಧದಿಂದ ರೂಪಾದವು. ಅಗ್ನಿ ಕಳೆಯಾಯಿತ್ತು. ವಾಯು ಚೈತನ್ಯವಾಯಿತ್ತು. ಆಕಾಶ ನಾದವಾಯಿತ್ತು. ಇಂತಿದರೊಳಗೆ ನಮ್ಮ ದೇವ ಇವರೊಂದರಂತೆಯು ಅಲ್ಲ. ಪಂಚತತ್ವವನಿಳುಹಿ, ಆತ್ಮ ತತ್ವ ಅನಾತ್ಮನೊಳುಕೂಡಿ, ಅನಾಮಯ ಲಿಂಗ ಕಾಣಬಹುದು. ಅನಾಮಯ ಲಿಂಗವ ಕಂಡ ಬಳಿಕ ಅದೇ ಲಿಂಗೈಕ್ಯವು. ಇದು ತಪ್ಪದು ಕೂಡಲ ಚನ್ನಬಸವಣ್ಣಾ.

೫. ಘನವೆಂದರೆ ತನುವಿನೊಳಗಾಯಿತ್ತು. ತನುವೆಂದರೆ ಮನದೊಳಗಾಯಿತ್ತು. ಮನವೆಂದರೆ ಮಾಯೆಯೊಳಗಾಯಿತ್ತು. ಮಾಯೆಯೆಂದರೆ ಭಾವದೊಳಗಾಯಿತ್ತು. ಭಾವವೆಂದಡೆ ನಿರ್ಭಾವವಾಯಿತ್ತು. ನಿರ್ಭಾವವೆಂದರೆ ಭಕ್ತನಾಯಿತ್ತು. ಭಕ್ತನೆಂದರೆ ವಿರಕ್ತನಾದ. ವಿರಕ್ತನೆಂದರೆ ಭಕ್ತನಾದ. ಗುರುವೆಂದರೆ ಶಿಷ್ಯನಾದ. ಶಿಷ್ಯನೆಂದರೆ ಗುರುವಾದ. ಇಂತಿದೀಗ ಐಕ್ಯಸ್ಥಲವು. ಇದನರಿಯದೆ ತಮ್ಮ ಪುದಿದ ಸಂಸಾರಕ್ಕೊಳಗಾಗಿ ತುದಿ ಮೊದಲು ಗಾಣದೆ, ಸದಮದವಹ ಸಂಸಾರ ವಿಷಯದೊಳಗೆ ಮುಳುಗಿದವರೆತ್ತ ಬಲ್ಲರೊ, ನಿಮ್ಮ ಶರಣರ ಸುದ್ದಿಯ ಬಸವಪ್ರಿಯ ಕೂಡಲ ಚನ್ನಬಸವಣ್ಣಾ?

೬. ಮುಟ್ಟಿಯೂ ಮುಟ್ಟಬಾರದ ಠಾವಿನಲ್ಲಿ, ಹುಟ್ಟಿಯೂ ಹುಟ್ಟದದೊಂದು ಶಿಶುವಾಯಿತ್ತು. ಅವ ದಿಟ್ಟನಲ್ಲ. ಧೀರ ವೀರ ಕೊಟ್ಟದವನಲ್ಲ. ಕೊಟ್ಟದ ಬೇಡ. ಅವನ ಮುಟ್ಟಿ ಒಡನೆರೆದವರು ನಿತ್ಯ ನಿತ್ಯ ಲಿಂಗೈಕ್ಯರು ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೭. ಊರಿಯೊಳಗೆ ಉರಿ ಹುಟ್ಟಿ ಶರಧಿಯಾಪೋಷಣವಾಯಿತ್ತು. ಧರೆ ನಿಬ್ಬೆರಗಾಯಿತ್ತು. ಶರಧಿ ಬತ್ತಿತ್ತು. ಉರಿ ನಿಂದಿತ್ತು. ವಾಯು ನಾಶವಾಯಿತ್ತು. ಆಕಾಶ ಬಯಲಾಯಿತ್ತು. ಇದು ಕಾರಣ, ಆತ್ಮ ಕರ್ಪುರದ ಗಿರಿಯಂತೆ ನಿಂದಿತ್ತು. ಆತ್ಮ ಪರಂಜ್ಯೋತಿಯಂತೆ ಪ್ರಜ್ವಲಿಸಿತ್ತು.

ಇದರ ಭೇದವನರಿದು ಮೂರು ಮುಟ್ಟಿದೆ, ಆರು ತಟ್ಟಿದೆ, ಬೇರೆ ಒಂದರ ಮೇಲೆ ನಿಂದು, ಸಂದಿಗೊಂದಿಯನೆಲ್ಲವ ಶೋಧಿಸಿ, ಬೆಂದ ನುಲಿಯು ಹಾಗೆ ಅಂದವಾಗಿಪ್ಪುದನೊಂದು ನೋಡುವರಿ ಸೇವೆಗೆ ಬಾರದು. ಇದ ರಂದವ ಲಿಂಗೈಕ್ಯರೇ ಬಲ್ಲರಲ್ಲದೆ ಸಂದೇಹ ಭ್ರಮೆಯೊಳು ಸಿಕ್ಕಿ ನೊಂದು ಬೆಂದು ಸಾವ ಹಂದಿಗಳೆತ್ತ ಬಲ್ಲರು, ಬಸವಪ್ರಿಯ ಕೂಡಲ ಚನ್ನಬಸವಣ್ಣಾ?

೧೦೮. ಬ್ರಹ್ಮಾಂಡದ ಬಯಲ ಪಸರಿಸಿ ಹಿಡಿವರಿ ಬಯಲಾವು ದುಂಟು ಹೇಳಿರಣ್ಣಾ? ಕಂಗಳ ಮುಂದಣ ಕತ್ತಲೆ ಹರಿವುದಕ್ಕೆ ಜ್ಯೋತಿ ಆವುದುಂಟು ಹೇಳಿರಣ್ಣಾ? ಇಂಗಿತವನರಿದ ಬಳಿಕ ತ್ರಿವಿಧಕ್ಕೆ ತ್ರಿವಿಧ ವನಿತ್ತು ತ್ರಿವಿಧವನರಿದು, ತ್ರಿವಿಧವ ಮರೆದು ಕಲಿಯುಗದ ಕತ್ತಲೆಯ ದಾಂಟಿ, ತನ್ನ ಭವವ ದಾಂಟಿದವಂಗೆ, ಬ್ರಹ್ಮಾಂಡದ ಬಯಲು ಕೈವ ಶವಾಯಿತ್ತು. ಕಂಗಳ ಮುಂದಣ ಕತ್ತಲೆ ಹರಿದು ಹೋಯಿತ್ತು. ನಿಮ್ಮ ಸಂಗ ಸುಖದೊಳಗಿಪ್ಪ ಲಿಂಗೈಕ್ಯಂಗೆ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೧೦೯. ಧ್ಯಾನದಲ್ಲಿ ಕುಳ್ಳಿರ್ದು, ಜ್ಞಾನದಲ್ಲಿ ನೋಡಿ, ಮೌನ ಮುಗ್ಧವ ಮಾಡಿ, ಸ್ವಾನುಭಾವದಿಂದರಿದು, ಮತ್ತೇನೇನು ಹೊದ್ದಲೀ ಯ್ಯದೆ ತಾನು ತಾನಾಗಿ ಜ್ಞಾನಕ್ಕತೀತನಾಗಿ ಧ್ಯಾನ ಧಾರಣ ಸಮಾ ಧಿಯ ಮೆಟ್ಟಿ ನಿಂದ ನಿಜಲಿಂಗೈಕ್ಯಂಗೆ ನಮೋ ನಮೋ ಎಂಬೆ. ಇಂದೆನ್ನ ಭವ ನಷ್ಟವಾಗಿ ಹೋದವು. ಕಾಣಾ ಬಸವ ಪ್ರಿಯ ಕೂಡಲಚನ್ನಬಸವಣ್ಣಾ.



# ನಿರವಯ.

212 ೧. ಈ ಬಚ್ಚ ಬರಿಯ ಬಯಲ ಕಂಡಿಹೆನೆಂದರೆ, ಕಾಣಬಾರದು. ಕೇಳಿಹೆನೆಂದರೆ ಕೇಳಬಾರದು. ಹೇಳಿಹೆನೆಂದರೆ ಹೇಳಬಾರದು. ಇವ ಮೂರರ ಕಾಳಿಕೆಯ ಕಳೆದು ಈ ಹನ್ನೆರಡ ಜಾಣಿಯಲ್ಲಿ ದಾಂಟಿ ಒಂದರ ಮೇಲೆ ನಿಂದು, ಅಂದವಳಿಯದೆ, ಬಿಂದು ತುಳುಕದೆ, ಅಂದಂದಿನ ಹೊಸ ಪೂಜೆಯ ನೋಡಿ, ಕಣ್ದೆರೆದು ಕರಗಿ ಒಂದಾದ ಶರಣರಪ್ಪಂದ ಚರಣವ ತೋರಿ ಬದುಕಿಸಯ್ಯ ಎನ್ನ ಬಸವ ಪ್ರಿಯ ಕೂಡಲ ಚನ್ನ ಬಸವಣ್ಣಾ.

213 ೨. ಬಯಲಿಂದಲೆ ಹುಟ್ಟಿ, ಬಯಲಿಂದಲೆ ಬೆಳೆದು, ಬಯಲಾಮೃತವನೆ ಉಂಡು, ಬಯಲನೆ ಉಟ್ಟು ಬಯಲನೆ ತೊಟ್ಟು ಬಯಲು ಬಯಲೊಳಗೆ ಬೆರೆದ ಭೇದವ, ಈ ಭುವನದೊಳಗೆ ಇಪ್ಪ ಭವಭಾರಿಗಳು ಎತ್ತಬಲ್ಲರು, ಭವವಿರಹಿತ ಶರಣರ ನಿಲವ, ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ?

214 ೩. ಮರೆದರೆ ಮಾಯೆ. ಅರಿದರೆ ಮಾಯೆ ಇಲ್ಲ. ಅರಿವು ಮರವೆ ಎರಡ ನೂಂಕಿ ನಿಂದರೆ, ಮುಂದೆ ಕಣ್ಣಾ ತೆರಪಾಗಿ ತೋರುವ ಬಯಲೇ ಲಿಂಗದ ಬೆಳಗು. ಆ ಲಿಂಗದ ಬೆಳಗೆ ನೆಮ್ಮುಗೆಯಾದರೆ ಲಿಂಗೈಕ್ಯವು. ಆ ಲಿಂಗೈಕ್ಯವು ನಿಜವಾದರೆ ನಿಶ್ಚಿಂತವು. ನಿಶ್ಚಿಂತದಲ್ಲಿ ಲೀಯ್ಯವಾದರೆ, ನಿರವಯವು. ಇದೀಗ ನಮ್ಮ ಮುನ್ನಿನ ಆದ್ಯರ ನಡೆನುಡಿ. ಇದನರಿಯದೆ ವೇದ ಪುರಾಣ ಶಾಸ್ತ್ರ ಆಗಮ ಇವನೊಂದನು ಓದಿದರೆ ಹಾಡಿದರೆ ಕೇಳಿದರೆ ಕಾಯ ಮಾಯುವೆಂದರು ನಮ್ಮ ಬಸವ ಪ್ರಿಯ ಕೂಡಲ ಚನ್ನ ಬಸವಣ್ಣಾ.

215 ೪. ವ್ಯಸನವುಳ್ಳನ್ನಕ್ಕ ಪ್ರಸಾದಿಯಲ್ಲ. ವಿಷಯವುಳ್ಳನ್ನಕ್ಕ ಪಾದೋದಕ ಸಂಬಂಧಿಯಲ್ಲ. ಭಾವವುಳ್ಳನ್ನಕ್ಕ ಭವವಿರಹಿತನಲ್ಲ. ಬಯಕೆಯುಳ್ಳನ್ನಕ್ಕ ಐಕ್ಯನಲ್ಲ. ಇಂತೀ ಐಕ್ಯಸ್ಥಲವೆಲ್ಲರಿಗೆಲ್ಲಿಯದೊ? ಐಕ್ಯನಾದರೆ ಅನ್ನಪಾನಾದಿಗಳು ಇಚ್ಛೆ ನಿಂದು, ಅನಲ, ಪವನನ ಗುಣ ಕೆಟ್ಟು ಆಕಾಶದ ಗುಣವರತು ಆತ್ಮನೊಳು ಬೆರೆದವರ ಐಕ್ಯರೆಂಬೆ. ಆತ್ಮ ಅನಾತ್ಮನೊಳು ಅಡಗಿದರೆ ನಿರವಯಲನೆಂಬೆ. ಇಂತಪ್ಪ ಶರಣರ ಬಯಲು

ಬಯಲಾಗಿಪ್ಪನಲ್ಲದೆ ವಿವರಿಸಿ ನೋಡಿವರೆ ಏನೆಂದರಿಯಬಾರದು ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೫. ಅಯ್ಯ ನಾನು ದಿಟ್ಟಿಸಿ ನೋಡಿ ನೋಡಿಹೆನೆಂದು, ಬಟ್ಟ ಬಯಲ ಕಂಡೆ. ಆ ಬಟ್ಟಬಯಲೊಳಗೊಂದು ಮುಟ್ಟಬಾರದ ಮೃಗವ ಕಂಡೆ. ಆ ಮೃಗದ ಹೆಜ್ಜೆಯ ಕಾಣಬಾರದು. ಈ ಭೇದವ ಶೋಧಿ ಶೋಧಿಸಿಕೊಂಡು ಬರುವನಕ, ಆ ಮೃಗವೆನ್ನ ಬಲೆಯೊಳಗಾಯಿತ್ತು. ಆ ಬಲೆಯೊಳಗಣ ಮೃಗದ ತಲೆಯ ಹಿಡಿದು ನೆಲೆಗೆಟ್ಟು ಹೋದೆನಯ್ಯ. ಇದರ ಅನುವ ಶರಣರೆ ಬಲ್ಲರು. ತಲೆ ಹೊಲನ ಹತ್ತಿ ಬಯಲಾದರು. ಇದಕ್ಕೆ ನೀವೆ ಸಾಕ್ಷಿ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೬. ಕಂಗಳ ಮಣಿಯ ಬೆಳಗಿನೊಳು, ಈರೇಳು ಭುವನದ ಶೃಂಗಾರವಡಗಿತ್ತು. ಆರು ಅರಿಯರಲ್ಲಾ. ಅತಿ ಶೃಂಗಾರದೊಳಗಣ ಗಂಧವನೊಂದು ಘ್ರಾಣವ ನುಂಗಿತ್ತು. ಘ್ರಾಣದೊಳಗಣ ಗಂಧವ ಪ್ರಾಣ ನುಂಗಿತ್ತು. ಪ್ರಾಣದೊಳಗಣ ಗಂಧವ ಭಾವ ನುಂಗಿತ್ತು. ಭಾವ ದೊಳಗಣ ಗಂಧವ ಬಯಲು ನುಂಗಿತ್ತು. ಬಯಲೊಳಗಣ ಗಂಧವು ಮಹಾಬಯಲ ಕೂಡಿದ ಲಿಂಗೈಕ್ಯಂಗೆ ಭವ ಬಂಧನವಿಲ್ಲೆಂದಿತ್ತು ಗುರು ವಚನ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೭. ಆಯತ ಲಿಂಗದಲ್ಲಿ ನೀವೆನಗೆ ಆಚಾರವ ತೋರಿದಿರಾಗಿ, ಸ್ವಾಯತ ಲಿಂಗದಲ್ಲಿ ನೀವೆನಗೆ ಅರುಹ ತೋರಿದಿರಾಗಿ, ಸನ್ನಿಹಿತಲಿಂ ಗದಲ್ಲಿ ನೀವೆನಗೆ ಪರಿಣಾಮವ ತೋರಿದಿರಾಗಿ, ಈ ತ್ರಿವಿಧದ ವರನೆ ಲೆಯ ತೋರಿ, ಈ ತ್ರಿವಿಧದ ಸಂಬಂಧವನು ಹರಿದು, ಎನ್ನ ಭವವ ದಾಂಟಿಸಿದ ಕಾರಣ, ಭವವಿರಹಿತನೆಂದು, ಚನ್ನಮಲ್ಲೇಶ್ವರನ ನಂಬಿ, ಕೆಟ್ಟು ಬಟ್ಟಬಯಲಾದೆನಯ್ಯ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

೮. ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಸತ್ಯ ಶರಣೈಕ್ಯ ರೆಂಬ ಇತ್ತತ್ತ ಗೊತ್ತ ಬಿಟ್ಟು ನಿರ್ವಯಲ ಲಿಂಗದೊಳು ನಿಮ್ಮ ಭಕ್ತ ನಾದರೆ ಬಸವಪ್ರಿಯ ಕೂಡಲ ಚನ್ನಬಸವಣ್ಣಾ.

೯. ಅಯ್ಯ ನೀನಿಲ್ಲದಿದ್ದರೆ ಎನಗೆ ಮುನ್ನ ನಾಮ ರೂಪುಂಟೆ? ನೀ ಮಾಡಲಾನಾದೆನಯ್ಯ. ಇದು ಕಾರಣವಾಗಿ ನಾ ಬಂದ ಬಂದ

ಭವಾಂತರದಲ್ಲಿ ನೀವು ಬರುತಿದ್ದಿರಾಗಿ, ಇನ್ನೆನ್ನ ಗುರು ತಂದೆಗೆ ಬಳಲಿಕೆ ಆಗುತಿದೆ ಎಂದು ನಾ ನೋಡಲಾಗಿ, ನೀವೆನ್ನ ಭವವ ಕೊಂಡಿರಾಗಿ, ಇದು ಕಾರಣ ಆಂದಂದಿಗೆ ನೂರು ತಂಬಿತ್ತೆಂಬ ಭೇದವನು ನೀವೆ ತೋರಿದಿರಿ. ಇದನರಿದರಿದು ನಾನು ಹಿಂದಣ ಭವವ ಹರಿದು, ಮುಂದಣ ಭಾವ ಬಯಕೆಯ ಮುಗ್ಧವ ಮಾಡಿ, ಹೊಂದದ ಬಟ್ಟೆಯನೆ ಹೊಂದಿ, ಸದಮಳಾನಂದ ಚನ್ನಮಲ್ಲೇಶ್ವರನ ನಂಬಿ ಕೆಟ್ಟು ಬಟ್ಟೆ ಬಯಲಾದೆನ್ನಯ್ಯಾ ಬಸವ ಪ್ರಿಯ ಕೂಡಲ ಚನ್ನಬಸವಣ್ಣಾ.

# ಶಿವಾನುಭವ.

(ಮಾಸಪತ್ರಿಕೆ)

ಸಂಪುಟ ೪.] [ಸಂಚಿಕೆ ೫.



ಅಗಸ್ಟ ೧೯೨೮] ವಿಜಾಪುರ. [ಶ್ರಾವಣ ೧೮೫೦.

ವಾ. ಚಂ. ೪ ರೂ. ೪ ಆ.

# ವಿಷಯಾನುಕ್ರಮಣಿಕೆ.



---

## ಶಿವಾನುಭವ.

ಇದು ವೀರಶೈವ ಧಾರ್ಮಿಕ ಉನ್ನತಿಯ ಬಗ್ಗೆ ಹೆಣಗಾಡುವ ನೆಂಲ್ತರದ ಮಾಸಪತ್ರಿಕೆಯು. ಇದು ೬೪ ಪುಟಗಳುಳ್ಳದ್ದಿದ್ದು ಚಂದಾ ಮಾತ್ರ ೪ ರೂ. ೪ ಆ. ಇದು ಪ್ರತಿ ತಿಂಗಳ ಮಧ್ಯಕ್ಕೆ ಹೊರಡುತ್ತದೆ. ಲೇಖಕರು ಚಿಕ್ಕ ಚಿಕ್ಕ ಲೇಖಗಳನ್ನು ಕಳಿಸಬೇಕು. ವೀರಶೈವರ ಉನ್ನತಿಯ ಪರವಾಗಿ ಯಾರು ಬೇಕಾದವರು ಬರೆದರೂ ಅವಕಾಶ ಸಿಗುವದು. ಕೆಲವರು ಇದರ ಹಿಂದಿನ ಸಂಚಿಕೆಗಳನ್ನು ಬೇಡುತ್ತಾರೆ. ಆದರೆ ೧-೨ ಸಂಚಿಕೆಗಳು ಸಿಗುವದೇ ಇಲ್ಲ. ೩ ರಿಂದ ೧೨ ವರೆಗೆ ಮಾತ್ರ ಸಿಗುತ್ತವೆ. ಬೇಕಾದವರು ಶೀಘ್ರ ತರಿಸಿಕೊಳ್ಳಬಹುದು. ತಡವಾದರೆ ಪ್ರತಿಗಳು ಸಿಗಲಾರವು. ಯಾಕಂದರೆ ಪ್ರತಿಗಳು ಸ್ವಲ್ಪೇ ಉಳದಿವೆ. ಪ್ರತಿಯೊಂದು ಸಂಚಿಕೆಗೆ ೮ ಆಣೆ.

ಮ್ಯಾನೇಜರ.

# ಶಿವಾನುಭವ.

ವರ್ಷ ೪] ಅಗಸ್ಟ ೧೯೨೯ [ಸಂಚಿಕೆ ೫

## ಬಸವೇಶ್ವರನ ತತ್ವಗಳು.

(ಲೇಖಕ:— ಶ್ರೀಯುತ ಸಿದ್ಧರಾಮಪ್ಪ ಪಾವಟೆ ಬಿ. ಎ. ಎಲ್.
ಎಲ್. ಬಿ. ಹುಬ್ಬಳ್ಳಿ.)



ಸಾಮಾಜಿಕ ರಾಜಕೀಯ ಕುಲುಕಾಟದ ದಿನಗಳಿವು. ಧರ್ಮ ಪುರುಷರನ್ನೂ ಅವರ ಸಿದ್ಧಾಂತಗಳನ್ನೂ ಕಟ್ಟಿಕೊಂಡೇನು ಮಾಡುವೆವು, ಎಂದು ಆತುರಿಪರು ಹಲರುಂಟು. ಅವರಿಗೆ, ಅಪ್ಪಗಳಿರ, ಧರ್ಮವನ್ನು ಮೂಲೆಗೊತ್ತಿದುದಲ್ಲದೆ ಆವ ತೊಂದರೆಯಾಗಲಿ, ಆ ತೊಂದರೆಯಿಂದಾಗುವ ಕುಲುಕಾಟವಾಗಲಿ ಬಾರದು. ನಮ್ಮ ಬಸವನು ಹಬ್ಬಿಸಿದ ಧರ್ಮವಂತು ಉಭಯಲೋಕ ಸಾಧಕವಾಗಿದೆ. ಅದರಿಂದ ಬಸವಸಿದ್ಧಾಂತವು ಎಲ್ಲರಿಗೂ ದಾರಿಗಲಿಸಬಲ್ಲುದೆಂದು ನಾನು ಹೇಳುವೆನು.

ಬಸವನು ಧರ್ಮಸ್ಥಾಪನೆಯನ್ನು ಮಾಡಿದನೆಂದರೆ ಅವನಾವ ಆಗಮಕ್ಕಾಗಲಿ, ವೇದಕ್ಕಾಗಲಿ, ಸೂತ್ರಕ್ಕಾಗಲಿ, ಭಾಷ್ಯವ ಬರೆದನೆ ಎಂದು ಆರೋ ಹೇಳಬಹುದು. ಆದರೆ ಬಸವನ ನಡೆನುಡಿಗಳು ಎಲ್ಲ ವೇದಾಗಮಸಿದ್ಧಾಂತರಹಸ್ಯಗಳ ತಿರುಳಾಗಿವೆ. ಬಸವನ ವಚನಗಳನ್ನು ಮಾತುಮಾತಾಡಿ ವೇದಾಗಮವಾಕ್ಯಗಳಿಗೆ ಒರೆಹಚ್ಚುವ ಕಾಲವಿದಲ್ಲ. "ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ। ತಾವಾನ್ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ" ಲೋಕದೊಳಗೆ ಕೆರೆಬಾವಿಗಳಿಂದ ಆಗುವ ಜಳಕ, ನೀರು ಕುಡಿಯೋಣ, ಮುಂತಾದ ಎಲ್ಲ ಕೆಲಸಗಳು ಸುತ್ತಲು ನೀರು ತುಂಬಿದ ಕಡಲಿನಿಂದಲೇ ತೀರುವವು. ಅದರಂತೆ ಬ್ರಹ

ಜ್ಞಾನಿಯ ಆನಂದದಲ್ಲಿ ಎಲ್ಲ ಕರ್ಮಫಲಗಳೂ ಹುದುಗಿರುವವು, ಎಂಬ ಗೀತಾವಚನದ ಹಾಗೆ ಬಸವನು ತೆರೆದ ಧರ್ಮಭಾಂಡಾರವು ವೇದಾಗಮೋಪನಿಷತ್ತುಗಳ ರಹಸ್ಯಗಳನ್ನೆಲ್ಲ ಒಳಗೊಂಡಿದೆಯೆಂದು ಹೇಳಬಹುದು.

## ಮನಸ್ಸಿನ ಶುದ್ಧತೆ.

ಎಲ್ಲ ಹಂದಾಟಗಳಿಗೆ ಮನವೇ ಕಾರಣವು. ಮನವು ಮಡಿಯಾಗಿದ್ದರೆ ನಮ್ಮ ನಡತೆಯು ಮಡಿಯು. ಅದು ಮೈಲಿಗೆಯಾದರೆ ನಮ್ಮ ನಡತೆಯು ಮೈಲಿಗೆಯು. ನಮ್ಮ ನಡೆನುಡಿಗಳಿಂದಲೆ ಧರ್ಮಾಧರ್ಮಗಳು, ಪಾಪಪುಣ್ಯಗಳು. ಹಲವು ಹೊತ್ತಿಗೆಗಳನ್ನು ಟೀಕಿಸುವದರಿಂದಾಗಲಿ ಉದ್ದುದ್ದನ್ನ ಉಪದೇಶಗಳನ್ನು ಸುರಿಯುವುದರಿಂದಾಗಲಿ ಲೋಕದ ಮನಸ್ಸನ್ನು ತಿದ್ದಲಾಗದು. ಮನವನ್ನು ಹಿಡಿದು ಒಡೆದು ಅದರ ಹುರಳು ಹುಳುಕನ್ನೂ ಜೊಳ್ಳು ಪೊಳ್ಳನ್ನೂ ಬಿಚ್ಚಿ ತೋರಿಸಬಲ್ಲವನಿಗೆ ನಮಗೆ ಧರ್ಮದ ಹೊಲಬನ್ನು ತೋರಿಸಬಲ್ಲನು. ಬಸವನು ನಮ್ಮ ಮನವನ್ನು ಹೆಚ್ಚಿ ಅದರ ಒಳಗುಂದುಗಳನ್ನು ಮಾಯಿಸುವಲ್ಲಿ ಭವರೋಗವೈದ್ಯನಾಗಿರುವನು

"ಎನ್ನ ನಡೆಯೊಂದು ಪರಿ ಎನ್ನ ನುಡಿಯೊಂದು ಪರಿ.  
ಎನ್ನೊಳಗೇನು ಶುದ್ಧವಿಲ್ಲ ನೋಡಯ್ಯಾ. ನುಡಿಗೆ ತಕ್ಕ ನಡೆಯು  
ಕಂಡರೆ ಕೂಡಲಸಂಗಮದೇವ ತನ್ನೊಳಗಿರ್ಪನಯ್ಯಾ"

ಅನಾದಿ ಧರ್ಮಸ್ವರೂಪನೆ ತಾನಾದ ಬಸವನ ಈ ಉಪದೇಶ ಪ್ರಕಾರವು ತಾಯನುಡಿದಂತೆ ಮಿದುವಾದುದೂ ಇನಿದಪ್ಪುದೂ ಆಗಿ ಎದೆಯಲ್ಲಿ ಮೂಡುವಂತಹದು. ಅರಸನಪ್ಪಣೆಯಂತೆ ಗದರಿಸಿ ಹೇಳಿದ ಉಪದೇಶವು ಹಾಗಲ್ಲ.

ಅಂತಃಕರಣದ ದೋಷವನ್ನು ತೋರಿಸಿ ಅದನ್ನು ಮಾಯಿಸಲಿಕ್ಕೆ ಬಸವನು ಯೋಜಿಸಿದ ಉಪಾಯವು ಮೇಲಾದುದು. ಧರ್ಮವನ್ನೆ ನುಡಿದು ಅಧರ್ಮವನ್ನೆ ನಡೆವಲ್ಲಿ ಅಕ್ಕರವುಳ್ಳ ಮನವನ್ನು ತಿದ್ದಲು ಸ್ಮೃತಿಗಳು ನಿತ್ಯನೈಮಿತ್ತಿಕಗಳನ್ನು ಪ್ರಾಯಶ್ಚಿತ್ತಗಳನ್ನು ವಿಧಿಸುವುವು. ಪ್ರಾಯಶ್ಚಿತ್ತವೆಂದರೆ ಅರಿತಾಗಲಿ ಅರಿಯದಾಗಲಿ ಮಾಡಿದ ಪಾಪವು ಹೋಗ

ಲೆಂದು ಪಾಪಿಯು ಇಹದಲ್ಲಿ ಶಾಸ್ತ್ರವಿಧಿಯಿಂದ ಹೊಂದಬೇಕಾದ ಕಷ್ಟವು. ಬಗೆಬಗೆಯ ಪಾಪಗಳಿಗೆ ಬಗೆಬಗೆಯ ಪ್ರಾಯಶ್ಚಿತ್ತಗಳುಂಟು. ಅವುಗಳನ್ನು ಬಿಚ್ಚಿ ನೋಡಿದರೆ ಪುರೋಹಿತವರ್ಗದ ಹೊಟ್ಟೆಯ ಮೇಲೆ ಕಣ್ಣಿಟ್ಟು ಹೇಳಿದುದು ಹೆಚ್ಚಾಗಿದೆ. ಆದಕ್ಕಾಗಿ ಹೊನ್ನ ರಾಶಿಗಳೂ ಸಾಲುವಂತಿಲ್ಲ. ಪಶ್ಚಾತ್ತಾಪವೆ ನಿಜವಾದ ಪ್ರಾಯಶ್ಚಿತ್ತವು. ಆ ಪಶ್ಚಾತ್ತಾಪದಿಂದ ಶಿವನನ್ನು ಮೊರೆವೊಗುವುದೆ ಅಂತಃಕರಣದ ಶುದ್ಧಿಯು ಎಂಬುದನ್ನು ಬಸವನು ಸರಸವಾಗಿ ಹೇಳಿಹನು:—

'ಎಲವೊ! ಎಲವೊ! ಪಾಪಕರ್ಮವ ಮಾಡಿದವನೆ! ಎಲವೊ! ಎಲವೊ! ಬ್ರಹ್ಮಹತ್ಯವ ಮಾಡಿದವನೆ! ಒಮ್ಮೆ ಶರಣೆನ್ನೆಲವೊ! ಒಮ್ಮೆ ಶರಣೆಂದರೆ ಪಾಪಕರ್ಮಗಳು ಕೆಟ್ಟೋಡುವವು. ಸರ್ವ ಪ್ರಾಯಶ್ಚಿತ್ತಕ್ಕೆ ಹೊನ್ನಪರ್ವತಂಗಳೈದುವುವೆ? ಓರ್ವಂಗೆ ಶರಣೆನ್ನಿ ನಮ್ಮ ಕೂಡಲ ಸಂಗಮದೇವಂಗೆ.

ಅಂತಃಕರಣವನ್ನು ತಿದ್ದಲು ಸಂಧ್ಯಾವಂದನಾದಿಗಳೂ ಶಾಸ್ತ್ರದಲ್ಲಿ ಹೇಳಿಯುವೆ. ಅವು ಬ್ರಾಹ್ಮಣ್ಯಾದಿ ಅಭಿಮಾನವನ್ನು ಮುಂದಿಟ್ಟು ವಿಧಿಸಲ್ಪಟ್ಟಿವೆ. ಅದರಿಂದ ನಿರಹಂಕಾರದಿಂದ ದೇವರನ್ನು ಉಪಾಸಿಸುವ ಮಾರ್ಗವಿದಲ್ಲ. ಮತ್ತು ಕೆಲವು ವರ್ಣದವರಿಗೆ ಸಂಧ್ಯೋಪಾಸನವಿರುವುದು. ದೇವರನ್ನು ಭಜಿಸುವ ಅಭಿಲಾಷೆಯುಳ್ಳ ಇತರರಿಗೆ ಅದರಲ್ಲಧಿಕಾರವಿಲ್ಲದಿಹುದು ನ್ಯಾಯುವಲ್ಲ. ಸರ್ವ ಅಭಿಮಾನವನ್ನು ಆಹುತಿಗೊಟ್ಟು ಈಶ್ವರನನ್ನು ನಿರಭಿಮಾನದಿಂದ ಪೂಜಿಸುವುದು ನಿತ್ಯಕೃತ್ಯವೆಂದು ಬಸವನು ಕಲಿಸಿದನು.

## ಪರಮಾತ್ಮನ ನುತಿ.

ಬಸವನು ಪರಮ ವೈದಿಕನು. ಪುರುಷಸೂಕ್ತವನ್ನೂ ಉಪನಿಷತ್ತುಗಳನ್ನೂ ಪ್ರತಿಬಿಂಬಿಸುವ ವಚನಗಳಿಂದ ಪರಮಾತ್ಮನನ್ನು ನುತಿಸಿರುವನು.

"ಶ್ರುತಿತತಿಯ ಶಿರದ ಮೇಲೆ ಅತ್ಯತಿಷ್ಠದ್ದಶಾಂಗುಲನ ನಾನೇನೆಂಬೆನಯ್ಯ? ಘನಕ್ಕೆ ಘನಮಹಿಮನ ಮನಕ್ಕಗೋ

ಚರ ಅಣೋರಣೀಯಾನ್ಮಹತೋ ಮಹೀಯಾನ್ ಮಹಾ ದಾನಿ ಕೂಡಲ ಸಂಗಮದೇವಾ."

"ರುದ್ರಮುಖದಲ್ಲಿ, ವಿಷ್ಣು ಭುಜದಲ್ಲಿ, ಜಿಹ್ವೆಯಲ್ಲಿ, ಅಜನ ಜನನವು. ಇಂದ್ರ ಪಾದದಲ್ಲಿ, ಚಂದ್ರ ಮನದಲ್ಲಿ, ಚಕ್ಷುವಿನಲ್ಲಿ ಸೂರ್ಯ ಜನನವು. ಮುಖದಲ್ಲಿ ಅಗ್ನಿ ಪ್ರಾಣದಲ್ಲಿ ವಾಯು ನಾಭಿಯಲ್ಲಿ ಅಂತರಿಕ್ಷ ಶಿರದಲ್ಲಿ ಉದಯ ತೆತ್ತೀಸಕೋಟಿ ದೇವತೆಗಳು. ಪಾದತಳದಲ್ಲಿ ಭೂಮಿ ಜನನವು ಶ್ರೋತ್ರದಲ್ಲಿ ದಶದಿಕ್ಕು ಜಗವ ನಿಕ್ಷೇಪಿಸಿದ ಕುಕ್ಷಿಯಲ್ಲಿ, ಅಕ್ಷಯನು, ಅಗಣಿತನು. ಸಾಸಿರ ತಲೆ, ಸಾಸಿರ ಕಣ್ಣು, ಸಾಸಿರ ಕೈ, ಸಾಸಿರ ಪಾದ, ಸಾಸಿರ ಸನ್ನಿಹಿತ ಕೂಡಲ ಸಂಗಮದೇವನು."

## ಅಹಿಂಸೆ

ವೇದವನ್ನು ಪಶುಹಿಂಸಾತ್ಮಕ ಯಜ್ಞಪರವಾಗಿ ಓದುವುದು ಸರ್ವ ದಯಾಮಯನಾದ ಪರಮಾತ್ಮನ ವಚನ ವಿರೋಧವಾದುದೆಂದು ಬಸವನದನ್ನು ಖಂಡಿಸಿ ತುಂಡಿಸಿದನು.

"ಇಟ್ಟಿಯ ಹಣ್ಣು ನರಿತಿಂದು ಸೃಷ್ಟಿ ತಿರುಗಿತೆಂಬಂತೆ ಮುಟ್ಟಿಯನಿಟ್ಟ ದ್ವಿಜರ ಮಾತೇಕೋ? ಹಗಲು ಕಾಣದ ಗೂಗೆ ಇರುಳಾಯಿತ್ತೆಂದರೆ ಜಗಕ್ಕೆ ಇರುಳಪ್ಪುದೆ ಮರುಳೆ? ಹೋಮದ ನೇಮದಲ್ಲಿ ಹೋತನೆ ಕೊಂದು ತಿಂಬ ಅನಾಮಿಕರೊಡನಾಡಿ ಗೆಲುವುದೇನು ಕೂಡಲ ಸಂಗಮದೇವ"

"ಮಾತಿನ ಮಾಲೆಗೆ ನಿನ್ನ ಕೊಂದಹರೆಂದು ಎಲೆ ಹೋತೆ ಅಳು ಕಂಡೆಯಾ? ವೇದವನೋದಿದವರ ಮುಂದೆ ಅಳುಕಂಡೆಯಾ ಹೋತೆ! ಶಾಸ್ತ್ರವ ಕೇಳಿದವರ ಮುಂದೆ ಅಳುಕಂಡೆಯಾ ಹೋತೆ! ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲ ಸಂಗಮದೇವನವರ"

ಯಜ್ಞದಲ್ಲಾಗುವ ಪಶುಹಿಂಸೆಯು ಹಿಂಸೆಯಲ್ಲವೆಂದು ಮೀಮಾಂಸಕರು ಸಾಧಿಸುವರು. ಅವರ ವಿಪರೀತ ವಾದಕ್ಕೆ ನರಿಗೂಳಿಗಳ ದೃಷ್ಟಾಂತವು.

ಸ್ಮೃತಿಕರ್ತರು ಸಾಮಾನ್ಯಧರ್ಮವೆಂದೂ ವರ್ಣಧರ್ಮವೆಂದೂ ಆಶ್ರಮಧರ್ಮವೆಂದೂ ವರ್ಣಾಶ್ರಮಧರ್ಮವೆಂದೂ ಧರ್ಮವನ್ನು ಹಂಚಿದರು. ಸಾಮಾನ್ಯಧರ್ಮವೆಂದರೆ ಅಹಿಂಸಾಸತ್ಯದಯಾ ಎಂಬೀ ಮೊದಲಾದುವು. ಇದನ್ನು ಸರ್ವರು ಪಾಲಿಸಬೇಕಾದುದರಿಂದ ಸಾಮಾನ್ಯವೆನಿಸಿತು. ಯಜ್ಞಾದಿಗಳು ವರ್ಣಧರ್ಮವು. ಅದನ್ನು ಬ್ರಾಹ್ಮಣಾದಿ ವರ್ಣದವರೆ ಮಾಡತಕ್ಕುದು. ಅಹಿಂಸಾದಿ ಸತ್ಯಧರ್ಮದಿಂದ ನಡೆವ ಶೂದ್ರರು ಹಿಂಸಾತ್ಮಕ ಯಜ್ಞವನ್ನು ಮಾಡುವ ದ್ವಿಜನಿಗಿಂತ ಹೀನನೆಂದು ಸ್ಮೃತಿಗಳ ಹೇಳಿಕೆಯು. ಇದು ತಪ್ಪು. ಅಹಿಂಸಾದಿಗಳನ್ನವಲಂಬಿಸುವ ಶೂದ್ರನು ನಿಜವಾಗಿಯೂ ಹೆಚ್ಚಿನವನೆಂಬುದಾಗಿ ಬಸವನ ವಚನವು.

"ಕೊಲ್ಲುವನೆ ಮಾದಿಗನು. ಹೊಲಸು ತಿಂಬುವನೆ ಹೊಲೆಯ, ಕುಲವೇನೊ ಅವಂದಿರ ಕುಲವೇನೊ? ಸಕಲ ಜೀವಾತ್ಮರಿಗೆ ಲೇಸನೆ ಬಯಸುವನೆ ಕುಲಜ ಕೂಡಲಸಂಗಮದೇವ"

ವರ್ಣಧರ್ಮವೆಂಬ ಮುಸುಕಿನಲ್ಲಿ ಮರೆಯಾದ ಉಚ್ಚವೈದಿಕ ತತ್ವಗಳನ್ನು ನಮ್ಮ ಕಣ್ಣೆದುರಿಗೆ ಇಟ್ಟನು. ಅಂದರೆ ದೇವರೊಬ್ಬನೆ, ಅವನು ಚರಾಚರ ವಿಶ್ವವನ್ನೂ ಭೂತಭೌತಿಕಗಳನ್ನೂ ವ್ಯಾಪಿಸಿ ಅನಶ್ವರನಾಗಿರುವನು. ಅವನು ವಾಙ್ಮನಸಾತೀತನು. ಒಬ್ಬೊಬ್ಬ ಮನುಷ್ಯನ ಗುಣಾಗುಣಗಣದಿಂದಲೆ ಅವನು ಹೊಲಬಿಗನು, ಅಲ್ಲವೆ ಹೊಲೆಯನು.

ಇವು ವೈದಿಕ ಧರ್ಮದ ಸಾಮಾನ್ಯ ತತ್ವಗಳು. ಸ್ಮಾರ್ತರಾದರು ಕೊನೆಗೆ ಇವೇ ತತ್ವಗಳನ್ನು ಸನ್ಯಾಸದಲ್ಲಾದರು ಸ್ವೀಕರಿಸುವರು. ಬಸವನು ಇವನ್ನು ವೀರಶೈವದ ತಳಹದಿಯಾಗಿ ಅದರ ವಿಶೇಷ ತತ್ವವನ್ನು ಪ್ರಚಾರಿಸಿದನು.

## ಸಂಸಾರವು ಹೇಯವು

ವೀರಶೈವದ ವಿಶೇಷ ತತ್ವವೆಂದರೆ ಲಿಂಗಾಂಗಸಾಮರಸ್ಯವು. ಇದು ವೇದಾಗಮೋಪನಿಷತ್ತುಗಳ ಸಾರವಾಗಿದೆ. ವೇದದಲ್ಲಿ ಅತಿಗೂಢವಾಗಿಯೂ ಉಪನಿಷತ್ತುಗಳಲ್ಲಿ ಮಸಕುಮಸಕಾಗಿಯೂ ಶಿವಾಗ

ವೋತ್ತರ ಭಾಗದಲ್ಲಿ ಸ್ಪಷ್ಟವಾಗಿಯೂ ವೀರಶೈವವು ಕಂಡುಬರುವುದು. ನೆಲದ ಮೇಲಿರುವ ನಮಗೆ ಬಾಷ್ಪದಲ್ಲಿ ಉಗೆಯಾದ ಮೋಡದಲ್ಲಿ ಅದಕ್ಕೂ ದಟ್ಟಾದ, ಮಳೆಯಲ್ಲಿ ನೀರಾದ, ಉದಕವು ನದೀ ಪ್ರವಾಹದಿಂದ ನೀರ ಡಿಕೆಯನ್ನು ಆರಿಸಲು ಸಮರ್ಥವಾಗುವಂತೆ ಈ ಧರ್ಮವು ಬಸವಚರಿ ತ್ರದಲ್ಲಿ ನಮ್ಮ ಸಂಸಾರತಾಪವನ್ನು ಆರಿಸಲು ಸಮರ್ಥವಾಗಿದೆ. ಸಂಸಾ ರಸಮುದ್ರದ ತೆರೆಗಳಿಂದಲು ಅದರ ನೆಲೆ ಇಲ್ಲದ ಆಳದಿಂದಲು ಪಾರಾಗಿ ಶಿವಪಾದವೆಂಬ ಸೊಗದ ರೇವನ್ನು (ಬಂದರವನ್ನು) ಸೇರಬೇಕೆಂಬ ಲವ ಲವಿಕೆಯು ವೀರಶೈವದ ಮೊದಲಮೆಟ್ಟು.

> "ಸಂಸಾರಸಾಗರದ ತೆರೆಕೊಬ್ಬಿ ಮುಖದ ಮೇಲೆ ಅಲೆಯುತ್ತಿದೆ. ಸಂಸಾರಸಾಗರ ಉರದುದ್ದವಾದೊಡೆ ಹೇಳುವೆ. ಸಂಸಾರಸಾಗರ ಕೊರಳುದ್ದವಾದೊಡೆ ಹೇಳುವೆ. ಸಂಸಾರ ಸಾಗರ ಶಿರದುದ್ದವಾದ ಬಳಿಕ ಏನು ಹೇಳುವೆನಯ್ಯ! ಅಯ್ಯ! ಅಯ್ಯ! ನಾನೇವೆನಯ್ಯ ಕೂಡಲಸಂಗಮದೇವಯ್ಯ?

ಈ ವಿವೇಕವುಳ್ಳಾತನೆ ಮನುಜನು. ಇಲ್ಲದವನು ಸರ್ಪನನೆರಳ ಬಯಸಿದ ಕಪ್ಪೆಯಂತಿಹನು. ದೇಹಾಂತ ಶಿಕ್ಷೆಯನ್ನು ಹೊಂದಿದವನು. ಆ ಶಿಕ್ಷೆಗೆ ಮುಂಚೆ ತನಗೆ ಕೊಡುವ ಭೋಗಗಳಲ್ಲಿ ರತಿಹೊಂದಿದಂತಿ ಹನು.

"ಕಪ್ಪೆ ಸರ್ಪನನೆರಳಲ್ಲಿ ಇರುವಂತೆ ಎನಗಾಯಿತಯ್ಯಾ! ಅಕಟಕಟ ಸಂಸಾರ ವೃಥಾ ಹೋಯಿತಲ್ಲ. ಕರ್ತೃ ಕೂಡಲ ಸಂಗಮದೇವ ಇದನ್ನು ತಪ್ಪಿಸಿ ನನ್ನನ್ನು ರಕ್ಷಿಸಯ್ಯ ಪ್ರಭುವೆ!"

"ಶೂಲದ ಮೇಲಣ ವಿಭೋಗವೇನಾದರೇನೊ? ನಾನಾವರ್ಣದ ಸಂಸಾರ ಹಾವಹಾವಾಡಿಗನ ಸ್ನೇಹದಂತೆ. ತನ್ನ ಆತ್ಮನೆ ತನಗೆ ಹಗೆಯಾದ ಬಳಿಕ ಬಿನ್ನಣವುಂಟೆ? ಎಮಗಾದಿ ನೀನು ಕೂಡಲ ಸಂಗಮದೇವ!"

ಸಂಸಾರವು ವಿಚಾರವಂತನಿಗೆ ಸುತ್ತೆಲ್ಲ ಉರಿಯೊಳಕೊಂಡಿರುವುದು. ಅದನ್ನಾರಿಸಲು ಶಿವನಲ್ಲದೆ ಬೇರಾರು ಆರ್ತರಲ್ಲ (ಸಮರ್ಥರಲ್ಲ).

"ಒಲೆಹೊತ್ತಿ ಉರಿದರೆ ನಿಲ್ಲಬಹುದಲ್ಲದೆ ಧರೆ ಹೊತ್ತಿ ಉರಿದರೆ ನಿಲ್ಲಬಾರದು. ಏರಿ ನೀರನುಂಬರೆ, ಬೇಲಿ ಕೆಯ್ಯ ಮೇವರೆ ನಾರಿ ತನ್ನ ಮನೆಯಲ್ಲಿ ಕಳುವರೆ, ತಾಯ ಮೊಲೆವಾಲೆ ನಂಜಾಗಿ ಕೊಲುವರೆ, ಇನ್ನಾರಿಗೆ ದೂರುವೆ ಕೂಡಲ ಸಂಗಮದೇವ?

## ವೀರಶೈವಾಧಿಕಾರಿಯು ಯಾರು?

ಈ ವಚನಗಳಿಂದ ವೀರಶೈವಕ್ಕೆ ಆರು ಅಧಿಕಾರಿ ಎಂಬುದನ್ನು ಬಸವನು ತೋರಿಸುವನು. ಅದೆಂತೆಂದರೆ, ಶಿವನಲ್ಲಿ ಮಿಗುವ ಭಕ್ತಿಯು, ಸದಾಚಾರ ವಿನಯಾದಿಗಳ ಒದವು, ಸಂಸಾರದ ದಂದುಗವನ್ನು ದಾಂಟುವ ತವಕು ಶಿವನನೆಂದು ಕಾಣ್ಬೆನೆಂಬ ಲವಲವಿಕೆ ಉಳ್ಳವನೇ ವೀರಶೈವಾಧಿಕಾರಿಯು.

ವೀರಶೈವವು ಲಿಂಗಾಂಗ ಸಾಮರಸ್ಯದ ಅನುಭವದಲ್ಲಿ ಪೂರ್ಣವಾದುದು. ಆ ಅನುಭವವು ಇತರ ಅನುಭವದಿಂದಲೆ ಪರಿಪೂರ್ಣವಾಗುವ ವೈದ್ಯಶಾಸ್ತ್ರಾದಿಗಳಂತೆ ಹೊತ್ತಿಗೆಗಳಿಂದ ಬಾರದು. ವೈದ್ಯಶಾಸ್ತ್ರವನ್ನು ಕಲಿಯಬೇಕೆಂಬನು ತಕ್ಕವನಾದ ಗುರುವನ್ನು ಹೊಂದಿ ಶರೀರದ ರೋಗಗಳನ್ನೂ ಅವುಗಳ ಕಾರ್ಯಕಾರಣಗಳನ್ನೂ ಅವಕ್ಕೆ ಪ್ರತೀಕಾರವಾದ ವನಸ್ಪತಿಗಳ ಗುಣಾಗುಣಗಳನ್ನೂ ತನ್ನ ಅನುಭವಮಾಡಿಕೊಳ್ಳಬೇಕು. ಅದರಂತೆಯೆ ವೀರಶೈವ ವಿದ್ಯೆಯು. ಬಸವನಿದನ್ನು ಮನ ನಡುವಂತೆ ಹೇಳಿರುವನು.

"ಮಡಕೆಯ ಮಾಡುವರೆ ಮಣ್ಣೆ ಮೊದಲು. ತೊಡಗೆಯ ಮಾಡುವರೆ ಹೊನ್ನೆ ಮೊದಲು. ಶಿವಪದವ ನೋಡುವರೆ ಗುರುಪದವೆ ಮೊದಲು. ಕೂಡಲ ಸಂಗಮದೇವರನರಿವರೆ ಶರಣರ ಸಂಗವೆ ಮೊದಲು."

"ನೋಡಿ ನೋಡಿ ಮಾಡುವನೇಮ ಸಲ್ಲವು. ತನು ಉದ್ದೇಶ ಮನಉದ್ದೇಶ ಮಾಡುವನೇಮ ಸಲ್ಲವು. ಗುರು ಪಥವ ಮೀರಿ ಮಾಡುವನೇಮ ಸಲ್ಲವು ಸಲ್ಲವು. ಕೂಡಲ ಸಂಗಮದೇವ ಇವು ನಿಮ್ಮ ನಿಜದೊಳಗೆ ನಿಲ್ಲವು ನಿಲ್ಲವು."

## ವಿನಯವುಳ್ಳವನಾಗಿರುವದು.

ಅಹಂಕಾರವು ಸರ್ವಪಾಪಗಳಿಗೆ ಬೇರು ಆಗಿಹುದು. ಅದರಿಂದ ವೀರಶೈವಾಧಿಕಾರಿಯು ವಿನಯದ ಪುತ್ಥಳಿಯೇ ಆಗಿರಬೇಕು. ಹಾಗಲ್ಲದೆ ಹಮ್ಮು ಬಿಮ್ಮುಗಳುಳ್ಳವನು ಶಿವಪದಕ್ಕೆ ಸಲ್ಲನು. ತಾನು ಗುಣವಂತನೆಂಬ ಸೊಕ್ಕು ಇರಬಾರದು. ನಿಜವಾದ ಗುಣವಂತಿಕೆಯು ಲಿಂಗಾಂಗ ಸಾಮರಸ್ಯದಿಂದಲ್ಲದೆ ಬಾರದು. ಆ ಸಾಮರಸ್ಯವಿಲ್ಲದವನ ಸದ್ಗುಣಗಳು ನಿಜವಲ್ಲ. ಪ್ರಕೃತಿಯ ಮಲವು ಸುಡದೆ ಶಿವಗುಣಗಳು ಕೈಸಾರವು. ಸದ್ಗುರುವಿನ ಕರುಣೆಯನ್ನು ವಿನಯವೆಂಬ ಬಲೆಯಿಂದಲ್ಲದೆ ಕೊಳ್ಳಲು ಸಾಧ್ಯವಲ್ಲ.

"ಮೇರು ಗುಣವನರಸುವುದೆ ಕಾಗೆಯಲ್ಲಿ? ಪರುಷ ಗುಣವನರಸುವುದೆ ಕಬ್ಬುನದಲ್ಲಿ? ಸಾಧು ಗುಣವನರಸುವನೆ ಅವಗುಣಿಯಲ್ಲಿ? ಚಂದನ ಗುಣವನರಸುವುದೆ ತರುಗಳಲ್ಲಿ? ಸರ್ವಗುಣಸಂಪನ್ನ ಲಿಂಗವೆ ಎನ್ನಲ್ಲಿ ಅವಗುಣವನರಸುವರೆ ಕೂಡಲ ಸಂಗಮದೇವಾ"

## ಪಂಚಾಂಗವನ್ನು ನೋಡಕೂಡದು.

ಹೀಗೆ ಗುರುಕಾರುಣ್ಯವನ್ನು ದೊರಕಿಸಲು ಲಿಂಗಧಾರಣಕ್ಕೆ ಭಕ್ತನು ಅರುಹನಾಗುವನು. ಲಿಂಗಧಾರಣವು ಬಲು ಮಂಗಲವಾದುದು. ಗುರುಕಾರುಣ್ಯಕ್ಷಣವೆ ಅದಕ್ಕೆ ಬೇಕಾದ ಶುಭಮುಹೂರ್ತವು. ಇನ್ನುಳಿದ ಪಂಚಾಂಗವನ್ನು ನೋಡಲು ಕಾರಣವಿಲ್ಲ. ಮುಹೂರ್ತ ನೋಡುವಲ್ಲಾದ ವಿಲಂಬವೆ ವಿಷಮಯವು. ಇದೀಗ ಬಸವನ ನುಡಿಯು.

"ಎಮ್ಮವರು ಬೆಸಗೊಂಡರೆ ಶುಭಲಗ್ನವೆನ್ನಿರಯ್ಯ!
ರಾಶಿಕೂಟ ಋಣಾನುಬಂಧ ವುಂಟೆಂದು ಹೇಳಿರಯ್ಯ!
ನಾಳಿನ ದಿನಕ್ಕೆ ಇಂದಿನ ದಿನ ಲೇಸೆಂದು ಹೇಳಿರಯ್ಯ!
ಕೂಡಲ ಸಂಗಮದೇವರ ಪೂಜಿಸಿದ ಫಲ ನಿಮ್ಮದಯ್ಯ."

## ಲಿಂಗಧಾರಣೆ—ಗುರೂಪದೇಶ.

ಶಿಷ್ಯನ ಮೇಲಿನ ಕರುಣೆಯಿಂದ ಕರಗಿ ಗುರುವು ತಾನು ಒಳ್ಳೆ ಗುಪ್ತವಾಗಿಟ್ಟುಕೊಂಡ ಶಿವಮಂತ್ರವನ್ನು ಉಸುರುತ್ತ ಆ ಮಂತ್ರಕ್ಕೆ ಅರ್ಥವೆ ತಾನಾದ ಶಿವಲಿಂಗವನ್ನು ಕರುಣಿಸುವನು. ವಧುವನ್ನು ನೀರೆರೆದು ಅರಸಿನವನೆ ಹೂಸಿ ಹೊಂದೊಡಿಗೆಯನ್ನಿಟ್ಟು ಸಿಂಗರಿಸುವಂತೆಯೂ, ವರನನ್ನು ಮಂಗಲಸ್ನಾನಂಗೈಸಿ ಅರಸಿನವ ಹೂಸಿ ಸಿಂಗರಿಸುವಂತೆಯೂ ಶಿಷ್ಯನೆಂಬ ವಧುವನ್ನು ಕಲಶಾಭಿಷೇಕಾದಿಗಳಿಂದ ಪರಿಶುದ್ಧಿಗೊಳಿಸಿ ಮಾತೃಕಾನ್ಯಾಸಾದಿಗಳಿಂದಲು ಕಲಾನ್ಯಾಸದಿಂದಲು ಶರೀರಮಾನಸಭಾವಗಳನ್ನು ಪವಿತ್ರೀಕರಿಸಿ ವಿಭೂತಿಯನೆ ತೊಡೆದು ತ್ರಿಪುಂಡ್ರವನೆ ರಚಿಸಿ ರುದ್ರಾಕ್ಷಾಭರಣಗಳನ್ನು ತೊಡಿಸಿ ಚೌಕಮಧ್ಯದಲ್ಲಿ ಕುಳ್ಳಿರಿಸಿ, ಲಿಂಗವನು ಆದರಂತೆಯೆ ಸಂಸ್ಕರಿಸಿ ಮಂತ್ರೋಪದೇಶವನ್ನು ಮಾಡುತ್ತ ಲಿಂಗವನ್ನು ಕೈಗೆಕೊಟ್ಟು ಆ ಲಿಂಗದಲ್ಲಿ ಶಿಷ್ಯನ ಮಸ್ತಕದಲ್ಲಿ ಹುದುಗಿರ್ದ ಶಿವಕಳೆಯನ್ನು ಸಂಗಳಿಸಿ ಲಿಂಗವೆ ಪತಿ ನೀನು ಸತಿ ಎಂಬ ಬಗೆಯಿಂದ ಶರೀರದಿಂದಗಲದೆ ತಾಳಿ ಉರಿಕರ್ಪುರಗಳಂತೆ ಬೆರಿಸೆಂದು ಬೋಧಿಸುವನು. ಈ ವಿಷಯದಲ್ಲಿ ಬಸವ ವಚನವನ್ನು ಕೇಳಿರಿ!

"ಮುನ್ನ ಮಾಡಿದ ಪಾಪವೆಂತು ಪೋಪುದೆಂದು ಚಿಂತಿಸಬೇಡ ಕಹಿಸೋರೆಯ ಕಾಯ ತಂದು, ವಿಭೂತಿಯ ತುಂಬಿದರೆ ಸೀಯಾಗದೆ ಮೂರುದಿವಸಕ್ಕಯ್ಯ? ಹಲವು ಕಾಲ ಕೊಂದ ಸೂನೆಗಾರನ ಕೈಯ ಕತ್ತಿಯಾದರೇನು? ಪರುಷ ಮುಟ್ಟಲಿಕೆ ಹೊನ್ನಾಗದೆ ಅಯ್ಯ? ಎನ್ನ ಲಲಾಟದಲ್ಲಿ ವಿಭೂತಿಯ ಬರೆದರೆ, ಪಾಪಪಲ್ಲಟವಾಗದೆ ಕೂಡಲ ಸಂಗಮದೇವ"

"ಅರಿಸಿನವನೆ ಮಿಂದು ಹೊಂದೊಡಿಗೆಯನೆ ತೊಟ್ಟು ಪುರುಷನೊಲೆದ ಲಲನೆಯಂತೆ ಆಗಿದ್ದೆನಯ್ಯ! ವಿಭೂತಿಯನೆ ಧರಿಸಿ ರುದ್ರಾಕ್ಷಿಯನೆ ಕಟ್ಟಿ ಶಿವ ನಿಮ್ಮ ಒಲೆದಂತೆ ಆಗಿದ್ದೆನಯ್ಯ ಕೆಟ್ಟು' ಬಾಳುವರಿಲ್ಲ ಎಮ್ಮವರ ಕುಲದಲ್ಲಿ. ನೀನೊಲಿದಂತೆ ಸಲಹಯ್ಯ ಕೂಡಲ ಸಂಗಮದೇವ!

"ಓಂ ನಮಃಶಿವಾಯ ಮಂತ್ರವ ಮೀರಲಮ್ಮದೆ ನಿಂದುದು ವೇದ. ಓಂನಮಃಶಿವಾಯ ಮಂತ್ರವ ಮೀರಲಮ್ಮದೆ ನಿಂದುದು

ತರ್ಕ. ಭಯಂಕರ ಭ್ರಮೆಗೊಂಡಿತ್ತು ಮಂತ್ರ ತಂತ್ರ ಶಿವ ನಂತವನರಿಯದೆ ಚಿಂತಿಸುತ್ತಿದ್ದಿತು ಲೋಕ. ಕೂಡಲ ಸಂಗ ಮದೇವ ಶ್ವಪಚನ ನೆರೆದರೆ ಜಾತಿಭೇದವ ಮಾಡಲವೆನ್ನೆನು"

"ಜಗವೆಲ್ಲರಿಯಲು ಎನಗೊಬ್ಬ ಗಂಡನುಂಟು. ಅನು ಮುತ್ತೈದೆ. ಅನು ನಿಷ್ಠೆ. ಕೂಡಲ ಸಂಗಮದೇವನಂತಪ್ಪ ಎನ ಗೊಬ್ಬ ಗಂಡನುಂಟು"

"ಜಗದಗಲ ಮುಗಿಲಗಲ ಮಿಗಿಲಗಲ ನಿಮ್ಮಗಲ. ಪಾತಾ ಳಲೋಕದಿಂದತ್ತತ್ತ ನಿಮ್ಮ ಶ್ರೀಚರಣ. ಬ್ರಹ್ಮಾಂಡದಿಂದ ತ್ತತ್ತ ನಿಮ್ಮ ಶ್ರೀಮುಕುಟ. ಕೂಡಲ ಸಂಗಮದೇವಯ್ಯ ಎನ್ನಕರಸ್ಥಲಕ್ಕೆ ಬಂದು ಚುಲುಕಾದಿರಲ್ಲ"

ಗುರುವು ಲಿಂಗವಾಗಿ ಶಿಷ್ಯನಲ್ಲಿ ಸಂಗತವಾದ ವಚನವಿದು:—

"ಕಂಗಳ ಮುಂದಿನಿಂದ ಶ್ರೀಗುರುಲಿಂಗ ಹಿಂಗಿದರೆ ವ್ರತಕ್ಕೆ ಭಂಗವಾದುದೆಂದು ಕೊಟ್ಟನಯ್ಯ ಶ್ರೀಗುರು ಕರ ಸ್ಥಲದಲ್ಲಿ ಪ್ರಾಣಲಿಂಗವ. ಆ ಲಿಂಗ ಮುಟ್ಟಲೊಡನೆ ತನು ಪ್ರಸಾದ ಮನಪ್ರಸಾದ ಧನಪ್ರಸಾದವಾಯಿತ್ತು. ಇಂತು ಸರ್ವಾಂಗ ಪ್ರಸಾದವಾಯಿತ್ತು ಕೂಡಲ ಸಂಗಮದೇವ"

ಗುರುವು ಲಿಂಗವಾಗಿ ನೆಲಿಸಲು ತನುಮನ ಧನ ಪ್ರಸಾದವಾದ ಕುರವನ್ನು ನೋಡಿರಿ:—

"ಆವಕುಲವಾದರೇನು? ಶಿವಲಿಂಗವಿದ್ದವನೆ ಕುಲಜನು. ಕುಲವನರಸುವರೆ ಶರಣರಲ್ಲಿ? ಶಿವಜಾತಃ ಕುಲೀನಸ್ಸ್ಯಾತ್ಸ್ವ ರ್ವಜಾತಿ ವಿವರ್ಜಿತಃ ಉಮಾಮಾತಾ ಪಿತಾ ರುದ್ರಃ ಐಶ್ವರಂ ಕುಲಮೇವ ಚ" ಎಂದುದಾಗಿ

"ಆಗಾಧ್ಯವು ಪ್ರಾಣಲಿಂಗವೆಂದರಿದು ಪೂರ್ವಗುಣವಳಿದು ಪುನರ್ಭೂತನಾದಬಳಿಕ ಸಂಸಾರ ಬಂಧುಗಳೆನ್ನವರೆಂದರೆ ನಂಟು ಭಕ್ತಿ ನಾಯಕ ನರಕ ಇಂತೆಂದುದು ಕೂಡಲ ಸಂಗನ ವಚನ"

ಇಂತು ಚರಿಸಿ ಶಿವನಲ್ಲಿ ಸಮರಸವಾಗುವುದು ಕಾಳುನರರಿಗೆ ಸಾಧಿಸದು. ಅವರು ದೀಕ್ಷೆಗರುಹರಲ್ಲ. ವೀರಶೈವ ಸದ್ಗುರೂಪದೇಶವು ಹುಲಿಯ ಹಾಲು ಹುಲಿಮರಿಗಲ್ಲದೆ ಸಲ್ಲದು.

"ಹುಲಿಯ ಹಾಲು ಹುಲಿಗಲ್ಲದೆ ಹೊಲದ ಹುಲ್ಲೆಗೆ ಉಣಬಾರದು. ಕಲಿಯ ಕಾಲತೊಡರು ಉಚ್ಚಳದಾಳಿಗಲ್ಲದೆ ಇಕ್ಕಬಾರದು. ಅಳಿಮನದಾಸೆಯವರ ಮೂಗ ಹಲ್ಲುದೋರಿ ಕೊಯಿವ ಕೂಡಲ ಸಂಗಮದೇವ"

"ಸಗಣಿಯ ಬೆನಕಂಗೆ ಸಂಪಿಗೆಯರಳಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಗಂಜಳ ಬಿಡದಣ್ಣಾ. ಮಣ್ಣಪುತ್ಥಳಿಯ ಮರಮರಳಿ ಜಲದಲ್ಲಿ ತೊಳೆದರೆ ನಿಚ್ಚ ಕೆಸರಹುದಲ್ಲದೆ ಅದರ ಚ್ಚಗ ಬಿಡದಣ್ಣಾ. ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ ಕೆಟ್ಟವನೇಕೆ ಸದ್ಭಕ್ತನಾಗುವನು ಕೂಡಲ ಸಂಗಮದೇವ"

ಹೀಗೆ ನಿರ್ಮಲಾತ್ಮನಾಗಿ ಲಿಂಗಸಮರಸವಾದವನು ಜಾತಿಸೂತಕದಂತೆ ಉಳಿದ ಜನನೋಚ್ಛಿಷ್ಟರಜೋವೃತಿ ಸೂತಕಗಳನ್ನು ನೀಗುವನು. ಎಲ್ಲ ಸೂತಕಕ್ಕೂ ಪಿಂಡದಭಿಮಾನವು ಮೂಲವು.

## ಜಪವು

ಭಾವವು ಶುದ್ಧವಾಗಲಿಕ್ಕೆ ಮಂತ್ರಜಪವು ಕಾರಣವು. ನಾಲಗೆಯ ಮಂತ್ರವು ಕಣ್ಣ ಮುಂದಿನ ಲಿಂಗವನ್ನು ತುಂಬುವುದು. ಲಿಂಗನಾಮವೆಂಬ ಮಂತ್ರವನ್ನು ನುಡಿದ ನಾಲಿಗೆಯೂ ಲಿಂಗರೂಪವನ್ನು ನೋಡುವ ಕಣ್ಣೂ ಒಂದುಗೂಡಿ ಮನನಿಲ್ಲುವುದು ಜಪವು. ಮನದಲ್ಲಿ ತುಂಬಿದ ಶಿವಭಾವವೆ ಪ್ರಾಣಲಿಂಗವು.

ಇಷ್ಟಲಿಂಗದ ದೃಷ್ಟಿಯಿಂದ ನೋಟವೂ, ಲಿಂಗಮಂತ್ರದಿಂದ ನಾಲಗೆಯೂ, ಲಿಂಗಪೂಜೆಯಿಂದ ಕೈಗಳೂ, ಶಿವ ಪೂಜಾಸನದಿಂದ ಪದ್ಮಾಸನವೂ, ಲಿಂಗತನುವು ಅಶುಚಿಯಾಗದಂತೆ ಬಂಧಿಸಿದರಿಂದ ದೇಹವು

ಶುದ್ಧವಾದುದು. ಲಿಂಗಸ್ತುತಿಯು ಕೇಳುವುದರಿಂದ ಕಿವಿಯೂ, ಲಿಂಗಸ್ಪರ್ಶದಿಂದ ಹಸ್ತವೂ, [ಸ್ಪರ್ಶ] ದೃಷ್ಟಿಯಿಂದ ನೋಟವೂ, ಶಿವಪ್ರಸಾದರುಚಿಯಿಂದ ರಸನೆಯೂ, ಶಿವನಿರ್ಮಾಲ್ಯಘ್ರಾಣದಿಂದ ನಾಸಿಕವೂ ಶಿವಮಯವಾದುವು. ಇದಕ್ಕೆ ಬಸವನ ವಚನ—

"ನಿಮ್ಮ ನೋಟವನಂತಸುಖ. ಕೂಟ ಪರಮಸುಖ. ಅಷ್ಟಕೋಟಿರೋಮಂಗಳು ಕಂಗಳಾಗಿ ನೋಡುತಿದ್ದೆನು. ಕೂಡಲಸಂಗಮದೇವಯ್ಯ! ನಿಮ್ಮನೋಡಿ ಮನದಲ್ಲಿ ರತಿ ಹುಟ್ಟಿನಿಮಿರ್ದವೆನ್ನ ಕಂಗಳು"

"ವಚನದಲ್ಲಿ ನಾಮಾಮೃತವ ತುಂಬಿ, ನಯನದಲ್ಲಿ ಲಕ್ಷ್ಮಿಮೃತವ ತುಂಬಿ, ಮನದಲ್ಲಿ ನಿಮ್ಮರುಹನೆ ತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿಯನೆ ತುಂಬಿರುವೆ. ಕೂಡಲ ಸಂಗಮದೇವ ನಿಮ್ಮ ಚರಣಕಮಲದೊಳು ಸೊಗದ ಬಂಡನುಂಬ ತುಂಬಿಯಾಗಿಪ್ಪೆನು"

"ಅಡಿಗಡಿಗೆ ಲಿಂಗವನು ಅಡರಿ ಅಡರಿ ನೋಡಿ ಕಂಗಳು ಕಡೆಗೋಡಿವರಿದುವೆನಗಯ್ಯ ಎನ್ನಶ್ರುಜಲಂಗಳು! ಆಲಿಗಲ್ಲ ರೂಹಿನಂತೆ ಅರಗಿನ ಪುತ್ತಳಿಯಂತೆ; ತನುವೆಲ್ಲ ಪುಳಕಿತವಾಗಿ ಬೆವರ ಬಿಂದುಗಳೆಲ್ಲ ಭಕ್ತಿರಸದ ದ್ರವವಯ್ಯ! ಕೂಡಲ ಸಂಗಮದೇವಯ್ಯ ನಿಮ್ಮ ದರುಶನದಿಂದ ಮನವೊಲಿದ ನೆನವನೇನು ಹೇಳುವೆನಯ್ಯ!"

ಈ ಬಸವಾಗಮಕ್ಕೆ ಶಿವಾಗಮ ನೋಡಿರಿ—

ಲಿಂಗಧ್ಯಾನಂ ಲಿಂಗಮನೋ ಲಿಂಗಪೂಜಾ ಪರೌ ಕರೌ। ಲಿಂಗಸ್ತುತಿಪರೇ ಶ್ರೋತ್ರೇ ಲಿಂಗಾರ್ಪಿತರಸಾದರಃ॥ ಲಿಂಗನಿರ್ಮಾಲ್ಯಸುರಭಿಲೋಭೋ ಘ್ರಾಣಸ್ಯ ಪಾರ್ವತಿ। ಲಿಂಗಾಲಂಕಾರ ಸಂದರ್ಶನಾಸಕ್ತೇ ಲೋಚನೆ ಪಿಚ॥ ಲಿಂಗಪ್ರದಕ್ಷಿಣಪರೌ ಪಾದೌ ಚ ಗಿರಿಸಂಭವೇ। ಲಿಂಗಸ್ಯ ಪುರತೋ ನಿತ್ಯಂ ತದರ್ಥಂ ಚಾಂಗಚೇಷ್ಟನಂ॥ ಲಿಂಗಾರ್ಥದತ್ತಸರ್ವಸ್ವಂ ಲಿಂಗನಿಷ್ಠೇತಿ ಗೀಯತೇ—ಸೂಕ್ಷ್ಮಾಗಮ.

## ಜಂಗಮ ಭಕ್ತಿ.

ಇಂತು ಲಿಂಗದಲ್ಲಿ ಕರಗಿದ ಭಕ್ತನು ಜಂಗಮವು ಲಿಂಗವೆಂದೆ ಕಾಂಬನು. ಭಕ್ತ ಜಂಗಮವೆಂಬಿವು ಜ್ಞಾನಕ್ರಿಯೆಗಳಂತೆಯೂ, ಶರೀರೇಂದ್ರಿಯಗಳಂತೆಯೂ, ಪ್ರಾಣಚೈತನ್ಯಗಳಂತೆಯೂ ಏಕರೂಪವಾಗಿವೆ. ಭಕ್ತನು ಜಂಗಮದಲ್ಲೂ ಜಂಗಮವು ಭಕ್ತನಲ್ಲೂ, ಬೆರೆದು ಮಾಡುವ ಭಕ್ತಿಯೆ ಭಕ್ತಿಯು.

"ಜಂಗಮವ ಕೂಡಿ ಲಿಂಗಾರ್ಚನವ ಮಾಡುವುದು ಲೇಸು ಕಂಡಯ್ಯ ಭಕ್ತಂಗೆ; ಆ ಭಕ್ತನ ಕೂಡಿಕೊಂಡು ಲಿಂಗಾರ್ಚನವ ಮಾಡುವುದು ಲೇಸಯ್ಯ ಜಂಗಮಕ್ಕೆ. ಆ ಜಂಗಮದ ದಾಸೋಹವೆ ಭಕ್ತನ ಕರ್ತವ್ಯ; ಆ ಭಕ್ತನ ಕಿಂಕಿಲವೆ ಜಂಗಮಕ್ಕೆ ದಾಸೋಹ. ಆ ಭಕ್ತನೊಳಗೆ ಜಂಗಮವಡಗಿ, ಆ ಜಂಗಮದೊಳಗೆ ಭಕ್ತನಡಗಿಹುದ ಇದನೇನೆಂದು ಹವಣಿಸುವೆನಯ್ಯ ತೆರಹಿಲ್ಲದ ಘನವ! ಈ ಎರಡಕ್ಕೆ ಭವವಿಲ್ಲೆಂದು ನಿಮ್ಮ ಶ್ರುತಿಗಳು ಹೇಳಿದುವಾಗಿ"

## ಪ್ರಸಾದ.

ಗುರುಲಿಂಗಜಂಗಮಾತ್ಮಕನಾಗಿ ಚರಿಸುವ ಭಕ್ತನು ತನುಪ್ರಸಾದ ಮನಪ್ರಸಾದ ಧನಪ್ರಸಾದನಾದನು. ಪ್ರಸಾದಕಾಯನಿಗೆ ಪ್ರಸಾದವೆ ಆಹಾರವು. ಶುದ್ಧ ಕಾಯಕದಿಂದ ಬಂದ ಪದಾರ್ಥವನ್ನು ಗುರುಲಿಂಗ ಜಂಗಮಕ್ಕೆ ನಿವೇದಿಸಿ ಉಳಿಮೆಯನ್ನು ಕೊಂಬುದು ಪ್ರಸಾದವು. ಪ್ರಸಾದವನ್ನು ಕೈಕೊಳ್ಳುವ ಬಗೆಯು ಹ್ಯಾಗೆಂದರೆ:—

"ಹೊನ್ನಿನೊಳಗೊಂದೊರೆಯ ಸೀರೆಯೊಳಗೊಂದೆಳೆಯ,
ಅನ್ನದೊಳಗೊಂದಗುಳ ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ,
ನಿಮ್ಮಾಣೆ ನಿಮ್ಮ ಪುರಾತರಾಣೆ. ನಿಮ್ಮ ಶರಣರಿಗಲ್ಲದೆ
ಮತ್ತೊಂದನರಿಯೆ ಕೂಡಲ ಸಂಗಮದೇವ"

"ನಾನು ಆರಂಬವ ಮಾಡುವೆನಯ್ಯ ಗುರುಪೂಜೆಗೆಂದು.
ನಾನು ಬೇಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು.

ನಾನು ಪರಸೇವೆಯ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು. ನಾನಾವ ಕರ್ಮವ ಮಾಡಿದಡೆಯು ಆ ಕರ್ಮಫಲ ಭೋಗವ ನೀ ಕೊಡುವೆ ಎಂಬುದರಿತಿಪ್ಪೆನಾಗಿ ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ ವ್ಯಯಮಾಡೆನು. ನಿಮ್ಮ ಸೊಲ್ಲಿಂಗೆ ಸಲ್ಲಿಸುವೆನು. ನಿಮ್ಮಾಣೆ ಕೂಡಲ ಸಂಗಮದೇವ"

"ಮೌನದಲುಂಬುವುದು ಆಚಾರವಲ್ಲ. ತುತ್ತಿಗೊಮ್ಮೆ ಶಿವಶರಣೆನ್ನುತ್ತಿರಬೇಕು. ಕರಣವೃತ್ತಿಗಳಡಗುವುವು ಕೂಡಲ ಸಂಗನ ನೆನೆಯುತ್ತ ಉಂಡರೆ"

## ಧರ್ಮವು ಇಹಪರ ಸಾಧಕವು.

ಈ ಧರ್ಮವು ಇಹಪರ ಸಾಧಕವು:—

"ಮರ್ತ್ಯಲೋಕವೆಂಬುದು ಕರ್ತನ ಕಮ್ಮಟವಯ್ಯ ಇಲ್ಲಿ ಸಲ್ಲುವರು ಅಲ್ಲಿ ಸಲ್ಲುವರಯ್ಯ. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ. ಕೂಡಲ ಸಂಗಮದೇವ"

## ಕಾಯಕಗಳು

ನಮ್ಮ ಸಮಾಜವು ಜಗಳದಿಂದ ಕಡಿಕಡಿಯಾದುದಕ್ಕೆ ಕಳವಳಗೊಂಬರು ಅಷ್ಟಾವರಣ ಪಂಚಾಚಾರಗಳನ್ನು ಪಾಲಿಸುತ್ತ ಸಮಾಜದಲ್ಲಿರುವ ಜಾತಿವಿಜಾತಿಗಳನ್ನು ತೆಗೆದು ಹಾಕಲಿ. ಆಯ್ಯಾ ಉದ್ಯೋಗಗಳು ಶಿವನ ಕಾಯಕವೆಂದು ಮನಗಂಡು ಉಚ್ಚನೀಚ ಭಾವವ ಮಾಡದಿರಲಿ:—

"ದೇವಸಹಿತ ಭಕ್ತರು ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡೆನಾದರೆ ತಲೆದಂಡ ತಲೆದಂಡ. ಕೂಡಲ ಸಂಗಮದೇವ ಭಕ್ತರಲ್ಲಿ ಕುಲವನರಸಿದರೆ ನಿಮ್ಮಾಣೆ ನಿಮ್ಮ ರಾಣಿವಾಸದಾಣೆ"

ನಮ್ಮ ಸಮಾಜದ ಔದ್ಯೋಗಿಕ ವೃದ್ಧಿಯನ್ನು ಗುರಿಯಿಟ್ಟವರು:—

"ಭಕ್ತಿವಿಶೇಷವ ಮಾಡುವರೆ ಹತ್ತು ಬೆರಲುಂಟು. ಹಾಸಿದುಡಿದರೆ ತನಗುಂಟೆ ತನ್ನ ಪ್ರಮಥರಿಗುಂಟು. ಮಾರಿ ತಂದೆಗಳಂತೆ ಎನಗೇಕಹುದಯ್ಯ? ರತ್ನ ಸಂಕೋಲೆಯನಿಕ್ಕಿ ಕಾಡಿಹ ಕೂಡಲ ಸಂಗಮದೇವ"

ಎಂಬ ಬಸವನ ಉಕ್ತಿಯನ್ನು ಬೇರೆ ದುಡಿಮೆಯ ದೊಡ್ಡಸ್ತಿಕೆಯನ್ನು ಹಬ್ಬಿಸಲಿ.

## ಸ್ತ್ರೀ ಸುಧಾರಣೆ.

ಸ್ತ್ರೀ ಸುಧಾರಣವನ್ನು ಬಯಸುವರು ಬಸವನಃ—

ಗಂಡಶಿವಲಿಂಗ ಭಕ್ತ ಹೆಂಡಿತಿ ಕೊಂಬುದು ಸುರೆಯ ಮಾಂಸ. ಭಾಂಡಭಾಜನ ಶುದ್ಧಿ ಇಲ್ಲದವರ ಭಕ್ತಿ ಹೆಂಡದ ಮಡಿಕೆಯ ಹೊರಗೆ ತೊಳೆದಂತೆ ಕೂಡಲ ಸಂಗಮದೇವ.

ಎಂಬೀ ವಚನದಲ್ಲಿ ಬಸವನು ಸ್ತ್ರೀಯರಿಗೂ ಸಂಸ್ಕೃತಿಯು ಅವಶ್ಯವೆಂದುದನ್ನು ಸಮಾಜಕ್ಕರುಹಿಸಲಿ.



# ಕೆಳದಿಯ ವೆಂಕಟಪ್ಪ ನಾಯಕನು.

(೧೫೮೨—೧೬೨೦)

(ಲೇಖಕಃ— ರಾ॥ ಸಾ॥ ಫ. ಗು ಹಳಕಟ್ಟಿ. ಬಿ, ಎ, ಎಲ್, ಎಲ್, ಬಿ.
ವಕೀಲ ವಿಜಾಪುರ.)



ಕೆಳದಿಯ ವೆಂಕಟಪ್ಪನಾಯಕನು ಕೆಳದಿಯ ರಾಜವಂಶದಲ್ಲಿ ಅತ್ಯಂತ ಪ್ರಸಿದ್ಧನು. ಈತನೆ ಆ ರಾಜ್ಯದ ವಿಸ್ತಾರಕ್ಕೆ ಮೊದಲು ತಳಹದಿಯನ್ನು ಹಾಕಿದವನು. ಅವನಕಿಂತ ಪೂರ್ವದಲ್ಲಿ ಈ ವಂಶದವರು ವಿಜಯನಗರದ ಮಾಂಡಲಿಕರಾಗಿ ಒಂದು ಚಿಕ್ಕ ಸ್ಥಾನದ ಒಡೆಯರಾಗಿದ್ದರು. ಆದರೆ ವಿಜಯನಗರದ ತರುವಾಯ ಅದನ್ನು ಸುತ್ತಲೂ ಹಬ್ಬಿಸಿ, ಅದನ್ನು ಮೊದಲಿಗೆ ಉಚ್ಚಸ್ಥಿತಿಗೆ ತಂದವನು ವೆಂಕಟಪ್ಪ ನಾಯಕನೇ ಇದ್ದಾನೆ. ಇವನ ಚರಿತ್ರೆಯು ಬಹಳ ಮಹತ್ವದ್ದಿದ್ದು ಅದನ್ನು ಪ್ರತಿಯೊಬ್ಬ ಕರ್ನಾಟಕಸ್ತನು ಅರಿಯುವದು ಅವಶ್ಯವದೆ. ಈ ಕೆಳಗಿನ ಸಂಗತಿಗಳು ಬಸವರಾಜಕೃತ ಸಂಸ್ಕೃತಶಿವತತ್ವರತ್ನಾಕರ, ಕೆಳದೀನೃಪವಿಜಯಕಾವ್ಯ, ದಕ್ಷಿಣಕನ್ನಡಜಿಲ್ಹೆಯ ಪ್ರಾಚೀನ ಇತಿಹಾಸ, ಕಾರವಾರ ಗ್ಯಾಜೀಟಿಯರು ಈ ಗ್ರಂಥಗಳ ಆಧಾರದಿಂದ ಬರೆಯಲ್ಪಟ್ಟಿದೆ. ಈ ಗ್ರಂಥಗಳಲ್ಲಿ ಭಿನ್ನಾಭಿಪ್ರಾಯಗಳಿದ್ದಲ್ಲಿ ಶಿವತತ್ವರತ್ನಾಕರದಲ್ಲಿ ನಿರೂಪಣೆಯಾದ ಸಂಗತಿಗಳೇ ಹೆಚ್ಚಿಗೆ ವಿಶ್ವಸನೀಯವಾದುವೆಂದು ತಿಳಿದು ಅವುಗಳೇ ಇಲ್ಲಿ ಉಲ್ಲೇಖಿಸಲ್ಪಟ್ಟವೆ.

ಮುಸಲ್ಮಾನ ಐದು ಬಾದಶಹರು ಸಮ್ಮಿಲಿತರಾಗಿ ವಿಜಯನಗರದ ಸಾಮ್ರಾಜ್ಯವನ್ನು ತಾಳೀಕೋಟೆಯ ಕಾಳಗದಲ್ಲಿ ಮುರಿದಿಕ್ಕಿದ ಬಳಿಕ, ಕನ್ಯಾಕುಮಾರೀಭೂಶಿರದವರೆಗೆ ಸುತ್ತಲೂ ಪಸರಿಸಿದ ಅವರ ರಾಜ್ಯವೆಲ್ಲವೂ ಸಣ್ಣ ಸಣ್ಣ ಪಾಳೆಯಗಾರರಿಂದ ಛಿನ್ನಭಿನ್ನವಾಯಿತು. ಅಂದಿನಿಂದ ಈ ಪಾಳೆಯಗಾರರೆಲ್ಲರೂ ತಾವಿದ್ದ ನಾಡುಗಳನ್ನು ಆಕ್ರಮಿಸಿಕೊಂಡು ಸ್ವತಂತ್ರವಾಗಿ ರಾಜ್ಯವಾಳತೊಡಗಿದರು. ಹೀಗೆ ಸಾವಿರಾರು ವರುಷಗಳಿಂದ ಅವ್ಯಾಹತವಾಗಿ ಸಾಗಿ ಬಂದ ಕರ್ನಾಟಕದ

ಸಂಸ್ಕೃತಿಯ ಪ್ರವಾಹಕ್ಕೆ ಸಹಜಿಕವಾಗಿಯೇ ಪ್ರತಿಬಂಧವು ಉಂಟಾಯಿತು. ಆದರೆ ಈ ಪಾಳೆಯಗಾರರಲ್ಲಿ ಅಪವಾದಾತ್ಮಕವಾಗಿ ಉಳಿದು ಕರ್ನಾಟಕದ ಸಂಸ್ಕೃತಿಯನ್ನು ಹೆಚ್ಚಿಸುತ್ತ ಅದನ್ನು ಮತ್ತೆ ೨೦೦ ವರುಷಗಳ ವರೆಗೆ ಪೋಷಿಸಿದವರು ಇಕ್ಕೇರಿಯ ನಾಯಕರು ಅಥವಾ ಕೆಳದಿಯ ರಾಜರು ಇದ್ದಾರೆ. ಇವರಲ್ಲಿ ಅನೇಕರು ತಮ್ಮ ಆಸ್ಥಾನದಲ್ಲಿ ಪಂಡಿತರನ್ನು ಆಶ್ರಯಕೊಡುತ್ತಿದಲ್ಲದೆ ತಾವೂ ಪಾಂಡಿತ್ಯವನ್ನು ಹೊಂದಿ [illegible] ಅನೇಕ ಗ್ರಂಥಗಳನ್ನೂ ರಚಿಸಿದರು. ಮತ್ತು ಭಯಂಕ[illegible] ಆಗಿನ ಅಸ್ವಾಸ್ಥ್ಯದ ಕಾಲದಲ್ಲಿ ಮೊಗಲ, ಮತ್ತು ಮರಾಠಾ ದಾಳಿಗಳನ್ನು ಸ್ವಪರಾಕ್ರಮದಿಂದ ತಡೆದು ತಮ್ಮ ನಾಡಿನಲ್ಲಿ ಸುಖಶಾಂತಿಗಳನ್ನು ನೆಲೆಗೊಳಿಸಿದರು. ಈ ಪ್ರಕಾರ ವರ್ತಿಸಿ ಅತ್ಯಂತ ಖ್ಯಾತಿಯನ್ನು ಪಡೆದವರಲ್ಲಿ ವೆಂಕಟಪ್ಪನಾಯಕನನ್ನು ನಾವು ಅವಶ್ಯವಾಗಿ ಗಣಿಸಬಹುದಾಗಿದೆ.

## ಮುಸಲ್ಮಾನರೊಡನೆ ಯುದ್ಧ.

ವೆಂಕಟಪ್ಪನಾಯಕನು ರಾಜ್ಯಾರೋಹಣ ಮಾಡಿದ ಕೂಡಲೆ ವಿಜಾಪುರ ಬಾದಶಹರ ದಾಳಿಗಳನ್ನು ಎದುರಿಸುವ ಪ್ರಸಂಗವು ಅವನಿಗೆ ಮೊದಲಿಗೆ ಬಂದೊದಗಿತು. ವಿಜಯನಗರದ ರಾಜ್ಯವು ಹಾಳಾದ ಬಳಿಕ ವಿಜಾಪುರ ಬಾದಶಹರು ಅದರ ಪಶ್ಚಿಮದ ನಾಡನ್ನೂ ಗೋವಳಕೊಂಡೆಯ ಬಾದಶಹರು ಅದರ ಪೂರ್ವದ ನಾಡನ್ನೂ ಆಕ್ರಮಿಸಬೇಕೆಂದು ಅವರು ತಮ್ಮ ತಮ್ಮೊಳಗೆ ಒಡಂಬಡಿಕೆಯನ್ನು ಮಾಡಿಕೊಂಡರು. ಅದಕ್ಕನುಸಾರವಾಗಿ ವಿಜಾಪುರಬಾದಶಹರು ಪ್ರತಿವರ್ಷ ಮಲಪ್ರಭೆಯ ದಂಡೆಯಿಂದ ದಕ್ಷಿಣಕ್ಕೆ ಕಾವೇರಿಯ ನದಿಯ ವರೆಗೂ ಹಬ್ಬಿದ್ದ ಸಣ್ಣ ಸಣ್ಣ ಪಾಳೆಯಗಾರರ ಮೇಲೆ ಬೀಳುತ್ತ, ಅವರ ರಾಜ್ಯಗಳನ್ನು ಸೆಳೆಯುತ್ತ ಸೆರೆಸೂರೆ ಮಾಡುವ ಕ್ರಮವನ್ನು ಹಿಡಿದಿದ್ದರು. ಆ ಪ್ರಕಾರ ಅವರ ಪ್ರಸಿದ್ಧ ಸೇನಾನಾಯಕರಾದ ಮಂಜುಳಖಾನ, ಅಂಕುಶಖಾನ ಮತ್ತು ರಣದುಲ್ಲಾಖಾನ ಇವರು ಒಂದು ದೊಡ್ಡ ದಂಡನ್ನು ತೆಗೆದುಕೊಂಡು ಇಕ್ಕೇರಿಯ ನಾಡನ್ನು ಅಭಿಯೋಗಿಸಿದರು. ಆಗ ರಾಣೇಬೆನ್ನೂರು ಮತ್ತು ಹಾನಗಲ್ಲು ತಾಲೂಕಿನ ಬಹುಭಾಗವು ಈ ರಾಜರ ಕೈವಶವಾಗಿದ್ದಿತು. ಮುಸಲ್ಮಾನರ ದಂಡು ಈ ಭಾಗವನ್ನೆಲ್ಲ ಆಕ್ರಮಿಸಿ

ಜಡೆ ಎಂಬ ಗ್ರಾಮವನ್ನು ಮುತ್ತಿತು. ಆಗ ವೆಂಕಟಪ್ಪನಾಯಕನು ತನ್ನ ಸೈನ್ಯದೊಂದಿಗೆ ಬಂದು ಶೂರತನದಿಂದ ಕಾದಿ ಈ ಮುತ್ತಿಗೆಯನ್ನು ಎಬ್ಬಿಸಿದನು. ಮತ್ತು ಮದಗವಾಸೂರಿನಲ್ಲಿದ್ದ ಮುಸಲ್ಮಾನರ ದಂಡಾಳುಗಳನ್ನು ಹಿಂದಕ್ಕಟ್ಟಿದನು. ಇದಲ್ಲದೆ ಆ ಕಾಲಕ್ಕೆ ಹಾನಗಲ್ಲು, ಮತ್ತು ಚಂದ್ರಗುತ್ತಿಯ ಕೋಟೆಗಳೂ ಮುಸಲ್ಮಾನರಿಂದ ಮುತ್ತಲ್ಪಟ್ಟಿದ್ದವು. ವೆಂಕಟಪ್ಪನಾಯನು ಅವರನ್ನು ಅಲ್ಲಿಂದಲೂ ಚದರಿಸಿ ತನ್ನ ರಾಜ್ಯದ ಹೊರಗೆ ಶತ್ರುಸೈನ್ಯವನ್ನು ನೂಕಿದನು. ಆದರೆ ಇಷ್ಟಕ್ಕೆ ಮುಸಲ್ಮಾನರು ತಮ್ಮ ಪ್ರಯತ್ನವನ್ನು ಬಿಡಲಿಲ್ಲ. ಅವರು ಇಕ್ಕೇರಿ ರಾಜ್ಯಕ್ಕೆ ಸಮೀಪವಾಗಿದ್ದ ಕೆಂಗೆಯ ಹನುಮನಾಯಕನಿಗೆ ವೆಂಕಟಪ್ಪನಾಯಕನ ವಿರುದ್ಧವಾಗಿ ಯುದ್ಧಹೂಡಲು ಪ್ರೇರೇಪಿಸಿದರು. ಆಗ ಈ ಕೆಂಗೆಯ ಹನುಮನು ಮಂಜುಳಖಾನನ ಸಹಾಯವನ್ನು ತೆಗೆದುಕೊಂಡು ಇಕ್ಕೇರಿ ರಾಜ್ಯವನ್ನು ಒಳನುಗ್ಗಿದನು. ಆಗ ವೆಂಕಟಪ್ಪನಾಯಕನ ಮೊಮ್ಮಗನೂ ಯುವರಾಜನೂ ಆದ ವೀರಭದ್ರನಾಯಕನು ಹೊಳೆಹುನ್ನೂರು ಗ್ರಾಮದಲ್ಲಿದ್ದಾಗ ಅವನು ಈ ಎದುರಾಳಿಗಳಿಂದ ಸುತ್ತುಗಟ್ಟಲ್ಪಟ್ಟನು. ಈ ಸಂಗತಿಯು ವೆಂಕಟಪ್ಪನಾಯಕನಿಗೆ ತಿಳಿದಕೂಡಲೇ ಅವನು ತಾನೊಬ್ಬನೇ ಒಂದು ಕುದುರೆಯನ್ನು ಏರಿಕೊಂಡು ಆ ಸ್ಥಳಕ್ಕೆ ತೀವ್ರವಾಗಿ ಹೋಗಿ ಅಲ್ಲಿ ಒಂದು ಚಿಕ್ಕ ದಂಡನ್ನು ಕೂಡಿಸಿ ಎದುರಾಳಿಗಳ ಮೇಲೆ ಬಿದ್ದು ಬಹಳ ಹೊತ್ತಿನ ವರೆಗೆ ಶೂರತನದಿಂದ ಕಾದಾಡಿ ಮಂಜುಳಖಾನನ ದಂಡನ್ನು ಹಿಂದಕ್ಕೆ ಅಟ್ಟಿದನು. ಹನುಮನಾಯಕನು ಓಡಿಹೋದನು. ಈ ಕಾಲಕ್ಕೆ ವೆಂಕಟಪ್ಪನಾಯಕನು ತೋರಿಸಿದ ಪರಾಕ್ರಮಕ್ಕೋಸ್ಕರ ಅವನಿಗೆ "ದೊಖಂಡೇರಾಯ" ಎಂಬ ಬಿರುದು ಪ್ರಾಪ್ತವಾಯಿತು. ಮತ್ತು ಹನುಮನಾಯಕನ ಹಿರಿಯಮಗನು ವೆಂಕಟಪ್ಪನಾಯಕನ ಕೂಡ ಸಂಧಿಯನ್ನು ಮಾಡಿಕೊಂಡು ಅವನಿಗೆ ಲಕ್ಕವಲ್ಲಿ, ಗಾಜನೂರುಮತ್ತು ಶಿವಮೊಗ್ಗೆಯ ಕೋಟೆಗಳನ್ನು ಕೊಟ್ಟು ಶರಣಾಗತನಾದನು. ಆದರೆ ಅವನ ತಮ್ಮನು ಇದಕ್ಕೆ ಒಪ್ಪದೆ ಇನ್ನೊಂದು ದಂಡನ್ನು ತೆಗೆದುಕೊಂಡು ಬಂದು ತುಂಗಭದ್ರೆಯ ತೀರದಲ್ಲಿ ಬಿಡಾರ ಬಿಟ್ಟಿದ್ದ ವೆಂಕಟಪ್ಪನಾಯಕನ ದಂಡಿನ ಮೇಲೆ ಬಂದು ಬಿದ್ದನು. ಆದರೆ ಅಲ್ಲಿ ಒದಗಿದ ಕಾಳಗದಲ್ಲಿ ಅವನೂ ಸೋತು ಬಾಣಾವರದ ಕಡೆಗೆ ಓಡಿ ಹೋ

ದನು. ಈ ಪ್ರಕಾರ ಮುಸಲ್ಮಾನರ ಪ್ರಯತ್ನಗಳನ್ನು ಸಂಪೂರ್ಣ ನಿಷ್ಫಲವಾಗಲು ಮುಂದೆ ಅವರು ವೆಂಕಟಪ್ಪನಾಯಕನ ಗೊಡವೆಗೆ ಎಂದೂ ಹೋಗಲಿಲ್ಲ. ಮತ್ತು ವೆಂಕಟಪ್ಪನಾಯಕನು ಈ ಪ್ರಕಾರ ಜಯವನ್ನು ಸಂಪಾದಿಸಿದ ಸ್ಮರಣಾರ್ಥಕ್ಕೆ ಅವನು ತನ್ನ ಗಡಿಸೀಮೆಯಲ್ಲಿ ಮುಖ್ಯ ಪಟ್ಟಣವಾದ ಹಾನಗಲ್ಲಿನಲ್ಲಿ ಒಂದು ಜಯಸ್ತಂಭವನ್ನು ನಡಿಸಿದನು.

## ಸಣ್ಣ ಸಣ್ಣ ಪಾಳೆಯಗಾರರನ್ನು ಮುರಿದದ್ದು.

ಈ ಪ್ರಕಾರ ವೆಂಕಟಪ್ಪನಾಯಕು ತನ್ನ ರಾಜ್ಯಕ್ಕೆ ಬಂದ ಮೊದಲಿನ ಎಡರನ್ನು ದೂರ ಮಾಡಿಕೊಂಡ ಬಳಿಕ ಅವನು ತನ್ನ ಸಮೀಪವರ್ತಿಗಳಾದ ಸಣ್ಣ ಸಣ್ಣ ಪಾಳೆಯಗಾರರನ್ನು ತನ್ನ ಅಂಕಿತ ಮಾಡಿಕೊಳ್ಳುವ ಕಾರ್ಯದಲ್ಲಿ ತೊಡಗಿದನು. ಅವನು ಬೇಡರ ವಶದಲ್ಲಿದ್ದ ಹರಕಾಳನೆಡೆಯ ಹಳ್ಳಿಯನ್ನು ತೆಗೆದುಕೊಂಡು, ಅದನ್ನು ಮತ್ತಿಷ್ಟು ಭದ್ರಪಡಿಸಿ ಅದಕ್ಕೆ ಆನಂದಪುರವೆಂಬ ಹೆಸರನ್ನಿಟ್ಟನು. ಅಲ್ಲಿ ತಾಂಡವೇಶ್ವರ ಮತ್ತು ರಂಗನಾಥ ದೇವಾಲಯಗಳನ್ನು ಸ್ಥಾಪಿಸಿ, ತಾನು ಅಲ್ಲಿ ಇರಲಿಕ್ಕೆ ಒಂದು ಅರಮನೆಯನ್ನೂ ಕಟ್ಟಿಸಿದನು. ಮತ್ತು ಇಕ್ಕೇರಿಗೆ ಬಂದು ಅಲ್ಲಿ ಒಂದು ಸುಂದರವಾದ ಅರಮನೆಯನ್ನೂ ವಿಚಿತ್ರತರವಾದ ನಾಟಕಶಾಲೆಯನ್ನೂ ನಿರ್ಮಿಸಿದನು. ಆ ಮೇಲೆ ಕುಂಬಸೆ, ದಾನಿವಾಸ, ಮತ್ತು ಕುಂಟಿನಿ ಗ್ರಾಮಗಳನ್ನು ಆಳುತ್ತಿದ್ದಂಥ ಮತ್ತು ಅತ್ಯಂತ ವೀರರಾದಂಥ ಬೊಮ್ಮಣ್ಣ ವೀರಣ್ಣರೆಂಬ ಇಬ್ಬರನ್ನು ಗೆದ್ದು ಅವರ ಸೀಮೆಯನ್ನು ತೆಗೆದುಕೊಂಡನು. ಅಲ್ಲದೆ ಹೆಬ್ಬೆ, ಮಂಡಗದ್ದೆ, ಹಾರನಹಳ್ಳಿ ಈ ಸೀಮೆಗಳನ್ನು ಸಾಧಿಸಿ ಅವರ ಒಡೆಯರಿಂದ ಕಪ್ಪವನ್ನು ತೆಗೆದುಕೊಂಡನು. ಮತ್ತು ಬೆಂಕೀಪುರದ ನರಸಿಂಗನಾಯಕನ ಶೌರ್ಯಾತಿಶಯಗಳನ್ನೂ ಅಡಗಿಸಿದನು. ಮತ್ತು ಈ ಪ್ರಕಾರ ವಶಮಾಡಿಕೊಂಡ ಸೀಮೆಯ ರಕ್ಷಣಾರ್ಥವಾಗಿ ಕುಂಬಸೆ, ದಾನಿವಾಸ, ಹೆಬ್ಬೆ ಮತ್ತು ಮಂಡಗದ್ದೆ ಈ ಸ್ಥಳಗಳಲ್ಲಿ ಭದ್ರವಾದ ಕೋಟೆಗಳನ್ನು ಕಟ್ಟಿಸಿ ತನ್ನ ಬಲವನ್ನು ಸ್ಥಿರಗೊಳಿಸಿದನು. ಈ ಮೇರೆಗೆ ವೆಂಕಟಪ್ಪನಾಯಕನು ಈಗಿನ ಹಾನಗಲ್ಲು, ರಾಣೇಬೆನ್ನೂರು ಮತ್ತು ಶಿವಮೊಗ್ಗೆ ಮತ್ತು ಕಡೂರು ಜಿಲ್ಹೆಗಳ ಬಹುಭಾಗವನ್ನು ಆಕ್ರಮಿಸಿ ಬಹು ಬಲಾಢ್ಯನಾದನು.

## ಭೈರಾ ದೇವಿಯೊಡನೆ ಯುದ್ಧ.

ಈ ಪ್ರಕಾರ ವೆಂಕಟಪ್ಪನಾಯಕನು ತನ್ನ ರಾಜ್ಯದ ಮೇರೆಯನ್ನು ಗಟ್ಟದ ಮೇಲೆ ಹಬ್ಬಿಸಿದ ಬಳಿಕ ಅವನು ಉತ್ತರ ಕನ್ನಡ ಮತ್ತು ಮಂಗಳೂರು ಜಿಲ್ಲೆಗಳ ಕಡೆಗೆ ತನ್ನ ಲಕ್ಷವನ್ನು ತಿರುಗಿಸಿದನು. ಉತ್ತರ ಕನ್ನಡ ಜಿಲ್ಹೆಯಲ್ಲಿ ಭೈರಾದೇವಿಯೇ ಅವನಿಗೆ ಮುಖ್ಯ ಇದಿರಾಳಿಯಾಗಿದ್ದಳು. ಗೆರಸೊಪ್ಪೆಯೇ ಈಕೆಯ ರಾಜಧಾನಿಯು. ಅವಳ ರಾಜ್ಯವು ಸಮುದ್ರತೀರದ ವರೆಗೂ ಹಬ್ಬಿತ್ತು. ಈ ನಾಡಿನಲ್ಲಿ ಅತ್ಯುತ್ತಮ ಮೆಣಸು ಬಹು ವಿಪುಲವಾಗಿ ಬೆಳೆಯುತ್ತಿದ್ದು ಅದೆಲ್ಲವೂ ಯುರೋಪಖಂಡಕ್ಕೆ ಪೋರ್ತುಗೀಜರಿಂದ ಸಾಗಿಸಲ್ಪಡುತ್ತಿತ್ತು. ಈ ಕಾರಣದಿಂದ ಭೈರಾದೇವಿಯು ಯುರೋಪಖಂಡದಲ್ಲಿ "ಮೆಣಸಿನ ರಾಣಿ" ಎಂಬ ಹೆಸರಿನಿಂದ ಬಹು ಪ್ರಸಿದ್ಧಳಾಗಿದ್ದಳು. ಮತ್ತು ಆಕೆಯ ರಾಜ್ಯವು ಅತಿ ವಿಸ್ತಾರವಾದದ್ದೂ ಧನಾಢ್ಯವೂ ಇದ್ದದರಿಂದ ಆಕೆಯು "ಏಕ ಲಕ್ಷ ದೇಶದ ದೊರೆ" ಎಂಬ ಬಿರುದನ್ನು ಹೊಂದಿದವಳಾಗಿದ್ದಳು. ಆಗ ವೆಂಕಟಪ್ಪನಾಯಕನು ತನ್ನ ದಳವಾಯಿಯಾದ ಲಿಂಗಣ್ಣನಾಯಕನನ್ನು ಆಕೆಯ ಮೇಲೆ ಕಳಿಸಿದನು. ಅವನು ಅವಳನ್ನು ಯುದ್ಧದಲ್ಲಿ ಸೋಲಿಸಿ ಸೆರೆ ಹಿಡಿದನು. ಮತ್ತು ಗೆರೆಸೊಪ್ಪೆಯ ಪಟ್ಟಣವನ್ನು ಹಾಳುಮಾಡಿ ಆಕೆಯು ಆಳುತ್ತಿದ್ದ ಅವಿನಹಳ್ಳಿ, ಕರುವೂರು, ಮೊರಬಡಿ, ಹಾಳನಾಡು, ಭಟಕಳ ಚಂದಾವರ, ಗೋವರ್ಧನಗಿರಿ, ವಡ್ಡಿಮೇದಿನಿ ಮೊದಲಾದ ಸ್ಥಳಗಳನ್ನು ಹಿಡಿದುಕೊಂಡನು. ಮತ್ತು ಆಕೆಯ ವಿಚಿತ್ರತರವಾದ ವಸ್ತುವಾಹನ ಕೋಶಾದಿಗಳನ್ನು ಸ್ವಾಧೀನಪಡಿಸಿಕೊಂಡನು. ಅಂದಿನಿಂದ ಈಕೆಯ ವಂಶವೇ ನಿಂತು ಹೋಯಿತು. ಈ ಪ್ರಕಾರ ವೆಂಕಟಪ್ಪನಾಯಕನಿಗೆ ಈಗಿನ ಕಾರವಾರ ಜಿಲ್ಹೆಯ ಬಹು ಮಹತ್ವದ ಭಾಗವೆಲ್ಲವು ಅಂಕಿತವಾಯಿತು. ಮತ್ತು ಭೈರಾದೇವಿಯನ್ನು ಸೋಲಿಸಿದಂದಿನಿಂದ ಅವನು ಸುತ್ತಲಿನ ರಾಜರಲ್ಲಿ ಅತ್ಯಂತ ಪ್ರಬಲನೂ ಧನಾಢ್ಯನೂ ಆದನು.

ಈ ಪ್ರಕಾರ ವೆಂಕಟಪ್ಪನಾಯಕನು ತನ್ನ ರಾಜ್ಯವನ್ನು ವಿಸ್ತರಿಸಿದ ಬಳಿಕ ಅವನು ತನ್ನ ರಾಜ್ಯವನ್ನು ಭದ್ರಪಡಿಸುವದರಲ್ಲಿಯೂ ಪೇಟೆ ಪಟ್ಟಣಗಳನ್ನು ನಿರ್ಮಿಸುವದರಲ್ಲಿಯೂ ಕಾಲಕಳೆಯಹತ್ತಿದನು. ಈ ಕಾಲಕ್ಕೆ ಭಟಕಳ ಮತ್ತು ಹೊನ್ನಾವರ ಬಂದರಗಳು ಅವನ ರಾಜ್ಯ

ದಲ್ಲಿ ಸೇರಿದ್ದರಿಂದ ಅವುಗಳ ಮಾರ್ಗವಾಗಿ ಪರದೇಶಗಳ ಕೂಡ ವ್ಯಾಪಾರವು ಅಭಿವೃದ್ಧಿಸ್ಥಿತಿಯನ್ನು ಹೊಂದಹತ್ತಿತ್ತು. ಮತ್ತು ತನ್ನ ರಾಜ್ಯವೆಲ್ಲ ಅರಣ್ಯಪ್ರದೇಶದಲ್ಲಿದ್ದರೂ ಕೂಡ ಅವನು ತನ್ನ ಬಂದರಗಳ ವರೆಗೆ ಅತ್ಯುತ್ತಮವಾದ ಮಾರ್ಗಗಳನ್ನು ಕಲ್ಪಿಸಿ ಪ್ರವಾಸಿಕರಿಗೆ ಬಹಳ ಅನುಕೂಲ್ಯತೆಗಳನ್ನು ಮಾಡಿಕೊಟ್ಟನು. ಇದಲ್ಲದೆ ಅವನು ಅತ್ಯಂತ ಧರ್ಮಿಷ್ಠನೂ ಆಗಿದ್ದನು. ಆದ್ದರಿಂದ ಅವನು ಅನೇಕ ಸ್ಥಳಗಳಲ್ಲಿ ದೇವಾಲಯಗಳನ್ನೂ ಮಠಗಳನ್ನೂ ಅಗ್ರಹಾರಗಳನ್ನೂ ಕಟ್ಟಿಸಿದನು. ಈ ಮೇರಿಗೆ ಅವನು ಕಾಲಕಳೆಯುತ್ತಿರಲು ಅವನು ಮಂಗಳೂರು ಪ್ರಾಂತವನ್ನು ಅಭಿಯೋಗಿಸುವ ಪ್ರಸಂಗವು ಬಂದೊದಗಿತು.

## ಮಂಗಳೂರು ಜಿಲ್ಹೆಯಲ್ಲಿ ಅಭಿಯೋಗ.

ವಿಜಯನಗರವು ಹಾಳಾದ ಬಳಿಕ ಮಂಗಳೂರು ಜಿಲ್ಹೆಯಲ್ಲೆಲ್ಲ ಅನೇಕ ಸಣ್ಣಪುಟ್ಟ ಪಾಳೆಯಗಾರರು ಉತ್ಪನ್ನರಾಗಿದ್ದರು. ಇದರಲ್ಲಿ ಮಂಗಳೂರಿನ ಬಂಗರಅರಸರೂ, ಮೂಡಬಿದರೆಯ ಚೌಟರಾಜರೂ, ಕಾರ್ಕಳದ ಬೈರರಸಒಡೆಯರೂ, ವೇಣೂರಿನ ಅಜಿಲರೂ, ಸುರಾಳತೊಳಹಾರ ಅರಸರೂ, ಹೊನ್ನೆಯ ಕಂಬಳಿಅರಸರೂ, ಕುಂಬಳೆಯ ಅರಸರೂ ಬಹಳ ಪ್ರಬಲರಾಗಿದ್ದರು. ಇವರೆಲ್ಲರೂ ಮಲಬಾರಪ್ರಾಂತದ ವರೆಗೆ ತುಳುನಾಡನ್ನೆಲ್ಲ ಆಕ್ರಮಿಸಿ ಆಳುತ್ತಿದ್ದರು. ಇವರೆಲ್ಲ ಬಹುತರ ಜೈನಧರ್ಮವನ್ನು ಅನುಸರಿಸಿ ಜೈನಸಂಸ್ಕೃತಿಯನ್ನೇ ಪರಿಪಾಲಿಸುತ್ತಿದ್ದರು. ಇವರು ವಿಜಯನಗರದ ನರಪತಿಗಳಿಗೆ ಮಾಂಡಲಿಕರಾಗಿ ಇಕ್ಕೇರಿಯವರ ಮುಖಾಂತರವಾಗಿ ಅವರಿಗೆ ಕಪ್ಪಗಾಣಿಕೆಗಳನ್ನು ಸಲ್ಲಿಸುತ್ತಿದ್ದರು. ಆದರೆ ಆ ರಾಜ್ಯವು ಹಾಳಾದ ಬಳಿಕ ಅವರು ಸ್ವತಂತ್ರರಾಗಿ ತಮ್ಮತಮ್ಮೊಳಗೆ ಕದನಮಾಡುತ್ತ ರಾಜ್ಯಭಾರ ಮಾಡುತ್ತ ಬರುತ್ತಿದ್ದರು. ಈ ಅವ್ಯವಸ್ಥೆಯ ಕಾಲದಲ್ಲಿ ಅವರ ಮೇಲಧಿಕಾರಿಗಳಾಗಿದ್ದ ಇಕ್ಕೇರಿಯ ಅರಸರು ಅವರ ಅಂತಃಕಲಹದಲ್ಲಿ ಯಾವ ಬಗೆಯಿಂದಲೂ ಕೈಹಾಕಿದಂತೆ ತೋರಿಬರಲಿಲ್ಲ. ಆದರೆ ಈ ಕಾಲಕ್ಕೆ ಬಹು ಪ್ರಬಲನಾಗಿದ್ದ ವೆಂಕಟಪ್ಪನಾಯಕನಿಗೆ ಮಂಗಳೂರನ್ನು ಅಭಿಯೋಗಿಸುವ ಪ್ರಸಂಗವು ಬಂದೊದಗಿತು. ಇದು ೧೬೦೮ ರಲ್ಲಿ ಸಂಭವಿಸಿತು.

## ಹೊನ್ನೆಯ ಕಂಬಳಿ ರಾಜರು.

ಈಗಿನ ಮಂಗಳೂರು ಜಿಲ್ಲೆಯಲ್ಲಿರುವ ಕುಂದಾಪೂರ ತಾಲೂಕಿನ ಕೆಲಭಾಗವನ್ನು ಆಗ ಆಳುತ್ತಿದ್ದ ಹೊನ್ನೆಯ ಕಂಬಳಿ ರಾಜನಾದ ಬುಕರಾಯನಿಗೆ ಶಂಕರ ನಾರಾಯಣಭಟ್ಟನೆಂಬೊಬ್ಬನು ಪ್ರಧಾನಿಯಾಗಿದ್ದನು. ಈ ಪ್ರಧಾನಿಗೆ ಅರಸನು ರಾಜ್ಯಭಾರದ ಕೆಲಸವನ್ನೆಲ್ಲ ವಹಿಸಿಕೊಟ್ಟಿದ್ದನು. ಕಾಲಕ್ರಮೇಣ ಈ ಶಂಕರ ನಾರಾಯಣಭಟ್ಟನು ಬಹಳ ಪ್ರಬಲನಾಗಿ ತನ್ನ ರಾಜನನ್ನು ಲೆಕ್ಕಿಸದೆ ಆರುನಾಡು, ಕಬ್ಬನಾಡು, ಮುಗಿನಾಡು, ಚಿನ್ನಬಿದರೂರು ಸೀಮೆಗಳನ್ನು ತನ್ನ ಸ್ವಾಧೀನಪಡಿಸಿಕೊಂಡು ಚಿನ್ನಬಿದರೂರಲ್ಲಿ ರಾಜ್ಯವಾಳಹತ್ತಿದನು. ಬುಕಒಡೆಯನು ಈ ಸಂಗತಿಯನ್ನು ವೆಂಕಟಪ್ಪನಾಯಕನಿಗೆ ತಿಳಿಸಲು ಅವನು ಈ ಸಂಧಿಯನ್ನು ಸಾಧಿಸಿ ಒಂದು ದೊಡ್ಡ ದಂಡನ್ನು ತೆಗೆದುಕೊಂಡು ಬಂದು ಚಿನ್ನಬಿದರೂರನ್ನು ಮುತ್ತಿದನು. ಈ ಮುತ್ತಿಗೆಯು ೬ ತಿಂಗಳ ವರೆಗೆ ಸಾಗಿ ಕಡೆಗೆ ತೋಫಿನ ಗುಂಡುಗಳಿಂದ ಕೋಟೆಯನ್ನು ಒಡೆದು ವೆಂಕಟಪ್ಪನಾಯಕನು ಅದನ್ನು ಹಿಡಿದುಕೊಂಡನು. ಶಂಕರ ನಾರಾಯಣಭಟ್ಟನು ಶರಣಾಗತನಾದನು. ಅಲ್ಲಿಂದ ವೆಂಕಟಪ್ಪನಾಯಕನು ಹೊಸಂಗಡಿಗೆ ಬಂದು ಹೊಸಂಗಡಿ, ಕಡರಿ, ಬಗ್ಗವಾಡಿ, ಕೊಲ್ಲೂರು ಸೀಮೆಯ ಪ್ರಜೆಗಳನ್ನು ಕಾಣಿಸಿಕೊಂಡು ಅವರಿಂದ ಕಪ್ಪಗಾಣಿಕೆಯನ್ನು ತೆಗೆದುಕೊಂಡು ಇಕ್ಕೇರಿಗೆ ಮರಳಿ ಬಂದನು.

## ಕಾರಕಳದ ಭೈರಸ ಒಡೆಯರು.

ಈ ಕಾಲಕ್ಕೆ ಈ ಮಂಗಳೂರು ರಾಜರಲ್ಲಿ ಕಾರಕಳದ ಬೈರಸ ಒಡೆಯನು ಬಹು ಪ್ರಬಲನಾಗಿದ್ದನು. ಅವನು ಗಟ್ಟದ ಮೇಲೇರಿ ಶೃಂಗೇರಿಯ ಸ್ವಾಮಿಗಳ ಪ್ರದೇಶವನ್ನು ಅಭಿಯೋಗಿಸಿ ಅವರ ಪುರವನ್ನೂ ಮಠವನ್ನೂ ನುಗ್ಗಿ ಬಹಳ ಉಪದ್ರವವನ್ನು ಮಾಡಿದನು. ಆಗ ವೆಂಕಟಪ್ಪನಾಯಕನು ಸ್ವಾಮಿಗಳ ಸಹಾಯಕ್ಕೆ ಬಂದು ವೈರಿಗಳನ್ನು ಸೋಲಿಸಿ ಅವರು ಆಕ್ರಮಿಸಿಕೊಂಡಿದ್ದ ಪ್ರದೇಶವನ್ನು ತೆಗೆದುಕೊಂಡು ಸ್ವಾಮಿಗಳಿಗೆ ಕೊಟ್ಟಿದ್ದಲ್ಲದೆ ಅವರ ಮಠಕ್ಕೆ ಬಹಳ ಭೂಸ್ವಾಸ್ಥೆಯನ್ನು ಕೊಟ್ಟು ಮಠವನ್ನೂ ಜೀರ್ಣೋದ್ಧಾರ ಮಾಡಿದನು. ಇದಾದ ಕೆಲವು ದಿವಸಗಳ ತರುವಾಯ ಈ ಕಾರ್ಕಳದ ರಾಜ್ಯವನ್ನು ಸಂಪೂರ್ಣವಾಗಿ

ತನ್ನ ಹಸ್ತಗತ ಮಾಡಿಕೊಳ್ಳುವ ಪ್ರಸಂಗವು ವೆಂಕಟಪ್ಪನಾಯಕನಿಗೆ ಬಂದೊದಗಿತು.

ಈ ಕಾಲಕ್ಕೆ ಅಂದರೆ ೧೬೦೮ ನೇ ಇಸ್ವಿಯಲ್ಲಿ ಮೂಡಬಿದರಿಯ ಚೌಟರಾಜನಾದ ಚಂದ್ರಶೇಖರ ಚಿಕ್ಕರಾಯನಿಗೂ ಕಾರ್ಕಳದ ಈ ಪಾಂಡ್ಯಪ್ಪ ಧಾವಣಿ ಇಮ್ಮಡಿ ಭೈರವರಾಜನಿಗೂ ಅತ್ಯಂತ ದ್ವೇಷಭಾವವು ಉತ್ಪನ್ನವಾಗಿತ್ತು. ಯಾಕಂದರೆ ಈ ಭೈರವರಾಯನು ಚಂದ್ರಶೇಖರ ಚಿಕ್ಕರಾಯನ ತಾಯಿಯಾದ ತಿರುಮಲಾದೇವಿಯನ್ನು ಯುದ್ಧದಲ್ಲಿ ಕೊಂದಿದ್ದನು. ಆಕೆಯು ಮಡಿದ ತರುವಾಯ ಚಂದ್ರಶೇಖರನು ಪಟ್ಟಕ್ಕೆ ಬರಲು ಅವನು ತನ್ನ ತಾಯಿಯ ಕೊಲೆಯನ್ನು ಮಾಡಿದ ಭೈರವ ಅರಸನ ಸೇಡು ತೀರಿಸಿಕೊಳ್ಳಬೇಕೆಂದು ಬಗೆದು ವೆಂಕಟಪ್ಪನಾಯಕನ ಸಹಾಯವನ್ನು ಕೋರಿದನು. ಆಗ ವೆಂಕಟಪ್ಪನಾಯಕನು ಒಂದು ದೊಡ್ಡ ಸೈನ್ಯದೊಡನೆ ಹೊಸಂಗಡಿ ಕಣಿವೆಯ ಮಾರ್ಗವಾಗಿ ಕಾರ್ಕಳಕ್ಕೆ ಬಂದನು. ಅಲ್ಲಿ ಆದ ಯುದ್ಧದಲ್ಲಿ ಭೈರವರಾಯನು ಮಡಿದು ಬಿದ್ದನು. ಮತ್ತು ಅವನ ಯಾವತ್ತು ರಾಜ್ಯವನ್ನು ವೆಂಕಟಪ್ಪನಾಯಕನು ಸ್ವಾಧೀನ ಪಡಿಸಿಕೊಂಡನು. ಮತ್ತು ಚಿಕ್ಕರಾಯನಿಗೆ ತಿರುಮಲಾದೇವಿಯನ್ನು ಕೊಂದ ಸ್ಥಳವಾದ ಸಾಣೂರು ಗ್ರಾಮವನ್ನು ಉಂಬಳಿ ಹಾಕಿಕೊಟ್ಟನು. ಇದರ ತರುವಾಯ ಕಾರ್ಕಳದ ರಾಜವಂಶವು ನಷ್ಟವಾಯಿತು.

## ಬೇರೆ ಸಣ್ಣ ಸಣ್ಣ ರಾಜರನ್ನು ಗೆದ್ದಿದ್ದು.

ಇಷ್ಟಾದ ಬಳಿಕ ವೆಂಕಟಪ್ಪನಾಯಕನು ಮಂಗಳೂರಿನ ಬೇರೆ ರಾಜರನ್ನು ತನ್ನ ಅಂಕಿತ ಮಾಡಿಕೊಳ್ಳುವ ಕಾರ್ಯದಲ್ಲಿ ಉದ್ಯುಗಿಸಿದನು. ಅವನು ಮೂಡುಬಿದರೆಯ ಮಾರ್ಗನಾಗಿ ಮಂಗಳೂರಿಗೆ ಬಂದನು. ಅಲ್ಲಿ ಸುತ್ತಲಿನ ಎಲ್ಲ ಜೈನ ಅರಸರು ಬಂದು ಅವನ ಕೂಡ ಕೌಲು ಮಾಡಿಕೊಂಡರು. ವೇಣೂರಿನ ಅಜಿಲ ವಂಶದವನಾದ ತಿಮ್ಮಣ್ಣಾಜಿಲಿನು ಪ್ರತಿವರುಷ ೩ ಸಾವಿರ ವರಹ ಕಪ್ಪ ಕೊಡಲಿಕ್ಕೆ ಒಪ್ಪಿದನು. ಮಂಗಳೂರಿನ ಬಂಗರರಾಜನೂ ವಿಟ್ಲದ ದೊಂಬಹೆಗ್ಗಡೆಯೂ, ಕುಂಬಳೆ ದಾಶಿಂಗ ಅರಸನೂ, ಬೈಲಂಗಡಿ ಮೂಲರರಸನೂ ವೆಂಕಟಪ್ಪನಾಯಕನಿಗೆ ಶರಣು ಹೊಕ್ಕು ತಾವು ಕೊಡತಕ್ಕ ಕಪ್ಪವನ್ನು ಗೊತ್ತುಪಡಿಸಿಕೊಂಡು ತಮ್ಮ ತಮ್ಮ ರಾಜಧಾನಿಗಳಿಗೆ ತೆರಳಿದರು.

## ಮೂಲ್ಕಿಯ ಸಾವಂತನು.

ಮುಂದೆ ವೆಂಕಟಪ್ಪನಾಯಕನು ಮಂಗಳೂರಿನಿಂದ ಮೂಲ್ಕಿಗೆ ಹೋಗುವಾಗ ಮೂಲ್ಕಿಯ ಸಾವಂತನ ಸೈನ್ಯವು ಅವನ ದಾರಿಯನ್ನು ಅಡ್ಡಗಟ್ಟಿತು. ಆದರೆ ವೆಂಕಟಪ್ಪನಾಯಕನು ಬೇರೊಂದು ದಾರಿಯಿಂದ ನದಿಯನ್ನು ದಾಟಿ ಪಟ್ಟಿಗ್ರಾಮಕ್ಕೆ ಹೋಗಿ ಸಾವಂತನ ಸೈನ್ಯವನ್ನು ಸೋಲಿಸಿದನು. ಆಗ ಸಾವಂತನು ಅವನಿಗೆ ಕಪ್ಪ ಕೊಡಲಿಕ್ಕೆ ಒಪ್ಪಿ ಕೊಂಡನು.

## ಸುರಾಳ ತೋಲಾರರು

ಆ ಮೇಲೆ ಮೂಲಿಕೆಯಿಂದ ವೆಂಕಟಪ್ಪನಾಯಕನು ಬಾರಕೂರಿಗೆ ಹೋಗಿ ಉಡಪಿ, ಕುಂದಾಪುರ, ತಾಲೂಕುಗಳನ್ನು ಆಳುತ್ತಿದ್ದ ಸುರಾಳ ತೋಲಾರರ ಕಡೆಯಿಂದ ಕೊಡತಕ್ಕ ಕಪ್ಪವನ್ನು ನಿಶ್ಚಯಿಸಿಕೊಂಡನು. ಈ ಪ್ರಕಾರ ವೆಂಕಟಪ್ಪನಾಯಕನು ಮಂಗಳೂರ ಜಿಲ್ಹೆಯ ದಂಡಯಾತ್ರೆಯನ್ನು ಮುಗಿಸಿಕೊಂಡು ತಿರುಗಿ ಇಕ್ಕೇರಿಗೆ ಬಂದನು. ಈ ಎಲ್ಲ ಪ್ರಸಂಗಗಳಲ್ಲಿ ಚೌಟರಾಯನಾದ ಚಂದ್ರಶೇಖರ ಚಿಕ್ಕರಾಯನು ವೆಂಕಟಪ್ಪನಾಯಕನಿಗೆ ಬಹಳ ಸಹಾಯ ಮಾಡಿದನು. ಆದ್ದರಿಂದ ಅವನಿಗೆ ಪಟ್ಟಿಗ್ರಾಮ ಮತ್ತು ಹೆಜವಾಡಿ ಎಂಬ ಮಾಗಣಿಗಳನ್ನು ರಾಜನು ಉಂಬಳಿ ಹಾಕಿಕೊಟ್ಟನು.

## ಮಂಗಳೂರಿನ ಬಂಗರ ಅರಸನು ಮತ್ತು ಪೋರ್ತುಗೀಜರು.

ಈ ಕಾಲಕ್ಕೆ ದೇಶದಲ್ಲೆಲ್ಲ ಪೋರ್ತುಗೀಜರ ಹಾವಳಿಯು ಬಹಳ ಹೆಚ್ಚಾಗಹತ್ತಿತ್ತು. ಅವರು ಬಲವಾದ ಹಡಗುಪಡೆಗಳನ್ನು ಇಟ್ಟುಕೊಂಡು ಬಂದರಗಳನ್ನು ನುಗ್ಗಿ ನಾನಾಬಗೆಯಾಗಿ ಜನರಿಗೆ ಪೀಡಿಸುತ್ತಿದ್ದರು. ಆಗ ಮಂಗಳೂರಿನಲ್ಲಿ ಆಳುತ್ತಿದ್ದ ಬಂಗರಅರಸನಾದ ಕಾಮರಾಯನು ಸ್ವಸಂರಕ್ಷಣೆಗಾಗಿ ಪೋರ್ತುಗೀಜರ ಸಹಾಯವನ್ನು ಕೋರಿದ್ದನು. ಆದ್ದರಿಂದ ಪೋರ್ತುಗೀಜರು ಮಂಗಳೂರಿನ ಸಮೀಪದಲ್ಲಿ ದೀಪಸ್ತಂಭದ ಹತ್ತರ ಒಂದು ಕೋಟೆಯನ್ನು ಕಟ್ಟಿಸಿ ತಮ್ಮ ದಂಡನ್ನು ಅಲ್ಲಿ ಇಟ್ಟರು. ಈ ಪ್ರಕಾರ ಕಾಮರಾಯನು ಪೋರ್ತುಗೀಜರೊಂದಿಗೆ ಒಪ್ಪಂದ ಮಾಡಿ

ಕೊಂಡು ವೆಂಕಟಪ್ಪನಾಯಕನಿಗೆ ಕೊಡತಕ್ಕ ಕಪ್ಪವನ್ನು ಕೊಡುವದನ್ನು ನಿಲ್ಲಿಸಿದನು. ಇದಲ್ಲದೆ ಪೋರ್ತುಗೀಜರ ಹಾವಳಿಯಿಂದ ಇಕ್ಕೇರಿಯವರಿಗೆ ಸಿಗತಕ್ಕ ಬಂದರಗಳ ಸುಂಕವೂ ಕಡಿಮೆಯಾಗಹತ್ತಿತು. ಆಗ ವೆಂಕಟಪ್ಪನಾಯಕನು ೧೨ ಸಾವಿರ ಸೈನ್ಯವನ್ನು ತೆಗೆದುಕೊಂಡು ಮಂಗಳೂರಿಗೆ ಹೋಗಿ ಪೋರ್ತುಗೀಜರನ್ನು ಸೋಲಿಸಿ ಅವರು ಕಟ್ಟಿಸಿದ್ದ ಕೋಟೆಯನ್ನು ಹಿಡಿದನು. ಆಗ ಬಂಗರಾಜನು ಮಂಗಳೂರನ್ನು ಬಿಟ್ಟು ಓಡಿಹೋದನು. ಆದರೆ ಪೋರ್ತುಗೀಜರಿಗೂ ವೆಂಕಟಪ್ಪನಾಯಕನಿಗೂ ಒಪ್ಪಂದವಾಗಿ ಬಂಗರಾಜನು ಮಂಗಳೂರಿಗೆ ಬಂದು ನಿಲ್ಲಬಹುದೆಂತಲೂ, ರಾಜನು ದಂಗೆ ಎಬ್ಬಿಸದ ಹಾಗೆ ಪೋರ್ತುಗೀಜರು ಜವಾಬುದಾರರಾಗಿರಬೇಕೆಂತಲೂ ಕರಾರಾಯಿತು.

ಆದರೆ ಪೋರ್ತುಗೀಜರು ರಾಜ್ಯದಲ್ಲಿ ಮೇಲಿಂದ ಮೇಲೆ ಆತಂಕಗಳನ್ನು ತರುವ ಸಂಭವವು ತೋರಿದ್ದರಿಂದ ವೆಂಕಟಪ್ಪನಾಯಕನು ಮಂಗಳೂರು ರಾಜ್ಯದೊಳಗೆ ಕೊಡಿಯಾಲ, ಮೂಲಿಕೆ, ಮೂಡಬಿದರೆ, ಉಳ್ಳಾಲ, ಕುಂಬಳೆ, ಕಾಸರಗೋಡ, ಪುದುವೆಟ್ಟು, ಬೆಳ್ಳಾರೆ, ಕಾಂತಮಂಡಲ, ಬಂದ್ಯೈಡ್ಕ, ಕುಂಡೆಂಕುಳಿ, ಕೊಲ್ಲೂರು, ಬಾಚಿ, ಶಿಶಿಲ, ಚಂದ್ರಗಿರಿ, ಕಿರೂರು, ಮೂಡುಗೊಡೆಯಾಲ, ಫಣಿಯಾಲ, ಈ ಸ್ಥಳಗಳಲ್ಲಿ ಕೋಟೆಗಳನ್ನು ಕಟ್ಟಿಸಿದನು. ಬಾರಕೂರು ರಾಜ್ಯದಲ್ಲಿ ಬಾರಕೂರು, ಕಲ್ಯಾಣಪುರ, ಮಲ್ಲಿಕಾರ್ಜುನಗಿರಿ, ಕಂಡಲೂರು ಇಲ್ಲಿ ಕೋಟೆಗಳನ್ನು ಕಟ್ಟಿಸಿದನು. ಹೊನ್ನೆಯ ಕಂಬಳಿ ರಾಜ್ಯದಲ್ಲಿ ಹೊಸಂಗಡಿ, ಮತ್ತು ಬಗ್ಗವಾಡಿಯಲ್ಲಿ ಕೋಟೆಗಳನ್ನು ಕಟ್ಟಿಸಲಿಕ್ಕೆ ತನ್ನ ಸೇನಾಧಿಪತಿಯಾದ ದಳವಾಯಿ ಲಿಂಗಣ್ಣನಿಗೆ ಅಪ್ಪಣೆಕೊಟ್ಟನು. ಈ ಮೇರೆಗೆ ವೆಂಕಟಪ್ಪನಾಯಕನು ತನ್ನ ರಾಜ್ಯವನ್ನು ಭದ್ರಪಡಿಸಿದನು.

## ರಾಜ್ಯದ ವಿಸ್ತಾರ

ಈ ಮೇರೆಗೆ ವೆಂಕಟಪ್ಪನಾಯಕನು ಸ್ವಪರಾಕ್ರಮದಿಂದ ಬಹು ವಿಸ್ತಾರವಾದ ರಾಜ್ಯವನ್ನು ಸಂಪಾದಿಸಿದನು. ಪಶ್ಚಿಮ ಸಮುದ್ರದ ಗುಂಟ ಮಲಾಬಾರದಿಂದ ಕುಮಠೆ ಹೊನ್ನಾವರದ ವರೆಗೆ, ಉತ್ತರಕ್ಕೆ ಕುಮಠೆಯಿಂದ ಹಾನಗಲ್ಲಿನ ವರೆಗೆ, ಪೂರ್ವಕ್ಕೆ ಹಾನಗಲ್ಲಿನಿಂದ ರಾಣೀಬನ್ನೂರ, ಚಿಕ್ಕ ಮಗಳೂರು ಇಷ್ಟು ಪ್ರದೇಶವೆಲ್ಲ ಅವನ ಅಂಕಿತ

ವಾಯಿತು. ಈ ಪ್ರದೇಶವೆಲ್ಲ ಆ ಕಾಲಕ್ಕೆ ಅತ್ಯಂತ ಬೆಳೆಯುಳ್ಳದ್ದೂ ವ್ಯಾಪಾರೋದ್ಯೋಗಗಳಿಂದ ಶ್ರೀಮಂತಿಕೆಯುಳ್ಳದ್ದೂ ಎಂದು ಬಹು ಹೆಸರಾಗಿತ್ತು. ಇಷ್ಟು ಪ್ರದೇಶವನ್ನು ಮುಂದಿನ ಯಾವತ್ತೂ ಇಕ್ಕೇರಿಯ ರಾಜರು ತಮ್ಮ ಅಂಕಿತದಲ್ಲಿಟ್ಟುಕೊಂಡು ಬಹಳ ಜಾಣತನದಿಂದ ರಾಜ್ಯಭಾರಮಾಡಿದ್ದು ಕಂಡು ಬರುತ್ತದೆ.

## ರಾಜ್ಯಸುಧಾರಣೆಯ ಕಾರ್ಯಗಳು.

ಈ ಮೇರೆಗೆ ವೆಂಕಟಪ್ಪನಾಯಕನು ಕೇವಲ ರಾಜಕೀಯ ಸಾಮರ್ಥ್ಯದಿಂದಷ್ಟೇ ಅಲ್ಲ, ವಿದ್ವತ್ತೆಗೆ ಮೆಚ್ಚಿದವನಾಗಿ ವಿದ್ವಾಂಸರಿಗೆ ಬಹಳ ಆಶ್ರಯಕೊಡುತಿದ್ದುದರಿಂದಲೂ ಬಹಳ ಹೆಸರುವಾಸಿಯಾದನು. ಅವನು ಅತ್ಯಂತ ಧಾರ್ಮಿಕ ಬುದ್ಧಿಯುಳ್ಳವನಾಗಿ ತನ್ನ ರಾಜ್ಯದಲ್ಲಿ ಬಹುತರ ಎಲ್ಲ ದೇವಾಲಯಗಳಿಗೆ ಉಂಬಳಿಗಳನ್ನು ಹಾಕಿಕೊಟ್ಟನು. ಮತ್ತು ಅವುಗಳ ಜೀರ್ಣೋದ್ಧಾರ ಮಾಡಿದನು. ಅಲ್ಲದೆ ತಾನೂ ಅನೇಕ ದೇವಾಲಯಗಳನ್ನು ಕಟ್ಟಿಸಿದನು. ಅನೇಕ ಅಗ್ರಹಾರಗಳನ್ನೂ ಮಠಗಳನ್ನೂ ಸ್ಥಾಪಿಸಿದನು. ಇದಲ್ಲದೆ ವ್ಯಾಪಾರಾಭಿವೃದ್ಧಿಗಾಗಿ ತಕ್ಕ ಕಡೆಗೆ ಮಾರ್ಗಗಳನ್ನು ಕಲ್ಪಿಸಿ ಹೊಸ ಹೊಸ ಪಟ್ಟಣಗಳನ್ನೂ ಪೇಟೆಗಳನ್ನೂ ರಚಿಸಿದನು

## ಪೇಟೆ ಪಟ್ಟಣಗಳನ್ನು ಕಟ್ಟಿಸಿದ್ದು.

ಅವನು ತನ್ನ ಇಕ್ಕೇರಿಯರಾಜಧಾನಿಯನ್ನು ಬಹು ಸುಶೋಭಿತ ಮಾಡಿದನು. ಅವನು ಅಲ್ಲಿಒಂದು ಅರಮನೆಯನ್ನೂ ವಿಚಿತ್ರತರವಾದ ನಾಟಕಶಾಲೆಯನ್ನೂ ರಚಿಸಿದನು. ತನ್ನ ರಾಜ್ಯದ ಮಧ್ಯದಲ್ಲಿ ತನ್ನ ಪಿತಾಮಹನಾದ ಸದಾಶಿವರಾಯನ ಹೆಸರಿನಿಂದ ಸದಾಶಿವಸಾಗರವೆಂಬ ಹೆಸರಿನಿಂದ ಪೇಟೆಯನ್ನೂ ಪಟ್ಟಣವನ್ನೂ ಕಟ್ಟಿಸಿದನು. ಅಲ್ಲದೆ ಅಲ್ಲಿ ಮನೋಹರವಾದ ಒಂದು ಅರಮನೆಯನ್ನೂ ಜಲಕ್ರೀಡಾ ಮಂದಿರವನ್ನೂ ರಚಿಸಿದನು. ಅಲ್ಲಿ ಗಣಪತಿಯ ದೇವಸ್ಥಾನವನ್ನೂ ಕಟ್ಟಿಸಿ, ಚಂದ್ರಬನವೆಂಬ ಹೆಸರಿನ ತೋಟವನ್ನು ನಿರ್ಮಿಸಿದನು ಆದರ ಬಳಿ ವರದಾನದೀತೀರವಲ್ಲಿ ವಿಶ್ವೇಶ್ವರದೇವರನ್ನು ಪ್ರತಿಷ್ಠಿಸಿದನು. ಇದರಂತೆಯೇ ಭದ್ರಪ್ಪನಾಯಕನ ಹೆಸರಿನಿಂದ ಭದ್ರರಾಜಪುರವೆಂಬ ಇನ್ನೊಂದು ಪೇಟೆಯನ್ನೂ ಕಟ್ಟಿಸಿದನು.

ವೆಂಕಟಪ್ಪನಾಯಕನು ತೊಲೆತಮ್ಮ, ಮುಂಡಿಗೆತಮ್ಮ, ಎಂಬ ಇಬ್ಬರು ಪರಾಕ್ರಮಿಗಳಾದ ಸಹೋದರರನ್ನು ಸೋಲಿಸಿ, ಅವರ ಗ್ರಾಮವಾದ ಕೌಲಿದುರ್ಗವನ್ನು ವಶಮಾಡಿಕೊಂಡಿದ್ದನು. ಈ ದುರ್ಗವು ತನಗೆ ಗಂಡಾಂತರ ಬಂದ ಪ್ರಸಂಗದಲ್ಲಿ ಆಶ್ರಯಕ್ಕೆ ಯೋಗ್ಯವಾದುದೆಂದು ತಿಳಿದು, ಅದನ್ನು ಮತ್ತಿಷ್ಟು ಭದ್ರಪಡಿಸಿ ಅದಕ್ಕೆ ಭುವನಗಿರಿದುರ್ಗವೆಂಬ ಹೆಸರನ್ನಿಟ್ಟನು. ಹಿಂದೆ ಅವನ ತಂದೆಯಾದ ದೊಡ್ಡಸಂಕಣ್ಣನಾಯಕನು ಕಾಶೀಕ್ಷೇತ್ರದಿಂದ ತಂದ ವಿಶ್ವೇಶ್ವರ ಲಿಂಗವನ್ನು ಅಲ್ಲಿ ಆಗಮವಿಧಾನದಿಂದ ಪ್ರತಿಷ್ಠಿಸಿ ಶಿಲಾಮಯವಾದ ದೇವಸ್ಥಾನವನ್ನು ಕಟ್ಟಿಸಿ ಅದಕ್ಕೆ ವಿಶೇಷ ಭೂಸ್ವಾಸ್ತೆಯನ್ನು ಹಾಕಿ ಕೊಟ್ಟನು. ಅಲ್ಲದೆ ಆ ದುರ್ಗದಲ್ಲಿ ಉಚಿತಸ್ಥಾನಗಳಲ್ಲಿ ಪರಿವಾರ ದೇವತೆಗಳನ್ನು ಸ್ಥಾಪಿಸಿ, ಉತ್ಕೃಷ್ಟವಾದ ಅರಮನೆಯನ್ನೂ ಆನೆಯ ಮಹಲು, ಕುದುರೆಯ ಲಾಯಗಳನ್ನೂ ನಿರ್ಮಿಸಿ , ಕೋಟೆಯ ಹೊರಗಡೆಯಲ್ಲಿ ಕಲ್ಯಾಣ ಮಹಲೆಂಬ ಬೆಟ್ಟದ ರಮನೆಯನ್ನು ಕಟ್ಟಿಸಿದನು. ಅಲ್ಲದೆ ಕೋಟೆಯಲ್ಲಿ ಶಿಖರೇಶ್ವರ, ಲಕ್ಷ್ಮೀನಾರಾಯಣ ಮತ್ತು ವೈಲಾರ ಗುಡಿಗಳನ್ನೂ ಕೋಟೆಯ ಹೊರಗೆ ವಿರೂಪಾಕ್ಷ, ವಿಠ್ಠಲ, ನರಸಿಂಹ, ವೃಷಭ, ವೀರಭದ್ರ, ಗುರುಪಾದ, ಕಾಲೀ ಗುಡಿಗಳನ್ನೂ ಕಟ್ಟಿಸಿ ಈ ಕೋಟೆಯನ್ನು ಬಹು ಶೋಭಾಯಮಾನ ಮಾಡಿದನು.

## ದೇವಾಲಯಗಳನ್ನು ಸ್ಥಾಪಿಸಿದ್ದು.

ಇದರಂತೆಯೇ ಅವನು ತನ್ನ ರಾಜ್ಯದಲ್ಲಿಯ ಅನೇಕ ದೇವಾಲಯಗಳ ಪೂಜಾವೈಭವಕ್ಕೋಸ್ಕರ ಬಹಳ ವ್ಯವಸ್ಥೆ ಮಾಡಿದನು. ಇಕ್ಕೇರಿಯ ಅಘೋರೇಶ್ವರ ದೇವಾಲಯಕ್ಕೆ ಒಂದು ವಿಸ್ತಾರವಾದ ಸೀಮೆಯನ್ನೇ ಹಾಕಿಕೊಟ್ಟನು. ಕೆಳದೀ ರಾಮೇಶ್ವರದೇವರಿಗೂ ವೀರಭದ್ರ ದೇವರಿಗೂ ವಿಶೇಷ ಭೂಸ್ವಾಸ್ಥೆಯನ್ನು ಬಿಟ್ಟುಕೊಟ್ಟನು. ರಾಮೇಶ್ವರ ದೇವರ ರಂಗಮಂಟಪವನ್ನು ಶಿಲಾಮಯವಾಗಿ ಮಾಡಿದನು. ಮಂಗಳೂರು ಜಿಲ್ಹೆಯನ್ನು ಆಕ್ರಮಿಸಿದಾಗ ಕೊಲ್ಲೂರು ಮೂಕಾಂಬಿಕೆಯಮ್ಮನ ದೇವಸ್ಥಾನವನ್ನು ವಿಸ್ತಾರವಾಗಿ ಶಿಲಾಮಯವನ್ನಾಗಿ ಮಾಡಿದನು. ಮತ್ತು ಅದಕ್ಕೆ ವಿಶೇಷ ಭೂಸ್ವಾಸ್ಥೆಯನ್ನು ಹಾಕಿಕೊಟ್ಟನು. ಗಟ್ಟದ ಮೇಲಿನ

ಮತ್ತು ಕೆಳಗಿನ ಮಹಾದೇವಸ್ಥಾನಗಳಲ್ಲಿ ಪ್ರತಿವರ್ಷ ಶ್ರಾವಣ ಮಾಸದಲ್ಲಿ ಪೂಜೆ, ಕಾರ್ತಿಕಮಾಸದಲ್ಲಿ ಲಕ್ಷದೀಪಾರಾಧನೆ ರಥೋತ್ಸವಾದಿಗಳು ನಡೆಯುವಂತೆ ನಿಯಮಿಸಿದನು. ಶಂಕರ ನಾರಾಯಣಭಟ್ಟನನ್ನು ಚಿನ್ನಬಿದರೂರಲ್ಲಿ ನಿಗ್ರಹಿಸಿದ ಬಳಿಕ ಆ ಪಟ್ಟಣದ ಬದಿಯಲ್ಲಿ ಹರಿಯುವ ಕಲಾವತಿ ನದೀತೀರದಲ್ಲಿದ್ದ ನೀಲಕಂಠೇಶ್ವರ ಲಿಂಗದ ಪೂಜೆಯು ಲೋಪವಾಗದಂತೆ ಕಟ್ಟಳೆಗಳನ್ನು ರಚಿಸಿದನು. ಬಸರೂರನ್ನು ಸಾಧಿಸಿದ ಬಳಿಕ ಅಲ್ಲಿಯ ಮಹಾಲಿಂಗೇಶ್ವರ ದೇವರ ಪೂಜೆಯು ನಿರಂತರವಾಗಿ ಸಾಗುವಂತೆ ನಿಯಮಿಸಿದನು. ಈ ಮೇರೆಗೆ ವೆಂಕಟಪ್ಪನಾಯಕನು ತನ್ನ ರಾಜ್ಯದಲ್ಲಿದ್ದ ಮಹತ್ವದ ದೇವಸ್ಥಾನಗಳಿಗೆ ಅತ್ಯಂತ ಧರ್ಮಬುದ್ಧಿಯುಳ್ಳವನಾಗಿ ಉಂಬಳಿಗಳನ್ನು ಹಾಕಿಕೊಟ್ಟು ಪೂಜೋತ್ಸವಾದಿಗಳು ಸರ್ವದಾ ನಡೆಯುವಂತೆ ವ್ಯವಸ್ಥೆಗೊಳಿಸಿದನು.

## ಮಠಾಧಿಪತಿಗಳನ್ನು ಪೋಷಿಸಿದ್ದು.

ವೆಂಕಟಪ್ಪನಾಯಕನು ವೀರಶೈವ ಧರ್ಮಾನುಯಾಯಿಯಾಗಿದ್ದರೂ ಅವನು ಬ್ರಾಹ್ಮಣಧರ್ಮ ಮೊದಲ್ಗೊಂಡು ಎಲ್ಲ ಜಾತಿಯವರಲ್ಲಿಯೂ ಸಮದೃಷ್ಟಿಯುಳ್ಳವನಾಗಿದ್ದನು. ಹ್ಯಾಗೆ ಅವನು ವೀರಶೈವ ಮಠಾಧಿಪತಿಗಳನ್ನು ಆದರಿಸುತ್ತಿದ್ದನೋ ಹಾಗೆಯೇ ಬ್ರಾಹ್ಮಣ ಮಠಾಧಿಕಾರಿಗಳನ್ನೂ ಬ್ರಾಹ್ಮಣ ವಿದ್ವಾಂಸರನ್ನೂ ಮನ್ನಿಸುತ್ತಿದ್ದನು. ಈ ಬಗ್ಗೆ ಅವನ ಇತಿಹಾಸದಲ್ಲಿ ಅನೇಕ ಉದಾಹರಣೆಗಳು ಇವೆ. ಕಾರ್ಕಳದ ಬೈರವರಾಜನು ಶೃಂಗೇರಿಯನ್ನು ಅಭಿಯೋಗಿಸಿದಾಗ ವೆಂಕಟಪ್ಪನಾಯಕನು ಅವನನ್ನು ಸೋಲಿಸಿ, ಶೃಂಗೇರಿಯ ಮಹಾಸ್ವಾಮಿಗಳಿಗೆ ಅವರ ನಾಡನ್ನು ಹಿಂದಿರುಗಿ ಕೊಟ್ಟದ್ದಲ್ಲದೆ ಹೆಚ್ಚಿಗೆ ಭೂಸ್ವಾಸ್ಥೆಯನ್ನು ಕೊಟ್ಟು ಅವರ ಮಠವನ್ನು ಜೀರ್ಣೋದ್ಧಾರ ಮಾಡಿದನು. ಭುವನಗಿರಿದುರ್ಗದಲ್ಲಿ ಶೃಂಗೇರಿ ಮಠಪೇಟೆಯನ್ನು ಅವರ ಹೆಸರಿನಿಂದ ಕಟ್ಟಿಸಿದನು. ಸಾಗರದ ಬಳಿಯ ವರದಾನದೀ ತೀರದಲ್ಲಿ ವಿಶ್ವನಾಥಪುರವೆಂಬ ಅಗ್ರಹಾರವನ್ನು ರಚಿಸಿ ವೃತ್ತಿಕ್ಷೇತ್ರ ನಿವೇಶನಗಳನ್ನು ನಿಯಮಿಸಿ ಅವುಗಳನ್ನು ಶ್ರೋತ್ರೀಯ ಬ್ರಾಹ್ಮಣರಿಗೆ ಧಾರೆಯನೆರದು ಶಾಸನವನ್ನು ಬರೆಯಿಸಿಕೊಟ್ಟನು. ಮತ್ತು ಗಣೇಶದೀಕ್ಷಿತರಿಂದ ವಾಜಪೇಯ ಯಾಗವನ್ನೂ ನೆರವೇರಿಸಿದನು. ಅದರಂತೆಯೇ ತನ್ನ ತಾಯಿಯ ಹೆಸರಿನಿಂದ ಭೀಮನಕಟ್ಟೆಯಲ್ಲಿ ವಿರಾಂಬಾ

ಪುರವೆಂಬ ಅಗ್ರಹಾರವನ್ನು ತುಂಗಭದ್ರೆಯ ತೀರದಲ್ಲಿ ಕಟ್ಟಿಸಿದನು. ಮತ್ತು ಶರಾವತೀ ನದಿಯ ದಂಡೆಯಲ್ಲಿ ಭಾರಂಗೀಗ್ರಾಮದಲ್ಲಿ ತನ್ನ ಹೆಂಡತಿಯ ಹೆಸರಿನಿಂದ ಅಭಿನವ ವೀರಂಬಾಪುರವೆಂಬ ಅಗ್ರಹಾರವನ್ನು ಕಟ್ಟಿಸಿ ವೃತ್ತಿಕ್ಷೇತ್ರ ನಿವೇಶನಗಳನ್ನು ಕಲ್ಪಿಸಿ ಬ್ರಾಹ್ಮಣ ವಿದ್ವಾಂಸರಿಗೆ ಶಿವಾರ್ಪಿತವಾಗಿ ಧಾರೆಯನೆರೆದು ಕೊಟ್ಟನು. ಅದರಂತೆಯೇ ಭುವನಗಿರಿದುರ್ಗದಲ್ಲಿಯೂ ಒಂದು ಅಗ್ರಹಾರವನ್ನು ಅವರಿಗೋಸ್ಕರ ಕಟ್ಟಿಸಿಕೊಟ್ಟನು.

ಅದರಂತೆಯೇ ವೆಂಕಟಪ್ಪನಾಯಕನು ಗುರುಲಿಂಗಜಂಗಮಾದಿ ಪೂಜಾನಿರತನಾಗಿ ಬಾಳೇಹಳ್ಳಿ ಸಿಂಹಾಸನ ಮಠವನ್ನೂ ಎಲ್ಲ ಕಡೆಯಲ್ಲಿ ಅನೇಕ ಮಹತ್ತಿನ ಮಠಗಳನ್ನು ಊರ್ಜಿತಸ್ಥಿತಿಗೆ ತಂದನು. ಆನಂದಪುರದಲ್ಲಿ ಮಹಾತ್ಮಿಕರಾದ ಜಂಗಮರಿಗೋಸ್ಕರ ಒಂದು ಮಠವನ್ನು ಕಟ್ಟಿಸಿಕೊಟ್ಟನು. ಅರಸನು ಮಂಗಳೂರು ಸೀಮೆಗೆ ಹೋದ ಕಾಲದಲ್ಲಿ ಅಲ್ಲಿ ಯಾವ ವೀರಶೈವ ಮಠಗಳಿಲ್ಲದ್ದರಿಂದ ಬಾರಕೂರು, ಬೆಣ್ಣೆವಳ್ಳಿ, ಆರಗ ಶಂಕರ ನಾರಾಯಣ ಸಾಗರ, ಬೋಳೂರು, ಕೊಡೆಯಾಲ ಈ ಸ್ಥಾನಗಳಲ್ಲಿ ಅವರ ಮಹತ್ತಿನ ಮಠಗಳನ್ನು ಕಟ್ಟಿಸಿ ಭೂಸ್ವಸ್ಥಗಳನ್ನು ಅವುಗಳಿಗೆ ನೇಮಿಸಿಕೊಟ್ಟನು.

## ವಾಙ್ಮಯ ಸೇವೆ.

ಈ ಪ್ರಕಾರ ವೆಂಕಟಪ್ಪನಾಯಕನು ರಾಜ್ಯವಾಳುತ್ತಿರಲು ಅವನ ಕಿರಿಯಯ್ಯನಾದ ಚಿಕ್ಕಸಂಕಣ್ಣನಾಯಕನ ಪುತ್ರನಾದ ಸಿದ್ದಪ್ಪನಾಯಕನು ತೀರಿಕೊಳ್ಳಲು ವೆಂಕಟಪ್ಪನಾಯಕನಿಗೆ ವೈರಾಗ್ಯವು ಹುಟ್ಟಿ ಆತ್ಮಜ್ಞಾನಾನುಸಂಧಾನದಲ್ಲಿ ವೇಳೆ ಕಳೆಯ ಹತ್ತಿದನು. ಅವನು ವಿದ್ವಾಂಸರನ್ನು ತನ್ನಲ್ಲಿ ಬರಮಾಡಿಕೊಂಡು ಗ್ರಂಥ ರಚನೆಗೆ ಬಹಳ ಉತ್ತೇಜನ ಕೊಡಹತ್ತಿದನು. ಅವನು ೧೮ ಅಧ್ಯಾಯವುಳ್ಳ ಶಿವಗೀತೆಯನ್ನು ಕವಿತಿರುಮಲಭಟ್ಟನಿಂದ ವಾರ್ಧಿಕ ಷಟ್ಪದಿಯಲ್ಲಿ ಭಾಷಾಂತರ ಮಾಡಿಸಿದನು. ಮತ್ತು ಅವರಿಂದಲೇ ಸಂಸ್ಕೃತದಲ್ಲಿ ಶಿವಾಷ್ಟಪದಿಯನ್ನು ವಿರಚಿಸಿದನು. ರಂಗನಾಥದೀಕ್ಷಿತನೆಂಬ ವಿದ್ವಾಂಸನಿಂದ ತಂತ್ರಸಾರವೆಂಬ ಆಗಮಗ್ರಂಥಕ್ಕೆ ವ್ಯಾಖ್ಯಾನವನ್ನು ಬರೆಯಿಸಿದನು. ಅರಸನು ಅಶ್ವಗಳ ಮೇಲೆ ಬಹಳ ಪ್ರೀತಿಯುಳ್ಳವನಾದ್ದರಿಂದ ಅವುಗಳ ಜ್ಞಾನವುಳ್ಳವರನ್ನು ಕರೆಯಿಸಿ ಅವರಿಂದ ಒಂದು ಅಶ್ವಶಾಸ್ತ್ರವನ್ನು ರಚಯಿಸಿದನು. ಈ

ಕಾಲಕ್ಕೆ ವಿಶಿಷ್ಟಾದ್ವೈತ ಸಿದ್ಧಾಂತಸಮರ್ಥನಾದ ರಾಮಾನುಜ ಶೃಂಗವರ್ಯನೆಂಬ ವಿದ್ವಾಂಸನು ಇಕ್ಕೇರಿಗೆ ಬಂದು ಇರಹತ್ತಿದ್ದನು. ಆಗ ಕಾಶಿಯಿಂದಲೂ ಶುದ್ಧಾದ್ವೈತಿಯಾದ ಭಟ್ಟೋಜಿ ದೀಕ್ಷಿತನೆಂಬ ವಿದ್ವಾಂಸನೂ ಬರಲು ಉಭಯತರಲ್ಲಿ ಆಸ್ಥಾನದಲ್ಲಿ ವಾಗ್ವಾದವಾಗಲು ಅದರಲ್ಲಿ ರಾಮಾನುಜ ಶೃಂಗಿಯು ಸೋತನು. ಅಂದಿನಿಂದ ವೆಂಕಟಪ್ಪನಾಯಕನು "ವಿಶುದ್ಧ ವೈದಿಕಾದ್ವೈತ ಸಿದ್ಧಾಂತ ಪ್ರತಿಷ್ಠಾಪಕ" ನೆಂಬ ಬಿರುದನ್ನು ಸಂಪಾದಿಸಿದನು. ಅದರಂತೆಯೇ ಅವನು ವಿದ್ಯೆಯಲ್ಲಿಯೂ ಬಹಳ ಬಲ್ಲಿದನಾಗಿದ್ದನು.

ಈ ಪ್ರಕಾರ ವೆಂಕಟಪ್ಪನಾಯಕನು ೪೭ ವರ್ಷಗಳ ವರೆಗೆ ರಾಜ್ಯಭಾರ ಮಾಡಿ ಮುಪ್ಪಿನಿಂದ ಅಶಕ್ತನಾಗಹತ್ತಲು ಅವನು ತನ್ನ ಮೊಮ್ಮಗನಾದ ವೀರಭದ್ರನಾಯಕನಿಗೆ ಯಾವತ್ತು ರಾಜ್ಯಭಾರವನ್ನು ಒಪ್ಪಿಸಿ ತಾನು ಈ ಪ್ರಕಾರ ಸದ್ಧರ್ಮವರ್ತನೆಯಿಂದ ಕಾಲಕಳೆಯುತ್ತ ೧೬೩೦ ರಲ್ಲಿ ಮರಣಹೊಂದಿದನು.

ಮೇಲ್ಕಂಡ ವಿವರಣೆಗಳ ಮೇಲಿಂದ ವೆಂಕಟಪ್ಪನಾಯಕನು ಎಷ್ಟು ಶೂರನೂ, ಧಾರ್ಮಿಕ ಬುದ್ಧಿಯುಳ್ಳವನೂ, ಉದಾರಿಯೂ ಆಗಿದ್ದನೆಂಬದು ಸ್ಪಷ್ಟವಾಗುತ್ತದೆ. ಇಕ್ಕೇರಿ ರಾಜರ ಮುಂದಿನ ಅಭ್ಯುದಯಕ್ಕೆ ಸ್ಥಿರವಾದ ತಳಹದಿಯನ್ನು ಹಾಕಿದವನು ಇವನೇ ಎಂದು ನಾವು ನಿರ್ವಿವಾದವಾಗಿ ಹೇಳಬಹುದು. ಅವನು ರಾಜ್ಯವೇರಿದ ಸ್ವಲ್ಪ ದಿವಸಗಳಲ್ಲಿಯೇ ಮುಸಲ್ಮಾನರ ಭಯಂಕರ ದಾಳಿಯನ್ನು ತಡೆಯಬೇಕಾಯಿತು. ಆದರೆ ಅವನು ವೈರಿಗಳೊಡನೆ ಶೂರತನದಿಂದ ಕಾದಾಡಿ ತನ್ನ ರಾಜ್ಯವನ್ನು ಸಂರಕ್ಷಿಸಿಕೊಂಡನು. ಆ ಮೇಲೆ ಅವನು ತನ್ನ ರಾಜ್ಯವನ್ನು ಕ್ರಮೇಣ ವಿಸ್ತರಿಸುತ್ತ ಹೋಗಿ ಕರ್ನಾಟಕದಲ್ಲಿ ಆಗಿನ ಕಾಲಕ್ಕೆ ಒಬ್ಬ ಬಹು ಬಲಾಢ್ಯನಾದ ರಾಜನೆಂದೆನಿಸಿಕೊಂಡನು. ಅವನು ಸ್ವಾಧೀನಮಾಡಿಕೊಂಡ ರಾಜ್ಯಗಳಲ್ಲಿ ನಾನಾಬಗೆಯ ಪಂಗಡಗಳ ಜನರು ಸೇರಿಕೊಂಡಿದ್ದರು. ಅವರಲ್ಲಿ ವೀರಶೈವರು, ಬ್ರಾಹ್ಮಣರು, ತುಳುವರು, ಕೊಂಕಣಿಗರು, ಮಲಯಾಳರು, ಜೈನರು, ಸಾರಸ್ವತರು ಈ ಬಗೆಯಾಗಿ ನಾನಾವಿಧ ಸಮಾಜಗಳು ಸೇರ್ಪಡೆಯಾಗಿದ್ದವು. ಆದರೂ ಅವನು ಎಲ್ಲರಲ್ಲಿ ಸಮಭಾವವುಳ್ಳವನಾದ್ದರಿಂದ ಎಲ್ಲರ ಆದರಕ್ಕೆ ಪಾತ್ರನಾಗಿದ್ದನು. ಅವನ ಈ ಉದಾಹರಣೆಯನ್ನು ಮುಂದಿನ ಅರಸರೂ ಅನುಸರಿಸುತ್ತ ಬಂದಿದ್ದು

ತೋರಿಬರುತ್ತದೆ. ಅವನು ತನ್ನ ರಾಜ್ಯದಲ್ಲಿ ಅನೇಕ .ದೇವಾಲಯಗಳನ್ನೂ ಮಠಗಳನ್ನೂ ಅಗ್ರಹಾರಗಳನ್ನೂ ಸ್ಥಾಪಿಸಿದನು. ಮತ್ತು ವಿದ್ವಜ್ಜನರಿಗೆ ಬಹಳ ಸಹಾಯ ಮಾಡಿದನು. ಅವನ ಪ್ರಾಬಲ್ಯವು ಆಗಿನ ಕಾಲಕ್ಕೆ ಎಷ್ಟಿತ್ತೆಂಬದು ಡಿಲಾವೆಲ್ ಎಂಬ ಪೋರ್ತುಗೀಜ ಪ್ರವಾಸಿಯು ೧೬೨೩ ರಲ್ಲಿ ಅವನ ರಾಜ್ಯದಲ್ಲಿ ಪ್ರವಾಸ ಮಾಡಿದಾಗ ತನಗೆ ಕಂಡ ವಿಷಯಗಳನ್ನು ಬರೆದದ್ದರ ಮೇಲಿಂದ ಗೊತ್ತಾಗುತ್ತದೆ. ಈ ಪ್ರವಾಸಿಯು ಒಂದು ಪೋರ್ತುಗೀಜರ ರಾಯಸದ ಕೂಡ ವೆಂಕಟಪ್ಪನಾಯಕನನ್ನು ಕಾಣಲಿಕ್ಕೆ ಹೋಗಿದ್ದನು. ಅವನು ತನ್ನ ಪ್ರವಾಸದ ವರ್ಣನೆಯಲ್ಲಿ ಕಾಣಿಸಿರುವದೇನಂದರೆ:— ನಾವು ಮೊದಲು ಹೊನ್ನಾವರಕ್ಕೆ ಹೋದೆವು. ಈ ಪಟ್ಟಣದಲ್ಲಿ ಅತ್ಯುತ್ತಮ ರಸ್ತೆಗಳಿದ್ದು, ಮಧ್ಯದಲ್ಲಿ ಒಂದು ಭವ್ಯವಾದ ದೊಡ್ಡ ಚೌಕವಿತ್ತು. ಈ ಪಟ್ಟಣಕ್ಕೆ ಸಮೀಪವಾಗಿ ಗುಂಡಿನ ಅಳತೆಯಲ್ಲಿ ಮತ್ತೊಂದು ಬ್ರಾಹ್ಮಣರ ದೊಡ್ಡ ಪಟ್ಟಣವಿತ್ತು. ವೆಂಕಟಪ್ಪನಾಯಕನು ತನ್ನ ಸುತ್ತಲಿನ ಅನೇಕ ಪಾಳೆಯಗಾರರನ್ನು ಸೋಲಿಸಿ ಅವರ ರಾಜ್ಯಗಳನ್ನು ಕೈವಶಮಾಡಿಕೊಂಡಿದ್ದನು. ಮತ್ತು ಸ್ವತಂತ್ರನಾಗಿದ್ದನು. ಅವನು ಪೋರ್ತುಗೀಜರನ್ನು ಸಹ ಸೋಲಿಸಿದ್ದಾನೆ. ಅವನ ಪ್ರಾಬಲ್ಯದ ಮೂಲಕ ಪೋರ್ತುಗೀಜ ಸರಕಾರದವರು ಈ ರಾಯಸವನ್ನು ಕಳಿಸಬೇಕೆಂದು ನಿಶ್ಚಯಿಸಿದರು. ಈ ರಾಯಸದವರು ಮೊದಲು ಹೊನ್ನಾವರದಲ್ಲಿ ಇಳಿದು ಗೆರಿಸೊಪ್ಪೆಗೆ ಹೋದರು. ಈ ಪಟ್ಟಣವು ಆಗ ವೆಂಕಟಪ್ಪನಾಯಕನ ವಶದಲ್ಲಿ ಇತ್ತು. ಆದರೆ ಇಲ್ಲಿಯ ಪೂರ್ವದ ರಾಜಧಾನಿಯೂ ಅರಮನೆಯೂ ಹಾಳಾಗಿ ಹೋಗಿದ್ದವು. ಅಲ್ಲಿಂದ ಅವರು ಇಕ್ಕೇರಿಗೆ ಹೋದರು. ಆದರೆ ಅರಸನು ಇವರನ್ನು ಕಾಣಲಿಕ್ಕೆ ಅಪ್ಪಣೆ ಕೊಡಲಿಲ್ಲ. ಯಾಕಂದರೆ ಈ ಪೋರ್ತುಗೀಜರು ಮೆಣಸನ್ನು ಕೊಂಡುಕೊಳ್ಳಲಿಕ್ಕೆ ತಮ್ಮ ಹಡಗಗಳನ್ನು ತಂದಿದ್ದಿಲ್ಲವಾದ್ದರಿಂದ ಅವರ ಮೇಲೆ ಅವನು ಸಿಟ್ಟಾಗಿ ಅವರನ್ನು ಹಿಂದಿರುಗಿ ಕಳಿಸಿಬಿಟ್ಟನು. ಈ ಸಂಗತಿಗಳ ಮೇಲಿಂದ ವೆಂಕಟಪ್ಪನಾಯಕನು ಆಗಿನ ಕಾಲಕ್ಕೆ ಎಷ್ಟು ಬಲಾಢ್ಯನೂ ಪ್ರಾಬಲ್ಯವುಳ್ಳವನೂ ಆಗಿದ್ದನೆಂಬದು ಸ್ಪಷ್ಟವಾಗುತ್ತದೆ.

# ಧಾರ್ಮಿಕ ಸ್ವಾತಂತ್ರ್ಯ.

(ಶ್ರೀ. ವೀರಪ್ಪ ಬಸವಪ್ಪ ಬಿಳೇಅಂಗಡಿ ಬಿ. ಏ. ಎಲ್. ಎಲ್. ಬಿ. ಹುಬ್ಬಳ್ಳಿ.)

(೧೬೫ ನೇ ಪುಟದಿಂದ ಮುಂದೆ ಸಾಗಿದ್ದು.)

## ಬ್ರಾಹ್ಮಣನು ಯಾರು?

ನಹುಷನ ಈ ಪ್ರಶ್ನೆಗೆ ಯುಧಿಷ್ಠಿರನು ಮಹಾಭಾರತದ ವನ ಪರ್ವತದ ೧೮೦ ನೇ ಅಧ್ಯಾಯದಲ್ಲಿ (ನಹುಷ-ಯುಧಿಷ್ಠಿರ ಸಂವಾದ ನೋಡು) ಯುಧಿಷ್ಠಿರನು ಉತ್ತರ ಕೊಡುತ್ತಾನೆ.

"ಸತ್ಯಂ ಜ್ಞಾನಂ ಕ್ಷಮಾಶೀಲಮಾನೃಶಂಸ್ಯಂ ತಪೋ ಘೃಣಾ।
ದೃಶ್ಯತೆ ಯತ್ರನಾಗೇಂದ್ರ ಸ ಬ್ರಾಹ್ಮಣ ಇತಿಸ್ಮೃತಃ॥

ಅರ್ಥ— ಎಲೈ ಸರ್ಪಶ್ರೇಷ್ಠನೆ, ಯಾವನಲ್ಲಿ ಸತ್ಯ ಕ್ಷಮಾ ಸುಸ್ವಭಾವ ಹಿಂಸೆಯ ಅಭಾವ ತಪದಯಾ ಮೊದಲಾದವು ಕಾಣುವವೋ ಅವನೇ ಬ್ರಾಹ್ಮಣನು. ಇದಕ್ಕೆ ನಹುಷನು ಪ್ರಶ್ನ ಮಾಡುತ್ತಾನೆ.

ಚಾತುರ್ವರ್ಣ್ಯಂ ಪ್ರಮಾಣಂಚ ಸತ್ಯಂ ಚೇತ್ ಬ್ರಹ್ಮಚೈವಹಿ।
ಶೂದ್ರೇಷ್ವಪಿಚಸತ್ಯಂ ಸ್ಯಾದ್ದಾನಮ ಕ್ರೋಧ ಏವಚ॥

ಅರ್ಥ— ಚಾತುರ್ವರ್ಣ್ಯ ವ್ಯವಸ್ಥೆಯು ಪ್ರಮಾಣವಾಗಿ ಹಿಡಿದರೆ ಮತ್ತು ಸತ್ಯವೇ ಬ್ರಹ್ಮ ಅಥವಾ ಬ್ರಾಹ್ಮಣವೆಂದರೆ, ಶೂದ್ರರಲ್ಲಿಯೂ ಸತ್ಯ ದಾನ ಕ್ಷಮಾ ಮೊದಲಾದ ಗುಣಗಳು ಕಾಣಿಸುತ್ತವೆ. ಇದಕ್ಕೇನು ಪರಿಹಾರವೆಂದರೆ- ಯುಧಿಷ್ಠಿರನು ಉತ್ತರ ಕೊಡುತ್ತಾನೆ.

ಶೂದ್ರೇತು ಯದ್ಭವೇಲ್ಲಕ್ಷ್ಮ ದ್ವಿಜೆತಚ್ಚ ನವಿದ್ಯತೆ।
ನವೈ ಶೂದ್ರೋಭವೇಚ್ಛೂದ್ರೋ ಬ್ರಾಹ್ಮಣೂ ನಚಬ್ರಾಹ್ಮಣಃ॥

ಅರ್ಥ— ಶೂದ್ರನಲ್ಲಿ ಈ ಲಕ್ಷಣಗಳಿದ್ದು ಬ್ರಾಹ್ಮಣನಲ್ಲಿ ಇಲ್ಲದಿದ್ದರೆ, ಆ ಶೂದ್ರನು ಶೂದ್ರನಲ್ಲ, ಬ್ರಾಹ್ಮಣನು ಬ್ರಾಹ್ಮಣನಲ್ಲ. ಯಾರಲ್ಲಿ ಈ ಗುಣಗಳಿರುವವೋ ಅವನೇ ಬ್ರಾಹ್ಮಣನು, ಯಾರಲ್ಲಿ ಅವು ಇಲ್ಲವೋ ಅವನೇ ಶೂದ್ರನು.

ಪ್ರತ್ಯಕ್ಷ ಧರ್ಮರಾಜನೇ ಬ್ರಾಹ್ಮಣ ಧರ್ಮದ ಬಗ್ಗೆ ಮಾಡಿದ ಮೇಲಿನ ವಿವೇಚನೆಯನ್ನು ಸರ್ವರೂ ನೆನಪಿನಲ್ಲಿಡತಕ್ಕದ್ದು.

ವಿಶಿಷ್ಟ ಕುಲ ಪವಿತ್ರತೆ, ಬೀಜಶುದ್ಧಿ, ಆನುವಂಶಿಕ ಸಂಸ್ಕಾರ ಈ ಮೊದಲಾದ ಸಾಧನಗಳಿಂದ ನಮ್ಮ ಪೂರ್ವಜರು ಬ್ರಾಹ್ಮಣ್ಯ (ಸಾತ್ವಿಕತನ) ಕ್ಷಾತ್ರವೃತ್ತಿ (ರಜೋಗುಣ) ವೈಶ್ಯವೃತ್ತಿ ಮತ್ತು ಶೂದ್ರವೃತ್ತಿ ಇವುಗಳ ರಕ್ಷಣೆ ಮಾಡುವ ಪ್ರಯೋಗವನ್ನು ಕೈಕೊಂಡರು. ಆದರೆ ಈ ಕಾರ್ಯಸಾಧನಗಳಿಂದ ಹಿಂದುಸ್ತಾನದ ಮೇಲೆ ಮೊಗಲರ ಮತ್ತು ಇಂಗ್ಲೀಷರ ಹಾವಳಿಯನ್ನು ತಪ್ಪಿಸುವದಾಗಲಿಲ್ಲವೆಂಬ ಮಾತನು ನಾವು ಲಕ್ಷದಲ್ಲಿಡಬೇಕು. ಅಧ್ಯಾಪನ ಮತ್ತು ಅಧ್ಯಯನ ಅಂದರೆ ವೇದಾಭ್ಯಾಸ ಮಾಡುವದೂ ಮಾಡಿಸುವದೂ ಕೆಲ ಒಂದು ವಿಶಿಷ್ಟ ಸಮಾಜವು ಗುತ್ತಿಗೆ ಹಿಡಿದದ್ದರಿಂದ, ಜನಸಾಮಾನ್ಯರ ಕರ್ತವ್ಯವಾದ ವಿದ್ಯಾ ಪ್ರಸಾರವು ಎಷ್ಟು ಆಗತಕ್ಕದ್ದಿತ್ತು ಅಷ್ಟಾಗಲಿಲ್ಲ. ಸಾಕ್ಷರತ್ವವು ಸಂಕುಚಿತ ಪ್ರಮಾಣದ ಮೇಲೆ ನಡೆಯಿತು. ಭಾರತ ರಕ್ಷಣೆಯ ಕಾರ್ಯವು ಕೇವಲ ಕ್ಷತ್ರಿಯರ ಮೇಲೆ ಬಿದ್ದದ್ದರಿಂದ, ಪರಕೀಯರ ಹಾವಳಿಗೆ ಅವರ ಸಂಖ್ಯೆಯು ಈಡಾಗಲಿಲ್ಲ. ಉಳಿದ ತ್ರಿವರ್ಣದವರ ಜಾತಿ ಕಲ್ಪನೆಯ ಮೂಲಕ ಅವರು ಶಸ್ತ್ರಪಾಣಿಗಳಾಗಿ ಯುದ್ಧಾಂಗಣಕ್ಕೆ ಹೋಗಲಿಲ್ಲ. ವೈಶ್ಯರು ತಮ್ಮ ವ್ಯಾಪಾರ ಉದ್ದಿಮೆಗಳಲ್ಲಿ ಮನಸ್ಸು ಹಾಕಿ ಪೂರ್ವ ಪದ್ಧತಿ ಪ್ರಕಾರ ಅವುಗಳನ್ನು ನಡಿಸುತ್ತ ಬಂದರು. ಆದರೆ ಬುದ್ಧಿವಂತರಾದವರು ವ್ಯಾಪಾರದ ಕಡೆಗೆ ತಮ್ಮ ದೃಷ್ಟಿಯನ್ನು ಚಲ್ಲದ್ದರಿಂದ ಸಪ್ತಸಮುದ್ರಗಳಾಚೆಗೆ ಇದ್ದ ವೈಶ್ಯರು ಬಂದು ಭಾರತೀಯರ ವ್ಯಾಪಾರವನ್ನು ತಮ್ಮ ಕೈವಶ ಮಾಡಿಕೊಂಡು ಅವರನ್ನು ಆರ್ಥಿಕ ಗುಲಾಮರಾಗಿ ಮಾಡಿಬಿಟ್ಟರು.

ಕೇವಲ ಜನ್ಮದಿಂದಲೇ ಮನುಷ್ಯನ ಭಾವೀ ಕರ್ತವ್ಯ ಮತ್ತು ಸಮಾಜದಲ್ಲಿ ಅವನ ಸ್ಥಾನವನ್ನು ನಿರ್ಣಯಿಸುವದಾದರೆ, ಸ್ವಾತಂತ್ರ್ಯ ಸಮತೆ ಮತ್ತು ಪರಸ್ಪರ ಸಹೋದರಭಾವ ಈ ತತ್ವಗಳಿಗೆ ಕರದಾಳ ಹಚ್ಚಬೇಕಾಗುವದು. ಕಲಿಯುಗದಲ್ಲಿ ಗುಣಕರ್ಮ ವಿಭಾಗದ ಪ್ರಕಾರ ಪ್ರತಿಪ್ರೊಬ್ಬ ವ್ಯಕ್ತಿಯು ಯುರೋಪದವರಂತೆ ತಮ್ಮ ತಮ್ಮ ಉನ್ನತಿಯನ್ನು ಸ್ವತಂತ್ರವಾಗಿ ಯಾರ ಮತ್ತು ಯಾವ ನೇಮದ ತಡೆಯಿಲ್ಲದೆ

ಮಾಡಿಕೊಳ್ಳಲಿಕ್ಕೆ ಮಾರ್ಗವಿರಬೇಕು. ಈ ಕಾರ್ಯಕ್ಕಾಗಿ ಆನುವಂಶಿಕ ವರ್ಣಾಶ್ರಮ ವ್ಯವಸ್ಥೆಯನ್ನು ಮುರಿದುಬಿಟ್ಟರೆ ಮಾತ್ರ ನಮ್ಮ ಭಾರತೀಯರ ಧರ್ಮವು ತನ್ನ ಪೂರ್ವದ ರಾಷ್ಟ್ರೀಯ ಸ್ವರೂಪವನ್ನು ಹೊಂದುವದು. ಅಂದಮೇಲೆ ಸಮಾಜದಲ್ಲಿಯ ಯಾವ ವರ್ಣದವನಾದರೂ ತನ್ನ ಪಾತ್ರಾಪಾತ್ರತೆಯ ಮೇಲಿಂದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಅಥವಾ ಶೂದ್ರನಾಗಲಿಕ್ಕೆ ಬರುವದು.

ಹೀಗಾದರೇನೇ ಸಮಾಜದಲ್ಲಿ ಈಗ ತೋರಿ ಬರುವ ಜಾತಿ ವಿಷಯಕ ಕಲಹಗಳು ಇಲ್ಲವಾಗಿ, ಅವರೊಳಗೆ ಪರಸ್ಪರ ಐಕ್ಯವೂ ಸಹಕಾರಿತೆಯೂ ನೆಲೆಗೊಳ್ಳುವವು. ಬ್ರಾಹ್ಮಣರನ್ನು ಸಿದ್ಧ ಮಾಡುವ ಪ್ರಾಜ್ಞ ಪಾಠಶಾಲೆಗಳು ಯುರೋಪದಂತೆ ಸರ್ವ ವರ್ಣದವರ ಪ್ರವೇಶಕ್ಕನುಕೂಲವಾಗಿರಬೇಕು. ಮತ್ತು ಯಾವದೇ ಒಂದು ಜಾತಿಯಲ್ಲಿ ಅಥವಾ ಮನೆತನದಲ್ಲಿ ಪುರೋಹಿತ ವರ್ಗವನ್ನು ಸ್ಥಿರವಾಗಿಡದೆ ಎಲ್ಲರಿಗೂ ಅವರವರ ಯೋಗ್ಯತಾನುಸಾರ ಪುರೋಹಿತ ಅಥವಾ ಗುರುಗಳಾಗಲಿಕ್ಕೆ ಅವಕಾಶವಿರಬೇಕು. ಮತ್ತು ಅದರಂತೆ ಧಾರ್ಮಿಕ ಸಂಸ್ಕಾರಗಳು ಅಂದರೆ ಮೌಂಜೀಬಂಧನ ದೀಕ್ಷಾದಿ ಸಂಸ್ಕಾರಗಳು ಸರ್ವರಿಗೂ ಒಂದೇ ಪ್ರಕಾರವಾಗಿರಬೇಕು. ಹಿಂದೂದೇವಾಲಗಳಲ್ಲಿ ಹಿಂದೀ ವರ್ಣದ ಪ್ರತಿಯೊಬ್ಬನಿಗೂ ಪ್ರವೇಶಕ್ಕೂ ಪೂಜೆಗೂ ಯಾವ ತರದ ನಿರ್ಬಂಧವಿರಕೂಡದು ಅಂದರೆ ಪೂಜಾಸ್ವಾತಂತ್ರ್ಯವು ಸರ್ವ ಹಿಂದೀ ವರ್ಣದವರಿಗೆ ಇರತಕ್ಕದ್ದು. ಬ್ರಾಹ್ಮಣ ಬ್ರಾಹ್ಮಣೇತರ ಈ ತರದ ಭೇದಭಾವವನ್ನು ಕಿತ್ತೊಗೆದು ಸರ್ವ ವರ್ಣದವರಿಗೂ ಪೂಜಾಸ್ವಾತಂತ್ರ್ಯ ಸಂಸ್ಕಾರಸ್ವಾತಂತ್ರ್ಯ ಮತ್ತು ಪುರೋಹಿತಸ್ವಾತಂತ್ರ್ಯ ಇವೆಲ್ಲ ಸಮನಾಗಿದ್ದರೆ, ನಮ್ಮ ಪ್ರಾಚೀನ ಆರ್ಯಧರ್ಮವನ್ನು ಪುನರುಜ್ಜೀವನಗೊಳಿಸಿದಂತಾಗಿ ಭಾರತ ಧರ್ಮಕ್ಕೆ ರಾಷ್ಟ್ರೀಯ ಸ್ವರೂಪವನ್ನು ಕೊಟ್ಟಂತಾಗುವದು. ಮೇಲಿನ ಮೂಲ ಭೂತ ಸುಧಾರಣೆಯನ್ನು ನಮ್ಮ ಹಿಂದೂ ಸಮಾಜದಲ್ಲಿ ನೆಲೆಗೊಳಿಸಬೇಕಾದರೆ, ಈಗಿನ ಆಚಾರ ಧರ್ಮಕ್ಕೆ ಮಹತ್ವಕೊಡದೆ ಪ್ರಾಚೀನ ಕಾಲದ ಅಂದರೆ ವೇದಕಾಲದ ಸನಾತನ ಧರ್ಮದ ಆಚಾರ ವಿಚಾರಗಳನ್ನು ನಮ್ಮವರಲ್ಲಿ ಹರಡುವಂತೆ ಮಾಡಬೇಕು. ಮತ್ತು ಹಿಂದು ಸಮಾಜದಲ್ಲಿ ಇಂಥ ಉದಾರ ಮತ್ತು ಉದಾತ್ತ ಕಲ್ಪನೆಗಳನ್ನು ಪ್ರಸ್ಥಾಪನಗೊಳಿಸಬೇಕು.

ಯುರೋಪಖಂಡದಲ್ಲಿ ಶ್ರೇಷ್ಠ ಧರ್ಮಾಧಿಕಾರಿಯಾದ ಪೋಪನ ವರ್ಚಸ್ಸು ಹಾಳಾಗಿ ಈಗ ಹೆಸರಿಗೆ ಮಾತ್ರ ಹ್ಯಾಗೆ ಪೋಪನಾಗಿದ್ದಾನೋ ಮತ್ತು ಅವನಿಗೆ ಸಾಮಾಜಿಕ ನಿಯಮಗಳನ್ನು ಮಾಡಲಿಕ್ಕೆ ಹ್ಯಾಗೆ ಕಾಯಿ ಯಿಂದದೆ ಅಧಿಕಾರವಿಲ್ಲವೋ ಇದರಂತೆ ನಮ್ಮ ದೇಶದಲ್ಲಿ ಶಂಕರಾ ಚಾರ್ಯ ಮೊದಲಾದ ಪೀಠಸ್ಥರ ಸ್ಥಿತಿಯಾಗುವದು. ಶಂಕರಾಚಾರ್ಯ ಮೊದಲಾದ ಪೀಠಸ್ಥರು ಪಾರಂಪರ್ಯದಿಂದ ಬಂದಿರುವ ಪಾರಮಾ ರ್ಥಿಕ ಉಪದೇಶವನ್ನು ಸರ್ವರಿಗೂ ಮಾಡುತ್ತಾ ಹೋಗಬೇಕು. ಆದರೆ ಸಾಮಾಜಿಕ ನೇಮಗಳನ್ನು ಮಾಡುವ ಅಧಿಕಾರವು ಕಾಯಿದೆಯಿಂದ ಶಂಕರಾಚಾರ್ಯ ಮೊದಲಾದ ಮಂಡಳಿಯವರ ಕಡೆಗೆ ಒಪ್ಪಿಸದೆ ಅದನ್ನು ಲೋಕನಿಯುಕ್ತ ಶಾಸನ ನಿರ್ಮಾಣ ಮಂಡಲಕ್ಕೆ ಒಪ್ಪಿಸತಕ್ಕದ್ದು. ಆ ಮಂಡಲದವರ ಮತವೇ ಈ ವಿಷಯದಲ್ಲಿ ಗ್ರಾಹ್ಯವೆನಿಸಬೇಕು.

ಮನುಸ್ಮೃತಿಯನ್ನು ವೇದಕಾಲದ ಮಂತ್ರದೃಷ್ಟರಾದ ಋಷಿಗಳು ಮಾಡಿರುವದಿಲ್ಲ. ಅದನ್ನು ಕ್ರಿಸ್ತಶಕದ ಆರಂಭದಲ್ಲಿ ಬಂಗಾಲದ ಒಬ್ಬ ಭೃಗು ಹೆಸರಿನ ಭಿಕ್ಷುಕನು ಪೌರಾಣಿಕ ಪದ್ಧತಿಯಂತೆ ಬರೆದಿರುವನು. ಅದರಲ್ಲಿ ಆ ಕಾಲದಲ್ಲಿ ಪ್ರಚಲಿತವಿದ್ದ ಲೋಕಾಚಾರ ರೂಢಿ ಮತ್ತು ಕಾಯಿದೆ ಕಲ್ಪನೆಗಳನ್ನು ಪೋಣಿಸಿರುವನು.— ಹೀಗೆಂದು ಈಗಿನ ಶೋಧ ಕರು ಅನ್ನುತ್ತಾರೆ. ತನ್ನ ಗ್ರಂಥಕ್ಕೆ ಮಹತ್ವವೂ ದೊಡ್ಡಸ್ತಿಕೆಯೂ ಪವಿ ತ್ರತೆಯೂ ಬರಬೇಕೆಂದು ವೈವಸ್ವತಮನುವಿನ ಹೆಸರನ್ನು ಜೋಡಿಸಿರು ವನು. ಶ್ರುತಿ ಮತ್ತು ಸ್ಮೃತಿ ಇವುಗಳನ್ನು ವಿಮರ್ಶೆ ಮತ್ತು ವಿವೇಚನೆ ಎಂಬ ಸಾಣಿಗಿಯಿಂದ ಸಾಣೆಸುವಾಗ ಮದ್ರಾಸದ ಸುಪ್ರಸಿದ್ಧ ಎ ಮಹಾ ದೇವ ಶಾಸ್ತ್ರಿಗಳು ಹೀಗೆ ಅಂದಿರುವರು:— "ಋಷಿಗಳ ನಿರ್ವಿಕಾರ ಮತ್ತು ಸಮತೆಯ ಮನೋವೃತ್ತಿಯಲ್ಲಿ ಯಾವ ಸನಾತನ ತತ್ವಗಳ ಸತ್ಯತೆಯು ಪ್ರಕಟವಾಗುತ್ತದೋ ಆ ಸತ್ಯತತ್ವಕ್ಕೆ ವೈದಿಕಧರ್ಮ ಅಥವಾ ಶ್ರುತಿಗಳೆಂಬ ಹೆಸರು ಬಂದದೆ. ಒಂದು ವಿವಕ್ಷಿತ ಕಾಲದ ಸಮಯಾಚಾರಾದಿ ವಿಷಯ ಗಳನ್ನು ತನ್ನ ಸ್ವಂತ ಅನುಭವದಿಂದ ಸಂಗ್ರಹಿಸಿ ಬರೆದ ಗ್ರಂಥಕ್ಕೆ ಸ್ಮೃತಿ ಎನ್ನುವರು. ಆದ್ದರಿಂದ ಸ್ಮೃತಿಗಳ ಆಧಾರವು ಶ್ರುತಿಗಳಿಗಿಂತ ಕಡಿಮೆ ತರದ್ದು ಅದೆ. ಅಶಾಸ್ತ್ರಸಿದ್ಧ ಸಂಗತಿಗಳು ಮತ್ತು ಸಾಮಾಜಿಕ ಆಚಾರ ಇವುಗಳೇ ಪ್ರಾಮುಖ್ಯವಾಗಿ ಸ್ಮೃತಿಯಲ್ಲಿ ಸಮಾವೇಶವಾದ್ದರಿಂದ ಶ್ರುತಿ

ಯುಷ್ಟು ಪ್ರಮಾಣಭೂತಗ್ರಂಥವು ಸ್ಮೃತಿಯಲ್ಲ. ಅರ್ಥಾತ್ ಶಾಸ್ತ್ರೀಯ ಶೋಧವೂ ಸಾಮಾಜಿಕ ಪರಿಸ್ಥಿತಿಯೂ ಹೇಗೆ ಹೇಗೆ ಬದಲಾಗುತ್ತದೋ ಆ ಪ್ರಮಾಣದ ಮೇಲಿಂದ ಸ್ಮೃತಿಗಳನ್ನು ಬದಲಾಯಿಸಲಿಕ್ಕೆ ಬರುವದು. ಶ್ರುತಿಯಲ್ಲಿಲ್ಲದ ಮತ್ತು ಶ್ರುತಿಗೆ ವಿರೋಧವಾದ ಎಷ್ಟೋ ಮಾತುಗಳು ಸ್ಮೃತಿಯಲ್ಲಿ ಕಂಡು ಬರುತ್ತವೆ. ಈ ಸಂಗತಿಗಳ ಬಗ್ಗೆ ಶಾಸ್ತ್ರೀಯ ರೀತ್ಯಾ ಶೋಧ ಮಾಡಲು, ಆ ನವೀನ ಸಂಗತಿಗಳು ತಪ್ಪಾದವೆಂತಲೂ ಒಂದು ವಿಶಿಷ್ಟ ವರ್ಗದ ದುರ್ವಾಸನೆ ಗರ್ವ, ಮತ್ಸರ ಸ್ವಾರ್ಥಸಾಧನೆ, ಇವುಗಳ ಆಧಾರದ ಮೇಲೆ ನಿಂತವೆ ಎಂದು ತಿಳಿಯಬೇಕು."

ಸ್ಮೃತಿಗಳ ಯೋಗ್ಯತೆಯ ಬಗ್ಗೆ ಎ. ಮಹಾದೇವ ಶಾಸ್ತ್ರಿಗಳು ಚನ್ನಾಗಿ ಬರೆದಿರುತ್ತಾರೆ. ಮನುವು ಕಾಯಿದೆಯನ್ನು ಮಾಡುವ ಧರ್ಮ ಸಂಸ್ಥಾಪಕನಲ್ಲ (*Law giver*). ಆದರೆ ಕಾಯಿದೆಯನ್ನು ನೆನಪಿಗೆ ತರ ತಕ್ಕವನು (*Law Remembrancer*) ಇದ್ದಾನೆ. ಸರ್ವ ದೇಶಗಳಲ್ಲಿ ಸಾಮಾಜಿಕ ಕಾಯಿದೆಗಳು ದೇಶಕಾಲ ಪರಿಸ್ಥಿತಿಗನುಸರಿಸಿ ಮೇಲಿಂದ ಮೇಲೆ ಬದಲಾಯಿಸಲ್ಪಡುತ್ತವೆ. ನಮ್ಮ ದೇಶದಲ್ಲಿ ಮನುಯಾಜ್ಞ್ಯವಲ್ಕ್ಯ ಮೊದಲಾದವರು ಹೇಳಿದ ಕಾಯಿದೆಗಳು ಧರ್ಮಗಳು ಸರ್ವಕಾಲಕ್ಕೂ ಯೋಗ್ಯವಾದವೆಂದು ಹೇಗೆ ನಿರ್ಣಯಿಸಲಿಕ್ಕಾದೀತು? ಪ್ರತಿಯೊಂದು ನೂರು ವರ್ಷದಲ್ಲಿಯಾಕೆ, ೧೦--೨೦ ವರ್ಷದಲ್ಲಿಯೇ ಮಾನವ ಸಮಾಜದ ಆಚಾರ ವಿಚಾರಗಳಲ್ಲಿ ಉತ್ಕ್ರಾಂತಿಯಾಗಿ ಸಾಮಾಜಿಕ ಮತ್ತು ರಾಷ್ಟ್ರೀಯ ಕಲ್ಪನೆಗಳಲ್ಲಿ ಬಹಳವಾಗಿ ಹೆಚ್ಚು ಕಡಿಮೆಯಾಗುವದುಂಟು. ಆದರ ಕ್ರಿ. ಶಕದ ಪೂರ್ವದಲ್ಲಿದ್ದ ಪದ್ಧತಿಯನ್ನೇ ಈಗಿನ ಇಪ್ಪತ್ತನೇ ಶತಮಾನದಲ್ಲಿ ಹಿಂದು ಧರ್ಮಶಾಸ್ತ್ರ ಹೊಸದಾಗಿ ರಚಿಸುವ ಕಾಲದಲ್ಲಿ ಹಿಂದಿನ ರೂಢಿಯನ್ನೇ ಆಧಾರವಾಗಿಟ್ಟುಕೊಂಡು ಏನೂ ಬದಲಾವಣೆಯಿಲ್ಲದೆ ಕಾಯಿದೆ ಮಾಡುವಂಥ ಮೂರ್ಖತನದ ಉದಾಹರಣೆಯು ಜಗತ್ತಿನಲ್ಲಿ ಎಲ್ಲಿ ಹುಡುಕಿದರೂ ಸಿಗಲಾರದು. ಹಿಂದೂ ಕಾಯದೆ ಆಮೂಲಾಗ್ರ ಬದಲಾಯಿಸಲ್ಪಡಬೇಕು. ದೇಶಕಾಲ ಪರಿಸ್ಥಿತಿಗನುಸರಿಸಿ ಸಮಾಜೋದ್ಧಾರವಾಗುವಂತೆ ಅಭಿನವ ಮನುಸ್ಮೃತಿಯು ನಮ್ಮ ಕಾಯದೆ ಮಂಡಲವಲ್ಲಿ ಅಥವಾ ಕಾಂಗ್ರೆಸದಲ್ಲಿ ಸಿದ್ಧವಾದರೆ ಮಾತ್ರ ಆನುವಂಶಿಕ ಜಾತಿವರ್ಣ್ಯದ ಬೇರು ಸಮೂಲವಾಗಿ ನಾಶ ಹೊಂದಿ ಹಿಂದೂಸಮಾಜವು ಹೊಸಪಾಯಾದ ಮೇಲೆ ರಚಿಸಲ್ಪಡಲು ಅನುಕೂಲವಾಗುವದು. ಹೀಗಾ

ದರೇನೇ ರಾಷ್ಟ್ರೋದ್ಧಾರವಾಗಿ ಹಿಂದೂ ಸಮಾಜವು ಉನ್ನತಿ ಶಿಖರಕ್ಕೆ ಮುಟ್ಟುವದು.

ಮನುಸ್ಮೃತಿಯು ಕೇವಲ ಆಚಾರಗ್ರಂಥವಿದ್ದು ಅದರಲ್ಲಿರುವ ಆಚಾರ ರೂಢಿ ಮೊದಲಾದವು ವೇದದಲ್ಲಿ ಸಿಗುವದಿಲ್ಲ. ಆಧ್ಯಾತ್ಮಿಕ ದೃಷ್ಟಿಯಿಂದ ಉಪನಿಷತ್ ಮತ್ತು ಗೀತೆ ಇವುಗಳಿಗಿರುವಷ್ಟು ಮಾನ್ಯತೆಯು ಮನುಸ್ಮೃತಿಗೆ ಬರಲಾರದು. ಈ ಮನುಸ್ಮೃತಿಯಲ್ಲಿ ಹೇಳಿದ ಕೆಲವು ತತ್ವಗಳು ಎಷ್ಟು ಅಶಾಸ್ತ್ರೀಯವಾದವು ಅವೆ ಎಂಬದನ್ನು ಮೇಲೆ ಹೇಳಿದೆ. ರಾಜಕಾರಣದಲ್ಲಿ ಮುದ್ರಣಸ್ವಾತಂತ್ರ್ಯ ಆರ್ಥಿಕಸ್ವಾತಂತ್ರ್ಯ ಎಷ್ಟು ಮಹತ್ವವಾದದ್ದಿರುತ್ತದೋ ಅದಕ್ಕೂ ಹೆಚ್ಚಿಗೆ ಧಾರ್ಮಿಕ ವಿಷಯದಲ್ಲಿ ಪೂಜಾಸ್ವಾತಂತ್ರ್ಯ ಪುರೋಹಿತಸ್ವಾತಂತ್ರ್ಯ ಮತ್ತು ಸಂಸ್ಕಾರಸ್ವಾತಂತ್ರ್ಯ ಇವು ಮಹತ್ವವುಳ್ಳವಾಗಿವೆ. ರಾಜಕೀಯ ಸ್ವಾತಂತ್ರ್ಯದಂತೆ ಧಾರ್ಮಿಕಸ್ವಾತಂತ್ರ್ಯದ ಕಾರ್ಯವನ್ನು ಮುಂದೆ ಒಗೆಯುತ್ತ ಹೋದ ಹಾಗೆಲ್ಲ ಸಮಾಜದಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಅತ್ಯಾಚಾರ ಉಂಟಾಗದೆ ಇರಲಾರದು.

## ಸಾಮಾಜಿಕ ದಾಸ್ಯತ್ವದ ಎರಡನೆ ಪ್ರಕಾರ.

ಹಿಂದುಸ್ತಾನದಲ್ಲಿ ಆರುಕೋಟಿ ಅಸ್ಪರ್ಶವರ್ಗದವರಿದ್ದಾರೆಂದು ಹೇಳುವದು ಸನಾತನ ಧರ್ಮದ ಅನುಯಾಯಿಗಳಾದವರಿಗೆ ಲಾಂಛನಾಸ್ಪದ ಮಾತು. ಆರ್ಥಿಕ ಮತ್ತು ಔದ್ಯೋಗಿಕ ಪರಿಸ್ಥಿತಿಯ ಮೂಲಕ ರೇಲ್ವೆ ಮತ್ತು ಹಡಗ ಪ್ರವಾಸದಿಂದ, ಚಹಾ ಕಾಫಿ ಹಾಟೇಲ್ಲದ ಮೇಲಿಂದ ಅಸ್ಪರ್ಶತೆಯು ಕಡಿಮೆಯಾಗುತ್ತ ನಡೆದಿದೆ ಎಂಬ ಮಾತನ್ನು ಯಾರೂ ನಂಬಕೂಡದು. ಅಸ್ಪರ್ಶತೆಯ ಉಗಮ ಸ್ಥಾನವು ಮುಖ್ಯವಾಗಿ ದೇವಾಲಯ ಅಥವಾ ಧರ್ಮಾಲಯ ಪ್ರವೇಶದಲ್ಲಿರುತ್ತದೆ. ಅಸ್ಪರ್ಶಜನರೂ ಬ್ರಾಹ್ಮಣೇತರರೂ ದೇವಾಲಯಗಳನ್ನು ಪ್ರವೇಶ ಮಾಡಿದರೆ ಅವು ಭ್ರಷ್ಟವಾಗುತ್ತವೆ ಎಂಬ ದುರಾಗ್ರಹವು ಪೂರಾ ನಷ್ಟವಾದರೆ ಸೂತ್ರ ಅಸ್ಪರ್ಶತೆಯು ನಷ್ಟವಾಗುವದೆಂದು ಖಂಡಿತವಾಗಿ ತಿಳಿಯಬೇಕು. ಮುಖ್ಯವಾಗಿ ಅಸ್ಪರ್ಶರಿಗೆ ಶಾಲೆ ಕಾಲೇಜುಗಳಲ್ಲಿ ದವಾಖಾನೆಗಳಲ್ಲಿ ಸಮಾನವಾದ ಪ್ರವೇಶದ ಹಕ್ಕು ಇದ್ದದ್ದಾದರೆ ಮಾತ್ರ, ಹಿಂದೂ ದೇವಾಲಯದಲ್ಲಿ ಅವರ ಪ್ರವೇಶಕ್ಕೆ ಯಾವತಡೆಯಿಲ್ಲದಿದ್ದರೆ ಅದು ಕೂಡಲೆ

ನಷ್ಟವಾಗುವದು. ಇದು ಬಹಳ ದುಸ್ತರ ಕಾರ್ಯವಿರುತ್ತದೆ. ಅಸ್ಪರ್ಶ ನಿವಾರಣೆಯ ಪ್ರಶ್ನೆಯು ಕೇವಲ ವ್ಯಾಖ್ಯಾನದಿಂದ ಬುದ್ಧಿವಾದದಿಂದ ಮತ್ತು ಸಹಭೋಜನದಿಂದ ಅಥವಾ ಕಾಂಗ್ರೆಸ ಠರಾವದಿಂದ ಸುಲಭ ವಾಗಿ ಬಿಡಿಸಲ್ಪಡಲಾರದು. ಮತ್ತು ಪುರಾಣ ಮತವಾದಿಗಳ ಮನಸ್ಸು ನೋಯಿಸದಂತೆ ಶಾಲೆ ಕಾಲೇಜು ದೇವಾಲಯ ಮೊದಲಾದವುಗಳಲ್ಲಿ ಅಸ್ಪರ್ಶರ ಪ್ರವೇಶವು ಉತ್ತರೋತ್ತರವಾಗಿ ಹೆಚ್ಚಾಗುವಂತೆ ಮಾಡಿದರೆ ಅದು ಕಡಿಮೆಯಾಗಹತ್ತುವದು. ಇದನ್ನು ಸಾಧಿಸುವದಕ್ಕಾಗಿ ನಮ್ಮಲ್ಲಿ ಮನೆ ಮಾಡಿಕೊಂಡಿರುವ ಧಾರ್ಮಿಕ ಉದಾಸೀನತನವನ್ನು ಬಿಟ್ಟು ಕೊಟ್ಟು ಉದಾತ್ತ ವೃತ್ತಿಯಿಂದ ಧರ್ಮ ಸುಧಾರಣೆಯ ಕಾರ್ಯದಲ್ಲಿ ಮನಸ್ಸು ಹಾಕಬೇಕು.

## ಸಾಮಾಜಿಕ ದಾಸ್ಯತ್ವದ ಮೂರನೆ ಪ್ರಕಾರ

### (ಹಿಂದೂಸ್ತ್ರೀಯರ ಕಾಯಿದೆಶೀರ ದುರ್ದಶೆಯು.)

ಮನುಸ್ಮೃತಿಯಲ್ಲಿ ಹೇಳಿದ ಸ್ತ್ರೀಸಂಬಂಧವಾದ ಕಾಯಿದೆಗಳನ್ನು ಮಾನ್ಯಮಾಡಿದ್ದರಿಂದ ಸ್ತ್ರೀಯರ ನೈಸರ್ಗಿಕ ಮತ್ತು ಸಾಮಾಜಿಕ ಹಕ್ಕುಗಳ ಮೇಲೆ ಒಂದು ಪ್ರಕಾರದ ಗದಾಪ್ರಹಾರವಾಗಿರುತ್ತದೆನ್ನಲಿಕ್ಕೆ ಅಡ್ಡಿಯಿಲ್ಲ. ಸ್ತ್ರೀಯರ ಸಂಬಂಧವಾಗಿ ಉದಾರ ಕಾಯಿದೆ ಪಾಸ ಮಾಡಿಸಿಕೊಳ್ಳಬೇಕಾದರೆ, ಮನುಸ್ಮೃತಿಯಲ್ಲಿ ಅವರ ಬಗ್ಗೆ ಪ್ರಣೀತವಾದ ಕಲ್ಪನೆಗಳನ್ನು ನಿರ್ಮೂಲಮಾಡಿ ಶಾಸನಮಂಡಲ ಮುಖಾಂತರ ಧಾರ್ಮಿಕ ಸುಧಾರಣೆಯನ್ನುಂಟು ಮಾಡುವದು ಅತ್ಯಾವಶ್ಯಕವು. ಈ ಮೇಲೆ ಹೇಳಿದ ಸಾಮಾಜಿಕ ದಾಸ್ಯತ್ವ ಪರಿಹಾರಕ್ಕಾಗಿ ಪ್ರಾಚೀನ ಶುದ್ಧವೈದಿಕಧರ್ಮದ ಪುನರುಜ್ಜೀವನವಾಗಬೇಕು. ಈ ಧರ್ಮಾಭ್ಯುದಯದ ಕಾರ್ಯವನ್ನು ನಮ್ಮಲ್ಲಿರುವ ಧರ್ಮಸಂಸ್ಥೆಗಳು ಕೈಕೊಳ್ಳಬೇಕು. ಇದಕ್ಕಾಗಿ ನಮ್ಮ ಭಾರತ ಧರ್ಮಸುಧಾರಕರು ಕೆಳಗಿನ ಚಳವಳಿಗಳನ್ನು ನಡೆಯಿಸತಕ್ಕದ್ದು.—

೧. ಪೂಜಾಸ್ವಾತಂತ್ರ್ಯ—ಹಿಂದೂದೇವಾಲಯದಲ್ಲಿ ವರ್ಣ ಪಂಥ ಮತ್ತು ಅಸ್ಪರ್ಶತೆಯ ವಿಚಾರ ಮಾಡದೆ ಸರ್ವ ಹಿಂದುಗಳಿಗೆ ಸಮಾನ ಪ್ರವೇಶವಿರಬೇಕು.

೨. ಹೊಸ ಸ್ಮೃತಿ ರಚನೆ—ಶಾಸನಮಂಡಲದವರು ಈ ಹೊಸ ಮಾನವಸ್ಮೃತಿಯನ್ನು ಸಿದ್ಧಪಡಿಸಬೇಕು.

೩. ಪುರೋಹಿತಸ್ವಾತಂತ್ರ್ಯ— ಹಿಂದುಜನರ ಪಾಠಶಾಲೆಗಳಲ್ಲಿ ಯಾವ ವರ್ಣ ಪಂಥ ಮತ್ತು ಅಸ್ಪೃಶ್ಯತೆಯ ವಿಚಾರ ಮಾಡದೆ ಧಾರ್ಮಿಕ ಶಿಕ್ಷಣವನ್ನು ಎಲ್ಲ ಹಿಂದೂ ಜನರಿಗೆ ಸಮಾನವಾಗಿ ಕೊಡತಕ್ಕದ್ದು.

೪. ಲೋಕನಿಯುಕ್ತ ಶಂಕರಾಚಾರ್ಯ ಪೀಠ—ಶಂಕರಾಚಾರ್ಯ ಮೊದಲಾದ ಆಚಾರ್ಯರ ಪೀಠದ ಮೇಲೆ, ವರ್ಣ ಪಂಥ ಮತ್ತು ಅಸ್ಪೃಶ್ಯತೆ ಇವೆಲ್ಲ ವಿಚಾರ ಮಾಡದೆ ಆಂಗ್ಲ ಮತ್ತು ಪ್ರಾಚ್ಯ ವಿದ್ಯಾವಿಭೂಷಿತ ಆಚಾರಸಂಪನ್ನರಾದ ಪಂಡಿತರನ್ನು ಜನರು ಆರಿಸಿ ಅವರನ್ನು ಆಯಾ ಗಾದಿಯ ಮೇಲೆ ಕೂಡ್ರಿಸಬೇಕು.

೫. ಮಾತೃಭಾಷೆಯಲ್ಲಿ ಸಮಾನ ಸಂಸ್ಕಾರ ಮತ್ತು ವಿಧಿ— ಕೆಲವು ಸಂಸ್ಕೃತ ಮಂತ್ರಗಳನ್ನು ಇಟ್ಟುಕೊಂಡು ಈ ಸಂಸ್ಕಾರಗಳನ್ನು ಎಲ್ಲ ಹಿಂದೂಜನರಿಗೂ ಏಕಪ್ರಕಾರವಾಗಿ ಆಯಾ ಜನರ ತಾಯ್ನುಡಿಯಲ್ಲಿಯೇ ಮಾಡತಕ್ಕದ್ದು.

೬. ದಾನಧರ್ಮಪದ್ಧತಿ— ಯುರೋಪದಲ್ಲಿರುವಂತೆ ಲೋಕೋಪಯೋಗ ದೃಷ್ಟಿಯಿಂದ ದಾನಧರ್ಮದ ಮತ್ತು ದಯಾಧರ್ಮದ ಸಂಸ್ಥೆಗಳು ಸ್ಥಾಪಿಸಲ್ಪಡಬೇಕು.

ಹೀಗೆ ಸಮಾಜದಲ್ಲಿ ಪರಸ್ಪರ ಮೈತ್ರೀಭಾವವೂ ಸಮಾನದರ್ಜೆಯೂ ಉಂಟಾಗುವಂತೆ ಧರ್ಮಸುಧಾರಕರು ಯತ್ನ ಮಾಡಬೇಕು. ಪೂರ್ವಕಾಲದ ಸ್ಮೃತಿಗಳನ್ನು ಬದಲು ಮಾಡಿ ಹೊಸ ಪರಿಸ್ಥಿತಿಗನುಸರಿಸಿ ನವೀನ ಸ್ಮೃತಿಗಳು ನಿರ್ಮಾಣವಾಗಬೇಕು.

ಈ ಎಲ್ಲ ಸುಧಾರಣೆಗಳು ಕೃತಿಯಲ್ಲಿ ಬರಬೇಕಲ್ಲದೆ, ವ್ಯಾಖ್ಯಾನದಿಂದ ಬುದ್ಧಿವಾದದಿಂದ ಆಗವೆಂಬುದು ಜಗತ್ತಿನ ಇತಿಹಾಸದಿಂದ ಕಂಡ ಮಾತು. ಕಾರಣ ಸಮಾಜ ಸುಧಾರಕರೂ ಧಾರ್ಮಿಕ ಸುಧಾರಕರೂ ಈ ಮಾತನ್ನು ಪೂರ್ಣ ಲಕ್ಷದಲ್ಲಿಡಬೇಕೆಂದು ಈ ಲೇಖಕನ ನಮ್ರ ಪ್ರಾರ್ಥನೆ ಇದೆ.

ಮೇಲಿನ ಲೇಖವು ಶ್ರೀಯುತ ಪ್ರೊಫೆಸರ ಗೋಪಾಳ ಮಹಾದೇವ ಚಿಪಳೂಣಕರ ಎಮ್. ಎ. ಇವರು ಮಾಸಿಕ ಮನೋರಂಜನದಲ್ಲಿ ಪ್ರಕಟಿಸಿದ ಲೇಖದ ಅನುವಾದವು. ಲೇಖಕರು ಈಗಿನ ನುಡಿಯಂತೆ ಜಾತಿಯಿಂದ ಬ್ರಾಹ್ಮಣರಿದ್ದರೂ ಜಾತಿ ಬ್ರಾಹ್ಮಣರಿಂದ ದೇಶಕ್ಕೂ ಸಮಾಜಕ್ಕೂ ಆದ ಹಾನಿಯನ್ನು ನಿರ್ದಾಕ್ಷಿಣ್ಯದಿಂದ ಟೀಕಿಸಿರುತ್ತಾರೆ. ಕುಲ

ಮದ ಜಾತಿಮದ ಸ್ವಾರ್ಥಪರಾಯಣತೆ ಮುಂತಾದ ದುರ್ಗುಣಗಳಿಂದ
ದೂರಾದವರೇ ಉತ್ತಮ ಕುಲದವರೆಂದು ಬೇರೆ ಹೇಳಬೇಕಾಗಿಲ್ಲ.
ಸಾಂಪ್ರತ ಪರಿಸ್ಥಿತಿಯನ್ನುದ್ದೇಶಿಸಿ ಬರೆದ ಇವರ ಲೇಖವು ಸರ್ವರಿಂದಲೂ
ಮನನೀಯವಾಗಿದೆ. ಹನ್ನೆರಡನೆಯ ಶತಮಾನದಲ್ಲಿ ಉದಯವಾದ
ಕರ್ಣಾಟಕ ವಿಭೂತಿಗಳಲ್ಲಿ ಮೊದಲಿಗನಾದ ಬಸವೇಶ್ವರನು ಮಾಡಿದ
ಸಮಾಜ ರಚನೆಯು ಆರ್ಯರ ವೈದಿಕ ಮತ್ತು ಮಹಾಭಾರತ ಕಾಲ
ದಲ್ಲಿ ಪ್ರಚಲಿತವಿದ್ದ ಸಮಾಜ ರಚನೆಯನ್ನು ಸಾಮಾನ್ಯವಾಗಿ ಹೋಲು
ತ್ತಿದೆ ಇಷ್ಟೇ ಅಲ್ಲ, ಭಿನ್ನ ಭಿನ್ನ ದೇವತೋಪಾಸನೆಯಲ್ಲಿ ಮಗ್ನವಾದ
ಪೂರ್ವಕಾಲದ ಜನರಲ್ಲಿ ಸಹಜವಾಗಿ ಹುಟ್ಟುವ ಅಂತರ್ಯಭೇದ
ಭಾವವನ್ನೂ ತನ್ಮೂಲಕವಾದ ಕಲಹವನ್ನೂ ತಪ್ಪಿಸಲೋಸುಗ ಬಸವೇಶ್ವ
ರನು ಶಿವಭಕ್ತಿ ಶಿವಲಿಂಗಧಾರಣ ಶಿವಾಚಾರ ಇವೇ ಮುಂತಾದ ಧಾರ್ಮಿಕ
ತಳಹದಿಯ ಮೇಲೆ ವೀರಶೈವ ಸಮಾಜವನ್ನು ರಚಿಸಿ ವೀರಶೈವ ಮತ
ವನ್ನು ಪುನರುಜ್ಜೀವನಗೊಳಿಸಿ ಏಕರಾಷ್ಟ್ರೀಯತ್ವ ಭಾವನೆಗೆ ಎಷ್ಟು ಸಹ
ಕಾರಿಯಾದನೆಂಬುದು ನಿರ್ವಿಕಾರ ಮನಸ್ಸಿನವರಿಗೆ ಒಡೆದು ಕಾಣು
ವದು. "ಶ್ವಪಚನಾದರೇನು? ಲಿಂಗವಿದ್ದವನೇ ಕುಲಜನು. ಕುಲವೇನೋ
ಅವಂದಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ
ಕೂಡಲಸಂಗನ ಶರಣರೇ ಕುಲಜರು" ಎಂಬ ಮಾರ್ಮಿಕ ವಚನ
ವನ್ನು ಯಾವ ಮಹಾಭಾರತ ವಚನಕ್ಕೆ ಸರಿಹಚ್ಚಬಹುದು! ಬಸವೇ
ಶ್ವರನ ಸಮಾಜ ಸುಧಾರಣೆಗೆ ಈಗಿನ ಯಾವ ಸಮಾಜ ಸುಧಾರಕ
ರನ್ನು ಹೋಲಿಸಬಹುದು! ಜಾತಿ ಬ್ರಾಹ್ಮಣರು ಕೂಡ ಅನೇಕ ಪತ್ರ
ಗಳಲ್ಲಿ ಬಸವೇಶ್ವರನ ಮಹತ್ಕಾರ್ಯವನ್ನು ಕೊಂಡಾಡುತ್ತಿರುವಾಗ
ನಮ್ಮ ವೀರಶೈವ ಸಮಾಜದಲ್ಲಿಯ ಕೆಲವೊಂದು ವರ್ಗದವರು ಆತನನ್ನು
ಕುರಿತು ಬೊಗಳುವದನ್ನು ನೋಡಿದರೆ ಸಮಾಜದ ದುರ್ದಶೆಯು
ಎಲ್ಲಿಗೆ ಮುಟ್ಟುವದೋ ತಿಳಿಯದು. ಇವರು ಸದ್ಯದ ಪರಿಸ್ಥಿತಿಯನ್ನು
ನೋಡಿ ಇಂಥ ಸಮಾಜ ವಿಘಾತಕ ಕಾರ್ಯದಿಂದ ಬೇಗನೆ ವಿಮುಖ
ರಾಗಬೇಕೆಂಬ ಉದ್ದೇಶದಿಂದ ಅವರಿಗೋಸ್ಕರ ಈ ಲೇಖವನ್ನು ಕನ್ನ
ಡದಲ್ಲಿ ಅನುವಾದಿಸಲಾಯಿತು.

ಶಿವಾನುಭವ ಗ್ರಂಥಮಾಲಾ ನಂ|| ೧೭

# ಲಿಂಗಮ್ಮನ ವಚನಗಳು.



ಸಂಪಾದಕರು

ರಾ|| ಸಾ|| ಫ. ಗು. ಹಳಕಟ್ಟಿ
ಬಿ. ಎ. ಎಲ್. ಎಲ್. ಬಿ. ವಕೀಲ

ವಿಜಾಪುರ.



ಬೆಲೆ ೩ [illegible]ಗಳು.

# ಪ್ರಸ್ತಾವನೆ.

ಈಗ ನಾವು ಲಿಂಗಮ್ಮನ ವಚನಗಳನ್ನು ಪ್ರಸಿದ್ಧಿಸಿದ್ದು ವಚನಕಾ ಳು ಹಡಪದಪ್ಪಣ್ಣನ ಭಾರ್ಯೆಯಾಗಿದ್ದಾಳೆ. ಹಡಪದಪ್ಪಣ್ಣನು ಬಸವೇಶ್ವರನ ಕಾಲಕ್ಕೆ ಬಹಳ ಮನ್ನಣೆಯನ್ನು ಹೊಂದಿದವನಾಗಿದ್ದನು. ಅವನ ಹೆಂಡತಿಯಾದರೂ ಅವನಂತೆಯೇ ಬಹಳ ವಿದ್ವಾಂಸಳಾಗಿದ್ದಳು. ಇದು ಆಕೆಯ ವಚನಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಈ ವಚನಗಳ ಎರಡು ಪ್ರತಿಗಳು ನ ನೊರಿದಿದ್ದು ಅವುಗಳ ಸಹಾಯದಿಂದ ಈ ಗ್ರಂಥವು ಅಚ್ಚುಹಾಕಲ್ಪಟ್ಟ... ಒಂದು ಪ್ರತಿಯು ವಿಜಾಪುರದಲ್ಲಿಯ ಪೆನಶನ್ಡ ಮಾಸ್ತರರಾದ ರಾ॥ ರಾ॥ ಶಿವಲಿಂಗಪ್ಪ ಮುದ್ದೇಬಿಹಾಳ ಇವರಿಂದ ಕಳಿಸಿಕೊಡಲ್ಪಟ್ಟದ್ದು; ಮತ್ತೊಂದು ಪ್ರತಿಯು ರಾ॥ ರಾ॥ ಪಂಚಪ್ಪ ಹರ್ಡೇಕರ ಇವರಿಂದ ಕಳಿಸಿ ಕೊಡಲ್ಪಟ್ಟಿತು. ಈ ಪ್ರಕಾರ ಈ ಪ್ರತಿಗಳನ್ನು ನಮಗೆ ಕಳಿಸಿಕೊಟ್ಟದ್ದಕ್ಕೆ ನಾವು ಈ ಉಭಯ ಮಹನೀಯರಿಗೆ ಬಹಳ ಆಭಾರಿಯಾಗಿದ್ದೇವೆ.

ಲಿಂಗಮ್ಮನ ವಚನಗಳಾದರೂ ಅನೇಕ ವಿಷಯಗಳನ್ನೊಳಕೊಂಡು ಭಾವಭರಿತವಾಗಿವೆ. ಆಕೆಯು ಬಸವೇಶ್ವರ, ಚನ್ನಬಸವೇಶ್ವರ, ಅಲ್ಲಮಪ್ರಭು ಮೊದಲಾದವರ ಬಗ್ಗೆ ಅತ್ಯಂತ ಭಕ್ತಿಭಾವವುಳ್ಳವಳಾಗಿದ್ದಾಳೆ. ಈ ಗ್ರಂಥದಲ್ಲಿ ವೀರಶೈವ ಮತದ ಸಾಮಾನ್ಯ ತತ್ವಗಳು ಸಂಕ್ಷೇಪವಾಗಿದ್ದರೂ ಬಹು ವಿಶದವಾಗಿ ವಿವರಿಸಲ್ಪಟ್ಟಿವೆ.

ವಿಜಾಪುರ.
೩೧-೬-೩೯

ಫ. ಗು. ಹಳಕಟ್ಟಿ
ಸಂಪಾದಕ.

# /ಲಿಂಗಮ್ಮನ ವಚನಗಳು.



೧. ಮುಚ್ಚಬೇಡ. ಮರಳಿ ನರಕಕ್ಕೆರಗಿ, ಕರ್ಮಕ್ಕೆ ಗುರಿಯಾಗಬೇಡ. ನಿಶ್ಚಿಂತನಾಗಿ ನಿಜದಲ್ಲಿ ಚಿತ್ತವ ಸುಯಿಧಾನವ ಮಾಡಿ, ಲಿಂಗದಲ್ಲಿ ಮನ ಅಚ್ಚೊತ್ತಿದಂತಿರಿಸಿ, ಕತ್ತಲೆಯನೆಕಳೆದು, ಬಚ್ಚಬರಿಯ ಬೆಳಗಿನೊಳಗೆ ಓಲಾಡಿ ಸುಖಿಯಾಗೆಂದರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೨. ಮದ ಮತ್ಸರ ಬಿಡದು. ಮನದ ಕನಲು ನಿಲ್ಲದು. ಒಡಲ ಗುಣ ಹಿಂಗದು. ಇವ ಮೂರನು ಬಿಡದೆ ನಡಿಸುವನ್ನಕ್ಕ, ಘನವ ಕಾಣಬಾರದು. ಘನವ ಕಾಂಬುದಕ್ಕೆ, ಮದಮತ್ಸರವನೆ ಬಿಟ್ಟು, ಮನದ ಕನಲ ನಿಲಿಸಿ, ಒಡಲ ಗುಣವನೆ ಹಿಂಗಿಸಿ, ತಾ ವ್ರುಡರೂಪಾದಲ್ಲದೆ, ಘನವ ಕಾಣಬಾರದೆಂದರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೩. ಮನ ಮರವೆಗೆ ಮುಂದುಮಾಡಿತ್ತು. ತನು ಕಳವಳಕ್ಕೆ ಮುಂದುಮಾಡಿತ್ತು. ಆಸೆರೋಷವೆಂಬವು ಅಡ್ಡಗಟ್ಟಿದವು. ಕೋಪ ಕ್ರೋಧವೆಂಬವು ಮುಂದುವರಿದವು. ಇದರೊಳಗೆ ಜಗದೀಶ್ವರನೆನಿಸಿಕೊಂಬವರ ನುಡಿಯ ಓಸರಿಸುವದು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೪. ಆಸೆಯನಳಿದು, ರೋಷವ ನಿಲಿಸಿ, ಜಗದ ಪಾಶವನರಿದು, ಈಶ್ವರನೆನಿಸಿಕೊಂಬ ಶರಣರ ಜಗದ ಹೇಸಿಗಳೆತ್ತ ಬಲ್ಲರೊ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ?

೫. ನೆನೆವುತ್ತಿದೆ ಮನ. ದುರ್ವಾಸನೆಗೆ ಹರಿವುತ್ತಿದೆ. ಕೊನೆಕೊಂಬೆಗೆ ಎಳೆವುತ್ತಿದೆ. ಕಟ್ಟಿಗೆ ನಿಲ್ಲದು. ಬಿಟ್ಟರೆ ಹೋಗದು. ತನ್ನ ಇಚ್ಛೆಯುಲಾಡುವ ಮನವ ಕಟ್ಟಿಗೆ ತಂದು, ಗೊತ್ತಿಗೆ ನಿಲಿಸಿ, ಬಚ್ಚಬರಿಯ ಬೆಳಗಿನೊಳಗೆ ಓಲಾಡುವ ಶರಣರ ಪಾದದಲ್ಲಿ ನಾ ಬೆಚ್ಚಂತಿದ್ದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೬. ನಿಮ್ಮ ಪಾದವಿಡಿದು, ಮನ ನಿರ್ಮಳವಾಯಿತ್ತು. ನನ್ನ ತನು ಶುದ್ಧವಾಯಿತ್ತು. ಕಾಯ ಗುಣವಳಿಯಿತ್ತು. ಕರಣಗುಣ ಸುಟ್ಟು ಭಾವ ವಳಿದು ಬಯಕೆ ಸವೆದು, ಮಹಾದೇವನಾದ ಶರಣರ ಪಾದವಿಡಿದು, ನಿಜಮುಕ್ತಳಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೭. ವ್ಯಾಪಾರವ ಬಿಟ್ಟು, ತಾಪತ್ರಯವನೆ ಹಿಂಗಿ. ಲೋಕದ ಹಂಗನೆ ಹರಿದು, ಬೇಕು ಬೇಡೆಂಬುದನೆ ನೂಕಿ, ತಾ ಸುವಿವೇಕಿಯಾ ದಲ್ಲದೆ, ಜ್ಯೋತಿಯ ಬೆಳಗ ಕಾಣಬಾರದೆಂದರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೮. ಅಯ್ಯ, ಈ ಮಹಾಘನವ ಕಾಂಬುದಕ್ಕೆ, ಹಸಿವು ಕೆಡಬೇಕು. ತೃಷೆಯಡಗಬೇಕು. ವ್ಯಸನ ನಿಲ್ಲಬೇಕು. ನಿದ್ರೆ ಹರಿಯಬೇಕು. ಜೀವ ಬುದ್ಧಿ ಹಿಂಗಬೇಕು. ಮನ ಪವನ ಬಿಂದು ಒಡಗೂಡಬೇಕು. ಚಿತ್ತ ಒತ್ತಟ್ಟಿಗೆ ಹೋಗದಿರಬೇಕು. ಹೊತ್ತುಹೊತ್ತಿಗೆ ಎತ್ತರವನೇರಿ, ಬೆಚ್ಚ ಬೇರಿಲ್ಲದೆ ಲಿಂಗದೊಳಗೆ ಅಚ್ಚೊತ್ತಿದಂತೆ ಬೆರೆದರೆ, ಕತ್ತಲೆ ಹರಿಯು ವದು. ಮರವೆ ಹಿಂಗುವದು, ನಿದ್ರೆ ಹರಿಯುವದು, ಹಸಿವು ಕೆಡುವುದು, ತೃಷೆಯಡಗುವದು, ವ್ಯಸನ ನಿಲ್ಲುವುದು. ಇವೆಲ್ಲವನು ಹಿಂಗಿಸಿ ತಾ ಲಿಂಗ ವ್ಯಸನಿಯಾಗಬಲ್ಲರೆ ಮುಂದೆ ಮಹಾ ಮಂಗಳದ ಬೆಳಗು ಕಾಣಿವು ದೆಂದರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೯. ಆಸೆಯುಳ್ಳನ್ನಕ್ಕ ರೋಷ ಬಿಡದು. ಕಾಮವುಳ್ಳನ್ನಕ್ಕ ಕಳವಳ ಬಿಡದು. ಕಾಯಗುಣವುಳ್ಳನ್ನಕ್ಕ ಜೀವನ ಬುದ್ಧಿ ಬಿಡದು. ಭಾವವುಳ್ಳನ್ನಕ್ಕ ಬಯಕೆ ಸವೆಯದು. ನಡೆಯುಳ್ಳನ್ನಕ್ಕ ನುಡಿಗೆಡದು. ಇವೆಲ್ಲವು ಮುಂದಾ ಗಿದ್ದ್ದ ಹಿಂದನರಿದೆನೆಂಬ ಸಂದೇಹಿಗಳಿರಾ ನೀವು ಕೇಳಿರೋ. ನಮ್ಮ ಶರಣರು ಹಿಂದೆ ಹೀಗೆ ಅರಿದರೆಂದರೆ, ಆಸೆಯನಳಿದರು. ರೋಷವ ಹಿಂಗಿ ದರು. ಕಾಮನ ಸುಟ್ಟು ಕಳವಳ ಹಿಂಗಿದರು. ಕಾಯ ಗುಣವಳಿದು ಜೀವನ ಬುದ್ಧಿಯ ಹಿಂಗಿದರು. ಭಾವವ ಬಯಲು ಮಾಡಿ ಬಯಕೆ ಸವೆದರು. ಹಿಂದನರಿದು ಮುಂದೆ ಲಿಂಗವೆ ಗೂಡಾದ ಶರಣರ ಈ ಸಂದೇಹಿಗ ಳೆತ್ತ ಬಲ್ಲರೊ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ?

೧೦. ಕಾಮವಿಲ್ಲ, ಕ್ರೋಧವಿಲ್ಲ, ಲೋಭವಿಲ್ಲ, ಮೋಹವಿಲ್ಲ, ಮದವಿಲ್ಲ, ಮತ್ಸರವಿಲ್ಲ ಎಂಬ ಅಣ್ಣಗಳಿರಾ ನೀವು ಕೇಳಿರೊ, ಹೇಳಿ

ಮಹಾಬೆಳಗಿನಲ್ಲಿ ಓಲಾಡುವ ಶರಣರ ವಾಗ್ಜಾಲವ ಕಲಿತುಕೊಂಡು, ನುಡಿವ ಕಾಕುಮನುಜರೆತ್ತ ಬಲ್ಲರು ನಿಮ್ಮ ನೆಲೆಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ?

೨೬. ತನುವೆಂಬ ಹುತ್ತಕ್ಕೆ ಮನವೆಂಬ ಸರ್ಪ ಆವರಿಸಿ ಹೆಡೆ ಎತ್ತಿ ಆಡುತ್ತಿರಲು, ಆ ಸರ್ಪನ ಕಂಡು ನಾ ಹೆದರಿಕೊಂಡು, ಗುರುಕರುಣವೆಂಬ ಪರುಷವ ತಂದು ಮುಟ್ಟಿಸಲು, ನೋಟ ನಿಂದಿತ್ತು, ಹೆಡೆ ಅಡಗಿತ್ತು, ಗುರುಕರುಣವೆಂಬ ಪರುಷವೆ ನಿಂದಿತ್ತು. ನಿಂದ ಪರುಷವನೆ ಕೊಂಡು ನಿಜದಲ್ಲಿ ನಿರ್ವಯಲಾಗುವ ಶರಣರ ಪಾದವ ನಂಬಿ ಕೆಟ್ಟು ಬಟ್ಟಬಯಲಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೨೭. ಬಸವಣ್ಣ, ಚನ್ನಬಸವಣ್ಣ, ಮಡಿವಾಳಯ್ಯ, ಅಲ್ಲಮಪ್ರಭು, ಚನ್ನಮಲ್ಲೇಶ್ವರ, ಹಡಪದಪ್ಪಣ್ಣ, ತಮ್ಮೆಲ್ಲರ ತೊತ್ತಿನ ತೊತ್ತಿನ ಪಡಿದೊತ್ತಿನ ಮಗಳೆಂದು ಹೊತ್ತುಹೊತ್ತಿಗೆ ಎಚ್ಚರವ ಪಾಲಿಸಿ ರಕ್ಷಣೆಯ ಮಾಡಿದ ಕಾರಣದಿಂದ ತಮ್ಮೆಲ್ಲರ ಪಾದದಲ್ಲಿಯೆ ನಿಜಮುಕ್ತಳಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೨೮. ಏನೇನು ಇಲ್ಲದಾಗ ನೀವಿಲ್ಲದಿದ್ದರೆ, ನಾನಾಗಬಲ್ಲೆನೇ ಅಯ್ಯ? ಆದಿಅನಾದಿ ಇಲ್ಲದಂದು ನೀವಿಲ್ಲದಿದ್ದರೆ, ನಾನಾಗಬಲ್ಲೆನೇ ಅಯ್ಯ? ಮುಳುಗಿ ಹೋದವರ ತೆಗೆದುಕೊಂಡು ನಿಮ್ಮ ತೊತ್ತಿನ ತೊತ್ತಿನ ಪಡಿದೊತ್ತಿನ ಮಗಳೆಂದು, ರಕ್ಷಣೆಯ ಮಾಡಿದ ಶಿಶುವಾದ ಕಾರಣ ಹಡಪದಪ್ಪಣ್ಣನೆ ಎನ್ನ ಕರಸ್ಥಲಕ್ಕೆ ಲಿಂಗವಾಗಿ ಬಂದು ನೆಲೆಗೊಂಡರು. ಚನ್ನಮಲ್ಲೇಶ್ವರನೆ ಎನ್ನ ಮನಸ್ಥಲಕೆ ಪ್ರಾಣವಾಗಿ ಮೂರ್ತಗೊಂಡರು. ಆ ಕರಸ್ಥಲದ ಲಿಂಗವನರ್ಚಿಸಿ ಪೂಜಿಸಿ, ವರವ ಬೇಡಿದರೆ, ತನುವ ತೋರಿದರು. ಆ ತನುವಿಡಿದು ಮಹಾಘನವ ಕಂಡೆ. ಆ ಘನವಿಡಿದು ಮನವ ನಿಲಿಸಿದೆ. ಮನವ ನಿಲಿಸಿ ನೋಡುವನ್ನಕ್ಕ ಪ್ರಾಣದ ನೆಲೆಯನರಿದೆ. ಪ್ರಾಣವನೊಂದುಗೂಡಿದೆ. ಕಾಣಬಾರದ ಕದಳಿಯನೆ ಹೊಕ್ಕು ನೂನ ಕದಳಿಯ ದಾಂಟಿದೆ. ಜ್ಞಾನಜ್ಯೋತಿಯ ಕಂಡೆ. ತಾನುತಾನಾಗಿಪ್ಪ, ಮಹಾಬೆಳಗಿನಲ್ಲಿ ಓಲಾಡಿ ಸುಖಿಯಾದೆನಯ್ಯ ಚನ್ನಬಸವಣ್ಣನ ಕರುಣದ ಶಿಸುವಾದ ಕಾರಣದಿಂದ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೨೯. ಪೃಥ್ವಿಯನೆ ಆದಿಯ ಮಾಡಿ, ಅಪ್ಪುವಿನಲ್ಲಿ ಗೋಡೆಯ ನಿಕ್ಕಿ, ಅಗ್ನಿಯನೆ ಅಪ್ಪುವಿನೊಳಗೆ ಹುದುಗಿಸಿ, ಅಗ್ನಿಯನೆ ಬೀಸಿ, ವಾಯುವನೆ ಬೀರಿ, ಆಕಾಶವನೆ ಹೊದಿಸಿ, ಸಹಸ್ರದಳ ಕಮಲವನೆ ಮೇಲು ಕಟ್ಟುಕಟ್ಟಿ, ಬಯಲಮಂಟಪವ ಶೃಂಗಾರವ ಮಾಡಿ, ಒಡೆಯನಾಭರಣವ ಹಾರುತಿದ್ದೆನಯ್ಯ. ಒಡೆಯನಾಭರಣವ ಹಾರೈಸುವದ ಕಂಡು, ಹಡಪದಪ್ಪಣ್ಣನೆ ಕರ್ಪುರದ ಸಿಂಹಾಸನವಾಗಿ ನಿಂದರು. ಆದಕ್ಕೆ ಚನ್ನಮಲ್ಲೇಶ್ವರನೆ ಜ್ಯೋತಿರ್ಮಯಲಿಂಗವಾಗಿ ಬಂದು ನೆಲೆಗೊಂಡರು. ಜ್ಯೋತಿರ್ಮಯ ಲಿಂಗವು ಕರ್ಪುರವು ಏಕವಾಗಿ ಪ್ರಜ್ವಲಿಸಿ ಪರಮ ಪ್ರಕಾಶವಾಯಿತ್ತು. ಈ ಬೆಳಗಿನಲ್ಲಿ ನಾ ನಿಜಮುಕ್ತಳಾದೆನಯ್ಯ ಚನ್ನಮಲ್ಲೇಶ್ವರ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

೩೦ ಅಯ್ಯ ನಾನು ಬಂದ ಭವಾಂತರದಲ್ಲಿ ನೀವು ಕಡೆ ಹಾಯಿಸಿದಿರೆಂಬುದನರಿಯೆ. ಕಂಗಳಿಗೆ ಕನ್ನಡಿಯ ತೋರಿದರು. ನಿಮ್ಮ ಕಾಣದೆ ಇದ್ದೆನಯ್ಯ. ಅದು ಕಾರಣದಿಂದ ಮನಕೆ ಪ್ರಾಣವಾಗಿ ಬಂದು ನಿಂದಿರಿ. ತನುವಿಂಗೆ ರೂಪಾಗಿ ಬಂದು ಸುಳಿದಿರಿ. ನಿಮ್ಮ ಸುಳುಹ ಕಾಣಲೊಡನೆ ಎನ್ನ ತನು ಕರಗಿ ಮನ ಮಗ್ನವಾಯಿತ್ತು. ಎನ್ನ ಮರಣದ ಭಯ ಹಿಂಗಿತ್ತು. ಎನ್ನ ಕಾಯಗುಣ ಕೆಟ್ಟಿತ್ತು. ಕರಣಗುಣ ಸುಟ್ಟವು. ಭವಳಿಯಿತ್ತು. ಬಯಕೆ ಸವೆಯಿತ್ತು. ಮಹಾದೇವನಾದ ಶರಣ ಚನ್ನಮಲ್ಲೇಶ್ವರನ ಪಾದವಿಡಿದು, ನಿಜಮುಕ್ತಳಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೩೧. ಕನಿಷ್ಠದಲ್ಲಿ ಹುಟ್ಟಿದೆ. ಉತ್ತಮದಲ್ಲಿ ಬೆಳೆದೆ. ಸತ್ಯಶರಣರ ಪಾದವಿಡಿದೆ. ಆ ಶರಣರ ಪಾದವಿಡಿದು ಗುರುವ ಕಂಡೆ. ಲಿಂಗವ ಕಂಡೆ. ಜಂಗಮವ ಕಂಡೆ. ಪ್ರಸಾದವ ಕಂಡೆ. ಪಾದೋದಕವ ಕಂಡೆ. ಇಂತಿವರ ಕಂಡೆನ್ನ ಕಂಗಳ ಮುಂದಣ ಕತ್ತಲೆ ಹರಿಯಿತ್ತು. ಕಂಗಳ ಮುಂದಣ ಕತ್ತಲೆ ಹರಿಯಲೊಡನೆ ಮಂಗಳ ಮಹಾ ಬೆಳಗಿನೊಳಗೋಲಾಡಿ ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

೩೨. ಕಾಣಬಾರದ ಕದಳಿಯಲೊಂದು ಮಾಣಿಕ ಹುಟ್ಟಿತ್ತು. ಇದಾರಿಗು ಕಾಣಬಾರದು. ಮಾರೆನೆಂದರೆ ಮಾನವರಿಗೆ ಸಾಧ್ಯವಾಗದು. ಸಾವಿರಕೆ ಬೆಲೆಯಾಯಿತ್ತು. ಆ ಬೆಲೆಯಾದ ಮಾಣಿಕ ನಮ್ಮ ಶರಣರಿಗೆ

ಸಾಧ್ಯವಾಯಿತ್ತು. ಆ ಮಾಣಿಕವ ಹೇಗೆ ಬೆಲೆಮಾಡಿ ಮಾರಿದರೆಂದರೆ, ಕಾಣಬಾರದ ಕದಳಿಯ ಹೊಕ್ಕು, ನೂನ ಕದಳಿಯ ದಾಂಟಿ, ಜಲವ ಶೋಧಿಸಿ, ಮನವ ನಿಲಿಸಿ, ತನುವಿನೊಳಗಣ ಅನುವ ನೋಡುವನ್ನಕ್ಕ ಮಾಣಿಕ ಸಿಕ್ಕದು. ಆ ಮಾಣಿಕದ ಬೆಳಗ ನೋಡಿಹೆನೆಂದು ಮನುಜರನೆ ಮರೆದು, ತಾನು ತಾನಾಗಿ ಜ್ಞಾನಜ್ಯೋತಿಯ ಬೆಳಗಿನೊಳಗೋಲಾಡಿ ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೩೩. ಮಾಣಿಕವ ಕಂಡವರು ತೋರುವರುಂಟೇ? ಮುತ್ತ ಕಂಡವರು ಅಪ್ಪಿಕೊಂಬುವರಲ್ಲದೆ, ಬಿಚ್ಚಿ ತೋರುವರೇ? ಆ ಮುತ್ತಿನ ನೆಲೆಯನು ಮಾಣಿಕ್ಯದ ನೆಲೆಯನು ಬಿಚ್ಚಿ ಬೇರಾಗಿ ತೋರಿ ರಕ್ಷಣೆಯ ಮಾಡಿದ ಕಾರಣದಿಂದ, ಬಚ್ಚ ಬರಿಯ ಬೆಳಗಿನೊಳಗೋಲಾಡಿ ನಿಮ್ಮ ಪಾದದೊಳಗೆ ನಿಜಮುಕ್ತಳಾದೆನಯ್ಯ ಚನ್ನಮಲ್ಲೇಶ್ವರ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೩೪. ನಾಮ ರೂಪು ಕ್ರಿಯೆಗಿಲ್ಲದ ಘನವ ನಾಮರೂಪಿಂಗೆ ತಂದಿರಯ್ಯ. ಅದೇನು ಕಾರಣವೆಂದರೆ, ನನ್ನ ಮನಕ್ಕೆ ಚನ್ನಮಲ್ಲೇಶ್ವರನಾದಿರಿ. ಹೇಗೆಂದು ನಿಮ್ಮ ನಾಮಾಂಕಿತ ಹೀಗಾದರೂ ಕಾಣಲರಿಯರು. ನಡೆನುಡಿ ಚೈತನ್ಯವಿಡಿದು, ಕರದಲ್ಲಿ ಲಿಂಗವ ಪಿಡಿದು, ಚನ್ನಮಲ್ಲೇಶ್ವರನೆಂಬ ನಾಮಾಂಕಿತವಿಡಿದು ಬರಲಾಗಿ ಮರ್ತ್ಯಲೋಕದಲ್ಲಿ ತನ್ನ ನೆನೆವ ಶಿವಭಕ್ತರ ಪಾವನವ ಮಾಡಬೇಕೆಂದು ಬಂದು, ಭೂಮಿಯ ಮೇಲೆ ಲೀಲೆಯ ನಟಿಸಿ, ತಮ್ಮ ಪಾದದಲ್ಲಿ ನಿಜಮುಕ್ತಳ ಮಾಡಿದಿರಯ್ಯ ಚನ್ನಮಲ್ಲೇಶ್ವರನು ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೩೫. ಅಯ್ಯ ನರರೊಳು ಹುಟ್ಟಿ, ಮರಹಿನೊಳಗೆ ಬಿದ್ದು, ಒಳತಂದು ಮಹಾಶರಣರೊಳು ಎನ್ನ ನಿಲಿಸಿ ಕುರುಹ ತೋರಿದರು. ಗುರುವೆಂಬುದನರುಹಿದರು. ಜಂಗಮವೆಂಬುದನರುಹಿದರು. ಅವರ ನೆಲೆವಿಡಿದು ಮನವ ನಿಲಿಸದೆ, ಕಾಯಜೀವವೆಂಬುದನರಿದೆ. ಭವಬಂಧನವ ಹರಿದೆ. ಮನವ ನಿರ್ಮಳವ ಮಾಡಿದೆ. ಬೆಳಗಿದ ದರ್ಪಣದಂತೆ, ಚಿತ್ತಶುದ್ಧವಾದಲ್ಲಿ, ನೀವು ಆಚ್ಛೋತ್ತಿದ್ದ ಕಾರಣದಿಂದ ನಿಮ್ಮ ಪಾದವಿಡಿದು ನಾ ನಿಜಮುಕ್ತಳಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೩೬. ಈ ಮಹಾದೇವನ ಸ್ತೋತ್ರವ ಮಾಡುವದಕ್ಕೆ ಜಿಹ್ವೆ ಮುಟ್ಟದು. ಆ ಮಹಾದೇವನ ಸ್ತೋತ್ರವ ಕೇಳುವದಕ್ಕೆ ಕರ್ಣ ಮುಟ್ಟದು. ಮುಟ್ಟಿ ಪೂಜಿಸಿಹೆನೆಂದರೆ, ಹಸ್ತ ಕೆಟ್ಟದು. ನೋಡಿಹೆನೆಂದರೆ ನೋಟಕ್ಕೆ ಅಗೋಚರ, ಅಪ್ರಮಾಣ. ಇಂತು ನಿಶ್ಚಿಂತ ನಿರಾಳ ಬಯಲ ದೇಹ ಎನ್ನಲ್ಲಿ ಉಚ್ಚ್ರಾಸ್ತಿದಂತೆ ನಿಂದ ಕಾರಣದಿಂದ ಬಟ್ಟಬಯಲನೆ ಕಂಡೆ. ಮಹಾ ಬೆಳಗನೆ ಕೂಡಿದೆ. ಚಿತ್ತದಲ್ಲಿ ಚನ್ನಮಲ್ಲೇಶ್ವರನು ನೆಲೆಗೊಂಡ ಕಾರಣ ದಿಂದ ನಾನೆತ್ತ ಹೋದೆನೆಂದರಿಯೆನಯ್ಯಾ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೩೭. ಎನ್ನ ಸತ್ಯಳಮಾಡಿ, ನಿತ್ಯವ ತೋರಿ, ತತ್ವವೆಂಬುದನರುಹಿ ದಿರಿ. ಮತ್ಸರವ ಹಿಂಗಿಸಿದಿರಿ, ಆಸೆರೋಷವನೆ ಹಿಂಗಿಸಿದಿರಿ. ಮಾತುಮಥ ನವನೆ ಕೆಡಿಸಿದಿರಿ. ವ್ಯಾಕುಳವನೆ ಕೆಡಿಸಿ, ಜ್ಯೋತಿಯ ಬೆಳಗ ತೋರಿದಿ ರಯ್ಯಾ ಚನ್ನಮಲ್ಲೇಶ್ವರನು ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೩೮. ಅಯ್ಯಾ ನಾ ಕಾಂಬುದಕ್ಕೆ ನನ್ನ ಶಕ್ತಿಯಲ್ಲ. ನಿಮ್ಮಿಂದವೆ ಕಂಡೆನಯ್ಯಾ. ಅದೇನು ಕಾರಣವೆಂದರೆ, ತನುವ ತೋರಿದಿರಿ, ಮನವ ತೋರಿದಿರಿ, ಧನವ ತೋರಿದಿರಿ, ತನುವ ಗುರುವಿಗಿತ್ತು, ಮನವ ಲಿಂಗ ಕಿತ್ತು, ಧನವ ಜಂಗಮಕಿತ್ತು ಇವೆಲ್ಲವು ನಿಮ್ಮೊಡವೆ ಎಂದು ನಿಮಗಿತ್ತು, ತಳ್ಳಿಬಳ್ಳಿಯನೆ ಹರಿದು, ನಿಮ್ಮಲ್ಲಿಯೆ ನೆಲೆಗೊಂಡ ಕಾರಣ ಚನ್ನಮ ಲ್ಲೇಶ್ವರನ ಪಾದದಲ್ಲೆ ನಿರ್ಮುಕ್ತಳಾದೆನಯ್ಯಾ ಅಪ್ಪಣ್ಣಪ್ರಿಯ ಚನ್ನಬಸ ವಣ್ಣಾ.

೩೯. ಅಯ್ಯಾ ಅದೇನು ಕಾರಣವೆಂದರೆ, ಕಂಗಳ ಕತ್ತಲೆಯನೆ ಹರಿ ಸಿದಿರಿ. ಮನವ ಕಾಳಿಕೆಯನೆ ಹಿಂಗಿಸಿದಿರಿ. ಮಾತಿನ ಮೊದಲನೆ ಹರಿ ದಿರಿ. ಜ್ಯೋತಿಯ ಬೆಳಗ ತೋರಿದಿರಿ. ಮಾತು ಮಥನವ ಕೆಡಿಸಿದಿರಿ. ವ್ಯಾಕುಳವನೆ ಬಿಡಿಸಿ ವಿವೇಕಿಯ ಮಾಡಿ ನಿಮ್ಮ ಪಾದದಲ್ಲಿ ಏಕವಾದ ಕಾರಣದಿಂದ ನಾ ನಿಜಮುಕ್ತಳಾದೆನಯ್ಯಾ ಅಪ್ಪಣ್ಣಪ್ರಿಯ ಚನ್ನಬಸ ವಣ್ಣಾ.

೪೦. ಅಯ್ಯಾ ನಾ ಹುಟ್ಟುವಾಗ ಬಟ್ಟಬಯಲೆ ಗಟ್ಟಿಯಾಯಿತ್ತು. ಆ ಬಟ್ಟಬಯಲು ಗಟ್ಟಿಯಾದ ಬಳಿಯಲ್ಲಿ ನಾ ಜನನವಾದೆ. ಜನನ ವಾದವರಿಗೆ ಮರಣ ತಪ್ಪದು. ಅದೇನು ಕಾರಣವೆಂದರೆ, ಮರವೆಗೆ ಮುಂದು ಮಾಡಿತ್ತು. ಕರ್ಮಕ್ಕೆ ಗುರಿ ಮಾಡಿತ್ತು. ಕತ್ತಲೆಯಲ್ಲಿ ಮುಳು

ಗಿಸಿತ್ತು. ಕಣ್ಣುಗಾಣದ ಅಂಧಕರಂತೆ, ತಿರುಗುವದ ನೋಡಿ ನಾ ಹೆದರಿಕೊಂಡು, ಎಚ್ಚತ್ತು ಚಿತ್ತವ ಸುಯಿಧಾನವ ಮಾಡಿ, ನಿಶ್ಚಿಂತವಾಗಿ ನಿಜವ ನೆಮ್ಮಿ, ಅರುಹ ಕಂಡೆ. ಅರುಹಿಂದ ಆಚಾರವ ಕಂಡೆ. ಆಚಾರವಿಡಿದು ಗುರುವ ಕಂಡೆ. ಗುರುವಿಡಿದು ಲಿಂಗವ ಕಂಡೆ. ಲಿಂಗವಿಡಿದು ಜಂಗಮವ ಕಂಡೆ. ಜಂಗಮವಿಡಿದು ಪಾದೋದಕ ಪ್ರಸಾದವ ಕಂಡೆ. ಆ ಪಾದೋದಕ ಪ್ರಸಾದವಿಡಿದು ಮಹಾಶರಣನ ಕಂಡೆ. ಆ ಮಹಾಶರಣನ ಪಾದವಿಡಿದು ಎನ್ನ ಕಾಯಗುಣವಳಿಯಿತ್ತು. ಕರಣ ಗುಣ ಸುಟ್ಟವು. ಲಿಂಗಗುಣ ನಿಂದಿತ್ತು. ಭಾವಬಯಲಾಯಿತ್ತು. ಬಯಕೆ ಸವೆಯಿತ್ತು. ಮಹಾದೇವನಾದ ಶರಣನ ಪಾದವಿಡಿದು ನಿಜಮುಕ್ತಳಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

೪೧. ದಾರಿವಿಡಿದು ಬರಲು, ಮುಂದೆ ಸರೋವರವ ಕಂಡೆ, ಆ ಸರೋವರದ ಮೇಲೆ ಮಹಾಘನವ ಕಂಡೆ. ಮಹಾಘನವಿಡಿದು, ಮನವ ನಿಲಿಸಿ, ಕಾಯಗುಣಗಳನುಳಿದು, ಕರಣಗುಣವ ಸುಟ್ಟು, ಆಶೆಯನೆ ಅಳಿದು, ರೋಷವನೆ ನಿಲಿಸಿ, ಜಗದೀಶ್ವರನಾದ ಶರಣರ ಮರ್ತ್ಯದ ಹೇಸಿಗಳೆತ್ತ ಬಲ್ಲರು ಅಪ್ಪಣ್ಣಪ್ರಿಯ ಚನ್ನಬಸವಣ್ಣ?

೪೨ ತನುವ ಕರಗಿಸಿ, ಹರಿವ ಮನವ ನಿಲಿಸಿ, ಅಂಗಗುಣವನೆ ಅಳಿದು, ಲಿಂಗಗುಣವನೆ ನಿಲಿಸಿ, ಭಾವವಳಿದು ಭವಕೆ ಸವಿದು, ಮಹಾದೇವನಾದ ಶರಣರ ಜಗದ ಮಾನವರೆತ್ತ ಬಲ್ಲರು ಅಪ್ಪಣ್ಣಪ್ರಿಯ ಚನ್ನಬಸವಣ್ಣ?

೪೩. ಮನ ನಿರ್ಮಳವ ಮಾಡಿದೆನೆಂದು, ತನುವ ಕರಗಿಸಿ, ಮನವ ಬಳಲಿಸಿ, ಕಳವಳಿಸಿ, ಕಣ್ಣು ಕಾಣದೆ ಅಂಧಕರಂತೆ ಮುಂದುಗಾಣದೆ, ಸಂದೇಹದಲ್ಲಿ ಮುಳುಗಿರುವ ಮನುಜರಿರಾ. ನೀವು ಕೇಳಿರೋ, ಹೇಳಿಹೆನು. ಆ ಮನವ ನಿರ್ಮಳವ ಮಾಡಿ, ಆ ಘನವ ಕಾಂಬುವದಕ್ಕೆ ಆ ಮನ ಎಂತಾಗಬೇಕೆಂದರೆ, ಗಾಳಿ ಬೀಸದ ಜಲದಂತೆ, ಮೋಡವಿಲ್ಲದ ಸೂರ್ಯನಂತೆ, ಬೆಳಗಿದ ದರ್ಪಣದಂತೆ, ಮನ ನಿರ್ಮಳವಾಗಲ್ಲದೆ, ಆ ಮಹಾಘನವ ಕಾಣಬಾರದೆಂದರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

೪೪. ತನುವೆಂಬ ರಾಜ್ಯಕ್ಕೆ ಮನವೆಂಬ ಅರಸು. ಅರಸಿಂಗೆ ನೋಟ ಬೇಟದವರಿಬ್ಬರು. ಅಟ್ಟ ಮಣಿಹ ಹರಿಮಣಿಹದವರು. ಅವರು ಸುತ್ತ ಓಲೈಸುವರು ಇಪ್ಪತ್ತೈದು ಮಂದಿ. ಅವರಿಗೆ ಕತ್ತಲೆ ಬಲೆಯ ಬೀಸಿ ಕೆಡಹಿ, ಅರಸಿನ ಗೊತ್ತುವಿಡಿದು, ಪುರವನೇರಿ, ನಿಶ್ಚಿಂತವಾಗಿ, ನಿಜದಲ್ಲಿ ನಿರ್ವಯಲನೆಯ್ದುವ ಶರಣರ ಪಾದವ ಹಿಡಿದು, ಎತ್ತ ಹೋದೆನೆಂದರಿಯೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೪೫. ಅಯ್ಯ ನಿಮ್ಮ ಚರಣವಿಡಿದು, ಮನವ ನಿಲಿಸಿದೆ. ತನುವ ಮರೆದೆ. ಮಹಾಘನವ ಕಂಡೆ. ಲಿಂಗದ ನೆಲೆವಿಡಿದೆ. ಅಂಗವ ಲಿಂಗವೆಂದು ನೋಡಲು, ಕಂಗಳ ಮುಂದಣ ಬೆಳಗೆ ಲಿಂಗವಾಗಿ, ಆ ಕಂಗಳ ಮುಂದಣ ಬೆಳಗ ನೊಡಿಹೆನೆಂದು, ಸಂಗಸುಖವ ಮರೆದು, ಆ ಮಂಗಳದ ಮಹಾಬೆಳಗಿಲೆ ನಾ ನಿಜಮುಕ್ತಳಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೪೬. ಮನ ಕತ್ತಲೆ, ತನು ಹಮ್ಮು, ನೆನಹು ಮರವೆ, ಇವರೊಳಗೆ ಇದ್ದಗನವ ಕಂಡಿಹೆನೆಂಬ ಅಣ್ಣಗಳಿರಾ ನೀವು ಕೇಳಿರೋ, ಘನವ ಕಾಂಬುದಕ್ಕೆ ಮನವೆಂತಾಗಬೇಕೆಂದರೆ, ಅಕ್ಕಿಯ ತಳಿಸಿದಂತೆ, ಅಲ್ಲ ಸುಲಿದಂತೆ, ಕನ್ನಡಿಯ ನೋಡಿದಂತೆ, ಮನ ನಿರ್ಮಳವಾದಲ್ಲದೆ, ಘನವ ಕಾಣಬಾರದು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೪೭. ನಿರಾಳ ಲಿಂಗವ ಕಾಂಬುದಕ್ಕೆ ಮನ ಮತ್ತೊಂದೆಡೆಗೆ ಹರಿಯದಿರಬೇಕು. ನೆನಹು ಲಿಂಗವಲ್ಲದೆ ಮತ್ತೊಂದ ನೆನೆಯದಿರಬೇಕು. ತನುವಿನಲ್ಲಿ ಮರಹಿಲ್ಲದಿರಬೇಕು. ಕಾಳಿಕೆ ಹೋಗದಿರಬೇಕು. ಇಂತು ನಿಶ್ಚಿಂತವಾಗಿ, ಚಿತ್ತಾರದ ಬಾಗಿಲವ ತೆರೆದು, ಮುತ್ತುಮಾಣಿಕ ನವರತ್ನ ತೆತ್ತಿಸಿವಂತಿರುವ ಉಪ್ಪರಿಗೆ ಮೇಗಳ ಶಿವಾಲಯವ ಕಂಡು, ಮನ ಅಚ್ಚೊತ್ತಿದಂತಿರ್ದು, ಇತ್ತ ಮರೆದು ಅತ್ತಲೆ ನೋಡಿ, ನಿಜಮುಕ್ತಳಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೪೮. ರಸ ಒಡೆದಂತೆ, ದೆಸೆದೆಸೆಯನಾಲಿಸುವ ಮನವ ತನ್ನ ವಶವ ಮಾಡಿ ನಿಲಿಸಿ, ಹುಸಿಯ ಬಿಟ್ಟು, ಮಾಯೆಯ ಬಲಿಯ ನುಸುಳಿ ತಾ ನಿಶ್ಚಿಂತನಾಗಿ, ಧೀರವೀರನಾದಲ್ಲದೆ ಆ ಮಹಾ ಘನವ ಕಾಣಬಾರದು ಎಂದರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೪೯. ಮನವ ನಿಲ್ಲಿಸಿಹೆನೆಂದು, ಆ ಮನದ ನೆಲೆಗಾಣದೆ ಅರುಹುಮರವೆಗೊಳಗಾಗಿ, ಕಳವಳ ಮುಂದುಮಾಡಿ, ಚಿಂತೆ ಸಂತೋಷವ ನೋಡಲು, ಭ್ರಾಂತಿಗೊಂಡು ತಿರುಗುವ ಮನುಜರಿರಾ ನೀವು ಕೇಳಿರೋ. ಮನವ ನಿಲ್ಲಿಸುವುದಕ್ಕೆ ಶರಣರ ಸಂಗ ಬೇಕು. ಜನನ ಮರಣವ ಗೆಲಿಯಬೇಕು. ಗುರುಲಿಂಗಜಂಗಮದಲ್ಲಿ ವಂಚನೆ ಇಲ್ಲದೆ, ಮನದ ಸಂಚಲವ ಹರಿದು, ನಿಶ್ಚಿಂತವಾಗಿ ನಿಜವ ನಂಬಿ ಚಿತ್ತ ಸುಯಿಧಾನವಾದಲ್ಲದೆ, ಮನದೊಳಗೆ ಲಿಂಗವು ಅಚ್ಚೊತ್ತಿದಂತಿರಬೇಕೆಂದರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೫೦. ಕಂಗಳ ಮುಂದಣ ಬೆಳಗ ಕಾಣದೆ, ಕಂಡಕಂಡವರ ಹಿಂದೆ ಹರಿದು, ಇನ್ನು ಬೇರೆ ಕಂಡೆನೆಂಬ ಭಂಗಿತರ ನೋಡಾ! ತನ್ನಲ್ಲಿ ತಾ ಸುಯಿಧಾನಿಯಾಗಿ ನೋಡಲರಿಯದೆ, ಭಿನ್ನಗಣ್ಣಲಿ ನೋಡಿಹೆನೆಂದು ತಮ್ಮ ಮರೆದು ಇನ್ನುಂಟೆಂದು ಅರಸುವ ಅಣ್ಣಾಗಳಿರಾ ನೀವು ಕೇಳಿರೋ, ಮನವು ಮಹದಲ್ಲಿ ನಿಂದುದೆ ಲಿಂಗ. ಕರಣಂಗಳರತುದೆ, ಕಂಗಳ ಮುಂದಣ ಬೆಳಗು. ಇದನರಿಯದೆ, ಮುಂದೆ ಘನ ಉಂಟೆಂದು, ತೊಳಲಿ ಬಳಲಿ ಅರಸಿಹೆನೆಂದು ಅರುಮರುಳಾಗಿ ಹೋದರಯ್ಯ ನಿಮ್ಮನರಿಯದೆ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೫೧. ಘಟವೆಂಬ ಮಠದೊಳಗೆ ಮನವೆಂಬ ಮರ ಹುಟ್ಟಿತ್ತು. ಬೇರುವರಿಯಿತ್ತು. ಅದಕೆ ಶತಕೋಟಿ ಶಾಖೆ ಬಿಟ್ಟಿತ್ತು. ಆಸೆ ಬೆಂಬಳಿಗೊಂಡು, ಆಡುವರೆಲ್ಲ ಮುಂದುಗಾಣದೆ, ಸಂದು ಹೋದರು. ನಮ್ಮ ಶರಣರು ಇದನರಿದು, ಹಿಂದೆ ನೋಡಿ, ಮುಂದೆ ಲಿಂಗದಲ್ಲಿ ಬೆರೆದ ಭೇದವ ಕಂಡು, ಮನವೆಂಬ ಮರದ ಬೇರನಗಿದು, ಶತಕೋಟಿ ಶಾಖೆಯನು ಸವರಿ, ತುಟ್ಟತುದಿಯ ಮೇಲೆ ನಿಂದು, ನೋಡುವನ್ನಕ್ಕ, ನಾನೆತ್ತ ಹೋದೆನೆಂದರಿಯೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

೫೨. ಹೊತ್ತು ಹೊತ್ತಿಗೆ ಮತ್ತೆ ತಿಪ್ಪೆಯಲ್ಲಿ ಕರ್ಪುರವನರಸುವಂತೆ, ತಿಪ್ಪೆಯಂತಹ ಒಡಲೊಳಗೆ ಕರ್ತುವನರಸಿಹೆನೆಂಬ ಅಣ್ಣಾಗಳಿರಾ ನೀವು ಕೇಳಿರೋ, ಹೇಳಿಹೆನು. ಆ ಕರ್ತುವನರಸುವದಕ್ಕೆ ಚಿತ್ತ ಹೇಗಾಗಬೇಕೆಂದರೆ, ಜಲದೊಳಗಣ ಸೂರ್ಯನ ಪ್ರತಿಬಿಂಬದಂತಿರಬೇಕು. ಮೋಡವಿಲ್ಲದ ಚಂದ್ರಮನಂತಿರಬೇಕು. ಬೆಳಗಿದ ದರ್ಪಣದಂತಿರಬೇಕು. ಇಂತು

ಚಿತ್ತ ಶುದ್ಧವಾದಲ್ಲದೆ, ಕರ್ತುವಿನ ನೆಲೆಯು ಕಾಣಬಾರದೆಂದರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೫೩. ಬಯಲು ದೇಹದಲ್ಲಿ ಒಂದು ತೊಲಗದ ಕಂಬವ ಕಂಡೆ. ಆ ತೊಲಗದ ಕಂಬವ ಹಿಡಿದು ಹೋಗುವನ್ನಕ್ಕ, ಮುಂದೆ ಸರೋವರವ ಕಂಡೆ. ಆ ಸರೋವರವ ಒಳಹೊಕ್ಕು ನೋಡಲು, ಮುಂದೆ ಗಟ್ಟಿಬೆಟ್ಟಗಳು ಹೋಗಬಾರದ ಆನೆಗಳು ಅಡ್ಡಲಾದವು. ಕೋಣ ಮುಂದುವರಿದವು. ನಾಯಿಗಳಟ್ಟಿಕೊಂಡು ಬಂದವು. ಇರುಹು ಕಚ್ಚಿಕೊಂಡು ಬಿಡವು. ಇದ ಕಂಡು ನಾ ಹೆದರಿಕೊಂಡು, ಮನವೆಂಬ ಅರಸನ ಹಿಡಿದು, ಕಟ್ಟಿಗೆ ತಂದು, ಗೊತ್ತಿಗೆ ನಿಲಿಸಿ, ಆ ಅರಸನ ಶಕ್ತಿವಿಡಿದು, ಆ ಸರೋವರದೊಳಗಣ ಗಟ್ಟಬೆಟ್ಟವನೆ ದಾಂಟಿ, ಅಷ್ಟಮದವನೆ ಹಿಟ್ಟುಗುಟ್ಟಿ, ಕೋಡಗನ ಕೊರಳ ಮುರಿದು, ನಾಯಿಗಳನೆ ಕೊಂದು, ಈ ಇರುಹಿನ ಗೂಡಿಗೆ ಕಿಚ್ಚನಿಕ್ಕಿ ನಿರ್ಮಳವಾದ ದೇಹದಲ್ಲಿ ನಿಂದು, ಮುಂದುವರಿದು ನೋಡಲು ಇಟ್ಟಿಡೆಯ ಬಾಗಿಲ ಕಂಡೆ. ಆ ಇಟ್ಟಿಡೆಯ ಬಾಗಿಲ ಹೊಕ್ಕು, ಹಿತ್ತಿಲಬಾಗಿಲ ಕದವ ತೆಗೆದು ನೋಡಲು, ಬಟ್ಟಬಯಲಾಯಿತ್ತು. ಆ ಬಟ್ಟಬಯಲಲ್ಲಿ ನಿಂದು, ನಾನೆತ್ತ ಹೋದೆನೆಂದರಿಯೆನಯ್ಯ ನಿಮ್ಮ ಪಾದವಿಡಿದು, ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೫೪. ತನುವೆಂಬ ಹುತ್ತದಲ್ಲಿ, ಮನವೆಂಬ ಸರ್ಪ ಹೆಡೆಯನುಡಿಗಿಕೊಂಡಿರಲು, ಜ್ಞಾನಶಕ್ತಿ ಬಂದು ಎಬ್ಬಿಸಲು, ಉರಿ ಭುಗಿಲೆನುತ್ತ ಹೆಡೆಯನೆತ್ತಿ ಊರ್ಧ್ವಕ್ಕೇರಲು, ಅಷ್ಟಮದವೆಲ್ಲ ಹಿಟ್ಟುಗುಟ್ಟಿದವು. ಕರಣಂಗಳೆಲ್ಲ ಉರಿದು ಹೋದವು. ಇದ್ದ ಶಕ್ತಿಯನೆ ಕಂಡು, ಮನ ನಿಶ್ಚಯವಾದುದನೆ ಕಂಡು, ಪಶ್ಚಿಮದ ಕದವ ತೆಗೆದು, ಬಚ್ಚಬರಿಯ ಬೆಳಗಿನೊಳಗೆ ಓಲಾಡಿ ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೫೫. ಮರ್ತ್ಯದಲ್ಲಿ ಹುಟ್ಟಿ ಎತ್ತಲೆಂದರಿಯೆ. ಕತ್ತಲೆಯೊಳು ಮುಳುಗಿ, ಕಾಮನ ಬಲೆಯೊಳು ಸಿಲ್ಕಿದ ಎಗ್ಗ ಮನುಜರಿರಾ, ನೀವು ಕೇಳಿರೋ. ನಿಮ್ಮ ಇರವು ಎಂತೆಂದರೆ, ಕಾಯವೆಂದರೆ ಕಳವಳಕ್ಕೊಳಗಾಯಿತ್ತು. ಜೀವವೆಂದರೆ ಅರುಹು ಮರವೆಯೊಳಗಾಯಿತ್ತು. ಮನವೆಂದರೆ ಸಚರಾಚರವನೆಲ್ಲವನಾಚರಿಸುವದಕ್ಕೆ ಒಳಗಾಯಿತ್ತು. ಪ್ರಾಣವೆಂದರೆ ಇವೆಲ್ಲವನು ಆಡಿಸಿ ನೋಡುವದಕ್ಕೆ ಒಳಗಾಯಿತ್ತು. ಇದರೊ

ಳಗೆ ಬಿದ್ದು ಏಳಲಾರದ ಬುದ್ಧಿಹೀನರಿರಾ, ನೀವು ಕೇಳಿ, ಹೇಳಿಹೆನು. ನಮ್ಮ ಶರಣರು ಜಗದೊಳಗೆ ಹುಟ್ಟಿ ಜಗವನೆ ಮರೆದು, ಎಚ್ಚತ್ತು, ಚಿತ್ತವ ಸುಯಿಧಾನವಮಾಡಿ, ಕಳವಳಕ್ಕೊಳಗಾಗಿರ್ದ ಕಾಯವನೆ ಸರ್ವಾಂಗ ಲಿಂಗವನೆ ಮಾಡಿದರು. ಅರುಹುಮರವೆಯೊಳಗಾಗಿರ್ದ ಜೀವನ ಬುದ್ಧಿಯನೆ, ಪರಮನ ಬುದ್ಧಿಯ ಮಾಡಿದರು. ಸಚರಾಚರವ ಚರಿಸುವದಕ್ಕೊಳಗಾಗಿರ್ದ ಮನವನೆ ಅರುಹ ಮಾಡಿದರು. ಆಡಿಸಿ ನೋಡೋದಕ್ಕೆ ಒಳಗಾಗಿರ್ದ ಪ್ರಾಣವನೆ ಲಿಂಗವ ಮಾಡಿದರು. ಈ ಸರ್ವಾಂಗವನು ಲಿಂಗವನೆ ಮಾಡಿ, ಆ ಲಿಂಗವನು ಕಂಗಳಲ್ಲಿಯೆ ಹೆರೆಹಿಂಗದೆ ನೋಡಿ, ಮಂಗಳದ ಮಹಾಬೆಳಗಿನಲ್ಲಿ ಬಯಲಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೫೬. ಮುಕ್ತಿಯ ಪಥದನರಿವುದಕ್ಕೆ ತತ್ವದ ಭಿತ್ತಿಯ ಕಾಣಬೇಕು. ಚಿತ್ತ ಲಿಂಗದಲ್ಲಿ ಅಚ್ಚೊತ್ತಿದಂತಿರಬೇಕು. ಮರ್ತ್ಯದ ಮಾನವರ ಸಂಗವ ಹಿಂಗಬೇಕು, ತಾನುತಾನಾದ ಲಿಂಗೈಕ್ಯವನರಿವಡೆ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

೫೭. ಅಂಗವೆಂದರೆ ಲಿಂಗದೊಳಡಗಿತ್ತು. ಲಿಂಗವೆಂದರೆ ಅಂಗದೊಳಡಗಿತ್ತು. ಅಂಗದೊಳಡಗಿದ ಲಿಂಗವನೆ ಕಂಗಳಲ್ಲಿ ಹೆರೆಹಿಂಗದೆ ನೋಡಿದರೆ, ಮಂಗಳದ ಮಹಾಬೆಳಗು ಕಾಣಿಸಿತ್ತು. ಇಂತಪ್ಪ ಮಂಗಳದ ಮಹಾಬೆಳಗ ತೋರಿದ ಶರಣಂಪ್ರಿಗೆರಗಿ ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೫೮. ಅಂತರಂಗ ಬಹಿರಂಗ ಶುದ್ಧವಿಲ್ಲದೆ ನುಡಿವರು, ಸಂತೆಯ ಸೂಳಿಯರಂತೆ. ಅಂತರಂಗ ಬಹಿರಂಗವೆಂಬುದಿಲ್ಲ. ನಮ್ಮ ಶಿವಶರಣರಿಗೆ ಅಂತರಂಗವೆಲ್ಲ ಅರುಹಾಯಿತ್ತು. ಬಹಿರಂಗವೆಲ್ಲ ಲಿಂಗವಾಯಿತ್ತು. ಆ ಲಿಂಗದಲ್ಲಿ ನುಡಿದು, ಲಿಂಗದಲ್ಲಿ ನಡೆದು, ಲಿಂಗದಲ್ಲಿ ಮುಟ್ಟಿ, ಲಿಂಗದಲ್ಲಿ ವಾಸಿಸಿ, ಲಿಂಗದಲ್ಲಿ ಕೇಳಿ, ಲಿಂಗವಾಗಿ ನೋಡಿ, ಸರ್ವಾಂಗವು ಲಿಂಗವಾಗಿ, ಆ ಲಿಂಗವ ನೋಡುವ ಕಂಗಳಲ್ಲಿ ಐಕ್ಯ ಕಂಡ್ಯಾ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೫೯. ಕಗಳಿಯ ಬನದೊಳಗಿರುವ ಲಿಂಗವ ಅರಸಿದರೆ ಕಾಣಬಾರದು. ನೋಡಿದರೆ ನೋಟಕ್ಕಿಲ್ಲ. ಹಿಡಿದರೆ ಹಸ್ತಕ್ಕಿಲ್ಲ. ನೆನೆದರೆ ಮನ

ಕ್ಯಗೋಚರ. ಇಂತು ಮಹಾಘನವ ಹೃದಯದಲ್ಲಿ ನೆಲೆಗೊಳಿಸಿದ ಶರಣನ ಕಂಗಳಲ್ಲಿ ಹೆರಿಹಿಂಗದೆ ನೋಡಿ, ಅವರಂಘ್ರಿಯಲ್ಲಿ ಐಕ್ಯವಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೬೦. ಈ ಪರಂಜ್ಯೋತಿ ಪ್ರಕಾಶವಾದ ಬೆಳಗ ನೋಡಿ ನೋಟವ ಮರೆದೆ. ಕೂಡಿ ಕೂಟವ ಮರೆದೆ. ತಾನು ತಾನಾಗಿಪ್ಪ ಮಹಾಬೆಳಗಿನಲ್ಲಿ ಲೋಲಾಡಿ ಸುಖಿಯಾದೆನಯ್ಯ ಚನ್ನಮಲ್ಲೇಶ್ವರನ ಕರುಣವಿಡಿದು ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೬೧. ಬಚ್ಚಬರಿಯ ಬೆಳಗ ನೋಡಿಹೆನೆಂದು, ಮನೆಯಾತನ ಮಂಕು ಮಾಡಿದೆ. ಭಾವನ ಬಯಲು ಮಾಡಿದೆ. ಕಂದನ ಕಣ್ಣ ಮುಚ್ಚಿದೆ. ಸಿಂದೆ ಕುಂದುಗಳ ಮರೆದೆ. ಜಗದ ಹಂಗ ಹರಿದೆ. ಜಂಗಮದ ಪಾದೋದಕ ಪ್ರಸಾದವ ಕೊಂಡ ಕಾರಣದಿಂದ ಮಂಗಳದ ಮಹಾಬೆಳಗಿನಲ್ಲಿ ಓಲಾಡಿ ಸುಖಿಯಾದೆನೈಯ್ಯ ಅಪ್ಪಣ್ಣಪ್ರಿಯ ಚನ್ನ ಬಸವಣ್ಣಾ.

೬೨. ಕರಣವ ಸುಟ್ಟೆ. ಕಂದಲ ನೋಡಿದೆ. ಮರನ ಮುರಿದೆ. ಬಣ್ಣವ ಹರಿದೆ. ಬಿನ್ನಗಣ್ಣು ಕೆಟ್ಟಿತ್ತು. ಜ್ಞಾನಗಣ್ಣಲಿ ನಿಮ್ಮನೆ ನೋಡಿ ಕೂಡಿ ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೬೩. ಸಾಕೈಯ್ಯ ಲೋಕದ ಹಂಗು ಹರಿಯಿತ್ತು. ತನುವಿನಾಸೆ ಬಿಟ್ಟಿತ್ತು. ಮನದ ಸಂಚಲ ನಿಂದಿತ್ತು. ನುಡಿಯ ಗಡಣ ಹಿಂಗಿತ್ತು. ಘನವ ಬೆರೆಯಿತ್ತು. ಬೆಳಗ ಕೂಡಿತ್ತು. ಬಯಲೊಳಗೋಲಾಡಿ ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

೬೪. ಕತ್ತಲೆ ಬೆಳಗೆಂಬುದಿಲ್ಲ ನಿತ್ಯನಾದಂಗೆ. ಚಿತ್ತಪರಚಿತ್ತವೆಂಬುದಿಲ್ಲ ವಸ್ತುವಿನ ನೆಲೆಯ ಕಂಡವಂಗೆ. ನಿತ್ಯ ಅನಿತ್ಯವೆಂಬುದಿಲ್ಲ ಕರ್ತೃತಾನಾದವಂಗೆ. ಈ ಮೂರರ ಗೊತ್ತುವಿಡಿದು ನಿಶ್ಚಿಂತನಾಗಿ ನಿರ್ವಯಲನಾದ ಶರಣರ ಪಾದಕ್ಕೆ ಶರಣೆಂದು ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನ ಬಸವಣ್ಣಾ.

೬೫. ಸಾಯದ ಮುಂದೆ ಸತ್ತ ಹಾಗೆ ಇರುವರು. ಅರಿಗೆ ವಶವಲ್ಲ, ನಮ್ಮ ಶರಣರಿಗಲ್ಲದೆ. ಅದು ಹೇಗೆಂದರೆ, ಹಗಲಿರುಳೆಂಬ ಹಂಬಲ ಹರಿ

ದರು. ಜಗದಾಟವ ಮರೆದರು. ಆಡದ ಲೀಲೆಯನೆ ಆಡಿದರು. ಅರು ಕಾಣದ ಘನವನೆ ಕಂಡರು. ಮಹಾ ಬೆಳಗಿನಲಿ ಲೋಲಾಡಿ ಸುಖಿಯಾದೆ ನೈಯ್ಯ ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

೬೬. ಕಂಡಿಹೆ ಕೇಳಿಹೆನೆಂಬ ದ್ವಂದ್ವವ ಹಿಂಗಿ, ಉಂಡಿಹೆ ಉಟ್ಟಿಹೆ ನೆಂಬ ಹಂಗವ ಬಿಟ್ಟು, ನಡಿದಿಹೆ ನುಡಿದಿಹೆನೆಂಬ ಮಾಟವ ನಿಲಿಸಿ, ಜಗದಾಟವ ನಿಲಿಸಿ, ಮಾಟ ಕೂಟ ಜಗದಾಟ ಕೋಟಲೆಯೊಳು ಸಿಕ್ಕದೆ ದಾಟಿ ಹೋದ ಶರಣರ ಪಾದಕ್ಕೆ ಶರಣೆಂದು ಬದುಕಿದೆನಯ್ಯ ಅಪ್ಪಣ್ಣ ಪ್ರಿಯ ಚನ್ನಬಸವಣ್ಣ.

೬೭. ಕಂಡು ಕೇಳಿಹೆನೆಂಬ ದಂದುಗ ಬಿಟ್ಟು, ನೋಡಿ ನುಡಿವೆನೆಂಬ ನೋಟವ ನಿಲಿಸಿ, ಮಾಡಿ ಕೂಡಿಹೆನೆಂಬ ಮನ ನಿಂದು, ತನುವ ಮರೆದು, ತಾ ನಿಜ ಸುಖಿಯಾದಲ್ಲದೆ, ಘನವ ಕಾಣಬಾರದೆಂದರು ನಮ್ಮ ಅಪ್ಪಣ್ಣ ಪ್ರಿಯ ಚನ್ನಬಸವಣ್ಣಾ.

೬೮. ಮರನನೇರಿದೆ. ಬೇರ ಸವರಿದೆ. ಕೊನೆಯ ತರಿದೆ. ಬುಡವ ಕೆಡಹಿದೆ. ನಿರಾಲಂಬವಾಗಿ ನಿಮ್ಮ ಬೆಳಗನೆ ನೋಡಿ ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೬೯. ನೆನೆದಿಹೆನೆಂದರೆ, ಏನ ನೆನೆವೆನಯ್ಯ! ಮನ ಮಂಕಾಯಿತ್ತು. ತನು ಬಯಲಾಯಿತ್ತು. ಕಾಯ ಕರಗಿತ್ತು. ದೇಹ ಹಮ್ಮಳಿಯಿತ್ತು. ತಾನು ತಾನಾಗಿ, ಬೆಳಗಿನೊಳಗೋಲಾಡಿ ಸುಖಿಯಾದೆನಯ್ಯ ಅಪ್ಪಣ್ಣ ಪ್ರಿಯ ಚನ್ನಬಸವಣ್ಣಾ.

೭೦. ಬಟ್ಟಬಯಲಲ್ಲಿ ಒಂದು ಮರ ಹುಟ್ಟಿತ್ತು. ಅದಕ್ಕೆ ಸುತ್ತಲು ಬೇರು ಆವರಿಸಿತ್ತು. ಅದಕ್ಕೆ ಶತಕೋಟಿ ಕೊನೆ ಬಿಟ್ಟಿತ್ತು. ಅಡಗಿದ ಬೇರನೆ ಸವರಿ, ಶತಕೋಟಿ ಕೊನೆಯನೆ ಕಡಿದು, ಮರ ಒಣಗಿತ್ತು. ಉಲುಹು ನಿಂದಿತ್ತು. ಎಲೆ ಉದುರಿತ್ತು. ತರಗೆಲೆಯಾದ ಶರಣರ ಚರಣವಿಡಿದು, ನಿಜಮುಕ್ತಳಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

೭೧. ತುಂಬಿದ ಮನೆಯ ಹೊಕ್ಕರೆ ದೊಂದಳವಾಯಿತ್ತು. ಈ ಸಂದಳಿಗಾರದೆ, ತುಂಬಿದ ಮನೆಯ ಕಿಚ್ಚನಿಕ್ಕಿದರೆ, ನಿಶ್ಚಿಂತವಾಯಿತ್ತು. ಬಟ್ಟಬರಿಯ ಮನೆಯೊಳಗೆ ನಿಮ್ಮ ಬೆಳಗನೆ ನೋಡಿ ಸುಖಿಯಾದೆನಯ್ಯ ಅಪ್ಪಣ್ಣ ಪ್ರಿಯ ಚನ್ನಬಸವಣ್ಣ.

೭೨. ಒಂದು ಊರಿಗೆ ಒಂಬತ್ತು ಬಾಗಿಲು, ಆ ಊರಿಗೆ ಐವರು ಕಾವಲು, ಆರು ಮಂದಿ ಪ್ರಧಾನರು, ಇಪ್ಪತ್ತೈದು ಮಂದಿ ಪರಿವಾರ, ಅವರೊಳು ತೊಟ್ಟನೆ ತೊಳಲಿ ಬಳಲಲಾರದೆ, ಎಚ್ಚತ್ತು ನಿಶ್ಚಿಂತನಾದ ಅರಸರ ಕಂಡೆ. ಅರಸಿನ ಗೊತ್ತುವಿಡಿದು, ಒಂಬತ್ತು ಬಾಗಿಲಗೆ ಲಿಂಗ ಸ್ಥಾಪ್ಯವ ಮಾಡಿ, ಒಂದು ಬಾಗಿಲಲ್ಲಿ ನಿಂದು, ಕಾವಲರ ಕಟ್ಟಿ, ಪ್ರಧಾನಿಯನೆ ಮೆಟ್ಟಿ ಸೀಳಿ, ಪರಿವಾರವನೆ ಸುಟ್ಟು, ಅರಸ ಮುಟ್ಟಿ, ಹಿಂದು ಓಲೈಸಲು, ಸಪ್ತಧಾತು ಷಡುವರ್ಗವನೆ ಕಂಡು, ಕತ್ತಲೆಯ ಕದಳಿಯ ದಾಂಟಿ, ನಿಶ್ಚಿಂತದಲ್ಲಿ ಬಚ್ಚಬರಿಯ ಬೆಳಗಿನೊಳಗೆಯೋಲಾಡಿ, ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

೭೩. ಒಂದು ಹುತ್ತಕ್ಕೆ ಒಂಬತ್ತು ಬಾಗಿಲು ಇರುವದು. ಒಂದು ಸರ್ಪ ಒಂಬತ್ತು ಬಾಗಿಲಲ್ಲಿಯು ನೋಡುತಿಪ್ಪದು. ಒಂಬತ್ತು ಬಾಗಿಲಿಗೆ ಕದವನಿಕ್ಕಿ ಒಂದು ಬಾಗಿಲ ಅಗುಳಿ ದಾರವಂದವನಿಕ್ಕಿ ಬಲಿಯಲು ತಿರುಗುವುದಕ್ಕೆ ತಾವ ಕಾಣದೆ, ಇರುವುದಕ್ಕೆ ಇಂಬ ಕಾಣದೆ, ನಿಲುವುದಕ್ಕೆ ಎಡೆಯ ಕಾಣದೆ, ಉರಿ ಎದ್ದು ಊರ್ಧ್ವಕ್ಕೇರಲು, ಶರಧಿ ಬತ್ತಿತ್ತು. ಅಲ್ಲಿದ್ದ ಖಗಮೃಗವೆಲ್ಲ ದಹನವಾದವು. ಸರೋವರವೆಲ್ಲ ಉರಿದು ಹೋದವು. ಕತ್ತಲೆ ಹರಿಯಿತ್ತು. ಮುಂದೆ ದಿಟ್ಟಿಸಿ ನೋಡುವನ್ನಕ್ಕ, ಇಟ್ಟೆಡೆಯ ಬಾಗಿಲು ಸಿಕ್ಕಿತ್ತು. ಆ ಇಟ್ಟೆಡೆಯ ಬಾಗಿಲ ಹೊಕ್ಕು ಹೊಡಕರಿಸಿ, ಪಶ್ಚಿಮದ ಕದವ ತೆಗೆದು, ಬಟ್ಟ ಬಯಲಲ್ಲಿ ನಿಂದು, ನಾನೆತ್ತ ಹೋದೆನೆಂದರಿಯೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೭೪. ಆಧಾರವ ಬಲಿಯೆ, ಬೇಗ ಉರಿಯಿತ್ತು. ಆ ಕಿಚ್ಚು ಆವರಿಸಿ ಊರ್ಧ್ವಕ್ಕೇರಿತ್ತು. ಸಾಸಿರದಳ ಅಮೃತ ಕೊಡ ಕಾಯಿತ್ತು. ಕಾದ ಅಮೃತ ಉಕ್ಕಿ ತೊಟ್ಟಿಕ್ಕಿ ಅಮೃತವನುಂಡು ಹಸಿವೆ ಕೆಟ್ಟಿತ್ತು. ತೃಷೆಯಡಗಿತ್ತು. ನಿದ್ರೆ ಅರತಿತ್ತು. ಅಂಗಗುಣವಳಿಯಿತ್ತು. ಲಿಂಗಗುಣ ನಿಂದಿತ್ತು. ಸಂಗಸುಖ ಹಿಂಗಿ, ಅಂಗಲಿಂಗವೆಂಬ ಉಭಯವಳಿದು, ಮಂಗಳ ಮಹಾ ಬೆಳಗಿನಲ್ಲಿ ಓಲಾಡಿ ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣ.

೭೫. ಅಯ್ಯ ನಾನು ಊರ ಮರೆದು ಅಡ ಹೋದರೆ ಒಕ್ಕಲು ಹೆಚ್ಚಿ ಸೊಕ್ಕಾಟ ಘನವಾಯಿತ್ತು. ಇದ ಕಂಡು ಊರ ಹೊಕ್ಕೆ, ಸ್ಥಾನದಲ್ಲಿ ನಿಂದೆ, ಒಂಬತ್ತು ಬಾಗಿಲ ಕದವನಿಕ್ಕಿದೆ. ಜ್ಞಾನಾಗ್ನಿಯ ಹೊತ್ತಿಸಲು, ಉರಿ ಎದ್ದಿತ್ತು. ಉಷ್ಣ ಊರ್ಧ್ವಕ್ಕೇರಿತ್ತು. ತಲೆ ಎತ್ತಿ ನೋಡಲು

ಒಕ್ಕಲು ಓಡಿತ್ತು. ಊರು ಬಯಲಾಯಿತ್ತು. ಆ ಬಯಲನೆ ನೋಡಿ ನಿರಾಳ ದೊಳಗಾಡಿ, ಮಹಾಬೆಳಗನೆ ಕೂಡಿ ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೭೬. ಸಾಸಿರ ದಳಕಮಲವೆಂದರೆ, ಸೂಸಿಕೊಂಡಿರುವ ಮನ. ಪವನವೆಂದರೆ, ಎಲ್ಲೆಡೆಯಲ್ಲಿ ಸೂಸಿ ಆಡುವಂಥಾದ್ದು. ಬಿಂದುವೆಂದರೆ, ಆಗುಮಾಡುವಂಥಾದ್ದು. ಈ ಮನಪವನಬಿಂದು, ಮೂರನು ಒಡಗೂಡಿ ನೋಡಲು ಪರಂಜ್ಯೋತಿ ಪ್ರಕಾಶವಾದಂಥ ಬೆಳಗೆ ಎನ್ನ ಕಂಗಳ ಮುಂದೆ ನಿಂದಿತ್ತು. ಆ ಮಹಾ ಬೆಳಗನೆ ಕಂಗಳಲ್ಲಿ ಹೆರೆ ಹಿಂಗದೆ ನೋಡಿದರೆ, ಎನ್ನಂಗದ ಹವಣ ಹೊರಗೆ ಪರಿಪೂರ್ಣವಾಗಿದ್ದಿತ್ತು ಕಾಣಾ ಅಪ್ಪಣ್ಣ ಪ್ರಿಯ ಚನ್ನಬಸವಣ್ಣಾ ನಿಮ್ಮ ಪಾದ ಕರುಣದಿಂದ.

೭೭. ದಾರಿಸುಡಿದು ಬರಲು, ಮುಂದೆ ಸರೋವರವ ಕಂಡೆ. ಸರೋವರದ ಮೇಲೊಂದು ಮಹಾದಳದ ಕಮಲವ ಕಂಡೆ. ಆ ಕಮಲವ ರಳೆ ವಿಕಸಿತವಾಯಿತ್ತು. ಪರಿಮಳವೆಸಗಿತ್ತು. ಆ ಪರಿಮಳದ ಬೆಂಬಳಿಗೊಂಡು ಹೋಗುತಿರಲು, ಮುಂದೆ ಒಂದು ದಾರಿಯು ಕಂಡು, ಆ ಮುಂದಳ ದಾರಿಯಲ್ಲಿ ಹೋದವರೆಲ್ಲರು ನಿಂದೆ ಕುಂದುಗಳಿಗೊಳಗಾಗಿ ಸಂದು ಹೋದರು. ಇದ ಕಂಡು ನಾ ಹೆದರಿಕೊಂಡು ಎಚ್ಚತ್ತು, ಚಿತ್ತವ ಸುಯಿಧಾನವ ಮಾಡಿ ಹಿತ್ತಿಲ ಬಾಗಿಲಕದವ ತೆಗೆದು, ನೋಡಿವರೆ ಬಟ್ಟ ಬಯಲಾಗಿದ್ದಿತ್ತು. ಆ ಬಟ್ಟಬಯಲೊಳಗೆ, ಮಹಾ ಬೆಳಗನೆ ನೋಡಿ ನಾ ಎತ್ತ ಹೋದೆನೆಂದರಿಯೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೭೮. ಪಶ್ಚಿಮದ ಕದವ ತೆಗೆದು, ಬಚ್ಚಬರಿಯ ಬೆಳಗನೋಡಲೊಲ್ಲದೆ, ಕತ್ತಲೆಯ ಬಾಗಿಲಿಗೆ ಮುಗ್ಗಿ ಕಣ್ಣುಗಾಣದ ಅಂಧಕರಂತೆ, ಜಾರಿ ಜಾರಿ ಎಡವಿಬಿದ್ದು, ಕರ್ಮಕ್ಕೆ ಗುರಿಯಾಗುವ ಮರ್ತ್ಯದ ಮನುಜರಿರಾ ನೀವು ಕೇಳಿರೋ ಹೇಳಿಹೆನು. ನಮ್ಮ ಶರಣರ ನಡೆ ಎಂತೆಂದರೆ, ಕತ್ತಲೆಯ ಬಾಗಿಲಿಗೆ ಗದವನಿಕ್ಕಿ ಪಶ್ಚಿಮದ ಕದವ ತೆಗೆದು, ಬಚ್ಚಬರಿಯ ಬೆಳಗಿನೊಳಗೆ ಲೋಲಾಡುವ ಶರಣರ ಪಾದಕ್ಕೆ ಮತ್ತೊಂದು ಬಾರಿ ಎರಗಿ ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೭೯. ಬಟ್ಟಬಯಲಲ್ಲಿ ಒಂದು ಶರಧಿ ಹುಟ್ಟಿತ್ತು. ಆ ಶರಧಿಯ ನಡುವೆ ಒಂದು ಕಮಲ ಹುಟ್ಟಿತ್ತು. ಆ ಕಮಲದ ನೆಲೆಯ ಕಾಣಲ

ರಿಯದೆ, ತೊಳಲಿ ಬಳಲಿ, ಜಗದೊಳಗೆ ನಚ್ಚುಮಚ್ಚಿಗೊಳಗಾಗಿ, ಚೆಚ್ಚಳೆ ಪೂಜೆಗೆಸಿಲ್ಕಿ ಕುಲಕೆ ಛಲಕೆ ಕೊಂದಾಡಿ, ಭವಕೆ ಗುರಿಯಾಗುವ ಮನುಜರ ಕಂಡು, ನಾಚಿತ್ತೆನ್ನ ಮನವು. ಈ ಮನದ ಬೆಂಬಳಿಗೊಂಡು, ಹೋದವರೆಲ್ಲ ಮರುಳಾಗಿ ಹೋದರು. ಇದ ನೋಡಿ ನಾನು ಬಟ್ಟಬಯಲಲ್ಲಿ ನಿಂದು ನೋಡಿದರೆ, ಶರಧಿ ಬತ್ತಿತ್ತು, ಕಮಲ ಕಾಣಬಂದಿತ್ತು, ಆ ಕಮಲ ವಿಕಾಸವಾಯಿತ್ತು. ಪರಿಮಳವೆಂಬ ವಾಸನೆ ತೀಡಿತ್ತು. ಆ ವಾಸನೆವಿಡಿದು, ಜಗದಾಸೆಯ ಹಿಂಗಿ, ಮಾತುಮಥನವ ಕೆಡಿಸಿ ಮಹಾಜ್ಯೋತಿಯ ಬೆಳಗಿನಲಿ ಓಲಾಡುವ ಶರಣರ ಆಸೆರೋಷ ಪಾಶಕ್ಕೊಳಗಾದ ಈ ಜಗದ ಹೇಸಿಗಳೆತ್ತ ಬಲ್ಲರು ಈ ಮಹಾ ಶರಣರ ನೆಲೆಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ?

೮೦. ನಿಶ್ಚಿಂತವಾದವಂಗೆ ಮತ್ತಾರ ಹಂಗುಂಟೆ? ಚಿತ್ತ ಸುಯಿಧಾನಿಯಾದವಂಗ ತತ್ವವ ಕಂಡಿಹೆನೆಂಬುದುಂಟೆ? ತಾನು ತಾನಾದವಂಗೆ ಮಾನವರ ಹಂಗುಂಟೆ? ಭಾವ ಬಯಲಾದವಂಗೆ ಬಯಕೆ ಎಂಬುದುಂಟೆ? ಗೊತ್ತ ಕಂಡವಂಗೆ ಅತ್ತಿತ್ತ ಅರಸಲುಂಟೆ? ಇಂತು ನಿಶ್ಚಿಂತವಾಗಿ ನಿಜವ ನಂಬಿದ ಶರಣರ ಎನಗೊಮ್ಮೆ ತೋರಿಸಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೮೧. ಕರುಳು ಒಣಗಿತ್ತು. ತನು ಕರಗಿತ್ತು. ಮನ ನಿಂದಿತ್ತು. ವಾಯು ಬರತ್ತಿತ್ತು. ಅಪ್ಪು ಆರತಿತ್ತು. ಹಿಪ್ಪೆ ಉಳಿಯಿತ್ತು. ನೆನಹು ನಿಷ್ಪತ್ತಿಯಾಗಿ, ಬೆಳಗನೆ ಬೆರೆದ ಶರಣರ ಜನನಮರಣಕ್ಕೊಳಗಾದ ಮನುಜರೆತ್ತ ಬಲ್ಲರೊ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ?

೮೨. ನಿರ್ಮಳವಾದ ದೇಹದಲ್ಲಿ ಇನ್ನೊಂದು ಕಲ್ಪಿಸಲುಂಟೆ? ಲಿಂಗವಾದ ತನುವಿನೊಳಗೆ ಜಂಗಮದ ನೆನಹಲ್ಲದೆ, ಇನ್ನೊಂದರ ನೆನಹುಂಟೆ? ಪ್ರಸಾದವಾದ ಕಾಯದೊಳಗೆ ತನ್ನ ಪ್ರಾಣಲಿಂಗದ ನೆನಹಲ್ಲದೆ, ಇನ್ನೊಂದರ ನೆನಹುಂಟೆ? ಈ ಸರ್ವಾಂಗವು ಲಿಂಗವಾಗಿ, ಜಂಗಮವೆ ಪ್ರಾಣವಾಗಿ, ಅವರ ಪಾದದಲ್ಲಿ ನಾ ನಿಜ ಮುಕ್ತಳಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೮೩. ಜಂಗಮವೆ ಜಗತ್ಪಾವನನವಯ್ಯ! ಜಂಗಮದ ನೆನಹೆ ಲಿಂಗವಾಯಿತ್ತು. ಅವರ ತನುವೆ ಎನ್ನ ಕಾಯವಾಯಿತ್ತು. ಅವರ ದರ್ಶನ

ವೆನಗೆ ಪರುಷವಾಯಿತ್ತು. ಆ ಪರುಷವಿಡಿದು ಮನ ಲಿಂಗದಲ್ಲಿ ಬೆರಸಿ, ಕನಸು ಕಳವಳಿಕೆ ಹೆಸರುಗೆಟ್ಟು ಹೋದವಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೮೪. ಮಾಯದ ಬೊಂಬೆಯ ಮಾಡಿ, ಕಂಗಳಿಗೆ ಕಾಮನ ಬಾಣವ ಹೂಡಿ, ನಡೆನುಡಿಯೊಳಗೆ ರಂಜಕದ ತೊಡಿಗೆಯನೆ ತೊಡಿಸಿ, ಮುಂದು ಗಾಣಿಸದೆ ಹಿಂದನರಸದೆ, ಲಿಂಗವ ಮರಹಿಸಿ, ಜಂಗಮವ ತೋರಿಸದೆ, ಸಂದೇಹದಲ್ಲಿ ಸತ್ತುಹುಟ್ಟುವ, ಈ ಭವ ಬಂಧನಿಗಳೆತ್ತ ಬಲ್ಲರೋ ಈ ಶರಣರ ನೆಲೆಯ? ಅವರ ನೆಲೆ ತಾನೆಂತೆಂದರೆ, ಹಿಂದನರಿದು, ಮುಂದೆ ಲಿಂಗದಲ್ಲಿ ಬೆರೆವ ಭೇದವ ಕಂಡು, ಜಗದ ಜಂಗುಳಿಗಳ ಹಿಂಗಿ, ಕಂಗಳ ಕರುಳನೆ ಕೊಯಿದು, ಮನದ ಶಿರುಳನೆ ಹುರಿದು, ಅಂಗಲಿಂಗವೆಂಬ ಉಭಯವಳಿದು, ಸರ್ವಾಂಗ ಲಿಂಗವಾಗಿ, ಮಂಗಳದ ಮಹಾಬೆಳಗಿನಲ್ಲಿ ಓಲಾಡುವ ಶರಣರ ನೆಲೆಯ ಜಗದ ಜಂಗುಳಿಗಳೆತ್ತ ಬಲ್ಲರೊ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ?

೮೫. ಜಂಗಮವೇ ಗುರು, ಜಂಗಮವೇ ಲಿಂಗ, ಜಂಗಮವೇ ಪ್ರಾಣವೆಂದರೆ, ಇಲ್ಲವೆಂಬ ಅಂಗಹೀನರಿರ ನೀವು ಕೇಳಿರೋ. ಜಂಗಮವು ಗುರುವಲ್ಲದಿದ್ದರೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರವ ಹಿಂಗಿಸುವನೆ? ಜಂಗಮ ಪ್ರಾಣವಲ್ಲದಿದ್ದರೆ, ಪ್ರಾಣಕ್ಕೆ ಪ್ರಸಾದವ ಕೊಡುವನೆ? ಜಂಗಮವು ಲಿಂಗವಲ್ಲದಿದ್ದರೆ, ಪ್ರಾಣಲಿಂಗವನೆ ತೋರುವನೆ? ಇದ ಕಂಡು ಕಾಣೆನೆಂಬ ಭಂಗಿತರ ನುಡಿಯ ಮೆಚ್ಚರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೮೬. ತುಂಬಿದ ಕೆರೆಗೆ ಅಂಬಿಗ ಹರಿಗೋಲಹಾಕಿ, ಬಲಿಯ ಬೀಸಿದಂತೆ ತುಂಬುತ್ತ ಕೆಡೆವುತ್ತಲಿದ್ದ ಲಿಂಗವ ನೋಡಿ ಕೂಡೆವೆಂದು ಜಂಗಮದ ನೆಲೆಯ ಕಾಣದೆ ಸಂದು ಹೋದರಲ್ಲ ಈ ಲೋಕವೆಲ್ಲವು ಲಿಂಗದ ನೆಲೆಯ ಕಾಂಬುದಕ್ಕೆ ಹರಿಗೋಲನೆ ಹರಿದು, ಹುಟ್ಟ ಮುರಿದು, ಆ ಬಲೆಯೊಳಗೆ ಸಿಕ್ಕಿದ ಖಗ ಮೃಗವನೆ ಕೊಂದು, ಆ ಬಲಿಯನೆ ಕಿತ್ತು, ಅಂಬಿಗ ಸತ್ತು, ತೊರೆ ಬತ್ತಿ, ಮೆಯ್ಮರೆದಲ್ಲದೆ ಆ ಮಹಾ ಘನವ ಕಾಣಬಾರದೆಂದರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೮೭. ಆಗದಾಗದು ಮರ್ತ್ಯದ ಮನುಜರಿಗೆ ಶಿವಸುಖ. ಅದೆಂತೆಂದರೆ ಕಾಳು ವಿಷಯದಲ್ಲಿ ಬಿದ್ದು ನುಡಿವುತ್ತ, ಮರವೆ ನಡೆವುತ್ತ, ಮರವೆ ಮುಟ್ಟುತ್ತ, ಮರವೆ ಕೇಳುತ್ತ, ಮರವೆ ನೋಡುತ್ತ, ಮರವೆ ಇಂತು ಮರಹಿನೊಳಗಿರ್ದು, ಅರುಹ ಕಂಡಿಹೆನೆಂಬ ಅಣ್ಣಗಳಿರಾ, ನೀವು ಕೇಳಿರೋ. ನಮ್ಮ ಶರಣರ ನಡೆ ಎಂತೆಂದರೆ, ಐದು ಗುಣವನೆ ಅಳಿದು, ಐದು ಗುಣವನೆ ಹಿಡಿದು, ನುಡಿವುತ್ತ ಲಿಂಗವಾಗಿ ನುಡಿವರು. ಮುಟ್ಟುತ್ತ ಲಿಂಗವಾಗಿ ಮುಟ್ಟುವರು. ನಡೆವುತ್ತ ಲಿಂಗವಾಗಿ ನಡೆವರು. ಕೇಳುತ್ತ ಲಿಂಗವಾಗಿ ಕೇಳುವರು. ನೋಡುತ್ತ ಲಿಂಗವಾಗಿ ನೋಡುವರು. ಸರ್ವಾಂಗವು ಲಿಂಗವಾಗಿ, ಅಂಗಲಿಂಗವೆಂಬ ಉಭಯವಳಿದು, ಮಂಗಳದ ಮಹಾ ಬೆಳಗಿನಲ್ಲಿ, ಲಿಂಗವೆ ಗೂಡಾಗಿರ್ದ ಕಾರಣ ಅಪ್ಪಣ್ಣಪ್ರಿಯ ಚನ್ನ ಬಸವಣ್ಣಾ.

೮೮. ಕಂಗಳ ಮುಂದೆ ಮಾಣಿಕವಿದ್ದು, ಕಾಣಲರಿಯರಯ್ಯಾ. ಬಾಗಿಲ ಮುಂದೆ ಹಾಲಸಾಗರವಿದ್ದು, ಒರತೆಯ ನೀರಿಗೆ ಹಾರುವರಂತೆ, ಕಂಗಳ ಮುಂದೆ ಮಹಾಶರಣನಿದ್ದು, ಕತ್ತಲೆ ಎನಲೇಕೆ? ಇನ್ನು ಬೇರೆ ಲಿಂಗವನರಸಿಹೆನೆನಲೇಕೋ ಆ ಮಹಾಶರಣ ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೮೯. ಮನವ ಗೆದ್ದೆವೆಂದು ತನುವ ಕರಗಿಸಿ, ಕಾಯವ ಮರಗಿಸಿ ನಿದ್ರೆಯ ಕೆಡಿಸಿ, ವಿದ್ಯೆಯ ಕಲಿತೆನೆಂಬ ಬುದ್ಧಿಹೀನರಿರಾ, ನೀವು ಕೇಳಿರೋ. ನಮ್ಮ ಶರಣರು ಮನವನೆಂತು ಗೆದ್ದರೆಂದರೆ, ಕಾಮ, ಕ್ರೋಧವ ನೀಗಿ, ಮೋಹ ಮದ ಮತ್ಸರವ ನಿಶ್ಚೈಸಿ, ಆಕೆ ರೋಷವಳಿದು, ಜಗದ ಪಾಶವ ಬಿಟ್ಟು, ಮರುಗಿಸುವ ಕಾಯವನೆ ಪ್ರಸಾದವ ಮಾಡಿ ಸಲುಹಿದರು. ಕೆಡಿಸುವ ನಿದ್ರೆಯನೆ ಯೋಗಸಮಾಧಿಯ ಮಾಡಿ, ಸುಖವ ನಡೆಸಿ, ಜಗವ ಗೆದ್ದ ಶರಣರ ಬುದ್ಧಿ ಹೀನರೆತ್ತ ಬಲ್ಲರೋ ಅಪ್ಪಣ್ಣ ಪ್ರಿಯ ಚನ್ನಬಸವಣ್ಣಾ?

೯೦. ಅಯ್ಯಾ, ನಾ ಮರ್ತ್ಯದಲ್ಲಿ ಹುಟ್ಟಿ, ಕಷ್ಟ ಸಂಸಾರಿ ಎನಿಸಿಕೊಂಡೆ. ಕತ್ತಲೆಯಲ್ಲಿ ಮುಳುಗಿದೆ. ಕರ್ಮಕ್ಕೆ ಗುರಿಯಾಗುತಿದ್ದರೆ, ಹೆತ್ತ ತಾಯಿ ಎಂಬ ಗುರುಸ್ವಾಮಿ ಎನ್ನ ಕೊರಳಿಗೆ ಗಂಡನೆಂಬ ಲಿಂಗವ ಕಟ್ಟಿದನು. ತಂದೆ ಎಂಬ ಜಂಗಮಲಿಂಗವು ಎನ್ನ ಪ್ರಾಣಕ್ಕೆ ಪ್ರಸಾ

ದವ ಊಡಿದನು. ಪ್ರಾಣಕ್ಕೆ ಪ್ರಸಾದವನೂಡಲಾಗಲಿ, ಕತ್ತಲೆ ಹರಿಯಿತ್ತು. ಕರ್ಮ ಹಿಂಗಿತ್ತು. ಮನ ಬತ್ತಲೆಯಾಯಿತ್ತು. ಚಿತ್ತ ಸುಯಿಧಾನವಾಯಿತ್ತು, ನಿಶ್ಚಿಂತವಾಯಿತ್ತು. ನಿಜವ ನೆಮ್ಮಿ ನೋಡುವನ್ನಕ್ಕ, ಎನ್ನ ಅತ್ತೆ ಮಾವನು ಅರತು ಹೋದರು. ಅತ್ತಿಗೆ ನಾದಿನಿಯರು ಎತ್ತಲೋಡಿ ಹೋದರು. ಸುತ್ತಲಿರುವ ಬಂಧುಗಳೆಲ್ಲ ಬಯಲಾದರು. ಎನ್ನ ತಂದೆ ತಾಯಿ ಕಟ್ಟಿದ ಚಿಕ್ಕಂದಿನ ಗಂಡನ ದಿಟ್ಟಿಸಿ, ನೋಡುವ ನೋಟ ಹೋಗಿ, ಎನ್ನ ಮನಕ್ಕೆ ಸಿಲ್ಕಿತ್ತು. ಅಂಗಲಿಂಗವೆಂಬ ಉಭಯವಳಿಯಿತ್ತು. ಸಂಗಸುಖ ಹಿಂಗಿತ್ತು. ಮಂಗಳದ ಮಹಾಬೆಳಗಿನಲ್ಲಿ ಓಲಾಡಿ ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೯೧. ಅಯ್ಯ, ಕಿಚ್ಚಿನೊಳಗೆಬೆಂದ ಕಾಯಕ್ಕೆ ಅಚ್ಚಿಗ ಉಂಟೆ? ತಾನುತಾನಾದ ಬಳಿಕ ಮಾವರ ಹಂಗುಂಟೆ? ಮನವು ಮಹದಲ್ಲಿ ನಿಂದ ಬಳಿಕ ಮರವೆಯುಂಟೇ? ತನುವ ಮರೆದಂಗೆ, ಇನ್ನಿದಿರೆಂಬುದುಂಟೆ? ಬೆಳಗ ಕಂಡವಂಗೆ ಕತ್ತಲೆಯ ಹಂಗುಂಟೆ? ಇವೆಲ್ಲವನು ಹಿಂಗಿಸಿ, ಈ ಮಹದಲ್ಲಿ ಬೆರೆದ ಶರಣಂಗೆ ನಮೋ ನಮೋ ಎಂದು ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೯೨. ಮಹಾಬೆಳಗನೆ ನೋಡಿ, ಮನವ ನಿಮ್ಮ ವಶವ ಮಾಡಿ, ತನುವ ಮರೆದು, ಧನವ ಜಂಗಮಕ್ಕಿತ್ತು, ತಾನು ಬಯಲ ದೇಹಿಯಾದಲ್ಲದೆ ನಿಜಮುಕ್ತಿ ಇಲ್ಲವೆಂದರು ನಮ್ಮ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೯೩. ಮನವೆಂದರೆ ಮರವೆಗೆ ಒಳಗು ಮಾಡಿತ್ತು. ತನುವೆಂದರೆ ತಾಮಸಕ್ಕೊಳಗು ಮಾಡಿತ್ತು. ಧನವೆಂದರೆ ಆಸೆ ಎಂಬ ಪಾಶಕ್ಕೊಳಗು ಮಾಡಿತ್ತು. ಇವು ಮಾಯಾ ಪಾಶವೆಂದು ಬಿಟ್ಟು ಹುಟ್ಟನರಿದು, ಬಟ್ಟಬಯಲಲ್ಲಿ ನಿಂದು, ಚಿತ್ತ ನಿರ್ಮಳವಾಗಿ ನೋಡಿ ಕಂಡ ಶರಣಗೆ ತನುವೆ ಲಿಂಗವಾಯಿತ್ತು. ಮನವೆ ಘನವಾಯಿತ್ತು. ಆ ಧನವೆ ಜಂಗಮವಾಯಿತ್ತು. ಈ ತ್ರಿವಿಧವನು ತ್ರಿವಿಧಕಿತ್ತು, ತಾ ಬಯಲ ದೇಹಿಯಾದನಯ್ಯ, ಆ ಮಹಾ ಶಿವಶರಣನು. ಇದರ ನೆಲೆಯನರಿಯದೆ, ಈ ಮನದ ಬೆಂಬಳಿಗೊಂಡಾಡಿದವರೆಲ್ಲ ನರಗುರಿಗಳಾದರಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೯೪. ಹೊತ್ತು ಹೊತ್ತಿಗೆ ಕಿಚ್ಚನೆ ಬರಿಸಿದರೆ, ಕಲೆ ಉರಿದುದೆಂದು, ಹೊತ್ತು ಹೊತ್ತಿಗೆ ಪ್ರಾಣಕ್ಕೆ ಪ್ರಸಾದವ ಸ್ಥಾಪ್ಯವ ಮಾಡಿ, ತನುವ ಖಂಡಿಸದೆ, ಕಾಯವ ಮರಗಿಸದೆ, ಭಾವವನೆ ಬಯಲು ಮಾಡಿ, ಭವಕೆ ಸವೆದು, ಕಾಣದಪ್ಪತವನೆ ಕಂಡು, ಮಹಾಬೆಳಗಿನಲಿ ಬಯಲಾದರು ಕಾಣಾ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೯೫. ಅದೇನು ಕಾರಣವೆಂದರೆ ಘನಕ್ಕೆ ಘನವಾದರು. ಮನಕ್ಕೆ ಮನವಾದರು. ತನುವಿಂಗೆ ತನುವಾದರು. ನಡೆನುಡಿಗೆ ಚೈತನ್ಯವಾದರು. ನೋಡುವುದಕ್ಕೆ ನೋಟವಾದರು. ಕೂಡುವದಕ್ಕೆ ಲಿಂಗವಾದರು. ಈ ಒಳಹೊರಗೆ ಬೆಳಗುವ ಬೆಳಗು ಸೀಮೆಯಾದ ಕಾರಣ ನಿಮ್ಮ ಪಾದದಲ್ಲಿ ನಾ ನಿಜಮುಕ್ತಳಾದೆನಯ್ಯ ಚನ್ನಮಲ್ಲೇಶ್ವರ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೯೬. ಕಾಯವೆಂಬ ಕದಳಿಯ ಹೊಕ್ಕು, ಜೀವ ಪರಮರ ನೆಲೆಯನರಿದು, ರಸ, ರುಧಿರ, ಮಾಂಸ, ಮಜ್ಜೆ, ಮೇದುಳು, ಅಸ್ಥಿ, ಶುಕ್ಲ ಈ ಸಪ್ತ ಧಾತುಗಳ ಸಂಚನ ತಿಳಿದು, ಮತ್ತೆ ಮನ ಪವನ ಬಿಂದುವನೊಡಗೂಡಿ ಉತ್ತರಕ್ಕೇರಿ ನೋಡಲು, ಬಟ್ಟಬಯಲಾಗಿದ್ದಿತ್ತು. ಆ ಬಯಲಲ್ಲಿಯೆ ನಿಂದು, ನಿರಾಳದೊಳಗೂಡಿ, ಮಹಾಬೆಳಗನೆ ಕೂಡಿ ನಾ ನಿಜಮುಕ್ತಳಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೯೭. ಅಂಗವ ಮರೆದಂಗೆ ಲಿಂಗದ ಹಂಗೇಕೊ? ಅರಿವ ಕಂಡವಂಗೆ ಕುರುಹಿನ ಹಂಗೇಕೊ? ತಾನು ತಾನಾದವಂಗೆ ಧ್ಯಾನದ ಹಂಗೇಕೊ? ಮನಮುಗ್ಧವಾದವಂಗೆ ಮಾನವರ ಹಂಗೇಕೊ? ಆಸೆಯನಳಿದವಂಗೆ ರೋಷದ ಹಂಗೇಕೊ? ಕಾಮನ ಸುಟ್ಟವಂಗೆ ಕಳವಳದ ಹಂಗೇಕೊ? ನಡೆಗೆಟ್ಟವಂಗೆ ನುಡಿಯ ಹಂಗೇಕೊ? ತನ್ನ ಮರೆದು ನಿಮ್ಮನರಿದ ಶರಣಂಗೆ ಅಲ್ಲೆ ಐಕ್ಯ ಕಂಡೆ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೯೮. ನೋಡಿಹೆನೆಂದರೆ ನೋಟವಿಲ್ಲ. ಕೇಳಿಹೆನೆಂದರೆ ಕಿವಿ ಇಲ್ಲ. ವಾಸಿಸಿಹೆನೆಂದರೆ ನಾಸಿಕವಿಲ್ಲ. ನುಡಿದಿಹೆನೆಂದರೆ ಬಾಯಿಲ್ಲ. ಹಿಡಿದಿಹೆನೆಂದರೆ ಹಸ್ತವಿಲ್ಲ. ನಡೆದಿಹೆನೆಂದರೆ ಕಾಲಿಲ್ಲ. ನೆನೆದಿಹೆನೆಂದರೆ ಮನವಿಲ್ಲ. ಇಂತು ನೆನಹು ನಿಷ್ಪತ್ತಿಯಾಗಿ, ಶರಣರ ಪಾದದಲ್ಲಿಯೆ ಬೆರೆದು ಸುಖಿಯಾದೆನಯ್ಯ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.

೯೯. ಮನೆ ಮಂಕಾಯಿತ್ತು. ತನುವು ಮರೆಯಿತ್ತು. ವಾಯು ಬರತಿತ್ತು. ಉರಿ ಎದ್ದಿತ್ತು. ಹೊಗೆ ಹರಿಯಿತ್ತು. ಸರೋವರವೆಲ್ಲ ಉರಿದು ಹೋಯಿತ್ತು. ಒಳಗೆ ಹೊಕ್ಕು ಕದವ ತೆಗೆದು ಬಯಲ ನೋಡಿ, ಬೆಳಗ ಕೂಡಿದಲ್ಲದೆ ನಿಜ ಮುಕ್ತಿ ಇಲ್ಲವೆಂದರು ನಮ್ಮ ಅಪ್ಪಣ್ಣಪ್ರಿಯ ಚನ್ನ ಬಸವಣ್ಣಾ.

೧೦೦. ಬೆಟ್ಟ ಬೆಂದಿತ್ತು. ಬಿದಿರುಗಣ್ಣು ಒಡೆಯಿತ್ತು. ಸುತ್ತ ನೋಡಿದರೆ ನಿರಾಳವಾಯಿತ್ತು. ಕತ್ತಲೆ ಹರಿಯಿತ್ತು. ಮನ ಬತ್ತಲೆಯಾಯಿತ್ತು. ಚಿತ್ತ ಮನ ಬುದ್ಧಿ ಏಕವಾದವು. ಎಚ್ಚತ್ತು ನೋಡಿದರೆ, ಬಚ್ಚಬರಿಯ ಬೆಳಗಲ್ಲದೆ, ಕತ್ತಲೆಯ ಕಾಣಬಾರದು ಕಾಣಾ ಅಪ್ಪಣ್ಣಪ್ರಿಯ ಚನ್ನ ಬಸವಣ್ಣಾ.

೧೦೧. ತನು ಕರಗಿತ್ತು. ಮನ ನಿಂದಿತ್ತು. ಉಲುಹು ಅಡಗಿತ್ತು. ನೆಲೆಗೆ ನಿಂದಿತ್ತು. ಮನ ಪವನ ಬಿಂದು ಒಡಗೂಡಿತ್ತು. ಉರಿ ಎದ್ದಿತ್ತು. ಊರ್ಧ್ವಕ್ಕೋಡಿತ್ತು. ಶರಧಿ ಬತ್ತಿತ್ತು. ನೊರೆ ತೆರೆ ಅಡಗಿತ್ತು. ಅಷ್ಟಮದವೆಲ್ಲ ಹಿಟ್ಟುಗುಟ್ಟಿತ್ತು. ಕರಣಂಗಳೆಲ್ಲ ಉರಿದು ಹೋಯಿತ್ತು. ಸಪ್ತಧಾತು ಕೆಟ್ಟಿತ್ತು. ರಸವರತಿತ್ತು. ಅಪ್ಪು ಬರತಿತ್ತು. ಕಟ್ಟಿ ಹಾಯ್ದ ಬಿಂದಿನಂತೆ ತೊಟ್ಟು ಬಿಟ್ಟು, ಬಟ್ಟಬಯಲೊಳಗೆ ಬಿದ್ದು, ನಾನೆತ್ತ ಹೋದೆನೆಂದರಿಯೆನಯ್ಯಾ ಅಪ್ಪಣ್ಣಪ್ರಿಯ ಚನ್ನಬಸವಣ್ಣಾ.



R. N. B. 2554

# ಶಿವಾನುಭವ.

ಸಂಪುಟ ೪.] (ಮಾಸಪತ್ರಿಕೆ) [ಸಂಚಿಕೆ ೬.



ಸಪ್ಟೆಂಬರ ೧೯೨೯] ವಿಜಾಪುರ. [ಭಾದ್ರಪದ ೧೮೫೧

ವಾ. ಚ. ೪ ರೂ. ೪ ಆ.

# ವಿಷಯಾನುಕ್ರಮಣಿಕೆ.



---

## ಶಿವಾನುಭವ.

ಇದು ವೀರಶೈವ ಧಾರ್ಮಿಕ ಉನ್ನತಿಯ ಬಗ್ಗೆ ಹೆಣಗಾಡುವ ಮೇಲ್ತರದ ಮಾಸಪತ್ರಿಕೆಯು. ಇದು ೬೪ ಪುಟಗಳುಳ್ಳದ್ದಿದ್ದು ಚಂದಾ ಮಾತ್ರ ೪ ರೂ. ೪ ಆ. ಇದು ಪ್ರತಿ ತಿಂಗಳ ಮಧ್ಯಕ್ಕೆ ಹೊರಡುತ್ತದೆ. ಲೇಖಕರು ಚಿಕ್ಕ ಚಿಕ್ಕ ಲೇಖಗಳನ್ನು ಕಳಿಸಬೇಕು. ವೀರಶೈವರ ಉನ್ನತಿಯ ಪರವಾಗಿ ಯಾರು ಬೇಕಾದವರು ಬರೆದರೂ ಅವಕಾಶ ಸಿಗುವದು. ಕೆಲವರು ಇದರ ಹಿಂದಿನ ಸಂಚಿಕೆಗಳನ್ನು ಬೇಡುತ್ತಾರೆ. ಆದರೆ ೧-೨ ಸಂಚಿಕೆಗಳು ಸಿಗುವದೇ ಇಲ್ಲ. ೩ ರಿಂದ ೧೨ ವರೆಗೆ ಮಾತ್ರ ಸಿಗುತ್ತವೆ. ಬೇಕಾದವರು ತೀವ್ರ ತರಿಸಿಕೊಳ್ಳಬಹುದು. ತಡಮಾಡಿದರೆ ಪ್ರತಿಗಳು ಸಿಗಲಾರವು. ಯಾಕಂದರೆ ಪ್ರತಿಗಳು ಸ್ವಲ್ಪೇ ಉಳಿದಿವೆ. ಪ್ರತಿಯೊಂದು ಸಂಚಿಕೆಗೆ ೮ ಆಣೆ.

ಮ್ಯಾನೇಜರ.

# ಶಿವಾನುಭವ.

ವರ್ಷ ೪]                    ಸಪ್ಟೆಂಬರ ೧೯೨೯                    [ಸಂಚಿಕೆ ೬

## ಶ್ರೀ ನಯನ ಸ್ವಾಮಿಗಳು, ಕುಡತನಿ ಗ್ರಾಮ, ತಾ. ಬಳ್ಳಾರಿ.

(ಲೇಖಕ:— ವೇ॥ ಮಾ॥ ವೈ. ನಾಗೇಶ ಶಾಸ್ತ್ರಿಗಳು ಕನ್ನಡ ಪಂಡಿತವಾರ್ಡ್ಲಾ ಹೈಸ್ಕೂಲ ಬಳ್ಳಾರಿ.)



ಬಸವಾದಿ ಪ್ರಮಥರ ಕಾಲದಲ್ಲಿ (೧೨ನೇ ಶತಮಾನ) ವೀರಶೈವ ಮತವು ಈಗಿನಂತೆ ಉಪನ್ಯಾಸಾದಿಗಳಿಂದ ಮಾತ್ರ ಮಹತ್ವವನ್ನು ಹೊಂದದೆ, ಕ್ರಿಯಾಶಕ್ತಿಯಿಂದ ಮಹತ್ವವನ್ನು ಹೊಂದಿದ್ದಿತೆಂಬುದು ಸರ್ವಶೃತವು. ಆಗ್ಗೆ ನಡೆನುಡಿಗಳಿಂದ ವೀರಶೈವಮತದ ಮಹತ್ವವನ್ನು ಬಸವಾದಿ ಪ್ರಮಥರಷ್ಟೇ ತೋರಿಸಿಲ್ಲ, ಅವರ ತರುವಾಯ ಇನ್ನುಳಿದ ಗುರುಗಳೂ, ಜಂಗಮರೂ, ಭಕ್ತರೂ ಆ ಮಹತ್ವವನ್ನು ತೋರಿಸಿದಂತೆ ಕಂಡುಬರುತ್ತದೆ. ವೀರಶೈವರಿಗೆ ಸಂಬಂಧಿಸಿದ ಅಂತಹ ಮಹತ್ವ ಸ್ಥಾನಗಳು ಕನ್ನಡ ನಾಡಿನಲ್ಲಿ ಎಷ್ಟೋ ಇರುವವು. ಅವುಗಳ ಚರಿತ್ರವನ್ನು ಶೋಧಿಸಿ ಪ್ರಕಟಿಸುವುದರಿಂದ ನಮ್ಮ ಮತಾಚರಣೆಯ ಶಕ್ತಿಯು ಎಷ್ಟು ಮಹತ್ವದ್ದೆಂಬುದು ಒಡೆದು ತೋರುವಂತಿದೆ. ಈ ವಿಧದ ಚರಿತ್ರ ಪ್ರಕಟನೆಯಿಂದ ಮತದ ಒಕ್ಕಟ್ಟನ್ನೇ ಹಾಳು ಮಾಡುತ್ತಿರುವ ಈಗಿನ ಚಳವಳಿಯೂ ಸ್ವಲ್ಪ ಮಟ್ಟಿಗೆ ದೂರವಾಗಬಹುದು. ಬಳ್ಳಾರಿ ಮಂಡಲದಲ್ಲಿ ಕೆಲವು ಮಹತ್ವ ಸ್ಥಾನಗಳಿರುವವು. ಆ ಸ್ಥಾನಗಳ ಚರಿತ್ರ ಶೋಧಕರಿಗೆ ಮಾರ್ಗದರ್ಶಕವಾಗಿರುವ ಲೇಖನಗಳನ್ನು ಸಾಧ್ಯವಾದ ಮಟ್ಟಿಗೆ ಆಗಾಗ ಶಿವಾನುಭವ ಪತ್ರಿಕೆಗೆ ಕೊಡಬೇಕೆಂದು ನಮ್ಮ ಅಪೇಕ್ಷೆಯಿದೆ. ಬಳ್ಳಾರಿ

ಪ್ರಾಂತದ ಮಹತ್ವ ಸ್ಥಾನಗಳಲ್ಲೊಂದರ ಸಂಕ್ಷಿಪ್ತ ಸಮಾಚಾರವು ಈಗ ಇಲ್ಲಿ ಕೊಡಲ್ಪಟ್ಟಿದೆ.

ಬಳ್ಳಾರಿ ತಾ. ಕುಡತನಿ ಗ್ರಾಮದಲ್ಲಿ ಶ್ರೀಕಾಶೀಪೀಠಕ್ಕೆ ಸಂಬಂಧಿಸಿದ ಪಟ್ಟಾಧಿಕಾರದ ಮಠವಿರುವದು. ಈ ಮಠಕ್ಕೆ ಒಳಪಟ್ಟು, ಬಳ್ಳಾರಿ ತಾ. ಏಳುಬೆಂಚಿ ಗ್ರಾಮದಲ್ಲಿಯೂ ಎತ್ತಿನ ಬೂದಿಹಾಳು ಗ್ರಾಮದಲ್ಲಿಯೂ ಇನ್ನೆರಡು ಮಠಗಳಿರುವವು. ಇವು ಮೊದಲು ಕಟ್ಟಿಗೆಯ ಇಮಾರತುಗಳಾಗಿದ್ದು, ಈಗ ಕರ್ತೃಗದ್ದುಗೆಯಲ್ಲಿ ಭಕ್ತಿಯುಳ್ಳ ಉದಾರಿಗಳಿಂದ ನವೀನವಾಗಿ ಶಿಲೆಯಿಂದ ಕಟ್ಟಸಲ್ಪಟ್ಟವೆ. ಬಳ್ಳಾರಿಗೆ ಸಮೀಪದಲ್ಲಿರುವ ದಡುಗೂರು ಗ್ರಾಮದಲ್ಲಿಯೂ ಒಂದು ಮಠವಿದ್ದು ಈಗ ಮಾತ್ರ ನಾಮಾವಶೇಷವಾಗಿರುವುದು. ಈ ಮಠದ ಇನಾಮು ಭೂಮಿಗಳು ಬಳ್ಳಾರಿ ತಾ. ಕುಡತನಿ, ಏಳುಬೆಂಚಿ, ಎರಿಂಗಿಳಗಿ, ತಿಂಮಲಾಪುರ, ಬೂದಿಹಾಳು, ಇಭರಾಂಪುರವೆಂಬ ಗ್ರಾಮಗಳಲ್ಲಿ ಸುಮಾರು ೩೦೦ ಎಕರೆಗೆ ಮೇಲ್ಪಟ್ಟೇ ಇರುವವು. ಮಠದ ವಂಶೀಯಶಿಷ್ಯರು ಬಳ್ಳಾರಿ ಪ್ರಾಂತದಲ್ಲಲ್ಲದೆ, ಬೆಂಗಳೂರು, ದಾವಣಗೇರಿ ಮೊದಲಾದ ಸ್ಥಾನಗಳಲ್ಲಿಯೂ ಇರುವರು. ಮೂಲಸ್ವಾಮಿಗಳಿಂದ ಇದುವರೆಗೂ ಸುಮಾರು ೧೨-೧೩ ಪಟ್ಟಗಳಾಗಿರುವವು. ಎಲ್ಲಾ ಪಟ್ಟದವರಿಗೂ 'ನಯನಸ್ವಾಮಿ' 'ಚನ್ನಬಸವಸ್ವಾಮಿ' ಎಂಬ ಹೆಸರುಗಳೇ ರೂಢಿಯಲ್ಲಿರುವವು. ಮೂಲ ಪುರುಷರ ಸಮಾಧಿಯಲ್ಲದೆ ಇತರರ ಸಮಾಧಿಗಳೂ ಕೆಲವಿರುವವು. ಅವರ ಚರಿತ್ರವು ಮಾತ್ರ ನಮಗೆ ದೊರೆತಿಲ್ಲ. ಸದ್ಯದಲ್ಲಿ ಮಠದ ಪಟ್ಟದಸ್ವಾಮಿಗಳು ಇಲ್ಲ. ಕೆಲವು ವರ್ಷಗಳ ಹಿಂದೆ ಲಿಂಗೈಕ್ಯರಾಗಿರುವರು. ಆ ಸ್ವಾಮಿಗಳ ತಮ್ಮನಾದ ಮುಪ್ಪಿನಯ್ಯನೆಂಬಾತನೇ ಈಗ ಮಠದ ಮಾಲೀಕನು. ಈ ಮಠವು ಪುತ್ರವರ್ಗದ್ದಿರುವದರಿಂದ ಮುಂದೆ ಮುಪ್ಪಿನಯ್ಯನ ಸಂತಾನಕ್ಕೆ ಪಟ್ಟಗಟ್ಟತಕ್ಕದ್ದಿದೆ.

## ಮಠದ ಮೂಲಾಚಾರ್ಯರು, ಅವರ ಕಾಲ.

ಶ್ರೀನಯನ ಸ್ವಾಮಿಗಳೇ ಈ ಮಠದ ಮೂಲಪುರುಷರು, ಇವರು ೧೩ನೇ ಶತಮಾನದವರು. ಮಠಕ್ಕೆ ಇನಾಮು ಕೊಟ್ಟಿರುವ ಪಾಳಯಗಾರರ ಕಾಲದಿಂದ ಇವರ ಕಾಲವು ಊಹಿಸಲ್ಪಟ್ಟಿದೆ. ಕಾಲನಿರ್ಣಯಕ್ಕೆ ಸದ್ಯದಲ್ಲಿ ಇತರ ಸಾಧನಗಳು ಸಿಕ್ಕಿಲ್ಲ. ಮಠದ ಚರಿತ್ರವನ್ನು ಬಲ್ಲ

ವೃದ್ಧರ ಮಾತಿನಿಂದಲೂ ಇತರ ಕೆಲವು ಕಾರಣಗಳಿಂದಲೂ ಐತಿಹಾಸಿಕ ದೃಷ್ಟಿಯಿಂದ ನೋಡಿದರೆ, ಮೂಲಪುರುಷರು ೧೩ನೇ ಶತಮಾನಕ್ಕೆ ಪೂರ್ವದವರಲ್ಲೆಂದು ತಿಳಿದು ಬರುತ್ತದೆ.

## ಶಿವಯೋಗ ಮಹಿಮೆ.

ನಯನಸ್ವಾಮಿಗಳು ಪರಮ ವೈರಾಗ್ಯಶೀಲರು. ಶಿವಯೋಗದಲ್ಲಿ ಬಲ್ಲಿದರು. ಇವರ ಯೋಗಸಾಧನೆಯ ಸ್ಥಾನವು ಕಡಪ ಜಿಲ್ಲಾ ಜಂಬಲ ಮಡುಗು ತಾಲೂಕಿನಲ್ಲಿ ಈಗ ನಯನಾಲಪ್ಪಕೊಂಡ ಎಂಬ ಹೆಸರಿನಿಂದ ಪ್ರಸಿದ್ಧವಿರುವ ಪರ್ವತದ ಗುಹೆಯು. ಗುಹೆಯ ಸುತ್ತಲೂ ಆವರಣ ವಿದ್ದು ಅಲ್ಲಿ ಪೂರ್ವದ ಮಠವೂ ಜೀರ್ಣರೂಪದಿಂದಿರುವುದು. ಆ ಮಠದಲ್ಲಿ ಸ್ವಾಮಿಗಳು ಒಂದು ವಿಭೂತಿಯ ಕಣಜವನ್ನು ಮಾಡಿಸಿ ಅದರಲ್ಲಿ ವಿಭೂತಿಗಳನ್ನು ತುಂಬಿಸಿರುವರು. ಅನೇಕ ಮಹಾತ್ಮರು ಅಲ್ಲಲ್ಲಿ ಈ ರೀತಿಯಾದ ವಿಭೂತಿ ಕಣಜಗಳನ್ನು ಮಾಡಿಸಿರುವುದುಂಟು. ಬಳ್ಳಾರಿಯ ಮಹನೀಯರಾದ ಶ್ರೀಮರಿ ಸ್ವಾಮಿಗಳವರೂ ತಮ್ಮ ಮಠ ದಲ್ಲಿ ವಿಭೂತಿ ಕಣಜವನ್ನು ಮಾಡಿಸಿರುವರು. ಹೀಗೆ ಮಾಡಿಸುವುದರ ಕಾರಣವು ಮಾತ್ರ ಸರಿಯಾಗಿ ನಮಗಿನ್ನೂ ಅರ್ಥವಾಗಿಲ್ಲ. ಗುಹೆಯಲ್ಲಿ ನಯನಸ್ವಾಮಿಗಳ ಯೋಗವು ವೃದ್ಧಿಯನ್ನು ಹೊಂದಿದಂತೆ, ಅವರ ಪ್ರಭಾವವೂ ಸುತ್ತಮುತ್ತಲೂ ಹಬ್ಬಿದೆ. ಸ್ವಾಮಿಗಳು ಶಿವಯೋಗಸಿದ್ಧ ರಾದ ನಂತರ ಭಕ್ತೋದ್ಧಾರಕ್ಕಾಗಿ, ಗುಹೆಯಿಂದ ಹೊರಹೊರಟಿರುವರು. ಇದಲ್ಲವೆ ನಿಜವಾದ ಸ್ವಾಮಿಗಳ ಕರ್ತವ್ಯ?

## ವೃಷಭಗಳ ಶಿಷ್ಯವೃತ್ತಿ.

ನಯನಾಲಪ್ಪಕೊಂಡದ ಗುಹೆಯಲ್ಲಿರುವಾಗ ಸ್ವಾಮಿಗಳು ಕೆಲವು ವೃಷಭಗಳಿಂದ ಶಿಷ್ಯವೃತ್ತಿಯನ್ನು ಮಾಡಿಸಿಕೊಳ್ಳುತ್ತಿದ್ದರು. ಮೇಲೆ ಹೇಳಿದಂತೆ ವಿಭೂತಿಯ ಕಣಜಕ್ಕೆ ವಿಭೂತಿಗಳನ್ನು ತಂದುಕೊಡುವ ಶಿಷ್ಯರೆಂದರೆ ಎತ್ತುಗಳೇ. ಸ್ವಾಮಿಗಳು ತಮ್ಮ ಹೆಸರಿನ ಒಂದು ಓಲೆ ಯನ್ನು ಬರೆದು, ಎತ್ತುಗಳ ಯಜಮಾನನಾದೊಂದು ಮುದಿಯೆತ್ತಿನ ಹಣೆಗೆ ಅಂಟಿಸಿ ಬಿಟ್ಟರೆ, ಆ ಎತ್ತುಗಳೆಲ್ಲವೂ ಸೇರಿ ಕೊಟ್ಟೂರಿಗೆ ಬರ ಬೇಕು. ಕೊಟ್ಟೂರಲ್ಲಿರುವ ವಿಭೂತಿಯನ್ನು ಮಾರುವ ಅಯ್ಯಗಳು, ಹಣೆಯ

ಓಲೆಯನ್ನು ನೋಡಿಕೊಂಡು, ಓಲೆಯಲ್ಲಿ ಬರೆದಂತೆ ವಿಭೂತಿಗಳನ್ನು ಎತ್ತಿನ ಕಂಟಲಿಗಳಿಗೆ ತುಂಬಿ, ಭಕ್ತಿಯಿಂದ ಎತ್ತುಗಳನ್ನು ಪೂಜಿಸಿ ಕಳುಹಿಸುತ್ತಿದ್ದರು. ಮಾರ್ಗಮಧ್ಯದ ಹಳ್ಳಿಗಳ ಭಕ್ತರಿಗೂ ಎತ್ತುಗಳ ಯೋಗ್ಯತೆಯೂ, ಸ್ವಾಮಿಗಳ ಪ್ರಭಾವವೂ ತಿಳಿದೇ ಇದ್ದುದರಿಂದ, ಮಾರ್ಗ ಮಧ್ಯದಲ್ಲಿಯೂ ಎತ್ತುಗಳ ಸೇವೆಗೆ ಕೊರತೆಯಿದ್ದಿಲ್ಲ. ಈ ರೀತಿಯಾದ ಸೇವೆಯನ್ನು ಕೈಕೊಂಡು ಬಸವಂಣಗಳು ಮನುಷ್ಯರಿಗಿಂತಲೂ ಹೆಚ್ಚು ಜಾಗರೂಕತೆಯಿಂದ ಸ್ವಾಮಿಗಳ ಸನ್ನಿಧಿಯನ್ನು ಸೇರುತ್ತಿದ್ದವು. ಈ ರೀತಿಯಾಗಿ ಕೊಟ್ಟೂರಿಂದ ಸ್ವಾಮಿಗಳ ಬಳಿಗೆ ಬರುತ್ತಿರುವ ಒಂದು ದಿನದಲ್ಲಿ, ಬಳ್ಳಾರಿಗೆ ೧೨ ಮೈಲು ದೂರದಲ್ಲಿರುವ ಬೂದಿಹಾಳಿಗೆ ಬರು ತ್ತಲೇ, ಆ ಗ್ರಾಮದ ಹೊರಗಿನ ಒಂದು ತಿಪ್ಪೆಯ ಬಳಿಯಲ್ಲಿ ಯಜ ಮಾನನಾದ ಮುದಿಯೆತ್ತು ಮೃತಿಯನ್ನು ಹೊಂದಿತು. ಸ್ವಾಮಿಗಳ ಆ ಮುದಿಬಸವನ ಯೋಗ್ಯತೆಯನ್ನು ಮೊದಲೇ ತಿಳಿದುಕೊಂಡಿದ್ದ ಬೂದಿ ಹಾಳಿನ ಭಕ್ತರು ಭಕ್ತಿಯಿಂದ ಆ ಬಸವಂಣನಿಗೆ ಯೋಗ್ಯರೀತಿಯಿಂದ ಮೃತಿಯ ಸ್ಥಾನದಲ್ಲಿಯೇ ಸಮಾಧಿಯನ್ನು ಮಾಡಿದರು. ಶಿಷ್ಯವಿಯೋಗ ದಿಂದ ಸ್ವಾಮಿಗಳಿಗೂ ಅಸಮಾಧಾನವಾಗದಿರಲಿಲ್ಲ. ಕೆಲವು ದಿನಗಳಲ್ಲಿ ಸಮಾಧಿಗೆ ಮೇಲೆ ಹಾಕಿದ ಬಂಡೆಯು ಮೇಲೆ ಮೃತನಾದ ಬಸವಣ್ಣನ ಆಕಾರದಿಂದ ಮುಖವು ಮಾತ್ರ ಒಡೆದು ಮೂಡಿರುವುದು. ಅದನ್ನು ಕಂಡ ಭಕ್ತರು ಆನಂದಾಶ್ಚರ್ಯಗಳಿಂದ ಬಸವಣ್ಣನಿಗೆ ಅಲ್ಲೊಂದು ಚಿಕ್ಕ ಗುಡಿಯನ್ನು ಕಟ್ಟಿ, ಪೂಜಾದ್ಯುಪಚಾರದಿಂದ ನಡೆದುಕೊಳ್ಳಲಾರಂಭಿಸಿ ದರು. ಕೆಲವು ದಿನಗಳಲ್ಲಿ ಒಬ್ಬ ಭಕ್ತನಲ್ಲಿ ಆ ಬಸವಂಣನ ಆವೇಶ ವಾಗಿ, "ನನ್ನ ಗುರುಗಳು ನಯನಾಲಪ್ಪಕೊಂಡದಲ್ಲಿರುವರು. ಅವರನ್ನು ಕರೆತಂದು ನನ್ನ ಸಮೀಪದಲ್ಲಿ ಮಠವನ್ನು ಕಟ್ಟಿಸಬೇಕು" ಎಂಬ ಹೇಳಿ ಕೆಯಾಗಿದೆ. ಶಿಷ್ಯೋದ್ಧಾರಪರರಾದ ಸ್ವಾಮಿಗಳೂ ಅಲ್ಲಿಗೆ ದಯಮಾ ಡಿಸಿದ್ದಾರೆ. ಬಸವಂಣನನಿಷ್ಟದಂತೆ ಅಲ್ಲೊಂದು ಮಠವೂ ಸ್ಥಾಪಿತವಾ ಗಿದೆ. ಈಗ ಬಸವಂಣನ ಮಂದಿರವು ಶಿಲಾಮಂಟಪಗಳಿಂದ ಕಂಗೊ ಳಿಸುತ್ತಿರುವುದು. ನಡೆದುಕೊಳ್ಳುವ ಭಕ್ತರಿಗೆ ಕಡಿಮೆಯಿಲ್ಲ. ಬೆಂಗಳೂರ, ಮೊದಲಾದ ಪ್ರಾಂತದಿಂದ ಮುಡುಪುಗಳು ಬರುತ್ತಿವೆ. ಪ್ರತಿದಿನದಲ್ಲಿಯೂ ಬಸವಂಣನಿಗೆ ನಯನಸ್ವಾಮಿಯ ತೀರ್ಥ ಪ್ರಸಾದವು ಈಗಲೂ ಸಲ್ಲು ತ್ತಿರುವುದು. ಗುರುವಿಗಿಂತಲೂ ಶಿಷ್ಯನ ಪ್ರಭಾವವೇ ಈಗ ಅಧಿಕವಾ

ಗಿದೆ. ಹೆಚ್ಚೇಕೆ, ಬಳ್ಳಾರಿ ಪ್ರಾಂತದ ಅನೇಕ ವೀರಶೈವರಿಗೆ ಬೂದಿಹಾಳ ಕಟ್ಟೀ ಬಸವನೇ ಮನೆಯ ದೇವರು. ನಯನ ಸ್ವಾಮಿಯೇ ಕುಲಗುರುವು. ಇದಲ್ಲವೇ ನಮ್ಮ ಮಠದ ತಿರುಳಾದ ಶಿವಯೋಗದ ಮಹಿಮೆ?

## ಪಿಶಾಚಗಳ ದಾಸ್ಯಭಾವ.

ಸ್ವಾಮಿಗಳು ಬೂದಿಹಾಳಿನಿಂದ ಭಕ್ತೋದ್ಧಾರಾರ್ಥವಾಗಿ ಬಳ್ಳಾರಿಗೆ ಪಶ್ಚಿಮದಿಕ್ಕಿನಲ್ಲಿ ೧೦ ಮೈಲು ದೂರದಲ್ಲಿರುವ ಕುಡತನಿ ಗ್ರಾಮಕ್ಕೆ ದಯಮಾಡಿಸುವಾಗ, ಮಾರ್ಗಮಧ್ಯದಲ್ಲಿ ಕೆಲವು ಪಿಶಾಚಗಳು (ದೆವ್ವಗಳು) ಅವರನ್ನು ಹಿಂಬಾಲಿಸಿವೆ. ಸ್ವಾಮಿಗಳು "ನೀವು ನನ್ನೊಡನೆ ಬರಕೂಡದು. ನಿಮ್ಮಿಂದ ಭಕ್ತರಿಗೆ ತೊಂದರೆಯಾದೀತು" ಎಂದು ಕಟ್ಟು ಮಾಡಲು, ಆ ಪಿಶಾಚಗಳು ಅಲ್ಲಿಯೇ ನಿಂತವು ಒಂದು ಕುಂಟು ಬಿದ್ದ ಪಿಶಾಚವು ಮಾತ್ರ "ಸ್ವಾಮಿಯೇ! ನಾನು ನಿಮ್ಮ ದಾಸನಾಗಿ, ನಿಮ್ಮ ಸ್ಥಾನದಲ್ಲಿದ್ದು, ಈ ಪಾಪಜನ್ಮವನ್ನು ಕಳೆದುಕೊಳ್ಳುವೆನು. ನಾನು ಯಾರಿಗೂ ತೊಂದರೆಯನ್ನುಂಟು ಮಾಡುವುದಿಲ್ಲ. ಮತ್ತು ನಿಮ್ಮ ಸ್ಥಾನಕ್ಕೆ ಇತರ ಪಿಶಾಚಗಳ ಪ್ರವೇಶವಾಗದಂತೆ ಕಾದುಕೊಂಡಿರುವೆನು. ನನಗೆ ಮಾತ್ರ ನಿಮ್ಮೊಡನೆ ಬರಲಿಕ್ಕೆ ಅಪ್ಪಣೆಯಾಗಬೇಕು" ಎಂದು ಬೇಡಿಕೊಳ್ಳಲು, ಸ್ವಾಮಿಗಳು ಜ್ಞಾನದೃಷ್ಟಿಯಿಂದ ಆ ಪಿಶಾಚಜನ್ಮದ ಪೂರ್ವ ವೃತ್ತಾಂತವನ್ನು ತಿಳಿಯುವುದಲ್ಲದೆ, ತಮ್ಮ ಸೇವೆಯಿಂದಲೇ ಆ ಪಿಶಾಚ ಜನ್ಮವು ಬಿಡುಗಡೆಯಾಗುವದಿರುವುದೆಂದು ಭಾವಿಸಿ, ಅದನ್ನು ತಮ್ಮೊಡನೆ ಕುಡತನಿಗೆ ಕರೆದುಕೊಂಡು ಬಂದರು. ಕುಡತನಿಯಲ್ಲಿಯೂ ಮಠವು ಸ್ಥಾಪಿತವಾಯಿತು. ಮಠದ ಒಂದು ಮೂಲೆಯಲ್ಲಿ ವಾಸಮಾಡುವಂತೆ ಆ ಕುಂಟದೆವ್ವಕ್ಕೆ ಅಜ್ಞೆ ಮಾಡಿದರು. (ಈಗಲೂ ಆ ಮಠದ ಒಂದು ಮೂಲೆಗೆ ದೆವ್ವಿನ ಮೂಲೆಯೆಂಬ ಹೆಸರಿದೆ.) ಆ ದೆವ್ವವು ಇತರ ಪಿಶಾಚಗಳು ಆ ಸ್ಥಾನದಲ್ಲಿ ಪ್ರವೇಶಿಸದಂತೆ ಕಾದುಕೊಂಡಿರುವುದು. ಈಗ್ಯೂ ಪಿಶಾಚಗ್ರಸ್ತರಾದ ಅನೇಕರು ಆ ಮಠದಲ್ಲಿ ಪ್ರವೇಶಿಸಲು ಭಯಪಡುವರು. ಮತ್ತು ಸ್ವಾಮಿಗಳ ಗದ್ದುಗೆಯ ಮುಂದಿನ ಅಂಗಾರವನ್ನು ಹಚ್ಚಿದ ಮಾತ್ರಕ್ಕೆ ಪಿಶಾಚಗಳು ಬಿಟ್ಟು ಹೋಗುತ್ತಿರುವವು. ಒಬ್ಬ ಅಗಸರ ಹೆಣ್ಣುಮಗಳು ಋತುವಾದಂದಿನಿಂದ ಸುಮಾರು ೧೨ ವರ್ಷದ ವರಿವಿಗೂ ಪಿಶಾಚಗ್ರಸ್ತಳಾಗಿದ್ದು, ಕಡೆಗೆ ನಯನಸ್ವಾಮಿಗಳ ಮಠದ

ಪ್ರದಕ್ಷಿಣದಿಂದಲೂ ಅಂಗಾರಲೇಪನದಿಂದಲೂ ಪಿಶಾಚದಿಂದ ಮುಕ್ತಳಾಗಿ ಗಂಡುಮಗುವನ್ನು ಹೆತ್ತಿರುವಳು. ಆ ಮಗುವಿಗೆ ನಯನಪ್ಪನೆಂಬ ಹೆಸರಿಟ್ಟಿರುವಳು. ಈಗಲೂ ಕುಡತನಿ ಗ್ರಾಮದಲ್ಲಿ ತಾಯಿಯೂ ಮಗನೂ ಜೀವದಿಂದಿರುವರು.

ನಯನಸ್ವಾಮಿಗಳು ಇಂತಹ ಮಹತ್ವಗಳನ್ನು ತಮ್ಮ ಜೀವಿತಕಾಲದಲ್ಲಿ ಎಷ್ಟೋ ತೋರಿಸಿರುವರು. ಲೇಖನಾಧಿಕ್ಯ ಭಯದಿಂದ ಅವನ್ನು ಬರೆಯದಿರುವೆವು. ಸ್ವಾಮಿಗಳು ತಮ್ಮ ಯೋಗಮಹಿಮೆಯಿಂದ ಅನೇಕ ಭಕ್ತರ ಇಷ್ಟಾರ್ಥವನ್ನು ಪೂರ್ಣ ಮಾಡಿದ್ದರೆಂಬ ಬಗ್ಗೆ ಬಳ್ಳಾರಿಯ ಪ್ರಾಂತದ ಅನೇಕ ವೀರಶೈವರ ಮನೆಗಳಲ್ಲಿ ನಯನಪ್ಪ, ನಯನಮ್ಮ, ಎಂಬುವ ಹೆಸರುಗಳನ್ನು ಈಗಲೂ ಇಡುತ್ತಿರುವುದೇ ಸಾಕಾದ ನಿದರ್ಶನವಾಗಿದೆ.

## ಅದ್ಭುತ ಸಮಾಧಿ.

ಸ್ವಾಮಿಗಳು ಕುಡತನಿಯ ಮಠದಲ್ಲಿಯೇ ವಿಶೇಷವಾಗಿ ವಾಸ ಮಾಡುತ್ತಿದ್ದರು. ಒಬ್ಬ ಕುಡತನಿಯ ಭಕ್ತನು ಒಂದು ಪುಣ್ಯದಿನದಲ್ಲಿ ಸ್ವಾಮಿಗಳನ್ನು ಲಿಂಗಾರ್ಚನಕ್ಕಾಗಿ ತನ್ನ ಮನೆಗೆ ಕರೆದುಕೊಂಡು ಹೋಗಿದ್ದನು. ಸ್ವಾಮಿಗಳು ಸ್ನಾನಗೃಹವನ್ನು ಪ್ರವೇಶಿಸಿದಾಗ, ಅಲ್ಲಿ ಭಕ್ತನ ಮನೆಯ ತರುಣಿಯೊಬ್ಬಳು ತೊಟ್ಟು ಬಿಟ್ಟ ಗಂಜಿಯ ಬಿಳಿಯ ಕುಪ್ಪಸದಲ್ಲಿ ಚಿಹ್ನಿತವಾದ ಕುಚಗಳಾಕಾರವು ಅಕಸ್ಮಾತ್ತಾಗಿ ಸ್ವಾಮಿಗಳ ದೃಷ್ಟಿಗೆ ಬಿದ್ದಿದೆ. ವೈರಾಗ್ಯಮೂರ್ತಿಗಳಾದ ಸ್ವಾಮಿಗಳು ಆ ಕ್ಷಣದಲ್ಲಿಯೇ ಈ ಚರ್ಮ ನೇತ್ರಗಳಿರತಕ್ಕವಲ್ಲವೆಂದು ತಮ್ಮ ಚಳ್ಳುಗುರ್ಗಳಿಂದ ಕಿತ್ತು ಹಾಕಿ, ಮಠಕ್ಕೆ ದಯಮಾಡಿಸಿದ್ದಾರೆ. ಚರ್ಮನಯನವನ್ನು ಕಿತ್ತು ಹಾಕಿ, ಜ್ಞಾನನಯನದಿಂದ ಭಕ್ತೋದ್ಧಾರವನ್ನು ಮಾಡಿದುದರಿಂದ ನಯನಸ್ವಾಮಿಗಳೆಂಬ ನಾಮವೇ ಪ್ರಸಿದ್ಧಿಗೆ ಬಂದಿದೆ. (ಪೂರ್ವದ ನಾಮವು ಮುಪ್ಪಿನ ಸ್ವಾಮಿಗಳೆಂದಿದ್ದಿತಂತೆ) ಕೆಲವು ದಿನಗಳಲ್ಲಿಯೇ ಸಮಾಧಿಯ ಸಿದ್ಧತೆಗೆ ಭಕ್ತರಿಗೆ ಅಪ್ಪಣೆ ಮಾಡಿದ್ದಾರೆ. ಇದನ್ನು ತಿಳಿದು, ಕುಡತನಿಯ ಆ ಸದ್ಭಕ್ತನು ಸ್ವಾಮಿಗಳನ್ನು ತನ್ನ ಮನೆಯಲ್ಲಿ ಪೂಜಿಸುವ ಭಾಗ್ಯವು ತಪ್ಪಿ ಹೋದದ್ದಕ್ಕಾಗಿ, ಬಹಳ ವ್ಯಸನದಿಂದ ಪುನಃ ಮನೆಗೆ ದಯಮಾಡಿಸುವಂತೆ ಸ್ವಾಮಿಗಳನ್ನು ಬೇಡಿಕೊಂಡಿರುವನು. ಅವರು "ಸಮಾಧಿಯಾದನಂತರ ಬರುವೆವೆಂದು ಹೇಳಿದ್ದಾರೆ. ಭಕ್ತನು ಇದೇ

ನಾಶ್ಚರ್ಯವೆಂದು ಯಾವ ಮಾತನ್ನಾಡದೆ, ಅಪ್ಪಕ್ಕೆ ತಟಸ್ಥನಾಗಿದ್ದಾನೆ. ಕುಡತನಿಯ ಮಠದಲ್ಲಿಯೇ ಸಮಾಧಿಯು ಸಿದ್ಧವಾಯಿತು. ಸ್ವಾಮಿಗಳು ಇನ್ನು ತಮ್ಮ ಪ್ರಾಣ ಮಾರುತನು ಶರೀರವನ್ನು ಬಿಡುವುದಕ್ಕೆ ಮೊದಲೇ ಭಕ್ತ ಗಣಕ್ಕೆ ಆಶೀರ್ವಾದವನ್ನು ಮಾಡಿ, ಶಿವಧ್ಯಾನಾನಂದದಿಂದ ಸಮಾಧಿಯ ಕೋಣೆಯೊಳಗೆ ಪ್ರವೇಶಿಸಿ, ಪದ್ಮಾಸನದಿಂದ ಮಂಡಿಸಿ, ಭಕ್ತರನ್ನುದ್ದೇಶಿಸಿ, "ನಾನು ಅಂತರ್ಮುಖನಾಗಿ ಶಿವಯೋಗ ಸಮಾಧಿಯಲ್ಲಿ ಲೀನನಾಗುವೆನು; ನೀವು ಬಹಿಃ ಸಮಾಧಿಯನ್ನು ಮುಚ್ಚಿ ಮೇಗಣ ಬಂಡೆಯನ್ನು ಹಾಕಿಬಿಡಿರಿ" ಎಂದು ಅಪ್ಪಣೆ ಮಾಡಲು, ಸ್ವಾಮಿಗಳ ಮಹಿಮೆಯನ್ನು ಬಲ್ಲ ಭಕ್ತವರ್ಗವು ಅಪ್ಪಣೆಯಂತೆ ಸಮಾಧಿಯ ಸಂಸ್ಕಾರವನ್ನು ಮಾಡಿಬಿಟ್ಟಿತು. ಸಮಾಧಿಯಾದ ೫ನೇ ದಿನದಲ್ಲಿ, ಯಾವ ಭಕ್ತನಿಗೆ 'ಸಮಾಧಿಯಾದನಂತರ ಬರುವೆವೆ'ಂದು ಅಪ್ಪಣೆಯಾಗಿದ್ದಿತೊ ಅವನ ದೇವರ ಮನೆಯ ಜಗುಲಿಯ ಮೇಲೆ ಸ್ವಾಮಿಗಳ ಜಟಾಮುಕುಟವು ಮಾತ್ರ ಉದ್ಭವಿಸಿದೆ. ತದ್ದರ್ಶನದಿಂದ ಸಂತುಷ್ಟನಾದ ಭಕ್ತನು ಪ್ರತಿ ದಿನದಲ್ಲಿಯೂ ಜಟಾಮುಕುಟವನ್ನು ಅನನ್ಯ ಭಕ್ತಿಯಿಂದ ಪೂಜಿಸುತ್ತಿದ್ದು, ತನ್ನ ಜೀವಿತಾಂತದಲ್ಲಿ "ಸ್ವಾಮಿನ್ ಇನ್ನು ನನ್ನಂತೆ ನನ್ನ ಮಕ್ಕಳು ಅನನ್ಯ ಭಕ್ತಿಯಿಂದ ಪೂಜಿಸಲಾರರು. ತಮ್ಮ ಜಟಾಮುಕುಟದ ಅಂತರ್ಧಾನವಾಗಲೆಂದು ಬೇಡಿಕೊಳ್ಳಲು ಆ ಕ್ಷಣವೇ ಸ್ವಾಮಿಗಳ ಜಟಾಮುಕುಟವು" ಮಾಯವಾದುದು. ಅಂದಿನಿಂದ ಆ ಭಕ್ತನ ವಂಶಜರು ಜಟಾಮುಕುಟದ ಪ್ರತಿನಿಧಿಯಾಗಿ ಒಂದು ಟೆಂಗಿನ ಕಾಯಿಯನ್ನು ಪೂಜಿಸಹತ್ತಿದರು. ಕುಡತನಿಯಲ್ಲಿ ಮಠದ ಹಿಂಬಾಗದಲ್ಲಿಯೇ ಆ ಭಕ್ತನ ಮನೆಯಿರುವುದು. ಆತನ ವಂಶಜನು ಈಗಲೂ ಮನೆಯಲ್ಲಿ ಟೆಂಗಿನಕಾಯಿಯನ್ನು ಪೂಜಿಸುವುದಲ್ಲದೆ, ಸ್ವಾಮಿಗಳ ಸಮಾಧಿಗೆ ಅತಿ ಭಕ್ತಿಯಿಂದ ನಡೆದುಕೊಳ್ಳುತ್ತಿರುವನು. ಆ ವಂಶಜನ ಹೆಸರು ಮಾಳಿಗೆಯ ಚೆನ್ನಪ್ಪ.

## ಶಂಕಾ ಸಮಾಧಾನಗಳು.

ಶಂಕೆ:— ಎತ್ತು ಮೃತವಾದ ಮೇಲೆ ಒಡೆದು ಮೂಡುವದು ಸಾಧ್ಯವೇ? ಪಶುಜನ್ಮದಲ್ಲಿ ಜ್ಞಾನೋದಯವಾಗಿ, ಮಹಾತ್ಮರ ಸಂಬಂಧ ವುಂಟಾಗುವದೇ? ಇತ್ಯಾದಿ.

ಸಮಾಧಾನಃ— ಜನ್ಮವು ಎರಡು ವಿಧದಿಂದ ಪ್ರಾಪ್ತಿಯಾಗುವುದು. ಜೀವನು ಮೊದಲು ಖನಿಜವರ್ಗ, ಸಸ್ಯವರ್ಗಗಳಲ್ಲಿ ತನ್ನ ಚೇತನ ಶಕ್ತಿಯನ್ನು ಸ್ವಲ್ಪ ಮಟ್ಟಿಗೆ ಬೆಳೆಯಿಸಿಕೊಂಡು, ಅನಂತರ ಪ್ರಾಣಿವರ್ಗದಲ್ಲಿ ಕ್ರಿಮಿಕೀಟ ಪತಂಗಾದಿ ಜನ್ಮಧಾರಣಮಾಡಿ, ಅಲ್ಲಿಂದ ಪಶುಜನ್ಮವನ್ನೂ ಮುಂದೆ ಮನುಷ್ಯ ಜನ್ಮವನ್ನೂ ಪಡೆಯುವನು. ಇದೊಂದು ವಿಧವು. ಇದನ್ನೇ ಕ್ರಮಜನ್ಮವೆಂದೂ ನೈಸರ್ಗಿಕ ಸೃಷ್ಟಿಯೆಂದೂ ಹೇಳುವರು. ಮನುಷ್ಯ ಜನ್ಮಕ್ಕೆ ಬಂದು, ಪುಣ್ಯಕರ್ಮದಿಂದ ಪವಿತ್ರಾಂತಃ ಕರಣನಾಗಿದ್ದರೂ ಪಾಪದಿಂದಲೊ ಶಾಪದಿಂದಲೊ ಪಶುಪಕ್ಷಿ ಜನ್ಮವನ್ನೆತ್ತುವುದು (ನಹುಷಾದಿಗಳಂತೆ) ಮತ್ತೊಂದು ವಿಧವು. ಶಾಪಜನ್ಮವು ಮಹಾತ್ಮರ ಅನುಗ್ರಹದಿಂದಲೇ ಅಂತವಾಗುವುದು. ಅಂತಹ ಶಾಪಜೀವಿಯಲ್ಲಿ ಮಹಾತ್ಮರ ಕೃಪೆಯಿಂದ ಜ್ಞಾನೋದಯವಾದರೆ, ಆ ಜೀವಿಯು ತನ್ನ ಉದ್ಧಾರಮಾಡಿಕೊಳ್ಳುವುದಲ್ಲದೆ, ಲೋಕದಲ್ಲಿ ಕೆಲವು ಕಾಲ ತನ್ನ ಕರ್ತೃತ್ವಶಕ್ತಿಯನ್ನೂ ತೋರಿಸಬಲ್ಲುದೆಂದು ಅಭಿಜ್ಞರ ಮತವು. ಅಂತೆಯೇ ನಯನಸ್ವಾಮಿಗಳ ಶಿಷ್ಯನಾದ ಬೂದಿಹಾಳ ಬಸವನ ಜನ್ಮವಿರುವದೆಂದು ಅನುಮಾನ ಪ್ರಮಾಣದಿಂದ ನಿಶ್ಚಯಿಸುವುದೇ ಅಸ್ತಿಕತ್ವವು.

ಶಂಕೆಃ— ಪಿಶಾಚಗಳಿರುವುದು ನಿಜವೇ? ಇದ್ದರೆ, ಕಾಣಿಸಿಕೊಳ್ಳುವುದು ಸಂಭವವೇ? ಅವುಗಳು ಮಹಾತ್ಮರ ದಾಸತ್ವವನ್ನು ಹೊಂದುವುದುಂಟೆ? ಇತ್ಯಾದಿ.

ಸಮಾಧಾನಃ— ಮೃತ್ಯುತತ್ವವನ್ನು ತಿಳಿದರೆ, ಈ ಶಂಕೆಯುಂಟಾಗಲಾರದು. ಹಿಂದೂದೇಶವಿರಲಿ, ಪಾಶ್ಚಾತ್ಯದೇಶಗಳಲ್ಲಿ ತತ್ರಾಪಿ ಹೆಚ್ಚಾಗಿ ಅಮೇರಿಕಾ ದೇಶದಲ್ಲಿ ಮರಣದ ರಹಸ್ಯವನ್ನೂ ಮರಣಾನಂತರ ಸ್ಥಿತಿಯನ್ನೂ ಬೋಧಿಸುವ ಗ್ರಂಥಗಳು ಅನೇಕವಾಗಿ ಪ್ರಕಟಿಸಲ್ಪಟ್ಟಿರುವುವು. ಈಚೀಚಿಗೆ ಭೌತಿಕ ಶಾಸ್ತ್ರಜ್ಞರಲ್ಲಿ ಅಗ್ರಗಣ್ಯನೆನಿಸಿಕೊಂಡಿರುವ ಸರ್. ಆಲಿವರ್ ಲಾಡ್ಜು *(Sir Oliver Lodge)* ಎಂಬಾತನು ಜರ್ಮನೀಯುದ್ಧದಲ್ಲಿ ಮಡಿದ ರೇಮಂಡ್ *(Raymond)* ಎಂಬ ತನ್ನ ಮಗನು ಈಗಲೂ ಬೇರೆ ಲೋಕದಿಂದ ತನ್ನೊಡನೆ ಮಾತನಾಡುತ್ತಿರುವುದಾಗಿ ನಿರೂಪಿಸುತ್ತಾ ಅವನು ಹೇಳಿದ ಸಂಗತಿಗಳನ್ನೆಲ್ಲಾ ಗ್ರಂಥ ರೂಪವಾಗಿ ಆಂಗ್ಲೇಯಭಾಷೆಯಲ್ಲಿ ಪ್ರಕಟಿಸಿರುವನು. ಅಮೇರಿಕಾ ದೇಶದಲ್ಲಿ ಜಡ್ಜಿಯಾಗಿದ್ದು ಮೃತಿಹೊಂದಿದೊಬ್ಬ ಪುರುಷನು 'ಎಲ್ಸಾಬಾರ್ಕರ್' ಎಂಬು

ವರ ಮೂಲಕ ಅನೇಕ ಐಹಿಕಾಮುಷ್ಮಿಕ ವಿಷಯಗಳನ್ನು ತಿಳಿಸಿರುವ ಲೋಕದಿಂದ ಬರೆದಿರುವನು. "ಅವು ಜೀವಿಸಿರುವ ಮೃತನ ಕಾಗದಗಳು (*Letters from a living deadman*) ಜೀವಿಸಿರುವ ಮೃತನ ಕಾಗದಗಳು (*War letters from a living dead man*) ಜೀವಿಸಿರುವ ಮೃತನ ಅಂತ್ಯ ಕಾಗದಗಳು (*Last letters from a living dead man*) ಎಂಬುವ ಮೂರು ಗ್ರಂಥಗಳಾಗಿ ಪ್ರಕಟಿಸಲ್ಪಟ್ಟಿರುವುವು. ಮನಶ್ಶಾಸ್ತ್ರದ ಪರಿಶೋಧಕರೂ ಸಹಿತ ಮರಣಾನಂತರ ಜೀವಿಸಿರುವುದು ನಿಶ್ಚಯವೆಂಬುದಕ್ಕೆ ಅನೇಕ ನಿದರ್ಶನಗಳನ್ನು ಹೊಂದುತ್ತಿರುವರು. ಜೀವನು ಮೃತನಾಗಿ ಸ್ಥೂಲಶರೀರವನ್ನು ಬಿಟ್ಟು, ಸೂಕ್ಷ್ಮ ಶರೀರದಿಂದ ಭುವರ್ಲೋಕ (ನರಕ) ಸುವರ್ಲೋಕ (ಸ್ವರ್ಗ) ಗಳಲ್ಲಿ ತನ್ನ ಪಾಪಪುಣ್ಯಾನುಗುಣವಾಗಿ ವಾಸಮಾಡಿದ ಮೇಲೆ ಅಲ್ಲಿ ಆ ಸೂಕ್ಷ್ಮ ಶರೀರವನ್ನೂ ಬಿಟ್ಟು ಕಾರಣ ಶರೀರದಿಂದ ಮಹರ್ಲೋಕವೆಂಬ ಸ್ವಸ್ಥಾನವನ್ನು ಸೇರಿ, ಕೆಲವು ಕಾಲವಿದ್ದು, ಪುನಃ ಸ್ವಕರ್ಮಾನುಗುಣವಾಗಿ ಸುವರ್ಲೋಕ ಭುವರ್ಲೋಕಗಳ ಸೂಕ್ಷ್ಮ ಶರೀರವನ್ನೂ, ಭೂಲೋಕದ ಸ್ಥೂಲ ಶರೀರವನ್ನೂ ಧಾರಣ ಮಾಡುವನು. ಕಾರಣ ಶರೀರವು ಮಾತ್ರ ಬದಲಾಗದೆ ಮುಕ್ತನಾಗುವ ವರೆಗೂ ಒಂದೇ ಇರುವುದು. ಇತ್ಯಾದಿಯಾಗಿ ಮೃತ್ಯುತತ್ವವನ್ನು ಪುರಾಣಾದಿ ಗ್ರಂಥಗಳು ವಿಸ್ತಾರವಾಗಿ ಬೋಧಿಸುವವು. ಜೀವನು ತನ್ನ ಅಂತ್ಯಕಾಲದಲ್ಲಿ ಇಹಲೋಕದ ವಿಷಯಗಳಲ್ಲಿ ಹೆಚ್ಚು ಮಮತೆಯಿಂದ ಮೃತನಾದರೆ, ಭುವರ್ಲೋಕವಾಸಕ್ಕೆ ಪೂರ್ವದಲ್ಲಿ ಕೆಲವುಕಾಲ ಪಿಶಾಚಜನ್ಮವನ್ನು ಧಾರಣಮಾಡುವನು. ಆಗ ಅವನಿಗೆ ಸೂಕ್ಷ್ಮಶರೀರದ ಒಂದು ಭಾಗವಾದ ಭೌಮಾದೇಹವಿರುವದು. ಆ ದೇಹವು ಆಕಾಶತತ್ವದಿಂದ ನಿರ್ಮಿತವಾಗಿರುವುದರಿಂದ ಇತರ ಜೀವಿಗಳ ಶರೀರದಲ್ಲಿ ಪ್ರವೇಶ ಮಾಡಲಿಕ್ಕೂ ಯಾವುದಾದರೊಂದು ಸ್ಥೂಲಾಕಾರವನ್ನು ಹೊಂದಲಿಕ್ಕೂ ಬರುವ ಶಕ್ತಿಯನ್ನು ಪಿಶಾಚವು ಪಡೆದಿರುವುದು ಎಂಬ ವಿಷಯವು ಶಾಸ್ತ್ರಗಳಿಂದ ತಿಳಿದುಬರುತ್ತದೆ. ಇಂತಹ ಪಿಶಾಚಗಳಿಗೆ ಮಹಾತ್ಮರ ದರ್ಶನವು ಆಕಸ್ಮಾತ್ತಾಗಿ ಪ್ರಾಪ್ತವಾದರೆ, ಅವರ ಕೃಪೆಯಿಂದ ಪಿಶಾಚ ಜನ್ಮವನ್ನು ನೀಗಿ ಕೃತಕೃತ್ಯವಾಗುವ ಸಂಭವವೂ ಉಂಟೆಂದು, ತತ್ವದರ್ಶಿಗಳು ಹೇಳುವರು. ಅಂತೆಯೇ ನಯನಸ್ವಾಮಿಗಳಲ್ಲಿ ದಾಸತ್ವವನ್ನು ಪಡೆದ ಪಿಶಾಚದ ವಿಷಯವೂ ನಿಜವಿರುವದೆಂದು ನಮ್ಮ ವಿಶ್ವಾಸ.

ಶಂಕೆ:— ಜೀವಿತರಾಗಿರುವಾಗಳೇ ಸಮಾಧಿಯಲ್ಲಿ ಪ್ರವೇಶಿಸುವುದೂ, ಅನಂತರ ಅವರ ಸ್ಥೂಲಶರೀರದ ಗುರುತು ಮತ್ತೊಂದೆಡೆಯಲ್ಲಿ ಕಾಣಿಸಿಕೊಳ್ಳುವುದೂ ಸಾಧ್ಯವೇ? ಇತ್ಯಾದಿ.

ಸಮಾಧಾನ:— ಇದು ಎಲ್ಲರಿಗೂ ಸಾಧ್ಯವಲ್ಲ. ಯೋಗಿಗಳಿಗೆ ಮಾತ್ರ ಸಾಧ್ಯ. ಯೋಗದಿಂದುಂಟಾಗುವ ಸಿದ್ಧಿಗಳನ್ನು ಪಾತಂಜಲಾದಿ ಯೋಗಶಾಸ್ತ್ರಗಳಿಂದ ತಿಳಿದುಕೊಂಡರೆ, ಈ ಶಂಕೆಯುಂಟಾಗದು. ಯೋಗಿಗಳು ತಮ್ಮ ಯೋಗಬಲದಿಂದ ಇಷ್ಟಬಂದಾಗ ಸ್ಥೂಲಶರೀರವನ್ನು ಬಿಡಲಿಕ್ಕೂ ಪುನಃ ಧರಿಸಲಿಕ್ಕೂ ಸ್ವತಂತ್ರರಿರುವರು. ಅವರು ತಮ್ಮ ಸ್ಥೂಲಶರೀರದ ಯಾವ ಭಾಗವನ್ನಾದರೂ ಬೇಕಾದ ಸ್ಥಾನದಲ್ಲಿ ಪ್ರಕಟಪಡಿಸಲು ಸಮರ್ಥರಿರುವರು. ಶಿಷ್ಯೋದ್ಧಾರೇಚ್ಛೆಯಿಂದ ಸ್ಥೂಲಶರೀರ ತ್ಯಾಗಾನಂತರದಲ್ಲಿಯೂ ಸೂಕ್ಷ್ಮಶರೀರದಿಂದ ಭೂಲೋಕದಲ್ಲಿ ಅವರಿಗೆ ಸಂಚರಿಸಲಿಕ್ಕೆ ಬರುವುದು. ಆದ್ದರಿಂದಲೇ ಶಿವಯೋಗಿವರರಾದ ನಯನಸ್ವಾಮಿಗಳ ಅದ್ಭುತಸಮಾಧಿಯನ್ನೂ ಅವರ ಮಹತ್ವವನ್ನೂ ನಂಬದಿರಲಿಕ್ಕಾಗುವುದಿಲ್ಲ.

## ಉಪಸಂಹಾರ.

ಈಶ್ವರನು ನಿತ್ಯ ಮುಕ್ತನು. ಅಂದರೆ ಒಂದು ಕಾಲದಲ್ಲಿ ಮುಕ್ತನಾದಾತನಲ್ಲ. ಯಾವುದೋ ಒಂದು ಕಾಲದಲ್ಲಿ ಅನಿತ್ಯ ಮುಕ್ತನ ಉಪಾಸನಾ ಬಲದಿಂದ ಮುಕ್ತರಾದವರೇ ಬಸವೇಶ್ವರ, ರೇಣುಕಾಚಾರ್ಯ ಮೊದಲಾದ ಪ್ರಮಥಪುಂಗವರು. ಈ ಜನ್ಮದಲ್ಲಿ ಶಿವಯೋಗಬಲದಿಂದ ಮಹಾತ್ಮರೆನಿಸಿಕೊಂಡು, ದೇಹಪಾತಾನಂತರದಲ್ಲಿ ಮುಕ್ತಿಸುಖವನ್ನನುಭವಿಸುವವರೇ ನಯನಸ್ವಾಮಿಗಳಂತಹ ಪೂಜ್ಯಪಾದರು. ಇಂತಹ ಪೂಜ್ಯಪಾದರ ಅದ್ಭುತ ಚರಿತ್ರಗಳೇ ಐತಿಹಾಸಿಕ ದೃಷ್ಟಿಯಿಂದಲೂ ಶಾಸ್ತ್ರಪ್ರಮಾಣಯುಕ್ತಿಗಳಿಂದಲೂ ವಿಚಾರ ಮಾಡಿದರೆ, ಸತ್ಯಕ್ಕೆ ದೂರವಿಲ್ಲ ಎಂದ ಮೇಲೆ, ಬಸವ ರೇಣುಕಾದಿ ಪ್ರಮಥರ ಅವತಾರುಗಳ ಅಮಾನುಷಕೃತಿಗಳ ಮೇಲೆ ಕುತ್ಸಿತವಾಗಿ ಟೀಕಿಸಿ, ಸಮಾಜದ ಒಕ್ಕಟ್ಟನ್ನೇ ಹಾಳು ಮಾಡುತ್ತಿರುವುದೇಕೆ? ಅಂತಹ ಲೇಖನಗಳನ್ನು ಪ್ರಕಟಿಸುವದಕ್ಕಿಂತಲೂ ನಯನಸ್ವಾಮಿಗಳಂತಹ ಮಹತ್ಮರ ಅದ್ಭುತ ಚರಿತ್ರಗಳನ್ನು ಪ್ರಕಟಿಸಿದರೆ, ಪ್ರಮಥರ ವಿಷಯದಲ್ಲಿರುವ ನಾಸ್ತಿಕ ಭಾವವು ಕೆಲವು ಮಟ್ಟಿಗಾದರೂ ದೂರವಾದೀತೆಂದು ನಾವು ನಂಬಿರುವೆವು.

# ಛುರಿಕಾ.

(ಲೇಖಕ:—ಜೀರಗೆ ಬಸವಲಿಂಗಪ್ಪ, ಚೀಫಕೋರ್ಟು ಟ್ರಾನ್ಸ್ಲೇಟರ
ಅರಳೇಪೇಟೆ, ಬೆಂಗಳೂರು ಸಿಟಿ)

॥ಕಂದ॥

ಶಿವೆಯಗಾಣ್ಮನ ಸತ್ಕೃಪೆಯಿಂ।
ಶಿವಭಕ್ತ ಸುಹಿತಕರ ಛುರಿಕಾಹ್ವಯ ಕೃತಿಯಂ॥
ಶಿವಭಕ್ತ ಜನಕೆ ಪೇಳ್ದಂ।
ಸವಿನಯದಿಂ ಜೀರಗೆಯ ಬಸವಲಿಂಗಾರ್ಯಂ ॥೧॥

॥ಮಂದಾನಿಲಂ॥

ಲಿಂಗಾಂಗಿಗಳೆಲ್ಲರು ಬಗೆಯೊಂದೇ॥
ತುಂಗಗುಣದಿ ನಡೆಯಿಂ ನಲವಿಂದೇ ॥ಪಲ್ಲವಿ॥
ಒಂದು ಮರಕೆ ಪಲಕೊಂಬೆಗಳೆಂತೂ॥
ಒಂದು ಮನೆಗೆ ಪಲಕೋಣೆಗಳೆಂತೂ ॥೧॥
ಒಂದೊಡಲಿಗೆ ಪಲವಂಗಗಳೆಂತೂ॥
ಒಂದು ಮತಕೆ ಕುಲಭೇದಗಳಂತೂ ॥೨॥
ಕೊಂಬೆ ಮುರಿದು ಬೀಳಲ್ಮರವೆಲ್ಲಕೆ॥
ಕೋಣೆ ಬಿದ್ದು ಪೋಗಲ್ಮನೆ ಯೆಲ್ಲಕೆ ॥೩॥
ಅಂಗಲೋಪವಾಗಲ್ತನು ವೆಲ್ಲಕೆ॥
ಭಂಗವೆಂತಂತು ನಿಜದಿ ತಿಳಿಯಲಿಕೆ ॥೪॥
ಎಲೆಲೆ! ಕುಂದದಾಗಲ್ಕುಲವೊಂದಕೆ॥
ಬಲಿದ ಕಷ್ಟ ವೊದಗುಗು ಮತವೆಲ್ಲಕೆ ॥೫॥
ಅದರಿಂ ಲಿಂಗಿಗಳೊಳಗೋರೋರ್ವರ್॥
ಮುದದಿ ಭಂಗವಡಲಾಗದು ತಮ್ಮೊಳ್ ॥೬॥
ಎಲ್ಲಶಿವಾಂಶ ಭವರೆಂದರಿವುದು॥
ನಿಲ್ಲದೇಕದಿಂ ಸತತಂ ನಡೆವುದು ॥೭॥

ಆಚಾರದಿ ವಿವಿಧಾಧಿಕಾರಗಳ್ ॥
ಪ್ರಾಚುರ್ಯದಿ ಶಿವಭಕ್ತ ಜನಗಳೊಳ್ ॥೮॥

ಸುಗತಿಗೆ ತಾಂ ಸಲೆ ನೆಲೆಗೊಂಡಿರ್ಪವು ॥
ಮಿಗೆ ಕೀಳ್ಮೇಲಿನ ಭಾವಗಳಿಲ್ಲವು ॥೯॥

ಭಕ್ತಮಾಹೇಶರೆಂಬ ಭೇದಗಳ್ ॥
ಉಕ್ತಶೀಲದಿಂ ಸಲೆ ಬಂದವುಗಳ್ ॥೧೦॥

ಭಕ್ತಾಚರಣೆಯೊಳಿರ್ದೊಡೆ ಭಕ್ತಂ ॥
ಉಕ್ತ ಮಾಹೇಶ್ವರಾಚಾರಕ್ಕಂ ॥೧೧॥

ಶಕ್ತಿಯಿಂ ಬರಲ್ತಾಂ ಮಾಹೇಶಂ ॥
ವ್ಯಕ್ತದಿನಿದನರಿಯೆ ಭೇದನಾಶಂ ॥೧೨॥

ಭಕ್ತಗೆ ಗುರುಲಿಂಗ ಜಂಗಮುಕ್ಕಂ ॥
ಯುಕ್ತಿದಿ ದಾನವ ಕುಡುವುದೇ ಶೀಲಂ ॥೧೩॥

ಮಹೇಶಗೆ ಭಕ್ತರಿಂದೆ ದಾನವ ॥
ಸಾಹಸದಿಂ ಕೊಳ್ವುದೆ ಸದ್ವರ್ತನ ॥೧೪॥

ಇದರಿಂ ಮೇಲೆ ಪ್ರಸಾದಿ ಮತ್ತಂ ॥
ಸದಮಲ ಪ್ರಾಣಲಿಂಗಿ ಸುಶರಣಂ ॥೧೫॥

ಕಡೆಗೈಕ್ಯವೆಂಬ ಪದಗಳ್ಕ್ರಮದೊಳ್ ॥
ನಡೆತತ್ತಚ್ಛೀಲದಿ ಬಂದವುಗಳ್ ॥೧೬॥

ಓರ್ವಭಕ್ತನೇ ಪೂಜೆಯ ಮೊದಲೊಳ್ ॥
ಉರ್ವಿದ ಭಕ್ತನೊಡನೆ ಮಾಹೇಶಂ ॥೧೭॥

ಅರ್ಪಣಮಾಳ್ಪಾಗಳ್ಸುಪ್ರಸಾದಿ ॥
ಕೂರ್ಪಿಂ ಪ್ರಾಣಾಯಾಮದ ಸುಬಲದಿ ॥೧೮॥

ತನೆ ಮಾಳ್ಪಾಗಳ್ಪ್ರಾಣಲಿಂಗಿ ತಾಂ ॥
ಶಿವಪೂಜಕನು ಸತಿಭಾವದೆ ಶರಣಂ ॥೧೯॥

ಕಡೆಯೊಳ್ಲಿಂಗದಿ ಮನ ನಿಲ್ವಾಗಳ್ ॥
ಬಿಡದೈಕ್ಯನೆನಿಪನಿರದಾವಾಗಳ್ ॥೨೦॥

ಷಡಿಂದ್ರಿಯಗಳೊಳ್ಷಡ್ವಿಧಲಿಂಗವ ॥
ಬಿಡದುರೆ ಭಾವಿಸಿ ಗೋಷ್ಠಿಯ ಗೆಯ್ಯುವ ॥೨೧॥
ಕ್ರಮದೊಳಗೋರ್ವನೆ ಷಟ್ಸ್ಥಲಯುಕ್ತಂ ॥
ಕ್ರಮದದಿನಾಗಿರ್ಪನಘವಿಮುಕ್ತಂ ॥೨೨॥
ಮುಕ್ತಂ ಮೂಲಾಧಾರಂ ಮೊದಲಾ ॥
ದುತ್ತಮ ಷಟ್ಚಕ್ರಗಳೊಳ್ಸಕಲಾ ॥೨೩॥
ಲಿಂಗಗಳಂ ಭಾವಿಸಿ ಸದ್ಗೋಷ್ಠಿಯ ॥
ಸಾಂಗದಿ ನಡೆಸುವುದರೊಳೋರ್ವನೆ ಶಿವ ॥೨೪॥
ಭಕ್ತಂ ಭಕ್ತಾದಿ ಷಟ್ಸ್ಥಲಗಳಂ॥
ವ್ಯಕ್ತದಿ ಪೊಂದಿರ್ಪವನಾಗಿರ್ಪಂ ॥೨೫॥
ಕಾರ್ಯದ ಭೇದದಿನಿಂತೊಬ್ಬನೆ ದಲ್ ॥
ಸೂರ್ಯಂ ಬೇರ್ಬೇರೆಯ ತಾಣದಿ ಕೇಳ್ ॥೨೬॥
ಭಿನ್ನಂಭಿನ್ನಮದಾಗಿ ಕಾಣುವೊಲ್ ॥
ಭಿನ್ನದಿ ಕಾಣ್ಬನ ಭಿನ್ನನೊಳಗೆ ಒಲ್ ॥೨೭॥
ಅದರಿಂ ಶಿವಭಕ್ತರ್ಗಂತವರೊಳ್ ॥
ಗೊದವಿಸಿ ಭೇದವ ಸತತಂ ಕಲಹವ ॥೨೮॥
ಒರ್ವಂ ಮಿಗಿಲೋರ್ವಂ ಕೀಳೆನುತಂ ॥
ಉವುರ್ತ್ತಿಸಗದಿರುವುದೆಳ್ಳನಿತಂ ॥೨೯॥
ಭಕ್ತಮಾಹೇಶ್ವರರ್ಸಲಿತನುವಿನ ॥
ವ್ಯಕ್ತದ್ವಿಚಕ್ಷುಗಳವೊಲ್ಗಾಡಿಯ ॥೩೦॥
ದ್ವಿಚಕ್ರಗಳ ವೊಲ್ಗಳಿಗೆಯ ಯಂತ್ರದ ॥
ಸುಚಲನದೆರಡುಂ ಮುಳ್ಳ್ಪ್ರೀತಿಯ ॥೩೧॥
ಮನದಿಂದೋರೋರ್ವರ್ಬೆರ್ಸುಗೆವಡೆದು ॥
ಘನತರದಿಂ ಕಾರ್ಯಗಳಂ ಗೆಯ್ವುದು ॥೩೨॥
ಒಗ್ಗಟ್ಟೊಡೆದಡೆ ಸರ್ವವಿನಾಶಂ ॥
ಜಗ್ಗದಪ್ಪುದುರೆ ಮತಕಿರದನಿಶಂ ॥೩೩॥
ಪೊಸೆದ ಪಗ್ಗದೊಳಗುರಿಯದು ಸಡಿಲಲ್ ॥
ಎಸೆವ ಪಿಂಡಿನಿಂ ಖಗಗಳ್ಬದುರಲ್ ॥೩೪॥

ಗಟ್ಟಿಸುರಿಗೆ ಶಿಖಿಯಿಂ ನೀರಾಗಲ್ ॥
ಪಟ್ಟಿಂದಂ ಬಲಗುಂದದೆ ನಿಜದೊಳ್ ॥೩೫॥

ಮೂರುಂಗೂಳಿಗಳೊಂದು ಪೊಲದೊಳಗೆ ॥
ಸೇರಿ ಪೀತಿಯಿನೊಂದೊಂದುಂ ಮೇಗೆ ॥೩೬॥

ಸಲೆಯಗಲದೆ ತಾವೊಂದೆ ಸ್ಥಲದೊಳೆ ॥
ಗೆಲವಿಂದಂ ಮೇಯುತ್ತಿರೆ ಹಿತದೊಳೆ ॥೩೭॥

ಇವುಗಳ ಘನದಿಂದಂ ತಾಂ ಭಕ್ಷಿಸಿ ॥
ತವೆ ಪಸಿವಂ ಪಿಂಗಿಸಿ ಕೊಳೆ ಯೋಚಿಸಿ ॥೩೮॥

ಒಂದುರು ಸಿಹ್ಮಂ ಬಲದಿಂ ಯತ್ನಿಸೆ॥
ಚಂದದಿ ಸಾಗದದಾಯಿತು ಪರಿಕಿಸೆ॥೩೯॥

ಇದಕೇನಂ ಮಾಡಲ್ಬೇಕೆಂದುರೆ॥
ಪದೆದೊಂದು ನರಿಯು ಬಳಿಗಂ ಪೋಗುತೆ ॥೪೦॥

ಗೂಳಿಯು ಗೂಳಿಗಳಿಗೆ ಭೇದವನುರೆ॥
ಲೋಲದಿ ಕಲ್ಪಿಸಬೇಕೆಂದನುವೊಳೆ॥೪೧॥

ಯೋಚನೆಗೆಯ್ದಂತೆಸಗಲ್ನರಿಗಂ ॥
ಸೂಚನೆಯಿಂದಪ್ಪಣೆ ಯಿತ್ತುದು ತಾಂ ॥೪೨॥

ಅದರಂತಾನರಿಯಾ ಗೂಳಿಗಳೊಳ್ ॥
ಚದುರಿಂ ಭೇದವ ಕಲ್ಪಿಸೆ ಜವದೊಳ್ ॥೪೩॥

ಗೂಳಿಗಳೊಂದೊಂದುಂ ಶಿಟ್ಟಿಂದಂ ॥
ತಾಳದೆ ಬೇರ್ಬೇರೆಯು ಜಾಗದೊಳಂ ॥೪೪॥

ನೇಹವ ಸಲೆ ತಾಂ ದೂರಂಗೆಯ್ಯುತೆ ॥
ಓಹೋ! ಮೇಯಲ್ತೊಡಗಿದವಲೆಯುತೆ ॥೪೫॥

ಇದ ಸಿಹ್ಮಂ ಚೆನ್ನಿಂದಂ ತಿಳಿಯುತೆ ॥
ಪದೆದಾಗೂಳಿಗಳಂ ಸಲೆ ನಲಿಯುತೆ ॥೪೬॥

ಒಂದೊಂದಂ ಬೇರ್ಬೇರೆಯು ಕಾಣದೆ ॥
ಚಂದದಿ ಭಕ್ಷಿಸಿ ತಣಿಯಿತು ಸುಘನದೆ ॥೪೭॥

ಒಬ್ಬ ಪಿತೃಗೆ ಮೂವರ್ಸುತರಿರ್ದರ್ ॥
ಒಬ್ಬೊಬ್ಬರ್ ಡಿಸಾಡುತಲಿರ್ದರ್ ॥೪೮॥

ಇದ ದಿನವೀಕ್ಷಿಸಿ ಪಿತೃ ಚಿಂತಿಸುತಂ ॥
ಸದಯುದಿನವರಂ ಬಳಿಗೆ ಕರೆಯುತಂ ॥೪೯॥

ಒಂದು ಕಟ್ಟುಗೆಯ ಪೊರೆಯನಿದಿರಿನೊಳ್ ॥
ಚಂದದಿ ನಿಟ್ಟಿದ ಬೇರ್ಪಡಿಸಿದೆ ದಲ್ ॥೫೦॥

ನೀವೊಬ್ಬೊಬ್ಬರಾಗಿ ಮುರಿಯಿರೆನಲ್ ॥
ತಾ ವೊಬ್ಬೊಬ್ಬರೆ ಯತ್ನಿಸಿದರ್ದಲ್ ॥೫೧॥

ಮುರಿಯಲ್ಕಾಗದಿರಲ್ಕೆ ತಾಮವರ್ ॥
ಅರಿದು ಕಟ್ಟುಗೆಗಳಂ ಸಡಿಲಿಸಿ ದಲ್ ॥೫೨॥

ಒಂದೊಂದಂ ಕೊಟ್ಟೊಡೆ ತಾವಾಗಳ್ ॥
ಒಂದೇಟಿಗೆ ಮುರಿಯುವೆವೆಂದರ್ಬಲ್ ॥೫೩॥

ಅದಕೆ ಪಿತೃ ನಿಮ್ಮ ಗತಿಯಂತೆಯೆ ನಡೆ ॥
ಪದೆದು ನೀವೊಟ್ಟನಿಂದಿರದಿರ್ದೊಡೆ ॥೫೪॥

ಅಪ್ಪುದು ನೀವಿಲ್ಲಿಂ ಮುಂದರಿ ಸಲೆ ॥
ತೆಪ್ಪನೇಕವಿಂ ಬಾಳಿರಿ ಎನುತಲೆ ॥೫೫॥

ಸುತರಿಗೆ ಬೋಧೆಯ ಗೆಯ್ಯಲ್ತಾನೆಲೆ ॥
ಹಿತವಿದೆಂದು ನಡೆಯುತೆ ಪೋದರ್ಸಲೆ ॥೫೬॥

ಶಿವಭಕ್ತರ್ತಮ್ಮೊಳ್ತಾಯಿಸುತರ್ ॥
ತವೆ ತುರುಕರುಗಳ್ರವಿಯಿಳೆ ಮನುಜರ್ ॥೫೭॥

ಕುಜವಿಹಗಂಗಳ್ನದಿ ಸಾಗರಗಳ್ ॥
ನಿಜದಿ ಪರಸ್ಪರರಾಗದಿನಿರ್ಪೊಲ್ ॥೫೮॥

ಒಬ್ಬೊಬ್ಬರ್ತಾಂ ಪ್ರೇಮದ ಭಾವದೆ ॥
ನಿಬ್ಬರದಿಂ ವರ್ತಿಸುವುದು ತಪ್ಪದೆ ॥೫೯॥

ಇವ ಗೌಡಂ ಸಲೆ ಇವ ಶೆಟ್ಟಿ ವಲಂ ॥
ಇವ ವಿಭೂತಿಯವನಿವ ವಿರಕ್ತಂ ॥೬೦॥

ಇವನಾರಾಧ್ಯನಿವರೊಡೆಯರಯ್ಯಂ ॥
ಇವ ಪಂಚಾಚಾರಂ ಬಡಗಲವಂ ॥೬೧॥

ಎನುತಿವು ಮೊದಲಾದ ದಾನಂಗಳಂ ॥
ಘನದಿಂದುಸುರುತೆ ತಂತಮ್ಮೊಳಗಂ ॥೧೨॥
ಪೆರ್ಚಿಕೆ ಕುಂದುಗಳಂ ಸಲೆ ಕಲ್ಪಿಸಿ ॥
ಕೊರ್ಚಿಪೋಣರ್ಪುದುರಿ ಮತಕಂ ಕೊರಳಸಿ ॥೧೩॥
ಶಿವಭಕ್ತಂ ತಾನಾವ ಭೇದಕಂ ॥
ತವೆ ಸಂದಿರ್ದೊಡಮಾಚಾರದೊಳಂ ॥೧೪॥
ಪರಿಶುದ್ಧಂ ತಾಂ ಸಲೆಯಾಗಿರ್ಪಂ ॥
ಉರೆ ನೀಚ ವಸ್ತುಗಳ ತಾಂಕೊಳ್ಳಂ ॥೧೫॥
ಸದಾಲಿಂಗಮಂ ದೇಹದೊಳೆನಸುಂ ॥
ಬಿಡದೆ ಧರಿಸಿರ್ಪನಭವಪೂಜೆಯಂ ॥೧೬॥
ಸತತಂ ಮಾಳ್ಪಂ ಗುರುಲಿಂಗಚರಕೆ ॥
ನುತದಾನಗಳಂ ಕೊಡುವಂ ಸುಮನಕೆ ॥೧೭॥
ಹಿತಮಪ್ಪೋಲ್ಪನ ಸೇವೆಯುಮಾಳ್ಪಂ ॥
ಚ್ಯುತಿ ಶಿವಮತಕಾಗಲ್ತನುವರೆವಂ ॥೧೮॥
ಭೇದಕೆ ಶಿವಮತಮುರಿಸಿರ್ಪರೆಯೆಂ ॥
ಸಾಧಿಸಿ ಷಡ್ಗತಿಪೊಂದಲ್ಕಲ್ಲೆಂ ॥೧೯॥
ನಾಂ ಮಿಗಿಲೆಂದೊಡೆ ಮಿಗಿಲೆಂತಾಯಿತು ॥
ಕೆಂಮನೆ ಕೀಳೆನೆ ಕೀಳೆಂತಾಯಿತು ॥೨೦॥
ಪೇಳ್ವುದರೊಳ್ಕಿಳ್ಮೇಲುಗಳಪ್ಪವೆ ॥
ಬಾಳ್ವುದರೊಳೆ ಶ್ರೇಷ್ಠತೆ ಸಮನಿಕುಮಲೆ ॥೨೧॥
ಜಂಗಮಮೆನ್ನುತೆ ಸತತಂ ಸುಳ್ಳಂ ॥
ಪಿಂಗದೆ ಪೇಳುತೆ ಭಂಗವ ಪಡುತಂ ॥೨೨॥
ಧನದಾರ್ಜನೆಯುಂ ಸಲೆ ಮಾಡುತ್ತಿರೆ ॥
ಎನಸುಂ ಜಂಗಮತನಮವಗೆಂತೆಲೆ ॥೨೩॥
ಭಕ್ತಂ ತಾನೆನ್ನುತೆ ಯುಸುಗೊಲೆಗಳ ॥
ವ್ಯಕ್ತದಿಗೆಯ್ಯುತೆ ಗರ್ವದ ನುಡಿಗಳ ॥ ೨೪ ॥
ಸಂತತಮುಸುರುತೆ ಮದಯುತನಾಗಿರೆ ॥
ಅಂತ ಸುಭಕ್ತತ್ವಮದವಗೆಂತುರೆ ॥ ೨೫ ॥

ಡಂಭದ ನುಡಿಗಳಿನಾವಾಲಾಭಂ ॥
ಕುಂಬಿಂದಿಲ್ಲದರಿಂ ಸಂಕ್ಷೋಭಂ ॥ ೭೬ ॥
ಆಚಾರಂ ಪೊರಕರಿಯಲ್ಕಾಗದು ॥
ನೀಚತ್ವಮದದರಿಂ ಸಂಧಿಸುವುದು ॥ ೭೭ ॥
ಛಾಯಾಕರ್ಷಣ ಧೃತಿಯಿರದಿಳೆಯೊಳ್ ॥
ಆಯದಿ ಬಿಸಿಲಿಗೆ ತಾಂ ಬೀಳ್ತೊಡೆದಲ್ ॥ ೭೮ ॥
ಧವಳಂ ಪೋಗಿ ಕರಿಯಬಣ್ಣಕೆಸಲೆ ॥
ಜವದಿ ತಿರುಗುವುದು ಬಿಡದಂತೆಯೆಯೊಲಿ ॥ ೭೯ ॥

ತನ್ನುತ್ಕೃಷ್ಟತ್ವವ ಪೊರಕುಸುರುತೆ ॥
ಬಿನ್ನಣದ ನಟನೆಗಳ ಸಲೆನಟಿಸುತೆ ॥ ೮೦ ॥
ವಿಕೃತಿಗಳಂ ಶಿವಭಕ್ತಂ ಮಾಡಲ್ ॥
ಸುಕೃತಮದರಿಂದಮಳಿಗುಮಿರದೆ ದಲ್ ॥ ೮೧ ॥
ಶಿವಭಕ್ತಪಥದ ಸತ್ಯವ ತಿಳಿದಗೆ ॥
ತವೆ ಭೇದಭಾವಮಿಲ್ಲೆಂದುಂಮಿಗೆ ॥ ೮೨ ॥

ಆವ ಶಿವಮತದಂ ಬರದೊಳ್ಮಲಿನವ ॥
ನವಿನಯದಿಂ ಸಮವಿಷಮಸ್ಥಾನವ ॥ ೮೩ ॥
ತಾನೆಂದೂ ಸಲೆ ಕಾಣುವದಿಲ್ಲಂ ॥
ಹೀನದ ನುಡಿಯಿಂದಳಿವಂ ಪೊರ್ದಂ ॥ ೮೪ ॥
ಶಿವಭಕ್ತರೆ ಪಲಯಂತ್ರಗಳ್ತಾಂ ॥
ತವೆ ಸೇರಿದುಗುಲಗಳ ಭರದಿಂದಂ ॥ ೮೫ ॥

ಮತ್ತಂ ಮೋಡಂಗಳ್ತುಮಭ್ರದಿ ॥
ಸುತ್ತಿ ಜವದಿ ಸಲೆಮಳೆಯಂ ಸುಮುಖದಿ ॥ ೮೬ ॥
ಲೋಕಕ್ಕುಂಟಾಗಿಸಿ ಸಲೆಹಿತಮಂ ॥
ಜೋಕೆಯೊಳೆಂತುರಿಗೆಯ್ವವು ಸತತಂ ॥ ೮೭ ॥
ಅಂತೆಯೆ ಸೀ ಮೋಕದಿಸಲೆ ನಡೆಯುತೆ ॥
ಸಂತತ ಜಗಕೊಳ್ತೆಸಗಿರಿ ನಲಿಯುತೆ ॥ ೮೮ ॥



# ಶ್ರೀ ಬಸವಪ್ರಭು ಮಹಾಸ್ವಾಮಿಗಳು ಯಾರು?

(ಲೇಖಕಃ— ಚನ್ನಪ್ಪಾ ಹುಂಡೇಕಾರ ಬಿ. ಎ. ಎಲ್. ಎಲ್. ಬಿ.
ವಕೀಲ ಧಾರವಾಡ.)



ಇದೇ ವರ್ಷದ ಜುಲೈ ತಿಂಗಳದಲ್ಲಿ ಹೊರಟ ಶಿವಾನುಭವದ ೪ನೇ ಸಂಚಿಕೆಯಲ್ಲಿ ಶಿ॥ ಮಾ॥ ಬುದ್ಧಯ್ಯನವರು ಮಗೆಯ್ಯನವರು ಪುರಾಣಿಕ ಸಾಕೀನ ತೇರದಾಳ ಇವರು ಪ್ರಸಿದ್ಧ ಮಾಡಿದ ಪ್ರಭುದೇವರ ಪದಗಳು ಎಂಬ ಪುಸ್ತಕದ ವಿಮರ್ಶನೆಯನ್ನು ಮಾಡುವಾಗ್ಗೆ ರಾವಸಾಹೇಬ ಹಳಕಟ್ಟಿಯವರು ಶ್ರೀ ಬಸವಪ್ರಭುದೇವರು ಅಲ್ಲಮಪ್ರಭುದೇವರ ತರುವಾಯದವರೆಂದೂ, ಮತ್ತು ಅವರ ತರುವಾಯ ೧೨ನೇ ಪೀಠಸ್ಥರೆಂದೂ ವ, ಬಸವಪ್ರಭುವು ೧೫ನೇ ಶತಮಾನದಲ್ಲಿದ್ದನೆಂದೂ ಶ್ರೀ ಮನ್ನಿರಂಜನ ವಂಶರತ್ನಾಕರವೆಂಬ ಗ್ರಂಥದ ಆಧಾರ ತೋರಿಸಿ ಅಭಿಪ್ರಾಯಪಟ್ಟದ್ದಾರೆ. ಮತ್ತು ಬಸವಪ್ರಭುದೇವರು ಶೂನ್ಯಸಿಂಹಾಸನವನ್ನು ಏರಿದ ತರುವಾಯ ಕೆಳದೀ ದೇಶಕ್ಕೂ, ಅಲ್ಲಿಂದ ಬಾಗಲಕೋಟೆ ತಾಲೂಕಿನಲ್ಲಿರುವ ಹಿರೇಸೂರ, ಕಿರೇಸೂರ ಗ್ರಾಮಗಳಿಗೂ ಅಲ್ಲಿಂದ ಹುಕ್ಕೇರಿ ಸೀಮೆಗೂ, ದಯಮಾಡಿಸಿ ಹನಗಂಡಿಯಲ್ಲಿದ್ದ ಜೈನ ಅರಸನಿಗೆ ವೀರಶೈವ ದೀಕ್ಷೆಯನ್ನು ಮಾಡಿ, ಮುಂದೆ ತೇರದಾಳ ಗ್ರಾಮಕ್ಕೆ ಹೋಗಿ, ಅಲ್ಲಿ ನಿರ್ವಯಲವಾದರೆಂದೂ, ಮತ್ತು ಮೂವರು ಕವಿಗಳಲ್ಲೊಬ್ಬನಾದ ಮಗಿಯನರೇಂದ್ರನೇ ಶ್ರೀ ಬಸವಪ್ರಭುದೇವರಿಂದಲೇ ವೀರಶೈವ ದೀಕ್ಷೆ ಹೊಂದಿದ ಹನಗಂಡಿಯ ಧೊರಿಯೆಂದೂ, ಅಭಿಪ್ರಾಯಪಟ್ಟಿದ್ದಾರೆ. ಇದಲ್ಲದೆ ಬುದ್ಧಯ್ಯನವರು ಬರೆದ ಪುಸ್ತಕದಲ್ಲಿದ್ದ ೫ನೇ ಪದದ ಮೇಲಿಂದ ಶ್ರೀ ಬಸವಪ್ರಭುದೇವರು ಗೋಕಾವಿಯ ಹತ್ತಿರುವ ಗೂಗಿಯಕೊಳ್ಳಕ್ಕೆ ಹೋಗಿದ್ದರೆಂದು ಮತ್ತು ೩೭ನೇ ಪಾನಿನಲ್ಲಿರುವ ಮೂರನೇ ಪದದಲ್ಲಿ ಉಲ್ಲೇಖಿಸಲ್ಪಟ್ಟ "ಪ್ರಜ್ವಲಿಸಿತು ಪ್ರಭೆ ಪುಣ್ಯದ ಮಲ್ನಾಡ" ಎಂಬದರ ಮೇಲಿಂದ ಅವರು ಕೆಳದೀ ನಾಡಿನಲ್ಲಿ ಇದ್ದದ್ದರ ಉಲ್ಲೇಖವಾಗಿರಬೇಕೆಂದು ಅನುಮಾನ ಮಾಡಿರುತ್ತಾರೆ. ಆದರೆ ಶಿ॥ ಮಾ॥ ಬುದ್ಧ

ಯ್ಯನವರು ಪ್ರಸಿದ್ಧ ಮಾಡಿದ ಪುಸ್ತಕವನ್ನು ಆಮೂಲಾಗ್ರ ಸಂಶೋಧಕ ಬುದ್ಧಿಯಿಂದ ಪರಿಶೋಧಿಸಿ ನೋಡಿದರೆ, ರಾವಸಾಹೇಬ ಹಳಕಟ್ಟಿ ಯವರ ಅಭಿಪ್ರಾಯವು ತಪ್ಪು ಇದ್ದಂತೆ ಕಾಣಿಸುತ್ತದೆ. ರಾವಸಾಹೇ ಬರು ಅನ್ನುವಂತೆ ಶ್ರೀ ಅಲ್ಲಮಪ್ರಭುವು ವ, ಬಸವಪ್ರಭುವು ಬೇರೆ ಬೇರೆ ಇರದೆ ಅಲ್ಲಮಪ್ರಭುವೇ ಬಸವಪ್ರಭುವೆಂಬ ಪರ್ಯಾಯನಾಮವನ್ನು ಧರಿಸಿದಂತೆಯೂ ಮತ್ತು ೧೫ನೇ ಶತಮಾನದಲ್ಲಿರದೆ ೧೨ನೇ ಶತಮಾನ ದಲ್ಲಿದ್ದಂತೆಯೂ ಕಂಡು ಬರುತ್ತದೆ. ಇದಲ್ಲದೆ ಬಸವಪ್ರಭುವೇ ಅಲ್ಲಮ ಪ್ರಭುವೆಂದು ನಿರ್ಧರಿಸಿದರೆ ಆವನು ಹನಗಂಡಿಯ ಧೊರೆಯಾದ ಮಗಿ ಯನರೇಂದ್ರನಿಗೆ ವೀರಶೈವ ದೀಕ್ಷೆಯನ್ನು ಮಾಡಲಿಲ್ಲವೆಂದೂ ಮತ್ತು ಬಾಗಲಕೋಟೆ ತಾಲೂಕಿನಲ್ಲಿರುವ ಹಿರೇಸೂರ, ಕಿರೇಸೂರ ಗ್ರಾಮಗ ಳಿಗೆ ಹೋಗಲಿಲ್ಲವೆಂದೂ ಹೇಳಬಹುದು.

ಅಲ್ಲಮಪ್ರಭುವಿಗೆ ಅನೇಕ ಪರ್ಯಾಯನಾಮಗಳಿದ್ದು ಬಸವ ಪ್ರಭುವು ಎಂಬ ನಾಮವೂ ಕೂಡಾ ಒಂದು ಪರ್ಯಾಯ ನಾಮವಾ ಗಿರುವದರಿಂದ ಈ ವಿಷಯದಲ್ಲಿ ಸ್ವಲ್ಪ ವಿಚಾರ ಮಾಡುವದು ಅವಶ್ಯ ವೆಂದು ಅನಿಸುತ್ತದೆ. ಶಿ॥ ಮೂ॥ ಬುದ್ಧಯ್ಯನವರು ತಮ್ಮ ಪುಸ್ತಕದ ಪ್ರಸ್ತಾವನದಲ್ಲಿ ಈ ಮೂವರು ಕವಿಗಳಲ್ಲಿ ಅಂದರೆ:— (೧) ಮಗಿಯ ನರೇಂದ್ರ (೨) ಚನ್ನಶ್ರೀಪ್ರಭು (೩) ಗುರುಬಸವಃ— ಪ್ರತಿಒಬ್ಬರು ೧,೧೦೦ ಪದಗಳನ್ನು ರಚಿಸಿದರೆಂದು ಐತಿಹ್ಯವುಂಟೆಂದು ಬರೆದಿದ್ದಾರೆ. ಆದರೆ ದುರ್ದೈವದಿಂದ ಈ ಮೂವರು ಕವಿಗಳ ಒಟ್ಟು ೧೧೪ ಪದಗಳೇ ಉಪ ಲಬ್ಧವಿರುತ್ತವೆ. ಮತ್ತು ಈ ಪುಸ್ತಕದಲ್ಲಿ ಇತರ ಭಕ್ತರವು ೧೫ ಪದ ಗಳು ಸೇರಿಸಲ್ಪಟ್ಟಿವೆ. ಅಂತು ಒಟ್ಟು ೧೨೯ ಪದಗಳಲ್ಲಿ ೨ ಪದಗಳು ಶ್ರೀ ಅಲ್ಲಮಪ್ರಭುವಿಗೆ ಸಂಬಂಧಿಸಿರುವದಿಲ್ಲ. ಉಳಿದ ೧೨೭ ಪದಗಳನ್ನು ಸಂಶೋಧಕ ಬುದ್ಧಿಯಿಂದ ಓದಿದರೆ ಬಸವಪ್ರಭುವು ಬೇರೆಯಾಗಿರದೆ ಅಲ್ಲಮಪ್ರಭುವೇ ಬಸವಪ್ರಭುವೆಂದು ಮತ್ತು ೧೫ನೇ ಶತಮಾನದಲ್ಲಿ ರದೆ ೧೨ನೇ ಶತಮಾನದಲ್ಲಿದ್ದನೆಂದು ಕಂಡು ಬರುತ್ತದೆ. ಇದನ್ನೇ ಶ್ರೀ ಮನ್ನಿರಂಜನ ವಂಶರತ್ನಾಕರ ಗ್ರಂಥದ ಆಧಾರದಿಂದಲೂ ವ, ಶ್ರೀಸಿದ್ಧ ಲಿಂಗ ಯತಿಗಳ ವಚನದಿಂದಲೂ ತೋರಿಸಬಹುದು.

ಈಗ ಉಪಲಬ್ಧವಿದ್ದ ೧೨೭ ಪದಗಳ ಮೇಲಿಂದ ಶ್ರೀ ಅಲ್ಲಮಪ್ರ ಭುವಿಗೆಃ— (೧) ನಿರಂಜನ (೨) ನಿರ್ಮಾಯ (೩) ಮಾಯಾಕೋಲಾ

ಹಲ (೪) ಗುಹೇಶ್ವರ (೫) ಗುಹೇಶ (೬) ಪ್ರಭು (೭) ಪ್ರಭುಲಿಂಗ (೮) ಜಂಗಮಲಿಂಗ (೯) ಅಲ್ಲಮ (೧೦) ಅಲ್ಲಮೇಶ (೧೧) ಅಲ್ಲಯ್ಯ (೧೨) ಅಲ್ಲಮಪ್ರಭು (೧೩) ಚನ್ನಪ್ರಭು (೧೪) ಬಸವಪ್ರಭು (೧೫) ಮಗಿಪ್ರಭು ಮುಂತಾದ ಅನೇಕ ಪರ್ಯಾಯ ನಾಮಗಳಿದ್ದಂತೆ ಕಂಡು ಬರುತ್ತದೆ. ಮತ್ತು ಬುದ್ಧಯ್ಯನವರ ಪುಸ್ತಕದ ೨೦ನೇ ಪಾನಿನಲ್ಲಿರುವ ೬೦ನೇ ಪದದಲ್ಲಿ ಮಗಿಯನರೇಂದ್ರ ಕವಿಯು ಅಲ್ಲಮನೆಂದೂ, ಬಸವಪ್ರಭು ಎಂದೂ ಸಂಬೋಧಿಸಿದ್ದಾನೆ.

ಪದ:—“ಜೋ ಜೋ ಯೆನ್ನಿ ಅಸಮ ಅಲ್ಲಮಗೆ। ಜೋ ಜೋ ಯೆನ್ನಿ ಬಸವ ಪ್ರಭುವಿಗೆ” ॥ ಇತ್ಯಾದಿ.

ಮತ್ತು ಬೇರೆ ಬೇರೆ ಭಕ್ತರ ಪ್ರಭುದೇವರ ಪದಗಳ ಪೈಕಿ ೪೩ನೇ ಪಾನಿನಲ್ಲಿರುವ ೭ನೇ ಪದದಲ್ಲಿ ಬಸವಪ್ರಭುಯೆಂದು ಉಲ್ಲೇಖಿಸಲ್ಪಟ್ಟಿದೆ.

ಪದಃ— ನಿರುಪಮ ನಿತ್ಯ ನಿರಂಜನ ಸಚ್ಚಿತ್। ವರಬಸವ ಪ್ರಭು ವಿನ ಧ್ಯಾನ ಮಾಡೋ ಬಿಡದೆ. ॥೩॥

ಇದೇ ಪುಸ್ತಕದ ೪೧ನೇ ಪಾನಿನಲ್ಲಿರುವ ೩ನೇ ಪದದಲ್ಲಿ ತ್ರಿಪುರಾಂತಕ ಲಿಂಗನು ಸಹ ಬಸವಪ್ರಭುಯೆಂದು ಸಂಬೋಧಿಸಿದ್ದಾನೆ.

ಪದಃ— ಆದಿ ಪ್ರಸಾದವ ಭೇದಿಸಬಲ್ಲದೆ। ನಮ್ಮ ತ್ರಿಪುರಾಂತಕ ಲಿಂಗದಲ್ಲಿ ಬಸವಪ್ರಭುವಿಗಲ್ಲದೆ. ॥೭॥

ಈ ಪುಸ್ತಕದಲ್ಲಿ ಮೇಲೆ ಕಾಣಿಸಿದ ಪರ್ಯಾಯ ನಾಮಗಳನ್ನು ಅನೇಕ ಪದಗಳಲ್ಲಿ ಉಪಯೋಗಿಸಿದ್ದಾಗಿದೆ. ಆದ್ದರಿಂದ ಮೇಲೆ ಬರೆದ ಕಾರಣಗಳ ಮೂಲಕ ಅಲ್ಲಮಪ್ರಭುವಿಗೆ ಅನೇಕ ಪರ್ಯಾಯ ನಾಮಗಳಿದ್ದವೆಂದೂ ಅವನೇ ಬಸವಪ್ರಭುವೆಂದೂ ಧಾರಾಳವಾಗಿ ಹೇಳಬಹುದು. ಇದೇ ವಿಷಯವನ್ನು ಶ್ರೀ ತೋಂಟದಾರ್ಯರ ವಚನಗಳ ದೃಷ್ಟಿಯಿಂದಲೂ ಮತ್ತು ಶ್ರೀ ಮನ್ನಿರಂಜನ ವಂಶರತ್ನಾಕರ ಗ್ರಂಥದ ದೃಷ್ಟಿಯಿಂದಲೂ ಶೋಧಿಸುವಾ:— ಶ್ರೀ ತೋಂಟದಾರ್ಯರು ತಮ್ಮ ವಚನದಲ್ಲಿ ( ಪಾ. ೨. ವಚನ ೮. ) ತಮ್ಮ ವಂಶಾವಳಿಯನ್ನು ಕೊಟ್ಟಿರುತ್ತಾರೆ. ಇದೇ ವಂಶಾವಳಿಯನ್ನು ಶ್ರೀಮನ್ನಿರಂಜನ ವಂಶರತ್ನಾಕರ ಗ್ರಂಥವು ಸಮರ್ಥಿಸುತ್ತದೆ.

## ವಂಶಾವಳಿಯ ವಿವರ.

(೧) ಅನಾದಿಗಣೇಶ. (೨) ಆದಿಗಣೇಶ. (೩) ನಿರ್ವಾಣಯ. (೪) ನಿರಂಜನ. (೫) ಜ್ಞಾನಾನಂದ. (೬) ಆತ್ಮಗಣೇಶ. (೭) ಅಧ್ಯಾತ್ಮಗಣೇಶ. (೮) ರುದ್ರಗಣೇಶ. (೯) ಬಸವಪ್ರಭು. (೧೦) ಆದಿಲಿಂಗೇಶ. (೧೧) ಚನ್ನವೀರೇಶ. (೧೨) ಗೋಸಲದೇವ. (೧೩) ಶಂಕರದೇವ. (೧೪) ದಿವ್ಯಲಿಂಗೇಶ. (೧೫) ಚನ್ನಬಸವೇಶ. (೧೬) ಶಿದ್ಧಲಿಂಗ ತೋಂಟದಾರ್ಯ

ಈ ಪ್ರಕಾರ ವಂಶಾವಳಿಯು ಇದ್ದು ಇದರಲ್ಲಿ ಎಲ್ಲಿಯೂ ಅಲ್ಲಮಪ್ರಭು ಎಂದು ಉಲ್ಲೇಖವಿಲ್ಲ; ಮತ್ತು ೯ನೇ ಪೀಠಸ್ಥರು ಬಸವಪ್ರಭು ಎಂದು ಉಲ್ಲೇಖವದೆ. ಮೇಲೆ ಬರೆದಂತೆ ಶ್ರೀಮನ್ನಿರಂಜನ ವಂಶರತ್ನಾಕರವು ಈ ವಂಶಾವಳಿಯನ್ನು ಸಮರ್ಥಿಸುತ್ತದೆ. ಮೇಲೆ ಕೊಟ್ಟ ವಂಶಾವಳಿಯಲ್ಲಿ ಶ್ರೀ ಅಲ್ಲಮಪ್ರಭುವಿನ ಹೆಸರು ಉಲ್ಲೇಖವಿಲ್ಲದ ಮೂಲಕ ಎರಡು ವಿಚಾರಗಳಿಗೆ ಆಸ್ಪದವಾಗಬಹುದು:— [೧] ಅಲ್ಲಮುನಿಗೂ ಈ ವಂಶಾವಳಿಗೂ ಏನೂ ಸಂಬಂಧವಿರದೆ ಅವನು ಪ್ರತ್ಯೇಕವಾಗಿರಬೇಕೆಂಬದೊಂದು ವಿಚಾರ ಅಥವಾ [೨] ಈ ವಂಶಾವಳಿಯಲ್ಲಿ ಅಲ್ಲಮಪ್ರಭುವಿದ್ದು ಅವನ ಪರ್ಯಾಯನಾಮವು ಸೇರಿಸಲ್ಪಟ್ಟಿರಬೇಕೆಂಬ ಮತ್ತೊಂದು ವಿಚಾರವು. ಈ ಎರಡು ವಿಚಾರಗಳಲ್ಲಿ ಮೊದಲನೇದ್ದು ಕೀರ ಅಸಮಂಜಸವೂ, ಅಪಕ್ವವೂ ಮತ್ತು ಅಗದೀ ಅಸಂಭವನೀಯವು ಆಗುವ ಕಾರಣ ಅವರ ಬಗ್ಗೆ ಇಲ್ಲಿ ವಿಸ್ತಾರವಾಗಿ ಚರ್ಚಿಸುವದು ಅನವಶ್ಯವು. ಆದ್ದರಿಂದ ಈ ವಂಶಾವಳಿಯಲ್ಲಿ ಅಲ್ಲಮಪ್ರಭುವಿನ ಪರ್ಯಾಯ ನಾಮವೇ ಅರ್ಥಾತ್ ಬಸವಪ್ರಭುವೆಂದು ಉಲ್ಲೇಖಿಸಲ್ಪಟ್ಟಿರಬೇಕೆಂದು ಅರ್ಥವಾಗುತ್ತದೆ. ಇನ್ನು ಅಲ್ಲಮಪ್ರಭುವೇ ಒಂಭತ್ತನೇ ಪೀಠಸ್ಥನಾದ ಬಸವಪ್ರಭು ಆದದ್ದಾದರೆ ಅವನು ೧೫ನೇ ಶತಮಾನದಲ್ಲಿರದೆ ೧೨ನೇ ಶತಮಾನದಲ್ಲಿದ್ದನೆಂದು ಹೇಳ ಬಹುದು. ೧೬ನೇ ಪೀಠಸ್ಥರಾದ ಶಿದ್ಧಲಿಂಗ ಯತಿಗಳು ೧೪೭೦ ರಲ್ಲಿ ಇದ್ದರೆಂದು ಕರ್ನಾಟಕದ ಕವಿಚರಿತ್ರಕಾರರು ಕಂಡು ಹಿಡಿದಿದ್ದಾರೆ; ಮತ್ತು ಅವರ ಪರಮ ಗುರುವೂ ವ, ೧೩ನೇ ಪೀಠಸ್ಥನೂ ಆದ ಶಂಕರದೇವನು ೧೩೨೫ರಲ್ಲಿ ಇದ್ದಿರಬೇಕೆಂದು ಶಿ. ಮೂ. ಬುದ್ಧಯ್ಯನವರು ತಮ್ಮ ಮೂರನೇ ಪುಷ್ಪದ ಪ್ರಸ್ತಾವನೆಯಲ್ಲಿ ಹೇಳಿರುವರು. ಶ್ರೀ ಪ್ರಭುದೇವನು ೧೧೬೦ ರಲ್ಲಿ ಇದ್ದನೆಂದು ಕರ್ನಾಟಕದ ಕವಿಚರಿತ್ರಕಾರರು ಹೇಳಿ

ರುವರು. ಆದ್ದರಿಂದ ಒಂಭತ್ತನೇ ಪೀಠಸ್ಥರಾದ ಬಸವಪ್ರಭು ಅಥವಾ ಅಲ್ಲಮಪ್ರಭು ೧೨ನೇ ಶತಮಾನದಲ್ಲಿದ್ದಿರಬೇಕೆಂದು ತಿಳಿಯುತ್ತದೆ. ಹಿಂದೆ ಹೇಳಿದಂತೆ ತ್ರಿಪುರಾಂತಕ ಲಿಂಗನು ಈ ಪುಸ್ತಕದ ೪೧ನೇ ಪಾನಿನಲ್ಲಿರುವ ಮೂರನೇ ಪದ್ಯದಲ್ಲಿ ಅಲ್ಲಮಪ್ರಭುವನ್ನು ಸ್ತುತಿಸಿದ್ದಾನೆ. ಈ ತ್ರಿಪುರಾಂತಕಲಿಂಗನು ಶರಣರ ಕಾಲದಲ್ಲಿ ಇದ್ದನೆಂದು ಕರ್ನಾಟಕದ ಕವಿಚರಿತ್ರಕಾರರು ಅಭಿಪ್ರಾಯ ಪಡುತ್ತಾರೆ. ಶರಣರ ಕಾಲವೆಂದರೆ, ಬಸವಾದಿ ಪ್ರಮಥರ ಕಾಲವೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ; ಇದಲ್ಲದೆ ಅಲ್ಲಮನು ಬಸವಾದಿ ಪ್ರಮಥರಿಗೆ ಉಪದೇಶ ಮಾಡಿದ್ದು ಜಗತ್ಪ್ರಸಿದ್ಧವದೆ. ಇದೇ ಪುಸ್ತಕದ ೩೯ನೇ ಪುಟದಲ್ಲಿರುವ ೭ನೇ ಪದ್ಯದಲ್ಲಿ ಅಲ್ಲಮಪ್ರಭು ಬಸವಾದಿ ಪ್ರಮಥರ ಕಾಲದಲ್ಲಿ ಇದ್ದನೆಂಬ ಬಗ್ಗೆ ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟದೆ. ಈ ಯಾವತ್ತೂ ಕಾರಣಗಳ ಮೂಲಕ ಅವನು ೧೨ನೇ ಶತಮಾನದಲ್ಲಿರಬೇಕೆಂದು ಅನುಮಾನ ಬರುತ್ತದೆ. ಇನ್ನು ಅಲ್ಲಮನು ೧೨ನೇ ಶತಮಾನದಲ್ಲಿದ್ದನೆಂದು ಗ್ರಹಿಸಿದರೆ ಮಗಿಯನರೇಂದ್ರನಿಗೆ ಅವನು ವೀರಶೈವ ದೀಕ್ಷೆಯನ್ನು ಮಾಡಿ ಲಿಂಗಧಾರಣವನ್ನು ಮಾಡಲಿಲ್ಲವೆಂದು ಪ್ರತ್ಯೇಕವಾಗಿ ಹೇಳಲಿಕ್ಕೆ ಬೇಡ. ಯಾಕಂದರೆ ಮಗಿನರೇಂದ್ರ, ಗುರುಬಸವ, ಚನ್ನಪ್ಪ ಈ ಮೂವರು ಕವಿಗಳು ಸಮಾನಕಾಲಿನವರು ಇದ್ದು ೧೫ನೇ ಶತಮಾನದಲ್ಲಿದ್ದರೆಂದು ರಾವಸಾಹೇಬ ಹಳಕಟ್ಟಿಯವರು ಅಭಿಪ್ರಾಯಪಡುತ್ತಾರೆ. ಮತ್ತು ಅದು ನಿಜವಿದ್ದಂತೆ ಕಾಣಿಸುತ್ತದೆ. ಅದ್ದರಿಂದ ೧೨ನೇ ಶತಮಾನದಲ್ಲಿದ್ದ ಅಲ್ಲಮನು ೧೫ನೇ ಶತಮಾನದಲ್ಲಿದ್ದ ಮಗಿನರೇಂದ್ರನಿಗೆ ವೀರಶೈವ ದೀಕ್ಷೆಯನ್ನು ಮಾಡಿದನೆಂಬ ಮಾತು ಅಗದೀ ಅಸಂಭವನೀಯವಾಗಿ ತೋರುತ್ತದೆ. ಇದಲ್ಲದೆ ಮಗಿನರೇಂದ್ರನ ಸಮಕಾಲಿನ ಕವಿಯಾದ ಚನ್ನಪ್ಪನು ಅದೇ ಪುಸ್ತಕದ ೨೪ನೇ ಪಾನಿನಲ್ಲಿರುವ ೧ನೇ ಪದದಲ್ಲಿ " ವೀರಧೀರ ಕೃಷ್ಣೇಂದ್ರ ಸತಿಗೆ ವರವಕೊಟ್ಟ ಪ್ರಭುವಿಗೆ " ಎಂದು ಸಂಬೋಧಿಸಿದ್ದರ ಮೇಲಿಂದ ಹನಗಂಡಿಯ ದೇಸಾಯರ ಪೂರ್ವಜನಾದ ಕೃಷ್ಣೇಂದ್ರ ರಾಜನೆಂಬವನೊಬ್ಬನು ೧೨ನೇ ಶತಮಾನದಲ್ಲಿದ್ದು ಅವನಿಗೆ ಅಲ್ಲಮನು ವೀರಶೈವ ದೀಕ್ಷೆಯನ್ನು ಮಾಡಿದನೆಂದು ಕೆಲವರ ಅಭಿಪ್ರಾಯವಿರುತ್ತದೆ. ಇದಲ್ಲದೆ ಮಗಿನರೇಂದ್ರನು ತನ್ನ ಕಾಲದಲ್ಲಿ ತೇರದಾಳವು ಭೂಕೈಲಾಸವಾಗಿತ್ತೆಂದು ಅಂದಿದ್ದಾನೆ. ಅಲ್ಲಮನು ತೇರದಾಳದಲ್ಲಿ ನಿರ್ವಯಲವಾಗಿದ್ದು ಅವನ ತೋರಗದ್ದಿಗೆಯು ತೇರದಾಳದಲ್ಲಿ

ರುತ್ತದೆ. ಇದರ ಮೇಲಿಂದಾದರೂ ಮಗಿಯನರೇಂದ್ರನ ಕಾಲಕ್ಕಿಂತ ಮೊದಲೇ ಅಲ್ಲಮನು ನಿರ್ವಯಲವಾಗಿ ಅವನ ಪ್ರಭೆಯು ನಾಲ್ಕೂ ದಿಕ್ಕಿಗೂ ಪಸರಿಸಿ ತೇರದಾಳವು ೧೫ನೇ ಶತಮಾನದಲ್ಲಿ ಭೂಕೈಲಾಸವಾದರೂ ಆಗುವ ಸಂಭವವದೆ.

ಇದಲ್ಲದೆ ಮಗಿಯನರೇಂದ್ರಕವಿಯ ಹೆಸರು ಮಗಿಯಪ್ಪ ಎಂದು ಇದ್ದು ಈ ಹೆಸರು ಅಲ್ಲಮನ ಪರ್ಯಾಯನಾಮವಾದ ಮಗಿಪ್ರಭು ವೆಂಬ ಹೆಸರಿನ ಮೇಲಿಂದ ಬಂದಿತ್ತೆಂದು ಕೆಲವರ ಅಭಿಪ್ರಾಯವದೆ. ಮತ್ತು ಅಲ್ಲಮನಿಗೆ ಮಗಿಪ್ರಭು ಎಂಬ ಪರ್ಯಾಯನಾಮವು ತಾನು ತೇರದಾಳ ಗ್ರಾಮದಲ್ಲಿ ನಿರ್ವಯಲವಾಗುವ ಕಾಲಕ್ಕೆ ತನ್ನ ಕಮಂಡ ಲುವಾದ ಮಗಿಯನ್ನು ಕೆಳಗಿಟ್ಟನಂತರ ಬಂತೆಂದು ಕೆಲವರ ಅಭಿಪ್ರಾ ಯವದೆ. ಅದು ನಿಜವಿದ್ದಂತೆ ಕಾಣಿಸುತ್ತದೆ. ಅದ್ದರಿಂದ ಮಗಿಪ್ರಭು ನಿರ್ವಯಲವಾದನಂತರ ಮಗಿಯಪ್ಪನ ಜನನವಾಗಿರಬೇಕೆಂದು ಅನು ಮಾನವಾಗುತ್ತದೆ. ಮೇಲೆ ಬರೆದ ಕಾರಣಗಳಿಂದ ಅಲ್ಲಮನು ಮಗಿನ ರೇಂದ್ರನಿಗೆ ವೀರಶೈವ ದೀಕ್ಷೆಯನ್ನು ಮಾಡಲಿಲ್ಲವೆಂದೂ ಮತ್ತು ಅವನು ೧೫ನೇ ಶತಮಾನದಲ್ಲಿದ್ದಿಲ್ಲವೆಂದೂ ಅಂದರೆ ತಪ್ಪಾಗಲಿಕ್ಕಿಲ್ಲ. ಇನ್ನು ಬಾಗಲಕೋಟಿ ತಾಲೂಕಿನಲ್ಲಿರುವ ಹಿರೇಸೂರ, ಕಿರೇಸೂರ ಗ್ರಾಮಗ ಳಿಗೆ ಅಲ್ಲಮರು ಹೋದದ್ದು ಸಂಭವನೀಯವಾಗಿ ಕಂಡಬರುವದಿಲ್ಲ. ಯಾಕಂದರೆ ಅವರು ಕೆಳದೀ ದೇಶದಲ್ಲಿದ್ದು ಅಲ್ಲಿಂದ ಗದಗ ತಾಲೂ ಕಿನಲ್ಲಿರುವ ಮುಳಗುಂದ ಕುರ್ತಕೋಟಿ ವಕಣಿವಿ ಗ್ರಾಮಗಳಿಗೆ ಬಂದು ಅಲ್ಲಿಯ ಭಕ್ತರನ್ನು ಉದ್ಧರಿಸುತ್ತಾ ಹಾಗೇ ಹುಕ್ಕೇರಿ ಸೀಮೆಗೆ ಹೋಗಿ ಅಲ್ಲಿಂದ ಹನಗಂಡಿಯ ಗ್ರಾಮಕ್ಕೆ ಹೋಗಿ, ಅಲ್ಲಿಂದ ತೇರದಾಳಕ್ಕೆ ಹೋಗಿ ಅಲ್ಲಿ ನಿರ್ವಯಲವಾದರೆಂದು ಆಧಾರಗಳು ಸಿಗುತ್ತವೆ ಹೀಗಿದ್ದು ಅವರು ದಾರೀಬಿಟ್ಟು ಬಾಗಲಕೋಟಿ ತಾಲೂಕಿನಲ್ಲಿರುವ ಹಿರೇಸೂರ ಕಿರೇಸೂರ ಗ್ರಾಮಗಳಿಗೆ ಹೋದಂತೆ ಉಲ್ಲೇಖವಿಲ್ಲ. ಅದ್ದರಿಂದ ಹುಕ್ಕೇರಿ ಸೀಮೆಗೂ ವ ಮುಳಗುಂದ ಕುರ್ತಕೋಟಿಗಳಿಗೂ ಮಧ್ಯದಲ್ಲಿರುವ ಹುಬ್ಬಳ್ಳೀ ತಾಲೂಕಿನಲ್ಲಿರುವ ಹಿರೇಸೂರ, ಕಿರೇಸೂರ ಗ್ರಾಮಗಳ ಮೇಲೆ ಹಾಯ್ದು ಹೋಗಿರಬೇಕೆಂಬಾತೆ ಕಾಣಿಸುತ್ತದೆ. ಮತ್ತು ೫೯ ನೇ ಪದದ ಮೇಲಿಂದ ಶ್ರೀ ಅಲ್ಲಮಪ್ರಭು ಸ್ವಾಮಿಗಳು ಗೋಕಾವಿಯ ಹತ್ತರಿರುವ ಗೂಗಿಯಕೊಳ್ಳಕ್ಕೆ ಹೋಗಿರಬಹುದೆಂದು ರಾವಸಾಹೇಬ ಹಳಕಟ್ಟಿಯ

ವರು ತರ್ಕಿಸುತ್ತಾರೆ. ಆದರೆ ಈ ಪದವು ಅಲ್ಲಮರ ಪರವಾಗಿರದೆ ೧೫ನೇ ಶತಮಾನದಲ್ಲಿದ್ದ ದಿಗಂಬರೇಶನ ಪರವಾಗಿರುತ್ತದೆ. ಅವನು ಗೋಕಾವಿಯ ಹತ್ತರಿರುವ ಗೂಗಿಯಕೊಳ್ಳಕ್ಕೆ ಹೋಗಿರಬಹುದು. ಮತ್ತು ಅದೇ ಪುಸ್ತಕದಲ್ಲಿ ೨೧ನೇ ಪುಟದಲ್ಲಿರುವ ೬೨ನೇ ಪದವು ಅಲ್ಲಮರ ಪರವಾಗಿರದೆ ವೀರಭದ್ರನ ಅವತಾರವಾದ ಮಡಿವಾಳ ಮಾಚಯ್ಯನ ಪರವಾಗಿರುವದರಿಂದ ೫೯ ವ ೬೭ ಈ ಎರಡೂ ಪದಗಳನ್ನು ಶಿ. ಮೂ. ಬುದ್ಧಯ್ಯನವರು ಯಾಕೆ ಪ್ರಭುದೇವರ ಪದಗಳಲ್ಲಿ ಸೇರಿಸಿದರೋ ಕಾಣೆ.

ಇದಲ್ಲದೆ ಅದೇ ಪುಸ್ತಕದ ೩೭ ನೇ ಪುಟದಲ್ಲಿರುವ ೩ ನೇ ಪದದಲ್ಲಿ ಉಲ್ಲೇಖಿಸಿದ " ಪ್ರಜ್ವಲಿಸಿತು ಪ್ರಭೆ ಪುಣ್ಯದ ಪುಲ್ಲಾಡ " ಎಂಬದರ ಅರ್ಥವನ್ನು ರಾವಸಾಹೇಬರು ಇದು ಬಸವಪ್ರಭುವು ಕೆಳದೀ ನಾಡಿನಲ್ಲಿದ್ದದ್ದರ ಉಲ್ಲೇಖವಾಗಿರಬೇಕೆಂದು ಊಹಿಸಿರುತ್ತಾರೆ. ಬರೇ ಅರ್ಧ ಚರಣದಿಂದಲೇ ಹೀಗೆ ಅರ್ಥಮಾಡಿದಂತೆ ಕಾಣಿಸುತ್ತದೆ. ಅದೇ ನುಡಿಯಲ್ಲಿ ಮುಂದೆ " ನಿಜಭಾಪುರಿ ಮೊಗ್ಗೆ ಎಂದು ಉಲ್ಲೇಖವಿರುವದರಿಂದ ಅವರು ಬರೀ ಕೆಳದೀ ನಾಡಿನಲ್ಲಿದ್ದದ್ದರ ಉಲ್ಲೇಖವಾಗಿರದೆ ಶಿಕಾರಪೂರ ತಾಲೂಕಿನಲ್ಲಿದ್ದ ಬಳ್ಳೀಗಾವ ಗ್ರಾಮದಲ್ಲಿ ಅವತರಿಸಿದ ಬಗ್ಗೆ ಉಲ್ಲೇಖವಾಗಿರಬೇಕು. ಬುದ್ಧಯ್ಯನವರು ಪ್ರಸಿದ್ಧ ಮಾಡಿದ ಪುಸ್ತಕದಲ್ಲಿ ಅಲ್ಲಮಪ್ರಭುವಿನ ಬಗ್ಗೆ ಒಟ್ಟು ೧೨೭ ಪದಗಳು ಇದ್ದು ಅವುಗಳ ಪೈಕಿ ೨೮ ಪದಗಳಲ್ಲಿ ಅಲ್ಲಮನು ತೇರದಾಳದಲ್ಲಿ ಬಂದು ನಿಂತು ಅಲ್ಲಿ ನಿರ್ವಯಲವಾದ ಬಗ್ಗೆ ಸ್ಪಷ್ಟ ಉಲ್ಲೇಖವದೆ.

ಮೇಲಿನ ಎಲ್ಲ ಕಾರಣಗಳ ಮೂಲಕ, ಅಲ್ಲಮನಿಗೆ ಅನೇಕ ಪರ್ಯಾಯ ನಾಮಗಳಿದ್ದು, ಅವುಗಳ ಪೈಕಿ ಬಸವಪ್ರಭು ಎಂಬದೂ ಕೂಡಾ ಒಂದು ಪರ್ಯಾಯ ನಾಮವಾಗಿ, ಅಲ್ಲಮನೇ ಬಸವಪ್ರಭುವೆಂಬ ಪರ್ಯಾಯ ನಾಮಧರಿಸಿ, ಸಂಚರಿಸಿದನು. ಅವನು ೧೫ ನೇ ಶತಮಾನದಲ್ಲಿರದೆ ೧೨ ನೇ ಶತಮಾನದಲ್ಲಿದ್ದನು. ಅವನು ಮಗಿಯ ನರೇಂದ್ರನಿಗೆ ವೀರಶೈವ ದೀಕ್ಷೆಯನ್ನು ಮಾಡಲಿಲ್ಲ. ಅವನು ಬಾಗಲಕೋಟ ತಾಲೂಕಿನಲ್ಲಿದ್ದ ಹಿರೇಸೂರ ವ ಕಿರೇಸೂರ ಗ್ರಾಮಗಳಿಗೆ ಹೋಗದೆ, ಹುಬ್ಬಳ್ಳಿ ತಾಲೂಕಿನಲ್ಲಿದ್ದ ಹಿರೇಸೂರ ವ ಕಿರೇಸೂರ ಗ್ರಾಮಗಳ ಮೇಲೆ ಹಾಯ್ದು ಹುಕ್ಕೇರಿ ಸೀಮೆಗೆ ಹೋದನು. ಗೋಕಾವಿಯ

ಹತ್ತಿರಿರುವ ಗೂಗಿಯ ಕೊಳ್ಳಕ್ಕೆ ಹೋಗಲಿಲ್ಲ. ಮತ್ತು ೩೭ ಪು ವಾಗಿ ದಲ್ಲಿರುವ ೩ ನೇ ಪದದ ಆಧಾರದಿಂದ ಅಲ್ಲಮನು ಶಿಕಾರಪೂರದಕೆ ಇರ ಕಿನಲ್ಲಿರುವ ಬಳ್ಳೀಗಾವಿಯಲ್ಲಿ ಅವತರಿಸಿದನೆಂದು ಅನುಮಾನ ಮಾಳದಲ್ಲಿ ದರೆ ತಪ್ಪಾಗಲಿಕ್ಕಿಲ್ಲವೆಂದು ಅನಿಸುತ್ತದೆ. ಇದಲ್ಲದೆ ಈ ಮೂಡಿಕೆಯಲ್ಲಿ ಗಳ ಒಟ್ಟು ೩೩೦೦ ಪದಗಳು ಇದ್ದು, ಅವುಗಳ ಪೈಕಿ ಈಗ ೮೫ ಪದ್ಯ ವಿರುವ ೧೨೭ ಪದಗಳಲ್ಲಿಯೇ ಇಷ್ಟು ಅನುಮಾನ ಮಾಡಲಿಕ್ಕೆ ಅವ ಕಾಶವಿದ್ದಲ್ಲಿ, ಕಣ್ಮರೆಯಾದ ಉಳಿದ ಪದಗಳಲ್ಲಿ ಏನು ಹೊರಡುತ್ತ ದೆಂಬುವದನ್ನು ಶ್ರೀ ಅಲ್ಲಮನೇ ಬಲ್ಲನು.

ಈ ಲೆಖ್ಖಣಿಕೆಯನ್ನು ಕೆಳಗಿಡುವದಕ್ಕಿಂತ ಮೊದಲು ಪ್ರಭುದೇವರ ಬಗ್ಗೆ ಇದ್ದ ಈ ಮೂವರು ಕವಿಗಳ ಪದಗಳನ್ನು ಒಟ್ಟುಗೂಡಿಸಿ ಈ ಪುಸ್ತಕ ರೂಪದಿಂದ ಪ್ರಸಿದ್ಧಮಾಡಿದ ಶಿ. ಮೂ. ಬುದ್ಧಯ್ಯನವರ ವಿಷ ಯವಾಗಿ ಒಂದೆರಡು ವಾಕ್ಯಗಳನ್ನು ಬರೆಯುವದು ಅವಶ್ಯನೆಂದು ಅನಿ ಸುತ್ತದೆ. ಜನಸಾಮಾನ್ಯತೆಗೆ ತಿಳಿದುಕೊಳ್ಳಲು ಬಹು ಕಠಿಣವಾದ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತದಂಥ ಗಹನ ವಿಷಯವನ್ನು ಶ್ರೀ ಅಲ್ಲಮ ಪ್ರಭುವು, ಸರ್ವಜ್ಞ ಕವಿಯಂತೆ, ಬಹು ಮಾರ್ಮಿಕವಾಗಿಯೂ, ಸುಲ ಭವಾಗಿಯೂ, ಸ್ವಚ್ಛವಾಗಿಯೂ, ಬಹು ಸುಂದರವಾಗಿಯೂ ಬರೆದಿಟ್ಟು ಮಹದುಪಕಾರವನ್ನು ಮಾಡಿರುತ್ತಾನೆಂಬ ಸಂಗತಿಯನ್ನು ಬೇರೆ ಹೇಳ ಬೇಕಾಗಿಲ್ಲ. ಇಷ್ಟೇ ಅಲ್ಲ, ಸಂಸಾರದಲ್ಲಿ ನೊಂದು, ಬೆಂದು, ಬಳಲಿ, ಬೆಂಡಾಗಿ, ಹೌಹಾರಿ, ದಾರಿದೋರದ ಜೀವರುಗಳಿಗೆ, ಬೋಧಾಮೃ ತವನ್ನು ಕುಡಿಸಿ ಎಚ್ಚರಿಸಿ, ಮಾಯೆಯಿಂದ ಮರೆಯಾದ ತಮ್ಮ ನಿಜ ಸ್ಥಿತಿಯ ಅರವು ಮಾಡಿಕೊಟ್ಟು, ಆ ಶಿವಸ್ವರೂಪಿಯಾದ ಅಲ್ಲಮನ ವಿಷ ಯದಲ್ಲಿ, ಇಲ್ಲಿಯ ವರೆಗೆ ತೋರಿಸಿದ ನಮ್ಮ ಉದಾಸೀನತೆಯನ್ನು ಕ್ಷಣ ಹೊತ್ತು ನೆನಪಿಗೆ ತಂದುಕೊಂಡರೆ, ನಮ್ಮಲ್ಲಿರುವ ನಿರ್ವೀಣ್ಯತೆಯು ವ ನಮ್ಮ ಕೃತಘ್ನತೆಯು ಸ್ಪಷ್ಟವಾಗಿ ಒಡೆದು ತೋರುತ್ತವೆ. ಇಂಥ ಪ್ರಸಂ ಗದಲ್ಲಿ ಶಿ. ಮೂ. ಬುದ್ಧಯ್ಯನವರು ಅರ್ಥಕರೀ ಅಲ್ಲದಂಥ ಮತ್ತು ಬಹು ಜನರಿಗೆ ಬೇಡಾದಂಥ ವಿಷಯದಲ್ಲಿ ಮನಸ್ಸು ಹಾಕಿ ಎಲ್ಲಿಲ್ಲೀ ಮೂಲೆಯಲ್ಲಿ ಬಿದ್ದಿರುವ ಗ್ರಂಥಗಳನ್ನು ಪರಿಶೋಧಿಸಿ, ತುಂಬಿ, ತುಳುಕಿ, ಹೊರಸೂಸಿ ಭೋರ್ಗರೆದು ಹರಿಯುವ ಭಕ್ತಿ ರಸಮಯವಾದ ಪದಗ

೨೫೨
ಪ್ರಸಿದ್ಧ ಮಾಡಿದ್ದಕ್ಕೋಸ್ಕರ ಅವರನ್ನು ಅಭಿನಂದಿಸುತ್ತೇವೆ. ಇನ್ನು ವರು ಕೆಯಾದರೂ ತಮ್ಮ ಜ್ಞಾನೇಂದ್ರಿಯಗಳ ಕೈಸಾಗುವ ವರಿಗೆ ಶ್ರೀ ಶತಮಾನಸೇವೆಯನ್ನು ಮಾಡಿ ತಮ್ಮ ಜನ್ಮ ಸಾರ್ಥಕ ಮಾಡಿಕೊಳ್ಳು ವಿಯು ಹ ನೆಕಿ ನಂಬಿದ್ದೇನೆ.
ಅದೇ ಪು
ಪರವಾಗಿ
ಪರ

## ಆಕ್ಷೇಪ ನಿರಸನ.

(ಲೇಖಕ:— ಸಂಪಾದಕ)



ತೇರದಾಳ (ಸಂಸ್ಥಾನ ಸಾಂಗಲಿ) ದಲ್ಲಿ ಸಮಾಧಿಸ್ಥರಾದ ಶ್ರೀ. ಬಸವಪ್ರಭು ಸ್ವಾಮಿಗಳವರ ಬಗ್ಗೆ ನಾವು ಶಿವಾನುಭವದ ಳನೇ ಸಂಚಿಕೆಯಲ್ಲಿ ವಿವರಿಸಿದ್ದು ನಮ್ಮ ವಾಚಕರ ಸ್ಮರಣೆಯಲ್ಲಿರಬಹುದು. ಅವರು ಮೂಲ ಅಲ್ಲಮಪ್ರಭುವಿನ ತರುವಾಯ ೧೨ ನೇ ಪಟ್ಟದವರಿದ್ದು ಅವರು ಮಾಡಿದ ಮಹತ್ಕೃತ್ಯಗಳನ್ನು ನಾವು ಅದರಲ್ಲಿ ವಿವರಿಸಿದ್ದೇವೆ. ಆದರೆ ಶ್ರೀಯುತ ಚನ್ನಪ್ಪ ಹುಂಡೇಕಾರ ಬಿ. ಏ ಎಲ್ ಎಲ್. ಬಿ. ಇವರು ಈ ಬಸವಪ್ರಭು ಸ್ವಾಮಿಗಳವರು ಮೂಲ ಅಲ್ಲಮಪ್ರಭು ಸಾಮಿಗಳೆಂತಲೇ ತಿಳಿದು ಇದನ್ನು ಸಮರ್ಥಿಸಲಿಕ್ಕೆ ಅವರು ಹಿಂದಿನ ಲೇಖವನ್ನು ಬರೆದಿದ್ದಾರೆ. ಅವರು ಈ ಪ್ರಕಾರ ಚಿಕಿತ್ಸಕಾ ಬುದ್ಧಿಯುಳ್ಳವರಾಗಿ ನಮ್ಮ ಲೇಖವನ್ನು ವಿಮರ್ಶಿಸಿದ್ದಕ್ಕಾಗಿ ನಾವು ಸಂತೋಷಿಸುತ್ತೇವೆ. ಆದರೆ ಅವರು ಈ ಕೆಳಗಿನ ವಿಷಯಗಳನ್ನೂ ವಿಚಾರ ಮಾಡಬೇಕೆಂದು ನಾವು ಅವರಿಗೆ ಸೂಚಿಸುತ್ತೇವೆ.

೧. ಅವರು ತಮ್ಮ ಲೇಖದಲ್ಲಿ ಮೂಲ ಅಲ್ಲಮಪ್ರಭು ದೇವರಿಗೆ ೧೫ ಪರ್ಯಾಯ ನಾಮಗಳಿರಬಹುದೆಂದು ತಿಳಿದು ಅವುಗಳನ್ನು ತಮ್ಮ ಲೇಖದಲ್ಲಿ ವಿವರಿಸಿದ್ದಾರೆ. ಆದರೆ ಅವುಗಳಲ್ಲಿರುವ ಮಗಿಪ್ರಭು; ಮತ್ತು ಬಸವಪ್ರಭು ಈ ಹೆಸರುಗಳು ಮಾತ್ರ ಅಲ್ಲಮಪ್ರಭುವಿಗೆ ಇದ್ದಹಾಗೆ ಯಾವ ಗ್ರಂಥಗಳಲ್ಲಿಯೂ ತೋರಬರುವದಿಲ್ಲ. ಆದ್ದರಿಂದ ಈ ೧೫ ಹೆಸ

ರುಗಳು ಅಲ್ಲಮಪ್ರಭುವಿನ ಪರ್ಯಾಯ ನಾಮಗಳಾಗಿರದೆ, ಅವು ಮಗಿ ಪ್ರಭು ಅಥವಾ ಬಸವಪ್ರಭುವಿನ ಪರ್ಯಾಯ ನಾಮಗಳಾಗಿ ಏಕೆ ಇರ ಬಾರದು? ಇದಾದರೂ ಅಷ್ಟೇ ಸಂಭವನೀಯವಾಗಿದೆ. ತೇರದಾಳದಲ್ಲಿ ಸಮಾಧಿಸ್ಥರಾದ ಸ್ವಾಮಿಗಳಿಗೆ ಮಗಿಪ್ರಭು ಎಂಬ ಹೆಸರು ವಾಡಿಕೆಯಲ್ಲಿ ಇದೆ. ಈ ಹೆಸರೇ ಶ್ರೀ ಮೂ। ಬುದ್ಧಯ್ಯನವರು ಅಚ್ಚು ಹಾಕಿದ ಪದ್ಯ ಗಳಲ್ಲಿ ಉಪಯೋಗವಾದದ್ದು ತೋರಿಬರುತ್ತದೆ. ಈ ಮಗಿಪ್ರಭುವು ಪೂರ್ವದ ಅಲ್ಲಮಪ್ರಭುವಿನ ಸೂತ್ರದವರಾದ್ದರಿಂದ, ಮೂಲಪೀಠಾಧಿಪ ತಿಗಳ ನಾಮನಿರ್ದೇಶದಿಂದ ಅವರನ್ನು ಪೂಜ್ಯಭಾವದಿಂದ ಸಂಬೋಧಿ ಸುವ ರೂಢಿಯನ್ನು ಈ ಪದ್ಯಗಳನ್ನು ರಚಿಸಿದ ಮಗಿಯ ನರೇಂದ್ರ, ಚನ್ನ ಪ್ರಭು ಇವರು ಅನುಸರಿಸಿರಬಹುದು. ಆದ್ದರಿಂದ ಮಿ॥ ಹುಂಡೇಕಾರ ಇವರು ಉಲ್ಲೇಖಿಸಿದ ಪರ್ಯಾಯ ನಾಮಗಳು ಅಲ್ಲಮಪ್ರಭುವಿನವಿರದೆ, ಅವರ ತರುವಾಯ ಪಟ್ಟಕ್ಕೆ ಬಂದ ಬಸವಪ್ರಭು ಅಥವಾ ಮಗಿಪ್ರಭು ಇವರವು ಇರಬಹುದು.

೨. ಮೂಲ ಅಲ್ಲಮಪ್ರಭುವಿಗೆ ಬಸವಪ್ರಭು ಎಂಬ ಹೆಸರು ಉಪ ಯೋಗವಾದದ್ದು ಎಲ್ಲಿಯೂ ತೋರಿ ಬರುವದಿಲ್ಲ. ಈ ಬಸವಪ್ರಭು ಶಬ್ದವು ಬಸವೇಶ್ವರನ ಹೆಸರಿರುತ್ತದೆ. ಬಸವೇಶ್ವರನಿಗೆ ಬಸವರಾಜ, ಬಸವಪ್ರಭು, ಬಸವದಂಡೇಶ ಎಂಬ ನಾಮಗಳಿವೆ. ಆದರೆ ಈಗಿನ ಪದ್ಯ ಗಳಲ್ಲಿ ಬಸವಪ್ರಭು ಸ್ವಾಮಿಗಳಿಗೆ ಅಲ್ಲಮನೆಂತಲೂ ಅಲ್ಲಲ್ಲಿ ನಾಮನಿರ್ದೇ ಶವಿರುತ್ತದೆ. ಆದ್ದರಿಂದ ಹೀಗೆ ಬಸವಪ್ರಭು ಎಂಬ ಅಂಕಿತದಿಂದ ಕರೆ ಯಲ್ಪಟ್ಟ ಅಲ್ಲಮನು ಮೂಲ ಅಲ್ಲಮನಿರಲಿಕ್ಕಿಲ್ಲ.

೩. ಮೂಲ ಅಲ್ಲಮನು ಐಕ್ಯವಾದ ಸ್ಥಳವು ಶ್ರೀಶೈಲವಿರುತ್ತದೆ. ಕಲ್ಯಾಣದಲ್ಲಿ ವಿರೋಧಗಳು ಉತ್ಪನ್ನವಾದ ಬಳಿಕ ಅವನೂ ಮಹಾದೇ ವಿಯಕ್ಕ ಮೊದಲಾದ ಶಿವಶರಣರೂ ಶ್ರೀಶೈಲಕ್ಕೆ ಹೋಗಿ ಕದಳಿಯ ಬನದಲ್ಲಿ ಐಕ್ಯ ಹೊಂದಿದರು. ಈ ಪ್ರಕಾರ ಎಲ್ಲ ವೀರಶೈವ ಗ್ರಂಥಗಳಲ್ಲಿ ಹೇಳಿರುತ್ತದೆ. ಆದರೆ ಅಲ್ಲಮಪ್ರಭುವು ತೇರದಾಳದಲ್ಲಿ ಐಕ್ಯ ಹೊಂದಿದ್ದು ಎಲ್ಲಿಯೂ ಉಲ್ಲೇಖವಿರುವದಿಲ್ಲ. ಆದ್ದರಿಂದ ತೇರದಾಳದಲ್ಲಿ ಸಮಾಧಿ ಸ್ಥರಾದ ಬಸವಪ್ರಭುವು ಅಲ್ಲಮಪ್ರಭುವಿನಿಂದ ಬೇರೆಯಾಗಿರಬೇಕು.

೪. ತೋಂಟದಾರ್ಯರು ತಮ್ಮ ವಚನ ಗ್ರಂಥದಲ್ಲಿ ತಮ್ಮ ಪೂರ್ವ ಪೀಠಾಧಿಪತಿಗಳ ಹೆಸರನ್ನು ಹೇಳುವಾಗ ಬಸವಪ್ರಭು ಸ್ವಾಮಿಗಳು ೯ನೆಯವರಾಗಿ ಉಲ್ಲೇಖಿಸಿದ್ದಾರೆ. ಆದರೆ ಶೂನ್ಯ ಸಿಂಹಾಸನಕ್ಕೆ ಅಲ್ಲಮಪ್ರಭುವೇ ಮೂಲಿಗರಾಗಿದ್ದರಿಂದ ಬಸವಪ್ರಭು ಎಂದು ಅವರು ಇಲ್ಲಿ ೯ನೆಯವರಾಗಿದ್ದು ಹೇಳಲಿಕ್ಕೆ ಕಾರಣವೇನು? ಆದ್ದರಿಂದ ಇವರು ಮೂಲ ಅಲ್ಲಮನಾಗಿರದೆ, ಆವರ ತರುವಾಯದವರೆಂದು ಸ್ಪಷ್ಟವಾಗುತ್ತದೆ.

೫. ಮೂಲ ಅಲ್ಲಮಪ್ರಭುವಿನ ಗುರುಗಳ ಹೆಸರು ಅನುಮಿಷನೆಂದು ಪ್ರಸಿದ್ಧವಾಗಿದೆ. ಆದರೆ ತೋಂಟದಾರ್ಯರು ಕೊಟ್ಟ ವಂಶಾವಳಿಯಲ್ಲಿ ಬಸವಪ್ರಭುವಿನ ಗುರುಗಳ ಹೆಸರು ರುದ್ರಗಣೇಶನೆಂದು ಹೇಳಲ್ಪಟ್ಟಿದೆ. ಆದ್ದರಿಂದ ಈ ಬಸವಪ್ರಭುವೂ ಮೂಲ ಅಲ್ಲಮನೂ ಒಂದೇಯಾಗಿರಲಾರರು.

೬. ಶ್ರೀ. ಮೂ. ಬುದ್ಧಯ್ಯನವರು ಅಚ್ಚು ಹಾಕಿಸಿದ "ಪ್ರಭುದೇವರ ಸ್ತೋತ್ರ ಸಂಗ್ರಹ" ಎಂಬ ಪುಸ್ತಕದಲ್ಲಿ ಬಸವಪ್ರಭುಗಳ ಚರಿತ್ರೆಯು ಕೊಡಲ್ಪಟ್ಟಿದೆ. ಈ ಚರಿತ್ರೆಯು ನನ್ನ ಹತ್ತರವಿರುವ "ನಿರಂಜನವಂಶರತ್ನಾಕರ"ವೆಂಬ ಗ್ರಂಥದಿಂದ ಎತ್ತಿ ಬರೆದದ್ದೆಂದು ಅವರೇ ಆ ಪುಸ್ತಕದ ಅವತರಣಿಕೆಯಲ್ಲಿ ಬರೆದಿದ್ದಾರೆ. ಆದರೆ ಈ ಚರಿತ್ರೆಯನ್ನು ಮೂಲ ಅಲ್ಲಮನ ಚರಿತ್ರೆಗೆ ಹೋಲಿಸಿದರೆ ಅವು ಎಷ್ಟು ಪರಸ್ಪರ ಭಿನ್ನವಾಗಿರುತ್ತವೆಂಬುದು ಯಾರಿಗಾದರೂ ತಿಳಿದು ಬರುವಂತೆ ಇದೆ. ಇದರ ಮೇಲಿಂದ ಮೂಲ ಅಲ್ಲಮನೂ ಈ ಬಸವಪ್ರಭುವೂ ಭಿನ್ನರಿರುತ್ತಾರೆಂದು ಕೂಡಲೆ ತಿಳಿದು ಬರುವಂತೆ ಇದೆ. ವಾಚಕರ ತಿಳುವಳಿಕೆಗಾಗಿ ನಾವು ಈ ಚರಿತ್ರೆಯನ್ನು ಇಲ್ಲಿ ಕೊಡುತ್ತೇವೆ.

"೧೨ ನೆಯ ಶಿವಾನುಭವ ಚರಂತಿಕೆ ಪಟ್ಟದ ಬಸವಪ್ರಭು ಸ್ವಾಮಿಗಳು ೭೨ ಬಿರುದುಗಳು ಮುಂದಾಗಿ ಗಣಸಂದಣಿಯಿಂದ ಕೆಳದಿ ದೇಶ ಮುಂತಾದ ಸಕಲು ದೇಶಂಗಳಂ ಸಂಚರಿಸುತ್ತ ತಿರುಗಿ ಬಿದ್ದ ಭಕ್ತರಿಗೆ ಬಹಿಷ್ಕಾರವಂ ಕೊಡಿಸುತ್ತ ಮತ್ತವರು ಶರಣಾಗತರಾದಲ್ಲಿ ಅಪರಾಧ ಗಾಣಿಕೆಯಂ ತೆಗೆದುಕೊಳ್ಳುತ್ತ ಶಿವಭಕ್ತರು ಮುಂತಾದ ಗಣಂಗಳಿಗೆ ಸದಾಚಾರವಂ ನೆಲೆಗೊಳಿಸಿ ಷಡುಸ್ಥಲ ಜ್ಞಾನೋಪದೇಶವಂ ಮಾಡಿ ಮೋಕ್ಷ ಮಾರ್ಗವಂ ನೀವುತ್ತ ಅನೇಕ ಮಹಿಮೆಗಳಂ ತೋರಿ ಹಿರೇ

ಸೂರು ಕಿರೇಸೂರಿಗೆ ಚಿತ್ತೈಸಿ, ಅಲ್ಲಿ ತಮ್ಮ ಕುರುಹುಗಳಂ ಇಟ್ಟು ಅಲ್ಲಿಂದ ಹುಕ್ಕೇರಿ ನಾಡಿಗೆ ದಯಮಾಡಿಸಿ ಅಲ್ಲಿರುವ ಜೈನಮತಸ್ಥರಿಗೆ ಶಾಸ್ತ್ರಮುಖದಿಂದ ಶಿವಮತವೇ ವಿಶೇಷವೆಂದು ಒಡಂಬಡಿಸಿ ಅವರುಗಳ ಭಕ್ತರಂ ಮಾಡಿಕೊಂಡು ಅಲ್ಲಿಂದ ಹನಗಂಡಿ ಎಂಬ ಗ್ರಾಮಕ್ಕೆ ಚಿತ್ತೈಸಿ ಅಲ್ಲಿರುವ ಜೈನ ಅರಸನಿಗೆ ಲಿಂಗಧಾರಣವಂ ಮಾಡಿಸಿ, ಆ ಮೇಲೆ ತೇರದಾಳವೆಂಬ ಊರಿಗೆ ದಯಮಾಡಿಸಿ ಅಲ್ಲಿಯ ಭಕ್ತಗಣಂಗಳನ್ನು ಕರಿಸಿಕೊಂಡು ತಮ್ಮಯ ಶಿವಾನುಭವ ಚರಂತಿಕೆಯನ್ನು ಆದಿಲಿಂಗೇಶನೆಂಬ ಗಣವರರಿಗೆ ಮಾಡಿ ಅವರಿಗೆ ತಮ್ಮಯ ೭೨ ಬಿರುದುಗಳ ಗಣಸಮೂಹವಂ ಕೊಟ್ಟು ಕಳುಹಿಸಿ, ಅನಂತರ ಅಲ್ಲಿಯ ಭಕ್ತರ ಭಕ್ತಿಯೊಳು ಸ್ವಲ್ಪ ದಿವಸವಿದ್ದು ಆ ಬಳಿಕ ಅಲ್ಲಿಯ ದೇವಭಕ್ತರ ಕರಿಸಿಕೊಂಡು ಅವರಿಗೆ ತಾವು ಕಾಯ ಸಹಿತವಾಗಿ ಈ ಸ್ಥಳದಿ ನಿರ್ವಯಲಾಗುವೆವು, ನಾಳಿನ ಉದಯಕೆ ನೀವು ಸರ್ವರೂ ಬಾಹುದು ಎಂದು ನಿರೂಪವಾಗಲು ಆ ಕೂಡಲೆ ಸಮಸ್ತರು ಸಾಷ್ಟಾಂಗವೆರಗಿ ಸ್ವಾಮಿ ಪಾದವು ಕಾಯ ಸಹಿತವಾಗಿ ನಾಳಿನ ಉದಯಕೆ ಸಾಂಬಲೋಕಕೆ ದಯಮಾಡಿಸಿದರೆ ತಮ್ಮಯ ಕುರುಹು ಏನಾದರೂ ಒಂದು ದಯಪಾಲಿಸಿದರೆ ಅದನ್ನು ನಾವು ಪೂಜಿಸಿಕೊಂಡು ನಮ್ಮ ವಂಶಪಾರಂಪರ್ಯವಾಗಿ ಕೃತಾರ್ಥರಾಗುವೆವು. ಎಂದು ಬಿನ್ನೈಸಿಕೊಳಲು ನಿರ್ವಯಲಾಗುವ ಸಮಯದಿ ತಮ್ಮಯ ಕಮಂಡಲುವಾದ ಮಗಿಯನ್ನೂ ಪಾವುಗೆ ಚಿತ್ತ ಸಹಿತವಾಗಿ ಕೊಟ್ಟು ಸಮಸ್ತರಿಗೆ ಆಶಿವಾರ್ದವಂ ಮಾಡಿ ಉರಿಕರ್ಪುರದಂತೆ ನಿರ್ವಯಲಾದರು. ಅದೇ ಸ್ಥಳದಲ್ಲಿ ಮಠವಂ ಕಟ್ಟಿ ಶೂನ್ಯ ಪೀಠವೆಂಬ ಗದ್ದುಗೆಯಂ ನಿರ್ಮಿಸಿ ಅದರ ಮೇಲೆ ಮಗಿಯಂ ಚಿತ್ತ ಪಾವುಗೆಯಂ ನಿರಿಸಿ ಇವೊತ್ತಿಗೂ ಪೂಜಿಸುವರು. ಆ ಸ್ಥಳದಲ್ಲಿ ಇವೊತ್ತಿಗೂ ಅನೇಕ ಪೂಜೋತ್ಸಾಹಂಗಳು ನಡೆಯುವವು ಇವರ ತೋರ ಗದ್ದಿಗೆ ತೇರದಾಳದಲ್ಲಿರುತ್ತದೆ. ಆ ಮಠದಲ್ಲಿ ಪ್ರಭುಸ್ವಾಮಿಗಳವರ ಹೆಸರಿನಿಂದ ಮಗಿಯನ್ನಿಟ್ಟು ಪೂಜಿಸುವದರಿಂದ ಮಗಿಪ್ರಭುವೆಂಬ ರೂಢನಾಮವಾಗಿದೆ. ಇದಕ್ಕೆ ಇವರ ಸ್ಥಲ ಪುರಾಣವೇ ಸಾಕ್ಷಿ” ಎಂದು ಬರೆಯಲ್ಪಟ್ಟಿದೆ.

ಈ ಚರಿತ್ರೆಗೂ ಪ್ರಭುಲಿಂಗಲೀಲೆ ಮೊದಲಾದ ಗ್ರಂಥಗಳಲ್ಲಿ ಕಂಡುಬರುವ ಮೂಲ ಅಲ್ಲಮಪ್ರಭುವಿನ ಚರಿತ್ರೆಗೂ ಎಷ್ಟು ಅಂತರವಿ

ದೆಂಬುದು ಯಾರಿಗಾದರೂ ಸ್ಪಷ್ಟವಾಗದೆ ಇರಲಾರದು. ಆದ್ದರಿಂದ ಈ ಬಸವಪ್ರಭುವು ಮೂಲ ಅಲ್ಲಮನೆಂದು ತಿಳಿಯುಲಿಕ್ಕೆ ಬರಲಾರದು.

೭. ಮೇಲೆ ವಿವರಿಸಿದ ಚರಿತ್ರೆಯಲ್ಲಿ ಕಂಡು ಬರುವ ವಿಷಯಗಳು ಅಂದರೆ ಬಸವಪ್ರಭು ಸ್ವಾಮಿಗಳು ಕೆಳದಿ ದೇಶಕ್ಕೆ ಹೋದದ್ದು, ಅಲ್ಲಿಂದ ಹಿರೇಸೂರು ಕಿರೇಸೂರು ಗ್ರಾಮಗಳಿಗೆ ಹೋದದ್ದು, ಆಮೇಲೆ ಹುಕ್ಕೇರಿ ನಾಡಿಗೆ ಹೋಗಿ, ಅಲ್ಲಿಂದ ಹನಗಂಡಿಗೆ ದಯಮಾಡಿಸಿ, ಅಲ್ಲಿಯ ಜೈನಧೊರೆಗೆ ವೀರಶೈವಮತ ದೀಕ್ಷೆಕೊಟ್ಟದ್ದು, ಆಮೇಲೆ ತೇರದಾಳದಲ್ಲಿ ಸಮಾಧಿಸ್ಥರಾದದ್ದು. ಈ ಎಲ್ಲ ಸಂಗತಿಗಳು ಶಿ. ಮೂ. ಬುದ್ದಯ್ಯನವರು ಪ್ರಸಿದ್ಧಿಸಿದ ಪದ್ಯಗಳಿಂದ ಸಮರ್ಥನೆ ಹೊಂದುವವೋ ಹ್ಯಾಗೆ ಎಂಬದನ್ನು ನಾವು ಶಿವಾನುಭವ ಪತ್ರಿಕೆಯ ೪ನೇ ಸಂಚಿಕೆಯಲ್ಲಿ ಕೆಲವು ಪದ್ಯಗಳನ್ನು ಉದಹರಿಸಿದ್ದೇವೆ. ಅವುಗಳನ್ನು ನಾವು ಇಲ್ಲಿ ಪುನಃ ವಿವರಿಸುವದು ಅವಶ್ಯವಿಲ್ಲ.

೮. ಆದರೆ ಮಿ. ಹುಂಡೇಕಾರ ಇವರು ಬಸವಪ್ರಭು ಸ್ವಾಮಿಗಳು ಬಾಗಲಕೋಟೆಗೆ ಸಮೀಪವಾಗಿರುವ ಶಿರೂರ ಮತ್ತು ಕಿರಸೂರ ಗ್ರಾಮಗಳಿಗೆ ಹೋಗದೆ ಹುಬ್ಬಳ್ಳಿ ತಾಲೂಕಿನಲ್ಲಿರುವ ಹಿರಸೂರು ಕಿರಸೂರು ಗ್ರಾಮಗಳಿಗೆ ಹೋಗಿರಬೇಕೆಂದು ತಮ್ಮ ಲೇಖದಲ್ಲಿ ಹೇಳಿರುವರು. ಇದು ನಿಜವಿರಬಹುದು. ಆದರೆ ಈ ಗ್ರಾಮಗಳಲ್ಲಿ ಬಸವಪ್ರಭುಗಳ ಕುರುಹುಗಳು ಏನಾದರೂ ಇವೆಯೋ ಹ್ಯಾಗೆ ಎಂಬದನ್ನು ಅವರು ಅಲ್ಲಿ ಶೋಧಿಸಬೇಕೆಂದು ನಮ್ಮ ಸೂಚನೆ ಇದೆ.

ಮೇಲ್ಕಂಡ ಸಂಗತಿಗಳ ಮೂಲಕ ತೇರದಾಳದಲ್ಲಿ ಐಕ್ಯ ಹೊಂದಿದ ಬಸವಪ್ರಭುಗಳು ಮೂಲ ಅಲ್ಲಮಪ್ರಭುವಾಗಿರಲಿಕ್ಕಿಲ್ಲೆಂದು ನಮಗೆ ತೋರುತ್ತದೆ. ಆದರೆ ಶಿ. ಮೂ. ಬುದ್ದಯ್ಯನವರು ಹನಗಂಡಿ ದೇಸಾಯರಾದ ಮಗೆಪ್ಪದೇಸಾಯಿ, ಚನ್ನಪ್ಪ, ಮತ್ತು ಗುರುಬಸವ ಇವರಿಂದ ರಚಿತವಾದ ೩೩೦೦ ಪದ್ಯಗಳಲ್ಲಿ ಈಗ ಉಪಲಬ್ಧವಾಗಿರುವ ೧೨೭ ಪದ್ಯಗಳನ್ನು ಮಾತ್ರ ಪ್ರಸಿದ್ಧಿಸಿದ್ದಾರೆ. ಆದರೆ ಈ ಎಲ್ಲ ಪದ್ಯಗಳು ಪ್ರಸಿದ್ಧವಾದ ಬಳಿಕ ಬಸವಪ್ರಭುಗಳ ವಿಷಯವಾಗಿ ಹೆಚ್ಚಿಗೆ ಸಂಗತಿಗಳು ಹೊರಬೀಳುವ ಸಂಭವವದೆ. ಈ ಕಾರ್ಯವನ್ನು ಶಿ. ಮೂ. ಬುದ್ದಯ್ಯನವರು ಕೈಕೊಂಡು ಈ ವರೆಗೆ ಅಪರಿಚಿತವಾಗಿರುವ ಈ ಮೂವರ ಕವಿಗಳ ಪದ್ಯಗಳನ್ನು ಅವರು ಹೊರಪಡಿಸಿದಲ್ಲಿ ಅವರು ವಾಙ್ಮಯ ಶೋಧದಲ್ಲಿ ಮಹತ್ತಾದ ಕಾರ್ಯವನ್ನು ಮಾಡಿದಂತಾಗುವದು.

---

# ನನ್ನ ಬರೆ.

(ಲೇಖಕಃ— ಈಶ್ವರ ಸಣಕಲ್ಲ ರಬಕವಿ.)



ವಾ. ಷ. ಕಾರಿರುಳು ಮುಸುಕಿಹುದು, ಜಗವೆಲ್ಲ ಮಲಗಿಹುದು
ತೋರುವದು ಸುತ್ತಲೂ ಶಾಂತತೆಯೆ ಶಾಂತತೆಯು
ಹಾರಲ್ಕೆ ಹೃದಯವೊಂದೆಡೆ ಬಿಡದೆ ಮಲಗಿರುವ ಕಬ್ಬಿಗನು ಕಣ್ತೆರೆಯುತ
ಏರೇರುತಿಹ ಬಗೆಯ ಸಂಗೊಳಿಸಿ, ದೀವಿಗೆಯ
ನೇರಿಸುತ ನಿರುಕಿಸಲು ಬೆಳಕಿಂಡಿಯೊಳು ತಾನು
ಜಾರುತಿಹ ತಾರೆಗಳು ಹೀರುತವನೆದೆಯನ್ನು 'ನನ್ನನೇ ಬರೆ'ಯೆನುವವು ॥೧॥

ತಂಗಾಳಿ ತೊನೆಯುವದು ಮುಂಬಗಲು ಬಂದಿಹದು
ಕಂಗಳನ್ನೊರೆಯಿಸುತೆ ಕಬ್ಬಿಗನು ಕೂಡ್ರುವನು!
ಅಂಗಣದೊಳಿಹ ಗಿಡದ ಮೇಲ್ಕುಳಿತು ಹಕ್ಕಿಗಳು ನಲುಮೆಯಿಂ ಚಿಲಿಪಿಲಿಸುತ
ಸುಂಗುತವನೆದೆ ಬಗೆಯು ಹಾರುತ್ತ ಹುರುಪಿನಿಂ
ದಂಗಾಂಗಗಳಲಿ ಪುಳುಕಾಂಕುರವ ಪುಟ್ಟಿಸುತೆ
'ಇಂಗಿಹುದೆ ನಲುಮೆಸೆಲೆ ನಿ ಏಳೇಳು ಕಬ್ಬಿಗನೆ ನನ್ನನೇ ಬರೆ'ಯೆನುವವು॥೨॥

ಮೂಡುವನು ನೇಸರನು ಮೂಡಣದ ದಿಕ್ಕಿನೊಳು
ಹಾಡುತ್ತ ಕಬ್ಬಿಗನು ಹೊರಬಿದ್ದು ಹೋಗುವನು
ಕೇಡುತಿಹ ಗಾಳಿಯೊಳು ಸರುಗಂಪನುರೆ ಬೀರಿ ನಗುತಲಿರುವಲರೋಳಿಯು
“ಬಾಡಿರುವ ಬಗೆ ಬಿಟ್ಟು ಕೂರ್ಮೆಯಿಂದಾಡುವೆವು
ನೋಡು ನೋಡಿತ್ತ ನೀ ಸುಮ್ಮನೇ ಕೋಡುತಿಹೆ
ನಾಡೆ ಸೊವಡನು ಕೊಡುವ ಸಂತಸದ ಬೀಡಾದ ನಮ್ಮನೇ ಬರೆ'ಯೆನುವವು ॥೩॥

ನಡುವಗಲು ಬಂದಿಹುದು, ನೇಸರನ ಕದಿರುಗಳು
ನಡುತಿಹವು ನೆಟ್ಟಗೇ ಮಾನಿಸರ ನೆತ್ತಿಯೊಳು
ಜಡಸೃಷ್ಟಿ ಸುಮ್ಮನೇ ನಿಂತಿಹಳು ಬಿಸಿಲಿನೊಳು ಸುಳುವಿಲ್ಲ ಸಪ್ಪಳಿಲ್ಲ !

ಸೊಡಬಲಿಯೊಳಲೆಯುತಿಹ ಕಬ್ಬಿಗನ ಬಗೆಯುಮರು–
ಳಿಡಿದಂತೆಯಾಗಿರಲು ಸಾವಿನೊಲು ನಿಲ್ಲುವನು !
ಹೊಡೆಯುತಿರೆ ಹೃದಯವೊಂದೆಡೆಬಿಡದೆ ಜಡಸೃಷ್ಟಿ 'ನನ್ನನೇ ಬರೆ' ಯೆನುವಳು ||೪||

ಇಳಿಹೊತ್ತು ಕಳೆದೋರೆ ಮನೆಬಿಟ್ಟು ಕಬ್ಬಿಗನು
ಹೊಲದೊಳಗೆ ಹೋಗುವನು ಸುತ್ತಲೂ ನೋಡುವನು
ಎಳೆವಿಸಿಲಿನೊಳು ಹಾರುತಿಹ ಹಕ್ಕಿಗಳ ಹಿಂಡಿನಿನಿ ದನಿಯೊಳುರೆ ಬೆರೆಯುತ
ಸುಳಿಗಾಳಿಯೊಯ್ಯನೊಯ್ಯನೆ ಬೀಸಲದರಿಂದೆ
ತಲೆಹಾಕಿ ಮುರುಕು ಮಾಡುತಲಿಳೆಗೆ ಮಣಿದೇಳು
ತೊಲುಮೆಯಿಂ ನಲಿನಲಿವ ಹಚ್ಚನ್ನ ಪೈರುಗಳು 'ನನ್ನನೇ ಬರೆ' ಯೆನುವವು ॥೫॥

ಬೆಳದಿಂಗಳೆಲ್ಲೆಡೆಯೊಳುಕ್ಕಿಹುದು, ಕಬ್ಬಿಗನು
ಹೊಳೆ ದಂಡೆಯೊಳು ನಿಲಿಸಿರುವ ಚಿಕ್ಕ ನಾವೆಯೊಳು
ಕುಳಿತು ಚಕ್ಕಂದದಿಂ ಹುಟ್ಟುಕಡಿಯುತೆ ನೀರಿನಾಟವನ್ನಾಡುತಿರಲು,
'ಸುಳುಸುಳಿಂ'ಬುಲಿಗೇಳಿ ಸುಮ್ಮನೇ ನಿಲ್ಲುವನು
ತೊಳಗುತಿಹ ತಿಂಗಳನು ತಲೆಯನ್ನು ಸೆಳೆಯುತಲಿ,
ಗಳಗಳನೆ ಹರಿಯುತಿಹ ಹೊಳೆಯೊದೆಯು ಜಗ್ಗುತಲಿ 'ನನ್ನನೇ ಬರೆ' ಯೆನುವವು ॥೬॥

ಮುಡಿಸಡಲಿಹುಡಿಯಿಡಿದ ಮುಂಗುರುಳು, ಕಂಬನಿಯು
ಮಿಡಿದು ಕೆಂಪಾಗಿರುವ ಕಣ್ಣುಗಳು, ಬಿಸನದಿಂ
ದಡದಡನೆಯುದರುತಿಹ ತುಟಿಜೋಡು, ಕಳೆಗುಂದಿ ಕಂದಿರುವ ಮೊಗ ಬಿಂಬವು,
ಮಿಡುಕುತಿಹ ಮನವು, ನೀರನ್ನಂಗಳಿಲ್ಲದಲೆ
ಒಡಕಾಗಿರುವ ದೇಹ— ಪತಿವಿರಹಿಣಿಯು ನೋಡಿ-
ದೊಡನವಳ ಪ್ರೇಮವದು ಕಬ್ಬಿಗನ ಬಗೆ ಸೇರಿ 'ನನ್ನನೇ ಬರೆ'ಯೆನುವದು ॥೭॥

ಜುಡುಪಾದ ಪರ್ವತದ ತುದಿಯು ಮೆಲ್ನಿಲ್ಲುವನು
ಕಡಲೊಂದು ಕೆಳಗಿಳೆಯೊಳಲೆಗಳಿಂದೊಪ್ಪುವದು
ಬೆಡಗಿನಿಂ ಕೂಡಿರುವ, ಮೇಲೊಂದು ಮೇರೆಯಿಲ್ಲದ ಮುಗಿಲು ಮೆರೆಯುತಿಹುದು

ಪಡಗರದ ಪಟ್ಟಣಗಳೆದ್ದಿರುವ ಬೆಟ್ಟಗಳು
ಕಡುಪೆಂಪ ತಾಳ್ದಹವು! ಕಂಡನಾ ಕಬ್ಬಿಗನು!
'ಒಡೆಯನಾನಿವಕೆಲ್ಲ, ನನ್ನನೇ ಬರೆ'ಯೆಂಬ ನುಡಿಗೇಳಿ ಬೆರಗಾದನು ॥೮॥

"ಮಗುವೆ, ಇದ್ದಿಹ ಮಕ್ಕಳೆಲ್ಲ ಪರಪೆಣ್ಗಳಿಗೆ
ಬಗೆ ಸೋತು ನನ್ನನೇ ಮರೆತಿಹರು ಅಲ್ಲ! ಇ-
ನ್ನಗಲಿದರ ಮಾತುತೆಗೆದೊಡೆಯುಳುವು ಸೇರ್ಚವದು ಮಾಡಲೇಂ ಗತಿಗೇಡಿಯು,
ದುಗುಡವದು ಕಾಡುವದು! ಕೈಕಾಲು ತುಂತರಿಸಿ
ಯೊಗೆದಿಹರು ಕಲ್ಲೆದೆಯ ಕಟುಕರಕಟಕಟ! ಹಾ!
ಮಗುವೆ, ಇಂತೆನ್ನ ಬರೆ'ಯೆಂದೆನಲು, ಕರ್ನಾಟಿ, ಕಬ್ಬಿಗನು 'ಹಾ' ಯೆನುವನು ॥೯॥

# ಶ್ರೀ ರೇವಣಸಿದ್ಧ ಕ್ಷೇತ್ರ.

(ಲೇಖಕ:— ಬಿ. ಶಿವಮೂರ್ತಿಶಾಸ್ತ್ರಿ ಕೀರ್ತನ ಕೇಸರಿ, ಕವಿರತ್ನ
ಹುಲ್ಕುಂಟೆಮಠ ತುಮಕೂರು.)





ಭುವನ ಪ್ರಸಿದ್ಧರೂ, ವೀರಶೈವ ಪ್ರಥಮಾಚಾರ್ಯರೂ, ನಿಗಮಾಗಮ ಪಾರಂಗತರೂ ಆದ ಜಗದ್ಗುರು ರೇಣುಕಾಚಾರ್ಯರ ವಿಷಯವಾಗಿ ಹಲವು ಗ್ರಂಥಗಳೂ ಹಲವು ಕ್ಷೇತ್ರಗಳೂ ಅವರ ಮಾಹಾತ್ಮ್ಯಕ್ಕೆ ಸಾಕ್ಷಿಯಾಗಿವೆ. ನಾನು ಬೆಳಗಾವ ಜಿಲ್ಹೆಯ ಬೆಲ್ಲದ ಬಾಗೇವಾಡಿಯಲ್ಲಿ ಕೀರ್ತನ ಹೇಳುತ್ತಿದ್ದಾಗ ಅಲ್ಲಿಗೆ ೧೦ ಮೈಲು ದೂರದಲ್ಲಿ ಶ್ರೀ ರೇವಣಸಿದ್ಧ ಕ್ಷೇತ್ರವಿದೆಯೆಂಬುದನ್ನು ಕೇಳಿ ಆ ಪುಣ್ಯಕ್ಷೇತ್ರಕ್ಕೆ ಒಂದು ದಿನ ಪ್ರಯಾಣ ಮಾಡಿದೆನು. ಈ ಕ್ಷೇತ್ರ ಪರಿಚಯವು ಪ್ರತಿಯೊಬ್ಬ ವೀರಶೈವನಿಗೂ ಸಮಸ್ತ ಕನ್ನಡಿಗರಿಗೂ ಅವಶ್ಯಕವೆಂದು ಭಾವಿಸಿ ಈ ಬರಹವನ್ನು ಬರೆದಿರುವೆನು.

ಬೆಂಗಳೂರಿನಿಂದ ಪುಣೆಯ ಕಡೆಗೆ ಹೋಗುವ ರೈಲು ಮಾರ್ಗದಲ್ಲಿ ಬೆಳಗಾವಿಯ ನಿಲ್ದಾಣವಾದ ಮೇಲೆ ಬೆಲ್ಲದ ಬಾಗೇವಾಡಿಯ ಸಣ್ಣ ನಿಲ್ದಾಣವೊಂದು ಸಿಗುತ್ತದೆ. ಅಲ್ಲಿಂದ ಬೆಲ್ಲದ ಬಾಗೇವಾಡಿಯು ಎರಡು ಮೈಲು ದೂರದಲ್ಲಿದೆ. ಪ್ರಯಾಣಿಕನು ಈ ಬಾಗೇವಾಡಿಯಿಂದ ಕಾಲು ದಾರಿಯಲ್ಲಾಗಲಿ ಬಂಡಿಯ ಮಾರ್ಗದಲ್ಲಾಗಲಿ ರೇವಣಸಿದ್ಧ ಕ್ಷೇತ್ರವನ್ನು ಸೇರಬಹುದು.

ಈ ಕ್ಷೇತ್ರವಿರುವ ಪ್ರದೇಶವು ಕೊಲ್ಲಾಪುರ ರಾಜ್ಯಕ್ಕೆ ಸೇರಿದುದು. ಈ ಪುಣ್ಯ ಭೂಮಿಯು ಗುಡ್ಡಗಾಡಿನಲ್ಲಿ ಒಂದು ಗುಡ್ಡದ ಬುಡದಲ್ಲಿದೆ. ಆ ಗುಡ್ಡವನ್ನು ಜನರು ರೇವಣಸಿದ್ಧನ ಗುಡ್ಡವೆಂದು ಕರೆವರು. ಆ ಗುಡ್ಡದ ತಪ್ಪಲಿನಲ್ಲಿ ದೇವಾಲಯವಿದೆ. ಈ ರೇವಣಸಿದ್ಧ ದೇವಾಲಯದ ಪಕ್ಕದಲ್ಲಿ ಒಂದು ಮಠವೂ, ಛತ್ರವೂ ಇವೆ. ದೇವಾಲಯದ ಸುತ್ತಲೂ ಬಿಲ್ವವೃಕ್ಷಗಳೂ ಹೂವಿನ ಗಿಡಗಳೂ ಇದ್ದು ಸನ್ನಿವೇಶವು ಬಹು ರಮಣೀಯವಾಗಿದೆ. ದೇವಾಲಯದ ಹತ್ತಿರ ಒಂದು ಬಾವಿಯೂ ಮತ್ತೊಂದು ಸರೋವರವೂ ಇವೆ. ಇಲ್ಲಿಗೆ ಬಂದವರನ್ನು ಸಂತೈಸಲು ಇಲ್ಲಿ ಮಠದಲ್ಲಿರುವ ಶ್ರೀ ಗುರುಸಿದ್ದಯ್ಯ ಸ್ವಾಮಿಗಳು ಸದಾ ಶ್ರಮಪಡುತ್ತಿರುವರು.

ಶ್ರೀ ರೇವಣಸಿದ್ಧನ ಗುಡ್ಡದ ಮೇಲೆ ರೇಣುಕರ ಪಾದದ ಗುರುತುಗಳೂ ಒಂದು ದೇವಾಲಯವೂ ಇವೆ. ಈ ಗುಡ್ಡದ ತಪ್ಪಲಿನಲ್ಲಿ ಕ್ಷೇತ್ರವು ರಾರಾಜಿಸುತ್ತದೆ. ದೇವಾಲಯದ ಮಹಾದ್ವಾರವನ್ನು ಶ್ರೀ ಗುರುಸಿದ್ದಯ್ಯ ಸ್ವಾಮಿಗಳು ಕಟ್ಟಿಸುತ್ತಿರುವರು. ಈ ಮಹಾದ್ವಾರವೂ, ಛತ್ರದ ಕೆಲಸವೂ ಅರೆವಾಸಿಯಾಗಿ ಬಿಟ್ಟಿದೆ. ಇವೆರಡು ಕಟ್ಟಡಗಳೂ ಪೂರ್ಣವಾದರೆ ಕ್ಷೇತ್ರದ ಶೋಭೆಯು ಇಮ್ಮಡಿಯಾಗುವದರಲ್ಲಿ ಸಂಶಯವಿಲ್ಲ.

ಈ ದೇವಾಲಯದ ಸೇವಾರ್ಥವಾಗಿ ಕೊಲ್ಲಾಪುರದ ಸರಕಾರದವರಿಂದ ಸ್ವಲ್ಪ ಭೂಮಿಯು ಕೊಡಲ್ಪಟ್ಟಿದೆ. ಅದರ ಸಹಾಯದಿಂದ ಪೂಜಾದಿ ಕಾರ್ಯಗಳು ನಡಿಯಬೇಕಾಗಿದೆ. ಈ ಕ್ಷೇತ್ರದ ಬಾಹ್ಯಾಭಿವೃದ್ಧಿಗಾಗಿ ಶ್ರೀ ಗುರು ಸಿದ್ದಯ್ಯ ಸ್ವಾಮಿಗಳು ಬಹಳವಾಗಿ ಶ್ರಮಪಡುತ್ತಿರುವರು. ಈ ಮಠಕ್ಕೆ ಹಕ್ಕುದಾರರಂತಿದ್ದು ಈ ಮಠದಲ್ಲಿಯೇ ವಾಸಿಸುತ್ತಿರುವ ಮತ್ತೊಂದು ವ್ಯಕ್ತಿಯು ಶ್ರೀ ಗುರುಸಿದ್ದಯ್ಯನವರ ಕಾರ್ಯಗಳಿಗೆ ಸ್ವಾರ್ಥಬುದ್ಧಿಯಿಂದ ಅಡಚಣೆಯನ್ನುಂಟು ಮಾಡುತ್ತಿರುವರು.

ಶ್ರೀ ರೇಣುಕ ಭಗವತ್ಪಾದರು ದೇಶಾಟನ ಮಾಡುವಾಗ್ಗೆ ಆ ಮಹಾತ್ಮರ ಪಾದಸ್ಪರ್ಶವಾದ ಸ್ಥಳಗಳೆಲ್ಲವೂ ಈಗ ಪುಣ್ಯಕ್ಷೇತ್ರಗಳಾಗಿವೆ.

ನಮಗೆ ತಿಳಿದಮಟ್ಟಿಗೆ ಕೆಳಗೆ ಸೂಚಿಸಿರುವ ಸ್ಥಳಗಳು ಶ್ರೀ ರೇಣುಕರ ವಿಷಯವಾಗಿ ಪ್ರಸಿದ್ಧವಾಗಿವೆ.

೧. ಶ್ರೀಜಗದ್ಗುರು ರೇಣುಕರ ಜನ್ಮಸ್ಥಾನವಾದ ಕೊಲ್ಲಿಪಾಕಿ ಕ್ಷೇತ್ರ.

೨. ಶ್ರೀಜಗದ್ಗುರು ರೇಣುಕಾಚಾರ್ಯರ ಸಿಂಹಾಸನವಾದ ವೀರಪೀಠವಿರುವ ಶ್ರೀಮದ್ರಂಭಾಪುರೀ ಕ್ಷೇತ್ರ. ಇಲ್ಲಿ ಶ್ರೀ ರುದ್ರಮುನಿ ಶಿವಾಚಾರ್ಯರ ದೇವಾಲಯವೂ ಸಹ ಇದೆ.

೩. ಸಾತಾರ ಜಿಲ್ಹೆಯಲ್ಲಿ ಮಹಾರಾಷ್ಟ್ರ ದೇಶದಲ್ಲಿ ರೇಣಾವಿಯ ಹತ್ತರವಿರುವ ಶ್ರೀ ರೇವಣಸಿದ್ಧ ಕ್ಷೇತ್ರ.

೪. ಬೆಂಗಳೂರ ಜಿಲ್ಹೆಯಲ್ಲಿ ದಕ್ಷಿಣ ಕಾಶಿಯೆಂದು ಪ್ರಸಿದ್ಧವಾಗಿರುವ ಶಿವಗಂಗಾ ಕ್ಷೇತ್ರ. ಇಲ್ಲಿ ಬೆಟ್ಟದ ಪೂರ್ವಭಾಗದಲ್ಲಿ ರೇವಣಸಿದ್ಧ ದೇವಾಲಯವೂ, ಮೇಲಣ ಗವಿಮಠವೂ ರೇಣುಕ ಸ್ಥಾನಗಳು.

೫. ಬೆಂಗಳೂರ ಜಿಲ್ಹೆ ಕ್ಲೋಸ್‌ಪೇಟೆ ಹತ್ತರವಿರುವ ಶ್ರೀ ರೇಣುಕಗಿರಿ ಅಥವಾ ರೇವಣಸಿದ್ಧೇಶ್ವರನ ಬೆಟ್ಟ. ಇದು ರೇಣುಕರ ತಪಸ್ಸು ಮಾಡಿದ ಸ್ಥಳ.

೬. ಈಗ ನಮ್ಮ ಲೇಖನಕ್ಕೆ ವಿಷಯವಾದ ಕೊಲ್ಹಾಪುರ ರಾಜ್ಯಕ್ಕೆ ಸೇರಿದ ರೇವಣಸಿದ್ಧಕ್ಷೇತ್ರ.

ಶ್ರೀ ರೇಣುಕವಿಜಯ ರೇವಣಸಿದ್ಧ ಪುರಾಣಗಳನ್ನು ಓದಿ ನೋಡಿದರೆ ಇಷ್ಟೇ ಅಲ್ಲದೆ ಇನ್ನೂ ಹಲವು ಕ್ಷೇತ್ರಗಳು ಈ ಮಹನೀಯರ ಹೆಸರಿನಿಂದ ಪ್ರಸಿದ್ಧವಾಗಿರಬೇಕೆಂದು ಕಾಣುತ್ತದೆ. ಅವನ್ನೆಲ್ಲಾ ಹುಡುಕಿ ಪ್ರಕಟಿಸುವುದು ವೀರಶೈವರ ಕರ್ತವ್ಯವಾಗಿದೆ.

ಶ್ರೀ ರೇಣುಕ ಗುರುಸಾರ್ವಭೌಮರು ಕೊಲ್ಲಾಪುರದ ಗೋರಕ್ಷನ ಗರ್ವಭಂಗಕ್ಕೆ ಹೋಗುವಾಗ ಈ ರೇವಣಸಿದ್ಧ ಕ್ಷೇತ್ರದಲ್ಲಿ ಸ್ವಲ್ಪ ಕಾಲ ತಪಸ್ಸು ಮಾಡಿದರೆಂದು ತೋರುತ್ತದೆ. ಆ ತಪೋಭೂಮಿಯಲ್ಲಿಯೇ ಈಗ ದೇವಾಲಯವಿದೆ. ದೇವಾಲಯವು ಬಹಳ ಪ್ರಾಚೀನವಾಗಿ ತೋರುತ್ತದೆ. ಒಟ್ಟಿನಲ್ಲಿ ಈ ಸುಕ್ಷೇತ್ರವನ್ನು ರೇಣುಕ ಭಗವತ್ಪಾದರ ಒಂದು ಪವಿತ್ರ ಸ್ಥಾನವೆಂದು ಭಾವಿಸುವದರಲ್ಲಿ ಅನುಮಾನವಿಲ್ಲ. ವೀರಶೈವರೆನಿಸಿದವರೂ ಕನ್ನಡಿಗನೆನಿಸಿದವನೂ ತನ್ನ ಜೀವಿತದಲ್ಲಿ ಒಂದು ಬಾರಿಯಾದರೂ ಈ ಕ್ಷೇತ್ರ ದರ್ಶನ ಮಾಡುವುದು ಅತ್ಯಂತ ಅವಶ್ಯಕವಾಗಿದೆ.

# ಭ್ರಮಣ.

(ಲೇಖಕ:— ಈಶ್ವರ ಸಣಕಲ್ಲ ರಬಕವಿ)

---

(ವಾರ್ಧಿಕ ದೀರ್ಘ ದ್ವಿಪದಿ)

ಹೊರಬಯಲಿನೊಳು ಬಂದು, ಕಣ್ಣೀರಿನೊಳು ಮಿಂದು, ನಿರುಕಿಸಲು ನಾ ಸುತ್ತಲೂ
ಬೆರಗಿನೊಳಗಿಂದೆದ್ದು, ಬಗೆಯೊಂದು ಹೊರಬಿದ್ದು, ಹರಿಯುವದು ದೆಸೆ ದೆಸೆಯೊಳು ॥೧॥

ಪೂರ್ವವನು ದಿಟ್ಟಿಸುತ, ಗಗನವನು ನಿಟ್ಟಿಸುತ, ಪಡುವಣವ ನಾನೋಡಲು
ಪೂರ್ವದಿಂ ಕೊನೆವರೆಗು ಕಣ್ಮುಂದೆ ಹಾಯುವದು ಬಾಳುವೆಯ ನೋಟವೆಲ್ಲ! ॥೨॥

ಮೂಡಣದಿ ಹುಟ್ಟುಂಟು, ಮುಗಿಲಿನೊಳಗಿಡಿಬಾಳ್ವೆ, ಪಡುವಣದಿ ಸಾವಿರುವದು!
ಮೂಡಣವ ಪಡುವಣವ ಕೂಡಿಸುತಲಿಳೆಯೊಳಗೆ ನಡು ಮುಗಿಲು ಮೂಡಿರುವದು! ॥೩॥

ಹಗಲಿರುಳು ಶಶಿಸೂರ್ಯರುದಯಿಸುತ ಮೂಡಣದ ಬಸಿರಿನಿಂದೆದ್ದು ಬಂದು
ಮುಗಿಲಗಲಿನೊಳು ತಮ್ಮ ಬಾಳುವೆಯ ತೀರಿಸುತ ಪಡುವಣಕೆ ಬಂದು ನಿಂದು ॥೪॥

ಹಿಂದಿರುಗಿ ನೋಡಲ್ಕೆ ಮೊದಲನೆನಹೆಲವೂ ಮೈಯಲ್ಲಿ ಮೂಡುತಿರಲು,
ಸಂದು ಮೊದಲಿನ ಗತಿಗೆ, ಕೊನೆಗೆ ತಾವ್ ಮರೆಯಾಗಿ ಹೋಗುವರು ಪಡುವಣದೊಳು ॥೫॥

ಭವದ ಬಟುಗೋಲಿನೊಳಗೀ ತಳದೊಳೇಳುತಲಿಯಾತಳದಿ ಮುಳುಗಲೇನು?
ನವನೆನಿಸಿಯಾ ತಳಕೆ, ಕೆಲಕಾಲ ಕಳೆದು ಮೇಣೀತಳಕೆ ಬರಲದೇನು?॥೬॥

ಹುಟ್ಟಿನಿಂ ಬಾಳುವೆಗೆ, ಬಾಳ್ವೆಯಿಂ ಮರಣಕ್ಕೆ, ಮರಣದಿಂ ಮತ್ತೆ ಹುಟ್ಟು!
ಇಟ್ಟಡಿಯನೆತ್ತಿ ಯೆತ್ತಿರುವಡಿಯ ಮುಂದಿಟ್ಟು ನಡೆಯುವೋಲಿದರ ಕಟ್ಟು! ॥೭॥

ಜಗವೆಲ್ಲ ಸೆಳೆಯುತಿದೆ; ಸೆಳೆದರೂ ಸೀಮೆಯಿದೆ ಯಾ ಸೀಮೆಯನು ದಾಟುತ
ಝಗಝಗನೆ ಹೊಳೆಯುತಲಿ ಸೆಳೆಯುತಿಹ ಬೆಳಕಿನೊಳು ಬೆರೆವುದದರೊಳು ಸೇರುತ ॥೮॥

ಮೇಲಿರುವ ಏಳ್ಗೆಗೀ ಜಗದಿಂನೆ ಹೆಣಗಾಟನಿಚ್ಚಣಿಕೆ ನಿಂತಿರುವುದು !
ಕಾಲಕಳಕೊಪ್ಪವಲೆಯುವನೇರುತಿಳೆಸೆಳೆತವನು ಏರಿ ಗುರಿಗಾಣ್ಬುದು ॥೯॥

---

# ಲಕ್ಷ್ಮೇಶ್ವರ ಶಿಲಾಶಾಸನದ ಸ್ಪಷ್ಟೀಕರಣವು.

## ಹೂಲಿಯ ಮರುಳು ಸಿದ್ಧೇಶ್ವರ.

ಲೇಖಕಃ—ಜ್ಯೋತಿಷ್ಯಾಲಂಕಾರ- ವೇ. ಬ್ರ. ಶ್ರೀ- ಸಿದ್ಧಾಂತಿ ಶಿವಬಸವಶಾಸ್ತ್ರಿಗಳು
ಪಂಚವರ್ಣ ಬೃಹನ್ಮಠ (ಹೂಲಿ.)





ಶ್ರೀವಾನುಭವದ ಇದೇ ಜೇಷ್ಠಮಾಸದ ಸಂಚಿಕೆಯಲ್ಲಿ ಶ್ರೀಯುತ ವೀರಭದ್ರಪ್ಪನವರು ಕೊಪ್ಪಳ ಬಿ. ಎ. ಹೆಡ್ ಮಾಸ್ತರ ಶ್ರೀ ಉಮಾವಿದ್ಯಾಲಯ ಲಕ್ಷ್ಮೇಶ್ವರ ಇವರು "ಪುಲಿಗೆರೆ (ಲಕ್ಷ್ಮೇಶ್ವರ) ಯಲ್ಲಿ ಹೊಸದಾಗಿ ದೊರೆತ ಶಿಲಾಶಾಸನವು ಹೂಲಿಯ ಮರುಳು ಸಿದ್ಧೇಶ್ವರ" ಯೆಂಬ ಅಮೂಲ್ಯವಾದ ಒಂದು ಲೇಖವನ್ನು ಬರೆದದ್ದು ಶಿವಾನುಭವದ ವಾಚಕರಿಗೆ ವಿದಿತವೇ ಆಗಿರುವದು. ನಮ್ಮ ವ್ಯವಸಾಯ ಬಂಧುಗಳಾದ ಶ್ರೀಯುತ ವೀರಭದ್ರಪ್ಪನವರು ಐತಿಹಾಸಿಕ ವಿಷಯದಲ್ಲಿ ಮನಸ್ಸುಹಾಕಿ ಈತರದ ಶಿಲಾಶಾಸನಗಳನ್ನು ಪ್ರಸಿದ್ಧಮಾಡುತ್ತಿರುವದು ಅತ್ಯಂತ ಮಹತ್ವದ ಸಂಗತಿಯಾಗಿರುವದು. ಇದಕ್ಕೂ ಪೂರ್ವದಲ್ಲಿ ಇವರು ಬರೆದ ವೀರಶೈವ ಪ್ರಾಚೀನತ್ವ ಎಂಬ ಪುಸ್ತಕವಾದರೂ ಈಗಿನ ಐತಿಹಾಸಿಕ ದೃಷ್ಟಿಯಿಂದ ಒಳ್ಳೇ ಮಹತ್ವದ್ದು ಇರುವದು. ಇರಲಿ. ಇವರು ಕೈಕೊಂಡ ಕಾರ್ಯಕ್ಕೆ ಪ್ರತಿಯೊಬ್ಬ ಕರ್ನಾಟಕಸ್ಥನೂ ವಿಶೇಷತಃ ಪ್ರತಿಯೊಬ್ಬ ವೀರಶೈವನೂ, ಎಷ್ಟು ಸಹಾಯ ಮಾಡಿದರೂ ಸ್ವಲ್ಪವೇ ಸರಿ.

ಪ್ರಕೃತ ನಮ್ಮ ಲೇಖಕನ ಅಭಿಪ್ರಾಯವೇನಂದರೆ ಶ್ರೀಯುತ ವೀರಭದ್ರಪ್ಪನವರು ಪ್ರಸಿದ್ಧ ಮಾಡಿದ ಶಿಲಾಶಾಸನದ ಸ್ಪಷ್ಟೀಕರಣ ಮಾಡಿ ಹೂಲಿ ಮರುಳು ಸಿದ್ಧೇಶ್ವರರು ಯಾರೆಂಬುವ ಸಂಶಯ ನಿವೃತ್ತಿಮಾಡುವದೇ ನಮ್ಮ ಮುಖ್ಯಾಭಿಪ್ರಾಯವಾಗಿರುವದು. ಶಿಲಾಶಾಸನದಲ್ಲಿ ಮಹಾ ಮಹಿಮಾಶಾಲಿಗಳೂ ಪರಶಿವಾವತಾರಿಗಳೂ ಆದ ಶ್ರೀ ರೇಣುಕರು ಭೂಲೋಕದಲ್ಲಿ ಅವತರಿಸಿದ ಕಾರಣವನ್ನು "ದಾರುಕ ನಿಮಿತ್ಯದ ಸೊಂಕಿನೊಳಂದು "ಯೆಂಬ ವಾಕ್ಯದಿಂದೆ ಉಲ್ಲೇಖಿಸಿರುವರು. ಇದಕ್ಕೆ ನಮ್ಮ ವೀರಭದ್ರಪ್ಪನವರು "ದಾರುಕ ಸಮ್ಮಂಧವು ಯಾವದೆಂಬುವದು

ನಮಗೆ ತಿಳಿಯುದು." ಯೆಂದು ಬರೆದಿರುವರು. ದಾರುಕ ಸಮ್ಮಂಧವು ಯಾವದೆಂಬುವದು ನಮ್ಮ ವೀರಶೈವರ ಪ್ರಸಿದ್ಧ ಗ್ರಂಥವಾದ ಸಿದ್ಧಾಂತ ಶಿಖಾಮಣಿಯಲ್ಲಿಯೂ ಶ್ರೀ ರೇವಣಸಿದ್ಧೇಶ್ವರ ಪುರಾಣದಲ್ಲಿಯೂ ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿರುವದು. "ಸಿದ್ಧಾಂತಶಿಖಾಮಣಿಯ ತೃತಿಯ ಪರಿಚ್ಛೇದದಲ್ಲಿ"

ಶ್ಲೋ. ಚಿಂತಾಮಣಿಃ ಪ್ರಸನ್ನಾನಾಂ ಶ್ರೀಕಂಠಃ ಪರಮೇಶ್ವರಃ ||
ಸಭಾಂತರ ಗತಂತತ್ರ ರೇಣುಕಂ ಗಣನಾಯಕಂ ||೬೭||

ಪ್ರಸಾದಂ ಸುಲಭಂ ದಾತುಂತಾಂಬೂಲಂ ಸತವಾಹ್ವಯತ್ ||
ಶಂಭೋರಾಹ್ವಾನ ಸಂತೋಷ ಸಂಭ್ರಮೇಣೈವ ದಾರುಕಂ ||೬೮||

ಉಲ್ಲಂಘ್ಯ ಪಾರ್ಶ್ವ ಮಗಮಲ್ಲೋಕನಾಥಸ್ಯ ರೇಣುಕಃ ||
ತವಾಲೋಕ್ಯ ವಿಭುಸ್ತತ್ರ ಸಮುಲ್ಲಂಘಿತ ದಾರುಕಂ ||೬೯||

ಮಾಹಾತ್ಮ್ಯಂ ನಿಜಭಕ್ತಾನಾಂ ದ್ಯೋತಯನ್ನಿದ ಮಬ್ರವೀತ್ ||
ರೇರೇರೇಣುಕ ದುರ್ಬುದ್ಧೇ ಕಥಮೇಷ ತ್ವಯಾಧುನಾ ||೭೦||

ಉಲ್ಲಂಘಿತ ಸಭಾಮಧ್ಯೇ ಮಮಭಕ್ತೋಹಿ ದಾರುಕಃ ||
ಲಂಘನಂ ಮಮ ಭಕ್ತಾನಾಂ ಪರಮಾನರ್ಥ ಕಾರಣಂ ||೭೧||

ಆಯುಃ ಶ್ರೀಯಂ ಕುಲಂ ಕೀರ್ತಿಂ ನಿಹಂತಿ ಹಿ ಶರೀರಣಾಂ ||
ಮಮಭಕ್ತ ಮವಜ್ಞಾಯ ಮಾರ್ಕಂಡೇಯಂ ಸುರಾಯಮಃ ||೭೨||
ಮತ್ಪಾದ ತಾಡನಾದಾಸೀತ್ ಸ್ಮರಣೀಯಕಳೇವರಃ ||

ಇವೇಮೊದಲಾದ ಶ್ಲೋಕಗಳಿಂದ ನಿರ್ಣಯಿಸಿರುವದು. ಇದರ ಅಭಿಪ್ರಾಯವೇನಂದರೆ ಕೈಲಾಸದಲ್ಲಿ ಶ್ರೀ ಪರಶಿವನ ಒಡ್ಡೋಲಗದಲ್ಲಿ ಪ್ರಮಥಗಣ ದೇವಗಣ ಕಿನ್ನರ, ಕಿಂಪುರುಷ, ಮನುಮುನಿಗಳೆಲ್ಲರು ಶ್ರೀ ಪರಮಾತ್ಮನ ಸೇವೆಯನ್ನು ಮಾಡಿ ಪ್ರಸಾದವನ್ನು ತೆಗೆದುಕೊಳ್ಳುವ ಸಮಯದಲ್ಲಿ ಶ್ರೀಪರಶಿವನು ರೇಣುಕರನ್ನು ಪ್ರಸಾದ ಗ್ರಹಣಕ್ಕೆ ಕರೆಯಲು ರೇಣುಕರು ದಾರುಕ ಗಣಾಧೀಶ್ವರರನ್ನು ದಾಟಿ ಹೋಗಲಾಗಿ ಪರಶಿವನು ಅದನ್ನು ತಿಳಿದು ನೀನು ದಾರುಕ ಗಣಾಧೀಶ್ವರರನ್ನು ಲೆಕ್ಕಿಸದೆ ಅವರನ್ನು ದಾಟಿ ಬಂದದ್ದು ಅನುಚಿತವೆಂತಲೂ ಪೂರ್ವದಲ್ಲಿ ನನ್ನ ಭಕ್ತರನ್ನು ಲೆಕ್ಕಿಸದಿದ್ದವರು ಅನೇಕ ಕಷ್ಟಕ್ಕೆ ಗುರಿಯಾದರೆಂದೂ ರೇಣುಕರಿಗೆ ತಿಳಿಸಿ ನೀನು ದಾರುಕರನ್ನು ದಾಟಿದ ನಿಮಿತ್ಯದಿಂದ ಭೂಲೋಕದೊಳಗೆ ಶ್ರೀ ಕೊಲ್ಲಿಪಾಕಿ ಸೊಮೇ

ಶ್ವರ ಲಿಂಗದಿಂದವತರಿಸಿ ಹದಿನಾಲ್ಕುನೂರು ವರುಷಗಳ ವರೆಗೆ ಭೂಮಿಯಲ್ಲಿ ವಾಸಮಾಡಿ ವೀರಶೈವ ಮತವನ್ನು ಪ್ರತಿಷ್ಠಾಪಿಸಿ ಪುನಃ ನಮ್ಮ ಸ್ಥಾನಕ್ಕೆ ಬರತಕ್ಕದೆಂದು ಅಪ್ಪಣೆ ಮಾಡಿದ್ದರಿಂದ ರೇಣುಕರ ಅವತಾರವಾಯಿತೆಂದು ತಿಳಿಯುವದು.

ಇದೇ ವಿಷಯವು ಶ್ರೀ ರೇವಣಸಿದ್ಧೇಶ್ವರ ಪುರಾಣದಲ್ಲಿಯೂ ವಿವರಿಸಲ್ಪಟ್ಟಿರುವದು. ಆದರೆ ಇದರಂತೆ ಲಕ್ಷ್ಮೇಶ್ವರ ಶಿಲಾಶಾಸನದಲ್ಲಿಯು ಮೊದಲಿನ ಎರಡು ಪದ್ಯಗಳಿಂದ ಸ್ಪಷ್ಟವಾಗಿರುವದು. ಮುಂದಿನ ನಾಲ್ಕು ಪದ್ಯಗಳಿಂದ ಆ ರೇಣುಕರು ಹೊಲಿಯ ಮರುಳು ಸಿದ್ಧೇಶ್ವರರೆಂಬ ನಾಮವನ್ನು ಧರಿಸಿ ಅನೇಕ ಲೀಲೆಗಳನ್ನು ಮಾಡಿ ಶಾಲಿವಾಹನ ಶಕದ ೧೪೩೫ನೇ ಶ್ರೀಮುಖಸಂವತ್ಸರದ ಭಾದ್ರಪದ ಶುದ್ಧ ಪಂಚಮಿ ಆದಿತ್ಯವಾರದ ಪ್ರಾತಃಕಾಲದಲ್ಲಿ ಲಿಂಗಾಕಾರವಾದರೆಂದು ಬರೆಯಲ್ಪಟ್ಟಿರುವದು. ಆದರೆ ಸಿದ್ಧಾಂತ ಶಿಖಾಮಣಿಯಲ್ಲಿಯೂ ಶ್ರೀ ರೇವಣಸಿದ್ಧೇಶ್ವರ ಪುರಾಣದಲ್ಲಿಯೂ ತಾವು ಅವತರಿಸಿದ ಶ್ರೀ ಕೊಲ್ಲಿಪಾಕಿ ಸೋಮೇಶ್ವರ ಲಿಂಗದಲ್ಲಿಯೇ ಐಕ್ಯರಾದರೆಂದು ಬರೆಯಲ್ಪಟ್ಟಿದೆ. ಅಂದಮೇಲೆ ಶಿಲಾಶಾಸನದ ನಾಲ್ಕುಪದ್ಯಗಳ ಅಭಿಪ್ರಾಯವು ಏನಿರಬಹುದೆಂದು ಶಂಕೆಯು ಉತ್ಪನ್ನವಾಗುವದು. ಈ ಶಂಕಾ ಪರಿಹಾರಕ್ಕೆ ನಮ್ಮ ಪೂವಲ್ಲಿ ಪಂಚವಣ್ಣಿಗಿ ಬೃಹನ್ಮಠದ ಪಟ್ಟಾವಲಿಯು ಸಮಾಧಾನಕಾರಕವಾದ ಪ್ರಮಾಣವು.

ಪಟ್ಟಾವಲಿಯಲ್ಲಿ ಶ್ರೀ ರೇಣುಕರು ಪೂವಲ್ಲಿ ಕ್ಷೇತ್ರಕ್ಕೆ ದಯಮಾಡಿಸಿ ಬಹುಕಾಲ ತಪಸ್ಸನ್ನು ಮಾಡಿಕೊಂಡಿರಲು ಇಲ್ಲಿ ಶ್ರೀ ಜಗದ್ಗುರು ವಿಶ್ವಾರಾಧ್ಯ ಚಿತ್ಕಲಾಸ್ವರೂಪಿಗಳಾದ ಶ್ರೀ ಜಗದಾಚಾರ್ಯ ಸಿದ್ಧನಂದೀಶ್ವರ ಶಿವಾಚಾರ್ಯರ ಪಟ್ಟಾಭಿಷೇಕದ ಸಮಯದಲ್ಲಿ ಶ್ರೀ ರೇಣುಕರೇ ಚತುರಾಚಾರ್ಯರಾದ ಶ್ರೀ ರೇವಣಸಿದ್ಧೇಶ್ವರ-ಶ್ರೀಮರುಳಸಿದ್ಧೇಶ್ವರ ಶ್ರೀ ಏಕೋರಾಮಾರಾಧ್ಯ-ಶ್ರೀ ಪಂಡಿತಾರಾಧ್ಯರ-ರೂಪಗಳನ್ನು ಧರಿಸಿ ಶ್ರೀ. ಸಿದ್ಧನಂದೀಶ್ವರರ ಪಟ್ಟಾಭಿಷೇಕವನ್ನು ನೆರವೇರಿಸಿದರೆಂದೂ ಮತ್ತು ಶ್ರೀ ಸಿದ್ಧನಂದೀಶ್ವರ ಪೀಠದ ಪೂರ್ವ ದಿಕ್ಕಿನಲ್ಲಿ ತಮ್ಮ ಪೀಠವನ್ನೂ ದಕ್ಷಿಣ ದಿಕ್ಕಿನಲ್ಲಿ ಶ್ರೀ ಮರುಳುಸಿದ್ಧೇಶ್ವರ ಪೀಠವನ್ನೂ ಪಶ್ಚಿಮ ದಿಕ್ಕಿನಲ್ಲಿ ಏಕೋರಾಮರ ಪೀಠವನ್ನೂ ಉತ್ತರ ದಿಕ್ಕಿನಲ್ಲಿ ಪಂಡಿತಾರಾಧ್ಯರ ಪೀಠವನ್ನೂ ಸ್ಥಾಪಿಸಿದರೆಂದೂ ಸ್ಪಷ್ಟವಾದ ಉಲ್ಲೇಖವಿರುವದು. ಶ್ರೀ ರೇಣುಕರು ಏಕ

ಕಾಲಕ್ಕೆ ಅನೇಕ ರೂಪಗಳನ್ನು ಧಾರಣ ಮಾಡುತ್ತಿದ್ದರೆಂಬ ವಿಷಯವು ಎಲ್ಲರಿಗೂ ವಿದಿತವೇ ಇರುವದು. ಪೂರ್ವದಲ್ಲಿ ವಿಭೀಷಣನ ಮೂರು ಕೋಟಿ ಲಿಂಗ ಪ್ರತಿಷ್ಠೆಯ ಕಾರ್ಯದಲ್ಲಿ ಏಕಕಾಲಕ್ಕೆ ಮೂರುಕೋಟಿ ಆಚಾರ್ಯರ ರೂಪಗಳನ್ನು ಧಾರಣ ಮಾಡಿದಂತೆ ಶ್ರೀ ಸಿದ್ಧನಂದೀಶ್ವರರ ಪಟ್ಟಾಭಿಷೇಕದ ಸಮಯದಲ್ಲಿ ಚತುರಾಚಾರ್ಯರ ರೂಪಗಳನ್ನು ಧಾರಣ ಮಾಡಿದ್ದೇನು ಆಶ್ಚರ್ಯವಲ್ಲ. ಶ್ರೀ ರೇಣುಕರು ಸಿದ್ಧನಂದೀಶ್ವರರ ಪಟ್ಟಾಭಿಷೇಕದ ಅನಂತರ ಪೂಲಿಯ ಮರುಳುಸಿದ್ಧೇಶ್ವರರೆಂಬ ತಮ್ಮ ರೂಪವನ್ನು ಪುಲಗೆರೆ (ಲಕ್ಷ್ಮೇಶ್ವರದಲ್ಲಿಯೂ) ಏಕೋರಾಮರ ರೂಪವನ್ನು ರಾಮಗಿರಿಯಲ್ಲಿಯೂ ಪಂಡಿತಾರಾಧ್ಯರ ರೂಪವನ್ನು ಮಹಾಕೂಟ ದಲ್ಲಿಯೂ ಲಿಂಗಾಕಾರದಿಂದ ಪರಿತ್ಯಜಿಸಿ ಪುನಃ ರೇವಣಸಿದ್ಧೇಶ್ವರರ ನಾಮದಿಂದ ಜಗತ್ತಿನಲ್ಲಿ ಸಂಚರಿಸಿದರೆಂದು ಶ್ರೀ ರೇಣುಕರ ಸಂಕ್ಷಿಪ್ತ ಚರಿತ್ರವು ಉಲ್ಲೇಖಿಸಲ್ಪಟ್ಟಿರುವದು. ಅಂದ ಮೇಲೆ ಲಕ್ಷ್ಮೇಶ್ವರ ಶಿಲಾ ಶಾಸನದಲ್ಲಿ ಬರೆದ ನಾಲ್ಕು ಪದ್ಯಗಳ ವಿಷಯವು ಮರುಳುಸಿದ್ಧೇಶ್ವರ ನಾಮವನ್ನು ಧರಿಸಿದ ಶ್ರೀ ರೇಣುಕರ ವಿಷಯವೇ ಆಗಿರುವದು. ಆದರೆ ೧೪೩೫ ನೇ ಶಕವು ಶ್ರೀ ರೇಣುಕರು ಲಿಂಗಾಕಾರವನ್ನು ಹೊಂದಿದ ಸಮಯವಾಗಿರದೆ ಅವರು ಲಿಂಗಾಕಾರವಾದನಂತರ ಶ್ರೀಯುತ ಪರ್ವತಶೆಟ್ಟಿಯು ಆ ಶಿವಾಲಯಾದಿ ನಿರ್ಮಾಣ ಮಾಡಿದ ಸಮಯವಾಗಿರುವದು.

ಶ್ರೀ ರೇಣುಕರು ಪೂವಲ್ಲಿ ಕ್ಷೇತ್ರದಲ್ಲಿ ತಪಸ್ಸು ಮಾಡಿದ ವಿಷಯವು ಶ್ರೀ ಗುರುರಾಜ ಚರಿತ್ರೆಯಲ್ಲಿ ವಿವರಿಸಲ್ಪಟ್ಟದ್ದೇನಂದರೆ,

ಶ್ಲೋ- ಶ್ರೀಸದಾಶಿವನಮಲ ಪೂರ್ವಮುಖದಾಚಾರ್ಯ ||
ವೇಷದಿಂದೊಗೆದು ರಕ್ಷಿಸಿದ ರೇವಣಸಿದ್ಧ ||
ದೇಶಿಕಂಬಂದು ನಿರ್ಮಲ ಕ್ಷೇತ್ರವೆಂದು ಶಿವಯೋಗ ಸುಸಮಾಧಿ ಯಲ್ಲಿ ||
ಈಶನಂಬೆರಸಿದ ಪ್ರತಿಮ ಸಿದ್ಧಕ್ಷೇತ್ರ ||
ಭಾಸುರದ ಗುರುಪಂಚವಣ್ಣಿಗೆಯ ಸಿದ್ಧನಂ।
ದೀಶನೆಲಸಿದ ನಾಗಿಯಾಕ್ಷೇತ್ರ ದಧಿಕವುಂ ಪೊಗಳವೇಂ ಸಾಧ್ಯ ಮುಂಟೆ ||೨೪||
ಕಾಶಿಗಿಂದಂ ಮಿಗಿಲು ಕೇತಾರಕಿಂದಧಿಕ।
ಶ್ರೀಶೈಲಕಿಂ ಮೇಲು ಹಂಪಿಗಿಂದಂ ಹೆಚ್ಚು।

ವಾಸೆ ಗೋಕರ್ಣ ದ್ರಾಕ್ಷಾರಾಮ ಕಿಂಚಿದಂಬರಕಿಂದ ಘನವಾ
ದುದು ॥
ಆಸೇತು ಬಂಧಕಿಂದುನ್ನತಂ ಭೂಭಾಗ ।
ದಾಸಕಲ ಸಿದ್ಧಿಗಳ ಕೊಡುವ ತೀರ್ಥಂಗಳಿಗೆ ।
ಸಾಸಿರತ್ಯಗಣಿತದ ಸದ್ಗುರು ಕ್ಷೇತ್ರಕ್ಕೆ ಎಣೆಯಾವುದಾವದುಂಟೆ
॥೨೪॥

ಇದರಿಂದ ಶ್ರೀ ರೇಣುಕರು ಶ್ರೀಪೂವಲ್ಲಿ ಕ್ಷೇತ್ರದಲ್ಲಿ ಎಷ್ಟೋವ ರುಷ ವಾಸವಾಗಿದ್ದರೆಂದೂ ಮೇಲೆ ವಿವರಿಸಿದ ಪೂವಲ್ಲಿ ಪಟ್ಟಾವಲಿ ಚರಿತ್ರೆಯಿಂದ ಶ್ರೀ ರೇಣುಕರು ಮರುಳುಸಿದ್ಧೇಶ್ವರ ನಾಮವನ್ನು ಧರಿಸಿ “ಪುಲಗೆರೆ” ಲಕ್ಷ್ಮೇಶ್ವರದಲ್ಲಿ ಲಿಂಗಾಕಾರವಾದರೆಂದು ಉಲ್ಲೇಖಿಸಿದ್ದರಿಂದಲೂ ಲಕ್ಷ್ಮೇಶ್ವ ಶಿಲಾಶಾಸನದಲ್ಲಿ ಇದೇ ವಿಷಯವು ಪ್ರತಿಪಾದಿಸಲ್ಪಟ್ಟಿದ್ದರಿಂದಲೂ ಪೂಲಿಯ ಮರುಳುಸಿದ್ಧೇಶ್ವರರು ಯಾರೆಂಬುವ ವಿಷಯವು ಪ್ರತಿಯೊಬ್ಬರಿಗೂ ಗೋಚರವಾಗದೆ ಇರದು.

ಈಗಲೂ ನಮ್ಮ ಪೂವಲ್ಲಿ ಕ್ಷೇತ್ರದಲ್ಲಿ ಶ್ರೀ ರೇವಣಸಿದ್ಧೇಶ್ವರ ದೇವಾಲಯವೂ ಶ್ರೀ ಮರುಳುಸಿದ್ಧೇಶ್ವರ ದೇವಾಲಯವೂ ಶ್ರೀ ಏಕೋರಾಮಾರಾಧ್ಯರ ದೇವಾಲಯವೂ ಶ್ರೀ ಪಂಡಿತಾರಾಧ್ಯರ ದೇವಾಲಯವೂ ಪಟ್ಟಾವಲಿಯಲ್ಲಿ ಉಲ್ಲೇಖಿಸಿದಂತೆ ಯಥಾಕ್ರಮವಾಗಿ ಶ್ರೀ ಸಿದ್ಧನಂದೀಶ್ವರ ದೇವಾಲಯದ ಪೂರ್ವ-ದಕ್ಷಿಣ-ಪಶ್ಚಿಮ-ಉತ್ತರ ದಿಕ್ಕುಗಳಲ್ಲಿ ಕಂಗೊಳಿಸುತ್ತಿರುವವು. ಇದೇ ವಿಷಯವು ಶ್ರೀ ಸಿದ್ಧನಂದೀಶ್ವರ ಚರಿತ್ರವಾದ ಗುರುರಾಜ ಚರಿತ್ರವಲ್ಲಿ ಉಲ್ಲೇಖಿಸಲ್ಪಟ್ಟಿರುವದು. ಮತ್ತು ರಾಘವಾಂಕನ ಕಾವ್ಯದಲ್ಲಿ.

ಶ್ಲೋ. ಆಚಾರ್ಯ ರೇವಣಾಸಿದ್ಧೇಶ ಮರುಳಸಿ ।
ದ್ಧಾಚಾರ್ಯ ರಾಮದೇವಾಚಾರ್ಯ ಗುರು ಪಂಡಿ ।
ತಾಚಾರ್ಯ ಚೌಕ ಮಧ್ಯದಿನಿಂದ ಪಂಚ-ವರ್ಣಿಗಿ ಸಿದ್ಧನಂಜೇಶ್ವರ॥
ಸ್ವಾಚಾರ್ಯ ಪದ ಸರಸಿರುಹಮಧುಪ ಚಿಕ್ಕನಂ ।
ಜಾಚಾರ್ಯರ ರಚಿತವಹ ಹಂಪಿಯ ಹರೀಶ್ವರ ಶಿ ।
ವಾಚಾರ್ಯ ಸುತ ರಾಘವಾಂಕ ಕೃತಿಯೊಳು ಪ್ರಥಮ ಸಂಧಿವ
ಚೋನುಬಂಧಿ ॥

ಇದರಂತೆ ಪ್ರತಿಯೊಂದು ಸಂಧಿಯ ಸಮಾಪ್ತಿಯಲ್ಲಿ ವರ್ಣಿಸಿರುವರು. ಇದೇ ವಿಷಯವನ್ನು ನಮ್ಮ ಗೆಳೆಯರ ಗುಂಪಿನ ಶ್ರದ್ಧೇಯ ಶ್ರೀಯುತ ಹಲಸಂಗಿ ಚನ್ನಮಲ್ಲಪ್ಪನವರು "ಶಿವಾನುಭವದ ಏಳನೇ ಸಂಚಿಕೆಯಲ್ಲಿ "ಹೂಲಿ ಪಂಚವಣ್ಣಿಗಿ ಮಠವು"ಯೆಂಬ ಲೇಖದಲ್ಲಿ ಉಲ್ಲೇಖಿಸಿರುವರು

ಸಾರಾಂಶವೇನಂದರೆ "ಲಕ್ಷ್ಮೇಶ್ವರದ ಶಿಲಾಶಾಸನದಲ್ಲಿ ಉಲ್ಲೇಖಿಸಲ್ಪಟ್ಟ ವಿಷಯವು ನಮ್ಮ ವೀರಶೈವ ಸಿದ್ಧಾಂತ ಶಾಸ್ತ್ರವಾದ ಸಿದ್ಧಾಂತ ಶಿಖಾಮಣಿಗೂ ಶ್ರೀ ರೇವಣಸಿದ್ಧೇಶ್ವರ ಪುರಾಣಕ್ಕೂ ಶ್ರೀ ಪೂವಲ್ಲಿ ಪಂಚವಣ್ಣಿಗಿ ಬೃಹನ್ಮಠ ಪಟ್ಟಾವಲಿ ಚರಿತ್ರ ಗುರುರಾಜ ಚರಿತ್ರ ಮತ್ತು ರಾಘವಾಂಕನ ಕಾವ್ಯ ಇವೇ ಮೊದಲಾದ ಐತಿಹಾಸಿಕ ಪ್ರಮಾಣ ಗ್ರಂಥಗಳಿಗೂ ಈ ಪೂವಲ್ಲಿ ಕ್ಷೇತ್ರದಲ್ಲಿರ್ಪ ಶಿಲಾಶಾಸನಗಳಿಗೂ ಅತ್ಯಂತ ಸಮ್ಮಂಧವಾಗಿದ್ದು ಇದೊಂದು ಶಿಲಾಶಾಸನವು ನಮ್ಮ ವೀರಶೈವ ಪ್ರಾಚೀನತ್ವದ ವಿಷಯದಲ್ಲಿಯೂ ನಮ್ಮ ಪೂರ್ವಾಚಾರ್ಯರ ಗೌರವ ಪ್ರತಿಪಾದನೆಯಲ್ಲಿಯೂ ನಮ್ಮ ಪೂರ್ವದ ಸದ್ಭಕ್ತರ ಧಾರ್ಮಿಕ ಮತ್ತು ಸಾಂತ್ರಿಕ ಸ್ಥಿತಿಯ ವರ್ಣನೆಯಲ್ಲಿಯೂ ಕೈಗನ್ನಡಿಯಂತೆ ದೃಗ್ಗೋಚರವಾಗುವದೆಂದು ಹೇಳಲು ಏನೂ ಅಭ್ಯಂತರವಿಲ್ಲ. ಇದನ್ನು ಪರಿಶೋಧಿಸಿ ಪ್ರಸಿದ್ಧ ಮಾಡಿದ ನಮ್ಮ ವ್ಯವಸಾಯ ಬಂಧುಗಳಾದ ಶ್ರೀಯುತ ವೀರಭದ್ರಪ್ಪನವರು ಕೊಪ್ಪಳ ಬಿ. ಎ. ಇವರ ಉಪಕಾರವು ಚಿರಸ್ಮರಣೀಯವಾಗಿದೆ. ಇದರಂತೆ ಪ್ರತಿಯೊಬ್ಬ ಸುಶಿಕ್ಷಿತನು ಐತಿಹಾಸಿಕ ಲೇಖಗಳನ್ನು ಪ್ರಸಿದ್ಧಿಸಿ ನಮ್ಮ ವೀರಶೈವಮತದ ಐತಿಹಾಸಿಕ ವಿಷಯಕ ಅಜ್ಞಾನವನ್ನು ಹೋಗಲಾಡಿಸುವಿರೆಂದೂ ಇದನ್ನು ಪ್ರಸಾರ ಪಡಿಸಲಿಕ್ಕೆ ಸಿದ್ಧವಾದ "ಶಿವಾನುಭವ ಮಾಸಪತ್ರ"ದ ಉದ್ದೇಶವನ್ನು ಸಫಲಗೊಳಿಸಿ ಯಶಸ್ಸನುಂಟು ಮಾಡುವಿರೆಂದೂ ತಿಳಿಸಿ ನಮ್ಮೀ ಚಿಕ್ಕ ಲೇಖವನ್ನು ಮುಗಿಸುತ್ತೇವೆ.



ಇದೇ ವಿಷಯವನ್ನು ಕುರಿತು ರಾ|| ರಾ|| ಶಿವಯೋಗೆಪ್ಪ ಅಡಿವೆಪ್ಪ ಶೆಟ್ಟಿ ಸುಪರವ್ಹಾಯಜರ ಡಿಸ್ಟ್ರಿಕ್ಟ ಸ್ಕೂಲಬೋರ್ಡ ವಿಜಾಪುರ ಇವರು ನಮ್ಮ ಕಡೆಗೆ ಒಂದು ಲೇಖವನ್ನು ಕಳಿಸಿದ್ದಾರೆ. ಅವರು ಅದರಲ್ಲಿ ದಾರುಕನಿಗೆ ಸಂಬಂಧ ಪಟ್ಟ ಸಿದ್ಧಾಂತ ಶಿಖಾಮಣಿಯಲ್ಲಿಯ ಶ್ಲೋಕಗಳನ್ನು ಉದಹರಿ

ಸಿರುವರು. ಅವು ಮೇಲಿನಲೇಖದಲ್ಲಿ ಬಂದಿವೆ. ಮತ್ತು ಕಟ್ಟಕಡೆಗೆ ಈ ಶಿಲಾ ಲೇಖದ ಬಗ್ಗೆ ಕೆಳಗೆಕಾಣಿಸಿದ ಮೇರೆಗೆ ಅಭಿಪ್ರಾಯಪಟ್ಟಿದ್ದಾರೆ. ಏನೆಂದರೆ:—

"ಶಿಲಾಲೇಖದಲ್ಲಿ ಉಲ್ಲೇಖಿಸಲ್ಪಟ್ಟ ಪೂಲಿಯ ಮರುಳ ಸಿದ್ಧೇಶ್ವರರೆಂಬ ಸ್ವಾಮಿಗಳು ರೇಣುಕರ ಪುನರವತಾರವೆಂದು ಹೇಳಿರುವದರಿಂದ ಬಾಳೇಹಳ್ಳಿ ಸಿಂಹಾಸನಕ್ಕೆ ಸಂಬಂಧಪಟ್ಟವರಿರಬೇಕೆಂದು ಗೊತ್ತಾಗುತ್ತದೆ. ಈಗ ನಾಲ್ಕು ನೂರು ವರುಷಗಳ ಪೂರ್ವದಲ್ಲಿ ಪ್ರಸಿದ್ಧರಿದ್ದ ಸ್ವಾಮಿಗಳನ್ನು ರೇಣುಕರ ಅವತಾರವೆಂದು ಹೇಳಿರುವದರಿಂದ ಆಗಿನ ಕಾಲದಲ್ಲಿ ರೇಣುಕರ ವಿಷಯದಲ್ಲಿ ಅಸಾಧಾರಣವಾದ ಭಕ್ತಿ ಇತ್ತೆಂಬುದೂ ಹಾಗೂ ಸಿದ್ಧಾಂತ ಶಿಖಾಮಣಿ ಎಂಬ ಗ್ರಂಥವನ್ನು ಪ್ರಮಾಣವನ್ನಾಗಿ ಮನ್ನಿಸಿದ್ದರೆಂಬುದೂ ವ್ಯಕ್ತವಾಗುತ್ತದೆ.

ಇದರಂತೆ ಕತ್ತಲೆಯಲ್ಲಿರುವ ಅನೇಕ ಶಿಲಾಶಾಸನಗಳನ್ನು ಶೋಧಕರು ಪ್ರಕಾಶಕ್ಕೆ ತಂದು ಹಿಂದಿನ ಕಾಲದ ಧಾರ್ಮಿಕ ಸಾಮಾಜಿಕ, ರಾಜಕೀಯ ವಿಷಯಗಳ ಮೇಲೆ ಚನ್ನಾಗಿ ಬೆಳಕನ್ನು ಕೆಡಹಬೇಕೆಂದು ಆಶಿಸುತ್ತೇನೆ.

---

# ಮೌನ.

(ಲೇಖಕ:— ಈಶ್ವರ ಸಣಕಲ್ಲ ರಬಕವಿ ಸಂ. ಸಾಂಗಲಿ.

ಲೀಲೆಯಿಂ ಕೆಮ್ಮಡುವಿ
ನಾಳವಿಹ ತಿಳಿಯೊಳಗೆ
ಕಾಲಿಟ್ಟ ಮೌನವೇ, ಬಾರ! ॥೧॥
ಎರಲ ಮೇರೆಯ ಮೀರಿ,
ಮೆರೆವ ಗ್ರಹಗಳ ಹಾರಿ,
ಒರಗಿರುವ ಮೌನವೇ ಬಾರ! ॥೨॥

ಶರಿಯಿರುಳ ಸಮಯದೊಳು
ಪೆರೆಯ ಸಿರಿವೆಳಕಿನೊಳು
ಸಿರಿವೆತ್ತಿ ಸುತ್ತಲೂ ನೋಡಿ, ॥೩॥
ಗದ್ದಲದ ಗಡಿಬಿಟ್ಟು
ನಿದ್ದೆಯಾಚೆಗೆ ಮುಟ್ಟೆ,
ಎದ್ದಿರುವ ಮೌನವೇ ಬಾರ! ॥೪॥
ಬರುತೆನ್ನನಾವರಿಸಿ
ಧರೆಯ ಕಿರಿಕಿರಿ ಸರಿಸಿ
ಕರುಣೆಯಿಂ ಗುಟ್ಟುಗಳ ತೋರು. ॥೫॥
ಕದಲದಿರು, ಕದಲದಿರು,
ಕದಲಿ ನೀ ಹೋಗದಿರು.
ಕದಲಿದರೆ ಕದಡುವದು ಚಿತ್ತು. ॥೬॥
ಕಲಕಾದ ಮಡುವಿನೊಲು
ಕಲಕಾದ ಒಳಬಗೆಗೆ
ಹೊಳೆಯದತಿ ಗೂಢಾದ ಗುಟ್ಟು ॥೭॥
ಸಿದ್ಧಾಂತ ವರಳಿಸುವ
ಶುದ್ಧಾದ ಬೆಳಕೆ, ನೀ,
ಮುದ್ದಾಗಿ ಹೃದಯದೊಳು ಕೂಡು. ॥೮॥
ಕುಳಿತೆನ್ನ ಯೊಳಬಗೆಗೆ
ಹೊಳೆಯದಿಹ ಗುಟ್ಟುಗಳ.
ನೊಲವಿನಿಂ ಕಡೆತನಕ ತೋರು. ॥೯॥
ತೋರಿಸುತ ನೀನಿರಲು
ಯಾರ ಗೊಡವೇತಕ್ಕೆ?
ಧಾರುಣಿಯ ಮಾತಿನಿಂದೇನು? ॥೧೦॥



# ಶಿವಾನುಭವದ ಉದ್ದೇಶ ಮತ್ತು ಕಾರ್ಯಗಳು.

(ಸಂಪಾದಕರು)



ಶಿವಾನುಭವವು ಈ ವರೆಗೆ ಮಾಡುತ್ತ ಬಂದ ಕಾರ್ಯದ ಅರಿಕೆಯು ನಮ್ಮ ವಾಚಕರಿಗೆ ಗೊತ್ತೇ ಇದೆ. ವೀರಶೈವ ವಾಙ್ಮಯವನ್ನೂ ಅದರ ಸಂಸ್ಕೃತಿಯನ್ನೂ ಹೊರಗೆಡುವುವದೇ ಅದರ ಮುಖ್ಯೋದ್ದೇಶವಾಗಿರುತ್ತದೆ. ಈ ಪತ್ರಿಕೆಯ ಮೂಲಕ ಈ ವರೆಗೆ ಅನೇಕ ಮಹತ್ವದ ವಚನಗಳೂ ಧಾರ್ಮಿಕ ಗದ್ಯಪದ್ಯಗಳೂ ಪ್ರಕಟವಾಗಿರುತ್ತವೆ. ಇದಲ್ಲದೆ ಈ ವರೆಗೆ ಯಾರಿಗೂ ಗೊತ್ತಿಲ್ಲದಂಥ ಅನೇಕ ರಾಜಕೀಯ ಮತ್ತು ಧಾರ್ಮಿಕ ಮಹಾಪುರುಷರ ಚರಿತ್ರೆಗಳು ಸಂಶೋಧಿಸಲ್ಪಟ್ಟು ಇವು ಇದರಲ್ಲಿ ಪ್ರಕಟವಾಗುತ್ತ ಬಂದಿವೆ. ಇಂಥ ಚರಿತ್ರೆಗಳಿಲ್ಲದಂಥ ಒಂದಾದರೂ ಶಿವಾನುಭವದ ಸಂಚಿಕೆಯು ಇಲ್ಲವೆಂದು ನಾವು ದೃಢವಾಗಿ ಹೇಳಬಲ್ಲೆವು. ಹೀಗಿದ್ದರೂ ಕೂಡ ಶಿವಾನುಭವದಲ್ಲಿ ಬರುವ ಲೇಖಗಳು ನಮಗೆ ತಿಳಿಯುವದೇ ಇಲ್ಲ, ಅದರಲ್ಲಿ ಮನೋರಂಜಕ ಕಥೆಗಳೇ ಇಲ್ಲ, ಅದರಲ್ಲಿ ಪ್ರಚಲಿತ ವಾದ ವಿಷಯಗಳಂತೂ ಏನೂ ಇರುವದಿಲ್ಲ ಎಂದು ದೋಷಾರೋಪಣವನ್ನು ನಮ್ಮ ಮೇಲೆ ಕೆಲವರು ಮಾಡುತ್ತಿರುವದು ನಮಗೆ ತಿಳಿದು ಬಂದಿದೆ. ಆದರೆ ಶಿವಾನುಭವವನ್ನು ಈ ಬಗೆಯ ದೃಷ್ಟಿಯನ್ನಿಡದೆ ಈಗಿನ ಕಲುಷಿತ ವಾತಾವರಣದಲ್ಲಿ ಉಚ್ಚ ಧ್ಯೇಯವನ್ನಿಟ್ಟುಕೊಂಡು ನಡಿಸುವದೇ ತಕ್ಕದ್ದೆಂದು ನಮಗೆ ತೋರುತ್ತದೆ. ಇದರ ಕಾರ್ಯಗಳು ಈಗ ದೃಗ್ಗೋಚರವಾಗದಿದ್ದರೂ ವೀರಶೈವ ವಾಙ್ಮಯ ಮತ್ತು ಇತಿಹಾಸವನ್ನು ರಚಿಸುವ ಕಾಲವು ಬಂದಾಗ್ಗೆ ಇದರ ಪ್ರತಿಯೊಂದು ಸಂಚಿಕೆಯಿಂದ ಮಹತ್ವದ ಸಹಾಯವಾಗುವದೆಂದು ನಮ್ಮ ದೃಢವಾದ ನಂಬಿಗೆ ಇದೆ.

ನಮ್ಮ ವೀರಶೈವ ಸಮಾಜದಲ್ಲಿ ಸಂಶೋಧನ ಕಾರ್ಯವು ಸುಸಂಘಟಿತವಾಗಿ ನಡೆಯಬೇಕೆಂದೆಣಿಸಿ ನಾವು ವಾಙ್ಮಯ ಸಂಘದ ಕೂಟವನ್ನು ಕರೆಯಬೇಕೆಂದು ನಾವು ಶಿವಾನುಭವದ ೩ ನೇ ಸಂಚಿಕೆಯಲ್ಲಿ ಅಪೇಕ್ಷಿಸಿದೆವು. ಮತ್ತು ಈ ಬಗ್ಗೆ ಸೂಚನೆಗಳನ್ನು ಮಾಡುವ ಕುರಿತು ನಾವು ಸೂಚಿಸಿದೆವು. ಆದರೆ ವಿಸ್ತೃತವಾದ ನಮ್ಮ ಸಮಾಜದಲ್ಲಿ ಈ ಅಪೇಕ್ಷೆಗೆ ಸಹಾನುಭೂತಿಯನ್ನು ತೋರಿಸಿದವರು ಮೂವರು ಮಹನೀಯರು ಮಾತ್ರ! ವೀರಶೈವ ಸಮಾಜದಲ್ಲಿ ಈಗ ಸುಶಿಕ್ಷಿತ ಪದವೀಧರರು ನೂ

ರಾರು ಜನರಿರುವರು. ಅದರಂತೆಯೇ ಶಾಸ್ತ್ರಿಗಳೂ, ಪಂಡಿತರೂ, ಅನೇಕರಿರುವರು. ಮತ್ತು ಇವರೆಲ್ಲರು ವಾಙ್ಮಯ ದೃಷ್ಟಿಯಿಂದ ವೀರಶೈವ ಸಮಾಜಕ್ಕೋಸ್ಕರ ಮಾಡತಕ್ಕ ಕಾರ್ಯಗಳಾದರೂ ಘನತರವಾಗಿರುತ್ತವೆ. ಆದರೂ ಇಂಥ ದೊಡ್ಡ ಸಮಾಜದಲ್ಲಿ ಇಷ್ಟು ಸ್ವಲ್ಪ ಜನರು ಮಾತ್ರ ಮುಂದಾದದ್ದು ಬಹು ವಿಷಾದಕರವಾಗಿರುತ್ತದೆ. ಇದರಿಂದ ನಿಜವಾದ ಮಹತ್ವದ ವಿಷಯದ ಬಗ್ಗೆ ಸಮಾಜದಲ್ಲಿ ಎಷ್ಟು ಉಪೇಕ್ಷಾಭಾವವು ತುಂಬಿರುತ್ತದೆಂಬದನ್ನು ನಾವು ಊಹಿಸಬಹುದಾಗಿದೆ. ಆದರೆ ಈ ವಿಷಯಗಳನ್ನು ಬಿಟ್ಟು ಸಾಮಾಜಿಕ ಮತ್ತು ಧಾರ್ಮಿಕ ಕಲಹಗಳಿಗೆ ಸಂಬಂಧಿಸಿದ ವಿಷಯಗಳಿಗೋಸ್ಕರ ನಾವು ಪ್ರಕಟ ಮಾಡಿದ್ದರೆ, ಎಷ್ಟೋ ಜನರು ಈ ಬಗ್ಗೆ ಮುಂದುವರಿಯುತ್ತಿದ್ದರು. ಇದರ ಮೇಲಿಂದ ಮಹತ್ತಾದ ಧಾರ್ಮಿಕ ಮತ್ತು ನೈತಿಕ ಪ್ರೇರಣೆಯನ್ನುಂಟು ಮಾಡಬಹುದಾದ ಕಾರ್ಯಗಳಿಗೋಸ್ಕರ ಜನಸಮುದಾಯದಲ್ಲಿ ಎಷ್ಟು ಉದಾಸೀನ ಭಾವವು ತುಂಬಿದೆಂಬದನ್ನು ನಾವು ತಿಳಿಯಬಹುದಾಗಿದೆ.

ಜನಸಾಮಾನ್ಯದಲ್ಲಿ ಈ ಬಗೆಯ ಸ್ಥಿತಿಯು ಇದ್ದರೂ ಅಲ್ಲಲ್ಲಿ ಉಚ್ಚಪ್ರತಿಯ ಧಾರ್ಮಿಕ ಮತ್ತು ಸಾಮಾಜಿಕ ಬುದ್ಧಿಯುಳ್ಳವರು ಇದ್ದದ್ದು ದೃಗ್ಗೋಚರವಾಗುತ್ತದೆ. ಇದರಿಂದ ಈಗಿಲ್ಲದಿದ್ದರೂ ಮುಂದಾದರೂ ಶುಭೋದಯ ಕಾಲವು ಒದಗಬಹುದೆಂದು ಸಮಾಧಾನ ಪಡತಕ್ಕದ್ದಾಗಿದೆ. ಇನ್ನುಮೇಲೆ ಗ್ರಂಥಗಳು ಶಿವಾನುಭವ ದ್ವಾರಾ ಅಲ್ಲದೆ ಸ್ವತಂತ್ರವಾಗಿಯೂ ಮುದ್ರಿಸಲ್ಪಡುವವು. ಹೀಗೆ ಮುದ್ರಣಕ್ಕೆ ಯಾರು ಸಹಾಯ ಮಾಡುವರೋ ಅವರ ಹೆಸರಿನಿಂದಲೇ ಆ ಗ್ರಂಥಗಳು ಪ್ರಸಿದ್ಧವಾಗುವವು. ಹೀಗೆ ಕೆಳಗೆ ಕಾಣಿಸಿದ ಗ್ರಂಥಗಳು ಮುದ್ರಿಸಲ್ಪಡುವವು. ಶೂನ್ಯಸಂಪಾದನೆಯು ಮಹತ್ವದ ಧಾರ್ಮಿಕ ಗ್ರಂಥವಾಗಿದ್ದು ಇದರ ಅಚ್ಚು ಈಗ ಒಂದು ಮೂರಾಂಶ ಭಾಗವು ಮುಗಿದವೆ. ಇದಕ್ಕೋಸ್ಕರ ರಾ. ರಾ. ವೀರಭದ್ರಪ್ಪ ಹಾಲಭಾವಿ ಬಿ. ಎ. ಎಲ್ ಎಲ್. ಬಿ. ಸಬ್ಬಜಜ್ಜ ವಿಜಾಪುರ ಇವರು ಐದುನೂರು ರೂಪಾಯಿ ಕೊಡಲು ಅನುಮತಿಸಿ ಅವುಗಳಲ್ಲಿ ಮುನ್ನೂರಾ ಐವತ್ತು ರೂ. ಗಳನ್ನು ನಮಗೆ ಕೊಟ್ಟಿರುವರು. ಪ್ರಭುದೇವರ ವಚನಗಳನ್ನು ಅಚ್ಚು ಹಾಕಲಿಕ್ಕೆ ಶ್ರೀ ಮಹಾರಾಜ ನಿರಂಜನ ಜಗದ್ಗುರು ಹುಬ್ಬಳ್ಳಿಯ ಶ್ರೀ ಗುರುಸಿದ್ಧ ಮಹಾಸ್ವಾಮಿಗಳವರು ಐದುನೂರು ರೂಪಾಯಿಗಳನ್ನು ಕೊಡಲೊಡಂಬಟ್ಟು ಅವುಗಳಲ್ಲಿ ಮೂರು

ನೂರು ರೂಪಾಯಿಗಳನ್ನು ನಮಗೆ ಈಗ ಕಳಿಸಿರುವರು. ಬಸವೇಶ್ವರನ ವಚನಗಳ ಶುದ್ಧವಾದ ೨ನೇ ಆವೃತ್ತಿಯು ತೀವ್ರವಾಗಿಯೇ ಪ್ರಸಿದ್ಧವಾಗುವದಿದ್ದು, ಇದು ಕೈಲಾಸವಾಸಿ ಮುಸಗಿ ಮರಿಶಾಂತಪ್ಪನವರು ಡಾವಣಗೆರೆ ಇವರ ಹೆಸರಿನಿಂದ ಪ್ರಸಿದ್ಧವಾಗುವದು. ವಚನಶಾಸ್ತ್ರಸಾರ ಭಾಗ ೧, ೨, ೩ ಬೇಗನೇ ಪ್ರಸಿದ್ಧಿಸಲ್ಪಡುವವು. ಶಿವಮೂರ್ತಿ ವೈ. ನಾಗೇಶ ಶಾಸ್ತ್ರಿಗಳು ಬಳ್ಳಾರಿ ಇವರಿಂದ ವಿರಚಿತವಾದ ಶಿವಾನುಭವ ಸಾರವೆಂಬ ಸಂಸ್ಕೃತ ಗ್ರಂಥದ ಅನುವಾದವು ಮುಂದೆ ಶಿವಾನುಭವದಲ್ಲಿ ಕ್ರಮೇಣ ಪ್ರಕಟಿತವಾಗುವದು. ಕಡಕೋಳ ಮಡಿವಾಳಪ್ಪನವರ ಪದ್ಯಗಳೂ ವಚನಗಳೂ ರಾ. ರಾ. ಮಡಿವಾಳಪ್ಪ ಮಾಸ್ತರ ಕಲಕೇರಿ ರಾ. ರಾ. ಶಿವಪ್ಪ ಮಾಸ್ತರ ಮಳಖೇಡ ಇವರ ಪರಿಶ್ರಮದಿಂದ ನಮ್ಮಲ್ಲಿ ಸಂಗ್ರಹಿಸಲ್ಪಟ್ಟಿರುವವು. ಅದರಂತೆ ವೈಲಾರ ಬಸಪ್ಪನವರ ಪದ್ಯಗಳು ಎಷ್ಟು ಹೃದಯಂಗಮವಾಗಿವೆಂಬದು ಈ ಸಂಚಿಕೆಯಲ್ಲಿ ಉದ್ಧೃತವಾದ ಅವರ ಪದ್ಯಗಳಿಂದ ವಾಚಕರು ಚೆನ್ನಾಗಿ ಅರಿಯಬಹುದಾಗಿದೆ. ಅವರ ಅನೇಕ ಪದ್ಯಗಳನ್ನು ರಾ॥ ರಾ॥ ಬಸಪ್ಪ ಅಂಕಲಕೋಟಿ ಮು. ರಾಣೆಬೆನ್ನೂರ ಇವರು ಕೂಡಿಸಿಟ್ಟಿದ್ದು ಅವರು ಅವುಗಳನ್ನು ಬೇಗನೆ ಪ್ರಸಿದ್ಧಿಸತಕ್ಕವರಾಗಿರುವರು. ಹರಿಹರಾಚಾರ್ಯರ ಅರವತ್ತುಮೂರು ಪುರಾತನರ ರಗಳೆಗಳು ಹೊಸ ಸ್ವರೂಪದ ಉದಾತ್ತ ಗ್ರಂಥವಾಗಿದೆ. ಈ ಪ್ರತಿಯು ನಮ್ಮಲ್ಲಿ ಅಪೂರ್ಣವೂ ಅಶುದ್ಧವೂ ಇರುವದರಿಂದ ಇನ್ನೊಂದು ಪ್ರತಿಯನ್ನು ಹುಡುಕುತ್ತಲಿದ್ದೇವೆ. ಅದು ದೊರೆದ ಬಳಿಕ ಈ ದೊಡ್ಡ ಗ್ರಂಥವೂ ಮುದ್ರಿಸಲ್ಪಡುವದು. ಈ ಪ್ರಕಾರ ಈಗ ನಾವು ಕೈಕೊಂಡ ಕಾರ್ಯಗಳಿಗೋಸ್ಕರ ಮೇಲ್ಕಂಡ ಮಹನೀಯರು ಉದಾರ ಭಾವದಿಂದ ಅನೇಕ ರೀತಿಯಿಂದ ಸಹಾಯವನ್ನೀಯುತ್ತಿರುವದಕ್ಕಾಗಿ ಅವರ ಉಪಕಾರವನ್ನು ಎಷ್ಟು ಸ್ಮರಿಸಿದರೂ ಅಲ್ಪವೇ ಸರಿ.

ಇದಲ್ಲದೆ ಅನೇಕ ಮಹನೀಯರು ತಮ್ಮ ದೃಷ್ಟಿಗೆ ಬಿದ್ದ ಗ್ರಂಥಗಳ ಟಿಪ್ಪಣೆಗಳನ್ನು ನಮ್ಮ ಕಡೆಗೆ ಕಳಿಸುತ್ತಿರುವದಲ್ಲದೆ, ತಮ್ಮಲ್ಲಿರುವ ಗ್ರಂಥಗಳನ್ನೂ ನಮ್ಮ ಕಡೆಗೆ ಕಳಿಸುತ್ತಲಿರುವರು. ಧಾರವಾಡಜಿಲ್ಹೆ ತುಮ್ಮಿನಕಟ್ಟಿಯ ರಾ॥ ರಾ॥ ಶರಬಣ್ಣ ನೀಲಕಂಠಪ್ಪ ಹಾದಿಮನೆ ಇವರು ತಮ್ಮಲ್ಲಿಯ ೧೦-೧೫ ಗ್ರಂಥಗಳನ್ನು ಕಳಿಸಿದ್ದಲ್ಲದೆ ಬೇರೆ ಸ್ಥಾನಗಳಲ್ಲಿಯೂ ಶೋಧಿಸಿ ಆ ಬಗ್ಗೆ ನಮಗೆ ಮೇಲಿಂದ ಮೇಲೆ ಪತ್ರಗಳನ್ನು ಬರೆಯುತ್ತಿರುವರು. ಇದೇ

ಮೇರಿಗೆ ರಾ|| ರಾ|| ನಿಂಬೆಣ್ಣಾ ಪಾಟೀಲ ಮಾಸ್ತರ ಕಾತರಕಿ ಜಿ|| ವಿಜಾಪುರ ಮತ್ತು ಶಿ. ಮೂ ಎಚ್. ಜಿ. ಸಿದ್ಧಲಿಂಗಯ್ಯನವರು ಹಾರೊಹಳ್ಳಿ, ಜಿ|| ಬೆಂಗಳೂರು ಇವರಾದರೂ ತಮ್ಮಲ್ಲಿಯ ಗ್ರಂಥಗಳನ್ನು ಕಳಿಸಿರುವರು. ರಾ|| ರಾ|| ಪಗಳದಿನ್ನಿ ದೊಡ್ಡ ಬಸಪ್ಪನವರು ಮು. ವಿಪಾಪುರ ತಾ|| ಸಿಂಧನೂರು ಜಿ|| ರಾಯಚೂರ, ರಾ|| ರಾ|| ಸ. ಗು. ಹೊಳ್ಕರಾಣಿ ಮಾಸ್ತರ ಕೋಡೀಹಾಳ ತಾ|| ಹುನಗುಂದ, ರಾ|| ರಾ|| ಅಂಗಡಿ ಶಿವರುದ್ರಪ್ಪನವರು ಮು. ಮಾಯಿಕೊಂಡ ತಾ|| ದಾವಣಗೆರೆ ಇವರೂ ತಮ್ಮ ದೃಷ್ಟಿಗೆ ಬಿದ್ದ ಗ್ರಂಥಗಳ ಪಟ್ಟಿಯನ್ನು ನಮ್ಮ ಕಡೆಗೆ ಕಳಿಸಿದ್ದಾರೆ. ಇವರೆಲ್ಲರಿಗೂ ನಾವು ಬಹಳ ಆಭಾರಿಯಾಗಿದ್ದೇವೆ.

ಈ ಬಗೆಯ ಗ್ರಂಥ ಸಂಶೋಧನ ಮತ್ತು ಗ್ರಂಥ ಪ್ರಕಟನೆಯ ಕಾರ್ಯವು ಎಷ್ಟು ಶ್ರಮದ್ದೂ ಖರ್ಚಿನದೂ ಇರುತ್ತದೆಂದು ನಾವು ಬೇರೆ ಹೇಳುವದು ಅವಶ್ಯವಿಲ್ಲ. ನಾವು ಈ ಕಾರ್ಯದಲ್ಲಿ ಕೇವಲ ಶಿವಾನುಭವದ ವರ್ಗಣೀದಾರರ ಮತ್ತು ಪುಸ್ತಕಗಳ ಗ್ರಾಹಕರ ಸಹಾಯವನ್ನವಲಂಬಿಸಿ ಪ್ರವೃತ್ತರಾಗಿದ್ದೇವೆ. ನಾವು ನಡಿಸಿರುವ ಕಾರ್ಯದಲ್ಲಿ ದೋಷಗಳಿರಬಹುದು. ಆದರೆ ಅವುಗಳನ್ನು ಮರೆಯದೆ ನಮಗೆ ತಿಳಿಸಿದಲ್ಲಿ ನಾವು ಅತ್ಯಂತ ಕೃತಜ್ಞತಾ ಬುದ್ಧಿಯಿಂದ ಅವುಗಳನ್ನು ಸರಿಪಡಿಸಿಕೊಳ್ಳುವೆವು. ಶಿವಾನುಭವದ ಈಗಿನ ಸ್ವರೂಪ ಮತ್ತು ಅದರ ಪುಟಗಳ ಸಂಖ್ಯೆ ಇವುಗಳನ್ನು ನೋಡಿದ ಕೂಡಲೆ ಇದಕ್ಕೆ ಖರ್ಚು ಎಷ್ಟು ಹಿಡಿಯುತ್ತಿರಬಹುದೆಂಬದರ ಕಲ್ಪನೆಯು ವಾಚಕರಿಗೆ ಕೂಡಲೆ ಬರಬಹುದು. ಈಗಿನ ಸ್ಥಿತಿಯಲ್ಲಿ ಈ ಪತ್ರಿಕೆಯನ್ನು ನಡಿಸುವದು ನಮಗೆ ಕಷ್ಟವಾಗಿದೆ. ಆದ್ದರಿಂದ ಎಲ್ಲ ಕಡೆಯ ವೀರಶೈವ ಮಹನೀಯರು ಇದರ ವರ್ಗಣೀದಾರರ ಸಂಖ್ಯೆಯನ್ನು ಹೆಚ್ಚಿಸಲಿಕ್ಕೂ ಇದರ ಮೂಲಕ ಆಗುವ ಗ್ರಂಥಗಳನ್ನು ಗ್ರಹಿಸಲಿಕ್ಕೂ ಮುಂದಾಗಿ ಇದಕ್ಕೆ ಪ್ರೋತ್ಸಾಹಿಸಬೇಕೆಂದು ನಮ್ಮ ಸವಿನಯ ಪ್ರಾರ್ಥನೆ ಇದೆ.



# ಮೈಲಾರ ಬಸಪ್ಪನವರ

# ಶಿವಾನುಭವ ದರ್ಪಣ.



(೧) ಥೀ ಹೆಡ್ಡ ನೀನೆಂಥ ಶಿವಭಕ್ತ । ಕ್ರಿಯ । ಬಾಹ್ಯದೈವಂಗಳಿಗೆರಗುವೆ ॥ಪಲ್ಲ॥

ಉರದ ಸೆಜ್ಜೆಯೊಳಿಷ್ಟಲಿಂಗವು । ಇರೆ ತಾಂ । ಬರದ ದೇವರನೆದಿಯೊಳು ಕಟ್ಟಿ । ಕರ ಜಿಹ್ವೆ ಕೊನೆಯೊಳು ಶಸ್ತ್ರವ ಹಾಕಿ । ಮರುಳುಗೊಂಡವನಂತೆ ಕುಣಿಯುವಿ ॥೧॥

ಗಂಡನೆ ಶಿವಲಿಂಗವೆನ್ನುವೆ । ನೀ । ಕಂಡ ದೈವಕೆ ಕೈಯ ಮುಗಿಯುವೆ । ಕೆಂಡದ ಗಡಿಗೆ ಮಂಡೆಯ ಮೇಲೆ ಹೊತ್ತು । ಕೊಂಡು ಬಾಯಿಗೆ ಬೀಗ ಹಾಕುವೆ ॥೨॥

ಇಷ್ಟಲಿಂಗದ ಪೂಜೆ ಮಾಡುವೆ । ಬಹು । ನಿಷ್ಠೆಯಿಂದಲಿ ಕೊಂಡಾಡುವೆ । ಅಷ್ಟಾವರಣಂಗಳ ಮೆರೆಸುವೆ । ಜಾತಿ । ಭ್ರಷ್ಟದೈವಂಗಳಿಗೆರಗುವೆ ॥೩॥

ಒಡೆಯ ಸದ್ಗುರುವಿತ್ತ ಲಿಂಗವು । ನಿನ್ನ । ಒಡಲಸಂಗವು ಹಿಂಗದಂತಿರ್ದು । ಮಡದಿ ಮಕ್ಕಳು ನೀನು ಸಹವಾಗಿ । ಹೋಗಿ । ಗುಡಿಯ ದೈವಂಗಳಿಗೆರಗುವೆ ॥೪॥

ಸತ್ಯ ಸದ್ಗುರು ಕೊಟ್ಟ ಲಿಂಗವ । ನೀನು । ನಿತ್ಯ ಪೂಜಿಸಿ ಮುಕ್ತಿ ಪಡೆಯದೆ । ಎತ್ತು ಕಂಟಲ ತೊತ್ತು ಬಂಟರು । ಹೋಗಿ । ಕ್ಷೇತ್ರದೈವಂಗಳಿಗೆರಗುವೆ ॥೫॥

ಕಟ್ಟಿದ ಲಿಂಗವ ನಡಿಮಾಡಿ । ನೀ । ಮೆಟ್ಟುಗಲ್ಲಿನ ಮೇಲೆ ಬೀಳುವೆ । ನೆಟ್ಟಗಲ್ಲದು ನಿನ್ನ ದೈವವೋ ನೀ । ಕೆಟ್ಟುಕೇಡಿನ್ನೇನು ಹೇಳಲಿ ॥೬॥

ಜ್ಞಾಣ ಜಂಗಮ ಪ್ರಸಾದವೆ । ಮುಕ್ತಿ । ತಾಣವೆಂದರಿಯದೆ ನೀ ಹೋಗಿ । ಕೋಣ ಮನುಜ ನೀನು ಕೈಯೊಡ್ಡಿ । ಬೇಡಿ । ಕ್ಷೀಣ ದೈವಂಗಳೆಂಜಲ ತಿನ್ನುವೆ ॥೭॥

ಶುನಿಗನ್ನಪಾನವನಿಕ್ಕಲು। ತನ್ನ। ಮನೆಯನಿರುಳೆಲ್ಲವು ಕಾಯ್ವುದು। ಶುನಿಗಿಂತ ಕನಿಕಷ್ಟ ದೈವವ। ನಿನ್ನ। ಮನೆಯ ದೇವರೆಂದು ಭಜಿಸುವೆ ||೮||

ಹಿಂಗದೆ ಸೋಮಮಂಗಳವಾರ। ನೀನು। ಜಂಗಮವನು ಕರೆದುಣಿಸುವೆ। ಲಿಂಗಜಂಗಮ ನಿನ್ನ ದೈವವೊ। ವಾ। ರಂಗಳು ನಿನಗೆ ದೈವಂಗಳೋ ||೯||

ಧರೆಯ ಪಂಚಾಳರಿಂದಲಿ ಹುಟ್ಟಿ। ತಾಂ। ಬರ ಭೂತಾಲದ ಮರದೊಳಗಿರ್ದು। ನರಮನುಜರ ಕಾಡಿಬೇಡುಂಬ। ದೇವ। ರೊರವ ಬೇಡಿದರೇನು ಕೊಡುವದು ||೧೦||

ವೀರಶೈವಾಚಾರ ಸದ್ಗುರು। ಚನ್ನ। ವೀರನ ಕರುಣವ ಪಡೆಯದೆ। ವೀರಣ್ಣ ಬಸವಣ್ಣ ಮೊದಲಾದ ಸರ್ವ। ಭೂರಿ ದೈವಂಗಳ ಭಜಸುವೆ ||೧೧||

---

(೨) ನರರ ದುರ್ನಡತೆಗಳಂತಲ್ಲ ಶಿವ। ಶರಣರಾಚರಣೆಯ ಪರಿಬೇರೆ ||ಪಲ್ಲ||

ಶರೀರದ ರುಜೆಗಂಜಿ ಪರಕೆಯ। ಪೊತ್ತು। ನರರಂತೆ ಪರದೈವಕೆರಗದೆ। ಗುರುವಿತ್ತ ನಿರುಪಮಲಿಂಗವ ವಾಮ। ಕರ। ಪೀಠದೊಳು ಭಜಿಸುವರಾಗಿ ||೧||

ಕಾಮವಿಕಾರದುನ್ಮತ್ತದೆ ಪರ। ಕಾಮಿನಿಯರನೊಮ್ಮೆ ನೆನೆಯದೆ। ಕಾಮಿತಾರ್ಥವನೀವ ಲಿಂಗದೋ। ಳ್ಮನ। ಪ್ರೇಮವಿರಿಸಿ ಧ್ಯಾನಿಸುವರಾಗಿ ||೨||

ತನುವ ದಂಡಿಸಿ ತಂದ ಧನವನ್ನು ಮುಂದೆ। ಮನೆಗೆ ಮಕ್ಕಳಿಗೆಂದು ಬಳಸದೆ। ಅನಘ ಜಂಗಮಕೆ ದಾಸೋಹವನೊಂ। ದಿನಿತು ವಂಚಿಸದೆ ಮಾಳ್ಪವರಾಗಿ ||೩||

ಮಡುಹೊಂಡಕೆರೆಭಾವಿನದಿಹಳ್ಳ ಚಿಲ್ಮೆ। ಜಡನೀರನೊಲಿದೊಮ್ಮೆ ಬಳಸದೆ। ಒಡೆಯ ಜಂಗಮಲಿಂಗದೇವನ ನಿರ್ಮ। ಲಡಿಯುದಕವ ಬಳಸುವರಾಗಿ ||೪||

ಹಸುವಿನಿಚ್ಛೆಗೆ ಭೌಕ್ತಿಕನ್ನವ। ನೊಮ್ಮೆ। ರಸನೆಯೊಳಿಟ್ಟು ತಾ ರುಚಿಸದೆ। ಅಸಮಭಕ್ತಿಗೆ ಸುಪ್ರಸಾದವ ನನು। ವಿಮಲಿಂಗ ಸಹಿತ ಭೋಗಿಸುವರಾಗಿ ||೫||

ಅಂಗದ ಕುರು ತದ್ದು ತುರಿಗಳ್ಗೆ ಔಷ। ಧಂಗಳ ನೊಲಿದೊಮ್ಮೆ ಧರಿಸದೆ। ಲಿಂಗಚಿತ್ಕಳೆಯು ಶ್ರೀ ಭಸಿತವ ಸ। ರ್ವಾಂಗದೊಳಗೆ ಧರಿಸುವರಾಗಿ ॥೬॥

ಪ್ರೇತ ಭೂತ ಗ್ರಹ ಭಯಕಂಜಿ ಮನ। ಸೋತು ಮಂತ್ರವನೊಮ್ಮೆ ನೆನೆಯದೆ। ಓತು ರುದ್ರಾಕ್ಷಿಯ ಮಾಲೆಯ ಸಂ। ಪ್ರೀತಿಯಿಂದಲಿ ಧರಿಸುವರಾಗಿ ॥೭॥

ಗಾರುಡ ಕುಟಿಲ ಕುಹಕವಿದ್ಯೆ ಯೆಂಬ। ನೂರಾರು ಮಂತ್ರವ ಕಲಿಯದೆ। ವೀರಶೈವಾಚಾರಷಡ್ವಿಧ। ಲಿಂಗ। ದಾದು ಮಂತ್ರವ ಜಪಿಸುವರಾಗಿ ॥೮॥

ಮರ್ತ್ಯಲೋಕದ ಜಡ ನರರಂತೆ। ದು। ರ್ವರ್ತನೆಗಳನೊಂದಾಚರಿಸದೆ। ಕರ್ತೃ ಸದ್ಗುರು ಚನ್ನವೀರನ। ಸದು। ವರ್ತನೆಗಾಚರಿಸುವರಾಗಿ ॥೯॥

---

(೩) ಜೀವನವಾಗಿ ಪೇಳಿದನೋಲ್ದು ಘನ ಗುರು ದೇವಸದ್ಭಕ್ತರ್ಗಾಚಾರದ ಬಗೆಯು ॥ಪ॥

ಗುರುಕರುಣವ ಪಡೆದವಿರಳ ಲಿಂಗಾಂಗ। ದೆರಕತ್ವವುಳ್ಳ ಸದ್ಭಕ್ತನೋರ್ವ। ಧರೆಯೊಳು ನೆಲಿಸಿರ್ಪ ಭವಿಶೈವ ದೈವವ। ಬೆರಸದೆ ಭಾವಿಸದಿಹುದೆ ಲಿಂಗಾಚಾರ ॥೧॥

ವರಸತ್ಯಶುದ್ಧಕಾಯಕದಿಂದ ಬಂದ। ಪರಿಣಾಮ ದ್ರವ್ಯವೆಲ್ಲವನು ಶ್ರದ್ಧೆಯೊಳು। ಗುರುಲಿಂಗಜಂಗಮಕ್ಕೈದೆ ದಾಸೋಹವ। ಹರುಷದಿಂ ಮಾಡಿ ನೀಡುವುದೇ ಸದಾಚಾರ ॥೨॥

ಪರತತ್ವಜಂಗಮಲಿಂಗದ ಭಕ್ತರೆ। ಹಿರಿದೆಂದವರಿಗಾನು ಲೆಂಕನೆಂದಂಜಿ। ನಿರಹಂಕಾರದ ಭಕ್ತಿಯೊಳ್ತ್ರಿಪದಾರ್ಥವ। ನಿರವಂಚನೆಯೊಳರ್ಪಿಸುವದೆ ಭೃತ್ಯಾಚಾರ ॥೩॥

ಭಕ್ತದೇಹಿಕ ದೇವನೆಂಬುದನರಿದು ಸ। ದ್ಭಕ್ತ ಜನಗಳೊಳ್ ಜಾತ್ಯಾಶ್ರಮಕುಲದ। ಯುಕ್ತಿಯನರಸದೆ ಭಕ್ತರೆ ಘನವೆಂದು। ಭಕ್ತರೊಕ್ಕುದ ಕೊಳ್ಳುವದೆ ಶಿವಾಚಾರ ॥೪॥

ವರಗುರುಲಿಂಗ ಜಂಗಮದ ಪಾದೋದಕ । ಪರಮ ಪ್ರಸಾದ ಭಕ್ತಾಚಾರಂಗಳನು । ದುರುಳತನದ ಸೊಕ್ಕಿನಿಂದೊರಲ್ವುದಿಂ ಬಂದ ದೂಷಣೆ ಕೇಳದಿಹುದೆ ಗಣಾಚಾರ ॥೫॥

ಗುರುಭಕ್ತಿಲಿಂಗ ಪೂಜೆಯು ಜಂಗಮ ದಾಸೋಹ । ಚರತೀರ್ಥ ಸೇವನೆ ಪ್ರಸಾದಭೋಗ । ನಿರುಪಮಖಂಡ ಭಕ್ತಿಯನುಳ್ಳ ಭಕ್ತರ್ಗೆ । ಹರಣಕಿರಣವಾಗೊಪ್ಪುವದೇ ಧರ್ಮಾಚಾರ ॥೬॥

ಅಷ್ಟಾವರಣವೆ ಅಂಗ ಪಂಚಾಚಾರವೆ ಪ್ರಾಣ। ಇಷ್ಟಲಿಂಗಾರ್ಚನೆ ಯರ್ಪಿತವಧಾನ। ನೈಷ್ಠೆಯ ಪರಿಪೂರ್ಣ ನಡೆನುಡಿಯೊಳು ಕೃಪಾ । ದೃಷ್ಟಿ ಸೂಸುವ ಚನ್ನವೀರನ ಪದಸೇವೆ ॥೭॥

---

(೪) ನರಸುತ ಗುರುಸುತರೀರ್ವರ ಚರಿತೆಯ | ನರಿದು ಜನರು ವಿಚಾರಿಪುದು ॥ಪಲ್ಲ॥

ಏಕಾದಶೇಂದ್ರಿಯ ವಿಕಾರದಿಂದಲ। ನೇಕ ಭವಕೆ ಬಹ ನರಸುತನು॥ ಏಕಾದಶ ಸುಪ್ರಸಾದವ ಸವಿದು ಶಿ। ವೈಕ್ಯನೆನಿಸುತಿಹ ಗುರುಸುತನು ॥೧॥

ದಶ ವಿಧ ವಾಯು ಪ್ರವರ್ತನೆಯೊಳು ಮತಿ। ಮಸಣಿಸಿ ಕೆಡುತಿಹ ನರಸುತನು । ದಶವಿಧಾಚರಣೆ ಜಲಾಚರಣೆಯ ಬಿಡ। ದಸಮ ಸುಖದೊಳಿಹ ಗುರುಸುತನು. ॥೨॥

ನವವಿಧದ್ವಾರದೆ ಸುಖವನನುಭವಿಸುತ। ಭವದೊಳು ಬರುತಿಹ ನರಸುತನು। ನವದ್ವಾರದೆ ನವಲಿಂಗವ ಕೀಲಿಸಿ| ದವಿರಳ ನಿಜಸುಖ ಗುರುಸುತನು. ॥೩॥

ಅಷ್ಟ ಮದಂಗಳ ಭ್ರಷ್ಟ ಚರಿತದಿಂ। ಕಷ್ಟಬಡುತಲಿಹ ನರಸುತನು। ಅಷ್ಟವರಣವೆ ತನಗಂಗವಾಗಿಹ ವಿ।ಶಿಷ್ಟ ಪರಮಸುಖ ಗುರುಸುತನು ॥೪॥

ಸಪ್ತ ವ್ಯಸನಗಳ ಚಿತ್ತದೆ ಕಾಮಿಸಿ। ಗುಪ್ತಪಾತಕನಹ ನರಸುತನು। ಸಪ್ತವಿಧದ ಸದುಭಕ್ತಿಯೊಳಗೆ ಲೋ। ಲುಪ್ತನೆನಿಸುತಿಹ ಗುರುಸುತನು ॥೫॥

ಅರಿಷಡುವರ್ಗದ ಚರಿತದೊಳಗೆ ಘನ। ದುರಿತ ನೆನಿಸುತಿಹ ನರಸುತನು। ಪರಮ ಷಟುಸ್ಥಲ ಮಾರ್ಗದೊಳಗೆ ಸು। ಚ್ಚರಿತ ನೆನಿಸುತಿಹ ಗುರುಸುತನು ॥೬॥

ಪಂಚ ವಿಷಯದೊಳು ಸಂಚರಿಸುವ ಮಹ। ಪಂಚಪಾತಕನಹ ನರ ಸುತನು। ಪಂಚವಿಷಯದೊಳು ಪಂಚಾಕ್ಷರಗಳ ಸಂಚವನರಿದಿಹ ಗುರು ಸುತನು ।೭॥

ಕರಣ ಚತುಷ್ಟಯ ದುರಿತ ಚರಿತ್ರದಿ। ಮರಣವನೊಂದುವ ನರ ಸುತನು। ನಿರುಪಮ ಚತುರ್ವಿಧ ಸಾರಾಯವೆ ನಿಜ। ಹರಣವಾಗಿಹನು ಗುರುಸುತನು ॥೮॥

ತನುತ್ರಯ ಸುಖವನು ಮನದಿಂ ಭೋಗಿಸಿ। ಘನ ಪಾತಕನಹ ನರಸುತನು। ತನುತ್ರಯ ತ್ರಿವಿಧ ಲಿಂ। ಗಾನುಭವದ ಸುಖದನುವನರಿದ ಘನಗುರುಸುತನು ॥೯॥

ಧರೆಯೊಳಹಂಕಾರ ಮಮಕಾರಗಳಿಂ। ಬೆರಡರೊಳಿರುತಿಹ ನರಸು ತನು। ಶರಣನೆ ಸತಿ ಶಿವಲಿಂಗವೇ ಪತಿ ಎಂಬೆರಡರರುವಿನೊಳಿಹ ಗುರು ಸುತನು ॥೧೦॥

ಏಕಾತ್ಮನೇ ತ್ರೈಲೋಕ ಭರಿತನೆಂ । ದೇಕೀಕರಿಸುತಿಹ ನರಸುತನು। ಏಕೋದೇವಾ ಮದ್ಗುರು ಚನವೀರನ ಸಾಕಾರವೆ ನಿಜ ಗುರುಸುತನು ॥೧೧॥



(೫) ಬಾರೊ ಗುರುಲಿಂಗ ದೇವನೆ ತ್ರೈಕರ ಸಾರಸಪೀಠಕೆ ಕರುಣ ದೊಳಿದ್ದು ||ಪ||

ಆಚಾರಾಂಗದ ಹಸ್ತಪೀಠಕೆ ಪಂಚಾಚಾರ ನಿಜೇಷ್ಟ । ಲಿಂಗಯ್ಯನೆ ಎದ್ದು ॥೧॥

ಜ್ಞಾನಾಂಗದ ಕರಪೀಠಕೆ ಮಂತ್ರ । ಧ್ಯಾನ ಸ್ತೋತ್ರ ಜಪ ಪ್ರಾಣಲಿಂ ಗೈಯನೆದ್ದು ॥೨॥

ಯೋಗಾಂಗದ ಕರಕಮಲಕೆ ನಡೆನುಡಿ । ಯೋಗ ಸಮಂಚಿತ ಚನ್ನ ವೀರನೆ ಎದ್ದು ॥೩॥



(೬) ಪಂಚಾಚಾರ ಸುಮಾರ್ಗದೊಳು। ಸಂಚರಿಸುತ ಘನ ಲಿಂಗಯ್ಯ ॥ ಪಲ್ಲ॥

ಕರದೊಳು ಪರಶಿವಲಿಂಗವ ಭಜಿಸುತ। ಪರದೈವಂಗಳ ತ್ಯಜಿಸುತಲಿ। ಪರತರ ನೈಷ್ಠೆಯೊಳಿರಲದುಲಿಂಗಾ। ಚರಣೆಕ್ರಿಯಾಚಾರ ಲಿಂಗಯ್ಯ ॥ ೧ ॥

ಅವರವರೊಡವೆಯುನವರಿಗೆ ಸಲಿಸುತೆ। ವಿವರದೆ ತನುಮನಧನವ ಗುರು। ಶಿವ ಚರ ತ್ರಿವಿಧಕೆ ಕೊಡುವ ಸದಾಚಾ। ರವನರುಪಿದ ಗುರು ಲಿಂಗಯ್ಯ ॥ ೨ ॥

ಕಂಗಳ ಕೋಡಿನೊಳುದಿಸಿದ ಲಿಂಗವ। ನಂಗದ ಕರ ಮನ ಭಾವದೊಳು। ಅಂಗವಿಸಿರುತಿಹ ವ್ರತವೆ ಶಿವಾಚಾ। ರಂಗದ ಕಳೆ ಶಿವ ಲಿಂಗಯ್ಯ ॥೩॥

ಉತ್ತಮ ಗುರುಚರಲಿಂಗ ಭಕ್ತರ। ಕರ್ತರೆನಗೆ ನಾ ಬಳಿದೊತ್ತು। ಸತ್ಯವಿದೆಂಬುದು ಭೃತ್ಯಾಚಾರದ। ವರ್ತನೆ ಜಂಗಮ ಲಿಂಗಯ್ಯ ॥೪॥

ಚಾರುವ್ರತ ಸುಶೀಲರ ಕಂಡರೆ। ಸೇರದೆ ನಿಂದಿಸಿ ಬೊಗಳುವರ। ದೂರ ತ್ಯಜಿಸುವದು। ವೀರಶಿವಗಣಾ। ಚಾರ ಪ್ರಸಾದವು ಲಿಂಗಯ್ಯ ॥೫॥

ಸದಮಲ ಲಿಂಗ ಸದಾಶಿವ ಭೃತ್ಯ। ವಧಿಕ ಗಣಾಚಾರಂಗಳನು। ಮುದದಿಂದಾಚರಿಸುವ ಸದ್ಭಕ್ತರ। ಹೃದಯದೊಳಿಹ ಮಹಲಿಂಗಯ್ಯ ॥೬॥

ಪಾವನಕರ ಶ್ರೀಪಂಚಾಚಾರವೆ। ಜೀವನವಾಗಿರುತಿಹ ವೀರ। ಶೈವ ಸುಧಾಬ್ಧಿಗೆ ಚನ್ನವೀರಗುರು। ದೇವ ಸುಧಾಕರ ಲಿಂಗಯ್ಯ ॥ ೭ ॥

---

(೭) ಜಯಜಯ ಗುರುವೆ ಪಾಲಿಸಿ ದಯಮಾಡೊ ಪದವ ॥ಪಲ್ಲ॥
ಮೋಕ್ಷದಾಯಕ ಗಣ ಸಾಕ್ಷಿ ಸಹಿತತ್ರೈದೀಕ್ಷೆಯನೀನೊಲಿದಿತ್ತೆ ॥೧॥
ನಿತ್ಯ ನಿರಂಜನ ವಸ್ತುವಿದೆ ಎಂದುತ್ತಮ ಹಸ್ತದೊಳಿತ್ತೆ ॥೨॥
ಲಿಂಗದ ನಡೆ ನಿಜಲಿಂಗದ ನುಡಿ ಚಿಲ್ಲಿಂಗದ ಜ್ಞಾನವನಿತ್ತೆ ॥೩॥
ಸ್ವಯಚರ ಪರಜಂಗಮಚರಣದಚಿನ್ಮಯತೀರ್ಥವಸಲಿಸುತ್ತೆ ॥೪॥
ಸಿದ್ಧಸುಸಿದ್ಧ ಪ್ರಸಿದ್ಧ ಪ್ರಸಾದವ। ನಿರ್ಧರದಿಂದುಣಲಿತ್ತೆ ॥೫॥

ನಿನ್ನ ಪದಾಬ್ಜದ ರೇಣುಭಸಿತವ । ನನ್ನ ಲಲಾಟದೊಳಿಟ್ಟೆ ॥೬॥
ಆರುಮೊಗನ ಮೊಗವಾಗಿಹ ಮಣಿಗಳ। ಸೇರಿಸಿಕೊರಳೊಳಗಿಟ್ಟೆ ॥೭॥
ಶಿವಪೆಸರಾದ ಮಹಮಂತ್ರವನೆ । ನ್ನ ವಿರಳ ಕಿವಿಯೊಳು ಪೇಳ್ದೆ ॥೮॥
ಅಷ್ಟವರಣವ ತನುವಿಗಳವಡಿಸಿ । ಶಿಷ್ಟಾಚಾರವ ಪೇಳ್ದೆ ॥೯॥
ಚನ್ನವೀರೇಶ ಮಹೇಶ ಶಿಖಾಮಣಿ । ಎನ್ನನುದಯದಿಂ ಪೊರೆಯೊ ॥೧೦॥

---

(೮) ಶರಣಾಗೈ ಗುರುವೆ ಶ್ರೇಷ್ಠವಾ। ದೊರವಿತ್ತು ಪೊರೆಯೋ ॥ಪಲ್ಲ॥
ವ ರನೆಯುಳಿದ ಮಹದರುವಿನೊಳಗೆ ನಿಜ। ಗುರುವಿನಿರವನು ಪೇಳ್ದೆ ॥೧॥
ಕಂಗಳಕೊನೆಯೊಳಗಂಗೈಸಿದ ನಿಜ । ಲಿಂಗವ ಪ್ರಾಣದೊಳಿಟ್ಟೆ ॥೨॥
ಲಿಂಗದ ನಡೆನುಡಿ। ಸಂಗಸುಜ್ಞಾನದೆ। ಜಂಗಮದಿರವನು ಪೇಳ್ದೆ ॥೩॥
ಚರಪಾದೋದಕದಿರವನು ಎನ್ನಯ । ಸುರಸ ಜಿಹ್ವೆಯೊಳಿಟ್ಟೆ ॥೪॥
ಸದಮಲ ಭಕ್ತಿಯೊಳುದಿಸಿದ ಶೇಷವ। ಮುದದಿ ನಾಸಿಕದೊಳಿಟ್ಟೆ ॥೫॥
ಅಂಗದ ಮನಗುಣಂಗಳ ದಹಿಸಿನಿ । ಜಾಂಗದೆ ಭಸಿತವನಿಟ್ಟೆ ॥೬॥
ಅನಘ ಶಿವಾಕ್ಷಿಯು ಮನುಮುಖಮಣಿಗಳ। ನನುವಿನ ನೇತ್ರದೊಳಿಟ್ಟೆ ॥೭॥
ಸಂಚಿತ ಲಿಖಿತವನೊಂಚಿಸಿ ಕರ್ಣದೆ। ಪಂಚಮನುಗಳನು ಪೇಳ್ದೆ ॥೮॥
ನಿನ್ನ ಸ್ವರೂಪವನೆನ್ನೊಳಗರುಹಿದೆ ಚನ್ನವೀರೇಶಮಹೇಶ ॥೯॥

---

(೯) ಲಿಂಗವೆಗತಿ ಎನಗೆ ಸದ್ಗುರು ಚರಲಿಂಗವೆ ಗತಿ ಎನಗೆ।
ಕಂಗಳಕೊನೆಯೊಳು ಬೆಳಗಿ ತೋರುವ ಪ್ರಭುಲಿಂಗವೆ ಗತಿ ಎನಗೆ ॥ಪಲ್ಲ॥
ವರ ಸದಾಚಾರ ಸಂಯುತ ಗುರುಭಕ್ತನ । ಕರಕಮಲದೊಳಿಡೆ ವಿಷ ದೊಂಾಜಪಕ್ರಿಯೆ ॥೧॥

ಇಷ್ಟ ಸೃಷ್ಟಿಕಶೀಲನೇಮ ಪ್ರಶಾಂಚಿತ। ಶಿಷ್ಟಮಹೇಶಂತರದೊಳು
ಪ್ಪವಗುರು ॥೨॥

ರೂಪುರುಚಿತೃಪ್ತ್ಯವಿಶೇಷ ಸವಿವ ಚಿತ್ಕ। ಲಾಪ ನಿರ್ಲೇಪ ಪ್ರಸಾ
ದಿಯೊಳಿಹಶಿವ ॥೩॥

ಜ್ಞಾನ ಕ್ರಿಯೆ ಸನ್ಮಾರ್ಗದೋಳ್ನಡೆವ ಲಿಂ। ಗಾನುಭವದಪ್ರಾಣಲಿಂಗಿ
ಯೊಳಿಹಾಚಾರ ॥೪॥

ಶಿವಪದ ಭಜನ ಶಿವಾರ್ಚನ ರತ ಪರ। ಶಿವನೊಡತಣ ಶಿವಶರಣ
ನೊಳಿಹಶೇಷ ॥೫॥

ಸೋಹ ದಾಸೋಹವೆಂಬರಡಳಿದಚಲನಿ। ರ್ದೇಹ ಶಿವೈಕ್ಯನೋಳ್ನೆ
ಲಸಿಶೋಭಿಪಮಹ ॥೬॥

ಕರಮನ ನಯನದೋಳ್ ಮೆರೆವ ಪ್ರಾಣೇಶಮ। ದ್ಗುರುವರಚ
ನ್ನವೀರೇಶ ನಿರಂಜನ ॥೭॥



(೧೦) ತೂಗಿರೆ ಶರಣ ಸತಿಯರು ಶಿವ। ಯೋಗಸಂಪದದೊಳು
ಬಿಡದೆ ಲಿಂಗವನು ॥ಪಲ್ಲ॥

ಗುರುವರ ಹಸ್ತಾಬ್ಜ ಮಧ್ಯದೊಳೊಪ್ಪುವ। ನಿರುಪಮ ಸತ್ಕ್ರಿಯಲಿಂಗ
ಗುರುಮೂರ್ತಿ। ಪರಮ ಸತ್ಕ್ರಿಯ ಸ್ಥಾನಭಂತ ಶರಣಂಗೆ ವರವೀವ ಪರತರ
ಇಷ್ಟಲಿಂಗವನು ॥೧॥

ವರಸುಮನ್ಯೈಕಕರಾಬ್ಜಾಂತರದೊಳು। ಮೆರೆದ ಶ್ರೀ ಶಿವಲಿಂಗ ಚರ
ಲಿಂಗಸಂಗ॥ ಪರಿಪೂರ್ಣ ನಡೆನುಡಿ ಸಮರಸ ಭಕ್ತರ। ಪೊರೆವ ದಯಾ
ಪಾಂಗಪ್ರಾಣಲಿಂಗವ ॥೨॥

ನಿರುತ ಸದ್ಭಾವ ಪಾಣಿಪೀಠದೊಳಿಹ। ಚರಶೇಷಲಿಂಗ ಚಿನ್ಮಯಲಿಂಗ
ಮೂರ್ತಿ॥ ನಿರಘ ನಿರಂಜನ ನಿರವಯ ನಿತ್ಯ ಶ್ರೀ ಗುರುಚನ್ನವೀರಮದ್ಭಾ
ವಲಿಂಗವನು ॥೩॥



ಭೈರವಿ.

(೧೧) ಲಿಂಗವೆ ಗತಿ ಎನಗೆ ಪಂಚಾಕ್ಷರ ಸಂಗವೆ ಮತಿ ಎನಗೆ। ಸಂಗನ ಶರಣರಂಗದೊಳಿಹ ಇಷ್ಟ। ಲಿಂಗವೆ ಗತಿ ಎನಗೆ ॥ಪಲ್ಲ॥

ನಾಸಿಕ ಮುಖದ ಸದ್ಭಾಸನೆ ಶೇಷವ। ಸೂಸದಂತೀವ ಮಂತ್ರನ್ಯಾಸ ನಕಾರ ಕ್ರಿಯ ॥೧॥

ರಸನೆಯ ಮುಖದ ಚಿಸ್ತ್ರ। ಸಸುಪ್ರಸಾವವ॥ ಸಸಿನೆಯಿಂದೀ ಮಂತ್ರ। ವಿಸರ ಮಕಾರ ಗುರು ॥೨॥

ಕಂಗಳ ಮುಖದ ಚಿವಂಗ ಪ್ರಸಾದವ। ಪಿಂಗದಂತೀವ ಮಂತ್ರ ॥ ದಂಗ ಶಿಕಾರ ಶಿವ ॥೩॥

ವರ ತತ್ವಾಂಗ ಮುಖದ ಸುಸ್ಪರ್ಶನ ಶೇಷ॥ ತ್ವರಿತದಿಂದೀವ ಮಂತ್ರ। ದಿರವೆ ವಕಾರ ಚರ ॥೪॥

ಶ್ರವಣ ಮುಖದ ಶಬ್ದ ಪ್ರವರ ಪ್ರಸಾದವ। ತವಕ ದಿಂದೀವ ಮಂತ್ರದ ಯಕಾರ ಶೇಷ ॥೫॥

ಹೃದಯ ಮುಖದ ತೃಪ್ತಿ ಸವಮಲ ಶೇಷವ ಒದವಿನಿಂದೀವುದೆ ಮಂತ್ರ ಓಂಕಾರ ಮಹಾ ॥೬॥

ಚಾರು ಷಣ್ಮುಖ ಮಂತ್ರ ದಾರುವೇಷವ ಕೊಂಡ ಸಾರ ಸದ್ಗುರು ಚನ್ನ ವೀರ ಮಹೇಶ ಪ್ರಭು ॥೭॥

---

(೧೨) ಕರೆದಳು ಲಿಂಗಪತಿಯ। ಶರಣ ಸತಿ। ಕರೆದಳು ಲಿಂಗ ಪತಿಯ। ॥ಪಲ್ಲ॥

ಭವಗಿರಿಕುದೀಶ ಶ್ರೀಗುರು ಕರುಣಾಮೃತ। ದವಿರಳದಾಚಾರು ಲಿಂಗವೆ ಬಾರೆಂದು ॥೧॥

ಭಾವ ಮನೋವಾಕ್ಕಾಯ ಮುಕ್ತ ಚಿನ್ಮಂತ್ರ ಸಂ। ಜೀವನೆ ಗುರು ಲಿಂಗಮೂರ್ತಿಯೆ ಬಾರೆಂದು ॥೨॥

ಅತ್ಯತಿಷ್ಠದ್ದ ಶಾಂಗುಲತ್ವದಯುಗ ವಿಭು। ನಿತ್ಯಜಂಗಮ ಶಿವ ಲಿಂಗವೆ ಬಾರೆಂದು ॥೩॥

ದೀಕ್ಷೆ ಶಿಕ್ಷೆ ಜ್ಞಾನ ಪಾದೋದಕ ತ್ರಿವಿಧವಿ। ಚಕ್ಷುಜಂಗಮ ಲಿಂಗವೆ ಬಾರೆಂದು ॥೪॥

ಕಾಯ ಚಿತ್ಕಾರಣ ಭಾವಾರ್ಪಿತ ಶೇಷನ್ನೈ। ಜಾಯುವೆ ಪ್ರಸಾದ ಲಿಂಗವೆ ಬಾರೆಂದು ॥೫॥

ಭೂತಿ ರುದ್ರಾಕ್ಷಿ ಮಂತ್ರಾಷ್ಟಾವರಣಂಗೈಕ್ಯ। ಖ್ಯಾತಪುನೀತ ಮಹ ಲಿಂಗವೆ ಬಾರೆಂದು ॥೬॥

ಚಾರು ಪಂಚಾಚಾರ ಪ್ರಾಣಸಂಯುತ ಚನ್ನ। ವೀರ ನಿರಂಜನ ಲಿಂಗವೆ ಬಾರೆಂದು ॥೭॥



ಭೈರವಿ

(೧೩) ಪಾದವೆ ಗತಿ ಎನಗೆ ಜಂಗಮ ಶ್ರೀಪಾದವೆ ಗತಿ ಎನಗೆ॥ ಆದಿ ಚೈತನ್ಯ ರೂಪನಾದಿ ಜಂಗಮ ಶ್ರೀಪಾದವೆ ಗತಿ ಎನಗೆ ॥ಪಲ್ಲ॥

ಶೈವ ಮೊದಲಾದನ್ಯ। ದೈವಪೂಜೆಯನನು ಗೈವನಲ್ಲ ವೀರ। ಶೈವ ಜಂಗಮ ಶ್ರೀ ॥೧॥

ಆಸೆ ರೋಷ ಹಮ್ಮಾದ ಪಂಥಗಳಿಂದ ಗಾಸಿಯಾಗದ ಸುಪ್ರಕಾಶ ಜಂಗಮದ ಶ್ರೀ ॥೨॥

ತಮಭ್ರಮೆಗಳನೀಗಿ। ಶಮದಮೆಯಾಗಿ ಸ। ತ್ಕ್ರಮಸುಮನದೊಳಹ। ವಿಮಲ ಜಂಗಮದ ಶ್ರೀ ॥೩॥

ನಾನು ನೀನೆಂಬ ಭೇದ। ವೇನು ತೋರದೆ ನಿತ್ಯ। ತಾನು ತಾನಾದ ಮಹಾ। ಜ್ಞಾನಜಂಗಮದ ಶ್ರೀ ॥೪॥

ಶಕ್ತಿ ಸಹಿತ ಸದ್ಯೋನ್ಮುಕ್ತ ಸ್ವರೂಪವಿ। ರಕ್ತನೋಳ್ನಿರುಪಾಧಿ ಭಕ್ತ ಜಂಗಮದ ಶ್ರೀ ॥೫॥

ಈಷಣ ತ್ರಯದ ಅಭಿಲಾಷೆದೋರದ ಮಾಯಾ। ಪಾಶವಿನಾಶ ಮಹೇಶ ಜಂಗಮದ ಶ್ರೀ ॥೬॥

ಭೇದದೋರದನಿರು। ಪಾಧಿಭಕ್ತಿಯುಸುಪ್ರ। ಸಾದ ತೃಪ್ತಿಯೊಳಿರ್ಪ। ನಾದಿ ಜಂಗಮದ ಶ್ರೀ ॥೭॥

ಅಂಗದಕರವಿಷ್ಟ । ಲಿಂಗದ ತನ್ನನು ವಿಷ । ಕಂಗೊಳಿಹ ಪ್ರಾಣ । ಲಿಂಗಜಂಗಮುದಶ್ರೀ ॥೮॥

ಹರಣಪೈದಿಂದ್ರಿಯ ಕರಣವುನೆಲ್ಲಲಿಂಗ । ಕಿರಣವೆಂದಿನಿಸಿದ । ಶರಣ ಜಂಗಮುದಶ್ರೀ ॥೯॥

ಮುಖ್ಯವಾಗಿಹದರ । ಸೌಖ್ಯದೋರದ ಚಿತ್ರಾ । ದಾಖ್ಯಷಡ್ವಿಧಲಿಂ । ಗೈಕ್ಯಜಂಗಮುದಶ್ರೀ ॥೧೦॥

ಬೀರುವರಂಗಸ್ಥಲದ । ಚಾರುಲಿಂಗಾನುಭವದ । ಸಾರಸದ್ಗುರು । ಚನ್ನವೀರ ಮುಪ್ರಭುವಿನ ॥೧೧॥

---

(೧೪) ಅರಿವೆಯು ಕರುಣಿಸೈ ಗುರುವೆ । ನಿತ್ಯ । ವರ ವೀರಶೈವ ಭಕ್ತರ ಕಲ್ಪತರುವೆ ॥ಪಲ್ಲ॥

ಆರೈದು ನೂತ ಕುಕ್ಕಡಿಯು । ತಂದು । ಮೂರೇಳು ಸಾಸಿರದರು ನೂರು । ನಿಡಿಯು । ಸೇರಿಸಿ ಹೊಯ್ದು ಸಣ್ಣಡಿಯು । ಹುಂಜ । ಈರೈದು ಹಣಿಗೆಯಿಂ ನೆಯ್ದ ಚಿತ್ರೊಡೆಯು ॥೧॥

ಸಗುಣ ನಿರ್ಗುಣದ ಚಿತ್ರಳೆಯು । ಕಣ್ಣ । ತೆಗೆದು ನೋಡಲು ನಿತ್ಯ ನಿಜಮೋಕ್ಷ ನಿಳಯು ॥ ಅಗಲಾರು ಮೊಳದ ಸಣ್ಣೊಳೆಯು । ನೂರ । ಮಿಗಿಲೊಂದು ಮೊಳದುದ್ದ ನಿಡಿದುಳ್ಳ ಬಿಳಿಯಾ ॥೨॥

ಚೆಲುವ ಚಿಟ್ಟೆಳಗಿನಂತಿರುವ । ಎಂದು । ಮಲಿನವಾಗದ ನಿತ್ಯ ಮಡಿಯಾಗಿ ಮೆರೆವ । ನೆಲೆಗಾಣಲರಿದಿದರಂದವ । ಮಿಕ್ಕ । ಬಲುವರ್ಣಗಳನು ಮೀರಿದ ಚಿದಂಬರವ ॥೩॥

ಧನವಿಲ್ಲದವ ಬೆಲೆಗೊಟ್ಟ । ಅಲ್ಲಿ । ಮನವಿಲ್ಲದವನೊಬ್ಬ ನೋಡಿ ಕಣ್ಣಿಟ್ಟ ॥ ತನುವಿಲ್ಲದವನದನುಟ್ಟ । ಎಮ್ಮ । ಘನ ಶಿವಶರಣರೆಲ್ಲರು ಸುಖಬಟ್ಟ ॥೪॥

ಎರಡಳಿದೇಕಾದ ಬಗೆಯು । ನೆಲ್ಲ । ವರುಹಿ ಪಾಲಿಸಿ ನಿಮ್ಮ ಚರಣ ನಂಬುಗೆಯು ॥ ಮರವೆಯು ಜೇರ ಕಿತ್ತೊಗೆಯು । ಬಲ್ಲ । ಗುರು ಚನ್ನವೀರ ನೀನುಟ್ಟ ವೈಲಿಗೆಯು ॥೫॥

---

(೧೫) ಗುರುವೆ ನಿಮ್ಮನುಗ್ರಹದಿಂದೆನ್ನ । ಕರ್ಮ । ಹರಿದು ನಿರ್ಮಳ ನಿಜದಿರವಾದೆ ॥ಪಲ್ಲ॥

ಶರೀರವೆ ನಾನೆಂಬ ಅಹಂಕಾರ । ದಿಂದ । ನರರೊಳು ನರನಾಗಿ ಚರಿಸುವಗೆ । ಕರೆದು ಮಂಡೆಯ ಮೇಲೆ ಕರವಿಟ್ಟು । ನೀ । ನರನಲ್ಲ ಪರವಸ್ತುವೆನಲಾಗಿ ॥೧॥

ನಾನು ನನ್ನದು ಎಂಬ ಹಮ್ಮುಮತಿ । ಯಿಂದ । ಜ್ಞಾನ ಬಾಹ್ಯರೊಡನಾಡುವಗೆ । ನೀನೆ ಶರಣಸತಿ ಲಿಂಗವೆ ಪತಿವಸ್ತು । ತಾನೆ ಒಂದೆರಡಾದುದೆನಲಾಗಿ ॥೨॥

ಅಂಗದ ವಿಶ್ವ ತೈಜಸಪ್ರಾಜ್ಞ । ಜೀ । ವಂಗನೆಂಬ ತ್ರೈಕನುವನುಜೀವಿಗೆ । ಮಂಗಳ ಕರದಿಷ್ಟ ಪ್ರಾಣ ಭಾವತ್ರೈ । ಲಿಂಗ ಸಜ್ಜೀವಿ ನೀನೆಲಾಗಿ ॥೩॥

ಮನ ಬುದ್ಧಿ ಚಿತ್ತ ಅಹಂಕಾರ । ಚಾತು । ರ್ಬಿನಗು ದುಃಕರಣಂಗಳಾದೆನಗೆ । ಅನಘ ಶ್ರೀಗುರುಲಿಂಗ ಚರಶೇಷ । ಚಾರು । ಘನಸಾಂಬಯುವೆ ನೀನೆನಲಾಗಿ ॥೪॥

ಐದು ಭೂತಗಳಾದಿ ಗರ ಸೋಂಕಿ । ತ । ನ್ನಾದಿಯ ಮರೆದ ಭೂತಾತ್ಮಸಿಗೆ । ಐದಕ್ಷರದ ಮೂಲ ಮಂತ್ರವನು । ನೀ । ಬೋಧಿಸಿ ಮರೆಯ ದಿರೆನಲಾಗಿ ॥೫॥

ಕಾಮಾದಿ ಅರಿಷಡುವರ್ಗವ । ಕೂಡಿ । ದಾ ಮಂದಮತಿಯ ದುರ್ಮರ್ತನಿಗೆ । ಆ ಮಹಷಟುಸ್ಥಲ ಮಾರ್ಗದೊಳು । ಸ । ತ್ಪ್ರೇಮದೊಳಾ ಚರಿಸೆನಲಾಗಿ ॥೬॥

ಏಳು ವ್ಯಸನದೊಳು ತೊಳತೊಳಲಿ । ಬಹು । ಕೀಳು ಮಾನವನಂತೆ ಬಳಲುವಗೆ । ಏಳು ನೆಲೆಯ ಭಕ್ತಿ ಮಂಟಪದ । ಮೂ । ರೇಳು ದೀಕ್ಷೆಯ ಕರುಣಿಸಲಾಗಿ ॥೭॥

ದುರಿತ ದುರ್ಮದವೆಂಟು ತಲೆದೋರಿ । ತನ್ನ । ಮರೆದಷ್ಟತನುವೆ ತಾನಾಗಿರ್ಪಗೆ । ಶರಣನೆ ನೀನು ನಿನ್ನವೆ ಅಷ್ಟಾ । ವರಣವೆಂಬುದನು ಸೂಚಿಸಲಾಗಿ ॥೮॥

ಒಂಬತ್ತು ತೂತಿನ ಘಟದೊಳು । ಜೀವ । ನಾಂಬು ಪೂರಿತವಾದ ಜಡದೇಹಿಗೆ । ಒಂಬತ್ತು ರಾಜೀವದೊಳಿಪ್ಪ । ಲಿಂಗ । ತುಂಬಿ ಕಾಣಿಸುದು ನೋಡೆಲಾಗಿ ॥೯॥

ಹತ್ತು ವಾಯುವಿನ ಸಂಚಲದಿಂದ । ತನ್ನ । ಗೊತ್ತು ತಾನರಿಯದೆ ಚರಿಸುವಗೆ । ಹತ್ತು ಪಾದೋದಕದಾ ಚರಣೆಯು । ನಿಜ । ಸತ್ಯ ಸತ್ಕ್ರ್ಯೋದಕವೆನಲಾಗಿ ॥೧೦॥

ಅಯ್ದಿಂದ್ರಿಯ ಭೋಗವನು ಮೆಚ್ಚಿ । ಸಂ । ಸಾರ ಬಂಧನಕೊಳಗಾದವಗೆ । ಸಾರ ಸದ್ಭಕ್ತಿ ಸುಪ್ರಸಾದವ । ನಿನ್ನೊ । ಳಾರೈದು ಭೋಗಿಪವೆನಲಾಗಿ ॥೧೧॥

ದುರ್ಮಾಯ ಮರವೆಯು ಬೆಸೆಯಿಂದ । ಇಂಥ । ಕರ್ಮ ದೇಹವ ತಾಳಿ ಚರಿಸುವಗೆ । ಧರ್ಮ ನೀ । ಪರ ತತ್ವಾಚರಣವ । ನಿಜ । ಮರ್ಮವ ನೆನಗೆ ಬೋಧಿಸಲಾಗಿ ॥೧೨॥

ಘೋರ ಸಂಸಾರ ವಿಕಾರಿಯು । ನಿಮ್ಮ । ಕಾರುಣ್ಯ ದೃಷ್ಟಿಯಿಂದಲಿ ನೋಡಿ । ವೀರಶೈವಾಚಾರ ನಡೆನುಡಿಯು । ಚನ್ನವೀರ ನೀನೆನಗೆ ಬೋಧಿಸಲಾಗಿ ॥೧೩॥

---

(೧೬) ಸಲಹಲಿ ತಾನೆ ಒಲಿಯಲಿ ಬಹು । ಸುಲಭದೋರುವ ನಿಜಲಿಂಗದಂಘ್ರಿಗಳಿನ್ನ ॥ಪಲ್ಲ॥

ಅರುಹಿನಾ ಚರಣೆಯು । ಕುರುಹಿನಂಗದ ವಾಮ । ಕರಸಿಂಹಾಸನವಿಷ್ಟಲಿಂಗದಂಘ್ರಿಗಳಿನ್ನ ॥೧॥

ನೇತ್ರಪ್ರಕಾಶದ । ಸೂತ್ರವಿಡಿದು ಜ್ಞಾನ । ಮಾತ್ರವಾಗಿಹ ಪ್ರಾಣಲಿಂಗದಂಘ್ರಿಗಳಿನ್ನ ॥೨॥

ಉಚ್ಚರಿಸುವ ಮಂತ್ರ । ದಿಚ್ಚರಗುಂದದ । ಒಚ್ಚಬರಿಯ ಭಾವಲಿಂಗದಂಘ್ರಿಗಳಿನ್ನ ॥೩॥

ಸಾಧು ಸಜ್ಜನ ಮುಕ್ತಿ । ಹಾದಿ ಎಂದಿನಿಸುವ । ನಾದಿ ಪಂಚಾಚಾರ ಲಿಂಗದಂಘ್ರಿಗಳಿನ್ನ ॥೪॥

ಈಕ್ಷಿಸಿ ಭಕ್ತರಾ । ಪೇಕ್ಷೆಯ ಸಲಿಸುವ । ಮೋಕ್ಷದಾಯಕ ಗುರುಲಿಂಗದಂಘ್ರಿಗಳಿನ್ನ ॥೫॥

ಅಂಗದ ವಿಶ್ವಜೀವಂಗಳೊಳಗೆ ತಾನು । ಸಂಗವಾಗಿಹ ಶಿವಲಿಂಗದಂಘ್ರಿಗಳಿನ್ನ ॥೬॥

ಸ್ವಯ ಚರ ಪರ ಮೂರ। ದ್ವಯುವಮಾಚರಿಸುವ। ಕ್ಷಯನಿಧಿ ಜಂಗ ಮಲಿಂಗದಂಘ್ರಿಗಳೆನ್ನ ॥೭॥

ಉದ್ಧರಿಸುವ ಘನ ಸಿದ್ಧ ಸುಸಿದ್ಧ ಪ್ರ। ಸಿದ್ಧ ತ್ರೈವಿಧಶೇಷಲಿಂಗ ದಂಘ್ರಿಗಳೆನ್ನ ॥೮॥

ಪಿಂಡಬ್ರಹ್ಮಾಂಡದ। ಖಂಡಿತವಿಲ್ಲದ। ಖಂಡಭರಿತ ಮಹಲಿಂಗ ದಂಘ್ರಿಗಳೆನ್ನ ॥೯॥

ಮೆರೆವ ಬ್ರಾಂದಳಕೆ ಭಾ। ಸ್ಕರನಾಗಿ ಬೆಳಗುವ। ನಿರುಪಮ ನಿಷ್ಕಲ ಲಿಂಗದಂಘ್ರಿಗಳೆನ್ನ ॥೧೦॥

ಅಕಳಂಕ ಸುಖದ ಸ। ನ್ಮುಖವ ಕಾಣಿಸುವಲ್ಲಿ। ಮುಕುರವಾಗಿಹ ಶೂನ್ಯಲಿಂಗದಂಘ್ರಿಗಳೆನ್ನ ॥೧೧॥

ನರರ ವಾಙ್ಮನಕಗೋ। ಚರವಹ ಶರಣರ। ಪೊರೆವ ನಿರಂಜನ ಲಿಂಗದಂಘ್ರಿಗಳೆನ್ನ ॥೧೨॥

ನೂರೊಂದು ಸ್ಥಲದ ವಿ। ಚಾರ ವಿಗ್ರಹ ಚನ್ನ। ವೀರಮುದ್ಗುರು ಲಿಂಗಜಂಗಮಂಘ್ರಿಗಳೆನ್ನ ॥೧೩॥

---

ರಾಗ-ಕಾಂಬೋದಿ.

(೧೭) ಅಂಗದಲತಿ ಕಮಲಂಗಳೊಳಗೆ ನವಲಿಂಗ ತುಂಬಿ। ಮಂಗ ಳಘೋಷದಿ ಝೇಂಕರಿಸುತಲಿದೆ ಲಿಂಗ ತುಂಬಿ। ॥ಪಲ್ಲ॥

ಚಾರು ಚೌದಳದರವಿಂದ ದೊಳಾಚಾರಲಿಂಗ ತುಂಬಿ। ಆರುದಳದ ಸರಸಿಜದೊಳು ಶ್ರೀಗುರುಲಿಂಗ ತುಂಬಿ। ಈರೈದು ದಳದ ವಾರಿಜದೊಳು ವರ ಶಿವಲಿಂಗ ತುಂಬಿ। ಮೀರಿ ದ್ವಾದಶದಳ ನಳಿನದೊಳು ಜಂಗಮ ಲಿಂಗ ತುಂಬಿ॥ ॥೧॥

ಪದಿನಾರೆಸಳ ಪದುಮದೊಳು ಸುಪ್ರಸಾದಲಿಂಗ ತುಂಬಿ। ದ್ವಿದಳ ಸರೋಜದ ಸೌರಭದೊಳು ಮಹಲಿಂಗ ತುಂಬಿ॥ ವಿದಿತಸಾಸಿರ ದಳ ದಚ್ಚದೆ ನಿಷ್ಕಳಲಿಂಗ ತುಂಬಿ। ತ್ರಿದಳ ತಾಮರಸದೊಳು ನಿಃಶೂನ್ಯ ಲಿಂಗ ತುಂಬಿ ॥೨॥

ಏಕೈಕದಳದ ಕಂಜದೊಳು ನಿರಂಜನಲಿಂಗ ತುಂಬಿ। ಸಾಕಾ ರಾಂಗದ ನಾಮ ಕರ ಪೀಠದೊಳಗಿಷ್ಟಲಿಂಗ ತುಂಬಿ॥ ತ್ರೈಕರಣಾದಿ ಸರ್ವಾಂಗದೊಳಗೆ ಪ್ರಾಣಲಿಂಗ ತುಂಬಿ। ಶ್ರೀಕರ ಗುರು ಚನ್ನವೀರ ತಾನಾದುದು ಲಿಂಗ ತುಂಬಿ ॥೩॥

---

ರಾಗ–ದ್ವಿಜಾವಂತಿ.

(೧೮) ಪಾಲಿಸು ಪರಮ ಸುಜ್ಞಾನ ಕಾರಣ ಮೂರ್ತಿ। ಮೂಲ ಷಡಕ್ಷರಲಿಂಗವೆ। ಸಾಲೋಕ್ಯ ಮೊದಲಾದ ಪದವನುಳಿದು ಸ। ಕೀಲವ ನೆನಗೆ ಬೋಧಿಸಿದ ಜಂಗಮದೇವ ॥ಪಲ್ಲ॥

ಗುದದೊಳಗೊಪ್ಪುವಾಧಾರ ಚಕ್ರ ಚಾದಳದ ಮಧ್ಯದೊಳು ಶೋಭಿ ಸುವ ನಕಾರ ಮಂತ್ರವದಕೆ ಸ್ಥೂಲತನಂಗವಾಚಾರಲಿಂಗ ಘ್ರಾಣ ವದ ನಸಕ್ರಿಯು ಶಕ್ತಿ ಶ್ರದ್ಧಾ ಭಕ್ತಿ ವಿದಿತ ಸುಚಿತ್ತಹಸ್ತ ಗಂಧಪದಾರ್ಥ ಸೂಸದು ಗಂಧಶೇಷವೆಂದೊರೆದ ಜಂಗಮದೇವ ॥೧॥

ಲಿಂಗಸ್ಥಾನದ ಸ್ವಾಧಿಷ್ಠಾನ ಚಕ್ರದ ಷಡ್ದಳಂಗಳ ಮಧ್ಯ ಮಕಾರ ಮಂತ್ರದಂಗ ಮಹೇಶ ಗುರುಲಿಂಗ ಮಹೇಶ ಮುಖ ಮಗಾಂಗಲ್ಯ ಜ್ಞಾನಶಕ್ತಿ ನಿಷ್ಠಾಭಕ್ತಿ ಹಾಂಗೆ ಸುಬುದ್ಧಿಹಸ್ತ ರಸದ ಪದಾರ್ಥ ಸ್ವಾದಂಗಳೇ ಶೇಷ ವೆಂದೊರೆದ ಜಂಗಮದೇವ ॥೨॥

ನಡು ನಾಭಿ ಮಣಿಪೂರಕ ದಶವಳದೆಡೆಯೊಳೊ ಪ್ಪುವ ಶಿಕಾರ ಪ್ರಣವದೊಡಲು ಪ್ರಸಾದಿ ಶಿವಲಿಂಗನಯನ ಮುಖವಿಡಿದಿಚ್ಛಾಶಕ್ತಿ ಸಾವಧಾನ ಭಕ್ತಿ ಕಡುನಿಗರ್ವವೆ ಹಸ್ತ ರೂಪಪದಾರ್ಥ ನಿರ್ಜಡ ರೂಪುಶೇಷವೆಂದೊರೆದ ಜಂಗಮದೇವ ॥೩॥

ರಸಿಕ ಹೃದಯದನಾಹತ ಚಕ್ರ ದ್ವಾದಶ ಎಸಳ ಮಧ್ಯದ ವಕಾರ ಪ್ರಣಮವ ಸುಲಿಂಗಿಯಂಗ ಜಂಗಮಲಿಂಗ ತ್ವಾಂಶುಮುಖ ವೆಸೆ ವಾದಿ ಶಕ್ತಿಯನುಭವ ಭಕ್ತಿ ಅಸಮ ಸುಮನಹಸ್ತ ಸ್ಪರ್ಶನ ಪದಾರ್ಥ ಸಂತತ ಸೋಂಕ ಶೇಷವೆಂದೊರೆದ ಜಂಗಮದೇವ ॥೪॥

ಗಳದೊಳೊಪ್ಪುವ ವಿಶುದ್ಧಿಯ ಚಕ್ರಷೋಡಶದಳದ ಮಧ್ಯದೆ ಯಕಾರ ಪ್ರಣವ ಪ್ರಳವಂಗ ಶ್ರವಣ ಪ್ರಸಾದಲಿಂಗಾನನ ತಿಳಿ ಶ್ರೋತ್ರಾನಂದ

ಭಕ್ತಿ ಪರಶಕ್ತಿಸಮೇತ ಸುಜ್ಞಾನಹಸ್ತಶಬ್ದ ಪದಾರ್ಥ ನಿಷ್ಕಳಲಿಂಗ ಶಿವ ವೆಂದೊರೆದ ಜಂಗಮದೇವ ॥೫॥

ಭ್ರೂಮಧ್ಯ ದಾಗ್ನೇಯ ಚಕ್ರದುಭಯ ದಳದ ಮಧ್ಯದೊಳಗಿಹ ಮೂಲ ಮಂತ್ರಕಾ ಮಹಲಿಂಗೈಕ್ಯ ಹೃದಯವೆ ಮುಖಸಮರಸವೆ ಭಕ್ತಿ ಚಿತ್ತಶಕ್ತಿನಾಮಸದ್ಭವ ಹಸ್ತ ತೃಪ್ತಿ ಪದಾರ್ಥಸುಪ್ರೇಮವೇ ಶಿವವೆಂ ದೊರೆದ ಜಂಗಮದೇವ ॥೬॥

ಆರು ಸ್ಥಳದೊಳೊಪ್ಪುವಾರು ಚಕ್ರದ ಮಧ್ಯದಾರು ಸತ್ಪ್ರಣವಾದಿ ಶೋಭಿಸುವ ಆರುಲಿಂಗ ಷಣ್ಮುಖ ಹಸ್ತ ಶಕ್ತಿ ಭಕ್ತಿ ಆರುಪದಾರ್ಥಪ್ರಸಾ ದಂಗಳನು ತೋರಿ ಎನ್ನನು ನಿನ್ನ ಸ್ಮರಣೆಯೊಳಿರಿಸಿದ ವೀರಮಹೇಶ ಚನ್ನವೀರ ಜಂಗಮದೇವ ॥೭॥



(೧೯) ಬಸವಲಿಂಗವೆಂಬೈದಕ್ಷರಗಳು ರಸನೆಯೊಳಿರಬೇಕು । ಶಶಿ ಕಾಂತದೊಳಿಹ ರಸದ ಪರಿಯೊಳೀವಸುಧೆಯೊಳಿರಬೇಕು ॥ಪ॥

ಅರುಹಿನ ಕುರುಹಿಡಿದವನೀ ತಲದೊಳವಧರಿಸಿದ ಗಣಪಾಲ । ವರಗುರು ಲಿಂಗಸುಜಂಗಮ ಸೌಖ್ಯಾಕರ ಪಾವನಶೀಲಾ ॥ ಪರಮ ಷಡ ಕ್ಷರ ಪಂಚಾಕ್ಷರವೆಂಬೆರಡರಾದಿ ಮೂಲ । ಶರಣಕರಮನಭಾವದಿಂದಲು ಪಚರಿಸಿಕೊಂಬ ಲೋಲ ॥೧॥

ವೇದಶಾಸ್ತ್ರ ಪೌರಾಣನಿಗಮ ದಧಿ ಮಥನದ ನವನೀತ । ಸಂದೇಹ ದೊಳಿಹ ನಾದ ಬಿಂದುಕಳೆಗಳಿಗತ್ತಲತ್ತತೀತ ॥ ಮೂವೇವರ ಮುತ್ತಯ್ಯನ ಪೊತ್ತು ಸಲಹಿದೆನ್ನದಾತಾ । ಭೇದಿಸಲಗಣಿತ ಬ್ರಹ್ಮಾಂಡಗಳನುದ್ಧರಿಸುವ ಪ್ರಖ್ಯಾತ ॥೨॥

ಭಕ್ತಿಯನೊಲ್ಲದ ನಿರುಪಾಧಿಕ ಸದ್ಭಕ್ತರಂಗ । ಮುಕ್ತಿಯ ಸೀಮೆಯ ಮೆಟ್ಟದ ವರ ಬಹಿರಂಗದಿಷ್ಟಲಿಂಗ ॥ ಯುಕ್ತಿಯಿಂದ ಸದ್ಭಕ್ತಿಯ ಮಾಡು ವರಂಗ ಲಿಂಗಸಂಗ । ಶಕ್ತಿಸಮೇತ ವಿರಕ್ತಿಯ ಮಾಡುವ ದೇಶಿಕರು ತ್ತುಂಗ ॥೩॥

R. N. B. 2554

# ಶಿವಾನುಭವ.

(ಮಾಸಪತ್ರಿಕೆ.)

ಸಂಪುಟ ೪] [ಸಂಚಿಕೆ ೭.



ಅಕ್ಟೋಬರ ೧೯೩೯] ವಿಜಾಪುರ. [ಆಶ್ವಿನ ೧೮೫೧

ವಾ. ಚಂ. ೪.' ರೂ. ೪. ಆ.

# ವಿಷಯಾನುಕ್ರಮಣಿಕೆ.



## ಶಿವಾನುಭವ.

ಇದು ವೀರಶೈವ ಧಾರ್ಮಿಕ ಉನ್ನತಿಯ ಬಗ್ಗೆ ಹೆಣಗಾಡುವ ಮೇಲ್ದರದ ಮಾಸಪತ್ರಿಕೆಯು. ಇದು ೬೪ ಪುಟಗಳುಳ್ಳದ್ದಿದ್ದು ಚಂದಾ ಮಾತ್ರ ೪ ರೂ. ೪ ಆ. ಇದು ಪ್ರತಿ ತಿಂಗಳ ಮಧ್ಯಕ್ಕೆ ಹೊರಡುತ್ತದೆ. ಲೇಖಕರು ಚಿಕ್ಕ ಚಿಕ್ಕ ಲೇಖಗಳನ್ನು ಕಳಿಸಬೇಕು. ವೀರಶೈವರ ಉನ್ನತಿಯ ಪರವಾಗಿ ಯಾರು ಬೇಕಾದವರು ಬರೆದರೂ ಅವಕಾಶ ಸಿಗುವದು ಕೆಲವರು ಇದರ ಹಿಂದಿನ ಸಂಚಿಕೆಗಳನ್ನು ಬೇಡುತ್ತಾರೆ. ಆದರೆ ೧-೨ ಸಂಚಿಕೆಗಳು ಸಿಗುವದೇ ಇಲ್ಲ. ೩ ರಿಂದ ೧೨ ವರೆಗೆ ಮಾತ್ರ ಸಿಗುತ್ತವೆ. ಬೇಕಾದವರು ಶೀಘ್ರ ತರಿಸಿಕೊಳ್ಳಬಹುದು. ತಡವಾದರೆ ಪ್ರತಿಗಳು ಸಿಗಲಾರವು. ಯಾಕಂದರೆ ಪ್ರತಿಗಳು ಸ್ವಲ್ಪೇ ಉಳಿದಿವೆ. ಪ್ರತಿಯೊಂದು ಸಂಚಿಕೆಗೆ ೮ ಆಣೆ.

ಮ್ಯಾನೇಜರ.



ಶ್ರೀ ಶಾಂತವೀರ ಸ್ವಾಮಿಗಳು ಗುರುಮಠಕಲ್ಲು.

(ಸಂಕ್ಷಿಪ್ತ ಚರಿತ್ರೆ – ಪುಟ ೨೯೫-೩೦೪)

# ಶಿವಾನುಭವ.

ವರ್ಷ ೪] ಅಕ್ಟೋಬರ ೧೯೨೯ [ಸಂಚಿಕೆ ೭

## ಗುರುಲಿಂಗಜಂಗಮದ ತಾರತಮ್ಯ.

(ಲೇಖಕ:— ಗುರುನಂಜಪ್ಪ ನೀಲಪ್ಪ ಕಟ್ಟೀಮನಿ ಸ್ಕೂಲಮಾಸ್ತರ ರಾಣೇಬಿನ್ನೂರ)



ಪಾರಮಾರ್ಥ (ಮುಕ್ತಿ) ಸಾಧನೆಗೆ ಅವಶ್ಯವಾದ ಸಾಧನಗಳು ಎರಡು ಬಗೆಯಿಂದ ನಮಗೆ ಗೋಚರವಾಗುವವು. ಅವುಗಳಲ್ಲಿ ಒಂದು ಸ್ವಾನುಭವವು, ಇನ್ನೊಂದು ಶಾಸ್ತ್ರಾನುಭವವು. ಸ್ವಾನುಭವವು ಶಾಸ್ತ್ರಾನುಭವದ ತಳಹದಿಯಾಗಿದೆ ಎಂದು ನಿಸ್ಸಂದೇಹವಾಗಿ ಹೇಳಬಹುದು. ಏಕೆಂದರೆ, ಒಂದಾನೊಂದು (ಸೃಷ್ಟ್ಯಾದಿ) ಕಾಲದಲ್ಲಿ ಮಹಾನುಭವಿಗಳಾದ ಪ್ರಾಚೀನ ವ್ಯಕ್ತಿಗಳ ಅಂತರ್ಯದಲ್ಲಿದ್ದ ಸ್ವಾನುಭವಗಳೇ ಬರಹ ರೂಪದಿಂದ ಹೊರಬಿದ್ದಾಗ ಶಾಸ್ತ್ರ (ದೇವವಾಣಿ) ಗಳೆಂದು ಪರಿಣಮಿಸಿರುವವು. ಶಾಸ್ತ್ರಗಳನ್ನೇನು ದೇವರು ಲೇಖನಿಗೆ ಮಸಿ ಎದ್ದಿ ಕಾಗದಗಳ ಮೇಲೆ ಬರೆದಿಟ್ಟಿರುವದಿಲ್ಲ. ಒಂದು ವೇಳೆ ದೇವರು ಮನುಷ್ಯ ಶರೀರದಲ್ಲಿಯೇ ಅವತರಿಸಿ ಹೇಳಿರುವದೇನಂದರೆ, ಅದು ಪೃಥ್ವೀಭಾಗದ ಯಾವತ್ತರಿಗೂ, ಒಂದೇ ಒಂದು ಸಮಾನವಾದ ಧರ್ಮವಾಗಿರಬೇಕಾಗಿತ್ತು, ದೇವರೇನು ಪಕ್ಷಪಾತಿಯೋ? ಅಲ್ಲ.

ಅಂದಮೇಲೆ ಹಾಗೆ ಎಲ್ಲಿ ಇದೆ? ಒಬ್ಬರದು ಒಂದು ಧರ್ಮವಾಗಿದ್ದರೆ ಇನ್ನೊಬ್ಬರದು ಮತ್ತೊಂದು ಧರ್ಮವಾಗಿರುವದು. ಹೀಗೆ ಅನಂತ ಧರ್ಮಗಳು ನಮ್ಮ ಕಣ್ಣಿಗೆ ಬೀಳುವವು. ಇವುಗಳ ಮೇಲಿಂದ ಆಲೋಚಿಸಿದರೆ, ಸದ್ಯದಲ್ಲಿ ಒಡೆದು ಕಾಣುವ ಧರ್ಮಗಳೆಲ್ಲ ಪೂರ್ವಕಾಲದಲ್ಲಿ

ಆಗಿ ಹೋದ ಮಹಾತ್ಮರ ಆತ್ಮವಿಕಾಸದಿಂದುಂಟಾದ ಸ್ವಾನುಭವಗಳೇ ಎಂದು ಸ್ಪಷ್ಟವಾಗಿ ಹೇಳಬಹುದು. ಇಲ್ಲಿ ಆತ್ಮನೆಂದರೆ ತನ್ನ ನಿಜವ ಇರವನ್ನು ತಾನು ಅರಿತದ್ದು ಎಂಬ ಭಾವವು. ತನ್ನ ನಿಜವ ಇರುವನ್ನು ತಾನು ಮರೆತುದೇ ಜೀವಭಾವವಾಗಿರುವದು. ಸ್ವಾನುಭವಿಯೇ ಆಗಲಿ, ಶಾಸ್ತ್ರಾನುಭವಿಯೇ ಆಗಲಿ, ಮುಕ್ತಿಯನ್ನು ಪಡೆಯತಕ್ಕವನು, ದೇವರ ಮೇಲಿನ ತನಗಿದ್ದ ಭಕ್ತಿ ಎಂಬ ಕವಚವನ್ನು ಧಾರಣಮಾಡಲೇಬೇಕಾಗುವದು. ಈ ಮುಕ್ತಿಯು ವಿಷಯವಾಗಿ ಅನಂತ ಮತಗಳು ಅನಂತ ರೀತಿಯಾಗಿ ಪ್ರತಿಪಾದಿಸುತ್ತಿರುವವು. ಅದರಂತೆ ನಮ್ಮ ವೀರಶೈವ ಮತವಾದರೂ, ಗುರುಲಿಂಗಜಂಗಮದ್ವಾರವಾಗಿ ತನ್ನ ಮುಕ್ತಿಪಥವನ್ನು ಕಂಡು ಹಿಡಿದಿರುವದು. ವೀರಶೈವರಿಗಿರುವ ಈ ಗುರುಲಿಂಗಜಂಗಮದ ಒಳಹೊರಗಣ ತಾರತಮ್ಯವನ್ನು ಕುರಿತು ಸ್ಥೂಲರೀತಿಯಿಂದ ವಿವೇಚಿಸುವದೇ ಪ್ರಸ್ತುತ ಲೇಖದ ಮುಖ್ಯೋದ್ದೇಶವಾಗಿರುವದು.

"ತನ್ನ ಬಿಟ್ಟು ದೇವರಿಲ್ಲ, ಮಣ್ಣು ಬಿಟ್ಟು ಮಡಿಕೆ ಇಲ್ಲ" ಎಂಬ ಗಾದೆಯ ಮಾತು ಪ್ರತಿಯೊಬ್ಬರ ಮುಖದಿಂದಲೂ ಹೊರಬೀಳುತ್ತಿರುವದು. ಗಾದೆಯ ಮಾತುಗಳೇನು ಸಾಮಾನ್ಯವಾದವುಗಳಿರುವದಿಲ್ಲ. ಕೇವಲ ಅನುಭವದ ಮಾತುಗಳೇ ಇರುತ್ತವೆ. ಆದುದರಿಂದ ಇದನ್ನೇ ನಾವು ಆಧಾರವಾಗಿಟ್ಟುಕೊಂಡು ಮುಂದಕ್ಕೆ ಹೆಜ್ಜೆಯನ್ನು ಇಡಹತ್ತಿದರೆ, ಇದರಲ್ಲಿ ತಾನು ಮತ್ತು ಮಡಿಕೆ ಎಂಬ ಎರಡು ಉಪಾಧಿಗಳು, ದೇವರ ಹಾಗು ಮಣ್ಣಿನ ದೃಷ್ಟಿಯಿಂದ ಬೇರ್ಪಡಿಸಿ ಕಂಡಾಗ್ಯಾದರೂ, ವಿವೇಚನೆಗೆ ಮಣ್ಣು—ಮಡಿಕೆಯ ಉಪಾಧಿಯಲ್ಲಿ ಅಡಕವಾಗಿರುವಂತೆ, ದೇವರು ಮನುಷ್ಯೋಪಾಧಿಯಲ್ಲಿ ಅಡಕವಾಗಿರುವನೆಂಬುದು ಈ ಗಾದೆಯಿಂದ ಸಿದ್ಧವಾಗುವದು. ಇನ್ನು ತನ್ನಲ್ಲಿ ದೇವರು ಅಡಕವಾಗಿರುವನೆಂದರೂ ಒಂದೆ, ತನ್ನಲ್ಲಿ ಗುರುಲಿಂಗಜಂಗಮವು ಅಡಕವಾಗಿರುವದೆಂದರೂ ಒಂದೆ. ಏಕೆಂದರೆ "ಏಕಮೂರ್ತಿಸ್ತ್ರಯೋಭಾಗಃ ಗುರುಲಿಂಗಂ ತು ಜಂಗಮ" ಎಂಬುಕ್ತಿಯಂತೆ, ಆ ಪರಮಾತ್ಮನೆ ಗುರುಲಿಂಗಜಂಗಮನಾಗಿ ಪರಿಣಮಿಸಿರುವನೆಂದಮೇಲೆ ಶ್ರದ್ಧಾದಿ ಸಮರಸಾಂತವಾದ ಭಕ್ತಿಗಳನ್ನೇ ಅಂಗವನ್ನಾಗಿ ಮಾಡಿಕೊಂಡ ವೀರಶೈವ ಸದ್ಭಕ್ತರು, ಕೇವಲ ಗುರುಲಿಂಗಜಂಗಮರಾಗಿರಲಿಕ್ಕೇ ಬೇಕು. ಹೀಗಿದ್ದು ಗುರುವೇ ಬೇರೆ, ಜಂಗಮವೇ ಬೇರೆ, ಎಂದು ಪ್ರತ್ಯೇಕಿಸಿ ಅದರಲ್ಲಿಯೂ

ಗುರುವು ಅಧಿಕನು, ಜಂಗಮನು ಅಧಿಕನು, ಎಂದು ನಾವು ನುಡಿಯುವದನ್ನು ಕೇಳಿದರೆ ಯಾರಿಗೆ ಆಶ್ಚರ್ಯವಾಗಲಿಕ್ಕಿಲ್ಲ! ಗುರುಲಿಂಗಜಂಗಮದಲ್ಲಿ ಖಂಡತ್ವವಿರುವದೋ? ಖಂಡತ್ವವನ್ನು ಹೇಳುವದಾದರೆ ಪರಮಾತ್ಮನ ಪೂರ್ಣತ್ವಕ್ಕೆ ಹಾನಿ ತಟ್ಟಿದೋ? ಹಾಗಿದ್ದರೆ ಆ ಪರಮಾತ್ಮನಿಗಿರುವ ಪರಿಪೂರ್ಣ ಸರ್ವವ್ಯಾಪಕ ಮೊದಲಾದ ಅಖಂಡತ್ವವನ್ನು ಹೇಳುವ ನಾಮಗಳಾದರೂ ಎಲ್ಲಿ ಉಳಿದವು? ಇದು ಅಸಮಂಜಸವಾದ ಮಾತೇ ಸರಿ. ಗಂಧವೂ, ಗಂಧವನ್ನಾಶ್ರಯಿಸಿದ ದಳಗಳೂ, ದಳಗಳನ್ನಾಶ್ರಯಿಸಿದ ಪುಷ್ಪವೂ, ನಾಮರೂಪದಿಂದ ಬೇರೆ ಬೇರೆ ತೋರಿದಾಗ್ಯಾದರೂ, ವಸ್ತುಸ್ಥಿತಿಯಿಂದ ಪುಷ್ಪ ಒಂದೇಯಾಗಿ ಪರಿಣಮಿಸುವಂತೆ, ಗುರುಲಿಂಗಜಂಗಮಗಳಾದರೂ, ವ್ಯವಹಾರದಲ್ಲಿ ಬೇರೆ ಬೇರೆ ವ್ಯಕ್ತಿಗಳ ರೂಪದಿಂದ ಕಂಡಾಗ್ಯೂ ಕ್ರಿಯಾಜ್ಞಾನಗಳ ತಾರತಮ್ಯದಿಂದ ಏಕೀಕರಿಸಿ, ಪರಮಾತ್ಮನ ಸ್ವರೂಪದಲ್ಲಿಯೇ ಪರಿಣಮಿಸುವವು. "ಲಿಂಗಮಧ್ಯ ಜಗತ್ಸರ್ವಂ, ತ್ರೈಲೋಕ್ಯಂ ಸಚರಾಚರಂ" ಎಂಬ ಉಕ್ತಿಗನುಸಾರವಾಗಿ, ಸರ್ವ ಬ್ರಹ್ಮಾಂಡಗಳೆಲ್ಲವು ಲಿಂಗರೂಪವಾಗಿರುವವೆಂದಮೇಲೆ ಅವರಲ್ಲಿರುವ ಸಚರಾಚರಗಳೆಲ್ಲವೂ ಲಿಂಗರೂಪಿಗಳೆಂದೇ ಹೇಳಬೇಕಾಗುವದು. ಪಿಂಡಾಂತರ್ಗತನಾಗಿರುವ ನಮ್ಮ ಆತ್ಮನ ಸ್ಫುರಣ ಮಾತ್ರದಿಂದಲೇ ಪರಮಾತ್ಮನ ನಿಜದ ನಿಲುವನ್ನು ಅರಿಯಲರ್ಹರಾಗುವೆವೆಂದರೆ, ಲಿಂಗದಿಂದಲೇ ಲಿಂಗದ ನಿಜವನ್ನು ಅರಿಯುವೆವೆಂದ ಹಾಗಾಯಿತು. ಏಕೆಂದರೆ, ಆತ್ಮನೂ ಲಿಂಗರೂಪಿಯೇ ಇರುವನು. ಇನ್ನು ಗಂಧ-ಕುಸುಮನ್ಯಾಯದಂತೆ ಆತ್ಮನು ಲಿಂಗರೂಪನಾಗಿದ್ದಲ್ಲಿ ಗುರುರೂಪನಾಗಿರಲಿಕ್ಕೇ ಬೇಕು. ಗುರುರೂಪನಾಗಿದ್ದಲ್ಲಿ ಜಂಗಮರೂಪನಾಗಿರಲಿಕ್ಕೇ ಬೇಕು. ಅಂತೆಯೇ ಹಿಂದಿನ ವೀರಶೈವ ಮಹಾನುಭಾವಿಗಳು "ಆತ್ಮನ ನಿಜದರುಹೇ ಗುರುವೆಂದೂ, ಆತ್ಮನ ನಿಜದಿರುವೇ ಲಿಂಗವೆಂದೂ, ಆತ್ಮನ ನಿಜದ ನಿರಂಜನ ಸ್ವರೂಪವೇ ಜಂಗಮ"ವೆಂದೂ ತಮ್ಮ ಆತ್ಮ ವಿಕಾಸದಿಂದರಿದು ಆಚರಿಸಿರುವರು. ಇವೇ ಅಂತರ್ಯದಲ್ಲಿ ಪರಿಶೋಭಿಸುವ ಗುರುಲಿಂಗಜಂಗಮಗಳು. ಇದೇ ವಿಷಯವನ್ನು ಅಲ್ಲಮಪ್ರಭುಗಳು ಬಸವಣ್ಣನನ್ನು ಕುರಿತು—

"ತನ್ನೊಳಗೆ ಗುರುಲಿಂಗಜಂಗಮ। ತನ್ನೊಳಗೆ ಪಾದೋದಕಾಮೃತ। ತನ್ನೊಳರಿಯದೆ ಎದುರಿಲರಸುವೆವೆಂದು ಬಗೆಗೊಳುವ ಭಿನ್ನಭಾವಿತ ಭ್ರಮಿತ ಮನುಜರು। ಎನ್ನ ಸಾಧಿಸಲರಿಯರೈ ಬಸವಣ್ಣ ಕೇಳೆಂದಲ್ಲಮ

ಪ್ರಭುರಾಯನಿಂತೆಂದ॥” ಈ ಪ್ರಕಾರ ಹೇಳಿರುವದನ್ನು ನೋಡಿದರೆ ತನ್ನೊಳಗೇ ಗುರುಲಿಂಗಜಂಗಮಗಳಿರುವವೆಂಬುದು ಪ್ರತಿಯೊಬ್ಬ ವೀರಶೈವನಿಗೂ ವಿದಿತವಾಗದೆ ಇರದು. ಇವೇ ಬಹಿರ್ಗಡಿಸಿದಾಗ ಅಂತರ್ಯದಲ್ಲಿದ್ದ ಆತ್ಮನ ನಿಜದರುಹೇ (ಜ್ಞಾನವು ಮುಂದುವರಿದು ಭಕ್ತಿ ವೈರಾಗ್ಯವಂತರ್ಗತವಾದುದೇ) ವಾಕ್ಕಿನಲ್ಲುದಯಿಸಿ ಬೋಧಾರೂಪವಾದ ಗುರುವೆನಿಸಿತು. ಅಂತರ್ಯದಲ್ಲಿದ್ದ ಆತ್ಮನ ನಿಜದಿರುವಿನ ಕುರುಹೇ (ಜ್ಞಾನಪ್ರಕಾಶಾತ್ಮಕವಾದ ಮಂತ್ರರೂಪವು ಅಂಕುರಿಸಿದುದೇ) ಬಾಹ್ಯದಲ್ಲಿಕರದಿಷ್ಟಲಿಂಗವೆನಿಸಿತು. ಆತ್ಮನ ನಿಜದ ನಿರಂಜನತ್ವವೇ (ವೈರಾಗ್ಯವು ಮುಂದುವರಿದು ಭಕ್ತಿಜ್ಞಾನಾಂತರ್ಗತವಾದುದೇ) ಬಾಹ್ಯದಲ್ಲಿ ಕ್ರಿಯಾಮೂರ್ತಿಯಾದ ಜಂಗಮವಾಗಿ ಪರಿಣಮಿಸಿರುವದು. ಇವೇ ಬಾಹ್ಯದಲ್ಲಿ ತೋರುವ ಗುರುಲಿಂಗಜಂಗಮಗಳು. ಅರ್ಥಾತ್ ಸದ್ಯದ ವ್ಯವಹಾರದಲ್ಲಿ ಈ ತರಹವಾದ ಜ್ಞಾನವನ್ನು ಪಡೆದ ಆತ್ಮನು (ಶಿವಾನು) ಭವಿಗಳಲ್ಲಿ ಬೋಧರೂಪವಾದ ವ್ಯಕ್ತಿಯೇ ಗುರುವೆಂದೂ, ನಿಜದಿರುವಿನ ಕುರುಹೇ ಲಿಂಗವೆಂದೂ, ನಿಜದ ನಿರಂಜನ ಸ್ವರೂಪವಾದ ಕ್ರಿಯಾಮೂರ್ತಿಯೇ ಜಂಗಮವೆಂದೂ, ಪರಿಣಮಿಸಿ ಸೇವ್ಯವಸ್ತುಗಳಾಗಿರುವವು. ಇವುಗಳ ಜ್ಞಾನವಾಗದೆ ಇನ್ನೂ ಸಾಧಕದೆಶೆಯಲ್ಲಿದ್ದವರೆಲ್ಲರೂ ಭಕ್ತರೆನಿಸಿಕೊಂಡು ಸೇವಕ (ಶಿಷ್ಯ) ರಾಗಿರುವರು. ವೀರಶೈವಾಚರಣೆಯು ವ್ಯವಹಾರವಾದರೂ ಕೇವಲ ಕ್ರಿಯಾಜ್ಞಾನಗಳ ತಾರತಮ್ಯವನ್ನು ಅವಲಂಬಿಸಿರುವದೇ ವಿನಹಾ ಹೇಯವಾದ ರಕ್ತಸಂಬಂಧವನ್ನು ಅವಲಂಬಿಸಿರುವದಿಲ್ಲ. ತದನುಸಾರವಾಗಿ ಆತ್ಮೋನ್ನತಿಯನ್ನು ಪಡೆದ ಶಿವಾನುಭವಿಯು ತಾನೇ ಗುರು, ತಾನೇ ಲಿಂಗ, ತಾನೇ ಜಂಗಮನಾಗಿದ್ದರೂ ಕೂಡ, ಬಾಹ್ಯದಲ್ಲಿ ತೋರುವ ಗುರುಲಿಂಗಜಂಗಮಗಳನ್ನು ಬಿಟ್ಟಿರಲಾಗದು. ಲಿಂಗಾಂಗಸಮರಸಾಪೇಕ್ಷಿಗಳು ಲಿಂಗಾಂಗಗಳ ಸಕೀಲಗಳನ್ನು ಚನ್ನಾಗಿ ಮನವರಿಕೆ ಮಾಡಿಕೊಂಡರೆ ಇದು ತಮಗೇ ವಿದಿತವಾಗುವದು. ಆದರೂ ಪರಮಾತ್ಮನಿಂದ ನಿರ್ಮಿತವಾದ ಶರೀರ ರಚನಾಕ್ರಮದ ಉದಾಹರಣೆಯನ್ನು ಇಲ್ಲಿ ತೆಗೆದುಕೊಳ್ಳುವಾ. ದೂರವೇಕೆ? ನಮ್ಮ ಶರೀರ ರಚನೆಯನ್ನೇ ನಿರೀಕ್ಷಿಸುವಾ. ಇದರೊಳಗೆ ಪಂಚಜ್ಞಾನೇಂದ್ರಿಯಗಳೂ ಪಂಚಕರ್ಮೇಂದ್ರಿಯಗಳೂ ಉಂಟೆಂಬುದು ನಮಗೆ ಗೋಚರವಾಗುವದು. ಜ್ಞಾನೇಂದ್ರಿಯಗಳ ಕಾರ್ಯಗಳಿಗೆ ಕರ್ಮೇಂದ್ರಿಯಗಳು ಸಹಕಾರಿಗಳಾಗಿರುವವೆಂಬುದೂ ನಮಗೆ ತಿಳಿಯುವದು.

ಅದರಿಂದಲೇ ಕರ್ಮೇಂದ್ರಿಯಗಳಿಗೆ ದಾಸೇಂದ್ರಿಯಗಳೆಂತಲೂ ಜ್ಞಾನೇಂದ್ರಿಯಗಳಿಗೆ ವರಿಷ್ಠೇಂದ್ರಿಯಗಳೆಂತಲೂ ಹೆಸರು ಕೊಟ್ಟಿರಬಹುದು. ಜ್ಞಾನೇಂದ್ರಿಯಗಳಿಗೆ ಮುಖ್ಯೇಂದ್ರಿಯಗಳೆಂಬ ಹೆಸರು ಕೊಟ್ಟಿದ್ದರೂ ಅವು ನಿಜವಾದ ಮುಖ್ಯೇಂದ್ರಿಯಗಳಲ್ಲವೆಂಬುದು ಅವುಗಳ ಕಾರ್ಯಗಳ ಮೇಲಿನಿಂದಲೇ ಗೊತ್ತಾಗುವದು. ಹೇಗೆಂದರೆ– ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಮುಂತಾದ ಜ್ಞಾನೇಂದ್ರಿಯಗಳು, ನಮ್ಮ ದೇಹದೊಳಗಿದ್ದುಕೊಂಡು ತಮ್ಮ ವ್ಯಾಪಾರವನ್ನು ನಡೆಯಿಸುವವಾದರೂ, ನಿದ್ರಾವಸ್ಥೆಯಲ್ಲಿ ಅವುಗಳ ಕಾರ್ಯವೇ ನಿಂತುಹೋಗಿರುವದು. ಅದೇಕೆ? ಜಾಗರದಲ್ಲಿಯೂ ಕೂಡ ನಮ್ಮ ಚಿತ್ತವು ಬೇರೆ ಕಡೆಗಿದ್ದಾಗ್ಗೆ ಇವುಗಳ ವ್ಯಾಪಾರವು ನಿಲ್ಲುವದು. ಅದೇ ಚಿತ್ತದ ಸಂಯೋಗವಾದೊಡನೆಯೇ ತಮ್ಮ ತಮ್ಮ ಕ್ರಿಯೆಗಳನ್ನು ನಡಿಸಹತ್ತುವವು. ಇನ್ನು ಚಿತ್ತ ಹಾಗೂ ಇಂದ್ರಿಯಗಳ ಸಂಯೋಗದಿಂದ ಪದಾರ್ಥಗಳ ಜ್ಞಾನವಾಗುವದೆನ್ನಬೇಕೇ? ಅದೂ ಅಲ್ಲ. ಏಕೆಂದರೆ, ಈಗ ಒಬ್ಬ ಬಧಿರನಿದ್ದಾನೆಂದು ತಿಳಿಯುವಾ. ಅವನಿಗೆ ಕರ್ಣೇಂದ್ರಿಯವು ಉಂಟು. ಅದಕ್ಕೆ ಚಿತ್ತದ ಸಂಯೋಗವೂ ಆಗಿರುವದು. ಹೀಗಿದ್ದು ಎರಡನೆಯವರು ಮಾತಾಡಿದ್ದು ಅವನಿಗೆ ಏಕೆ ಕೇಳಿಸಬಾರದು? ಕೇಳಿಸದಿದ್ದಮೇಲೆ ಅವನಿಗೆ ಇನ್ನೊಂದು ಯಾವದೋ ಇಂದ್ರಿಯದ ಕೊರತೆಯಾಗಿರಬಹುದೆಂದು ನಮಗೆ ಸಹಜವಾಗಿ ಹೊಳೆಯದಿರದು. ಅಂದಮೇಲೆ ಬಾಹ್ಯದಲ್ಲಿ ತೋರುವ ಜ್ಞಾನೇಂದ್ರಿಯಗಳು, ಮುಖ್ಯೇಂದ್ರಿಯಗಳಲ್ಲವೆಂದ ಹಾಗಾಯಿತು ಅಲ್ಲವೆ? ಇನ್ನು ಇವುಗಳನ್ನು ಹೊಂದಿಕೊಂಡಿರುವ ಜ್ಞಾನತಂತುಗಳಿಗೆ ಆಶ್ರಯವಾದ ಮಿದುಳಿನ ಸ್ಥಾನ ಒಂದಿರುವದು. ಈ ಸ್ಥಾನ ವಿಶೇಷದಿಂದ ಹೊರಟ ಜ್ಞಾನತಂತುಗಳ ಹೊಂದಿಕೆಯು ಹೊರಗಿನ ಇಂದ್ರಿಯಗಳಿಗೆ ಆದಾಗ್ಗೆ ಮಾತ್ರ ಇವುಗಳ ವ್ಯಾಪಾರವು ನಡೆಯುವದು. ಇಲ್ಲವಾದರೆ ಇವುಗಳ ವ್ಯಾಪಾರವೇ ನಿಂತುಬಿಡುವದು. ಅಂದಮೇಲೆ ಮಿದುಳಿನ ಸ್ಥಾನವೇ ಮುಖ್ಯೇಂದ್ರಿಯಗಳ ಸ್ಥಾನವೆಂದು, ನಿರಾತಂಕವಾಗಿ ಹೇಳಬಹುದು ಅಲ್ಲವೇ? ಹೇಗೆಯೋ ಇರಲಿ. ಒಟ್ಟಿನಮೇಲೆ ಮಿದುಳಿನ ಸ್ಥಾನದಿಂದ ಹೊರಟ ಜ್ಞಾನತಂತುಗಳೂ, ಒಳಹೊರಗಿನ ಕಾರ್ಯಗಳಿಗೆ ಮಧ್ಯಸ್ಥನಂತಿರುವ ಚಿತ್ತವೂ, ಒಳಗಿನ (ಭಾವದೊಳಗಿನ) ಕಾರ್ಯಗಳನ್ನು ಚಿತ್ತದ ದ್ವಾರಾ ಹೊರಗೆ ಅಮಲಿನಲ್ಲಿ ತರುವ ಜ್ಞಾನೇಂದ್ರಿಯ (ಲಿಂಗೇಂದ್ರಿಯ) ಗಳೂ, ಹೀಗೆ ಮೂರರ ಸಂಯೋಗದಿಂದ ಒಂದು ಪದಾರ್ಥದ ಜ್ಞಾನವಾಗುವದೆಂದ

ಹಾಗಾಯಿತು. ಗುರುಲಿಂಗಜಂಗಮುಗಳಾದರೂ ಇವುಗಳಿಗೆ ಸಂಬಂಧಿಸಿ ಒಂದೊಂದು, ಮೂರು ಬಗೆಯಿಂದ ವ್ಯವಹರಿಸುವವು. ಅಂದಮೇಲೆ ಬಾಹ್ಯದಲ್ಲಿ ತೋರುವ ಕಣ್ಣುಗಳಿಗೆ ಮುಖ್ಯವಾದ ಕಣ್ಣುಗಳೆಂಬೆನೆ? ಮುಖ್ಯವಾದ ಕಣ್ಣುಗಳಲ್ಲ. ಅಲ್ಲವೆಂಬೆನೇ? ಮುಖ್ಯವಾದ ಕಣ್ಣುಗಳ ಉಪಯೋಗವು ಬಾಹ್ಯಕಣ್ಣುಗಳಿಂದಲ್ಲದೆ ಆಗುವಂತಿಲ್ಲ. ಇದರಂತೆ ಕಿವಿಗಳಿಗೆ ಮುಖ್ಯವಾದ ಕಿವಿಗಳೆಂಬೆನೆ? ಮುಖ್ಯವಾದ ಕಿವಿಗಳಲ್ಲ. ಅಲ್ಲವೆಂಬೆನೆ? ಮುಖ್ಯವಾದ ಕಿವಿಗಳ ಉಪಯೋಗವು ಬಾಹ್ಯಕಿವಿಗಳಿಂದಲ್ಲದೆ ಆಗುವಂತಿಲ್ಲ. ಇದರಂತೆ ಉಳಿದ ಇಂದ್ರಿಯುಗಳ ಸ್ಥಿತಿಯಾದರೂ ಇರುವದು. ಇದೇ ರೀತಿಯಾಗಿ ಬಾಹ್ಯದಲ್ಲಿ ತೋರುವ ಗುರುವಿಗೆ ನಿಜವಾದ ಗುರುವೆಂಬೆನೆ? ನಿಜವಾದ ಗುರುವಲ್ಲ. ಅಲ್ಲವೆಂಬೆನೆ? ಅಂತರ್ಯದಲ್ಲಿದ್ದ ನಿಜವಾದ ಗುರುವಿನ ಜ್ಞಾನವು ಬಾಹ್ಯಗುರುವಿನಿಂದಲ್ಲದೆ ಆಗುವಂತಿಲ್ಲ. ಇದರಂತೆ ಬಾಹ್ಯದಲ್ಲಿ ತೋರುವ ಲಿಂಗಕ್ಕೆ ನಿಜವಾದ ಲಿಂಗವೆಂಬೆನೇ? ನಿಜವಾದ ಲಿಂಗವಲ್ಲ. ಅಲ್ಲವೆಂಬೆನೇ? ಅಂತರ್ಯದಲ್ಲಿದ್ದ ನಿಜವಾದ ಲಿಂಗಜ್ಞಾನವು ಬಾಹ್ಯಲಿಂಗದಿಂದಲ್ಲದೆ ತಿಳಿಯಲಾಗದು. ಇದರಂತೆ ಜಂಗಮದ್ದಾದರೂ ಇರುವದು. ಇವು ಒಂದಕ್ಕೊಂದು ಅನ್ಯೋನ್ಯ ಸಂಬಂಧವಾಗಿರುವವು. ಸ್ಫಟಿಕೋಪಾಧಿಯಿಂದ ಲ್ಯಾಂಪಿನೊಳಗಿರುವ ದೀಪದ ಪ್ರಕಾಶವು ಒಳಹೊರಗೆಂಬ ಸ್ಥಳವಾಚಕವನ್ನು ಧರಿಸಿದಂತೆ ಕಾಯೋಪಾಧಿಯಿಂದ ಪರಮಾತ್ಮ ಸ್ವರೂಪವಾದ ಗುರುಲಿಂಗಜಂಗಮುಗಳು ಒಳಹೊರಗೆಂಬ ಭಾವವನ್ನು ಧರಿಸಿರುವವು. ಮೇಲಾಗಿ ಪರಮಾತ್ಮನ ಸೃಷ್ಟಿಕ್ರಮವೇ ಅಂತಹದಿರುವದು. ಯಾವ ಸಚರಾಚರಗಳಿಂದ ಪ್ರೇರಿತವಾದ ಈ ಜಗತ್ತು ಅನಾದಿಯಲ್ಲಿ ಪರವಸ್ತುವಿನ ಅಂತರ್ಗತವಾಗಿದ್ದಿತೋ ಅದೇ ಬಹಿರ್ಗಡಿಸಿ ತೋರಿದಾಗ ನಾವೆಲ್ಲರೂ ಹೊರಬಿದ್ದಿರುವೆವು. ಒಳಗಿನಿಂದ ಹೊರಗೆ ಬಂದಿರುವೆವೆಂದ ಮೇಲೆ ಹೊರಗಿನಿಂದಲೇ ಒಳಗನರಿದು ಸೇರಬೇಕಲ್ಲದೆ ಹೊರಗನುಳಿದು ಒಳಗನು ಸೇರಲಾಗದು. ಈ ಗುರುಲಿಂಗಜಂಗಮುಗಳು ತೋರುವಿಕೆಯಲ್ಲಿ ಒಳಗೊಂದು ಹೊರಗೊಂದು ಕಂಡಾಗ್ಯಾದರೂ ಇರುವಿಕೆಯಲ್ಲಿ ಒಂದೇ ಗುರು, ಒಂದೇ ಲಿಂಗ, ಒಂದೇ ಜಂಗಮುವಾಗಿರುವವು. ಇವು ಮೂರೂ ತಾನೇ ಆಗಿ ನಿಜದಲ್ಲಿ ಬೆರೆದು ಒಳಹೊರಗೆಂಬ ಉಭಯ ಸಂದೇಹವಳಿದು ಕೇವಲ ಪರಮಾತ್ಮಸ್ವರೂಪನೇ ಆದ ಶರಣನ ನಿಜಾನಂದಕ್ಕೆ ಎಣೆಯುಂಟೆ? ಆತನು ನುಡಿದುದೇ ದೇವವಾಣಿ, ನಡೆದುದೇ ಆಚಾರ, ನಿಂದುದೇ ಕ್ಷೇತ್ರ,

ಮಿಂದುದೇ ತೀರ್ಥವಾಗಿರುವದು. ಆದುದರಿಂದ ನಾವು ನಮ್ಮ ಭವರೋಗವನ್ನು ಹೋಗಲಾಡಿಸಿ ಪಾರಮಾರ್ಥ (ಮುಕ್ತಿ) ಸುಖವನ್ನು ಪಡೆಯಬೇಕಾದರೆ ಮದ್ದಿನ ಗುಟಿಕೆಗಳಂತಿರುವ ಗುರುಲಿಂಗಜಂಗಮಗಳನ್ನು ಯಾವಾಗಲೂ ಸ್ವೀಕಾರ (ಧಾರಣ) ಮಾಡುವದು ಅತ್ಯವಶ್ಯವು.



# ನೊರೆ.

(ಲೇಖಕ:— ಈಶ್ವರ ಮಹಾರುದ್ರಪ್ಪ ಸಣಕಲ್ಲ.)

ಮುಳುಗುತಿರಲು ಹೊಳೆವ ರವಿಯು,
ಬೆಳಕಿನೆಳೆಯು ಕಳೆಯು ಬೆಳೆಯೆ,
ಸೃಷ್ಟಿ ಸೊಬಗ ನೋಡಲೆಂದು ಮನೆಯ ಬಿಟ್ಟೆನು
ದೃಷ್ಟಿಪಥಕೆ ಬರುವ ಸಿರಿಯ ಸವಿದು ಹೊರಟೆನು ॥೧॥

ಸುಳಿವ ಗಾಳಿಯೊಡನೆ ಬಂದು
ನಿಲಲು, ಕೊಳದ ತಡಿಯೊಳಂದು
ತುಳುಕಿ ತುಳುಕಿ ದಡಕಿಗೊಡುವ ಕೊಳವ ಕಾಣಲು
ಒಳಗಿನೆದೆಯು ಗೋಳವು ತುಳುಕಿ ತುಳುಕಿ ಹರಿಯಲು, ॥೨॥

ಕಣ್ಣು ನೋಡಲತ್ತ ಇತ್ತ,
ಸಣ್ಣ ಚಿಣ್ಣ ನೋಡಿ ಬರುತ,
"ಬಣ್ಣವಿಲ್ಲದುದಕಕೇಕೆ ಬಿಳಿಯ ನೊರೆಯದು ?
ಅಣ್ಣ, ತೇಲಿ, ತೇಲಿ, ದಡಕೆ ಬರುವದೇಕದು ?" ॥೩॥

ಎನುತಲವನು ನಗುತನಿಂದ,
ಮನಕೆ ಬಗೆಯ ಸುಗ್ಗಿ ತಂದ—
"ಬಣ್ಣವಿಲ್ಲದುದಕಕೇಕೆ ಬಿಳಿಯ ನೊರೆಯದು ?
ಅಣ್ಣ, ತೇಲಿ, ತೇಲಿ, ದಡಕೆ ಬಡಿವುದೇಕದು ?" ॥೪॥

ಎಸೆವ ಸುಡಿಯು ಕುಣಿಯೆ, ಒಗೆಯು
ಘನ ವಿಚಾರದಿಂದೆ ದಣಿಯೆ,
ಕೆಳಗೆ ನೋಡಿಯುಸಿರಗರೆದು ಮೇಲೆ ನೋಡಿದೆ!
ಜಲದ ಕುಲವು ನೊರೆಯ ತೆರದಿ ತೇಲಿ ಹೋದುದು! ॥೫॥

ಬೆಳ್ಳಗಿಹುದು ನೀರ ನೊರೆಯು,
ಬೆಳ್ಳಗಿಹುದು ಹಾಲ ನೊರೆಯು,
ಎಲ್ಲಿ ಹೋದೊಡೇನು ಬೆಳ್ಳಗಿಹುದು ನೊರೆಯದು!
ಎಲ್ಲಿ ಇರ್ದೊಡೇನು ತೇಲಿ ದಡಕೆ ಬರುವದು! ॥೬॥

ಬಣ್ಣವಿರುವದುಂಟೆ ಜಲಕೆ ?
ಬಣ್ಣವಿರಲು ತೋರ್ಪುದೇಕೆ
ಬೆರಸಿದಂಥ ಬಣ್ಣಗಳನು ಜಗದ ಕಣ್ಣಿಗೆ ?
ಧರೆಯ ರೀತಿಯಂತೆ ತೋರ್ಪುದಿಳೆಯ ತಿಳುವಿಗೆ ॥೭॥

× × ×

ಪುಣ್ಯವೆಂಬ ಬಿಳಿಯ ನೊರೆಯು
ಬನ್ನದೊಳಗೆ ಎಂತೊ ಜನಿಸಿ
ಬಾಳ್ವೆಗಡಲೊಳೇಳ್ವ ಕಷ್ಟ ತೆರೆಯ ಹೊಡತವ
ತಾಳಿ ಮುಂದೆಯುರುಳಿ ಕಾಣುತಿಹುದು ತೀರವ ॥೮॥



# ಸಿದ್ಧಗಿರಿ ಅಥವಾ ರೇವಣಸಿದ್ಧಗಿರಿ.

(ಲೇಖಕರು— ಬಿ. ಶಿವಮೂರ್ತಿಶಾಸ್ತ್ರಿ, ಕೀರ್ತನಕೇಸರಿ, ಕವಿರತ್ನ. ಹುಲ್ಯಾಂಟಿ ಮಠ, ತುಮಕೂರು.)

---



ವೀರಶೈವ ಮತಚರಿತ್ರೆಯನ್ನು ತಿಳಿಯತಕ್ಕವರು ಅಥವಾ ಬರೆಯತಕ್ಕವರು ಮುಖ್ಯವಾಗಿ ಎರಡು ಕಾಲಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕಾಗುವದು. ಹಾಗಲ್ಲದಿದ್ದರೆ ಮತಚರಿತ್ರೆಯು ಕಲಸು ಮೇಲೋಗರವಾಗುವುದು. ಏತಕ್ಕೆಂದರೆ ಶ್ರೀ ರೇಣುಕಾದಿಗಳ ಕಾಲಕ್ಕೂ ಶ್ರೀ ಬಸವಾದಿಗಳ ಕಾಲಕ್ಕೂ ಬಹು ವ್ಯತ್ಯಾಸವಿದೆ. ವೀರಶೈವ ಮತಗ್ರಂಥಗಳನ್ನೂ ಸಾಹಿತ್ಯಗ್ರಂಥಗಳನ್ನೂ ಓದಿದರೆ ಈ ವೈಚಿತ್ರ್ಯವು ಕಂಡುಬರುತ್ತದೆ.

ಮುಖ್ಯವಾಗಿ ವೀರಶೈವ ಮತಚರಿತ್ರೆಯನ್ನು ಮುಂದೆ ಹೇಳುವಂತೆ ವಿಭಾಗಿಸಬಹುದು.

೧. ಶ್ರೀಪಂಚಾಚಾರ್ಯರ ಕಾಲ.

೨. ಶ್ರೀಬಸವಾದಿಗಳ ಕಾಲ.

ಮೇಲೆ ಕಂಡ ಎರಡು ಕಾಲದ ಇತಿಹಾಸವನ್ನೂ ನಾವು ಬಹು ಸೂಕ್ಷ್ಮ ದೃಷ್ಟಿಯಿಂದಲೂ ಐತಿಹಾಸಿಕ ದೃಷ್ಟಿಯಿಂದಲೂ ವಿಮರ್ಶಿಸಿದರೆ ನಮಗೆ ಹಲವು ಪ್ರಾಮುಖ್ಯ ವಿಷಯಗಳು ಲಭಿಸುತ್ತವೆ. ಬಸವೇಶ್ವರನ ಕಾಲದಿಂದೀಚೆಗೆ ವೀರಶೈವಮತವು ಹೇಗೆ ಬೆಳೆಯಿತೆಂಬುದನ್ನು ಎಷ್ಟು ಸುಲಭವಾಗಿ ತಿಳಿಯಬಹುದೋ ಅಷ್ಟು ಸುಲಭವಾಗಿ ರೇಣುಕಾದಿಗಳ ಕಾಲದ ಚರಿತ್ರೆಯನ್ನು ತಿಳಿಯಲಾಗುವದಿಲ್ಲ. ಅದಕ್ಕೆ ಸಾಧನಗಳೂ ಕಡಿಮೆಯಾಗಿವೆ.

ಶ್ರೀ ರೇಣುಕಾದಿಗಳ ಕಾಲದ ಚರಿತ್ರೆಗೆ ಪಂಚಪೀಠಗಳೂ ಅವುಗಳ ಶಾಖಾಮಠಗಳೂ ತತ್ಸಂಬಂಧವಾದ ಗ್ರಂಥಗಳೂ ಅತ್ಯಂತ ಸಹಾಯಕವಾಗಿವೆ. ಶ್ರೀ ಪಂಚಪೀಠಗಳ ಚರಿತ್ರೆಯನ್ನು ಶೋಧಿಸಲು ವೀರಶೈವರಲ್ಲಿ ಅದರಲ್ಲಿಯೂ ಸುಶಿಕ್ಷಿತರಲ್ಲಿ ಹೆಚ್ಚು ಜನರು ಮನಸ್ಸು ಹಾಕಿದಂತೆ ತೋರುವುದಿಲ್ಲ. ಈ ಬಗೆಯ ಔದಾಸೀನ್ಯವು ವೀರಶೈವ ಚರಿತ್ರೆಗೆ ಒಂದು ಪ್ರಬಲ ಕುಂದುಕವೆಂದೇ ನಮ್ಮ ಭಾವನೆ.

ಆದುದರಿಂದ ಇನ್ನು ಮುಂದೆ ನಾವು ಶ್ರೀ ಪಂಚಪೀಠಗಳ ಹಾಗೂ ಪ್ರಾಚೀನವಾದ ಶಾಖಾಮಠಗಳ ವಿಷಯವಾಗಿ ಕೆಲವು ಲೇಖನಗಳನ್ನು ಬರೆಯಬೇಕೆಂದು ಸಂಕಲ್ಪಿಸಿರುವೆವು. ಅದಕ್ಕಾಗಿಯೇ ಸುಪ್ರಸಿದ್ಧವಾದ ಸಿದ್ಧಗಿರಿ ಕ್ಷೇತ್ರದ ಪರಿಚಯವನ್ನು ಮಾಡಿಕೊಡಲು ಈ ಪುಟ್ಟ ಬರಹವನ್ನು ಬರೆದಿರುವೆವು.

'ಶಿವಾನುಭವ'ದ ೪ ನೇ ಸಂಪುಟ, ೬ ನೇ ಸಂಚಿಕೆಯಲ್ಲಿ "ರೇವಣಸಿದ್ಧ ಕ್ಷೇತ್ರ" ಎಂಬ ಹೆಸರಿನಿಂದ ಪ್ರಕಟವಾಗಿರುವ ಪುಟ್ಟ ಲೇಖನವೊಂದನ್ನು ವಾಚಕರು ಮರೆತಿರಲಾರರು. ಆ ಲೇಖನ ಬರೆಯುವಾಗ ನಮ್ಮ ಲೇಖನಕ್ಕೆ ವಿಷಯವಾದ 'ಸಿದ್ಧಗಿರಿ'ಯ ಪರಿಚಯ ನಮಗಿರಲಿಲ್ಲ. ಆದುದರಿಂದಲೇ ಆ ಲೇಖದಲ್ಲಿ ಈ ಸಿದ್ಧಗಿರಿಯು ಸೂಚಿಸಲ್ಪಟ್ಟಿಲ್ಲ.

ಹಿಂದಿನ ಲೇಖದಲ್ಲಿ ನಾವು ಸೂಚಿಸಿದವುಗಳೇ ಅಲ್ಲದೆ ರೇಣುಕ ಸಂಬಂಧವಾದ ಹಲವು ಕ್ಷೇತ್ರಗಳು ನಮಗೆ ಈಚೆಗೆ ತಿಳಿದು ಬಂದಿವೆ. ಅವುಗಳಲ್ಲಿ,

೧. ಸಿದ್ಧಗಿರಿ ಕ್ಷೇತ್ರ.
೨. ಎಡೂರು ಕ್ಷೇತ್ರ. (ಕೃಷ್ಣಾತೀರದಲ್ಲಿದೆ)
೩. ಕೊಣ್ಣೂರು ಕಂಪಯ್ಯಸ್ವಾಮಿಗಳ ಗದ್ದುಗೆಮಠ.
೪. ಅಥಣಿಯ ಹತ್ತರವಿರುವ ಗುಂಗವಾಡ.
೫. ಮಂಗಳವೇಡೆಯ ಹತ್ತರ ಭೀಮಾತೀರದಲ್ಲಿರುವ ಮಾಸನೂರು (ರೇಣುಕವಿಜಯದಲ್ಲಿ ಈ ಬಗ್ಗೆ ಉಲ್ಲೇಖವಿದೆ.)
೬. ಹೂಲಿಪಂಚವಣ್ಣಿಗೆಯ ಮಠದ ಹತ್ತರವಿರುವ ರೇವಣಸಿದ್ಧನ ಗುಡಿ.
೭. ಕಾಗಳೇಶ್ವರದಲ್ಲಿರುವ ರೇವಣಸಿದ್ಧನ ಗುಡಿ.

ಮೇಲೆ ನಿರೂಪಿತವಾಗಿರುವ ಕ್ಷೇತ್ರಸ್ಥಾನಗಳಲ್ಲಿ ಕೆಲವನ್ನು ನಾವಿನ್ನೂ ಕಣ್ಣಾರೆ ನೋಡಿಲ್ಲವಾದುದರಿಂದ ಅವುಗಳ ವಿಷಯವಾಗಿ ಈಗ ಏನೂ ಬರೆಯದೆ ಶ್ರೀ ಸಿದ್ಧಗಿರಿ ವಿಷಯ ಒಂದನ್ನು ಮಾತ್ರ ಇಲ್ಲಿ ಬರೆಯುವೆವು.

**ಕ್ಷೇತ್ರ ಪರಿಚಯ:—** ನಿಪ್ಪಾಣಿಯಿಂದ ಕೊಲ್ಲಾಪುರಕ್ಕೆ ಹೋಗುವಾಗ ಎಡಭಾಗದಲ್ಲಿ ಕೊಲ್ಲಾಪುರಕ್ಕೆ ಆರು ಮೈಲ ದೂರದಲ್ಲಿ ಸಿದ್ಧಗಿರಿ

ಕ್ಷೇತ್ರವಿದೆ. ಇಲ್ಲಿ ಬಾಳೇಹಳ್ಳಿ ಸಿಂಹಾಸನಕ್ಕೆ ಸೇರಿದ ಶಾಖಾಮಠ ಒಂದಿದೆ. ಇದನ್ನು ವೀರಶೈವರು ಬಹು ಪವಿತ್ರಸ್ಥಾನವೆಂದು ಭಾವಿಸಿರುವರು.

ಈ ಮಠವು ಒಂದು ಗುಡ್ಡದ ಮೇಲಿದೆ. ಅದನ್ನು ಜನರು ಪ್ರಾಚೀನಕಾಲದಿಂದಲೂ 'ಸಿದ್ಧಗಿರಿ' ಎಂದು ಕರೆಯುತ್ತಿರುವರು. ಮಠಕ್ಕೆ ಅನತಿ ದೂರದಲ್ಲಿ ಒಂದು ಹಳ್ಳಿ ಇದೆ. ಇದಕ್ಕಾದರೂ ಸಿದ್ಧಗಿರಿಯು ಹಳ್ಳಿ ಎಂದೇ ಹೆಸರಿದೆ. ಮಠದ ಸುತ್ತಲೂ ಹತ್ತಿಪ್ಪತ್ತು ಸಣ್ಣ ಪುಟ್ಟ ಗುಡಿಗಳಿವೆ. ಸಿದ್ಧಗಿರಿಗೆ ಒಂದು ಮೈಲ ದೂರದಲ್ಲಿ ರೇವಣಸಿದ್ಧ ಎಂಬ ದೇವರೊಂದಿದೆ. ಮಠಕ್ಕೆ ಎಡಭಾಗದಲ್ಲಿ ಒಂದು ಗವಿ ಇದೆ. ಗವಿಯು ಮುಂದೆ ಒಂದು ದೇವಾಲಯವಿದೆ. ಅಲ್ಲಿ ಒಂದು ಭಾಗದಲ್ಲಿ ಹಸ್ತದಲ್ಲಿ ಲಿಂಗವನ್ನು ಹಿಡಿದು ಶಿವಪೂಜೆ ಮಾಡುವಂತೆ ತೋರುತ್ತಿರುವ ಶಿವಯೋಗಿಯ ಮೂರ್ತಿಯೊಂದಿದೆ. ಇದನ್ನು ರೇವಣಸಿದ್ಧೇಶ್ವರಸ್ವಾಮಿ ಎಂದು ಜನರು ಭಾವಿಸಿರುವರು.

ಈ ಮಠದ ಪಕ್ಕದಲ್ಲಿ ರುದ್ರಪಾದ, ಚಕ್ರಪಾದ, ಪಂಚಲಿಂಗೇಶ್ವರ ಎಂಬ ದೇವಾಲಯಗಳಿರುವವು. ಸುತ್ತಮುತ್ತಲೂ ಹಲವು ದೇವಾಲಯವಿರುವುದನ್ನು ನೋಡಿದರೆ ಇದು ಮೊದಲು ಪ್ರಸಿದ್ಧಸ್ಥಾನವಾಗಿತ್ತೆಂದು ಭಾಸವಾಗುವುದು.

ಮಠದಲ್ಲಿ ಎರಡು ದೇವಾಲಯಗಳಿವೆ. ಅವು ಪ್ರಾಚೀನವಾಗಿಯೂ, ಬಹು ಸುಂದರವಾಗಿಯೂ ಇವೆ. ತ್ರಿಕಾಲದಲ್ಲಿಯೂ ದೇವರ ಸೇವೆಯು ಉತ್ತಮ ರೀತಿಯಾಗಿ ನಡೆಯುತ್ತಿದೆ. ದೇವಾಲಯಗಳಲ್ಲಿ ಒಂದು ದೊಡ್ಡದಾಗಿಯೂ ಮತ್ತೊಂದು ಸಣ್ಣದಾಗಿಯೂ ಇವೆ. ದೊಡ್ಡದನ್ನು ಶ್ರೀ ಕಾಡುಸಿದ್ಧೇಶ್ವರ ದೇವಾಲಯವೆಂದೂ ಸಣ್ಣದನ್ನು ಅವರ ಶಿಷ್ಯ ಪರಂಪರೆಯಲ್ಲಿ ವಿಖ್ಯಾತನಾದ ಮುಪ್ಪಿನಕಾಡೇಶ್ವರನ ದೇವಾಲಯವೆಂದೂ ಹೇಳುವರು.

ಈ ಸಿದ್ಧಗಿರಿ ಮಠಕ್ಕೆ ಹಿಂಭಾಗದಲ್ಲಿ ಸುಮಾರು ಒಂದು ಕೋಂಬಿನ ಕೂಗಿನ ದೂರಲ್ಲಿ ಒಂದು ವಿಚಿತ್ರದೇವಾಲಯವಿದೆ. ಪ್ರಾಯೇಣ ಅಂತಹ ದೇವಾಲಯವನ್ನು ನಾವೆಲ್ಲಿಯೂ ಕಾಣಲಾರೆವು. ಅದೇನಂದರೆ—ದೇವಾಲಯದಲ್ಲಿ ಒಂದು ಶಿವಲಿಂಗ, ಅದರ ಬಲಭಾಗದಲ್ಲಿ ಒಂದು ಗೋವಿನಾಕಾರದ ಶಿಲಾಮೂರ್ತಿ, ಅದರ ಗರ್ಭದಿಂದ ಹರಿದು ಬಾಯ

ಯಿಂದ ಅಂದರೆ ಗೋಮುಖದಿಂದ ಶಿವಲಿಂಗದ ಮೇಲೆ ಜಲಾಭಿಷೇಕವು ಸದಾ ಆಗುತ್ತಿರುವುದು. ಈ ದೃಶ್ಯವು ಭಾವಿಕ ಜನರ ಮೇಲೆ ಒಂದು ವಿಲಕ್ಷಣವಾದ ಪರಿಣಾಮವನ್ನು ಮಾಡುವುದಲ್ಲದೆ ಶಂಕರನು ಗಂಗಾಧರನೆಂಬುದನ್ನು ಕಣ್ಣು ಮುಂದೆ ತಂದು ತೋರಿಸಿದಂತಿರುವುದು. ನಮ್ಮ ಕರ್ನಾಟಕದಲ್ಲಿ ಈ ಬಗೆಯ ದೇವಾಲಯವನ್ನು ಎಲ್ಲಿಯೂ ಕಾಣಲಾರೆವು. ಈ ದೇವಾಲಯದಿಂದ ಈ ಕ್ಷೇತ್ರದ ಶೋಭೆಯು ಹೆಚ್ಚಿರುವುದು.

**ಸನ್ನಿವೇಶದ ಮಹತ್ವ:—** ಸಿದ್ಧಗಿರಿಮಠವು ಒಂದು ರೀತಿಯಲ್ಲಿ ಮಠವೂ ಮತ್ತೊಂದು ರೀತಿಯಲ್ಲಿ ದೇವಾಲಯೂ ಆಗಿರುವುದರಿಂದ ಇದರ ಘನತೆಯು ಇಮ್ಮಡಿಯಾಗಿದೆ. ಇದು ಬಹು ಮಹತ್ವದ ಸ್ಥಾನವಾಗಿಯೂ ಇದೆ. ಒಂದು ಸುಂದರವಾದ ಗುಡ್ಡಗಾಡಿನಲ್ಲಿ ಮನೋಹರವಾದ ಗಿರಿಯ ಪ್ರದೇಶದಲ್ಲಿ ಮಠವಿರುವುದರಿಂದ ಸ್ಥಳವು ಬಹು ಶೋಭಾಯಮಾನವಾಗಿದೆ. ಈ ಮಠದ ಮಹಡಿಯ ಮೇಲೆ ನಿಂತು ನೋಡಿದರೆ ಸುತ್ತಮುತ್ತಣ ಪ್ರಕೃತಿಯು ಬಹುಸುಂದರವಾಗಿ ಕಾಣುತ್ತದೆ. ಆದುದರಿಂದ ಈ ಕ್ಷೇತ್ರವು ಭಾವಿಕ ಜನರಿಗೇ ಅಲ್ಲದೆ ರಸಿಕರಿಗೂ ಅವಲೋಕನೀಯಸ್ಥಾನವಾಗಿದೆ. ಇಲ್ಲಿಯ ಸುಂದರ ಸನ್ನಿವೇಶವನ್ನು ನೋಡಿದರೆ ಷಡಕ್ಷರಿದೇವನ ವರ್ಣನೆಯು ಅತಿಶಯೋಕ್ತಿಯಲ್ಲವೆಂದೂ ಅದು ಸರ್ವಥಾ ಸ್ವಭಾವೋಕ್ತಿಯೆಂದೂ ರಸಿಕನಾದವನಿಗೆ ಅನ್ನಿಸದಿರುವುದಿಲ್ಲ. ಒಟ್ಟಿನಲ್ಲಿ ಕ್ಷೇತ್ರವು ಅವಲೋಕನೀಯವಾದ ಸುಂದರ ಪ್ರದೇಶದಲ್ಲಿದೆ.

ಮಠವು ನಾನಾಬಗೆಯ ವೃಕ್ಷಗಳಿಂದ ಅಲಂಕೃತವಾದ ಒಂದು ತೋಪಿನಲ್ಲಿದೆ. ಮಠದ ಕಟ್ಟಡವೂ ಶಿಲಾಮಯವಾಗಿದ್ದು ಭವ್ಯವಾಗಿಯೂ ರಮ್ಯವಾಗಿಯೂ ಇದೆ. ಮಹಾದ್ವಾರವು ಅಪೂರ್ವವಾಗಿ ಕಟ್ಟಲ್ಪಡುತ್ತಿದ್ದು ಅಪೂರ್ಣವಾಗಿದೆ. ಈ ಮಹಾದ್ವಾರದ ಕಟ್ಟಡವು ಪೂರ್ಣವಾದರೆ ಇಲ್ಲಿಯ ಶೋಭೆಯು ದ್ವಿಗುಣವಾಗುವುದು.

ಈ ಸಿದ್ಧಗಿರಿ ಮಠವು ಬಹು ಪವಿತ್ರಸ್ಥಾನವಾದುದರಿಂದ ಉತ್ತರ ಕರ್ನಾಟಕ ಹಾಗೂ ಮಹಾರಾಷ್ಟ್ರ ಭಾಗದ ವೀರಶೈವರು ಇದನ್ನು ಬಹು ಮಹತ್ವದಸ್ಥಾನವೆಂದು ಭಾವಿಸಿರುವರು. ಶಿವರಾತ್ರಿಯ ಕಾಲದಲ್ಲಿ ಇಲ್ಲಿ ದೊಡ್ಡ ಜಾತ್ರೆಯಾಗುತ್ತದೆ. ಆ ಕಾಲದಲ್ಲಿ ಸಾವಿರಾರು ಜನರು ಸೇರುತ್ತಾರೆ. ಆ ಸಮಯದಲ್ಲಿ ದೊಡ್ಡ ದಾಸೋಹವು ನಡೆಯುತ್ತದೆ.

ಈ ಮಠಕ್ಕೆ ವೀರಶೈವರೇ ಅಲ್ಲದೆ ವೀರಶೈವೇತರರೂ ಶಿಷ್ಯರಾಗಿರುವರು. ಈ ಸಿದ್ಧಗಿರಿ ಮಠದ ಪಕ್ಕದಲ್ಲಿರುವ ಹಳ್ಳಿಯಲ್ಲಿ ವಾಸಮಾಡುವ ಮಾಂಸ ಪ್ರಿಯ ಜನರಾದದರೂ ಈ ಕ್ಷೇತ್ರದ ಮಹತ್ವಕ್ಕೆ ಹೆದರಿ ಇಲ್ಲಿ ಇಂದಿನ ವರೆಗೂ ಪ್ರಾಣಿ ಹಿಂಸೆಯನ್ನು ಮಾಡುವುದಿಲ್ಲ. ಭೂತ ಪಿಶಾಚಿಗಳ ಬಾಧೆಯಿಂದ ನರಳುವವರು ಇಲ್ಲಿಗೆ ಬಂದ ಕೂಡಲೇ ಅವರ ಕಷ್ಟವು ನಾಶವಾಗುವುದಂತೇ. ಈ ವಿಷಗಳು ಕ್ಷೇತ್ರ ಮಹಿಮೆಗೆ ಸಾಕ್ಷಿಯಾಗಿವೆ.

ಇಲ್ಲಿಯ ಸ್ವಾಮಿಗಳು:-- ಈ ಮಠವು ರೇಣುಕ ಪೀಠಕ್ಕೆ ಸೇರಿದುದು. ಆದುದರಿಂದ ಗುರುವರ್ಗದ ಮಠವೆಂಬುದು ಸ್ಪಷ್ಟವು. ಇಲ್ಲಿ ಹಿಂದೆ ಮುಪ್ಪಿನಕಾಡೇಶ್ವರ ಶಿವಾಚಾರ್ಯರೆಂಬೊಬ್ಬ ಮಹಾವಿಭೂತಿಗಳು ಆಗಿ ಹೋಗಿರುವರು. ಈಗ ಇರುವ ಸ್ವಾಮಿಗಳಿಗೆ ಶ್ರೀ ಮುಪ್ಪಿನಕಾಡೇಶ್ವರ ಶಿವಾಚಾರ್ಯರೆಂದು ಹೆಸರು. ಇವರ ಗುರುಗಳು ಶ್ರೀಗುರು ವಿರೂಪಾಕ್ಷ ಶಿವಾಚಾರ್ಯರು. ಈ ಮಠದಲ್ಲಿ ಶಿಲಾಲಿಪಿಗಳಾಗಲೀ ತಾಮ್ರಪಟಗಳಾಗಲೀ ಇಲ್ಲ. ಕಾಗದಪತ್ರಗಳೂ ಅಷ್ಟು ಮಹತ್ವವಾದುವುಗಳಿಲ್ಲ. ಹಿಂದೆ ಅರಾಜಕ ಕಾಲದಲ್ಲಿ ಎಲ್ಲವೂ ವಿಧರ್ಮಿಗಳಿಂದ ಅಪಹರಿಸಲ್ಪಟ್ಟವೆಂದು ಐತಿಹ್ಯವಿದೆ.

ಈಗಿನ ಸ್ವಾಮಿಗಳು ಬಹಳ ಸಾತ್ವಿಕರೂ ವಿದ್ಯಾಭಿಮಾನಿಗಳೂ ಆಗಿರುವರು. ಕೊಲ್ಲಾಪುರದಲ್ಲಿ ಕಾಲೇಜು ವ್ಯಾಸಂಗಮಾಡುತ್ತಿರುವ ವೀರಶೈವ ವಿದ್ಯಾರ್ಥಿಗಳಿಗಾಗಿ ಒಂದು ಉಚಿತ ಭೋಜನಾಲಯವನ್ನಿಟ್ಟಿರುವರು. ಅಲ್ಲಿ ಈಗ ಹದಿನೈದು ಮಂದಿ ಬಾಲಕರು ಇರುವರು. ಇವರೆಲ್ಲರೂ ಪ್ರಾಯೇಣ ರಾಜಾರಾಮಕಾಲೇಜಿನ ವಿದ್ಯಾರ್ಥಿಗಳೇ ಆಗಿರುವರು. ಈ ಭೋಜನಾಲಯವನ್ನು ದಿನಕ್ರಮದಲ್ಲಿ ಅಭಿವೃದ್ಧಿಸ್ಥಿತಿಗೆ ತರಬೇಕೆಂದು ಶ್ರೀಗಳ ಆಕಾಂಕ್ಷೆಯಿದೆ.

ಮಠಕ್ಕೆ ತಕ್ಕಷ್ಟು ಉತ್ಪನ್ನವೂ ಇದೆ. ಇದರಲ್ಲಿ ಕೆಲಭಾಗವನ್ನು ಕೊಲ್ಲಾಪುರದ ಸರಕಾರದವರು ಕೊಟ್ಟಿರುವರು. ಮತ್ತೆ ಕೆಲವು ಭಾಗವನ್ನು ಈ ಮಠದ ಶಿಷ್ಯ ಶಿರೋಮಣಿಗಳೂ ವೀರಶೈವ ಕರ್ಣನೆಂದು ವಿಖ್ಯಾತರಾದವರೂ ಆದ ಶಿರಸಂಗಿ ಲಿಂಗರಾಜರು ಕೊಟ್ಟಿರುವರು. ಒಟ್ಟು ವರ್ಷಕ್ಕೆ ನಾಲ್ಕೈದುಸಾವಿರ ರೂಪಾಯಿಯಷ್ಟು ಉತ್ಪನ್ನವಿರಬಹುದಾಗಿ

ತೋರುತ್ತದೆ. ಇದು ದಾಸೋಹ ಮಠವಾದುದರಿಂದ ಉತ್ಪನ್ನದ ಪ್ರತ್ಯಂಶವೂ ಸದ್ವಿನಿಯೋಗವಾಗುತ್ತದೆ.

**ಮಹತ್ವದ ಸಂಗತಿ:—** ಈ ಮಠದಲ್ಲಿರುವ ದೇವಾಲಯಗಳೆರಡರ ಹೆಸರನ್ನೂ ಹಿಂದೆಯೇ ಸೂಚಿಸಿದೆ. ಕಾಡಸಿದ್ಧೇಶ್ವರ ಮತ್ತು ಮುಪ್ಪಿನ ಕಾಡೇಶ್ವರ ಎಂಬೀ ಹೆಸರುಗಳನ್ನು ಕೇಳಿದರೆ ಕನ್ನಡ ಪ್ರೇಮಿಯಾದವನಿಗೆ ಕಿವಿಗಳು ನೆಟ್ಟಗಾಗುವಂತಿವೆ.

ಮೇಲಿನ ಎರಡು ಹೆಸರುಗಳಲ್ಲಿಯೂ ಕಾಡ ಮತ್ತು ಮುಪ್ಪಿನ ಎಂಬ ಶಬ್ದಗಳು ಶುದ್ಧ ಕನ್ನಡ ಭಾಷೆಯವುಗಳು. ಈಗ ಸಿದ್ಧಗಿರಿಯ ಸುತ್ತಮುತ್ತಲೂ ಮರಾಠಿಯ ಹಳ್ಳಿಗಳೇ ಇರುವವು. ಆದುದರಿಂದ ಸಿದ್ಧಗಿರಿಯು ಈಗ ಮಹಾರಾಷ್ಟ್ರಕ್ಕೇ ಸೇರಿಹೋದಂತಾಗಿದೆ. ಆದರೆ ಕನ್ನಡ ನುಡಿಯ ಏಳಿಗೆಯ ಕಾಲದಲ್ಲಿ ಇದು ಶುದ್ಧ ಕನ್ನಡ ಪ್ರಾಂತವಾಗಿದ್ದಿತು. ಅದಕ್ಕೆ ಮೇಲಿನ ಹೆಸರುಗಳೇ ಸಾಕ್ಷಿಯಾಗಿವೆ.

ಶ್ರೀ ರೇಣುಕಾಚಾರ್ಯರು ಕೆಲವುಕಾಲ ಕಾಡಿನಲ್ಲಿ ತಪಸ್ಸು ಮಾಡಿಕೊಂಡಿದ್ದುದರಿಂದ ಅವರನ್ನು ಆಗಿನ ಭಕ್ತರು ಕಾಡಸಿದ್ಧನೆಂದು ಕರೆದರು. ಆದುದರಿಂದಲೇ ಶ್ರೀ ರೇಣುಕರನ್ನು ಉತ್ತರಕರ್ನಾಟಕದ ಭಾಗದಲ್ಲಿ ಕಾಡಸಿದ್ಧನೆಂದು ಕರೆಯುವಂತೆ ತೋರುತ್ತದೆ.

ಸಿದ್ಧ ಅಥವಾ ಸಿದ್ಧೇಶ್ವರ ಎಂಬ ಹೆಸರಿನಿಂದ ವಿಖ್ಯಾತರಾದವರಲ್ಲಿ ಮೂರು ಮಂದಿ ಬಹು ಮುಖ್ಯರು. ಅವನ್ನು ಮುಂದೆ ಸೂಚಿಸಿದೆ.

೧. ರೇವಣಸಿದ್ಧೇಶ್ವರ.

೨. ಸಿದ್ಧರಾಮೇಶ್ವರ

೩. ತೋಂಟದ ಸಿದ್ಧೇಶ್ವರ.

ವೀರಶೈವ ಗ್ರಂಥಗಳನ್ನು ಓದಿದವರಿಗೆ ಮೇಲಿನ ಮೂರು ಮಂದಿ ವಿಭೂತಿಗಳೂ ಪರಿಚಯಸ್ಥರಾಗಿಯೇ ಇರುವರು.

ಶ್ರೀ ರೇವಣಸಿದ್ಧೇಶ್ವರನನ್ನು ಕೆಲವರು ಸಿದ್ಧೇಶ್ವರನೆಂದು ಕರೆವರು. ಹಾಗೆಯೇ ಸಿದ್ಧರಾಮೇಶ್ವರನನ್ನೂ ಸಿದ್ಧೇಶ್ವರನೆಂದೇ ಅನ್ನುವರು. ಉದಾಹರಣೆಗಾಗಿ ಬಿಜಾಪುರದಲ್ಲಿ ಕಟ್ಟಲ್ಪಡುತ್ತಿರುವ ಶ್ರೀ ಸಿದ್ಧರಾಮೇಶ್ವರ ದೇವಾಲಯವನ್ನು ಜನರು ರೂಢಿಯಲ್ಲಿ ಸಿದ್ಧೇಶ್ವರನ ಗುಡಿಯೆಂದೇ

ಕರೆವರು. ತೋಂಟದ ಸಿದ್ಧಲಿಂಗೇಶ್ವರನ ವಿಷಯಕವಾದ ಗ್ರಂಥಕ್ಕೆ ಸಿದ್ಧೇಶ್ವರ ಪುರಾಣವೆಂದೇ ಹೆಸರಾಗಿದೆ.

ವೀರಶೈವರಲ್ಲಿ ಸಿದ್ಧೇಶ್ವರನೆಂಬ ಹೆಸರಿನಿಂದ ಮೇಲಿನ ಮೂರು ಮಂದಿ ವಿಖ್ಯಾತರಾಗಿದ್ದರೂ ರೇಣುಕಾಚಾರ್ಯರು ಇವರಲ್ಲಿ ಆದ್ಯರಾಗಿರುವರು. ಈ ಮೂವರಲ್ಲದೆ ಕಾಡಸಿದ್ಧೇಶ್ವರನೆಂಬ ಮತ್ತೊಬ್ಬನಿರುವಂತೆ ತೋರುವುದು. ಆತನು ಬಹುಶಃ ವಚನಕಾರನಾದ ಕಾಡಸಿದ್ಧೇಶ್ವರನಿರಬಹುದು. ನಿಜವಾದ ಮೊದಲಿನ ಕಾಡಸಿದ್ಧನು ವಿಖ್ಯಾತನೂ ಆಚಾರ್ಯಶಿರೋಮಣಿಯೂ ಆದ ಜಗದ್ಗುರು ರೇವಣಸಿದ್ಧನೆಂದೇ ನಮಗೆ ತಿಳಿಯುವುದು.

ನಮ್ಮ ಭಾವನೆಯನ್ನು ಬಲಪಡಿಸಲು ಈ ಮಠದಲ್ಲಿ ಮತ್ತೊಂದು ಆಧಾರವಾದ ಸಂಗತಿ ಇದೆ. ಸಿದ್ಧಗಿರಿ ಹಳ್ಳಿಯಲ್ಲಿಯ ಕೆಲವು ಮನೆತನದವರು ದೇವರ ಮುಂದೆ ವಿಶೇಷ ದಿನಗಳಲ್ಲಿ ಕೆಲವು ಸ್ತೋತ್ರರೂಪೀ ದಂಡಕಗಳನ್ನೂ ವಚನಗಳನ್ನೂ ಹೇಳುವರು. ಅವು ಬಹುವಾಗಿ ರೇಣುಕಾಚಾರ್ಯರ ವಿಷಯಗಳಾಗಿವೆ. ಮತ್ತು ಅವು ಕನ್ನಡ ಭಾಷೆಯವುಗಳಾಗಿದ್ದು ಅವನ್ನು ಮರಾಠಿ ಲಿಪಿಯಲ್ಲಿ ಬರೆದುಕೊಂಡು ಈ ಜನರು ಕಂಠಪಾಠ ಮಾಡಿಕೊಂಡಿರುವರು. ಈ ಸ್ತೋತ್ರವಚನದಿಂದ ನಮಗೆ ಎರಡು ಸಂಗತಿಗಳು ತಿಳಿಯುತ್ತವೆ.

೧. ಕಾಡಸಿದ್ಧೇಶ್ವರನು ಮೂಲರೇವಣಸಿದ್ಧನೇ ಆಗಿರಬೇಕು.

೨. ಈ ವಚನಗಳು ಕನ್ನಡವಿದ್ದು ಅವನ್ನು ಆ ಜನರ ಮನೆತನದಲ್ಲಿ ಬಹು ಪೂರ್ವದಿಂದ ಹೇಳುತ್ತಿರುವುದರಿಂದ ಇಲ್ಲಿ ಕನ್ನಡವು ಸ್ವಲ್ಪಕಾಲದ ಹಿಂದೆ ಹಳ್ಳಿಯ ಭಾಷೆಯಾಗಿದ್ದಿರಬೇಕು.

ಈ ವಿಷಯಗಳು ವೀರಶೈವರಿಗೂ ಕನ್ನಡಿಗರಿಗೂ ಬಹಳ ಮಹತ್ವವಾದವುಗಳು.

ಹಿಂದೆ ಕೊಲ್ಲಾಪುರ ಭಾಗದಲ್ಲಿಯೂ ಕನ್ನಡವಿತ್ತೆಂಬುದಕ್ಕೆ ಕೊಲ್ಲಾಪುರದ ಶ್ರೀ ಲಕ್ಷ್ಮೀದೇವಾಲಯದ ಆವರಣದಲ್ಲಿರುವ ಕನ್ನಡ ಶಿಲಾಲಿಪಿಯು ಸಾಕ್ಷಿಯಾಗಿದೆ. ಈಗ ಈ ಸಿದ್ಧಗಿರಿಹಳ್ಳಿಯಲ್ಲಿ ಕೆಲವರಿಗೆ ಕನ್ನಡ ಬರುತ್ತದೆ. ಈ ಕಾರಣಗಳಿಂದ ರೇವಣಸಿದ್ಧನ ಕಾಲದಲ್ಲಿ ಇಲ್ಲಿ ಕನ್ನಡ ಪ್ರಚಾರದಲ್ಲಿತ್ತೆಂದೂ ಆಗಿನ ಕನ್ನಡಿಗರು ಕಾಡಿನಲ್ಲಿ ತಪಸ್ಸು ಮಾಡು

ತ್ತಿದ್ದ ರೇವಣಸಿದ್ಧನನ್ನು ಕಾಡಸಿದ್ಧನೆಂದು ಕರೆದರೆಂದೂ ನಾವು ಭಾವಿಸಬಹುದು.

ಸುಪ್ರಸಿದ್ಧನಾದ ರೇವಣಸಿದ್ಧನ ಅಥವಾ ಕಾಡಸಿದ್ಧನ ಶಿಷ್ಯಪರಂಪರೆಯಲ್ಲಿ ಹಲವರು ಅದೇ ಹೆಸರಿನಿಂದ ವ್ಯವಹರಿಸಿದ ಹಾಗೆ ಕಾಣುತ್ತದೆ. ಅದರಲ್ಲಿ ಮುಪ್ಪಿನಕಾಡೇಶ್ವರಸ್ವಾಮಿ ಎಂಬುವರು ಬಹು ಪ್ರಸಿದ್ಧರಾಗಿದ್ದಂತೆ ತಿಳಿದುಬರುತ್ತದೆ.

**ಸಾರಾಂಶ:**— ಸಿದ್ಧಗಿರಿ ಕ್ಷೇತ್ರವನ್ನು ಮೇಲಿನ ಕಾರಣಗಳಿಂದ ನಾವು ರೇವಣಸಿದ್ಧಗಿರಿಯೆಂದು ಕರೆದಿರುವೆವು. ಈ ಮಠವು ವೀರಶೈವರಲ್ಲಿ ಪ್ರಬಲವೂ ಪ್ರಾಚೀನವೂ ಆದ ಕ್ಷೇತ್ರವಾಗಿದೆ. ರೇಣುಕಚರಿತೆಗೂ ಈ ಮಠಕ್ಕೂ ಬಹಳ ಸಂಬಂಧವಿದೆ. ಇಂತಹ ಮಠಗಳ ಹಾಗೂ ಕ್ಷೇತ್ರಗಳ ಚರಿತ್ರೆಯನ್ನು ಹುಡುಕಿ ಪ್ರಕಟಿಸುವುದು ಪ್ರತಿಯೊಬ್ಬ ವೀರಶೈವ ಪಂಡಿತನ ಕರ್ತವ್ಯವಾಗಿದೆ. ಇದರಿಂದ ಮಠದ ಕೀರ್ತಿಯು ಹೆಚ್ಚುವುದಲ್ಲದೆ ಸಮಾಜದಲ್ಲಿಯ ಅಜ್ಞಾನವೂ ಕಡಿಮೆಯಾಗುವುದು.

ಸಿದ್ಧಗಿರಿಕ್ಷೇತ್ರದ ಪೂರ್ವೇತಿಹಾಸವು ಕನ್ನಡ ಸಾಹಿತ್ಯಕ್ಕೂ ಸಂಬಂಧಪಟ್ಟಿದೆ. ಮಹಾರಾಷ್ಟ್ರ ಮಯವಾದೀ ಪ್ರದೇಶದಲ್ಲಿ ಕನ್ನಡ ನುಡಿಗೆ ತಕ್ಕಷ್ಟು ಅವಕಾಶ ಕೊಟ್ಟಿರುವುದು ಈ ಕ್ಷೇತ್ರವೇ. ಶ್ರೀ ಸ್ವಾಮಿಗಳೂ ಕನ್ನಡಿಗರಾಗಿಯೇ ಇರುವರು. ಈ ಮಠದ ಚಿತ್ರವನ್ನೂ ದೇವರ ಮುಂದೆ ಸಿದ್ಧಗಿರಿ ಹಳ್ಳಿ ಜನರನ್ನುತ್ತಿರುವ ಕನ್ನಡ ಸ್ತೋತ್ರವನ್ನೂ ಕಾಲಕ್ರಮದಲ್ಲಿ ಪ್ರಕಟಿಸಬೇಕೆಂದಿರುವೆವು.

ಮೇಲಿನ ವಿಷಯವನ್ನು ಮನವಿಟ್ಟು ಓದಿದವರಿಗೆ ಈ ಕ್ಷೇತ್ರವು ಸಮಸ್ತ ವೀರಶೈವರಿಗೂ ಅವಲೋಕನೀಯ ಸ್ಥಾನವೆಂಬುದನ್ನು ಹೇಳಬೇಕಾಗಿಲ್ಲ.



# ಶ್ರೀಗುರು ದುರದುಂಡೀಶ್ವರ ಸ್ತೋತ್ರ.

(ಲೇಖಕ:— ಬಿ. ಶಿವಮೂರ್ತಿಶಾಸ್ತ್ರೀ ಕೀರ್ತನ ಕೇಸರಿ, ಕವಿರತ್ನ
ಹುಲ್ಕುಂಟೆಮಠ ತುಮಕೂರು.)

→⁂(೦)⁂←

ಬೆಳಗಾಂವಿ ಜಿಲ್ಹೆಯಲ್ಲಿ ಸಂಚರಿಸುವಾಗ ಈ ಜಿಲ್ಹೆಯ ಮಹತ್ವದ ಸ್ಥಳಗಳನ್ನು ನೋಡಲಿಕ್ಕೆ ಹೋಗುತ್ತಿದ್ದೆನು. ಅಂತಹ ಸ್ಥಳಗಳಲ್ಲಿ ಅರಭಾವಿಯ ದುರದುಂಡೀಶ್ವರಮಠ, ನಿಡಸೋಸಿ ದುರದುಂಡೀಶ್ವರಮಠ ಇವೆರಡೂ ಬಹು ಮುಖ್ಯವಾಗಿದ್ದುವು. ಶ್ರೀ ದುರದುಂಡೀಶನು ಕರ್ನಾಟಕದ ಮಹಾವಿಭೂತಿಯು. ಈ ಮಹಾತ್ಮನ ವಿಷಯವಾಗಿ ಒಂದು ಪುರಾಣವೂ ಸಹ ಬರೆಯಲ್ಪಟ್ಟಿದೆ. ಮಹತ್ವದ ದೃಷ್ಟಿಯಿಂದಲೂ ದಾಸೋಹದ ದೃಷ್ಟಿಯಿಂದಲೂ, ಶಿಲ್ಪಕಲಾ ದೃಷ್ಟಿಯಿಂದಲೂ ಅರಭಾವಿ ಮತ್ತು ನಿಡಸೋಸಿಯ ಮಠಗಳು ಬಹಳ ಪ್ರಖ್ಯಾತವಾದವುಗಳು. ಹಾಗೂ ಅವಲೋಕನೀಯವಾದವುಗಳು.

ಈ ಎರಡು ಮಠಗಳೂ ಶ್ರೀ ಮದನಾದಿ ದುರದುಂಡೀಶ್ವರನ ಪಾದ ಧೂಳಿಯಿಂದ ಪವಿತ್ರವಾದವುಗಳೇ. ವೀರಶೈವರ ವಿರಕ್ತಮಠಗಳಲ್ಲಿ ಇವು ಬಹು ಹೆಸರಾದವುಗಳು. ಹಿಂದಿನ ಮಹಾತ್ಮ ದುರದುಂಡೀಶನೂ ಇಂದಿನ ಶ್ರೀಮನ್ನಿರಂಜನ ನಿಜಲಿಂಗ ಮಹಾಸ್ವಾಮಿಗಳೂ ಕರ್ನಾಟಕದಲ್ಲಿ ಹಾಗೂ ಮಹಾರಾಷ್ಟ್ರದಲ್ಲಿ ಎಲ್ಲರಿಂದಲೂ ಪೂಜ್ಯ ಪುರುಷರಾಗಿ ಭಾವಿಸಲ್ಪಟ್ಟಿರುವರು.

ರಾಗ—ಕಾಂಬೋದಿ, ತಾಳ. ಝುರುರ್ಝಂಪೆ.

ಪರಮ ಸದ್ಗುರುರಾಯ ಪೊರೆಯೊ ಗತ ಜನರ ॥ಪಲ್ಲವಿ॥
ಹರುಷದಿಂ ತವಪಾದ ಸ್ಮರಣೆಗೆಯ್ಯುವರಾ ||ಅ. ಪ||

ಶಿವಶಿವಾ ಶಿವಮಠದಿ ಜನಿಸಿ ಶಿವಕೃಪೆಯಿಂದೆ।
ಭುವನಪಾವನವಾದ ಷಟ್ಸ್ಥಲದಿ ನಡೆದು ॥
ಶಿವರೂಪ ನಿನ್ನ ದರ್ಶನ ಭಾಗ್ಯವಂ ಪಡೆದ।
ಶಿವಭಕ್ತಗಾರು ಭೂಲೋಕದೊಳು ಸಮರು ॥೧॥

ನಿಡಸೋಸಿ ನಿಜಲಿಂಗ ಭಕ್ತನಂ ಪೊರೆಯಲ್ಕೆ ।
ಮೃಡನೆ ದುರದುಂಡಿ ಶಿವಯೋಗಿರೂಪದಲಿ ॥
ನಡೆತಂದು ಕೃಪೆಯಿಂದ ಬೋಧಿಸುತ ಭಕ್ತನನು ।
ಕಡುಮೋದದಿಂದೆ ತಾನಲ್ಲಿ ನೆಲಸಿಹನು ॥೨॥

ಲೋಕ ಲೋಕಾವಳಿಯನೆಲ್ಲ ಪದೆ ಬಡಿದಿರ್ಪ ।
ಲೋಕ ಮೋಹಕನಾದ ಮೀನಕೇತನನ ॥
ನಾಕು ನಾಕೆಂಬಂತೆ ನಿಜಧೈರ್ಯದಿಂ ಬಡಿದು ।
ಲೋಕ ಗುರುವೆಂದೆನಿಸಿ ಮೆರೆದ ಯೋಗೀಶಾ ॥೩॥

ಅನ್ನಮೂಲವು ಸಕಲ ಜೀವಕೋಟಿಗಳೆನುತ ।
ಸನ್ನುತನು ನಿಜಲಿಂಗ ದೇಶಿಕಾಹ್ವಯನೂ ॥
ಅನ್ನದಾನವನೆಸಗಿ ಸಕಲ ಭಕ್ತಾವಳಿಯ ।
ಬನ್ನವನು ನೀಗುವನು ಭುವನ ಪಾವನನು ॥೪॥

ಸಂಕಟವ ಪರಿಹರಿಸಿ ಕಿಂಕರರ ಪೊರೆಯೆಂದು ।
ಕೈಂಕರ್ಯದಿಂದ ಕೈಮುಗಿದು ಬೇಡುವೆನೈ ॥
ಸಂಕೇಶ್ವರಾಧೀಶ ಸರ್ಪಭೂಷಣರೂಪ ।
ಘೋರಿಕನುದ್ಧರಿಸಯ್ಯಾ ಶಿವಮೂರ್ತಿವರದ ॥೫॥

ರಾಗ—ಸುರಟಿ. ಆದಿತಾಳ.

ಪಾಲಿಸೈ ಕರುಣಾಲವಾಲನೆ ಯೋಗಿಶೇಖರ ಭಕ್ತರಾ ।
ಕಾಲಕಾಲ ವಿಶಾಲಕೀರ್ತಿ ಸುಶೀಲವರ್ತನ ಭವಹರಾ ॥ಪ॥

ಮದನ ಮದ ವಿಧ್ವಂಸಭಾಸುರ ಸದಯಸದ್ಗುಣ ಶೋಭಿತ ।
ಮುದದಿ ಬೇಡುವ ಭಕ್ತಜನರನು ಸದಮಲಾತ್ಮನೆ ರಕ್ಷಿಸೈ ॥೧॥

ಅಂಗಲಿಂಗದ ಸಾಮರಸ್ಯವ ಮಂಗಲಾತ್ಮನೆ ಬೋಧಿಸಿ ।
ಜಂಗಮೋತ್ತಮ ಲಿಂಗವಂತರ ಭಂಗವೆಲ್ಲವ ನೀಗಿದ್ಧೆ ॥೨॥

ಹರನೆ ದುರದುಂಡೀಶನಾಮದಿ ಚರಿಸಿ ಧರೆಯನು ಪೊರೆಯಲು ।
ಪರಮ ಸಿದ್ಧಾರಣ್ಯ ಕ್ಷೇತ್ರದಿ ಮೆರೆದು ನಿಂದನು ಭುವಿಯೊಳು ॥೩॥

ಕಂದ॥ ಅರಭಾವಿಯ ಸುಕ್ಷೇತ್ರದಿ ।
ಮೆರೆದಿಹ ಪರಮಾತ್ಮರೂಪ ಪಾಲಿಸು ನಮ್ಮಂ ॥

ದುರದುಂಡೀಶ ಗುರೂತ್ತಮ ।
ಕರುಣಾಕರ ಶಂಭುರೂಪ ಜಗವಧಿದೀಪಾ ॥೧॥
ಶಿವಮೂರ್ತಿಶಾಸ್ತ್ರಿ ನಾಮಕ ।
ಕವಿಯೊರ್ವಂ ಭಕ್ತಿಭಾವದಿಂದಿದ ಬರೆದಂ ॥
ಭವಹರ ದುರದುಂಡೀಶನ ।
ಶಿವರೂಪನ ಪೊಗಳಲೊಂದು ಕಾರಣವೆನುತಂ ॥೨॥

---

# ಶ್ರೀ ಶಾಂತವೀರ ಸ್ವಾಮಿಗಳು ಗುರುಮಠಕಲ್ಲು.

(ಲೇಖಕ:— ಚಂದ್ರಶೇಖರಶಾಸ್ತ್ರೀ ವ್ಯಾಕರಣತೀರ್ಥ ಪ್ರಿನ್ಸಿಪಾಲ
ಶಂಕರ ಕಾಲೇಜು ಯಾದಗಿರಿ)

ಪಾದಾಗ್ರರೇಣವೋ ಯತ್ರ । ಪತಂತಿ ಶಿವಯೋಗಿನಾಮ್ ॥
ತದೇವ ಸದನಂ ಪುಣ್ಯಂ । ಪಾವನಂ ಗೃಹಮೇಧಿನಾಂ ॥

[ಅರ್ಥ:— ಶಿವಯೋಗಿಗಳ ಪಾದ ಕೊನೆಗಳಲ್ಲಿರುವ ಧೂಳಿಗಳು ಯಾವ ಗೃಹದಲ್ಲಿ ಬೀಳುವವೋ ಆ ಗೃಹವೇ ಪುಣ್ಯಮಯವಾದದ್ದು. ಆ ಮನೆಯ ಯಜಮಾನನಿಗೆ ಪವಿತ್ರ ಸ್ವರೂಪವಾದದ್ದು ]



ವೀರಶೈವ ಸಮಾಜದ ರಚನೆಯು ಬಹಳ ಜಾಣತನದಿಂದ ಮಾಡಿದ್ದಿದ್ದು, ಇದನ್ನು ನೋಡಿದರೆ ಅತ್ಯಂತ ಆನಂದವೆನಿಸುತ್ತದೆ. ಯಾಕಂದರೆ ಸಾಮಾನ್ಯ ಜನರಲ್ಲಿ ಸಹ ಧಾರ್ಮಿಕ ಭಾವನೆಯು ನೆಲೆಗೊಳ್ಳಬೇಕೆಂಬುವ ಸದುದ್ದೇಶದಿಂದ ಅನೇಕ ಮಠಗಳು ಇದರಲ್ಲಿ ಸ್ಥಾಪಿಸಲ್ಪಟ್ಟಿರುವವು. ಸಾಮಾನ್ಯವಾಗಿ ಮಠಗಳಿಲ್ಲದ ಊರುಗಳೇ ಕರ್ನಾಟಕದಲ್ಲಿಲ್ಲೆಂದು ನಾವು ಧಾರಾಳವಾಗಿ ಹೇಳಬಹುದಾಗಿದೆ. ಈ ವಿಷಯದಲ್ಲಿ ಉಳಿದ ಸಮಾಜಗಳಿಗೆ ವೀರಶೈವ ಸಮಾಜವು ಮಾರ್ಗದರ್ಶಕವಾಗಿರುತ್ತದೆ. ಈ ಮಠಗಳಿಂದಲೇ ಈಗ ವೀರಶೈವ ಸಮಾಜದಲ್ಲಿ ಅಲ್ಪ ಸ್ವಲ್ಪ ಧಾರ್ಮಿಕ

ಭಾವನೆಯು ಉಳಿದಿರುತ್ತದೆ. ಒಂದೊಂದು ಊರಲ್ಲಿ ಒಂದೊಂದೇ ಮಠವಿಲ್ಲ. ಕೆಲವು ಊರುಗಳಲ್ಲಿ ನೂರಾರು ಮಠಗಳಿರುತ್ತವೆ. ಆದರೆ ಇತ್ತೀಚಿಗೆ ಈ ಮಠಗಳಲ್ಲಿ ಅವ್ಯವಸ್ಥೆಯುಂಟಾಗಿ ಸಮಾಜವು ವೃದ್ಧಿಂಗತವಾಗುವದರ ಬದಲು ಅವನತಿಯಾಗಲಿಕ್ಕೆ ಹತ್ತಿದೆ. ಯಾಕೆಂದರೆ ಎಷ್ಟೋ ಮಠಗಳಲ್ಲಿರತಕ್ಕವರಿಗೆ ನಮ್ಮ ಸಮಾಜವೆಂದರೇನು ಎಂಬುವದು ಸಹ ಗೊತ್ತಿಲ್ಲ. ಆದರೆ ಮಠಗಳೆಲ್ಲ ಹೀಗೆಯೇ ಇರುತ್ತವೆಂದು ನಮ್ಮ ಅಭಿಪ್ರಾಯವಲ್ಲ. ಉತ್ತಮ ರೀತಿಯಿಂದ ಇದ್ದು ಸಮಾಜ ಸೇವೆಯನ್ನು ಮಾಡತಕ್ಕ ಅನೇಕ ಮಠಾಧಿಪತಿಗಳಿರುತ್ತಾರೆ. ಅಂತಹ ಮಠಗಳೊಳಗೆ ಯಾದಗಿರಿ ತಾಲೂಕ ಗುರುಮಠಕಲ್ಲು ಗ್ರಾಮದೊಳಗೆ ಶ್ರೀ ಮನ್ನಿರಂಜನ ಜಗದ್ಗುರು ಜಯದೇವ ಮುರಘರಾಜೇಂದ್ರ ಮಹಾಸ್ವಾಮಿಗಳವರ ಖಾಸಾಮಠವು ಒಂದು ಇರುತ್ತದೆ. ಈ ಮಠದ ಮೊದಲಿನ ಸ್ವಾಮಿಗಳು ಅತ್ಯಂತ ತಪಸ್ವಿಗಳೂ, ಅಗಣಿತ ಮಹಿಮಾಶಾಲಿಗಳೂ, ಲಿಂಗಪೂಜಾ ನಿಷ್ಠರೂ ಆಗಿದ್ದರು. ಈ ಮಹನೀಯರ ಪುರಾಣವೂ ಒಂದು ಇರುತ್ತದೆ. ಇವರ ಎಲ್ಲ ಮಹಿಮೆಗಳಿಂದ ಕೂಡಿದ ಚರಿತ್ರೆಯನ್ನು ಒಂದು ಸಾರೆ ನಾವು ಶಿವಾನುಭವದಲ್ಲಿ ಪ್ರಕಟಿಸುತ್ತೇವೆ.

## ಬಾಲ್ಯ ಮತ್ತು ವಿದ್ಯಾಭ್ಯಾಸ.

ಈ ಮಠದ ಈಗಿನ ಅಧ್ಯಕ್ಷರಾದ ಶ್ರೀಮನ್ನಿರಂಜನ ಶಾಂತವೀರ ಸ್ವಾಮಿಗಳವರ ಸಂಕ್ಷಿಪ್ತ ಚರಿತ್ರೆಯನ್ನು ನಾವು ಶಿವಾನುಭವದ ವಾಚಕರ ಸಲುವಾಗಿ ಈಗ ಬರೆಯಲೆಳಸಿದ್ದೇವೆ. ಶ್ರೀ ಶಾಂತವೀರ ಮಹಾಸ್ವಾಮಿಗಳವರು ಬೆಳಗಾವ ಜಿಲ್ಹೆಯಲ್ಲಿರುವ ಹಿರೇಬಾಗೇವಾಡಿ ಎಂಬ ಗ್ರಾಮದಲ್ಲಿ ೩೪ ವರ್ಷಗಳ ಹಿಂದೆ ಅಲ್ಲಿಯ ಹಿರೇಮಠದ ಒಂದು ಕುಟುಂಬದಲ್ಲಿ ಜನಿಸಿದರು. ಇವರ ತಂದೆಯ ಹೆಸರು ಗುರುಸಿದ್ಧಯ್ಯನವರು, ತಾಯಿಯ ಹೆಸರು ಗದಿಗೆವ್ವನವರು. ತಂದೆಯವರು ಚಿಕ್ಕಂದಿನಲ್ಲಿಯೇ ಶಿವಾಧೀನರಾದ ಕಾರಣ ತಾಯಿಯವರೇ ಇವರ ಪಾಲನ, ಪೋಷಣೆಯನ್ನು ಮಾಡಿದರು. ಐದು ವರ್ಷ ವಯಸ್ಸಿನವರಾದ ಮೇಲೆ ಅವರನ್ನು ಅಲ್ಲಿಯ ಕನ್ನಡ ಶಾಲೆಗೆ ಹಾಕಲು, ಚುರುಕು ಬುದ್ಧಿಯವರಾದ ಇವರು ಪ್ರತಿಯೊಂದು ಕ್ಲಾಸಿನಲ್ಲಿ ಉತ್ತಮ ರೀತಿಯಿಂದ ತೇರ್ಗಡೆ ಹೊಂದಿ ಕನ್ನಡ ಮುಲ್ಕೀಪರೀಕ್ಷೆಯನ್ನೂ ಪ್ರವೇಶಪರೀಕ್ಷೆಯನ್ನೂ

ಡ್ರಾಯಿಂಗ್ ಮೂರನೇಗ್ರೇಡ್ ಪರೀಕ್ಷೆಯನ್ನು ಕೊಟ್ಟು ಉತ್ತೀರ್ಣರಾದರು. ಮತ್ತು ಜ್ಯೋತಿಷ್ಯ ರಮಲವನ್ನು ಸಹ ಚನ್ನಾಗಿ ಅಭ್ಯಾಸಮಾಡಿದರು. ಅಷ್ಟರಲ್ಲಿ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರಘಾರಾಜೇಂದ್ರ ಮಹಾಸ್ವಾಮಿಗಳವರು ಬೆಳಗಾವ ಜಿಲ್ಹೆಯಲ್ಲಿ ಸಂಚಾರ ಮಾಡುತ್ತ ಹಿರೇಬಾಗೇವಾಡಿಗೆ ದಯಮಾಡಿಸಿದ್ದರು. ಅಲ್ಲಿಯ ಹಿರೇಮಠದಲ್ಲಿಯೇ ಶ್ರೀಗಳವರ ಮುಕ್ಕಾಮು ಕೆಲವು ದಿವಸಗಳ ವರೆಗೆ ಇತ್ತು. ಆಗ್ಗೆ ಜಗದ್ಗುರುಗಳು ಇವರ ಚುರುಕು ಬುದ್ಧಿಯನ್ನು, ರಮಲದಲ್ಲಿ ತೋರಿಸಿದ ಚಾತುರ್ಯವನ್ನು, ಕಂಡು ಇವರನ್ನು ತಮ್ಮ ಸಂಸ್ಥಾನಕ್ಕೆ ಕೊಡಬೇಕೆಂದು ಅಪ್ಪಣೆಮಾಡಲು ಅವರನ್ನು ರಕ್ಷಣೆ ಮಾಡಿದ ಮುಸಳೀ ಗ್ರಾಮದ ಪಟ್ಟದ ಸ್ವಾಮಿಗಳು ಇದಕ್ಕೆ ಒಪ್ಪಿದರು. ಆ ಮೇಲೆ ಇವರು ಜಗದ್ಗುರುಗಳ ಸೇವೆಯಲ್ಲಿಯೇ ಇರಹತ್ತಿದರು. ಮುಂದೆ ಜಗದ್ಗುರುಗಳು ಇವರಿಗೆ ಸಂಸ್ಕೃತಾಧ್ಯಯನವನ್ನು ಮಾಡಿಸಬೇಕೆಂಬುವ ಕುತೂಹಲದಿಂದ ಧಾರವಾಡ ಜಿಲ್ಹೆಯಲ್ಲಿರುವ ರಿತ್ತಿ ಎಂಬುವ ಗ್ರಾಮದ ಪಾಠಶಾಲೆಗೆ ಕಳುಹಿಸಿದರು. ಕೆಲವು ದಿವಸಗಳ ವರೆಗೆ ಅಲ್ಲಿ ಅಭ್ಯಾಸವನ್ನು ಮಾಡಿದ ಮೇಲೆ ಅಲ್ಲಿಂದ ಮೈಸೂರಿಗೆ ಹೋದರು. ಮೈಸೂರಿನಲ್ಲಿ ವೈದಿಕ ಮತ್ತು ಸಾಹಿತ್ಯವನ್ನು ಚನ್ನಾಗಿ ಅಭ್ಯಾಸ ಮಾಡಿ ಪುನಃ ಜಗದ್ಗುರುಗಳ ಸನ್ನಿಧಿಗೆ ಬಂದರು.

## ಪಟ್ಟಾಧಿಕಾರ ನಿಯೋಜನೆ.

ಅಷ್ಟರಲ್ಲಿ ಇತ್ತ ಗುರುಮಠಕಲ್ಲ ಖಾಸಾಮಠದಲ್ಲಿ ಅವ್ಯವಸ್ಥೆಯುಂಟಾಗಿ ಮಠದ ಕೀರ್ತಿಯು ಕಡಿಮೆಯಾಗಲಿಕ್ಕೆ ಹತ್ತಿತ್ತು. ಮಠದಲ್ಲಿರುವವರ ಅನೈಕ್ಯತೆಯಿಂದಲೂ, ಅಜ್ಞಾನದಿಂದಲೂ ಮಠವು ನಾಮಶೇಷವಾಗುವ ಪ್ರಸಂಗವು ಒದಗಿತ್ತು. ಯಾವ ಮಠದ ಮೂಲಸ್ಥಾಪನಾಕರ್ತರಾದ ಸ್ವಾಮಿಗಳವರು ತಮ್ಮ ತಪೋಮಹಿಮೆಯಿಂದ ಬಹಳ ಪ್ರಸಿದ್ಧಿಗೆ ಬಂದಿದ್ದರೋ ಅಂತಹ ಮಠದ ಶೋಚನೀಯ ಅವಸ್ಥೆಯು ಮಹಾಸನ್ನಿಧಿಗೆ ತಿಳಿಯಬಂದಿತು. ಅವರ ಖಾಸಾಮಠಗಳಲ್ಲಿ ಗುರುಮಠಕಲ್ಲು ಮಠವೂ ಒಂದು ಇರುವದು. ಮತ್ತು ಮುರಘಾರಾಜೇಂದ್ರ ಮಹಾಸ್ವಾಮಿಗಳವರ ಹನ್ನೆರಡನೇ ಪಟ್ಟದ ವಿರೂಪಾಕ್ಷಸ್ವಾಮಿಗಳವರ ಗದ್ದುಗೆಯಾದರೂ ಈ ಮಠದಲ್ಲಿಯೇ ಇರುತ್ತದೆ. ಜಗದ್ಗುರುಗಳಲ್ಲಿರತಕ್ಕ ಸಮಸ್ತ ಬ್ರಹ್ಮಚಾ

ಭಾವನೆಯು ಉಳಿದಿರುತ್ತದೆ. ಒಂದೊಂದು ಊರಲ್ಲಿ ಒಂದೊಂದೇ ಮಠ ವಿಲ್ಲ. ಕೆಲವು ಊರುಗಳಲ್ಲಿ ನೂರಾರು ಮಠಗಳಿರುತ್ತವೆ. ಆದರೆ ಇತ್ತೀಚಿಗೆ ಈ ಮಠಗಳಲ್ಲಿ ಅವ್ಯವಸ್ಥೆಯುಂಟಾಗಿ ಸಮಾಜವು ವೃದ್ಧಿಂಗತವಾಗುವದರ ಬದಲು ಅವನತಿಯಾಗಲಿಕ್ಕೆ ಹತ್ತಿದೆ. ಯಾಕೆಂದರೆ ಎಷ್ಟೋ ಮಠಗಳಲ್ಲಿರತಕ್ಕವರಿಗೆ ನಮ್ಮ ಸಮಾಜವೆಂದರೇನು ಎಂಬುವದು ಸಹ ಗೊತ್ತಿಲ್ಲ. ಆದರೆ ಮಠಗಳೆಲ್ಲ ಹೀಗೆಯೇ ಇರುತ್ತವೆಂದು ನಮ್ಮ ಅಭಿಪ್ರಾಯವಲ್ಲ. ಉತ್ತಮ ರೀತಿಯಿಂದ ಇದ್ದು ಸಮಾಜ ಸೇವೆಯನ್ನು ಮಾಡತಕ್ಕ ಅನೇಕ ಮಠಾಧಿಪತಿಗಳಿರುತ್ತಾರೆ. ಅಂತಹ ಮಠಗಳೊಳಗೆ ಯಾದಗಿರಿ ತಾಲೂಕ ಗುರುಮಠಕಲ್ಲು ಗ್ರಾಮದೊಳಗೆ ಶ್ರೀ ಮನ್ನಿರಂಜನ ಜಗದ್ಗುರು ಜಯದೇವ ಮುರಘಾರಾಜೇಂದ್ರ ಮಹಾಸ್ವಾಮಿಗಳವರ ಖಾಸಾಮಠವು ಒಂದು ಇರುತ್ತದೆ. ಈ ಮಠದ ಮೊದಲಿನ ಸ್ವಾಮಿಗಳು ಅತ್ಯಂತ ತಪಸ್ವಿಗಳೂ, ಅಗಣಿತ ಮಹಿಮಾಶಾಲಿಗಳೂ, ಲಿಂಗಪೂಜಾ ನಿಷ್ಠರೂ ಆಗಿದ್ದರು. ಈ ಮಹನೀಯರ ಪುರಾಣವೂ ಒಂದು ಇರುತ್ತದೆ. ಇವರ ಎಲ್ಲ ಮಹಿಮೆಗಳಿಂದ ಕೂಡಿದ ಚರಿತ್ರೆಯನ್ನು ಒಂದು ಸಾರೆ ನಾವು ಶಿವಾನುಭವದಲ್ಲಿ ಪ್ರಕಟಿಸುತ್ತೇವೆ.

## ಬಾಲ್ಯ ಮತ್ತು ವಿದ್ಯಾಭ್ಯಾಸ.

ಈ ಮಠದ ಈಗಿನ ಅಧ್ಯಕ್ಷರಾದ ಶ್ರೀಮನ್ನಿರಂಜನ ಶಾಂತವೀರ ಸ್ವಾಮಿಗಳವರ ಸಂಕ್ಷಿಪ್ತ ಚರಿತ್ರೆಯನ್ನು ನಾವು ಶಿವಾನುಭವದ ವಾಚಕರ ಸಲುವಾಗಿ ಈಗ ಬರೆಯಲೆಣಿಸಿದ್ದೇವೆ. ಶ್ರೀ ಶಾಂತವೀರ ಮಹಾಸ್ವಾಮಿಗಳವರು ಬೆಳಗಾವ ಜಿಲ್ಹೆಯಲ್ಲಿರುವ ಹಿರೇಬಾಗೇವಾಡಿ ಎಂಬ ಗ್ರಾಮದಲ್ಲಿ ೩೪ ವರ್ಷಗಳ ಹಿಂದೆ ಅಲ್ಲಿಯ ಹಿರೇಮಠದ ಒಂದು ಕುಟುಂಬದಲ್ಲಿ ಜನಿಸಿದರು. ಇವರ ತಂದೆಯ ಹೆಸರು ಗುರುಸಿದ್ಧಯ್ಯನವರು, ತಾಯಿಯ ಹೆಸರು ಗಡಿಗೆವ್ವನವರು. ತಂದೆಯವರು ಚಿಕ್ಕಂದಿನಲ್ಲಿಯೇ ಶಿವಾಧೀನರಾದ ಕಾರಣ ತಾಯಿಯವರೇ ಇವರ ಪಾಲನ, ಪೋಷಣೆಯನ್ನು ಮಾಡಿದರು. ಐದು ವರ್ಷ ವಯಸ್ಸಿನವರಾದ ಮೇಲೆ ಅವರನ್ನು ಅಲ್ಲಿಯ ಕನ್ನಡ ಶಾಲೆಗೆ ಹಾಕಲು, ಚುರುಕು ಬುದ್ಧಿಯವರಾದ ಇವರು ಪ್ರತಿಯೊಂದು ಕ್ಲಾಸಿನಲ್ಲಿ ಉತ್ತಮ ರೀತಿಯಿಂದ ತೇರ್ಗಡೆ ಹೊಂದಿ ಕನ್ನಡ ಮುಲ್ಕೀಪರೀಕ್ಷೆಯನ್ನೂ ಪ್ರವೇಶಪರೀಕ್ಷೆಯನ್ನೂ

ಡ್ರಾಯಿಂಗ್ ಮೂರನೇಗ್ರೇಡ್ ಪರೀಕ್ಷೆಯನ್ನೂ ಕೊಟ್ಟು ಉತ್ತೀರ್ಣ ರಾದರು. ಮತ್ತು ಜ್ಯೋತಿಷ್ಯ ರಮುಲವನ್ನೂ ಸಹ ಚನ್ನಾಗಿ ಅಭ್ಯಾಸಮಾಡಿ ದರು. ಅಷ್ಟರಲ್ಲಿ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರಘರಾಜೇಂದ್ರ ಮಹಾಸ್ವಾಮಿಗಳವರು ಬೆಳಗಾವ ಜಿಲ್ಹೆಯಲ್ಲಿ ಸಂಚಾರ ಮಾಡುತ್ತ ಹಿರೇಬಾಗೇವಾಡಿಗೆ ದಯಮಾಡಿಸಿದ್ದರು. ಅಲ್ಲಿಯ ಹಿರೇಮಠದಲ್ಲಿಯೇ ಶ್ರೀಗಳವರ ಮುಕ್ಕಾಮು ಕೆಲವು ದಿವಸಗಳ ವರೆಗೆ ಇತ್ತು. ಆಗ್ಗೆ ಜಗದ್ಗುರುಗಳು ಇವರ ಚುರುಕು ಬುದ್ಧಿಯನ್ನೂ, ರಮುಲದಲ್ಲಿ ತೋರಿಸಿದ ಚಾತುರ್ಯವನ್ನೂ, ಕಂಡು ಇವರನ್ನು ತಮ್ಮ ಸಂಸ್ಥಾನಕ್ಕೆ ಕೊಡಬೇಕೆಂದು ಅಪ್ಪಣೆಮಾಡಲು ಅವರನ್ನು ರಕ್ಷಣೆ ಮಾಡಿದ ಮುಸಳೀ ಗ್ರಾಮದ ಪಟ್ಟದ ಸ್ವಾಮಿಗಳು ಇದಕ್ಕೆ ಒಪ್ಪಿದರು. ಆ ಮೇಲೆ ಇವರು ಜಗದ್ಗುರುಗಳ ಸೇವೆಯಲ್ಲಿಯೇ ಇರಹತ್ತಿದರು. ಮುಂದೆ ಜಗದ್ಗುರುಗಳು ಇವರಿಗೆ ಸಂಸ್ಕೃತಾಧ್ಯಯನವನ್ನು ಮಾಡಿಸಬೇಕೆಂಬುವ ಕತೂಹಲದಿಂದ ಧಾರವಾಡ ಜಿಲ್ಹೆಯಲ್ಲಿರುವ ರಿತ್ತಿ ಎಂಬುವ ಗ್ರಾಮದ ಪಾಠಶಾಲೆಗೆ ಕಳುಹಿಸಿದರು. ಕೆಲವು ದಿವಸಗಳ ವರೆಗೆ ಅಲ್ಲಿ ಅಭ್ಯಾಸವನ್ನು ಮಾಡಿದ ಮೇಲೆ ಅಲ್ಲಿಂದ ಮೈಸೂರಿಗೆ ಹೋದರು. ಮೈಸೂರಿನಲ್ಲಿ ವೈದಿಕ ಮತ್ತು ಸಾಹಿತ್ಯವನ್ನು ಚನ್ನಾಗಿ ಅಭ್ಯಾಸ ಮಾಡಿ ಪುನಃ ಜಗದ್ಗುರುಗಳ ಸನ್ನಿಧಿಗೆ ಬಂದರು.

## ಪಟ್ಟಾಧಿಕಾರ ನಿಯೋಜನೆ.

ಅಷ್ಟರಲ್ಲಿ ಇತ್ತ ಗುರುಮಠಕಲ್ಲ ಖಾಸಾಮಠದಲ್ಲಿ ಅವ್ಯವಸ್ಥೆಯುಂಟಾಗಿ ಮಠದ ಕೀರ್ತಿಯು ಕಡಿಮೆಯಾಗಲಿಕ್ಕೆ ಹತ್ತಿತ್ತು. ಮಠದಲ್ಲಿರುವವರ ಅನೈಕ್ಯತೆಯಿಂದಲೂ, ಅಜ್ಞಾನದಿಂದಲೂ ಮಠವು ನಾಮಶೇಷವಾಗುವ ಪ್ರಸಂಗವು ಒದಗಿತ್ತು. ಯಾವ ಮಠದ ಮೂಲಸ್ಥಾಪನಾಕರ್ತರಾದ ಸ್ವಾಮಿಗಳವರು ತಮ್ಮ ತಪೋಮಹಿಮೆಯಿಂದ ಬಹಳ ಪ್ರಸಿದ್ಧಿಗೆ ಬಂದಿದ್ದರೋ ಅಂತಹ ಮಠದ ಶೋಚನೀಯ ಅವಸ್ಥೆಯು ಮಹಾಸನ್ನಿಧಿಗೆ ತಿಳಿಯಬಂದಿತು. ಅವರ ಖಾಸಾಮಠಗಳಲ್ಲಿ ಗುರುಮಠಕಲ್ಲು ಮಠವೂ ಒಂದು ಇರುವದು. ಮತ್ತು ಮುರಘರಾಜೇಂದ್ರ ಮಹಾಸ್ವಾಮಿಗಳವರ ಹನ್ನೆರಡನೇ ಪಟ್ಟದ ವಿರೂಪಾಕ್ಷಸ್ವಾಮಿಗಳವರ ಗದ್ದುಗೆಯಾದರೂ ಈ ಮಠದಲ್ಲಿಯೇ ಇರುತ್ತದೆ. ಜಗದ್ಗುರುಗಳಲ್ಲಿರತಕ್ಕ ಸಮಸ್ತ ಬ್ರಹ್ಮಚಾ

ರಿಗಳಲ್ಲಿ ಶ್ರೀ ಶಾಂತವೀರಸ್ವಾಮಿಗಳೇ ತೇಜಃಪುಂಜರೂ, ಕುಶಲರೂ ಚತುರಮತಿಗಳೂ, ಕರ್ತವ್ಯದಕ್ಷರೂ ಇದ್ದ ಕಾರಣ ಜಗದ್ಗುರುಗಳು ಗುರು ಮಠಕಲ್ಲಿನ ಖಾಸಾಮಠಕ್ಕೆ ಇವರನ್ನೇ ನೇಮಿಸಿ ಕಳುಹಿಸಿಕೊಟ್ಟರು.

## ಸಾರ್ವಜನಿಕ ಕಾರ್ಯಗಳನ್ನು ಮಾಡಿದ್ದು.

ಅಂದಿನಿಂದ ನೈಜಾಂ ದೇಶದ ವೀರಶೈವರ ಭಾಗ್ಯೋದಯವೇ ತೆರೆಯಿತು. ಶ್ರೀಗಳವರು ಅಧಿಕಾರವನ್ನು ವಹಿಸುವ ಕಾಲಕ್ಕೆ ಚಿಕ್ಕವಯಸ್ಸಿನವರಾಗಿದ್ದರು. ವಾಚಕರೇ, ಚಿಕ್ಕವಯಸ್ಸಿನವರಿದ್ದರೇನಾಯಿತು? ಮಹಿಮಾಶಾಲಿಗಳಿಗೆ ವಯಸ್ಸು ಏತಕ್ಕೆ ಉಪಯೋಗ ಬೀಳವದು? ಭಾರತ ಭೂಮಿಯಲ್ಲಿ ಆಗಿಹೋದ ಮಹಾತ್ಮರ ಚರಿತ್ರೆಯನ್ನು ನೋಡಿದರೆ ಪ್ರತಿಯೊಬ್ಬರೂ ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ಅದ್ಭುತ ಕಾರ್ಯಗಳನ್ನು ಮಾಡಿ ಪ್ರಸಿದ್ಧರಾಗಿ ಹೋಗಿದ್ದು ಕಂಡುಬರುತ್ತದೆ. ಶ್ರೀ ಬಸವೇಶ್ವರನು ತನ್ನ ಎಂಟನೆಯ ವಯಸ್ಸಿನಲ್ಲಿಯೇ ತಂದೆಯ ಕೂಡ ಘನತರವಾದ ಶಾಸ್ತ್ರಾರ್ಥವನ್ನು ಮಾಡಲಿಲ್ಲವೇ? ಶ್ರೀ ಶಂಕರಾಚಾರ್ಯರೂ ಕೂಡ ಚಿಕ್ಕ ವಯಸ್ಸಿನಲ್ಲಿಯೇ ಬೌದ್ಧರ ಹಾವಳಿಗೆ ಸಿಕ್ಕು ಹಾಳಾಗುತ್ತಿದ್ದ ಹಿಂದೂಧರ್ಮವನ್ನು ಉದ್ಧಾರ ಮಾಡಲಿಲ್ಲವೇ? ಬಹಳ ವಯಸ್ಸಿನವರಿದ್ದು ವಿದ್ಯಾಬುದ್ಧಿಗಳಿಲ್ಲದಿದ್ದರೆ ಅವರಿಂದಾಗುವ ಪ್ರಯೋಜನವೇನು? ಆದ್ದರಿಂದ ಶ್ರೀಗಳವರು ಚಿಕ್ಕಂದಿನಲ್ಲಿ ಅಧಿಕಾರವನ್ನು ವಹಿಸಿದ್ದು ಭೂಷಣವೇ ಆಯಿತು. ಅವರು ಅಧಿಕಾರವನ್ನು ವಹಿಸಿ ಗುರುಮಠಕಲ್ಲಿಗೆ ಬಂದಬಳಿಕ ಅಂಧಕಾರದಲ್ಲಿ ಮುಳುಗಿದ್ದ ನೈಜಾಮ ಪ್ರಾಂತದ ವೀರಶೈವರಿಗೆ ಧಾರ್ಮಿಕ ಭಾವನೆಯ ಬೀಜವನ್ನು ಊರಿದವರೇ ಈ ಮಹನೀಯರು.

**ವೀರಶೈವ ಧರ್ಮೋದ್ಧಾರಿಣೀ ಸಭೆ:—** ಶ್ರೀ ಸ್ವಾಮಿಗಳವರು ಈ ಪ್ರಾಂತಕ್ಕೆ ದಯಮಾಡಿಸಿದ ಕೆಲವು ದಿವಸಗಳಲ್ಲಿಯೇ ವೀರಶೈವ ಧರ್ಮೋದ್ಧಾರಿಣೀ ಎಂಬ ಹೆಸರಿನ ಸಭೆಯನ್ನು ಮೊದಲು ಗುರುಮಠಕಲ್ಲಿನಲ್ಲಿ ಮಾಡಿ ಈ ಪ್ರಾಂತದ ವೀರಶೈವರನ್ನೆಲ್ಲ ಕೂಡಿಸಿ ಅನೇಕ ಪ್ರಕಾರವಾಗಿ ಧರ್ಮಬೋಧೆಯನ್ನು ಮಾಡಿದರು. ಮತ್ತು ಉಳಿದ ಪ್ರಾಂತದ ವೀರಶೈವರು ತಮ್ಮ ಉನ್ನತಿಯ ಸಲುವಾಗಿ ಫಂಡನ್ನು ಕೂಡಿಸಿ ಹೇಗೆ ವಿದ್ಯಾಭಿವೃದ್ಧಿಯನ್ನು ಮಾಡಿಸುತ್ತ ಬಂದಿರುವರೋ ಹಾಗೆಯೇ

ಈ ಪ್ರಾಂತದಲ್ಲಿಯೂ ಒಂದು ಫಂಡನ್ನು ಕೂಡಿಸಬೇಕೆಂದು ಪ್ರಯತ್ನಿಸಿ ಅದಕ್ಕೆ ಶ್ರೀ ಶಾಂತವೀರ ವಿದ್ಯಾವರ್ಧಕಫಂಡ ಎಂಬುವ ಹೆಸರನ್ನಿಟ್ಟು ಫಂಡನ್ನು ಪ್ರಾರಂಭ ಮಾಡಿದರು. ಅದಕ್ಕೆ ಶ್ರೀಗಳೇ ಪ್ರೆಸಿಡೆಂಟರಾಗಿ ನಿಯಮಿಸಲ್ಪಟ್ಟರು. ಕೆಲವು ದಿವಸಗಳಲ್ಲಿಯೇ ಈ ಫಂಡಿನ ಅಭಿವೃದ್ಧಿಯಾಗಹತ್ತಿತು. ಆದರೆ ರಾಯಚೂರು ಪ್ರಾಂತದ ಕೆಲವರು ಆ ಫಂಡಿನ ಹೆಸರನ್ನು ತೆಗೆದು "ನೈಜಾಂ ವೀರಶೈವ ಫಂಡು" ಎಂದು ಹೆಸರನ್ನಿಟ್ಟರೆ ಇಪ್ಪತ್ತು ಸಾವಿರ ರೂಪಾಯಿಗಳನ್ನು ಕೂಡಿಸಿಕೊಡುತ್ತೇವೆಂದು ಸಭೆಯಲ್ಲಿ ಗೊಂದಲಹಾಕಹತ್ತಿದರು. ದಯಾದೃಷ್ಟಿಯಿಂದ ಕೂಡಿದ ಶ್ರೀಗಳವರು ಅದಕ್ಕೆ ಸಮ್ಮತಿಯನ್ನು ಕೊಟ್ಟು "ನಿಜಾಂ ವೀರಶೈವ ಫಂಡು" ಎಂದು ಈ ಸಂಸ್ಥೆಗೆ ಹೆಸರನ್ನಿಟ್ಟರು. ಆದರೆ ಸಭೆಯಲ್ಲಿ ಇಪ್ಪತ್ತು ಸಾವಿರ ಕೊಡುತ್ತೇವೆಂದು ಹೇಳಿದವರು ಮಾತ್ರ ಏನೂ ಸಹಾಯವನ್ನು ಮಾಡಲಿಲ್ಲ. ಈಗಲೂ ಶ್ರೀಗಳೇ ಈ ಫಂಡಿಗೆ ಪ್ರೆಸಿಡೆಂಟರಾಗಿರುತ್ತಾರೆ. ಇದರಿಂದ ಬಂದ ಬಡ್ಡಿಯಿಂದ ಹೈದರಾಬಾದಿನ ಕಾಲೇಜುಗಳಲ್ಲಿ ಅಭ್ಯಾಸ ಮಾಡತಕ್ಕ ವಿದ್ಯಾರ್ಥಿಗಳಿಗೆ ಸ್ಕಾಲರ್‌ಶಿಪ್ಪು ಕೊಡಲ್ಪಡುತ್ತದೆ. ಈ ಫಂಡಿನ ಆಫೀಸು ಯಾದಗಿರಿಯಲ್ಲಿಯೇ ಇರುತ್ತದೆ. ಕೆಲವು ದಿವಸಗಳಾದ ನಂತರ ಎರಡನೇ ಧರ್ಮೋದ್ಧಾರಿಣೀ ಸಭೆಯನ್ನು ಇಟಗಿಯಲ್ಲಿಯೂ ಮೂರನೇ ಸಭೆಯನ್ನು ಗುರುಮಠಕಲ್ಲಿನಲ್ಲಿಯೂ ಬಹಳ ವೈಭವದಿಂದ ನೆರವೇರಿಸಿದರು.

## ಕನ್ನಡ ಶಾಲೆಗಳ ಸ್ಥಾಪನೆ.

ಆ ಮೇಲೆ ಶ್ರೀಗಳವರು ಸಂಚಾರಕ್ಕೆ ಹೊರಟು ಚಿಟಗೋಪ, ತಾಂಡೂರು, ಸೇಡಂ ಮೊದಲಾದ ಗ್ರಾಮಗಳಲ್ಲಿ ಕನ್ನಡ ಉರ್ದು ಶಾಲೆಗಳನ್ನಿಡಿಸಿ ಸ್ವಭಾಷೆಗೋಸ್ಕರ ಜನರಲ್ಲಿ ಒಳ್ಳೇ ಕ್ರಾಂತಿಯನ್ನು ಹುಟ್ಟಿಸಿದರು. ಚಿಟಗೋಪ ಮತ್ತು ತಾಂಡೂರಿನಲ್ಲಿ ಈ ಕನ್ನಡ ಶಾಲೆಗಳು ಒಳ್ಳೇ ಊರ್ಜಿತಾವಸ್ಥೆಗೆ ಬಂದವು. ಶ್ರೀಗಳವರು ಸ್ವಂತ ಖರ್ಚಿನಿಂದಲೂ ಭಿಕ್ಷೆಯಿಂದಲೂ ಅವುಗಳನ್ನು ನಡೆಯಿಸುತ್ತ ಬಂದರು. ಇವು ೪-೫ ವರ್ಷ ನಡೆದು ಕಾರಣಾಂತರದಿಂದ ಬಂದಾದವು. ಆದರೆ ಅವುಗಳು ಈಗ ಬಂದಾದರೂ ಜನರಲ್ಲಿ ಕನ್ನಡ ಶಾಲೆಗಳ ಬಗ್ಗೆ ಒಂದು ತರಹದ

ಜಾಗ್ರತೆಯು ಹುಟ್ಟಿರುತ್ತದೆ. ಇದಕ್ಕೆ ಶ್ರೀ ಸ್ವಾಮಿಗಳವರೇ ಕಾರಣರಾಗಿರುತ್ತಾರೆ.

## ಕರ್ನಾಟಕ ಭಾಷಾ ಸೇವೆ.

ಶ್ರೀಗಳವರಲ್ಲಿ ಕನ್ನಡ ಭಾಷಾಭಿಮಾನವಾದರೂ ಅಸದೃಶವಾಗಿರುವದು. ಅವರು ಯಾವ ಯಾವ ಊರುಗಳಲ್ಲಿ ಸಂಚರಿಸುತ್ತಾರೆಯೋ ಅಲ್ಲಲ್ಲಿ ವಾಚನಾಲಯುಗಳನ್ನು ಸ್ಥಾಪಿಸುವದೂ, ಜನರಿಗೆ ಕರ್ನಾಟಕ ಭಾಷೆಯ ಮಹತ್ವವನ್ನು ತಿಳಿಸುವದೂ, ಲೆಖ್ಖಪತ್ರಗಳನ್ನು ಕನ್ನಡದಲ್ಲಿಡಿಸುವದೂ ಅವರ ನಿತ್ಯ ಕಾರ್ಯಕ್ರಮುಗಳಲ್ಲಿ ಒಂದಾಗಿರುವದು. ಅವರು ಪ್ರಾಯಶಃ ಕರ್ನಾಟಕದಲ್ಲಿಯ ಎಲ್ಲ ಪತ್ರಿಕೆಗಳನ್ನು ತರಿಸುತ್ತಾರೆ. ಅರ್ಥಾತ್ ಇವರಿಗೆ ಬರತಕ್ಕ ಪತ್ರಗಳೆಂದರೆ ಒಂದು ವಾಚನಾಲಯವೇ ಆಗಿರುತ್ತದೆ. ನಮ್ಮ ನೈಜಾಂ ದೇಶದಲ್ಲಿ ಈ ಮಹನೀಯರಿಂದ ಎಷ್ಟೋ ಊರುಗಳಲ್ಲಿ ಕನ್ನಡ ಭಾಷಾಭಿಮಾನವು ಹೆಚ್ಚೆಚ್ಚು ಅಂಕುರಿತವಾಗುತ್ತ ನಡೆದಿರುತ್ತದೆ. ಕರ್ನಾಟಕದಲ್ಲಿ ಇಂತಹ ಸಾಧುಪುರುಷರು ಉದಯವಾದದ್ದು ಕರ್ನಾಟಕದ ಪುಣ್ಯವೇ ಸರಿ.

## ಅಹಿಂಸಾ ತತ್ವದ ಪ್ರಸಾರ.

ಶ್ರೀಗಳವರು ದಯಾಶಾಲಿಗಳು. ಈ ವಿಷಯದಲ್ಲಿ ಅವರು ಮಾಡಿದಷ್ಟು ಕಾರ್ಯವನ್ನು ಈಗ ಅಲ್ಲಲ್ಲಿ ಸ್ಥಾಪಿತವಾದ ಯಾವ ಪ್ರಾಣಿದಯಾ ಸಂಘಗಳೂ ಮಾಡಿರಲಿಕ್ಕಿಲ್ಲ. ಸಾಧಾರಣವಾಗಿ ನೂರಾರು ಊರುಗಳಲ್ಲಿ ದ್ಯಾಮವ್ವ ಮತ್ತು ದುರಗವ್ವನ ಜಾತ್ರೆಗಳಲ್ಲಿ ಕೋಣಗಳನ್ನು ಕಡಿಯುವ ದುಷ್ಟ ಪದ್ಧತಿಯನ್ನು ಇವರು ನಿಲ್ಲಿಸಿರುತ್ತಾರೆ. ಮತ್ತು ಕೆಲ ಊರುಗಳಲ್ಲಿ ಒಂದೊಂದು ಜಾತ್ರೆಯಲ್ಲಿ ಸಾವಿರಾರು ಕುರಿಗಳನ್ನು ಕಡಿಯುವ ಪದ್ಧತಿಯನ್ನು ನಿಲ್ಲಿಸಿರುತ್ತಾರೆ. ಈ ವಿಷಯದಲ್ಲಿ ಶ್ರೀ ಸ್ವಾಮಿಗಳವರು ಯಾವಾಗಲೂ ಪ್ರಯತ್ನವನ್ನು ಮಾಡುತ್ತಿರುತ್ತಾರಲ್ಲದೆ ಈ ಬಗ್ಗೆ ತಮ್ಮ ಬೋಧಾಮೃತವನ್ನೂ ಜನರಿಗೆ ಮೇಲಿಂದ ಮೇಲೆ ಪಾನವನ್ನು ಮಾಡಿಸುತ್ತಿರುವರು. ಅಂತೂ ಶ್ರೀಗಳೂ ಅಹಿಂಸಾಮೂರ್ತಿಯೇ ಆಗಿರುವರು.

## ಔದಾರ್ಯವು.

ಉದಾರ ಬುದ್ಧಿಯುಳ್ಳ ಶ್ರೀಗಳವರನ್ನು ಸರಿಗಟ್ಟುವ ಮತ್ತೊಂದು ವ್ಯಕ್ತಿಯೇ ಸಿಗುವದು ಅಪರೂಪ. ಮೊದಲು ಸ್ವಂತ ಖರ್ಚಿನಿಂದ ಕೆಲವು ಸಂಸ್ಥೆಗಳನ್ನು ನಡೆಯಿಸುತ್ತಿದ್ದರು. ಮತ್ತು ಪಂಡಿತ ವರ್ಗಕ್ಕೂ ಶಕ್ಯ ವಿದ್ದ ಮಟ್ಟಿಗೆ ಸಹಾಯವನ್ನು ಮಾಡುತ್ತಾರೆ. ಅಲ್ಲಲ್ಲಿಯ ಸಂಸ್ಥೆಗಳಿಗೂ ಸಹಾಯವನ್ನು ಮಾಡುತ್ತಿರುವರು. ಅಲಮಟ್ಟಿಯ ವೀರಶೈವ ವಿದ್ಯಾಲಯಕ್ಕೂ ೧೦೦೦ ರೂಪಾಯಿಗಳನ್ನು ದಾನ ಮಾಡಿದ್ದಾರೆ.

## ಧಾರ್ಮಿಕ ವಿದ್ಯಾಭಿವೃದ್ಧಿಯು.

ಯಾದಗಿರಿಯಲ್ಲಿ ಏರ್ಪಡಿಸಲ್ಪಟ್ಟ ಶ್ರೀ ಶಂಕರ ಕಾಲೇಜಿನ ಸ್ಥಾಪನೆಗೆ ಶ್ರೀಗಳವರ ಕೃಪಾದೃಷ್ಟಿಯೇ ಕಾರಣವಾಗಿರುತ್ತದೆಂದು ಹೇಳಬಹುದು. ಈ ಸಂಸ್ಥೆಗೆ ಧನಸಹಾಯ ಮಾಡಿದ ಧರ್ಮವೀರ ಶಂಕರಣ್ಣನವರು ಮೊದಲು ಅನ್ನಛತ್ರವನ್ನಿಡಬೇಕೆಂಬ ಸಂಕಲ್ಪವುಳ್ಳವರಾಗಿದ್ದರು. ಆಕಸ್ಮಾತ್ತಾಗಿ ಶ್ರೀಗಳವರು ಯಾದಗಿರಿಗೆ ದಯಮಾಡಿಸಿದಾಗ್ಗೆ ಧರ್ಮವೀರರು ತಮ್ಮ ಮನಸ್ಸಿನ ಸಂಕಲ್ಪವನ್ನು ಅರಿಕೆಮಾಡಿಕೊಳ್ಳಲು ಶ್ರೀಗಳವರು ವಿದ್ಯಾದಾನದ ಮಹತ್ವವನ್ನು ಅವರಿಗೆ ಬೋಧಿಸಿದರು. ಆಗ ವಿಚಾರಶೀಲರಾದ ಧರ್ಮವೀರ ಶಂಕರಣ್ಣನವರು ಶ್ರೀಗಳವರ ಮಾತಿಗೆ ಒಪ್ಪಿಗೆಯನ್ನು ಕೊಟ್ಟು ಕಾಲೇಜನ್ನು ಸ್ಥಾಪಿಸಿದರು. ಮತ್ತು ಈ ಫಂಡಿಗೆ ಶ್ರೀಗಳವರೇ ಆಜನ್ಮ ಪ್ರೆಸಿಡೆಂಟರು ಇರಬೇಕೆಂದು ತಮ್ಮ ದಾನಶಾಸನದಲ್ಲಿ ಬರೆಯಿಸಿರುವರಲ್ಲದೆ ತಮ್ಮ ಅವಸಾನಕಾಲದಲ್ಲಿಯೂ ಶ್ರೀಗಳವರನ್ನು ಕರೆಯಿಸಿ ಪುನಃ ಐವತ್ತು ಸಾವಿರ ರೂಪಾಯಿಗಳನ್ನು ದಾನ ಕೊಡುತ್ತೇನೆಂದು ವಾಗ್ದಾನ ಮಾಡಿದರು. ಇದರ ಮೇಲಿಂದ ಶ್ರೀಗಳವರ ವಿಷಯದಲ್ಲಿ ಧರ್ಮವೀರರ ಭಕ್ತಿಯು ಎಷ್ಟರಮಟ್ಟಿಗೆ ಇರಬಹುದೆಂಬುವದನ್ನು ವಾಚಕರೇ ಊಹಿಸಲಿ. ಹೀಗೆ ಶ್ರೀಗಳವರ ಆಶೀರ್ವಾದರೂಪದ ಫಲವೇ ಕಾಲೇಜವೆಂದು ಹೇಳಲಿಕ್ಕೆ ಸಂಶಯವೇ ಇರುವದಿಲ್ಲ. ಇಂತಹ ಮಹತ್ವದ ಕಾರ್ಯವನ್ನು ಶ್ರೀ ಶಾಂತವೀರ ಸ್ವಾಮಿಗಳವರು ಜರಗಿಸಿದ್ದಕ್ಕೆ ಇಡೀ ವೀರಶೈವ ಸಮಾಜವೇ ಇವರಿಗೆ ಋಣಿಯಾಗಿರುವದು.

## ಯಾದಗಿರಿಯಲ್ಲಿ ಮತ್ತೊಂದು ಧರ್ಮಸಂಸ್ಥೆಯ ಸ್ಥಾಪನೆ.

ಯಾದಗಿರಿಯ ಪ್ರಸಿದ್ಧ ಶ್ರೀಮಂತರಾದ ಲಿಂಗೇರಿ ಕೋನಪ್ಪನವರು ೪-೫ ವರ್ಷಗಳ ಕೆಳಗೆ ಶ್ರೀಗಳವರ ಅಪ್ಪಣೆಯಂತೆ ಒಂದು ಧರ್ಮ

ಸಂಸ್ಥೆಯನ್ನು ಸ್ಥಾಪಿಸಿ ಅದಕ್ಕೆ ಒಂದು ಲಕ್ಷ ರೂಪಾಯಿಗಳ ದಾನ ವನ್ನು ಮಾಡಬೇಕೆಂಬುವ ಉದ್ದೇಶ ಉಳ್ಳವರಾಗಿದ್ದರು. ಆದರೆ ತಾನೊಂದು ನೆನೆದರೆ ದೈವವು ಒಂದು ನೆನೆಯಿತು ಎಂಬುವಂತೆ, ಅಷ್ಟರೊಳಗೆ ಕೋನಪ್ಪನವರು ಶಿವಾಧೀನರಾದರು. ಇತ್ತ ಕೋನಪ್ಪನವರ ಅಣ್ಣಂದಿರಾದ ಸಿದ್ದಪ್ಪನವರು ಆ ಆಸ್ತಿಯು ತಮಗೆ ಸಿಗಬೇಕೆಂದು ಕೋರ್ಟಿನಲ್ಲಿ ದಾವೆಯನ್ನು ತಂದರು. ಆದರೆ ಕೋನಪ್ಪನವರು ಶಿವಾಧೀನರಾಗುವ ಕಾಲಕ್ಕೆ ತಮ್ಮ ಪುತ್ರಿಯೂ ಶ್ರೀಯುತ ರುದ್ರಪ್ಪ ಹೈಕೋರ್ಟು ವಕೀಲರ ಪತ್ನಿಯೂ ಆದ ನೀಲಮ್ಮನವರ ಹೆಸರಿನಲ್ಲಿ ಒಂದು ಮೃತ್ಯುಪತ್ರವನ್ನು ಮಾಡಿಸಿದ್ದರು. ಅಂತೂ ಉಭಯತರಲ್ಲಿ ನಾಲ್ಕು ವರುಷಗಳಿಂದ ಕೋರ್ಟಿನಲ್ಲಿ ವ್ಯಾಜ್ಯಯು ನಡೆಯುತ್ತ ಅವರು ಅಪಾರ ನಷ್ಟಕ್ಕೆ ಗುರಿಯಾಗಬೇಕಾಯಿತು. ಯಾದಗಿರಿಯ ಶಂಕರ ಕಾಲೇಜಿನಲ್ಲಿ ಶ್ರಾವಣದ ಪೂಜೆಗಾಗಿ ದಯಮಾಡಿಸಿದ ಶ್ರೀಗಳವರು ಶ್ರೀಯುತ ಸಿದ್ದಪ್ಪನವರನ್ನೂ, ರುದ್ರಪ್ಪನವರನ್ನೂ ತಮ್ಮ ಸನ್ನಿಧಿಗೆ ಕರೆಯಿಸಿ ಹೇಳಿದಂತೆ ಕೇಳುತ್ತೇವೆಂದು ಒಪ್ಪಿಗೆ ತೆಗೆದುಕೊಂಡು, ಒಂದು ಲಕ್ಷ ರೂಪಾಯಿಗಳ ದಾನವನ್ನು ಮಾಡಿಸಿ ಜಗಳದಿಂದ ಹಾಳಾಗುತ್ತಿದ್ದ ಎರಡು ಮನೆತನಗಳನ್ನು ಉಳಿಸಿದರು. ಇದು ಎಷ್ಟು ಮಹತ್ವದ ಕಾರ್ಯವೆಂದು ಹೇಳಬಹುದು! ಈ ಕಾರ್ಯವಾದರೂ, ಇದೇ ಮಾಘ ಮಾಸದಲ್ಲಿ ಅಗತಕ್ಕದ್ದಾಗಿದೆ. ಈಗಾಗಲೇ ಮಂದಿರವು ಸಿದ್ಧವಾಗಿದೆ. ಶ್ರೀಗಳವರು ಮಾಡಿದ ಅನೇಕ ಕಾರ್ಯಗಳಲ್ಲಿ ಇದೊಂದು ಘನತರವಾದ ಕಾರ್ಯವೇ ಸರಿ.

## ರಂಜೇರಿ ಶಿಕ್ಷಣಾಲಯ ಸ್ಥಾಪನೆ.

ಕಲ್ಯಾಣ ಪ್ರಾಂತದ ವೀರಶೈವ ಸಭೆಯೊಂದನ್ನು ಶ್ರೀಗಳವರು ಹೋದ ವರ್ಷದ ಮಾಘಮಾಸದಲ್ಲಿ ಹುಮನಾಬಾದಿನಲ್ಲಿ ನೆರವೇರಿಸಿದರು. ಆ ಪ್ರಾಂತದಲ್ಲಿ ಒಂದು ಶಿಕ್ಷಣಾಲಯವನ್ನು ಸ್ಥಾಪಿಸಬೇಕೆಂದು ಸಭೆಯಲ್ಲಿ ನಿರ್ಣಯ ಮಾಡಿಸಿದರು. ಅದರಂತೆ ಶ್ರೀಗಳವರು ವೀರಶೈವ ಸಮಾಜದಲ್ಲಿ ಪ್ರಸಿದ್ಧ ಶ್ರೀಮಂತರಾದ ರಂಜೇರಿಯ ಶೇಣೆಯವರಲ್ಲಿಗೆ ದಯಮಾಡಿಸಿ, ಶಾಲೆಯನ್ನು ಸ್ಥಾಪಿಸುವ ಉದ್ದೇಶವನ್ನು ಹೇಳಲಾಗಿ ಅವರು, ಉದಾರಚಿತ್ತರಾದ ಶ್ರೀಮಂತ ಮಡಿವಾಳಪ್ಪನವರು ಮತ್ತು ಕಲ್ಲಪ್ಪನವರು, ಶಂಕರಪ್ಪನವರು ಕೂಡಿ ೨೪ ಸಾವಿರ ರೂಪಾ

ಯಿಗಳನ್ನು ಕೊಡಲಿಕ್ಕೆ ಒಪ್ಪಿ ಅದರಂತೆ ದಾನಪತ್ರಗಳನ್ನು ಮಾಡಿರುತ್ತಾರೆ. ಈ ಸಂಸ್ಥೆಗೂ ಶ್ರೀ ಶಾಂತವೀರ ಸ್ವಾಮಿಗಳವರೇ ಅಧ್ಯಕ್ಷರಾಗಿದ್ದಾರೆ. ಈ ಸಂಸ್ಥೆಯು ಇದೇ ಕಾರ್ತಿಕಮಾಸದಲ್ಲಿ ಪ್ರಾರಂಭವಾಗತಕ್ಕದ್ದಿರುತ್ತದೆ.

## ಸೇಡಮ್ಮದ ಧರ್ಮಾದಾಯದ ಅಭಿವೃದ್ಧಿ.

ಸೇಡಮ್ ಗ್ರಾಮದ ಧರ್ಮಾದಾಯದ ಸಲುವಾಗಿ ವ್ಯಾಪಾರಿಗಳಲ್ಲಿ ಭಯಂಕರ ಜಗಳವು ಪ್ರಾರಂಭವಾಗಿತ್ತು. ಸ್ವಾಮಿಗಳವರು ಅಲ್ಲಿಗೆ ದಯಮಾಡಿಸಿ ಅದರ ವ್ಯವಸ್ಥೆಯನ್ನು ಮಾಡಿ ಅದರ ಉತ್ಪನ್ನದಿಂದ ಒಂದು ಧರ್ಮಕಾರ್ಯವನ್ನು ಮಾಡಿಸುವ ಪ್ರಯತ್ನದಲ್ಲಿರುತ್ತಾರೆ. ಇದರಿಂದ ಒಂದು ವರ್ಷಕ್ಕೆ ೫--೬ ಸಾವಿರ ರೂಪಾಯಿ ಉತ್ಪನ್ನವಿರುತ್ತದೆ.

## ಸ್ವಾಮಿಗಳವರು ಪ್ರೆಸಿಡೆಂಟರಿರುವ ಸಂಸ್ಥೆಗಳು.

೧. ನೈಜಾಂ ವೀರಶೈವ ಫಂಡು:--ಮೂಲಧನವು ರೂ. ೧೩,೦೦೦ ಇದರ ಆಫೀಸ ಯಾದಗಿರಿಯಲ್ಲಿದೆ.

೨. ಯಾದಗಿರಿಯ ಶಂಕರ ಸಂಸ್ಕೃತ ಕಾಲೇಜು:-- ಮೂಲ ಧನವು ರೂ. ೧,೭೦,೦೦೦

೩. ರಂಜೇರಿ ಖೇಣೆ ವಿದ್ಯಾಲಯವು:-- ರೂ. ೨೪,೦೦೦ ಕಾರ್ತಿಕ ಮಾಸದಲ್ಲಿ ಪ್ರಾರಂಭವಾಗುವದು. (ರಂಜೇರಿಯಲ್ಲಿ)

೪. ಯಾದಗಿರಿ ವೀರಶೈವ ಧರ್ಮಸಂಸ್ಥೆಯು:-- ೧,೦೦೦೦೦ ಮಾಘಮಾಸದಲ್ಲಿ ಪ್ರಾರಂಭವಾಗುವದದೆ.

೫. ಸೇಡಂ ಧರ್ಮಾದಾಯ ಫಂಡು:-- ಒಂದು ವರ್ಷದ ಉತ್ಪನ್ನವು ರೂ. ೫೦೦೦

೬. ಹಾಬಳ:--(ಜಿ॥ ಗುಲಬುರ್ಗಾ) ಕನ್ನಡ ಸ್ಕೂಲು ರೂ. ೨೫೦೦

## ಆಚರಣೆಯು.

ಶ್ರೀಗಳವರು ಈ ಪ್ರಕಾರ ಹಗಲಿರುಳು ಘನತರವಾದ ಸಮಾಜ ಸೇವೆಯನ್ನು ಮಾಡುತ್ತಿದ್ದರೂ ಅವರು ತಮ್ಮ ಆಚಾರದಲ್ಲಿ ಅತ್ಯಂತ ನಿಷ್ಠರಿರುತ್ತಾರೆ. ಪ್ರತಿದಿವಸ ಪೂಜೆಯು ಮೂರುಗಂಟೆ ನಡೆಯುತ್ತದೆ. ಈ ಮಠದ ಪೂರ್ವಜರು ಸಹಸ್ರ ದೀಪಾರ್ಚನೆಗಳಿಂದ ಪೂಜೆಯನ್ನು ಮಾಡುತ್ತ ಬಂದಿರುತ್ತಾರೆ. ಆ ಪದ್ಧತಿಯನ್ನು ಶ್ರೀಗಳವರು ಈಗಲೂ ಅನುಸರಿಸುತ್ತ ಬಂದಿರುತ್ತಾರೆ. ಶ್ರಾವಣದ ಪೂಜೆಯಂತೂ ವಿಶೇಷ

ವಾಗಿರುವದು. ಪ್ರಾತಃಕಾಲ ಹನ್ನೊಂದು ಗಂಟೆಗೆ ಪ್ರಾರಂಭವಾಗಿ ಸಾಯಂಕಾಲ ಆರುಗಂಟೆಗೆ ಮುಗಿಯುತ್ತದೆ. ಹೀಗೆಯೇ ಶ್ರೀಗಳು ತಮ್ಮ ಆಚರಣೆಯಲ್ಲಿ ಅತ್ಯಂತ ನಿಷ್ಠರಿರುತ್ತಾರೆ.

## ತೇಜೋಬಲವು.

ಶ್ರೀ ಶಾಂತವೀರ ಸ್ವಾಮಿಗಳವರು ತೇಜಶ್ಶಾಲಿಗಳಾಗಿರುವದರಿಂದಲೇ ಅವರಿಂದ ಅನೇಕ ಕಾರ್ಯಗಳಾಗಿರುತ್ತವೆ. ಇದಕ್ಕೆ ಬ್ರಹ್ಮಚರ್ಯದ ಬಲವೇ ಮುಖ್ಯ ಕಾರಣವು. ಎಣ್ಣೆಯು ಇಲ್ಲದ ದೀಪವು ಹೇಗೆ ಉರಿಯಲಾರದೋ, ಹಾಗೆಯೇ ನಿಸ್ತೇಜಸ್ಕರಿಂದ ಯಾವ ಕಾರ್ಯಗಳೂ ಆಗಲಾರವು. ಇವರು ತಮ್ಮ ಹೆಸರಿಗೆ ಸರಿಯಾಗಿ ಶಾಂತತಾಮೂರ್ತಿಗಳಾಗಿರುತ್ತಾರೆ. ಇಂತಹ ಮಹಿಮರು ವೀರಶೈವ ಸಮಾಜದಲ್ಲಿ ಉದಯರಾಗಿರುವದು ವೀರಶೈವ ಸಮಾಜದ ಭಾಗ್ಯೋದಯವೇ ಸರಿ. ಇವರಂತೆಯೇ ನಮ್ಮ ಸಮಾಜದ ಎಲ್ಲ ಸ್ವಾಮಿಗಳು ಸಮಾಜದ ಕಾರ್ಯವನ್ನು ಮಾಡಿದ್ದೇ ಆದರೆ ನಮ್ಮ ಸಮಾಜವು ಜಗತ್ತಿನಲ್ಲಿ ಸುಧಾರಿಸಿದ ಸಮಾಜಗಳಲ್ಲಿ ಒಂದಾಗಿ ಹೋಗಲಾರದೆ ಇರದು. ಆದರೆ ಪ್ರತಿಯೊಬ್ಬರಿಗೆ ಆ ಶಕ್ತಿಯು ಎಲ್ಲಿಂದ ತಾನೇ ಬರುವದು? ಏನೇ ಇರಲಿ. ನಿಜಾಮ ಪ್ರಾಂತಕ್ಕೆ ಈ ಸ್ವಾಮಿಗಳವರು ದಯಮಾಡಿಸಿದ ಮೇಲೆ ಇಲ್ಲಿಯ ವೀರಶೈವರಲ್ಲಿ ಒಂದು ತರಹದ ಕ್ರಾಂತಿಯು ಉತ್ಪನ್ನವಾಗಹತ್ತಿದೆ. ದೇವರು ಅವರಿಗೆ ದೀರ್ಘಾಯುಷ್ಯವನ್ನು ಕೊಟ್ಟು ಇವರ ಹಸ್ತದಿಂದ ಇದಕ್ಕಿಂತಲೂ ದೊಡ್ಡ ದೊಡ್ಡ ಕಾರ್ಯಗಳನ್ನು ಮಾಡಿಸಲೆಂದು ಸರ್ವರೂ ಪ್ರಾರ್ಥಿಸಬೇಕಾಗಿರುತ್ತದೆ. ಶ್ರೀಗಳವರು ಯಾವಾಗಲೂ ಹಸನ್ಮುಖಿಗಳೂ ಸಮಾಜಸೇವೆಯನ್ನು ಮಾಡಬೇಕೆಂಬ ಕುತೂಹಲವುಳ್ಳವರೂ, ಕಾರ್ಯದಕ್ಷರೂ, ಯಾವದಾದರೊಂದು ಕೆಲಸವನ್ನು ಮಾಡಬೇಕೆಂದು ಮನಸಿನಲ್ಲಿ ಬಂದರೆ ಅದನ್ನು ಮಾಡಲಿಕ್ಕೆ ಎಲ್ಲ ತರಹದ ಪ್ರಯತ್ನವನ್ನು ಮಾಡತಕ್ಕವರೂ ಇದ್ದಾರೆ. ಇಂತಹ ವರಚರಿತ್ರೆಯು ಉಳಿದವರಿಗೆ ಮಾರ್ಗದರ್ಶಕವಾಗಿರುತ್ತದೆ. ಇದನ್ನು ನಾವು ಇಲ್ಲಿ ಸಂಕ್ಷೇಪವಾಗಿ ವಿವರಿಸಿರುತ್ತೇವೆ. ಶ್ರೀಗಳವರಲ್ಲಿರತಕ್ಕ ಸಮಾಜಸೇವೆ ಎಂಬ ಗುಣವು ಅವರ ಚರಿತ್ರೆಯನ್ನೋದಿದ ಸರ್ವರಲ್ಲಿಯೂ ನೆಲೆಗೊಳ್ಳುವಂತೆ ದೇವರು ಮಾಡಲೆಂದು ನಾವು ಪ್ರಾರ್ಥಿಸಿ ಈ ಬರಹವನ್ನು ಮುಗಿಸುತ್ತೇವೆ.



# ಪೊತ್ತು.

( ಲೇಖಕ— ಈಶ್ವರ ಮಹಾರುದ್ರಪ್ಪ ಸಣಕಲ್ಲ. )

ದೊರಿತಾಗ ದೊರಕಿಸದೆ ಹೋದಾಗ ಹುಡುಕುತ್ತ
ಲಿರುವನಿತು ಜನರಿರುವರೀಯಿಳೆಯೊಳು!

'ಕದವ ತೆರೆಯಿರಿ ನೀವು ಕದವ ತೆರೆಯಿರಿ' ಯೆಂದು
ಒದರಿದನು ನಡುಗುತಿಹ ನುಡಿಯೊಳವನು
'ಮುದುಕ ನಾನಿರುತಿರುವೆ ಬಳಲಿ ಬೆಂಡಾಗಿರುವೆ
ಎದೆಯುದರಿ ಕಂಪಿಸುವ ಕಾರಣಿಲ್ಲ' ॥೧॥

ಮಲಗಿ ಹಾಸಿಗೆಯಲ್ಲಿ ನಿದ್ದೆಯನು ಮಾಡುತಿಹ
ಲಲಿತೆ ದನಿಯನು ಕೇಳಿ ಕಣ್ದೆರೆಯುತ
ಉಲುಹು ಮಾಡದೆ ತಾನು ಬಾಗಿಲಿಗೆ ನಡೆತಂದು
ನಿಲುತ ಕೇಳಿದಳವನ ಮೆಲುಮಾತನು ॥೨॥

'ತಿರುಗಿದೆನು ತಿರುಗಿದೆನು ಅಡವಿಯೊಳು ಪಥದಪ್ಪಿ
ಬಿರುಗಾಳಿ ಹೊಡತಕ್ಕೆ ಸಿಕ್ಕಿ ಬಿಕ್ಕಿ
ಕೊರಗುತಿಹೆ ಚಳಿಯಿಂದ ಮರಗುತಿಹೆ ಹಸಿವೆಯಿಂ
ಕರುಣದೋರಿರಿ ನೀವು ಪುಣ್ಯಾತ್ಮರೆ ॥೩॥

'ಸೋತು ತತ್ತರಿಸುವವು ಕಾಲುಗಳು ದಣಿವಿನಿಂ
ಮಾತಾಡಲೆನಗೀಗ ಶಕ್ತಿಯಿಲ್ಲ!
ಕಾತರನು ಕಂಗೆಟ್ಟು ಆಸರವ ಕೇಳುತಿಹೆ
ಪ್ರೀತಿಯಿಂ ಕಾಪಾಡಿರೆನ್ನ ನೀವು ॥೪॥

ಅಮ್ಮ ಒಳಗಾರಿಲ್ಲೆ? ಕೇಳಿಸದೆಯೀಸೊಲ್ಲು
ಸುಮ್ಮನೇಕಿರುತಿಹಿರಿ ಪೇಳ್ವುದೀಗ
ಒಮ್ಮೆಯಾದರು ನೀವು ಮೆಚ್ಚಿತ್ತು ತುತ್ತನ್ನ-
ವಂ ಮನವ ತಣಿಸುವದು ಬಳಲಿದವನ' ॥೫॥

ದ್ವಾರವನು ನೂಕಿದನು ಕನಿಕರದಿಯೊದರಿದನು
ಚಾರುಗಾತ್ರೆಯು ಕೇಳಿ ಹೆದರಿ ಬೆದರಿ

ತೋರದಲೆ ಹಂಚಿಕೆಯು ಹಾರಿಬಿದ್ದಳು ನೆಲಕೆ
ಯಾರಿಹರೋ ಅಯ್ಯೋ ನಟ್ಟಿರುಳಿನಲ್ಲಿ ॥೬॥

ಹಾಳುಗೋಡೆಯು ನೆಳಲಿನೊಳು ನಿಂತು ಭೂತಗಣ-
ವಾಲಿಸುತಲೀ ಸೊಲ್ಲನಣಕಿಸುವದು
ತೇಲುತ್ತ ಟೇಂವಕ್ಕಿಯೊಂದು ಬಾಂದಳದಲ್ಲಿ
ಜಾಲವನು ಹರಡುವದು ತನ್ನದನಿಯ ॥೭॥

' ನಿಂತಿಂತು ಬೇಸತ್ತು ಹೋಗಿರುವೆ ಏ ಅವ್ವ !
ಎಂತು ತಾಳಲಿ ನಾನು ಹಸಿವೆ ತೃಷೆಯು !
ಹಿಂತಿರುಗಲೇನವ್ವ ಆಶ್ರಯವು ಸಿಗದೇನು ? '
ಇಂತೆಂದು ಸಾಗಿದನು ನಿಡುಸುಯ್ಯುತ ॥೮॥

ಮುಗಿಲೊಳಗೆ ಮಿನುಗುತಿಹ ಉಡುಗಣವು ಮಿಡುಕಿದುದು
ನಗುತಿರುವ ತಿಂಗಳನು ಕಳೆಗುಂದಿದ
ಸೊಗಸಿನಿಂ ಸುಳಿಯುತಿಹ ಗಾಳಿ ನಿಡುಸುಯ್ಯಾಗಿ
ತಗಬಗೆಯ ಉಸುರಿನೊಳಗೇಕಾಯಿತು ॥೯॥

ಬೀಳುತ್ತ ಚಣಚಣಕೆ ಕೈಗೋಲ ಸಪ್ಪಳವು
ಕೇಳದಾಯಿತು ಕಡೆಗೆ ದೂರದಲ್ಲಿ
ಜೋಲಿ ಹೊಡೆಯುತ ಹೋಹ ಮುದುಕನಾಕಾರವನು
ಲೋಲಾಕ್ಷಿ ಮನದಲ್ಲಿ ತಾ ಕಟ್ಟುತ ॥೧೦॥

' ಬಲುಪಾಪಿ ಕಡುಪುಕ್ಕಿ ! ಬೆದರಿದೆನು ಮುದುಕನಿಗೆ !
ತಿಳಿಯಲಾರದೆ ಹೋದೆನವನ ಸೊಲ್ಲ !
ಬಳರು ಮೋಸವ ಮಾಳ್ಪರೆಂದು ನಾ ಬಗೆಯುತ್ತೆ
ಕಳಕೊಂಡೆ ಮುತ್ತಿನಂತಹ ಹೊತ್ತನು ॥೧೧॥

, ದೊರೆತಾಗ ದೊರಕಿಸದೆ ಹೋದಾಗ ಹುಡುಕುತ್ತ
ಲಿರುವೆನಿತು ಜನರಿರುವರೀಯಿಳೆಯೊಳು
ಮರುಗುತ್ತ ಕುಳಿತರೂ ತೆರಳಿರುವ ಮುದುಕ ತಾ
ತಿರುಗಿ ಬೇಡಬ್ಬರುವನೇನು ಇನ್ನು ? ॥೧೨॥



# ಶ್ರೀರೇಣುಕಕ್ಷೇತ್ರ ಕೋಲಸಪೇಟೆ.

(ಲೇಖಕ:— ಎಚ್. ಜಿ. ಸಿದ್ಧಲಿಂಗಯ್ಯಾ ಹಾರೋಹಳ್ಳಿ ಜಿ॥ ಬೆಂಗಳೂರು.)



ಕಳೆದ ಶಿವಾನುಭವದ ಸಂಚಿಕೆಯಲ್ಲಿ ವೇ॥ ಶಿವಮೂರ್ತಿ ಶಾಸ್ತ್ರಿಗಳವರು ರೇಣುಕ ಕ್ಷೇತ್ರಗಳ ವಿಚಾರವಾಗಿ ಬರೆದು ಅದರಲ್ಲಿ ಕೋಲಸಪೇಟೆ ರೇಣುಕಗಿರಿಯನ್ನೂ ಕಾಣಿಸಿರುವದು ಸರಿಯಷ್ಟೆ. ಈ ಕ್ಷೇತ್ರವು ನನಗೆ ಅತ್ಯಂತ ಸಮೀಪದಲ್ಲಿರುವುದರಿಂದಲೂ, ನಾನು ಪ್ರತಿವರ್ಷವೂ ಅಲ್ಲಿಗೆ ಹೋಗುತ್ತಿರುವುದರಿಂದಲೂ ಅಲ್ಲಿಯ ಸಂಗತಿಗಳನ್ನು ಸಂಕ್ಷೇಪವಾಗಿ ಶಿವಾನುಭವದ ವಾಚಕರ ಮುಂದಿಡಲು ಆಶಿಸುತ್ತೇನೆ.

ಈ ಕ್ಷೇತ್ರವು ಬೆಂಗಳೂರು ಡಿ॥ ಕೋಲಸ್ಪೇಟೆ ರೇಲ್ವೆ ಸ್ಟೇಶನ್ನಿಗೆ ಆರು ಮೈಲು ದೂರದಲ್ಲಿರುತ್ತದೆ. ಕೋಲಸ್ಪೇಟೆಯಿಂದ ಮೋಟಾರ ಸರ್ವೀಸು ಸಹ ಇರುತ್ತದೆ.

## ಕ್ಷೇತ್ರದ ವರ್ಣನೆ.

ಇದು ಶ್ರೀರೇಣುಕರು ಶಿವಯೋಗ ಸಿದ್ಧಿಗಾಗಿ ತಪಸನ್ನಾಚರಿಸಿದ ಸ್ಥಳವಾಗಿದೆ. ರೇಣುಕರ ದೇವಸ್ಥಾನವು ಬೆಟ್ಟದ ಮೇಲ್ಭಾಗದ ಒಂದು ಪಕ್ಕದ ಗವಿಯಲ್ಲಿದೆ. ಈ ಬೆಟ್ಟದ ಕೆಳಭಾಗದ ಅರ್ಧಕ್ಕೆ ಭೀಮೇಶಾದ್ರಿ ಎಂದೂ ಮೇಲ್ಭಾಗಕ್ಕೆ ರೇಣುಕಗಿರಿ ಎಂದೂ ಹೇಳುವರು. ಬೆಟ್ಟದ ಮೇಲ್ಭಾಗದಲ್ಲಿ ಬಂಡೆಯ ಮೇಲೆ ಸ್ವಭಾವ ಸಿದ್ಧವಾದ ನೀರಿನ ಸರೋವರವಿದೆ. ಇದನ್ನು ಸೊಣೆ ಎಂದು ಕರೆಯುತ್ತಾರೆ. ಇದರಲ್ಲಿ ಯಾವಾಗಲೂ ನೀರು ಕಡಿಮೆಯಾಗುವದಿಲ್ಲ. ಮತ್ತು ನಿರ್ಮಲವಾಗಿಯೂ, ಆಳವಾಗಿಯೂ, ತಂಪಾಗಿಯೂ ಇದೆ. ಬೆಟ್ಟವು ಬಹಳ ಎತ್ತರವಾಗಿಯೂ, ಗಿಡಮರಗಳಿಲ್ಲದೆ ಒಂದೇ ದೊಡ್ಡ ಬಂಡೆಯಾಗಿ ಲಿಂಗಾಕಾರವಾಗಿಯೂ ಇದೆ. ಬೆಟ್ಟದ ಮೇಲ್ಭಾಗದಲ್ಲಿಂದ ಸುತ್ತಲೂ ನೋಡಿದರೆ ಮನೋಹರವಾಗಿ ಸುತ್ತಲೂ ಕಂಗೊಳಿಸುತ್ತಿರುವ ಸೃಷ್ಟಿಸೌಂದರ್ಯವೂ, ತಂಪಾದ ಹವೆಯೂ ನೋಡುವವರನ್ನು ಮುಗ್ಧರನ್ನಾಗಿ ಮಾಡುತ್ತದೆ. ಮೇಲ್ಕಂಡ ಸೊಣೆಯಲ್ಲಿ ಸ್ನಾನ ಮಾಡಿ ಭಸ್ಮ, ರುದ್ರಾಕ್ಷಿಗಳಿಂದಲಂಕೃತನಾಗಿ ಶಿವಪೂಜೆಗೆ ಕುಳಿತನೆಂದರೆ ಎಂತಹವನಿಗಾದರೂ ಸಮಾಧಿ ಬರುವಷ್ಟು ಆನಂದವಾಗುತ್ತದೆ. ಈ ಸೊಣೆಯಲ್ಲಿ ಸ್ನಾನ ಮಾಡುವುದರಿಂದ ಉಂಟಾಗುವ ಮನಸ್ಸಿನ ನೈರ್ಮಲ್ಯ ಮತ್ತು ಸಂತೋಷವು ಗಂಗಾಸ್ನಾನಕ್ಕಿಂತಲೂ ಹೆಚ್ಚಿನದೇ ಎನಿಸುತ್ತದೆ.

ಬೆಟ್ಟದ ಮೇಲ್ಭಾಗದ ಕೊನೆಯಲ್ಲಿ ಸಿದ್ಧರಾಮೇಶ್ವರ ಸ್ವಾಮಿ, ರುದ್ರಮುನೇಶ್ವರಸ್ವಾಮಿಯವರ ಎರಡು ದೇವಸ್ಥಾನಗಳಿವೆ. ಭೀಮೇಶಾದ್ರಿಯಲ್ಲಿ ಭೀಮೇಶ್ವರಸ್ವಾಮಿ, ರುದ್ರದೇವರು ವಗ್ಯೆರೆ ದೇವಸ್ಥಾನಗಳೂ, ತಳಭಾಗದವರೆಗೆ ವಿಘ್ನೇಶ್ವರ, ಬಸವೇಶ್ವರಸ್ವಾಮಿಯವರ ದೇವಸ್ಥಾನಗಳೂ ಬೆಟ್ಟದ ಮುಂಭಾಗದ ಮೈದಾನದಲ್ಲಿ ಶ್ರೀರೇವಾಂಬೆಯವರ ದೇವಸ್ಥಾನವೂ ಶ್ರೀಗುರುಮಠವೂ ಇವೆ. ಸುತ್ತುಮುತ್ತಲೂ ಎರಡು ಮೈಲುಗಳ ಅಂತರದಲ್ಲಿ ಊರುಗಳಿವೆ. ಆದರೂ ಪ್ರತಿದಿನವೂ ಪರಸ್ಥಳದ ಅನೇಕ ಜನರಿರುತ್ತಾರೆ. ಮಠದಲ್ಲಿ ದಿನವೂ ದಾಸೋಹ ನಡೆಯುತ್ತಿರುತ್ತದೆ. ಮೊದಲಿನ ಸ್ವಾಮಿಗಳು ಶಿವಾಧೀನರಾದ್ದರಿಂದ ಬೇರೆ ವಟುವಿಗೆ ಪಟ್ಟಗಟ್ಟಿದ್ದಾರೆ. ಅವರು ಬೆಂಗಳೂರು ಸಂಸ್ಕೃತ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿರುವುದರಿಂದ ಇವರ ಸಂಬಂಧಿಕರಾದ ಚನವೀರಸ್ವಾಮಿಗಳೆಂಬುವರು ಬಹಳ ದಕ್ಷತೆಯಿಂದ ಮಠದ ಕಾರ್ಯ ಭಾಗಗಳನ್ನು ನಡೆಸುತ್ತಿದ್ದಾರೆ. ಇಲ್ಲಿಯ ಎಲ್ಲಾ ಅರ್ಚಕರೂ ಪಾರುಪತ್ತೆಗಾರರೂ ವೀರಶೈವರಾಗಿದ್ದಾರೆ. ಇದು ಕಾಡುಪ್ರದೇಶವಾದರೂ ದುಷ್ಟಮೃಗಗಳ ಬಾಧೆ ಏನೂ ಇಲ್ಲ.

## ಅಕ್ಕಪಕ್ಕಗಳ ಸ್ಥಳ ಪರಿಚಯ.

ಈ ಬೆಟ್ಟದ ಪಕ್ಕದಲ್ಲಿ ಮಹದೇಶ್ವರಸ್ವಾಮಿಯವರ ಬೆಟ್ಟವೂ ೪-೫ ಮೈಲು ದೂರದಲ್ಲಿ ಮೌನೇಶ್ವರ ಬೆಟ್ಟವೂ ಇವೆ. ಈ ಮೌನೇಶ್ವರ ಬೆಟ್ಟವು ಶ್ರೀರೇಣುಕರು ಅಗಸ್ತ್ಯರಿಗೆ ಶಿವಸಿದ್ಧಾಂತೋಪದೇಶ ಮಾಡಿದ ಸ್ಥಳವಾಗಿದೆ. ಇಲ್ಲಿ ದೇವಸ್ಥಾನವೂ ಶಿವಲಿಂಗವೂ ಇವೆ. ಈ ಬೆಟ್ಟದ ಮೇಲ್ಭಾಗದಲ್ಲಿ ರಾತ್ರಿ ಕಾಲದಲ್ಲಿ ಯಾರೂ ವಾಸಿಸುವದಿಲ್ಲ. ಇಲ್ಲಿ ರಾತ್ರಿ ಕಾಲದಲ್ಲಿ ಅನೇಕ ದಿವಸಗಳ ಪ್ರಕಾಶವೂ, ವೇದಘೋಷವೂ ಆಗಾಗ್ಗೆ ಆಗುತ್ತಿರುವುದೆಂದು ಹೇಳುತ್ತಾರೆ.

## ರಥೋತ್ಸವ ಮತ್ತು ಕ್ಷೇತ್ರ ಮಹತ್ವ.

ಪ್ರತಿವರ್ಷವೂ ವೈಶಾಖ ಶುದ್ಧ ಪೂರ್ಣಿಮಾದಿವಸ ಶ್ರೀರೇಣುಕರ ಬೆಟ್ಟದ ಮುಂಭಾಗದಲ್ಲಿ ರಥೋತ್ಸವವಾಗುತ್ತದೆ. ರಥೋತ್ಸವಕ್ಕೆ ೩-೪ ದಿನಗಳ ಮುಂದಿನಿಂದಲೂ ವೇದೋಕ್ತವಾಗಿ ವೀರಶೈವ ಆಗಮೋಕರಿಂದ ಗಿರಿಜಾಕಲ್ಯಾಣವೂ ರಥೋತ್ಸವದ ದಿನ ಬೆಳಿಗ್ಗೆ ಶ್ರೀಬಸವೇಶ್ವರ ಸ್ವಾಮಿಯ

ಅಗ್ನಿಗುಂಡವೂ ನಡೆಸಲ್ಪಡುತ್ತದೆ. ಈ ಕಾಲದಲ್ಲಿ ಅನೇಕ ಅಂಗಡಿಗಳೂ ಅನೇಕ ಕಡೆಗಳಿಂದ ಭಕ್ತರೂ ಸ್ವಾಮಿಯ ಸೇವೆಗೆ ಬರುತ್ತಾರೆ. ಬ್ರಾಹ್ಮಣರಲ್ಲಿಯೂ ಅನೇಕರು ಭಕ್ತರಿದ್ದಾರೆ. ಸುಮಾರು ೨೦-೨೫ ವೀರಶೈವರ ಮತ್ತು ೧೦-೧೨ ಇತರರ ಅನ್ನಸತ್ರಗಳೂ ಜಾತ್ರೆ ಕಾಲದಲ್ಲಿ ಭಕ್ತಾದಿಗಳಿಂದ ನಡೆಸಲ್ಪಡುತ್ತವೆ. ಗ್ರಹಬಾಧೆ ಮೊದಲಾದ ಅನೇಕ ರೋಗಗಳು ಸ್ವಾಮಿಯ ಸೇವೆಯಿಂದ ನಿವಾರಣೆಯಾಗುತ್ತವೆ.

## ಸ್ಥಳ ಪುರಾಣ.

ಇಲ್ಲಿಯ ಸ್ಥಳಪುರಾಣವನ್ನು ಈ ರೀತಿ ಹೇಳುತ್ತಾರೆ. ಶ್ರೀರೇಣುಕರು ಮಲಯಾಚಲ ಬೆಟ್ಟದಲ್ಲಿ ಅಗಸ್ತ್ಯರಿಗೆ ಶಿವಸಿದ್ಧಾಂತವನ್ನುಪದೇಶಿಸಿದ ನಂತರ ತಮ್ಮ ಶಿವಯೋಗಕ್ಕಾಗಿ ಸ್ಥಳವನ್ನು ಹುಡುಕುತ್ತ ಶ್ರೀರೇವಾಂಬೆ ಮೊದಲಾದವರೊಡನೆ ಈ ಬೆಟ್ಟದ ಬಳಿಗೆ ಬಂದು ಮೇಲಕ್ಕೆ ಹೋಗಿ ತಾವು ಸ್ಥಳವನ್ನು ನೋಡಿಕೊಂಡು ಬರುವ ವರೆಗೂ ಇಲ್ಲಿಯೇ ಇರಬೇಕೆಂದು ರೇವಾಂಬೆಯವರಿಗೆ ತಿಳಿಸಿ ತಾವು ಮೇಲ್ಭಾಗಕ್ಕೆ ಹೋಗಿ ಅಲ್ಲಿಯ ಮನೋಹರತೆಯನ್ನು ನೋಡಿ ರೇವಾಂಬೆಯವರನ್ನು ಸಹ ಮರೆತು, ಶಿವಯೋಗದಲ್ಲಿ ಕುಳಿತುಬಿಟ್ಟರು. ಕೆಲವು ದಿನಗಳಲ್ಲಿ ಓರ್ವ ಬೇಡನು ಉಡವೆಂಬ ಒಂದು ಪ್ರಾಣಿಯನ್ನು ಹಿಡಿಯಲು ಓಡಿಸಿಕೊಂಡು ಹೋಗುವಲ್ಲಿ ಅದು ಬೆಟ್ಟದ ಮೇಲ್ಭಾಗಕ್ಕೆ ಹೋಗುತ್ತ, ಹೋಗುತ್ತ ಶ್ರೀರೇಣುಕರು ಶಿವಯೋಗದಲ್ಲಿರುವ ಸ್ಥಳಕ್ಕೆ ಹೋಗಿ ಪ್ರಾಣದಾಶೆಯಿಂದ ಸ್ವಾಮಿಯವರು ಕುಳಿತಿದ್ದ ಪೀಠದಡಿಯಲ್ಲಿ ಹೊಕ್ಕಿಕೊಂಡಿತು. ಅದನ್ನು ಹಿಂಬಾಲಿಸಿ ಹೋದ ಬೇಡನು ಇವರನ್ನು ಕಂಡು ನಮಸ್ಕಾರ ಮಾಡಲಾಗಿ, ಈ ಬೇಡನನ್ನು ಸ್ವಾಮಿಯವರು ನೋಡಿ ಇನ್ನು ನಾವಿಲ್ಲಿರುವುದನ್ನು ಕಂಡು ಜನರು ಬರುವುದು ಹೆಚ್ಚಾದರೆ ನಮ್ಮ ಶಿವಯೋಗಕ್ಕೆ ತೊಂದರೆಯಾಗಬಹುದೆಂದು ಬೇಡನಿಗೆ ಯಥೇಚ್ಛ ದ್ರವ್ಯವನ್ನು ಕೊಟ್ಟು ನಾವಿಲ್ಲಿರುವ ವಿಷಯವನ್ನು ಯಾರಿಗೂ ತಿಳಿಸಲಾಗದು. ಹೀಗೇನಾದರೂ ನೀನು ಯಾರ ಸಂಗಡಲಾದರೂ ಹೇಳಿದರೆ ನಿನ್ನ ತಲೆಯು ಸಹಸ್ರ ಹೋಳುಗಳಾಗಲೆಂದು ಹೇಳಿಕಳುಹಿಸಿದರು. ಆ ಬೇಡನು ಮನೆಗೆ ಬಂದು ತನ್ನ ಸತಿಯಳ ಕೈಯಲ್ಲಿ ಆ ದ್ರವ್ಯವನ್ನೀಯಲು ಆಕೆಯು ಇಷ್ಟೊಂದು ದ್ರವ್ಯವನ್ನೆಲ್ಲಿಂದ ತಂದಿರೆಂದು ಕೇಳಿದಳು. ಅದಕ್ಕೆ ಆ ಬೇಡನು ಯಾವ

ಉತ್ತರವನ್ನೂ ಕೊಡದೆ ಸುಮ್ಮನಿದ್ದನು. ಆಕೆಯ ನಿರ್ಬಂಧವು ಹೆಚ್ಚಾಯಿತು. ಕೊನೆಗೆ ನಿರ್ವಾಹವಿಲ್ಲದೆ ಹೇಳಿಬಿಟ್ಟನು. ಅವನ ತಲೆಯು ಕೂಡಲೆ ಸಿಡಿದು ಹೋಳುಗಳಾಯಿತು. ಈ ವಿಷಯವನ್ನು ಅವನ ಹೆಂಡತಿಯು ತೆಂಗಿನಕಲ್ ಧೊರೆಯಾದ ಚಾಮರಾಜೇಂದ್ರನಲ್ಲಿ ಹೇಳಲು ಆತನು ಬಹಳ ಸತ್ಯವಂತನಾಗಿದ್ದುದರಿಂದ ತನ್ನ ಕುದುರೆಯ ಮೇಲೆ ಕುಳಿತುಕೊಂಡೇ ಬೆಟ್ಟದ ಮೇಲಕ್ಕೆ ಹೋಗಿ ಸ್ವಾಮಿಯವರನ್ನು ನೋಡಿ ನಮಸ್ಕಾರ ಮಾಡಿದನು. ಸ್ವಾಮಿಯವರು ಈತನನ್ನು ನೋಡಿ ಈತನ ಭಕ್ತಿಗೆ ಮೆಚ್ಚಿ ಅನುಗ್ರಹಿಸಿ ಅದೃಶ್ಯರಾದರು. ಚಾಮರಾಜೇಂದ್ರನು ದೇವಸ್ಥಾನವನ್ನೂ ಬೆಟ್ಟಕ್ಕೆ ಮೆಟ್ಟಲುಗಳನ್ನೂ ಮಾಡಿಸಿದನು.

ಈಗಲೂ ಅಲ್ಲಿ ಬೆಟ್ಟಕ್ಕೆ ಹತ್ತುವ ಪ್ರಥಮದಲ್ಲಿಯೇ ಚಾಮರಾಜೇಂದ್ರನ ವಿಗ್ರಹವನ್ನು ಬಂಡೆಯ ಮೇಲೆ ಕೆತ್ತಿರುತ್ತಾರೆ. ಇದಕ್ಕೆ ಪೂಜೆ ಸಹ ನಡೆಯುತ್ತದೆ. ಈತನು ಓರ್ವ ವೀರಶೈವ ರಾಜನಾಗಿರಬಹುದೆಂದು ಕಾಣುತ್ತದೆ. ಚಾಮರಾಜೇಂದ್ರನು ಹತ್ತಿಸಿದ ಕುದುರೆಯ ಪಾದದ ಗುರ್ತುಗಳು ಮೇಲ್ಭಾಗದ ವರೆಗೂ ಬಂಡೆಯ ಮೇಲೆ ಕೆತ್ತಿರುವಂತೆ ಕಾಣುತ್ತವೆ. ಶ್ರೀ ರೇಣುಕರ ಪೀಠದಡಿಯಲ್ಲಿ ಉಡವೆಂಬ ಪ್ರಾಣಿಯು ಕೆತ್ತಲ್ಪಟ್ಟಿದೆ.

## ಶ್ಲಾಘ್ಯವಾದ ಕಾರ್ಯಗಳು.

ಈಚೆಗೆ ಚಿವರಕಲ್ ಸ್ವಾಮಿಗಳೆಂಬುವರು ಬೆಟ್ಟವು ಕಡಿದಾಗಿರುವುದರಿಂದ ಹಿಡಿದುಕೊಂಡು ಮೇಲಕ್ಕೆ ಹೋಗಲು ಕಬ್ಬಿಣದ ಕಂಬಿಗಳನ್ನು ಹಾಕಿಸಿದ್ದಾರೆ. ಈಚೆಗೆ ಸರಕಾರದವರು ಹಿಂದೆ ಇದ್ದ ಮೆಟ್ಟಲುಗಳನ್ನು ಸ್ವಲ್ಪ ದೊಡ್ಡದಾಗಿ ಮಾಡಿಸಿ ಅಪಾಯ ಸ್ಥಳಗಳಲ್ಲಿ ಎರಡು ಕಡೆಯೂ ಕಂಬಿಗಳನ್ನು ಹಾಕಿಸಿರುತ್ತಾರೆ. ಇವರೆಲ್ಲರೂ ಭಕ್ತಾದಿಗಳ ಚಿರಕೃತಜ್ಞತೆಗೆ ಪಾತ್ರರು.

ಶ್ರೀ ಶಿವಮೂರ್ತಿ ಶಾಸ್ತ್ರಿಗಳವರು ತಾವು ಹೋದಕಡೆಗಳಲ್ಲೆಲ್ಲ ಅನೇಕ ವಿಷಯಗಳನ್ನು ಸಂಗ್ರಹಿಸಿ ಲೇಖನಗಳನ್ನು ಬರೆಯುತ್ತಾರೆ. ಅಂತಹ ಲೇಖಗಳನ್ನು ಬರೆಯಲು ಅನೇಕರಿಗೆ ಮಾರ್ಗದರ್ಶಕರಾಗಿ ಸಮಾಜಕ್ಕೆ ಉಪಕಾರ ಮಾಡುತ್ತಿರುವುದಕ್ಕಾಗಿ ಅವರನ್ನು ವಂದಿಸಿ ಈ ಲೇಖವನ್ನು ವಿರಮಿಸುತ್ತೇನೆ.



# ಸ್ಫುಟ ವಿಷಯಗಳು.

**ಹರಳೀ ವ್ಯಾಜ್ಯದ ನಿರ್ಣಯವು**— ಈ ವ್ಯಾಜ್ಯದ ನಿರ್ಣಯವನ್ನು ನಿಜಾಮ ಸರಕಾರದವರು ವೀರಶೈವರ ಪರವಾಗಿ ಮಾಡಿದ್ದು ಪ್ರಸಿದ್ಧವಾಗಿರುತ್ತದೆ. ಈ ವ್ಯಾಜ್ಯವು ಬಹುಕಾಲದ ವರೆಗೂ ನಡೆದು ಕಡೆಗೆ ಇದರ ಪರ್ಯವಸಾನವು ವೀರಶೈವರ ಪರವಾಗಿ ಆದದ್ದು ಸಮಾಧಾನಕರವಾಗಿರುತ್ತದೆ. ಈ ವ್ಯಾಜ್ಯವು ನಡೆದ ಕಾಲದಲ್ಲಿ ಶ್ರೀ ಹಾನಗಲ್ಲ ಕುಮಾರಸ್ವಾಮಿಗಳೂ, ಶ್ರೀ ಗುರುಮಠಕಲ್ಲ ಸ್ವಾಮಿಗಳೂ, ಶ್ರೀಜಗದಾಚಾರ್ಯ ವಿರೂಪಾಕ್ಷ ಒಡೆಯರರೂ ಅಲ್ಲದೆ ಅನೇಕ ಶಾಸ್ತ್ರಿಗಳೂ, ಪಂಡಿತರೂ ಒತ್ತಟ್ಟಿಗೆ ನೆರೆದು ಪರಸ್ಪರ ಸಹಾಯಕರಾಗಿ ವರ್ತಿಸಿ ಕಡೆಗೆ ಈ ವ್ಯಾಜ್ಯದಲ್ಲಿ ಯಶಸ್ಸನ್ನು ದೊರಕಿಸಿದ್ದು ಅಭಿನಂದನೀಯವಾಗಿರುತ್ತದೆ. ಈ ವ್ಯಾಜ್ಯದಲ್ಲಿ ಅಧಿಕಾರಿಗಳು ಮಾಡಿದ ಕೊನೆಯ ನಿರ್ಣಯವನ್ನು ನಾವು ದೊರಕಿಸಲು ಪ್ರಯತ್ನಿಸುತ್ತಿದ್ದು, ಅದು ನಮ್ಮ ಕೈಗೆ ಬಂದೊಡನೆಯೇ ಅದನ್ನು ಶಿವಾನುಭವದ ವಾಚಕರ ದೃಷ್ಟಿಗೆ ಇಡಲು ಇಚ್ಛಿಸಿದ್ದೇವೆ.

ಈ ಮೇರೆಗೆ ಈ ವಿಷಯವನ್ನು ಕುರಿತು ನಾವು ಸಮಾಧಾನ ತಾಳುತ್ತಿದ್ದರೂ ಈ ಕಾಲಕ್ಕೆ ಕಂಡು ಬಂದ ನ್ಯೂನತೆಗಳನ್ನು ದೂರ ಮಾಡುವದು ಅವಶ್ಯವೆಂದು ನಮಗೆ ತೋರುತ್ತದೆ. ಅವುಗಳಲ್ಲಿ ಮುಖ್ಯವಾದುದಾವುದೆಂದರೆ ಮತತತ್ವ ವಿಚಾರಗಳಲ್ಲಿ ವೀರಶೈವ ಪಂಡಿತರಲ್ಲಿ ಕಂಡುಬರುವ ಅನೈಕ್ಯತೆಯೇ ಇರುತ್ತದೆ. ಈ ಸಂಗತಿಯು ಬನವಾಸಿ ಮಧುಕೇಶ್ವರ ದೇವಾಲಯದ ವ್ಯಾಜ್ಯದಲ್ಲಿಯೂ ತೋರಿ ಬಂದಿತು. ಈ ಸ್ಥಿತಿಯು ಅತ್ಯಂತ ಅಸಮಾಧಾನಕರವಾದುದೆಂದು ಹೇಳಲಿಕ್ಕೆ ಏನೂ ಪ್ರತ್ಯವಾಯವಿಲ್ಲ. ವೀರಶೈವ ಧರ್ಮವು ಯಾವ ಪರಂಪರೆಗೆ ಸೇರಿದಂಥಾದ್ದು, ಅದಕ್ಕೂ ಇತರ ಮತಗಳಿಗೂ ಇರುವ ಭಿನ್ನತೆಗಳಾವವು, ಈ ಭಿನ್ನತೆಗಳು ಉಂಟಾಗಲು, ಕಾರಣವೇನು, ವೀರಶೈವರಲ್ಲಿ ಕಂಡು ಬರುವ ಆಚರಣೆಗಳ ಸ್ವರೂಪವೇನು, ಆಶ್ರಮಗಳೂ, ವರ್ಣಗಳೂ, ವೀರಶೈವರಲ್ಲಿ ಯಾವ ಸ್ವರೂಪವನ್ನು ಹೊಂದಿವೆ, ಮತದ ಉಗಮವು ಹೇಗೆ, ಇವೇ ಮೊದಲಾದ ವಿಷಯಗಳ ಬಗ್ಗೆ ವಿದ್ವಜ್ಜನರಲ್ಲಿ ಏಕವಾಕ್ಯತೆಯು ಇರುವದು ಬಹಳ ಅವಶ್ಯವಿದ್ದು, ಈಗ ಹೀಗಿರದೆ ಈ ಬಗ್ಗೆ ಭಿನ್ನಾಭಿಪ್ರಾಯಗಳೂ, ವಿರೋಧ ಮತಗಳೂ ಉಂಟಾಗಿರುತ್ತವೆ. ಇದರಿಂದ ಮತದ ವರ್ಚಸ್ಸಿಗೂ

ಮಹತ್ವಕ್ಕೂ ಕುಂದು ಬರದೆ ಇರಲಾರದು. ಈ ಸ್ಥಿತಿಯು ಮೂಲಕ ಇಂಥ ವ್ಯಾಜ್ಯಗಳು ಉತ್ಪನ್ನವಾದಾಗ್ಗೆ ಅನಿಶ್ಚಯತ್ವವು ಉಂಟಾಗಿ ಇಡೀ ಸಮಾಜವೆಲ್ಲ ಸಾರ್ವಜನಿಕ ರೀತಿಯಿಂದ ಪರಮತೀಯರ ಅವಹೇಲನೆಗೆ ಪ್ರಾಪ್ತವಾಗುವ ಪ್ರಸಂಗವು ಒದಗಿ ಬರುತ್ತದೆ. ಈ ದುಃಸ್ಥಿತಿಯನ್ನು ದೂರ ಮಾಡುವ ಪ್ರಯತ್ನಕ್ಕೆ ವೀರಶೈವ ಸಮಾಜವು ಕೂಡಲೆ ಪ್ರವರ್ತಿಸುವದು ಅವಶ್ಯವಿದೆಂದು ನಮಗೆ ತೋರುತ್ತದೆ. ವೀರಶೈವ ಧರ್ಮವು ಅತ್ಯಂತ ಮಹತ್ವವಾದದ್ದೆಂಬದೆನೋ ನಿಜವು. ಆದರೆ ಅದರ ತತ್ವಗಳನ್ನು ಕಂಡು ಹಿಡಿದು ಸಾಂಪ್ರತ ಪದ್ಧತಿಯಂತೆ ಅವುಗಳ ಬಗ್ಗೆ ಆಧಾರ ಗ್ರಂಥಗಳನ್ನು ಬರೆಯಿಸುವ ಕಾರ್ಯವಾವುದೂ ಆಗಿಲ್ಲ. ಆದ್ದರಿಂದ ಪರಳಿ ಮತ್ತು ಬನವಾಸಿ ಪ್ರಕರಣಗಳಂಥ ವ್ಯಾಜ್ಯಗಳಲ್ಲಿ ವೀರಶೈವ ಸಮಾಜವು ಬಹಳ ಪೇಚಾಡುವ ಪ್ರಸಂಗವು ಉಂಟಾಗುತ್ತದೆ.

ಆದ್ದರಿಂದ ಈ ವಿಷಯದಲ್ಲಿ ನಾವು ಮಾಡತಕ್ಕ ಸೂಚನೆ ಏನಂದರೆ, ವೀರಶೈವ ಸಮಾಜದ ವಿದ್ವಜ್ಜನರೆಲ್ಲರು ಆಗಿಂದಾಗ್ಗೆ ಒತ್ತಟ್ಟಿಗೆ ಸೇರಿ ಮತಭೇದವಿದ್ದ ವಿಷಯಗಳ ಬಗ್ಗೆ ಚರ್ಚೆ ಮಾಡತಕ್ಕದ್ದು. ಮತ್ತು ಧರ್ಮದ ಮೂಲತತ್ವಗಳನ್ನು ದೃಢಪಡಿಸತಕ್ಕದ್ದು. ಇದು ಅಶಕ್ಯವೆಂದು ನಾವು ತಿಳಿಯಲಾರೆವು. ಯಾಕಂದರೆ ಪರಳಿ ಮತ್ತು ಬನವಾಸಿ ವ್ಯಾಜ್ಯಗಳ ಕಾಲಕ್ಕೆ ಅನೇಕ ಮಹಾಸ್ವಾಮಿಗಳೂ, ಪಂಡಿತರೂ, ಕೂಡಿಕೊಂಡು ಸಮಾಧಾನ ವೃತ್ತಿಯಿಂದ ಪರಸ್ಪರ ಮತಭೇದಗಳನ್ನು ಚರ್ಚಿಸುತ್ತಿರುವದು ಎಲ್ಲರಿಗೂ ಗೊತ್ತಿರುತ್ತದೆ. ಈ ಕ್ರಮವನ್ನು ಪ್ರತಿವರ್ಷ ಹಾಗೆಯೇ ನಡಿಸಿದ ಪಕ್ಷಕ್ಕೆ ಅತ್ಯಂತ ಪರಿಣಾಮಕರವಾಗುವದರಲ್ಲಿ ಏನೂ ಸಂದೇಹವಿರಲಾರದು. ಈ ವಿಷಯವನ್ನು ಪ್ರತಿಯೊಬ್ಬ ಸಮಂಜಸ ಬುದ್ಧಿಯ ವೀರಶೈವನು ವಿಚಾರ ಮಾಡದೆ ಇರಲಾರನೆಂದು ನಂಬಿದ್ದೇವೆ.

**ಕೈ. ವಾ. ವೀರಬಸಪ್ಪ ಶಿವಲಿಂಗಪ್ಪ ಶ್ರೇಷ್ಠಿ ಬಿ. ಎ. ಇವರ ನಿಧನವು,:—** ಕೈ. ವಾ. ಶ್ರೇಷ್ಠಿಯವರ ಅಕಾಲಿಕ ಮರಣದಿಂದ ವೀರಶೈವ ಸಮಾಜಕ್ಕೆ ಅತ್ಯಂತ ಹಾನಿಯಾಗಿರುತ್ತದೆ. ಅವರು ವೀರಶೈವ ಧರ್ಮದ ಪರಿಶೀಲನೆಯನ್ನು ಬಹು ಸೂಕ್ಷ್ಮವಾಗಿ ಮಾಡಿದವರಾಗಿದ್ದರು. ಈ ಮಹತ್ವದ ಕಾರ್ಯದಲ್ಲಿಯೇ ಅವರು ತಮ್ಮ ಆಯುಷ್ಯವನ್ನು ಕಳೆದರು. ಅವರು ಸಂಸ್ಕೃತವನ್ನು ಚನ್ನಾಗಿ ಬಲ್ಲವರಾಗಿದ್ದರು. ಆದ್ದರಿಂದ ಅವರು ರಾಜಾರಾಮ ಕಾಲೇಜಿನಲ್ಲಿ ಪ್ರೊಫೆಸರರಾಗಿ ನಿಯ

ಮಿಸಲ್ಪಟ್ಟರು. ಆದರೆ ಅವರ ಮನಸ್ಸಿನಲ್ಲಿ ತಮ್ಮ ಸಂಪೂರ್ಣ ವೇಳೆಯನ್ನು ಧರ್ಮಸಂಶೋಧನ ಕಾರ್ಯದಲ್ಲಿ ತೊಡಗಿಸಬೇಕೆಂದು ಇದ್ದುದರಿಂದ ಅವರು ಆ ಸ್ಥಾನವನ್ನು ತ್ಯಜಿಸಿ ಶಿವಯೋಗಮಂದಿರ ಸಂಸ್ಥೆಯಲ್ಲಿ ಸೇರ್ಪಡೆಯಾದರು. ಅಲ್ಲಿ ಅವರು ಯೋಗಾಭ್ಯಾಸದ ತತ್ವಗಳನ್ನು ತಿಳಿದುಕೊಂಡಿದ್ದಲ್ಲದೆ ಅನೇಕ ಉಪನಿಷತ್ತುಗಳನ್ನೂ ಭಗವದ್ಗೀತಾದಿ ಗ್ರಂಥಗಳನ್ನೂ ಚನ್ನಾಗಿ ಅಭ್ಯಾಸ ಮಾಡಿದರು. ಇದರಿಂದ ಅವರಲ್ಲಿ ವೀರಶೈವ ಧರ್ಮದ ನಿಜತತ್ವಗಳ ತಿಳುವಳಿಕೆಯು ಬಹು ವಿಶದವಾಗಿ ಉಂಟಾಗಲು ಕಾರಣವಾಯಿತು. ಈ ಕಾಲಕ್ಕೆ ಅವರು ಮಾಡಿದ ಸಾರ್ವಜನಿಕ ಭಾಷಣಗಳು ಬಹಳ ಮಾಹಿತಿಯಿಂದ ತುಂಬಿಕೊಂಡಿದ್ದು ವಿದ್ವಜ್ಜನರಿಗೆ ಬಹಳ ಚಿತ್ತಾಕರ್ಷಕವಾಗಿದ್ದವು. ಅವರು ಸ್ವಭಾವಸಿದ್ಧವಾಗಿ ಉತ್ತಮ ವಾಗ್ಮಿಗಳಾಗಿದ್ದರು. ಇದರಿಂದ ಅವರ ಉಪನ್ಯಾಸಗಳ ಕಾಲದಲ್ಲಿ ಬಹು ಜನರು ಕಿಕ್ಕಿರಿದು ನೆರೆಯುತ್ತಿದ್ದರು. ಮತ್ತು ಅವರ ವಕ್ತೃತ್ವದ ಪ್ರವಾಹದಲ್ಲಿ ಅವರು ಆನಂದಪರವಶರಾಗಿ ಹೋಗುತ್ತಿದ್ದರು. ಈ ಬಗೆಯ ಕಾರ್ಯವನ್ನು ಕೈ. ವಾ. ಶ್ರೀಷ್ಟಿಯವರು ಈ ಏಳೆಂಟು ವರ್ಷಗಳಿಂದ ಒಂದೇಸವನೇ ಜರಗಿಸುತ್ತಲೇ ಇದ್ದರು. ಇತ್ತಿತ್ತ ಅವರು ತಮ್ಮ ವಿಚಾರಗಳನ್ನೂ ಲೇಖಗಳನ್ನೂ ಗ್ರಂಥರೂಪವಾಗಿ ಸಂಗ್ರಹಿಸುವದರಲ್ಲಿ ತೊಡಗಿದ್ದರು. ಹೀಗೆ ಒಂದೆರಡು ಗ್ರಂಥಗಳನ್ನೂ ಸಿದ್ಧಗೊಳಿಸಿದ್ದಾರೆಂದು ನಾವು ಕೇಳುತ್ತೇವೆ. ಹೀಗಿದ್ದ ಪಕ್ಷದಲ್ಲಿ ಅವೆಲ್ಲವುಗಳನ್ನು ಸಮಾಜದವರು ಪ್ರಕಟಪಡಿಸುವದು ಅವರ ಕರ್ತವ್ಯವಾಗಿದೆ. ಕೈ ವಾ. ಶ್ರೀಷ್ಟಿಯವರ ಚಿರಂಜೀವರು ವಿದ್ಯಾವಂತರಾಗಿರುವದರಿಂದ ಈ ಮಹತ್ಕಾರ್ಯವನ್ನು ಅವರು ಕೈಗೂಡಿಸುವರೆಂದು ನಾವು ಆಶಿಸಿದ್ದೇವೆ. ಇದರಿಂದ ಕೈ. ವಾ. ಶ್ರೀಷ್ಟಿಯವರು ತಮ್ಮ ಆಯುಷ್ಯದಲ್ಲಿ ಅತ್ಯಂತ ನಿಃಸ್ವಾರ್ಥ ಬುದ್ಧಿಯಿಂದ ಮಾಡಿದ ಪ್ರಯತ್ನವನ್ನು ಅವರು ಸಫಲಗೊಳಿಸಿದ ಪುಣ್ಯಕ್ಕೆ ಭಾಜನರಾಗುವರು. ಕೈ. ವಾ. ಶ್ರೀಷ್ಟಿಯವರ ಆತ್ಮಕ್ಕೆ ಪರಮಾತ್ಮನು ಶಾಂತಿಯನ್ನೀಯಲೆಂದು ನಾವು ಅನನ್ಯಭಾವದಿಂದ ಆತನನ್ನು ಬೇಡಿಕೊಳ್ಳುತ್ತೇವೆ.

**ಧರ್ಮ ಮತ್ತು ತತ್ವಜ್ಞಾನ ಸಂಘದ ೨ನೆಯ ವರದಿಯು:—** ಈ ಸಂಸ್ಥೆಯು ವಿದ್ವನ್ಮಣಿಗಳಾದ ಪ್ರೊಫೆಸರ ಆರ್ ಡೀ. ರಾನಡೆ ಎಂ. ಏ. ಇವರಿಂದ ಸಂಸ್ಥಾಪಿಸಲ್ಪಟ್ಟದ್ದು ಈಗ ಬಹುತರ ಎಲ್ಲರಿಗೂ ತಿಳಿದದ್ದೇ ಇರುತ್ತದೆ. ಈ ಸಂಸ್ಥೆಯ ಕೇಂದ್ರಸ್ಥಾನಗಳಲ್ಲಿ ಒಂದಾದ ನಿಂಬಾಳ ಗ್ರಾಮವು ವಿಜಾಪುರಕ್ಕೆ ಸಮೀಪವಾಗಿಯೇ ಇದೆ. ಇದರ

ಸಂಸ್ಥಾಪಕರು ಆಕ್ಷಿಯು ಆರೋಗ್ಯವುಳ್ಳ ಸ್ಥಳದಲ್ಲಿದ್ದುಕೊಂಡು ತಮ್ಮ ಉದಾತ್ತ ಮತ್ತು ಗಹನ ವಿಚಾರಗಳಿಂದ ಕೂಡಿಕೊಂಡ ಗ್ರಂಥಗಳನ್ನು ಲಿಖಿಸುವದರಲ್ಲಿ ತೊಡಗಿರುವರು. ಈ ಸಂಸ್ಥೆಯ ಉದ್ದೇಶವು ಹಿಂದುಸ್ಥಾನದಲ್ಲಿಯ ಎಲ್ಲ ಮತಗಳ ತತ್ವಗಳನ್ನು ಪ್ರಕಟಪಡಿಸಿ ಅವುಗಳಲ್ಲಿರುವ ಅನ್ಯೋನ್ಯ ಸಂಬಂಧವನ್ನು ಕಂಡುಹಿಡಿದು ಹಿಂದೂಧರ್ಮ ಸಂಸ್ಕೃತಿಯ ಇತಿಹಾಸವನ್ನೂ ಅದರ ನಿಜಸ್ವರೂಪವನ್ನೂ ಜಗತ್ತಿಗೆ ತೋರಿಸಿಕೊಡುವದೇ ಇರುತ್ತದೆ. ಪ್ರೋ. ರಾನಡೆಯವರು ಹಿಂದುಸ್ಥಾನದಲ್ಲಿ ಅದ್ವಿತೀಯ ಪಂಡಿತರೆಂದು ಹೆಸರುಗೊಂಡಿರುತ್ತಾರೆ. ಆದ್ದರಿಂದ ಅವರ ಕಾರ್ಯಕ್ಕೆ ಅನೇಕ ಸಂಸ್ಥಾನಿಕರೂ ಸುಶಿಕ್ಷಿತರ ಮಹಾಜನರೂ ಬಹು ಬಗೆಯಿಂದ ಸಹಾಯ ಮಾಡುತ್ತಲಿದ್ದಾರೆ. ೧೯೩೭ ನೇ ಇಸ್ವಿ ೧ನೇ ಜೂನದಿಂದ ೧೯೩೯ನೇ ಎಪ್ರೀಲ ೩೦ನೇ ತಾರೀಖಿನ ವರೆಗೆ ಒಟ್ಟಿಗೆ ಈ ಸಂಸ್ಥೆಗೆ ೫೨೩೦ ರೂಪಾಯಿ ಧನಸಹಾಯವಾದಂತೆ ಕಂಡುಬರುತ್ತದೆ. ಪ್ರೋ. ರಾನಡೆಯವರು ತಮಗೋಸ್ಕರ ಬರೇ ೧೫೦ ರೂಪಾಯಿ ವೇತನವನ್ನು ತೆಗೆದುಕೊಳ್ಳುತ್ತಾರೆ. ಅವರು ಒಟ್ಟಿಗೆ ೧೬ ಗ್ರಂಥಗಳ ಒಂದು ಮಾಲೆಯನ್ನು ಸಿದ್ಧಪಡಿಸುವದರಲ್ಲಿ ತೊಡಗಿದ್ದಾರೆ. ಇವುಗಳಲ್ಲಿ ಉಪನಿಷತ್ತುಗಳಲ್ಲಿಯ ತತ್ವಜ್ಞಾನ ಸಮಾಲೋಚನೆ ಮತ್ತು ಮಹಾರಾಷ್ಟ್ರದ ಯೌಗಿಕ ತತ್ವಗಳು ಎಂಬ ಎರಡು ಗ್ರಂಥಗಳು ಈಗ ಪ್ರಸಿದ್ಧಗೊಳಿಸಲ್ಪಟ್ಟಿವೆ. ಉಳಿದ ಗ್ರಂಥಗಳೂ ರಚಿಸಲ್ಪಡುತ್ತಲಿವೆ. ಈ ಕಾರ್ಯದಲ್ಲಿ ಅನೇಕ ಜನ ಪಂಡಿತರು ಪ್ರೋ. ರಾನಡೆಯವರಿಗೆ ಲೇಖಗಳ ದ್ವಾರಾ ಬಹಳ ಸಹಾಯ ಮಾಡುತ್ತಲಿರುವರು. ಇವಲ್ಲದೆ ಸಂಸ್ಥೆಯ ಪರವಾಗಿ ಒಂದು ಪತ್ರಿಕೆಯನ್ನು ತೀವ್ರವೇ ಹೊರಡಿಸತಕ್ಕವರಿದ್ದಾರೆ. ಈ ಮೇರೆಗೆ ಪ್ರೋ. ರಾನಡೆಯವರು ಕೇವಲ ಮಾತುಗಾರಿಕೆಯಲ್ಲಿ ವೇಳೆಗಳೆಯದೆ ಒಂದು ಏಕಾಂತ ಸ್ಥಳವನ್ನು ಆಯ್ದುಕೊಂಡು ಅಲ್ಲಿ ತಮ್ಮ ಸಂಶೋಧನ ಕಾರ್ಯವನ್ನು ನಡಿಸುತ್ತ ಹಿಂದೂಧರ್ಮದ ತೇಜಸ್ಸನ್ನು ಜಗತ್ತಿನಲ್ಲಿ ಹರಡಲು ಪ್ರವೃತ್ತರಾಗಿದ್ದಾರೆ. ಇಂಥವರೇ ನಿಜವಾದ ಭಾರತಮಾತೆಯ ಪುತ್ರರು. ಇವರ ಅನುಕರಣವನ್ನು ವೀರಶೈವರು ಅವಶ್ಯವಾಗಿ ಮಾಡಲೆಂದು ನಾವು ಹಾರೈಸುತ್ತೇವೆ.

**ವಾಙ್ಮಯ ಸಂಘಃ—** ಈ ಸಂಘದ ಬಗ್ಗೆ ನಾವು ಶಿವಾನುಭವದ ಹಿಂದಿನ ಸಂಚಿಕೆಗಳಲ್ಲಿ ಪ್ರಸ್ತಾಪಿಸಿರುವೆವಷ್ಟೆ? ಇದನ್ನು ಡಿಸೆಂಬರ ತಿಂಗಳಿನಲ್ಲಿ ಕೂಡಿಸಬೇಕೆಂದು ನಿರ್ಧರಿಸಲ್ಪಟ್ಟಿದೆ. ಆ ಕಾಲಕ್ಕೆ ವೀರ

ಶೈವ ವಾಙ್ಮಯ ಮತ್ತು ಅದರ ಇತಿಹಾಸ ಸಂಶೋಧನಕಸ್ತ್ರೋಕ್ಷರ ಈ ವರೆಗೆ ಪ್ರಯತ್ನಿಸುತ್ತ ಬಂದವರಿಗೆಲ್ಲರಿಗೂ ನಿಮಂತ್ರಣವು ಕೊಡಲ್ಪಡುವದು. ಈ ಸಭೆಗೆ ಬರಲಪೇಕ್ಷಿಸುವಂಥವರು ಯಾರಾದರೂ ಇದ್ದರೆ, ಅವರು ಅವಶ್ಯವಾಗಿ ನಮಗೆ ತಿಳಿಸಬೇಕು. ಈ ಸಭೆಯಲ್ಲಿ ವೀರಶೈವ ವಾಙ್ಮಯ ಮತ್ತು ಅದರ ಇತಿಹಾಸ ಸಂಶೋಧನ ವಿಷಯವಾಗಿ ಅನೇಕ ಮಹತ್ವದ ಚರ್ಚೆಗಳು ಮಾಡಲ್ಪಡುವವು. ಸಭೆಗೆ ಬರಲು ಶಕ್ಯವಿರದಂಥವರು ತಮ್ಮ ಸೂಚನೆಗಳನ್ನೂ ನಿಬಂಧಗಳನ್ನೂ ಕಳಿಸಿಕೊಡಬೇಕೆಂದು ನಮ್ಮ ಸೂಚನೆಯು ಇದೆ.

---

# ಪುಸ್ತಕ ಪರಿಚಯ.

**ಲಿಂಗ (ಆತ್ಮ) ತತ್ವದರ್ಪಣವುঃ—** ಈ ಗ್ರಂಥವು ರಾ. ರಾ. ಬಸನಗೌಡ ಕಲ್ಲನಗೌಡ ಪಾಟೀಲ ಹೆಡ್‌ಮಾಸ್ತರ ಕೋಟುಮುಚಗಿ ತಾ. ಗದಗ ಇವರಿಂದ ರಚಿಸಲ್ಪಟ್ಟಿದೆ. ಈ ಗ್ರಂಥವು ೧೭೫ ಪುಟಗಳುಳ್ಳ ದೊಡ್ಡ ಗ್ರಂಥವಾಗಿದೆ. ಇದರಲ್ಲಿ ಅಷ್ಟಾವರಣಗಳಲ್ಲಿ ಮುಖ್ಯವಾದ ಲಿಂಗತತ್ವ ಸಂಬಂಧವಾಗಿ ಬಹು ವಿಸ್ತೃತ ವಿವೇಚನೆಯು ಬಂದಿದೆ. ಈ ವಿಷಯದ ಬಗ್ಗೆ ಇಷ್ಟು ವಿಸ್ತೃತವಾದ ಗ್ರಂಥವು ಬೇರೆ ಯಾರಿಂದಲೂ ರಚಿಸಲ್ಪಟ್ಟಿಲ್ಲೆಂದು ಹೇಳಬಹುದು. ವಿಷಯಗಳು ಪ್ರಶ್ನೋತ್ತರ ರೂಪದಿಂದ ಅತಿಸುಲಭ ಭಾಷೆಯಲ್ಲಿ ನಿರೂಪಿಸಲ್ಪಟ್ಟಿವೆ. ಷಟ್ಸ್ಥಲ ಶಾಸ್ತ್ರದಲ್ಲಿ ಲಿಂಗದ ವಿಷಯವು ಬಹು ತೊಡಕುಳ್ಳದ್ದಾಗಿದೆ. ಮನುಷ್ಯನ ಪ್ರತಿಯೊಂದು ಕಾರ್ಯದಲ್ಲಿ ಅದರ ಸಂಬಂಧವು ಬಾರದೆ ಇರುವದಿಲ್ಲ. ಈ ಸಂಬಂಧದ ಜ್ಞಾನವನ್ನು ಮಾಡಿಕೊಳ್ಳದ ಹೊರತು ಯಾವನಾದರೂ ಕೂಡ ನಿಜವಾದ ಲಿಂಗಾಂಗಿ ಎಂದೆನಿಸಿಕೊಳ್ಳಲಾರನು ಆದರೆ ಈ ಮಹತ್ವದ ವಿಷಯದ ಬಗ್ಗೆ ಸಾದ್ಯಂತ ವೃತ್ತಾಂತವು ಒತ್ತಟ್ಟಿಗೆ ಸಿಗುವ ಗ್ರಂಥಗಳು ಬಹು ಕಡಿಮೆ ಇರುತ್ತವೆ. ಈ ಕೊರತೆಯನ್ನು ಗ್ರಂಥಕಾರರು ಬಹುಮಟ್ಟಿಗೆ ದೂರವಮಾಡಿರುವರು. ಅವರು ಈ ಗ್ರಂಥದಲ್ಲಿ ಐದು ಭಾಗಗಳನ್ನು ಮಾಡಿರುವರು. ಇವುಗಳಲ್ಲಿ ಮೂಲಲಿಂಗಸ್ವರೂಪವು, ಅದರ ನಾನಾವಿಧ ಭಾಗಗಳು, ಅದರ ಪೂಜಾಕ್ರಮಗಳು, ಮೊದ

ಲಾದ ಅನೇಕ ವಿಷಯಗಳು ಷಟ್ಸ್ಥಲಶಾಸ್ತ್ರ ರೀತ್ಯಾ ಬಹು ವಿಶದವಾಗಿ ವಿವೇಚಿಸಲ್ಪಟ್ಟಿರುತ್ತವೆ. ಪ್ರತಿಯೊಂದು ವಿಷಯದ ವಿವೇಚನೆಯಲ್ಲಿ ಸಂಸ್ಕೃತ ಗ್ರಂಥಗಳ ಆಧಾರಗಳೂ ವಚನ ಮತ್ತು ಉಪನಿಷತ್ತುಗಳ ಉಕ್ತಿಗಳೂ ಹೇರಳವಾಗಿ ಕೊಡಲ್ಪಟ್ಟಿವೆ. ವಿಷಯಗಳ ಯೋಜನೆಯಾದರೂ ಕ್ರಮಬದ್ಧವಾಗಿರುತ್ತದೆ. ವಿಷಯ ಸಂಗ್ರಹಕ್ಕೋಸ್ಕರ ಗ್ರಂಥಕಾರರು ಬಹಳ ಶ್ರಮಪಟ್ಟಿರುತ್ತಾರೆ. ಈ ಪುಸ್ತಕವು ಕೇವಲ ಅಲ್ಲಲ್ಲಿ ಓದಿ ಬಿಸಾಡುವಂತಹದಲ್ಲ. ಪ್ರತಿಯೊಬ್ಬ ವೀರಶೈವನು ಇದನ್ನು ಸಂಗ್ರಹಿಸಿ ಅದರಲ್ಲಿಯ ವಿಷಯಗಳನ್ನು ಓದಿ ಚನ್ನಾಗಿ ಮನನ ಮಾಡಿಕೊಳ್ಳುವದು ಅವಶ್ಯವದೆ. ಇದರ ಬೆಲೆಯು ೧ ರೂ. ಮಾತ್ರವಿದ್ದು, ವೀರಶೈವ ಮತ ವಿಷಯಗಳನ್ನು ಅರಿಯಲಿಚ್ಛಿಸುವವರು ಈ ಗ್ರಂಥವನ್ನು ಅವಶ್ಯವಾಗಿ ತರಿಸಿಕೊಂಡು ಗ್ರಂಥಕಾರರ ಶ್ರಮವನ್ನು ಸಾರ್ಥಕಗೊಳಿಸಬೇಕೆಂದು ನಾವು ಒತ್ತಿ ಹೇಳದಿರಲಾರೆವು.

**ಕೈವಲ್ಯ ಕಲ್ಪವಲ್ಲರಿಯು ಅರ್ಥವು:**— ಸರ್ಪಭೂಷಣ ಶಿವಯೋಗಿಯ ಪದ್ಯಗಳನ್ನರಿಯದವರು ಕರ್ನಾಟಕದಲ್ಲಿ ಬಹು ವಿರಳ. ಈ ಕವಿಯ ಸುಂದರವಾದ ಪದ್ಯಗಳು ಅತ್ಯಂತ ಭಕ್ತಿಪೂರಿತವಾಗಿದ್ದು ಚಿತ್ತಾಕರ್ಷಕವಾಗಿರುತ್ತವೆ. ಆದರೆ ಇಂಥ ಗ್ರಂಥವು ನಮಗೆ ಉಪಲಬ್ಧವಾಗದೆ ಇರುವದು ಬಹು ಶೋಚನೀಯವು. ಆದರೆ ಈ ಕೊರತೆಯನ್ನು ಈಗ ಇಳಕಲ್ಲಿನ ರಾ|| ರಾ|| ಮಾನಪ್ಪ ಅಪ್ಪಣ್ಣಪ್ಪ ನಾಲತವಾಡ ಇವರು ದೂರ ಮಾಡಿರುತ್ತಾರೆ. ಇದಕ್ಕೋಸ್ಕರ ಇವರನ್ನು ನಾವು ಮನಃಪೂರ್ವಕವಾಗಿ ಅಭಿನಂದಿಸುತ್ತೇವೆ. ಈ ಗ್ರಂಥಕ್ಕೆ ಅವರು ಟೀಕೆಯನ್ನು ಸಹ ಬರೆದಿರುತ್ತಾರೆ. ಇದರಿಂದ ಪದ್ಯಗಳ ಮರ್ಮವನ್ನು ಅರಿಯಲಿಕ್ಕೆ ಬಹಳ ಅನುಕೂಲವಾಗಿರುತ್ತದೆ. ಈ ಸಮಗ್ರ ಗ್ರಂಥವನ್ನು ಬಾಗಲಕೋಟೆಯ ರಾ|| ರಾ|| ಸಕ್ಕರಿ ಶಂಕರೆಪ್ಪನವರು ಪರಿಶೋಧಿಸಿದ್ದಾರೆ. ರಾ|| ರಾ|| ಶಂಕರೆಪ್ಪನವರು ಕರ್ನಾಟಕದಲ್ಲಿ ಬಹು ಪ್ರಸಿದ್ಧ ವರ್ತಕರಾಗಿರುವರಲ್ಲದೆ ಧರ್ಮಗ್ರಂಥಗಳನ್ನು ಬಹು ಚನ್ನಾಗಿ ಪರಿಶೀಲಿಸಿದವರಾಗಿರುತ್ತಾರೆ. ಅವರು ಈ ಮೇರಿಗೆ ವಾಙ್ಮಯ ಕಾರ್ಯದಲ್ಲಿ ಸಹಾಯ ಮಾಡಿದ್ದು ಅವರ ವಿದ್ವತ್ತೆಗೂ ಸೌಜನ್ಯಕ್ಕೂ ಶೋಭಿಸುವಂಥದಿರುತ್ತದೆ. ಗ್ರಂಥದ ಪುಟಗಳು ೩೪೦ ಇದ್ದು, ಬೆಲೆ ಒಂದೂವರೆ ರೂಪಾಯಿ ಮಾತ್ರವಿರುತ್ತದೆ.

---

ಕಲಿಯುಗದೊಳು ಕಲ್ಯಾಣಪುರವಂಧೀಶ್ವರ ಪ್ರಧಾನಿ। ಹೆಲಬರ ಮಧ್ಯದಿ ಬಿದ್ದ ಲಿಖಿತವ ತೆಗೆಪೋದಿದ ಸನ್ಮಾನಿ॥ ಕುಲಚರ ಮೊದಲಾ ದಷ್ಟಮದಂಗಳ ನೀಗಿದ ಸುಯಜ್ಞಾನಿ। ನೆಲಜಲಾಗ್ನಿ ಮರುತಂಬರಾತ್ಮ ಷಡುತತ್ವದ ಸುಜ್ಞಾನಿ ॥೪॥

ಭಿನ್ನಭಕ್ತಿಯನನನ್ಯವೆಂಬ ಸದ್ಭಕ್ತ ದೇಹಿಕ ದೇಹಿ। ತನ್ನ ಭಜಿಸಿ ಬಳಿಕನ್ಯವನರಿಯದ ಸಜ್ಜನ ಮನ ಮೋಹಿ॥ ಚಿನ್ನಬಣ್ಣದಂತೆರಡರಿಯದ ಶಿವಶರಣರಲ್ಲಿ ಸ್ನೇಹಿ। ಚನ್ನವೀರಮಹೇಶ ನಿರಂಜನಜಂಗಮ ದಾಸೋಹಿ ॥೫॥

---

(೨೦) ಪಾದೋದಕವೆ ದೇವಭಕ್ತರ್ಗೆ ಸಂಜೀವನಾದುದೆಂಬುದ ನೈದೆ ತಿಳಿಯನುಭಾವದೊಳು ॥ ವೇದಾಂತ ಸಿದ್ಧಾಂತ ಕ್ರಿಯಜ್ಞಾನ ಬಾಹ್ಯದುರ್ಬೋಧಕರಿಗೆ ನೆಲೆಗಾಣದೊಪ್ಪ ಗುರು ॥ಪಲ್ಲ॥

ಗುರುಲಿಂಗದಂಘ್ರಿ ಯುಗಳ ಮೂಲದೆಡೆಯೊಳು। ಪರಿಪಿಡಿದು ಮೂರು ಮೂರು ವೇಳೆ। ಕರಸ್ಪರ್ಶವನು ಗೈಯ್ಯಲದೆಯಭಿಷೇಕದಾಚರಣೆಗೆ ಮುಖ್ಯ ಸದ್ಗುರು ಧೂಳದೀಕ್ಷಾ ॥೧॥

ಕೆರೆಬಾವಿ ಹೊಳೆ ಹಳ್ಳ ಮಡುಹೊಂಡ ಕಾಲುವೆ। ಒರತೆ ಹೊಕ್ಕರಣೆ ಕಲ್ಪೋಣಿ ಜಡಜಲವ॥ ಗುರುಕರುಣದಿಂದೊಮ್ಮೆ ಮುಟ್ಟಿದ। ನಿರುಪಮ ಷಡ್ಭಕ್ತಿ ಶೀಲ ಷಟುಸ್ಥಲ ಬ್ರಹ್ಮಿಯ ॥೨॥

ಶಿವಲಿಂಗ ಮೂರ್ತಿಯ ಪಾದ ಉಂಗುಷ್ಠ ಯು। ಗ್ಮವನು ತ್ರೈ ತ್ರೈ ವೇಳೆಯೊಳಂಗುಲ್ಯಾಷ್ಟಕನೋರ್ವ ತರ್ಜನಿಬೆರಳು ಸ್ಪರ್ಶಿಸಲದೆ। ತವೆ ಭಸ್ಮಶುದ್ಧ ಕಾರಣ ಲಿಂಗಕ್ರಿಯ ಶೀಕ್ಷೆ ॥೩॥

ಪರಬ್ರಹ್ಮ ನಿರ್ಮಲಾ ಘನಶ್ಯಾಮ ಜಡ ಶ್ರೀ। ಕರ ತ್ರಿಪಾದೋದಕ ನಿಜರೂಪ ಭೂತಿ-। ಶರಣನಂಗವನೆ ಸ್ನಾನೋದ್ಧೂಳನ ಧಾರಣ। ಕರದಿಂದ ಹರಮಂತ್ರ ಸ್ಮರಣೆಯಿಂ ಬೆಳಗುವ ॥೪॥

ಪರಮ ಚೈತನ್ಯ ಜಂಗಮಲಿಂಗದಮಳ ಶ್ರೀ। ಚರಣವನರ್ಚಿಸಿ ನಮಿಸಿ ಬಳಿಕಾಗ। ಲೆರಡಂಗುಷ್ಠಾಗ್ರದೋಳ್ ಮಾತ್ರದಿಂ ಪಾದಾಂಬು ವೆರೆಯಲಂತದೆ ಮಹತ್ವದ ಚರ ಸುಜ್ಞಾನ ॥೫॥

ಸ್ಪರುಶಕವಧಾರವಾಪ್ಯಾಯುನ ಹಸ್ತತತ್ಪರಿಣಾಮನಿರ್ನಾಮವು । ಗುರುಲಿಂಗಚರದ । ವರಸತ್ಯದಶವಿಧೋದಕ ಮುಖ್ಯವಾಗಳಾ। ಚರಣೆಗೆ ಕಾರಣವಾಗಿ ರಾಜಿಸ ಪ್ರಭು ॥೬॥

ವರಪೇಕ ಸುಪ್ರಸಾದ ರಸವೊಲ್ದವಧರಿಸಿ ಷಟ್ಕೃತಿಯಸಾಂತು । ಕರಣಹಸಿಕೇಕೋತ್ತರ ಷಟುಸ್ಥಲ ಮಂತ್ರಗೋಪ್ಯಕೆ ಟಿಪಣಿಯು । ವಿರಚಿಸಿದ ಪ್ರಸಾದ ಸ್ವಾಮಿಚನ್ನವೀರನ ॥೭॥



(೨೧) ಪಾದೋದಕದೊಳಂಗ ಲಿಂಗ ಮಜ್ಜನಗೈವನಾದಿ ಶ್ರೀ ವೀರಶೈವಾಚಾರ ಭಕ್ತಾ। ಭೇದರಹಿತ ಶುದ್ಧ ಸಿದ್ಧ ಪ್ರಸಿದ್ಧ ಪ್ರ।ಸಾದ ಚಿತ್ಕಾಯು ಸದ್ಗುರುಲಿಂಗಜಂಗಮನು ॥ಪಲ್ಲ॥

ತಾನಾಗಿ ಬಂದಡಿಗೆರಗಿದ ಶಿಷ್ಯ ಸು।ಜ್ಞಾನಿಯುಂಬವಗಿಷ್ಟಲಿಂಗ ವಿತ್ತು। ಧ್ಯಾನ ಮೌನವು ನೇಮ ನಿತ್ಯ ಚತುರ್ವಿಧ। ಸ್ವಾನುಭಾವದ ಸುಸದ್ಬೋಧೆಯನು॥ ತಾನೆ ಬೋಧಿಸಿಯಂಗಲಿಂಗ ಸಂಯೋಗ ಸಂಧಾನವ ತೋರಿ ತನ್ನಂತೆ ಮಾಡಿದ ಗುರು ॥೧॥

ಭಕ್ತನ ಚಿತ್ಕಳೆಯು ಕಂಗಳ ಮುಖ।ದಿತ್ತಲ್ಕೈತಂದು ಕರಕಂಜದೊಳು। ವೃತ್ತವರ್ತುಳಮಧ್ಯ ಗೋಮುಖನಾಳಪೀಠ। ಸತ್ಯಸದ್ರೂಪತಾಳಿ ಪೂಜೆಗೊಂಬ॥ ಅತ್ಯತಿಷ್ಠದ್ದಶಾಂಗುಲ ಮಧ್ಯವೆಂಬ ವೇದ। ಸ್ತೋತ್ರಕೆ ಪಾತ್ರ ಪಾವನ। ಘನದಿಷ್ಟಲಿಂಗ ॥೨॥

ಆರಂಗ ಲಿಂಗ ಷಣ್ಮುಖ ಹಸ್ತ ಶಕ್ತಿ ಭಕ್ತಿ। ಆರು ಪದಾರ್ಥ ಪ್ರಸಾದಂಗಳೆಂಬ। ಆರೆಂಟು ತೆರದ ಸಕೀಲ ಮಾರ್ಗವ ತಿಳಿ।ದಾರು ಸ್ಥಲವೆಯಂಗದಾಚರಣೆ॥ ನೂರೊಂದು ಸ್ಥಲವು ಸಂಬಂಧವಾಗಿರುತಿಹ। ವೀರಮಹೇಶ ಚನ್ನವೀರ ಸುಜಂಗಮ ॥೩॥



(೨೨) ಪಡೆದನುಭವಿಸು ಪ್ರಸಾದವನು। ಎಡೆವಿಡದಿಹ ಸುಖವೋದವನು ||ಪಲ್ಲ||

ತನುವನು ಗುರುವಿಗೆ ನೆರೆ ಕೊಟ್ಟು। ಮನವನು ಲಿಂಗದೊಳಿಂಬಿಟ್ಟು। ಧನವನು ಚರಕೆ ಹರಿಗೊಟ್ಟು। ಅನಘ ಶರಣಂಗೆ ಪೊಡಮಟ್ಟು ||೧||

ಅಂಗಶುದ್ಧದ ಕ್ರಿಯದೀಕ್ಷವನು। ಲಿಂಗಸಿದ್ಧದ ಮಂತ್ರಶೀಕ್ಷವನು। ಸಂಗಪ್ರಸಿದ್ಧ ವೇದವೋಕ್ಷವನು। ಕಂಗಳ ಕಳೆಯು ಪ್ರತ್ಯಕ್ಷವನು ||೨||

ಗುರುವಿನೊಳುದಿಸಿದ ಶುದ್ಧವನು। ಚರಲಿಂಗದ ನಿಜಸಿದ್ಧವನು। ಪರಜಂಗಮದ ಪ್ರಸಿದ್ಧವನು। ಗುರುಚರವರದ ನೈವೇದ್ಯವನು ||೩||

ತ್ಯಾಗಾಂಗದ ವರ ಸದುಗತಿಯು। ಭೋಗಾಂಗದ ಘನ ಸನುಮತಿಯು। ಯೋಗಾಂಗದ ನಿಜದುನ್ನತಿಯು। ಜೋಗೈಸುವ ಶಿವ ಸುಖರತಿಯು. ||೪||

ನಡೆನುಡಿಗಳ ಚೈತನ್ಯವನು। ಬಿಡದೆ ಭೋಗಿಸುರ ಸುಸಂಗವನು। ಷಡುರುಚಿದೋರದ ಚಿನ್ಹವನು। ವೃಡನ ಭಕ್ತಿಯು ಸುಪ್ರಸನ್ನವನು ||೫||

ನರಜನ್ಮದ ಭವದೂರವನು। ಅರಿವರ್ಗದ ಸಂಹಾರವನು। ಶರಣ ಹರಣದುಪಕಾರವನು। ನಿರುಪಮ ನಿಜಸುಖಸಾರವನು ||೬||

ಶರಣ ಸಂತತಿಗಳ ಹರಣವನು। ಹರಣಲಿಂಗದ ನಿಜಕಿರಣವನು। ಶರಣಜಂಗಮದ ವರಣವನು। ಗುರುಚನ್ನವೀರನ ಕರುಣವನು ||೭||

---

(೨೩) ಘನ ಶಿವಭಕ್ತರು ಒಲಿದು ಧರಿಸಿಹ। ಮನಹರ ಶ್ರೀವಿಭೂತಿಯು। ಚಿನುಮಯ ಮಂತ್ರ ಶರೀರಿಯ ಮಾಡುವ। ದನುಪಮ ನಡೆನುಡಿಗಲಿಸುವದು ||ಪಲ್ಲ||

ಆದಿ ಪರಶಿವನಂಗಚ್ಛಾಯವ। ನಾದಿಜಂಗಮನಂತ್ಯ ಜ್ಞಾನವ। ಶೋಧಕ ಭಕ್ತನ ಸರ್ವಾಂಗದ ಮಂಗಳ ವಿಭೂಷಣವ। ಆದಿಗೆ ಮೂಲಾಧಾರ ಸುದೀಕ್ಷಾ। ಬೋಧೆಗೆ ಕಾರಣ ಘನಪರಬ್ರಹ್ಮವಿ। ನೋದಿಗೆ ಕಾಣುವ ಕಂಗಳ ಬೆಳಗಿನ ತೇಜದ ಪುಂಜವನು ||೧||

ಸಕಲಾಚಾರ ಕ್ರಿಯಂಗಳ ಕವಚವ। ಸಕಲ ಸುವಶ್ಯದ ಶುಭ ಶಿಲ ಕವ। ಸಕಲೈಶ್ವರ್ಯ ಸುಸಂಪದ ಸೌಖ್ಯಾನಂದದ ತಾಣವನು॥ ಸಕಲಾಗಮ ನಿಗಮಂಗಳ ಸಾರವ। ಸಕಲ ನಿಷ್ಕಳ ಉಭಯಾಕಾರವ। ಅಖಿಳಾಂಡಗಳನೊಳಕೊಂಡೊಪ್ಪುವ। ಚುಳಕ ಚಿದಾನಂದವನು ॥೨॥

ಇಂತೆಸೆವನಾದಿ ಚಿದ್ಭಸಿತವ ಕಾಲಾಂತಕನೈವೊಗದಿಂ ಮುಹರುಷಿಗಳು। ಚಿಂತಿಸಿ ಪಡೆದೈದಾಕಳ ಬಳಿಕ ಗೋವಿನ ಸಗುಣವನು। ತಂತ್ರಾಗಮದಿಂದೈಕ್ಷಿಸಿದ ಭಸಿತ। ಚಿಂತಾಯುಕ ಚಿದ್ಘನ ಪಂಚಾಕ್ಷರಿ। ಮಂತ್ರನ್ಯಾಸ ಸ್ಥಾನದೊಳವಧರಿಸುವ ತ್ರಿಪುಂಡ್ರವನು ॥೩॥

ಜ್ಞಾನಪ್ರಕಾಶದ ತೇಜ ವಿಭೂತಿಯ ಸ್ವಾನುಭಾವ ಸದ್ಗುರುವರನಂಘ್ರಿಗೆ। ಅನತನಾಗುತ ಭಯಭಕ್ತಿಯೊಳಾ ಭಸಿತವಾಂತುಕೊಂಡು ॥ ಮಾನಸ ವಾಚಕ ಕಾಯಕ ತ್ರಿವಿಧದೆ। ಧ್ಯಾನಸ್ತೋತ್ರನ್ಯಾಸಂಗಳ ಮಾಡುತ। ಸ್ಥಾನಸ್ಥಾನಗಳಲ್ಲಿ ಸ್ನಾನ ಧೂಳಣ ಧಾರಣಗೈವುತಲಿ ॥೪॥

ಶ್ರೀಗುರುದೇವನು ತನ್ನಂಘ್ರಿಗೆ ತಲೆ।ವಾಗಿದ ಶಿಷ್ಯೋತ್ತಮನ ಲಲಾಟದೆ ರಾಗ ವಿರಾಗ ವಿದೂರ ವಿಭೂತಿಯ ಧರಿಸಿದ ಮಾತ್ರದೊಳು ॥ ತ್ರೈಗುಣ ಕರಣೇಂದ್ರಿಯ ಜಡದೇಹವ ನೀಗಿ ಸುಮಂತ್ರ ಶರೀರಿಯ ಮಾಡಿಹ ಭೋಗವನುರೆ ಪರಮೋಕ್ಷವ ನೀಗಿ ಸುಧರ್ಮದಸಾರವನು ॥೫॥

ವಾಣಿ ಷಡಕ್ಷರಮಂತ್ರವ ನುಡಿವುತ। ಮಾಣದೆ ಸರ್ವಾಂಗದೊಳು ವಿಭೂತಿಯನೊಲಿದು ಧರಿಸಲಾಗಿ। ಜಾಲಾಜಲದೊಳೆದೊಳೆದಂತೆನ್ನಯ। ಅಣವ ಮಾಯಾ ಕಾರ್ಮಿಕ ಮಲವತಿ। ಕ್ಷೀಣವನೆಲ್ಲವ ತೊಳೆದು। ನಿರಂತರ ತಾನೆ ಬೆಳಗುತಿದೆಕೊ ॥೬॥

ಕಿಂಚಿತು ಭಸಿತವ ಭಾಳದೆ ಧರಿಸಲು। ಸಂಚಿತ ಲಿಖಿತವ ತೊಡೆದಾಕ್ಷಣ। ಘನ ಪಂಚಪ್ರಣಮವನು ಲೇಖನಗೈದ ಬಳಿಕ ನಾನೆಂಬ। ವಂಚಕತನವನಳಿದು ಎನ್ನನು ನಿ।ರ್ವಂಚಕ ಲಿಂಗೈಕ್ಯ ಷಟಸ್ಥಲ। ವಾಂಛಿತನೆಸಗಿದ ಚನ್ನವೀರೇಶ್ವರನಂಘ್ರಿಯ ಧೂಳಿತವ ॥೭॥



(೨೪) ಭಸಿತವ ಧರಿಸುವಾತನೆ ಯೋಗಿ। ಶೋಭಿಸುವಡೆ ವೃಢ ಲಿಂಗದೊಡಲಾಗಿ ॥ಪಲ್ಲ॥

ವಾಯು ಭೂತೇಂದ್ರಿಯ ಗುಣಂಗಳ। ಮಾಯಾ ಮೋಹದ ಮೂರು ಕಲೆಗಳ। ಕಾಯ ಕರ್ಮ ಕೋಟಲೆಗಳ ಸ।ತ್ಕ್ರಿಯ ವಹ್ನಿ ಯೊಳೊಂದಿ ದಹಿಸಿದ ॥೧॥

ಹಸಿವು ತೃಷೆಗಳೆಲು। ವ್ಯಸನವ ಪಂಚ। ವಿಷಯಗಳರಿಷಡುವ ರ್ಗದ। ವಿಷಮಪ್ಟ ಮದ ಮೋಹ ಲಿಂಗದ ಸವ್ಯಜ್ಞಾನಾಗ್ನಿಯಿಂ ದಹಿಸಿದ ।೨॥

ದುರಿತ ಪಂಚಕದ ದುರ್ಗತಿಯನು। ದುಃಕರಣದುಪಹತಿಯನು। ಮರಹುಗೊಂಡಿಹ ಮಂದಮತಿಯನು ಲಿಂಗ।ದರುಹೆಂಬ ವಹ್ನಿಯೊಳುರುಹಿದ ॥೩॥

ಅಂಗದ ಗುಣವನೆಲ್ಲವ ನೀಗಿ ಸ।ರ್ವಾಂಗವೆಲ್ಲವು ಲಿಂಗಮಯ ವಾಗೆ। ಸಂಗಸುಖದ ಶಿವಯೋಗಿ ಈತ। ಮಂಗಳಾತ್ಮಕನೆನಿಪನಾಗಿ ॥೪॥

ವಂಚನೆಗಳನೆತ್ತಿ ತೂರುವ ನಿಃ ಪ್ರ।ಪಂಚಭಾವವ ಕೈಸಾರುವ ಸಂಚಿತಾದಿಗಳು ವಿಾರುವ ನಿಜ। ಪಂಚಬ್ರಹ್ಮವ ತಂದು ತೋರುವ ॥೫॥

ಸ್ನಾನಧೂಳಣಧಾರಣಗಳಿಂದ ತತ್ಸ್ನಾನಕ್ಕೆ ತ್ರೈ। ಕರಣಗಳಿಂದ ಧ್ಯಾನ ಮಂತ್ರೋಚ್ಚರಣಗಳಿಂದ। ಮಹಜ್ಞಾನ ಭಸ್ಮವಿದೆಂದು ಮುದದಿಂದ ॥೬॥

ಚಾರು ಸತ್ಕ್ರಿಯ ಸಂಹಿತವನು ನಿತ್ಯ। ಧಾರಣಂಗೈವರೂರ್ಜಿತವನು। ವೀರಶೈವಾಚಾರ ಮತವನು। ಚನ್ನವೀರನಂಘ್ರಿಯ ಧೂಳಿತವನು ॥೭॥

---

(೨೫) ಧರಿಸಿದೆ ನಂಬಿ ಧರಿಸಿದೆ ಆದಿ। ಪುರುಷನಾಭರಣವೆಂದರಿದು ಧರಿಸಿದೆ ॥ಪಲ್ಲ॥

ಎರಡಾರು ಮಣಿಗೊಂದೆರಡು ಮಾಲೆಯನದ್ವಿ।ಕರದ ಮುಂಗಡೆಯೊಳು। ಹರಡಿ ಕಂಕಣವೆಂದು ಧರಿಸಿದೆ. ॥೧॥

ಪದಿನಾರು ಮಣಿಗೇಕ ದ್ವಿವಿಧ ಮಾಲೆಯನು । ಮದ್ವಿವಿಧ ಬಾಹು ಗಳಲ್ಲಿ ತೋಳ ಭಾಪುರಿ ಎಂದು ಧರಿಸಿದೆ ॥೨॥

ವಿರಳವೆನ್ನದಲೆನ್ನ। ಕೊರಳಿಗೊಪ್ಪುವ ಮೂವ।ತ್ತೆರಡು ಮಣಿ ಗಳ ಮಾಲೆಯನೇಕಾವಳಿ ಎಂದು ಧರಿಸಿದೆ. ॥೩॥

ಚನ್ನ ಷಡಕ್ಷರದುನ್ನತ ಮಣಿಯ ದ್ವಿ। ಕರ್ಣದೊಳಾರಾರು ರನ್ನ ದೋಲೆಗಳೆಂದು ॥೪॥

ನೆತ್ತಿ ತ್ರೈಶಿಖಿಗೊಂದು ಸುತ್ತು ಮೂವತ್ತಾರು। ಮುತ್ತಿನ ದಂಡೆಯೆಂ ದುತ್ತ ಮಾಂಗದೊಳಾನು ॥೫॥

ಕರಕಂಠಕರ್ಣಮಸ್ತಕಬಾಹು ಶಿಖಿಯೊಳು। ಧರಿಸಿ ಶೋಭಿಸುವ ಭಕ್ತರ ಚಿಂತಾಮಣಿ ಎಂದು ॥೬॥

ಕರದಿಷ್ಟಲಿಂಗದ ಶರಣಸತಿಯಳೆಂದು। ಶರಣರುತಮ್ಮ ಕರೆದು ಮನ್ನಿಪರೆಂದು ॥೭॥

ಪರತತ್ವ ಮೂರ್ತಿಗಳೆನಿಸುವ ಘನಶಿವ। ಶರಣ ಚಿದಂಗದಾ ಭರಣ ರುದ್ರಾಕ್ಷಿಯನು ॥೮॥

ನಿರುಪಮದ್ವಯ ಚನ್ನವೀರ ಮದ್ಗುರುವಿನ। ಪರಮಂತಃಕರಣ ಕಟಾಕ್ಷಮಾಲೆಗಳೆಂದು ॥೯॥



(೨೬) ಸುಲಭದೆ ಜಪಿಸೋ ಷಣ್ಮಂತ್ರವ। ಮನ। ವೊಲಿದಿಷ್ಟ ಲಿಂಗ ಸ್ವತಂತ್ರವ ॥ಪಲ್ಲ॥

ಬಿಡುವೇದ ಪದಗಳಾಪೇಕ್ಷೆಯ। ಇನ್ನು। ಕಡಿಯೊ ದುರ್ಭವದ ಜಾತಿವೃಕ್ಷವ।' ಪಡೆಯೋ ದೇಶಿಕನಿಂದ ದೀಕ್ಷೆಯ। ನೀನಿಡುಲಿಂಗ ದೊಳು ಪಿಂಗದಕ್ಷವ ॥೧॥

ಪರದ್ರವ್ಯಕೆ ಕೈಯ ನೀಡದೆ। ಕಾವಾ। ತುರದಿಂದ ಪರವೆಣ್ಣನೋ ಡದೆ। ಮರೆದೊಮ್ಮೆ ನರರ ಕೊಂಡಾಡದೆ। ಸ್ಥಾ। ವರದೈವಘನವೆಂದು ಪಾಡದೆ ॥೨॥

ವಿಷಯದಿಚ್ಛೆಗೆ ಮುಂದುವರಿಯದೆ । ಂದು । ವ್ಯಸನವೇಳನು ಕೂಡಿ ಬೆರೆಯದೆ ॥ ಆಸಮ ವಿಶ್ವಾಸ ಹಿಂಜರಿಯದೆ । ಮಾ । ನಸದೊಳೀಶ್ವರ ವನು ಮರೆಯದೆ ॥೩॥

ಅರಿ ವರ್ಗವನು ಗೆಲ್ವ ಶೌರ್ಯವ ಅಂ । ತಃ । ಕರಣವಿಜಯ ದುರು ಧೈರ್ಯವ । ನಿರುತ ನಿಶ್ಚಯ ಭಕ್ತಿ ತೂರ್ಯವ । ನಿತ್ಯ । ಪೊರೆವ ಕಾರಣ ಸತ್ಕಾರ್ಯವ ॥೪॥

ದುಷ್ಟ ದುರ್ಮದ ಗಜಸಿಂಗದ । ಬಹು । ಭ್ರಷ್ಟಕಾಯದ ಮಾನಭಂಗವ॥ ಅಷ್ಟವರಣಗಳಂತರಂಗದ । ತೋರು । ವಿಷ್ಟಲಿಂಗದ ಸುಪ್ರಸಂಗವ ॥೫॥

ಪರತರ ಪರಬ್ರಹ್ಮನಾದವ । ವಾಮ । ಕರದಿಷ್ಟಲಿಂಗ ನಿರ್ಭೇದವ। ಗುರುಚರಪರದಶ್ರೀಪಾದವ । ಅನ । ವರತ ಸಂತೃಪ್ತಿಪ್ರಸಾದವ ॥೬॥

ಅನುಭವಿಗಳ ಚಿಂತಾಮಣಿಯನು । ತನ್ನ ನೆನೆವರ ಪೊರೆವಸ ದ್ಗುಣವನು । ಮನು ಮಹಾಮಂತ್ರದಗ್ರಣಿಯನು । ಚಿ। ದ್ಘನ ಪಂಚ ಪರು ಷದ ಕಣಿಯನು ||೭||

ಮರುತ ಚಂಚಲ ಗುಣ ವೈರಿಯ । ಭಕ್ತಿ । ವಿರತಿ ಸುಜ್ಞಾನಾಧಿ ಕಾರಿಯು ॥ ದುರಿತ ದುರ್ಮಲದ ವಿದೂರಿಯ ।ಶಾಂತಿ। ಕರುಣ ವಿನಯ ಸುವಿಚಾರಿಯ ॥೮॥

ಭೃತ್ಯ ಭಕ್ತರ ಕಲ್ಪತರುವನು । ಪರ । ತತ್ವಜ್ಞಾನದ ನಿಜದಿರ ವನು । ಸತ್ಯಚಿತ್ತಾನಂದ ಕರವನು । ನಿಜ । ಸತ್ಯಪಾರಿಧಿಯ ಚಂದಿರ ವನು ॥೯॥

ಮರಣವಿಲ್ಲದ ನಿಜ ಹರಣವ । ಅಷ್ಟಾ ।ವರಣದಂಗದ ಗುರುಕ ರುಣವ ॥ ಶರಣರ ಅಂಗ ಲಿಂಗ ಕರಣವ । ಮಾಯಾ । ವರ್ಣವಿಲ್ಲದ ಪರಿ ಪೂರ್ಣವ ॥೧೦॥

ವೀರಶೈವದ ಕಾಮಧೇನುವ ಜ್ಞಾನ । ಸಾರ । ಹೃದಯಕಂಜ ಭಾ ನುವ॥ ವೀರಿದಾಚರಣೆ ಸಂಧಾನವ । ಚನ್ನ। ವೀರ ದೇಶಿಕನಭಿದಾನವ ॥೧೧॥



(೨೭) ಶ್ರೀಗುರೋತ್ತಮನೆ ಪಾಲಿಸೈ। ಬಾಗಿ ಬಂದವರ ನಿನ್ನಪೊ। ಲಾಗು ಮಾಡುವ ಸುಸೌಖ್ಯವ। ಸಾಗರಂ ಕೃಪಾಕರಂ ॥೧॥

ನೈಷ್ಠೆಯಿಂದಲಿ ತ್ರಿಕಾಲದೋಳ್। ದೃಷ್ಟಿ ವಾಙ್ಮನ ಸುಭಾವದಿಂ॥ ದಷ್ಟವರಣವೆಸ್ವಯುಂಗ।ದಿಷ್ಟಲಿಂಗವನು ಪೂಜಿಪೆ ॥೬॥

ಕಂಗಳಾಲಯುದೆಲಿಂಗವುಂ। ಪಿಂಗದರ್ಚನೆಯು ಮಾಡುವ ॥ ಸಂಗ ಮೇಶ್ವರ ಸುಧಾಕರಂ॥ ಜಂಗಮಾಂಘ್ರಿಗಳು ಕಾಯುಲಿ॥೩॥

ಸಾಧುಸದ್ಗುರುಪದಾಂಬು ವೀ। ರೈದು ನಾಮುದೊಳು ಭಕ್ತರಂ॥ ಭೇದ ವರ್ಜಿತಮಾಳ್ಪ ಶ್ರೀ।ಪಾದ ತೀರ್ಥವೆ ಸುಪಾಹಿ ಮಾಂ॥೪॥

ಶ್ರೀ ಗುರೋತ್ತಮನೆ ಶುದ್ಧಮಂ। ಭೋಗಲಿಂಗದ ವಿಸಿದ್ಧಮಂ ಯೋಗಿ ಜಂಗಮ ಪ್ರಸಿದ್ಧಮಂ। ಭೋಗಿಪೇಂ ತ್ರಿವಿಧ ಶೇಷಮಂ॥೫॥

ಚಾರು ಸದ್ಗುರುವೆ ಜ್ಞಾನದ। ಸಾರಮಂ ತೆಗೆದು ಮಾಡಿದ। ಕಾರಣ ಕ್ಷೀಯ ಸುಮಾಲೆಯು। ಹಾರಮಂ ಧರಿಸಿಕೊಂಬೆನು.।೭॥

ಅಂತರಂಗವನು ಹೊಂದಿ ನಿ।ಶ್ಚಿಂತನೆಂದೆನಿಸಿ ತೋರಿದ। ಶಾಂತ ಷಣ್ಮುಖದೊಳಿರ್ಪ ಷ।ಣ್ಮಂತ್ರ ಜಪಿಸುತಿರ್ಪೆನೂ ॥೮॥

ತನ್ನ ತಾನೆನಿಪ ಲಿಂಗಮಂ। ಭಿನ್ನವಿಲ್ಲನೆ ಪೂಜಿಸಿ॥ ಮುನ್ನನಾದಿಯನು ಹೊಂದಿದ। ಚನ್ನ ಶ್ರೀಗುರುವೆ ಪಾಹಿ ಮಾಂ॥೯॥

---

(೨೮) ಯಾರಧಿಕಾರವಿನ್ನೇನಯ್ಯ। ಸುವಿ।ಚಾರ ಸದ್ಗುರುರಾಯನಧಿಕಾರದ ಮುಂದೆ ॥ಪಲ್ಲ॥

ಬ್ರಹ್ಮೋತ್ತಮರಿಹಪರದೊಳು। ಪರ। ಬ್ರಹ್ಮಸ್ವರೂಪರೆಂದೆಂಬರು। ದುಷ್ಕರ್ಮಖ ಹೊಲೆಯ ಪೆಸಗೊಂಡು। ತಾವು। ಕರ್ಮಕ್ಕೆ ಒಳಗಾದ ರೀಕಯ್ಯ. ॥೧॥

ಮತಿಗೆ ಮಂಗಳವ ಕೊಡುವದಕ್ಕೆ। ಸರ।ಸ್ವತಿಯು ತನ್ನಧ್ಯಕ್ಷಳೆಂಬರು। ಗತಿಮೂಗುತಿಯುನುಳ್ಳ ಮೂಗನು ದು।ರ್ಮತಿಯಿಂದ ಕಳಕೊಂಡಳೇಕಯ್ಯ ॥೨॥

ಭೂಮಿಯು ಜೀವರುತ್ಪತ್ತಿಕೆ । ಚೆಲ್ವ । ಕಾಮನೆ ಮೊದಲಿಗನೆಂ ಬರು । ಆ ಮಹಾಲಕ್ಷ್ಮಿ ಮಾಧವರಿಗೆ । ಕಾಮ । ತಾ ಮೊದಲೆಂತು ಪುಟ್ಟಿ ದನಯ್ಯ ।೩॥

ಯಜ್ಞಾದಿ ಸರ್ವ ಕಾರಣಕೆಲ್ಲ । ನಿ । ರ್ವಿಘ್ನನೆ ಗಣಪತಿಯೆಂಬರು । ಅಗ್ನಿಗಣ್ಣಿನಿಂದಲಾತನ । ತಲೆ । ವಿಘ್ನಕ್ಕೆ ಒಳಗಾದುದೇಕಯ್ಯ ॥೪॥

ಏನು ಬೇಡಿದೊಡೀವ ಸುರತರು । ಕಾಮ । ಧೇನುಗಳುಂಟೆಂದ್ರಗೆಂ ಬರು । ತಾನೊಂದು ಬಯಸಿದೊಡಾತನ । ತನು । ಯೋನಿಮಂಡಲವಾ ದುದೇಕಯ್ಯ ॥೫॥

ಹಲವು ಲೋಕಗಳ ಸೃಷ್ಟಿಗೆ । ಒಬ್ಬ । ಜಲಜೋದ್ಭವನೆ ಮುಖ್ಯ ನೆಂಬರು । ಒಲುನಡುದಲೆದೊಲಗಿರಲಾಗಿ । ತನ್ನ । ತಲೆಯ ಪುಟ್ಟಿಸಿಕೊ ಳ್ಳನೇಕಯ್ಯ ॥೬॥

ಜಗವ ಮೂರನು ಪಾಲಿಸುವುದಕ್ಕೆ । ಒಬ್ಬ । ಖಗವಾಹನನೆ ಕರ್ತ ನೆಂಬರು । ಅಗಜೇಶ ಕಾಮನ ಸುಡುವಾಗ । ತನ್ನ । ಮಗನ ಪಾಲಿಸಿ ಕೊಳ್ಳನೇಕಯ್ಯ ॥೭॥

ಲೋಕಸಂಹಾರ ಮಾಡುವುದಕ್ಕೆ । ಉ । ದ್ರೇಕ ರುದ್ರನೆ ಕರ್ತನೆಂ ಬರು । ಏಕ ದಶಾವತಾರ ಮಾಡಿದ । ಕಲಿ । ಕಾಲರುದ್ರನೀನಾರಯ್ಯ ॥೮॥

ಈಶನಿಂದಧಿಕ ದೈವಂಗಳು । ಕೈ । ಲಾಸದೊಳಿಲ್ಲವೆಂದೆಂಬರು । ದೇಶ ಮರಿಯಲೊಂದು ದಿಕ್ಕಿಗೆ । ತಾ । ನೀಶಪಾಲಕನಾದುದೇಕಯ್ಯ ॥೯॥

ಪಾರ್ವತಿಪತಿ ಜೀವಮಾತ್ರರೊಳು । ತಾನು । ಸರ್ವಾಂತರ್ಯಾಮಿ ತಾನೆಂಬರು । ಪೂರ್ವತನ್ನಣುಗನ ತಲೆಯನು । ತಾನು । ಗರ್ವಿಸಿ ಹೊಡೆ ದುದದೇಕಯ್ಯ ॥೧೦॥

ಮೀರಿದಷ್ಟಾವರಣಂಗವು । ಪಂಚಾ । ಚಾರವೇ ಪ್ರಾಣವಾಗಿರುತಿಹ । ವೀರಶೈವಾಚಾರ ನಡೆನುಡಿಯು । ಚೆನ್ನ । ವೀರಮುದ್ಗರುರಾಯನಧಿಕಾರದ ಮುಂದೆ ॥೧೧॥

(೨೯) ಶೈವನಲ್ಲದ ವೀರಶೈವ ಷಟ್ಸ್ಥಲ ಬ್ರಹ್ಮ। ಐವರಧಿದೈವ ಜಂಗಮದೇವನು ॥ಪಲ್ಲ॥

ನಾಮರೂಪಿಗನಲ್ಲ। ಸೀಮೆಹಂಗಿಗನಲ್ಲ। ಹೇಮದಾಶಿಗನಲ್ಲ। ಕಾಮಿನಿಯರ। ಕಾಮದವನಲ್ಲಜಡ। ನೇಮವಿಡಿದವನಲ್ಲ ಸ್ವಾಮಿಚರಮೂರ್ತಿ ಜಂಗಮದೇವನು ॥೧॥

ಓತು ಷಣ್ಮತನಲ್ಲ। ಭೂತಭವಿಷ್ಯನಲ್ಲ ಜಾತಿಸ್ಮರ ತಾನಲ್ಲ ಭೂತಳದೊಳು ॥ ಖ್ಯಾತಿಯುತನಲ್ಲವವ। ಧೂತಮಾರ್ಗಿಗನಲ್ಲ। ಈತನೆ ಸಹಜ ಜಂಗಮದೇವನು ॥೨॥

ಮದುವೆಯಾದವನಲ್ಲ। ವಧುವನಾಳ್ದವನಲ್ಲ। ಮದವಸೀಳ್ದವನಲ್ಲ ಮಚ್ಚರಿಸುತ ॥ ಕದನಕರ್ಕಶನಲ್ಲ ಮದಡ ಜನವಶನಲ್ಲ। ಸದಮಲಾನಂದ ಜಂಗಮದೇವನು ॥೩॥

ಖಂಡಿತ್ರೈವೊಗನಲ್ಲ। ಕೆಂಡಗಣ್ಣಿಗನಲ್ಲ। ಕಂಡಸಿಂದವರೊಡನೆ ಕಲಹವಿಲ್ಲ ॥ ರುಂಡಮಾಲಿಗನಲ್ಲ। ಗಂಡುಗಾಸಿಗನಲ್ಲ। ಗಂಡರಿಗೆ ಗಂಡ ಜಂಗಮದೇವನು ॥೪॥

ಪಡಿಯ ಚೇಟಕನಲ್ಲ। ಒಡನೆ ಬೂಟಕನಲ್ಲ। ನಡುವೆ ಚಾಟಕನಲ್ಲ ಶೈವನಂತೆ ॥ ಕಡಿವ ಕಾಟಕನಲ್ಲ। ಬಡವ ಕೀಟಕನಲ್ಲ ಒಡೆಯರಿಗೆ ಒಡೆಯ ಜಂಗಮದೇವನು ॥೫॥

ಮುಗಿಲೊಳಿದ್ದವನಲ್ಲ। ತೊಗಲಸೊದ್ದವನಲ್ಲ। ಬಗೆಬಗೆಯ ಗಾರುಡದಸಿದ್ಧನಲ್ಲ ॥ ಹಗಲಗೆದ್ದವನಲ್ಲ। ಮಗನಪೆದ್ದವನಲ್ಲ। ಹಗರಣಿಗನಲ್ಲ ಜಂಗಮದೇವನು ॥೬॥

ಎಲುಮಾಲೆಧರನಲ್ಲ। ತಲೆಯೊಡಕಿಗನಲ್ಲ। ಜಲಜಡಪೆಣ್ಪೊತ್ತು ಮೆರೆವನಲ್ಲ। ಒಲುಮಹಿಮಪರನಲ್ಲ। ಕಲಹಕಾರಕನಲ್ಲ। ಸುಲಭ ಚರಮೂರ್ತಿ ಜಂಗಮದೇವನು ॥೭॥

ಕಣೆಯನು ಸುರುವನಲ್ಲ। ಮಣಿಯ ಧರಿಸುವನಲ್ಲ। ಕ್ಷಣಕೊಂದು ರೂಪ ಬೋಧಿಸುವನಲ್ಲ ॥೮॥

ಈ ರೀತಿಯೊಳು ಶೂನ್ಯಾಕಾರಮೂರ್ತಿಯು ತನ್ನ। ವೀರಶೈವಾಚಾರ ಸುಪ್ರಸನ್ನ। ದೋರಿಸಲಹಿದನೆನ್ನ। ಚಾರು ನಡೆಸುಡಿ ಚನ್ನವೀರಮಹೇಶ ಜಂಗಮದೇವನು ॥೯॥

### ರಾಗ-ರೇಗುಪ್ತಿ.

(೩೦) ಬದುಕಿದೆ ನಾಂ ಬದುಕಿದೆ ಸತ್ಯ ಸದಮಲ ಸಂಗನಬಸವನಂಘ್ರಿಯ ಕಂಡು ॥ಪಲ್ಲ॥

ಬಾಗಿ ಬಂದವರ ತನ್ನಂತೆ ಮಾಡುವ ಕರ್ತೃ । ಶ್ರೀಗುರು ಸಂಗನಬಸವನಂಘ್ರಿಯ ಕಂಡು ॥೧॥

ಕಂಗಳಾಲಯದಿಷ್ಟಲಿಂಗಕ್ಕೆ ತನುವೆ ಸ । ರ್ವಾಂಗೈಕ್ಯ ಸಂಗನಬಸವನಂಘ್ರಿಯ ಕಂಡು ॥೨॥

ಮಂಗಳಾತ್ಮಕ ಪರತತ್ವವೆ ನಿರುಪಾಧಿ । ಜಂಗಮ ಸಂಗನಬಸವನಂಘ್ರಿಯ ಕಂಡು ॥೩॥

ಸ್ವಯಂಚರ ಪರಶ್ರೀ ಚರಣದಿಂದೊಗೆದ ಚಿ । ನ್ಮಯತೀರ್ಥ ಸಂಗನಬಸವನಂಘ್ರಿಯ ಕಂಡು ॥೪॥

ತನು ಶುದ್ಧ ಮನ ಸಿದ್ಧ ಭಾವ ಪ್ರಸಿದ್ಧ ಚಿ । ದ್ಘನಶೇಷ ಸಂಗನಬಸವನಂಘ್ರಿಯ ಕಂಡು ॥೫॥

ಅಸಮರೂಪಕದ ತ್ರೈಪುಂಡ್ರ ಚಿ । ದ್ಭಸಿತ ಶ್ರೀಸಂಗನಬಸವನಂಘ್ರಿಯ ಕಂಡು ॥೬॥

ಚರಣಸಖನನಾಮವೆರಸದಮಾಲೆಯ । ವರಕಳೆ ಸಂಗನಬಸವನಂಘ್ರಿಯ ಕಂಡು ॥೭॥

ಲಿಂಗಾಭಿಧಾನ ಷಣ್ಮಂತ್ರವೆ ಚಿತ್ಪ್ರಾಣ । ಲಿಂಗ ಶ್ರೀಸಂಗನಬಸವನಂಘ್ರಿಯ ಕಂಡು ॥೮॥

ವೀರಶೈವಾಚಾರ ಸಾರ ಸದ್ಗುರು ಚನ್ನ । ವೀರಶ್ರೀ ಸಂಗನಬಸವನಂಘ್ರಿಯ ಕಂಡು ॥೯॥

---

### ರಾಗ—ಸಾವೇರಿ.

(೩೧) ಗೋವಿಂದನಾದಿ ಗೋವಿಂದ । ನಮ್ಮ ಗೋವಿಂದಲಾದ ಪಾವನ ಪಾಂಡುರಂಗ ॥ಪಲ್ಲ॥

ಶ್ರೀವಿಭೂತಿಯು ಪಂಚಗೋವಿಂದ । ವೀರಶೈವಾಗಮೋಕ್ತವು

ಗೋವಿಂದ । ಜೀವಪಂಚಾಮೃತಗೋವಿಂದ । ಜಗಜ್ಜೀವ ಸಂತೃಪ್ತಿಯು ಗೋವಿಂದ ॥೧॥

ಹವ್ಯಕವ್ಯಗಳೆಲ್ಲ ಗೋವಿಂದ। ಷಡುಗವ್ಯ ಸಮ್ಮಾರ್ಜನೆ ಗೋವಿಂದ। ದ್ರವ್ಯಸಂಗಳಿಕೆಯು ಗೋವಿಂದ ॥ ಮಹ ದಿವ್ಯಪ್ರಕಾಶವು ಗೋವಿಂದ ॥೨॥

ಗೋತ್ರಹೋತ್ರವು ನಮ್ಮ ಗೋವಿಂದ । ಪುಣ್ಯಕ್ಷೇತ್ರಯಾತ್ರೆಗಳೆಲ್ಲ ಗೋವಿಂದ ॥ ಧಾತ್ರಿಪಾವನ ಗಾತ್ರ ಗೋವಿಂದ । ಸುಪವಿತ್ರ ಚರಿತ್ರವು ಗೋವಿಂದ ॥೩॥

ಅಭವ ವಾಹನವು ತಾ ಗೋವಿಂದ । ಬಹು ಶುಭಮಂಗಲೆಯು ಜಾತ ಗೋವಿಂದ ॥ ವಿಬುಧಗಮನ ಶ್ವೇತ ಗೋವಿಂದ । ಕೃಷ್ಣನುಭಯಾಂಬಕ ವ್ರತ ಗೋವಿಂದ ॥೪॥

ಮೂರುತಾಪ ವಿನಾಶ ಗೋವಿಂದ । ಸುವಿಚಾರಮೋಕ್ಷ ವಿಲಾಸ ಗೋವಿಂದ ॥ ಸಾರಸುಖ ವಿಶೇಷ ಗೋವಿಂದ । ಚನ್ನವೀರಮದ್ಗುರುವಾಸ ಗೋವಿಂದ ॥೫॥



ರಾಗ—ಭೈರವಿ.

(೩೨) ಜಡವೆಂದು ನುಡಿಯ ಬಹುದೆ ಶರಣಜನ ।ರೊಡಲೆನಿಪ ಸತ್ಕ್ರಿಯೆಯ ಮರುಳೆ ॥ಪಲ್ಲ॥

ಸರಸದಿಂದಡಿಗೆರಗಿದ ಶಿಷ್ಯನಂ । ತರದ ಚಿತ್ಕಳೆಯ ತೆಗೆದು ಕೊಟ್ಟ ॥ ಕರಪೀಠದಿಷ್ಟಲಿಂಗವಿದು ನಿನ್ನ। ಹರಣವೆಂದೊರೆದ ಗುರುವ ಮರುಳೆ ॥೧॥

ಕಂಗಳಾಲಯದೊಳಗೆ ಸದುಭಕ್ತ ।ನಂಗಮನಭಾವಂಗಳನೊಳಕೊಂಡು ॥ ಜಂಗಮವೇ ಪ್ರಾಣವಾಗಿ ಸತ್ಕ್ರಿಯ ಲಿಂಗಪೆಸರೊಡೆದಿಪ್ಪ ಮರುಳೆ ॥೨॥

ಅರಿವೆ ಆಚಾರವಾಗಿ ಆಚಾರ ।ದಿರವಿಷ್ಟಲಿಂಗವಾಗಿ ಆ ಲಿಂಗ ॥ ವರಮಂತ್ರ ಮೂರ್ತಿಯಾಗಿಸಂ।ಚರಿಪಪರಮಪಾವನಜಂಗಮಮರುಳೆ॥೩॥

ಪಾದೋದಕದಾಚರಣೆಯ ಪಿಡಿದಿಹ ।ನಾದಿ ಶರಣನ ಘನತೆಯ ನೆರೆಕಂಡು ॥ ಪಾದಾಂಬು ಪರಬ್ರಹ್ಮವು ಎಂದು ಶಿವನೋ ।ದಿದಾಗಮವ ಕೇಳು ಕೇಳು ಮರುಳೆ ॥೪॥

ಗುರು ಕೊಟ್ಟ ಲಿಂಗ ಶುದ್ಧಲಿಂಗದೆ।ಚ್ಚರದೊಳಿಹ ಮನವೆ ಸಿದ್ಧ ಉಭಯದನುವಲಿದ ಭಾ ।ವಪ್ರಸಿದ್ಧ ಇಂತಪ್ಪ । ಗುರುಲಿಂಗಚರಪ್ರಸಾದವ ಮರುಳೆ ॥೫॥

ಸುಳಿವ ಜಂಗಮಲಿಂಗದ ಸದುಹೃದನು। ನಳಿನ ದಳಕುಳದಿ ಪೊಳೆವ ಶಾಂತ ಚಿ ।ತ್ಕಳೆಯು ಬೆಳಗಿನ ಪೂಜೆಯು। ಬಲಿದುಬ್ಬುಳಿಯುದ ಚಿದ್ಭಸಿತವಮರುಳೆ ॥೬॥

ಅಂಗಗುಣಂಗಳ ದಹಿಸಿದ ಸುಜ್ಞಾನ। ಕಂಗಳಭಿಧಾನದಿಂದಲಿಂಗದ ಚಿ। ದಂಗದಾಭರಣವಾಗಿ ರಂಜಿಸುವ। ಮಂಗಳಕರಕ್ಷಿ ಮಣಿಯು ಮರುಳೆ ॥೭॥

ಪರಮ ಶ್ರೀಗುರುದೇವನ ಚೈತನ್ಯ ।ದಿರವೆನಿಸ ಚರಮೂರ್ತಿಯ । ಕರದೊಳಿಹ । ನಿರುತ ಚಿದ್ಘನಲಿಂಗದ ಪೆಸರೆನಿಪ। ವರಷಡಕ್ಷರಮಂತ್ರವ ಮರುಳೆ ॥೮॥

ಸನ್ಮುತಷಾಟ್ವರಣವೆ ಕ್ರಿಯ್ಯೆಗೆ । ಚಿನ್ಮಯಾತ್ಮಕಲಿಂಗವೇ ಪ್ರಾಣ। ಸನ್ನುತ ಚರಮೂರ್ತಿಯಾಗಿ ಸುಳಿವ ಗುರು ಚನ್ನವೀರನ ವಿಗ್ರಹವ ಮರುಳೆ ॥೯॥

---

ರಾಗ— ಕಸುಮ ಷಟ್ಪದಿ

(೩೩) ಶ್ರೀಗುರುವಿನುಪದೇಶವಾಗಿರ್ದಡವಗೆ ಭವ । ರೋಗಿದು ಭೋಗಿ ಎಂದೆನಲಾಗದು ॥ಪಲ್ಲ॥

ಪಂಕಜಮಧ್ಯದೊಳೊಗೆದ ಪಂಕಜೋಪಾದಿಯೊಳು। ಶಂಕರನ ಮಸ್ತಕವನೇರ್ವಂದದಿ ॥ ಬಿಂಕು ಬಿಗು ಮಾನವರ ಅಂಕಿತವ ಧರಿಸಿ ಗುರು ದಂಕರೆಂದೆನಿಸುವರು ಶಿವಶರಣರು ॥೧॥

ಭೃಂಗಕುಸುಮದ ಕಂಪ ಹಿಂಗಲಾರದೆ ಜಿನುಗಿ। ಹ್ಯಾಂಗೆ ಝೇಂಕರಿಸುವದು ಹಾಂಗೆ ಮಧುರ ಮಂಗಳಾತ್ಮಕರು ತಮ್ಮಂಗ ಷಟುಸ್ಥಲದಿಷ್ಟ। ಲಿಂಗ ಷಣ್ಮಂತ್ರದೊಳು ತೊಳಲುತಿಹರು ॥೨॥

ಗುರುಲಿಂಗಜಂಗಮರ । ಶರೀರಮನಭಾವದೊಳು । ಕರದಿಷ್ಟ ಪ್ರಾಣ ಭಾವಂಗಳಾಗಿ । ಧರಿಸಿ ತ್ರೈಲಿಂಗದೊಡವೆರೆದ ಶಿವಶರಣಂಗೆ ನರಮನುಜರೆಂದು ಕಲ್ಪಿಸಬಾರದು ॥೩॥

ಪೊಡವಿಯರಿಯಲು ಮಣ್ಣಮಡಕೆಯನು ಮಾಡುವರು । ಮಡಕೆ ವಡೆದರೆ ಮರಳಿ ಮಣ್ಣಪ್ಪುದೆ । ಎಡೆಬಿಡದೆ ಶ್ರೀಗುರುವಿನಡಿಪಿಡಿದು ಲಿಂಗಾಂಗದೊಡವೆರೆದ ಸದ್ಭಕ್ತ ಭವಿಯಪ್ಪನೇ ॥೪॥

ಸ್ವಾತಿಜಲವಮುತ್ತು ತಾನೇತರೊಳಗಿರ್ದಡೆಯು । ನೀತಿದಪ್ಪಿ ಮರಳಿ ನೀರಪ್ಪುದೇ ॥ ಖ್ಯಾತಿ ಶರಣಂಗೆ ವಿಭೂತಿ ವೀಳ್ಯವ ಮಾಡಿ । ಭೂತಳದೊಳುಳಿಯೆ ಮಾನವನಪ್ಪನೇ ॥೫॥

ಕಾಷ್ಠದಿಂದೊಗೆದಗ್ನಿ ಕಾಷ್ಠವನು ಸುಟ್ಟಿರುಹಿ । ಕಾಷ್ಠಭೇದವದು ಕಡೆಯೊಳಿಪ್ಪುದೇ ॥ ದೃಷ್ಟಿದ್ವಾರದೊಳೊಗೆದ ಇಷ್ಟಲಿಂಗಾಗ್ನಿಯೊಳು । ಸುಟ್ಟು ನಿರ್ದೇಹಿ ತಾ ಜಡಜೀವಿಯೇ ॥೬॥

ಮರುತನ ಬಳಿವಿಡಿದು ಸಾರಿ ಗಮಿಸುವ ದಿವ್ಯ ಸೌರಭಂ । ತಾ ಮರಳಿ ತಿರುಗಲುಂಟೇ ಮೂರುಸ್ಥಲವನು ಮೀರಿ ಆರುಸ್ಥಲವನು ಒಳವಿಡಿದು ದಾರಿಗೊಂಡವರಿತ್ತ ಮರಳಲುಂಟೆ ॥೭॥

ಅಂಬರಕೆ ಹೋದ ಹೊಗೆ ಕುಂಭಿನಿಗೆ ಮರಳುವುದೆ । ಶಂಭುವಮಾನವನೆ ಕೇಳದರಂದದಿ ಶಂಭು ಜಂಗಮದ ಪಾದಾಂಬುಜದ ಗಂಧಕೆ ತುಂಬಿಯಾದವರು ನರಜೊಂಬೆಯಹರೇ ॥೮॥

ಕ್ಷೀರದಿಂದಾದ ಘೃತ ಕ್ಷೀರವಪ್ಪುದೆ ಮರಳಿ ಸಾರಿ । ಹೇಳುವೆನು ಕೇಳಾ ಪರಿಯೊಳು । ಚಾರು ನಡೆ ನುಡಿ ಚೆನ್ನವೀರಮುದ್ಗುರುವರನ ಕಾರುಣ್ಯವಡೆದು ಜಡಮತಿಯಪ್ಪರೇ ॥೯॥

---

ರಾಗ— ದೇಶಿ

(೩೪) ಪರಮಪಾವನ ಶ್ರೀಗುರು ಕೊಟ್ಟ ಕಾಯಕ ಸತ್ಯವಣ್ಣಾ ॥ ಶರಣ ಸಂತತಿಗೆ ಸದ್ಯೋನ್ಮೋಕ್ಷದಾಯಕ ಸತ್ಯವಣ್ಣಾ ॥ಪಲ್ಲ॥

ಅರುವಿನೆಚ್ಚರವಿಡಿದನ್ಯವ ಮರೆವುದೇ ಸತ್ಯವಣ್ಣಾ । ಕರದಿಷ್ಟಲಿಂಗ ಪಾವನಾಮೃತಗರೆವುದೇ ಸತ್ಯವಣ್ಣಾ ॥ ಪರರ ದ್ರವ್ಯದ ಮೇಲಣಾಶೆಯ

ತೊರಿದುದೆ ಸತ್ಯವಣ್ಣಾ । ತ್ವರಿತದಾನವೆ ಮಹಪುಣ್ಯವೆಂದರಿದುದೆ ಸತ್ಯವಣ್ಣಾ ॥೧॥

ಒಡಲವಿಡಿದು ತಾನೆ ನಡೆದಂತೆ ನುಡಿದುದೆ ಸತ್ಯವಣ್ಣಾ । ಪಿಡಿದ ನೇಮವ ಕಡೆತನಕ ಬಿಡದುದೇ ಸತ್ಯವಣ್ಣಾ ॥ ಮೃಡಶರಣರಿಗೆ ಮಾರುತ್ತರಗೊಡದುದೇ ಸತ್ಯವಣ್ಣಾ । ಒಡೆಯರಂಘ್ರಿಯ ದೃಢತನದಿ ಪಿಡಿದುದೆ ಸತ್ಯವಣ್ಣಾ ॥೨॥

ದುರಿತಪಂಚಕವೆಂಬ ವನಕೆ ಕುಠಾರವೆ ಸತ್ಯವಣ್ಣಾ । ಅರಿವರ್ಗಗಿರಿಗೆ ವಜ್ರಾಯುದಕಾರವೆ ಸತ್ಯವಣ್ಣಾ । ವರವೇದಾಗಮಶ್ರುತಿ ಶಾಸ್ತ್ರದಸಾರವೆ ಸತ್ಯವಣ್ಣಾ । ಶರಣ ಸಂಕುಳದ ಸನ್ಮಾನ ವಿಸ್ತಾರವೇ ಸತ್ಯವಣ್ಣಾ ॥೩॥

ಭವ ತಮವನು ಕೆಡಿಸುವ ಚಿದ್ಭಾನುವೆ ಸತ್ಯವಣ್ಣಾ । ಶಿವಸುಖಾಮೃತವ ಕರೆವ ಕಾಮಧೇನುವೇ ಸತ್ಯವಣ್ಣಾ । ತವೆಚಿಂತಾಮಣಿಯ ಪೋಣಿಸುವ ಪ್ರಸೂನವೇ ಸತ್ಯವಣ್ಣಾ । ಭುವನತ್ರಯದಿ ನೋಡೆ ಬಹುಪೂಜ್ಯ ಮಾನಸವೇ ಸತ್ಯವಣ್ಣಾ ॥೪॥

ಕರಣನಿಕರವೆಂಬ ಶುನಿಗಳಿಗೆ ಬಡಿಗೋಲೆ ಸತ್ಯವಣ್ಣಾ । ಕೊರತೆ ಸಂಸಾರ ತೊರೆಯ ಹಾಯ್ವಹರಿಗೋಲೆ ಸತ್ಯವಣ್ಣಾ ॥ ಪರತತ್ವದನುಭಾವ ಮಥನದ ಕಡೆಗೋಲೆ ಸತ್ಯವಣ್ಣಾ । ವರಭಕ್ತಿ ಗಜವು ಚಪ್ಪರಿಪ ಸದ್ವಿನಿಗೋಲೆ ಸತ್ಯವಣ್ಣಾ ॥೫॥

ಓತು ಸಚ್ಚರಿತ ಸದ್ವಾಸನಾ ದೀಪವೇ ಸತ್ಯವಣ್ಣಾ । ಖ್ಯಾತಿ ಪಡೆದು ಬೆಳಗುವ ಘನದೀಪವೇ ಸತ್ಯವಣ್ಣಾ ॥ ನೀತಿ ನಿಜವಿದೆಂಬ ತಿಳಿನೀರ ಕೂಪವೆ ಸತ್ಯವಣ್ಣಾ । ಅತುಮವಿಡಿದ ಪ್ರಪಂಚನಿರ್ಲೇಪವೆ ಸತ್ಯವಣ್ಣಾ ॥೬॥

ಆಚಾರವೆಂಬ ಸುಧಾಬ್ಧಿವರ್ಧನರಿಂದು ಸತ್ಯವಣ್ಣಾ । ನೀಚವೃತ್ತಿಯ ನಳಿದುಳಿದ ಭಕ್ತರ ಬಂಧು ಸತ್ಯವಣ್ಣಾ ॥ ವಾಚಾಮಗೋಚರವಾಗಿ ತೋರುವದೊಂದು ಸತ್ಯವಣ್ಣಾ । ಗೋಚರಿಸುವ ಶಿವಶರಣ ಕೃಪೆಯಸಿಂಧು ಸತ್ಯವಣ್ಣಾ ॥೭॥

ಕಾಯಕವಿಡಿದು ಕರ್ಮವನತಿಗಳೆವುದೆ ಸತ್ಯವಣ್ಣಾ । ಮಾಯಾಮೋಹವೆ ಭವಪಾಶವೆಂದುಳಿದುದೆ ಸತ್ಯವಣ್ಣಾ ॥ ಕ್ರಿಯಾಜ್ಞಾನಗಳೆಂಬ ಚರ

ಣದಿ ಸುಳಿದುವೆ ಸತ್ಯವಣ್ಣಾ । ಕಾಯುವಮಾನಸದ ದುರ್ಗುಣಗಳ ನಳಿ ದುದೆ ಸತ್ಯವಣ್ಣಾ ॥೮॥

ಸುರಿತ ಭೋಗಕೆ ಪಟ್ಟಿದರಸಿಯು ಕಂಟಿನೆ ಸತ್ಯವಣ್ಣಾ । ಪರಶಿವ ಲಿಂಗದೊಳ ನಿಮಿಷ ನೋಟವೆ ಸತ್ಯವಣ್ಣಾ ॥ ನಿರುತ ಜಂಗಮುಲಿಂಗ ದಾಸೋಹ ಮಾಟನೆ ಸತ್ಯವಣ್ಣಾ । ಗುರುಭಕ್ತಿವಿಡಿದು ಪ್ರಮಥರೊಡ ನಾಟವೇ ಸತ್ಯವಣ್ಣಾ ॥೯॥

ಮದಗಜವಿಂಡ ಸಂಹರಿಸುವ ಸಿಂಹವೆ ಸತ್ಯವಣ್ಣಾ । ಸದಮಲ ಸಹಜ ಸಜ್ಜನರಂತರಂಗವೇ ಸತ್ಯವಣ್ಣಾ ॥ ಮುದವಲರುವ ಸದುಹೃದ ಯರೋತ್ತುಂಗವೇ ಸತ್ಯವಣ್ಣಾ । ಒದಗುವ ಸಟಿ ಕುಟಿಲರ ಮಾನಭಂಗವೆ ಸತ್ಯವಣ್ಣಾ ॥೧೦॥

ಶರಣುಹೊಕ್ಕವರ ದುರ್ಭವ ಪಾಶನಾಶ ಶ್ರೀ ಸತ್ಯವಣ್ಣಾ । ಹರ ಣದಳವಿನ ಸುಜ್ಞಾನ ಪ್ರಕಾಶ ಶ್ರೀ ಸತ್ಯವಣ್ಣಾ ॥ ಮರಣ ರಹಿತಸದ್ಯೋ ನ್ಮೋಕ್ಷಕೋಶ ಶ್ರೀ ಸತ್ಯವಣ್ಣಾ । ಕರುಣಸಾಗರ ಚನ್ನವೀರ ಮದೀಶ ಶ್ರೀ ಸತ್ಯವಣ್ಣಾ ॥೧೧॥

---

ರಾಗ—ರೇಗುಪ್ತಿ.

(೩೫) ನವಬ್ರಹ್ಮಲಿಂಗಗಳು ಭಜಿಸೂವೆ । ನಾ ಭಜಿಸೂವೆ । ನಿತ್ಯ ನಿಜವಾಮುಕರದಿಷ್ಟ ಬ್ರಹ್ಮರಂಘ್ರಿಯು ನಂಬಿ ॥ಪಲ್ಲ॥

ಶೀಲಸದ್ಭಕ್ತನೈದಾಚಾರಂಗವ ಮುಕ್ತಿ ಮೂಲಾಧಾರದ ಮೂರ್ತಿ ಬ್ರಹ್ಮದಂಘ್ರಿಯು ನಂಬಿ ॥೧॥

ಅಹಂ ಅಳಿದ ಮಹೇಶನ ಗೌರವಂಗದ ಗುಹ್ಯಸ್ಥಾನದ ಖಂಡ ಬ್ರಹ್ಮದಂಘ್ರಿಯು ನಂಬಿ ॥೨॥

ಶೋಭಿಪ ಸುಪ್ರಸಾದಿಯು ಶ್ರೀ ಶಿವಲಿಂಗದ ನಾಭಿಸ್ಥಲದ ಕಲಾ ಬ್ರಹ್ಮದಂಘ್ರಿಯು ನಂಬಿ ॥೩॥

ಸದಮಲ ಪ್ರಾಣಲಿಂಗಿಯು ಜಂಗಮಾಂಗದ ಹೃದಯ ಸ್ಥಾನಾ ನಂದ ಬ್ರಹ್ಮದಂಘ್ರಿಯು ನಂಬಿ ॥೪॥

ವಿಳಸಿತ ಶರಣನ ಸುಪ್ರಸಾದಂಗದ ಗಳದ ಶ್ರೀ ವಿಜ್ಞಾನ ಬ್ರಹ್ಮದಂಘ್ರಿಯ ನಂಬಿ ॥೫॥

ಸಕಲ ಲಿಂಗೈಕ್ಯನ ಶ್ರೀಮುಖದಂಗದ ಭ್ರುಕುಟಿಸ್ಥಾನದ ವರ ಬ್ರಹ್ಮದಂಘ್ರಿಯ ನಂಬಿ ॥೬॥

ತಂದೆ ಶ್ರೀಗುರುವಿನ ತ್ಯಾಗಾಂಗದ ಬ್ರಹ್ಮರಂಧ್ರದ ನಿಷ್ಕಳ ಬ್ರಹ್ಮದಂಘ್ರಿಯ ನಂಬಿ ॥೭॥

ಲಿಂಗಜಂಗಮದ ಭೋಗಾಂಗದ ಶಿಖಿಕರ್ಪೂರಂಗಳಾಲಿಯ ಶೂನ್ಯ ಬ್ರಹ್ಮದಂಘ್ರಿಯ ನಂಬಿ ॥೮॥

ಅಸಮಜಂಗಮಲಿಂಗ ಯೋಗಾಂಗ ದಹಿಸುವ ನಿರಂಜನ ಬ್ರಹ್ಮದಂಘ್ರಿಯ ನಂಬಿ ॥೯॥

ಅವಿರಳಲಿಂಗಾಂಗ ಸಂಗಸಂಯೋಗದ ಸುವಿವೇಕ ನವವಿಧ ಬ್ರಹ್ಮದಂಘ್ರಿಯ ನಂಬಿ ॥೧೦॥

ವೀರಶೈವಾಚಾರ ಸಾರಸದ್ಗುರು ಚನ್ನವೀರ ಪರಾತ್ಪರ ಬ್ರಹ್ಮದಂಘ್ರಿಯ ನಂಬಿ ॥೧೧॥

---

## ಪದ.

(೩೬) ಲಿಂಗಮಾಡಿದರುಯ್ಯಾಲೆ । ಷಟ್ಸ್ಥಲ ಸುಸಂಗಿಗಳ ಕರದೊಳ್ಸಲೆ ॥ಪಲ್ಲ॥

ಸತ್ಯದಿಂ ಕ್ರಯವಿಕ್ರಯ । ಮಾಡಿಬಂದರ್ಥ ಚರಗುರುವಿನುಭಯ ನಿತ್ಯದಾಸೋಹ ಪ್ರಿಯಭಕ್ತನ ಸುಚಿತ್ತಹಸ್ತದಿ ಸತ್ಕ್ರಿಯ ॥೧॥

ಬದ್ಧವೀರಶೈವರೊಡವ । ಬೇಡಿನವಿಶುದ್ಧನೈಷ್ಠಿಯೋಳ್ಮೆರವ । ನಿರ್ಧರ ಸಿರವಸು । ಬುದ್ಧಿಕರದೊಳ್ ಗೌರವ ॥೨॥

ಅರ್ಪೈದು ನಿಜಶೇಷವ । ಪಡೆದುಂಡು ಮೂರಾವಸ್ಥೆಯ ದಹಿಸುವ । ಧೀರಪ್ರಸಾದಿಗೆಸೆವ । ನಿರಹಂಕಾರ ಕರಪೀಠದಿ ಶಿವ ॥೩॥

ಅಮಲ ಶಿವಲಿಂಗದಿ ಕ್ರಮ । ಸುಖದುಃಖಸಮಗೊಂಡು ಅಳವಟ್ಟು ಶಮಯುಗ್ರಕೆಡಕೋತ್ತಮ । ಚರಿಸುವಸಮಾ ಅಸುಲಿಂಗಿ ಸುಮನ ಕರದೊಳ್ ಜಂಗಮ ॥೪॥

ನಾನು ನೀನಳಿದ ಭೇದಾಲಿಂಗಕ್ಕೆ । ತಾನೆ ನಿಜಸತಿಯುಳಾದ। ದಾನಿ । ಶರಣನ ವಿನೋದ । ಮೆನಿಪ ಸುಜ್ಞಾನಹಸ್ತದಿಪ್ರಸಾದ ॥೫॥

ಜೀವಪರಮರ ಸಂಗಹೋದಂತೆ ಸಂಜೀವಲಿಂಗದೊಳೊಂದಿಹ ನಾವಿಕನವನ್ಸೈ ಕಾಷ್ಠಹಾ । ನವುಲಸದ್ಭಾವಕರಪೀಠದಿ ಮಹಾ ॥೬॥

ಕಾಲಕಲ್ಪಿತವಿದೂರ। ತತ್ವದ ಸಕೀಲವರ್ಮದಸುಸಾರಾ। ಶೀಲ ನಡೆನುಡಿ ವಿಚಾರ ಪರಮಸುಖವಿಲೋಲಗುರುಚನ್ನವೀರಾ ॥೭॥

---

(೨೭) ಶ್ರೀಶಿವಾನುಭಾವಾಮೃತಾರ್ಣವ ಪೂರ್ಣ ಚಂದ್ರಗಣೇಂದ್ರಸಂ। ಕಾಶಪೂತವಿಭೂತಿ ಸ್ನಾನ ಸುಧೂಳಧಾರಣ ಜ್ಯೋತಿಸ ॥ವೇಶ ಷಸ್ಥ,ತಶೀಲಭಾವನ ಭಕ್ತಪಾಲನವೀರ ಮ । ಹೇಶ ಶ್ರೀಚರಲಿಂಗವಂಘ್ರಿಗಳೊಲ್ದು ಕಾಯಲಿ ಸತತಂ ॥೧॥

ಅಣವಾದಿ ಮಲತ್ರಯ ಪ್ರವಿದೂರ ತತ್ವವಿಚಾರಕ।ಲ್ಯಾಣ ಶ್ರೀವೃಷಭೇಶ ಮುಖ್ಯ ಸ್ವಕೀಯ ಭಕ್ತಿಯೊಳ್ ಪ್ರಿಯ ನಿ॥ರ್ವಾಣರೂಪ ಸಚಿತ್ಕಲಾಪ ಚಿತಶ್ರೀಕೌಪದದಿಷಡಕ್ಷ್ರಣಿಯೋಲ್ಪಿಡದಿರ್ಪ ಜಂಗಮಪಾದವೆಮ್ಮನು ಕಾಯಲಿ ॥೨॥

ಭಕ್ತಿ ಜ್ಞಾನ ವಿರಕ್ತಿ ಸಂಪದವಿತ್ತು ಬ್ರಹ್ಮದ ಗೊತ್ತು ಸ।ದ್ಭಕ್ತರಂತರ ಬಹಿರಂಗ ಪ್ರಸಂಗಿಕಂ ಮಹಾಲಿಂಗಿಕಂ ॥ತೋಕ್ತ ಷಡುಸ್ಥಲಸಾರಯೋಗ ಸುಮಾರ್ಗ ಮೀರಿದ ಕ್ರಿಯಸಂ।ಯುಕ್ತ ಮುಕ್ತಿಫಲಪ್ರದಂ ಚರ ಪಾದವೆಮ್ಮನು ಕಾಯಲಿ ॥೩॥

ದೇಶಗ್ರಾಮ ಸುಗೇಹ ಬಂಧನ ವಾರ್ಜಿತಂ ಸಕಲೋರ್ಜಿತಂ॥ ಈಶ ಶ್ರೀ ಗುರುಲಿಂಗಜಂಗಮತೀರ್ಥ ಶೇಷವಿಭೂತಿ ಪ್ರೋ॥ಛ್ಛಿ ಶಿವಾಕ್ಷಿಷಡಕ್ಷರಾವಿಕ ವರ್ಣ ಭೂಷಣ ಪುಣ್ಯ ಕ್ಷೇತ್ರ।ದಿ ಸತ್ವರ ಜಂಗಮಂಘ್ರಿಗಳೊಲ್ದು ಕಾಯಲಿ ಸತತಂ ॥೪॥

ಜೀವಭಕ್ತ ಸದೇಶಗ್ರಾಮ ಸುವರ್ಣಾಲೋಷ್ಠ್ರಗಳೊಂದೆಯಂ।ದಾವಗಂ ರಮಾರಾಜಜನಂಗಳ ಸದ್ವಿಶೀಯ ಮತಕೇಸ। ದ್ಭಾವಿಕಂ ನಿರು

ಪಾಧಿಕಂ ಪರಮಾರ್ಥಿಕಂ ಸ್ವಯತಾಂತ್ರಿಕಂ ವ್ಯೋಮದೆನ್ನ ಜಸ್ರ ಜಂಗಮಲಿಂಗದಂಘ್ರಿಗಳರ್ಥಿಯಿಂ ॥೫॥

ನೈಷ್ಠೆಯಿಂದಲಿ ತಟ್ಟಿ ಮುಟ್ಟದ ಕಂಡು ಕೇಳಿದಂತಾ ಕೃಪಾದೃಷ್ಟಿಯಿಂದವಲೋಕಿಸುತ್ತಲಿ ದೈನ್ಯರಂ ನೆರೆ ಮಾಳ್ಪನಂ । ತುಷ್ಟಪಾವನಾಚಾರ್ಯ ಮಾಚರಣೈಕ ಪ್ರಣಮ ತುಷ್ಟ ಶ್ರೀ ಪಂಚಾಂಗಮಂಘ್ರಿಗಳೊಲ್ಪು ಕಾಯುಲಿ ಸತತಂ ॥೬॥

ಶ್ರದ್ಧೆ ನೈಷ್ಠಿಕ ಸಾವಧಾನ ಮಹಾನುಭಾವ ಮುಖಂಡ ಸಂ । ಶುದ್ಧ ಭಕ್ತನ ಧ್ಯಾನ ನೋಟ ಸಮರ್ಚನಸ್ತುತಿಯಾವಗಂ । ಸಿದ್ಧವಾಗವತರ್ಯ ಮತ್ಪ್ರಭು ಚನ್ನವೀರಮಹೇಶ ಪ್ರ । ಸಿದ್ಧಭಾವ ಪ್ರಸಾದ ಸ್ವಾಮಿಯ ಪಾದನೆಮ್ಮನು ಕಾಯುಲಿ ॥೭॥

---

## ಚಿತ್ರಪದ—ವೃತ್ತ.

(೩೮) ರಾಗವರ್ಜಿತ ಲಿಂಗ ಸುಖಂ । ಭೋಗಿ ಭವಾದಿ ವನ್ದ್ಯ ನಿಜಾ॥
ಯೋಗಿ ಜನಂಗಳ ಪಾಲಿಸುವ । ಶ್ರೀಗುರು ಸೇವೆಯೊಳೊಂದಿಪೆ ನಾಂ ॥೧॥

ಅಷ್ಟ ವಿಧಾರ್ಚನೆಯ ಮಾಡುವ । ವಿಶಿಷ್ಟ ಸುಭಕ್ತರ ಪಾಲಿಸುವ॥
ಶ್ರೇಷ್ಠ ಸುಜಂಗಮ ಪ್ರಾಣವಹ । ಇಷ್ಟಮಹಾಘನಲಿಂಗ ನಮೋ ॥೨॥

ಹೆಂಗಳಭೋಗವ ಹಿಂಗಿ ನಿಜಾ । ಲಿಂಗ ಸುಖಂಗಳ ಭೋಗಿಸುವ॥
ಮಂಗಳ ಕಾರ್ಯ ಕಾರಣದ । ಜಂಗಮದಂಘ್ರಿಯ ಪೂಜಿಪೆ ನಾಂ ॥೩॥

ಸಾಧು ಸದ್ಗುರು ಲಿಂಗಾಚಾರ । ಪಾದವಸೋಂಕಿದ ಪಾವನ ಪಾದೋದಕದಿಂದಂ ॥ ಲಿಂಗಾಭಿಷೇಕದಿ ಚರಿತ್ರವನಾಚರಿಪೆ ॥೪॥

ಆಗಮಶಾಸ್ತ್ರಕೆ ಕಾಣಿಸದಾ । ಶ್ರೀಗುರುಲಿಂಗಜಂಗಮಕೆ । ಬಾಗಿ ಚಿದದ್ವಯ ಭಕ್ತಿಯೊಳು । ಭೋಗಿಪತ್ರೈವಿಧ ಶೇಷವನು ॥೫॥

ಪ್ರೇತ ಪಿಶಾಚಿಯ ಭೀತಿಯನು । ಖ್ಯಾತಿಯ ಲಾಭದ ವಾಂಛೆಯನು॥
ಓತುವಿಸರ್ಜಿಸಿ ಚಿನ್ಹನವ । ಭೂತಿಧಾರಣೆಗೈವೆ ಸದಾ ॥೬॥

ಮಾನಸ ವಾಚಕ ಕಾಯಕದಿಂ । ಜ್ಞಾನ ಸುಸತ್ಕ್ರಿಯ ಲಿಂಗದಭಿ ।
ಧಾನ ಷಡಕ್ಷರ ಮಂತ್ರವನು । ಧ್ಯಾನಿಸುತಿರ್ಪೆನವೋ ॥೭॥

ಜಂಗಮಲಿಂಗದ ಚಿತ್ಕಳೆಯ । ಕಂಗಳ ನಾಮದ ಚಿತ್ಕಳೆಯು। ಕಂಗಳ ನಾಮದ ಚಿನ್ಮಣಿಯು । ಮಂಗಳ ಮಾಲೆಯುನಂಗದೊಳು । ಪಿಂಗದೆ ಧಾರಣಗೈವೆಸದಾ ॥೮॥

ತನ್ನಯನ್ನೈಜವ ತಾ ನರಿದು । ಸನ್ನುತ ಬ್ರಹ್ಮವನರ್ಚಿಸುವ ಚಿನ್ಮಯ ಜಂಗಮ ದೇವಸದಾ । ಚನ್ನವೀರನೇ ಪಾಲಿಸುದ್ಯೆ ॥೯॥



ವಜ್ರನಾಮಾವೃತ್ತ.

(೩೯) ಪಾದಂ ಸದಾ ಪೂಜಿತಮಾದಲೋಲಂ। ಬೋಧಾಕಾರಂ ಬ್ರಹ್ಮಮಯಂ ಸುಶೀಲಂ ॥ ವೇದಾದಿತ್ರೈ ದಿಕ್ಕೆಗನಾದಿಮೂಲಂ। ಶ್ರೀದೇಶಿಕಂ ಪಾಹಿ ಸದಾವಕಾಲಂ ॥೧॥

ತ್ಯಾಗಾಂಗಸತ್ಕ್ರಿಯುವಿಷ್ಟಲಿಂಗಂ। ಭೋಗಾಂಗ ಸುಜ್ಞಾನ ಸುಪ್ರಾಣಲಿಂಗಂ ॥ ಯೋಗಾಂಗ ಸದ್ಭಾವದಾ ಭಾವಲಿಂಗಂ । ಜೋಗೈಸುತೆನ್ನ ಸಲಹೈ ಕೃಪಾಂಗಂ ॥೨॥

ಶೈವಾದಿದೈವಂಗಳ ನೋಡುಸೀಗಿ । ಭಾವಾದಿ ತ್ರೈಲಿಂಗವೆ ಪ್ರಾಣವಾಗಿ। ಆವಾಗ ದೇಶಾಂತರ ದೈವಯೋಗಿ । ನೀವೆ ಸದಾ ಪಾಲಿಸುವ ದೈವಿರಾಗಿ ॥೩॥

ನೂರೊಂದು ಸೋಪಾನದ ಕೂಪದಿಂದ । ಆರಾಧ್ಯರಂಘ್ರಿದ್ವಯುವ ಸೋಂಕಿ ಬಂದಂ ॥ ಈರೈದು ಪಾದೋದಕ ನೇಮದಿಂದಂ । ಆರೈವುತಿರ್ಪಾತನಿಗಾನುಕಂದಂ ॥೪॥

ಚಿನ್ನಾದಚಿದ್ಬಿಂದುವೆ ಶುದ್ಧ ಸಿದ್ಧಂ। ಉನ್ನತಶ್ರೀಚಿತ್ಕಳೆಯೆಪ್ರಸಿದ್ಧಂ। ಹನ್ನೊಂದು ನಾಮಾಂಕಿತವಪ್ಪುತಿರ್ದಂ । ಇನ್ನು ಪ್ರಸಾದರ್ಪಿತನೆ ಪ್ರಬುದ್ಧಂ ॥೫॥

ಶಾಂತಾದಿ ದಿವ್ಯರ್ಕಳೆ ತಾಂ । ಸಿತಾಂಗಂವಾಂತುರ್ವಿ ಭಕ್ತಾದಿಗಳುತ್ತಮಾಂಗಂ ॥ ಮುಂತಾದ ಸರ್ವಾಂಗದ ಶೋಭೆವೆತ್ತಂ । ಕಾಂತೆವಿಭೂತೀಶ್ವರಿ ಪಾಲಿಸೆಮ್ಮಂ ॥೬॥

ಕಾಲಸುಕವರ್ಣಾಂಗಜಾ ಮಾಯಶೀಕ್ಷ। ಮೂಲನಲಕ್ಷ್ಮಾಂರುತುವೆ ಶಿಲಾಕ್ಷಂ || ಮೂಲವಿಭೂಷಂಗದೊಳಿರ್ಪ ಮೋಕ್ಷಂ। ಶಿಲಾಂಕುಮಹೇಶ್ವರವೆಮ್ಮ ರಕ್ಷಂ ||೭||

ವ್ಯೋಮಾದಿಭೂತಂಗಳ ಸೋಮತಂತ್ರ। ಕಾಮಾದಿ ಷಡ್ವರ್ಗದ ಸಂಗಸಂತ್ರ। ವಾಮಾಂಗ ಹಸ್ತಾಬ್ಜದ ಲಿಂಗಮಂತ್ರ। ನಾಮಾದಿ ಮೂಲಾಕ್ಷರವೆ ಸ್ವತಂತ್ರಂ ||೮||

ಆಚಾರಹೀನಾತ್ಮರ ಮಾನಭಂಗಂ। ಆಚಾರ ಸಂಪ್ರೀತರಿಗಂತರಂಗಂ|| ವಾಚಮನಂಕಾಯದಿ ಸುಪ್ರಸಂಗಂ|| ಶ್ರೀಚನ್ನವೀರೇಶ್ವರವಿಷ್ಟ ಲಿಂಗಂ ||೯||

---

ರಾಗ—ಭೈರವಿ

(೪೦) ಶರಣರೊಡವೆರಸೆನ್ನನು। ದುರಿತ ದುರ್ಮರಣ ಜನರೊಡೆ ವೆರಸದೆ ಗುರುವೆ ||ಪಲ್ಲ||

ಗುರುವಿನಡಿಗೆರಗಿ ಪಡೆದ। ಕರದಿಷ್ಟದರುವೆಂದೆರಗಿಸಿ|| ಬೇರೆ ನರಜನ್ಮ ಕರಮರವೆಯ। ಮರೆಗೊಂಡ ದುರುಳ ತರುಳರ ವೆರಸದೆ ಗುರುವೆ. ||೧||

ಪ್ರಾಣಲಿಂಗಾಣತಿಯನು ಕಾಣುತವೆ। ಪ್ರಾಣಮಯಲಿಂಗವೆನಿಸಿ ಕಡೆಗೆ || ಮಾಣದಿಹ ಕ್ಷೀಣಭೂತ ಪ್ರಾಣವಹ। ಶೋಣಿತಾತ್ಮರವೆರಸದೆ ಗುರುವೆ ||೨||

ನಾನಲ್ಲ ನೀನಲ್ಲದೆ ತಾನೆ। ನುಜ್ಞಾನಜಂಗಮವೆನಿಸಿದಮೇಲೆ|| ನಾನೆಂಬ ಹೀನಮತಿಯ। ಮಾನವ ಜ್ಞಾನ ಜನರ ವೆರಸದೆ ಗುರುವೆ ||೩||

ಪರಮಗುರು ಚರಣೋದಕವೆರಡ್ಡೈದ ಸುರುಜಿಹ್ವೆಯೊಳ। ಗರುಹಿಸಿ ಬಳಿಕ ಪರಸತಿಯಧರ ಸವಿಯ || ಮರೆಯದತಿ ದುರಸ ಕಾಂಕ್ಷರವೆರಸದೆ ಗುರುವೆ ||೪||

ಅಸಮ್ಯೈಕ ದಶಪ್ರಸಾದ ಅಸುವಿದೆಂದೊರೆದು ಘ್ರಾಣದಿ। ಬೆಸಸಿದ ತುದಿಗೆ ಪುಸಿದೈವಕೊಸರು ಮುಡಿದ। ಕುಸುಮವಾಸಿಸುವ ಪಿಸುಣರವೆರಸದೆ ಗುರುವೆ ||೫||

ಲಿಂಗಾಗ್ನಿ ಸಂಗದಿಂದ ಲಿಂಗವಹ। ಸಂಗಮಯಭಸಿತವೆನಿಸಿ ಮುಂದೆ|| ಲಿಂಗವಿಹಿನಂಗಭವಿಯಾ। ಹಿಂಗದಾಲಂಗಿಸುವರಂಗವಿಸದೆ ಗುರುವೆ ||೬||

ಚಿದ್ರಸವೆಭದ್ರವಾದ। ರುದ್ರಾಕ್ಷಿಮುಗ್ರನೇತ್ರದೊಳದುಹಿಸಿ ಸದ್ಯೋ|| ಪತ್ರದನ್ಯದ್ರವ್ಯವ ತೃಪ್ತಿಸುವ|| ಕ್ಷುದ್ರಜನರಪೆಂಸಡೆ ಗುರುವೆ ||೭||

ಭವರಹಿತ ಶಿವಮಂತ್ರಮಂ। ಅವಿರತಂ ಪ್ರವರ ಶ್ರೋತ್ರದೊಳರುಹಿಸಿ ಬಳಿಕ|| ಭುವಿಯೊಳಗತಿ ಶಿವಸಂಸ್ಮೃದಾ| ಭವಿನುಡಿಗೆ ಕಿವಿಗೊಡುವರೊಡವೆರಿಸದೆ ಗುರುವೆ ||೮||

ಅಷ್ಟತನುನಷ್ಟವಾಗಿ ಸೃಷ್ಟಿಯುಂ। ದಷ್ಟವರಣವೆನಿಸಿ ನೆಲಿಸಿ|| ದುಷ್ಟಹರ ಶಿಷ್ಟಪಾಲರಕ್ಷಿಸೆ। ಸ್ವಿಷ್ಟ ಗುರುಚೆನ್ನವೀರ ಗುರುವೆ ||೯||

---

ರಾಗ—ಭೈರವಿ.

(೪೧) ಶರಣನೆ ಶಿವನಲ್ಲದೆ ಬೇರೆ ಶಿವ। ನಿರುವನೇ ನೀ ತಂದು ತೋರಾ ನಾ ಕಾಣೆ ||ಪಲ್ಲ||

ಪರಮ ಶ್ರೀಗುರುಲಿಂಗಜಂಗಮವು। ಚರಣಜಲ ಸುಪ್ರಸಾದ ವರ ಭಸಿತಚಿದಂಗ ರುದ್ರಾಕ್ಷಮಂತ್ರವೆನಿಸಷ್ಟ। ವರಣತನುಮೂರ್ತಿಯಾಗಿ ತೋರುತಿಹ ||೧||

ಶಿವನಿಗೀರ್ಧೈದು ಹಸ್ತ ಉಂಟು ನೋ। ಡಿವನಿಗಿಲ್ಲೆಂಬ ಶುಂಭ ನೀ ಕೇಳು || ತವೆಶರಣದೊಳು ತೋರುವ ದಶವಾಯು। ನಿವಹವೆ ದಶಕರಗಳ ಹುದಾಗಿ ||೨||

ಈಶಂಗೆ ಪಂಚವದನ ಉಂಟು ನೋ। ಡೀ ಶರಣಗಿಲ್ಲೆಂಬುವ ಶುಂಭ ನಾಸಿಕವು ಜಿಹ್ವೆ ನೇತ್ರತ್ವಕ್ಕುಶ್ರೋ। ತ್ರವ್ಯ ಪಂಚಕವೀಶನು ಉಂಟಾಗಿ ||೩||

ಅಗ್ನಿಗಣ್ಣೊಂದೀಶಗುಂಟೆದು ಪ್ರಾಜ್ಞಕವಿಗಳು ಪೇಳ್ವರಂತಿರಲಿ || ಆಜ್ಞೇಯ ಚಕ್ರಸ್ಥಾನದಿ ಶರಣಂಗೆ। ಸುಜ್ಞಾನ ನೇತ್ರ ಒಂದುಂಟಾಗಿ ||೪||

ಹರಿಯು ವಂಶದೊಳೊಪ್ಪುವ। ತರಣಿ ಶಶಿಕಿರಣವುಳ್ಳುಭಯ ನಯನ ಒಂದಾಗಿ|| ಶರಣಂಘ್ರಿಯು ಕೊನೆಯೊಳಿರಲಾಗಿ। ಹರಿನಯನ ಚರಣನೆಂಬ ಪೆಸರೊಡೆವ ||೫||

ವೃಷನಡಿಯೊಳಿರ್ದ । ಮೃಡದಿಯುಂಟೆಂದು ನುಡಿವ ಜಾಣರು ಕಾಣರು॥ ಬಿಡುವ ಮಾರುಳಿ ಕಡುವ್ರತದಿ ನಡೆವ ಶರಣ। ನಡೆಯೊಳತಿ ದೃಢವಾಡದಿ ಕ್ರಿಯಾಶಕ್ತಿ ॥೬॥

ಕಂಗಳ ಶಿರೋಭಾಗದಿ ಸುಜ್ಞಾನ । ದಿಂಗಿತ ಪರಬ್ರಹ್ಮದ ಶಿರವೆನಿಸಿ॥ ಮಂಗಳಾತ್ಮಕ ಶರಣನ ಕರದೊಳಿಹ । ಲಿಂಗವೆ ಕರಕಪಾಲವಾಗಿರ್ಪ ॥೭॥

ಅರುವೆಶಿರ ಮರವೆ ಮುಂಡಹುದಾಗಿ । ದುರವೆನಿಸುವ ಮುಂಡವ ನತಿಗಳೆದು॥ ಪರತರ ಪರಬ್ರಹ್ಮದ ಷಣ್ಮಾತ್ರದರು ಮಾಲೆ ಶಿರವೆಂಬ । ಶಿರ ಮಾಲೆ ಕೊರಳೊಳಿಹ ॥೮॥

ಅಂಗಸುಜ್ಞಾನಶಕ್ತಿ ತಾನುತ್ತು । ಮಾಂಗದೊಳು ಸತ್ಯೋದಕ॥ ವಾಗಿ ಸುರಗಂಗೆ ಎನಿಸುವದರಿಂದ ಶರಣಂಗೆ । ಗಂಗಾಧರನೆಂಬ ನಾಮ ಉಂಟಾಗೆ ॥೯॥

ಶಶಿಯ ಶಾಂತಿ ಷೋಡಶ ಚಿತ್ಕಳೆಯೊ । ಳೆಸೆವ ಜಂಗಮ ಶರಣನ ಶಿರದ ಹಿಂ॥ ದೆಸೆಯೊಳಿಹ ಕಾರಣ ಶರಣಂಗೆ । ಶಶಿಮೌಳಿ ಎಂಬ ನಾಮ ಉಂಟಾಗಿ ॥೧೦॥

ಎಂಜಲತಿ ಭುಂಜಕರಿಗೆ ಅದು ಬಹಳ । ನಂಜುಳ್ಳ ಸುಪ್ರಸಾದ ಅನುಭವಿಸು॥ ತಂಜದಿಹನದು ಕಾರಣ ಶರಣಂಗೆ । ನಂಜುಂಡನೆಂಬ ಪೆಸರುಂಟಾಗಿ ॥೧೧॥

ಪೂಶಿಸುವ ಶುದ್ಧಸಿದ್ಧಪ್ರಸಿದ್ಧ ಮಹ । ಶೇಷಪ್ರಸಾದತ್ರಯ ತನ್ನಂಗವಾಗಿಹ ಕಾರಣ ಶರಣಂಗೆ। ಶೇಷಧರನೆಂಬ ನಾಮ ಉಂಟಾಗಿ ॥೧೨॥

ಅಗ್ರಹಂಕಾರವೆಂಬ ಪುಲಿಗಜದ । ಉಗ್ರದುರುವಣೆಯ ಉಳಿದ ಶವೆ॥ ಶೀಘ್ರವಿರಹಂಕಾರಗಳೆಂಬ । ವ್ಯಾಘ್ರಗಜದುಕೂಲಾಂಬರವನು ಪೊದೆವ ॥೧೩॥

ಕಾಲಕಲ್ಪಿತವನಳಿದು ಅನವರತ । ಮೂಲ ಪಂಚಾಕ್ಷರಿಯನು ಜಪಿಸಿ ಸುಖ॥ ಶೀಲನಾಗಿಹ ಕಾರಣ ಶರಣಂಗೆ । ಕಾಲಹರನೆಂಬ ನಾಮ ಉಂಟಾಗಿ ॥೧೪॥

ಕಾಮವೆನಿಸುವ ಬಯಕೆಯ ಲಿಂಗದೊಳು । ನೇಮದಿಂದಿರಿಸಿ ಬಳಿಕ ತಾನು ನಿಃ॥ ಕಾಮಿಯಾಗಿಹ ಕಾರಣ ಶರಣಂಗೆ । ಕಾಮಹರನೆಂಬ ನಾಮ ಉಂಟಾಗಿ ॥೧೫॥

ಮುಂದಿಮುಕ್ತಿ ಎಂದೆನಿಸುವ ಜ್ಞಾನ | ದಂಧಕಾರವನೆಲ್ಲ ಸುಜ್ಞಾನ ॥ ದಿಂದಲಡಿಮೆಟ್ಟಿ ತುಳಿದ ಕಾರಣದಿಂ । ಅಂಧಕಾಸುರ ವೈರಿಯು ಪೆಸ ರೊಡೆದ ॥೧೬॥

ಸುಪಥಸುಜ್ಞಾನ ನೇತ್ರದಿಂ ನೋಡಿ । ದುಪಿತಶೀಲದೊಳೊಪ್ಪುವ ತನು ತ್ರಯುಗ ॥ ಉಪಹತಿಯುನೆರೆ ಕೆಡಿಸಿದ ಶರಣಂಗೆ । ತ್ರಿಪುರಹರನೆಂಬ ನಾಮ ಉಂಟಾಗಿ ॥೧೭॥

ಲೋಲ ಭಕ್ತಿ ಜ್ಞಾನ ವೈರಾಗ್ಯತ್ರೈ । ಶೂಲವನು ಧೃಡಹಸ್ತದಿ ಪಿಡಿ ದುಭವ ॥ ಮೂಲವನು ಕಿತ್ತೊತ್ತಿದ ಶರಣಂಗೆ । ಶೂಲಧರನೆಂಬ ನಾಮ ಉಂಟಾಗಿ ॥೧೮

ಅವನಿಯೊಳು ರಜತಮುಗಳು ಬಹು ದೋಷ । ನಿವಹವೆಂದವನು ತ್ಯಜಿಸಿ ಉಳಿದ ॥ ಸತ್ವವನಂಗೀಕರಿಸಲೊಡನೆ ಶರಣಂಗೆ । ಧವಳಾಂಗ ನೆಂಬ ನಾಮ ಉಂಟಾಗಿ ॥೧೯||

ಶೈವಶಾಸ್ತ್ರದಿ ಪೇಳುವ ಇಂದ್ರಾದಿ । ದೇವತೆಗಳಿರವ ಕೇಳಾ ಶರಣನ || ಮೂವತ್ತುಮೂರುಕೋಟಿ ಇಂದ್ರಿಯಂಗಳು । ದೇವತೆಗಳು ಎನಿಸುತಿರ್ಪುದರಿಂದೆ ॥೨೦॥

ಹರಿ ವಿರೋಧಿಗಳೆನಿಸುವ ರಕ್ಕಸರ । ಪರಿಯ ಕೇಳಿ ಶರಣನಂತ ರದೊಳಿಹ ॥ ಅರವತ್ತಾರುಕೋಟಿ ಕರಣಗುಣ ।ದಿರವೆ ರಕ್ಕಸರ ಮಾತ್ರ ವಾಗಿರ್ಪ ॥೨೧॥

ಪರಮಭಕ್ತಿ ಬಸವಗೂ ಎಳ್ಳನಿತು । ವಿರಳವಿಲ್ಲದೆ ಒಪ್ಪುವ ಭಕ್ತಿ ಯನು ॥ ಪೊರೆಯುಲಿ ನಡಿಸಲಾಗಿ ಶರಣತಾ । ವರವೃಷಭಾರೂಢನೆಂಬ ಪೆಸರೊಡೆದ ॥೨೨॥

ಸೊಗಸು ತೋರುವ ಚತುರ್ದಶ ಇಂದ್ರಿಯಗಳ । ನಗಲದವಕಧ್ಯಕ್ಷನೆ ತಾನಾಗಿ ॥ ನಗುತಲಾಳುವ ಶರಣಂಗೆ ಹದಿನಾಲ್ಕು । ಜಗದ ಪತಿಯೆಂಬ ನಾಮ ಉಂಟಾಗಿ ॥೨೩॥

ವಿಶ್ವತೈ ಜಸಪ್ರಾಜ್ಞ ಜೀವತ್ರಯದ| ವಿಶ್ವಪ್ರಪಂಚವುಳಿದು ಲಿಂಗೈಕ್ಯ ದಸ್ವತಂತ್ರನ ಮಾಡಿದ ಕಾರಣದಿ । ವಿಶ್ವಾದಿಕರ್ತನೆಂಬ ಪೆಸರೊಡೆದ ॥೨೪॥

ಚರಣದೊಳು ಪಾವುಗೆಯನು ಧರಿಸಿ ಎಡ । ಕರದೊಳಿಷ್ಟ ಬ್ರಹ್ಮವಪಿಡಿದು ತಾ ॥ ವರಭಸಿತ ರುದ್ರಾಕ್ಷಿಯಲಂಕರಿಸಿ । ಗುರು ಚನ್ನವೀರನೆಂಬ ಪೆಸರೊಡೆದ ॥೨೫॥

# ಶಿವಾನುಭವ.

ಸಂಪುಟ ೪.] (ಮಾಸಪತ್ರಿಕೆ.) [ಸಂಚಿಕೆ ೮.



ನವ್ಹೆಂಬರ ೧೯೩೪] ವಿಜಾಪುರ. [ಕಾರ್ತಿಕ ೧೮೫೬

ವಾ. ಚ. ೪. ರೂ. ೪. ಅ.

# ವಿಷಯಾನುಕ್ರಮಣಿಕೆ.



---

## ಶಿವಾನುಭವ.

ಇದು ವೀರಶೈವ ಧರ್ಮದ ಉನ್ನತಿಯ ಬಗ್ಗೆ ಹೆಣಗಾಡುವ ಮೇಲ್ತರದ ಮಾಸಪತ್ರಿಕೆಯು. ಇದು ೬೪ ಪುಟಗಳುಳ್ಳದ್ದಿದ್ದು ಚಂದಾ ಮಾತ್ರ ೪ ರೂ. ೪ ಆ. ಇದು ಪ್ರತಿ ತಿಂಗಳ ಮಧ್ಯಕ್ಕೆ ಹೊರಡುತ್ತದೆ. ಲೇಖಕರು ಚಿಕ್ಕ ಚಿಕ್ಕ ಲೇಖಗಳನ್ನು ಕಳಿಸಬೇಕು. ವೀರಶೈವರ ಉನ್ನತಿಯ ಪರವಾಗಿ ಯಾರು ಬೇಕಾದವರು ಬರೆದರೂ ಅವಕಾಶ ಸಿಗುವದು. ಕೆಲವರು ಇದರ ಹಿಂದಿನ ಸಂಚಿಕೆಗಳನ್ನು ಬೇಡುತ್ತಾರೆ. ಆದರೆ ೧-೨ ಸಂಚಿಕೆಗಳು ಸಿಗುವದೇ ಇಲ್ಲ. ೩ ರಿಂದ ೧೨ರ ವರೆಗೆ ಮಾತ್ರ ಸಿಗುತ್ತವೆ. ಬೇಕಾದವರು ಶೀಘ್ರ ತರಿಸಿಕೊಳ್ಳಬಹುದು. ತಡವಾದರೆ ಪ್ರತಿಗಳು ಸಿಗಲಾರವು. ಯಾಕಂದರೆ ಪ್ರತಿಗಳು ಸ್ವಲ್ಪೇ ಉಳಿದಿವೆ. ಪ್ರತಿಯೊಂದು ಸಂಚಿಕೆಗೆ ೮ ಆಣೆ.

ಮ್ಯಾನೇಜರ.



ಶ್ರೀಮರಿಸ್ವಾಮಿಗಳು ಬಳ್ಳಾರಿ.

# ಶಿವಾನುಭವ.

ವರ್ಷ ೪] ನವ್ಹೆಂಬರ ೧೯೨೯ [ಸಂಚಿಕೆ ೮

## ಲಿಂಗಧಾರಣ ಸಂಪ್ರದಾಯವು ಯಾವಾಗ ಮೊದಲಾಯಿತು? ಷಟ್ಸ್ಥಲವನ್ನು ಯಾರು ನಿರ್ಮಾಣಮಾಡಿದರು?

ಲೇಖಕಃ— ಜೀರಗೆ ಬಸವಲಿಂಗಪ್ಪ, ಚೀಫ್ ಕೋರ್ಟು ಟ್ರಾನ್ಸ್ಲೇಟರು, ಅರಳೇಪೇಟೆ, ಬೆಂಗಳೂರು ಸಿಟಿ.



ಲಿಂಗಧಾರಣ ಮತವು ಬಹು ಪೂರ್ವದಿಂದಲೂ ಬಂದುದಾಗಿ ಕೆಲವು ಕಾರಣಗಳಿಂದ ಕಂಡುಬರುತ್ತದೆ. "ಪವಿತ್ರಂತೆ ವಿತತಂ ಬ್ರಹ್ಮಣಸ್ಪತೆ ॥ ಪ್ರಭುರ್ಗಾತ್ರಾಣಿ ಪರ್ಯೇಷಿ ಪವಿಸ್ವತಃ" ಎಂಬ ಮೊದಲಾದ ಋಗ್ವೇದ ವಾಕ್ಯದಲ್ಲಿ ಹೇಳಿರುವ ದೇವಧಾರಣವನ್ನು ನಂದೀಶ್ವರ ಶಿವಯೋಗಿಗಳು ತಮ್ಮ ಲಿಂಗಧಾರಣ ಚಂದ್ರಿಕೆಯಲ್ಲಿ ಲಿಂಗಧಾರಣ ಪರವಾಗಿ ಅರ್ಥಬರೆದಿರುತ್ತಾರೆ. "ಓಂ ನಮೋ ಬ್ರಹ್ಮಣೇ ಧಾರಣಂ ಮೆ ॥ ಅಸ್ತನಿರಾಕರಣಂ ॥" ಎಂಬ ಮೊದಲಾದ ಕೃಷ್ಣಯಜುರ್ವೇದದ ತೈತ್ತಿರೀಯೋಪನಿಷದ್ವಾಕ್ಯವನ್ನು ಲಿಂಗಧಾರಣಪರವಾಗಿ ಅರ್ಥಮಾಡಿರುತ್ತಾರೆ. ಇದೂ ಅಲ್ಲದೆ—ಕೆಲಸ್ಮೃತಿಗಳಲ್ಲಿ ಲಿಂಗಧಾರಣ ವಿಚಾರವು ಅತಿ ವಿರಳವಾಗಿ ಬರೆದಿರುತ್ತದೆ. ಸಂಸ್ಕೃತ ಶಿವಗೀತೆಯಲ್ಲೂ ಕನ್ನಡ ಶಿವಗೀತೆಯಲ್ಲೂ ಲಿಂಗಧಾರಣವು ಒಂದಡೆಯಲ್ಲಿ ಮಾತ್ರ ಬರೆಯಲ್ಪಟ್ಟದೆ. ಈ ಕಾರಣದಿಂದ ಲಿಂಗಧಾರಣ ಮತವು ಪೂರ್ವಕಾಲದಿಂದಲು ವಿರಳವಾಗಿ ನಡೆದುಬಂದಂತೆ ಹೇಳಬಹುದಾಗಿ ಕಾಣುತ್ತದೆ. ಆದರೆ ಇನ್ನೂ ಬೇರೆ ಬಲವತ್ತರವಾದ ಪ್ರಮಾಣಗಳಿಂದ ಪುಷ್ಟೀಕರಿಸಬೇಕಾಗಿರುತ್ತದೆ. ಸಧ್ಯಕ್ಕೆ *Professor H. H. Wilsan*

ರೂ ಮತ್ತು *Movier Williams* ರು ಮಸ್ತಕದಮೇಲೆ ಲಿಂಗವನ್ನು ಧರಿಸುತ್ತಿದ್ದ ಒಂದು ಶೈವ ಪ್ರಭೇದವು ಶ್ರೀ ಶಂಕರಾಚಾರ್ಯರಿಗಿಂತ ಮೊದಲು ಇತ್ತೆಂದೂ ಅವರಿಗೆ ಜಂಗಮರೆಂದು ಹೆಸರಿತ್ತೆಂದೂ ಶ್ರೀ ಶಂಕರಾಚಾರ್ಯರ ಸನ್ನಿಧಿ ಶಿಷ್ಯನಾದ ಆನಂದಗಿರಿಯಿಂದ ರಚಿತವಾದ ಶಂಕರ ದಿಗ್ವಿಜಯದಲ್ಲಿ ಹೇಳಿರುವದೆಂದೂ ಇದನ್ನು ಬಲವತ್ತರವಾದ ಪ್ರಮಾಣವನ್ನಾಗಿ ನಂಬಬಹುದೆಂದೂ ಹೇಳುತ್ತಾರೆ. ಶ್ರೀ ಶಂಕರಾಚಾರ್ಯರಿಗಿಂತಲೂ ಪೂರ್ವದವರಾದ ಅರವತ್ತುಮೂರು ಪುರಾತನರಲ್ಲಿ ಕೆಲರು ವೀರಶೈವರೆಂದು ಹೇಳುತ್ತಾರೆ. ಇವರು ತಮ್ಮ ಕೆಲವು ಕಠಿಣಾಚಾರಗಳಿಂದ ವೀರಶೈವರಾಗಿ ನಮ್ಮವರಿಂದ ಗಣಿಸಲ್ಪಟ್ಟಿರುತ್ತಾರೆಯೇ ಹೊರತು ಕೇವಲ ಲಿಂಗಧಾರಣದಿಂದಲೇ ಹಾಗೆ ಗಣಿಸಲ್ಪಟ್ಟಂತೆ ತೋರುವದಿಲ್ಲ. ಪ್ರಕೃತದಲ್ಲಿ ಒಂದು ದೃಷ್ಟಾಂತವನ್ನು ಕೊಡುತ್ತೇನೆ. ನಮ್ಮವರು ಕಲಿಗಣನಾಥನೆಂಬ ಶರಣನ ವಿಚಾರದಲ್ಲಿ—ಈತನು ಲಿಂಗಧಾರಿಯಾಗಿದ್ದನೆಂದೂ, ಪ್ರತಿದಿನವೂ ಒಬ್ಬೊಬ್ಬರಿಗೆ ಲಿಂಗಧಾರಣೆ ಮಾಡಿ ತನ್ನ ಮತಕ್ಕೆ ಸೇರಿಸಿಕೊಳ್ಳುತ್ತಿದ್ದನೆಂತಲೂ, ಶಿವನು ಬಂದಾಗ್ಯೆ ಅವನನ್ನು ಭವಿಯೆಂದು ನಿರಾಕರಿಸಿ ಲಿಂಗಧಾರಣ ಮಾಡಿಸಿ ಪರಿಗ್ರಹಿಸಿದನೆಂದೂ ಬರೆಯುತ್ತಾರೆ. ತಮಿಳಿನ ಶೈವ ಪುರಾತನರ ವಿಷಯಕವಾದ ಪೆರಿಯ ಪುರಾಣದಲ್ಲಿ ಗಣನಾಥನು ಶಿವಭಕ್ತನಾಗಿದ್ದನೆಂತಲೂ, ಪ್ರತಿದಿನವೂ ಬೇರೆ ಬೇರೆಯವರಿಗೆ ವಿಭೂತಿಧಾರಣೆ ಶಿವಮತಕ್ಕೆ ಸೇರಿಸಿಕೊಳ್ಳುತ್ತಿದ್ದನೆಂದೂ, ಶಿವನು ವಿಭೂತಿಧಾರಣೆ ಇಲ್ಲದೆ ಬಂದದ್ದರಿಂದ ಅವನಿಗೂ ವಿಭೂತಿಧಾರಣೆಮಾಡಿಸಿ ಪರಿಗ್ರಹಿಸಿದನೆಂದೂ ಬರದಿದೆ. ಆದುದರಿಂದ ಲಿಂಗಧಾರಣ ಮತವು ಬಸವೇಶ್ವರನಿಗಿಂತ ಪೂರ್ವ ಎಲ್ಲೆಲ್ಲಿ ಯಾವ ಸ್ಥಿತಿಯಲ್ಲಿತ್ತೆಂಬುದಕ್ಕೆ ಬಲವತ್ತರವಾದ ವಿಪುಲ ಪ್ರಮಾಣಗಳು ದೊರೆಯುವದಿಲ್ಲ. ಉಪನಿಷತ್ತುಗಳೆಲ್ಲವೂ ರುದ್ರಾಕ್ಷಧಾರಣ, ಭಸ್ಮಧಾರಣ ಮೊದಲಾದ ಬೇರೆ ಶೈವ ವಿಚಾರಗಳನ್ನು ಹೇಳಿವೆಯೇ ಹೊರತು ಲಿಂಗಧಾರಣ ವಿಚಾರವನ್ನು ಹೇರಳವಾಗಿ ಹೇಳಿರುವದಿಲ್ಲ. ಆದುದರಿಂದ ಈ ಲಿಂಗಧಾರಣ ಕ್ರಮವು ಯಾವ ಕಾಲದಲ್ಲಿ ಬಂತು ಯಾರಿಂದ ಬಂತು ಎಂಬ ಮೊದಲಾದ ವಿಚಾರಗಳ ವಿಷಯದಲ್ಲಿ ಚಾರಿತ್ರ ಪ್ರಮಾಣಪೂರ್ವಕವಾಗಿ ನಿದರ್ಶನಗೊಳಿಸಲು ಬಹಳ ಕಷ್ಟವಾಗಿರುತ್ತದೆ. ಇದು ಹೇಗಾದರೂ ಇರಲಿ— ಮೇಲ್ಕಂಡ ಕೆಲವು ವಿಚಾರಗಳಿಂದ ಲಿಂಗಧಾ

ರಣ ಮತವು ಅತ್ಯಂತ ವಿರಳವಾಗಿ ಶೈವದಿಂದ ಪ್ರತ್ಯೇಕವಾಗಿಯೋ ಅಥವಾ ಶೈವದಲ್ಲಿ ಬೆರತೋ ಪೂರ್ವದಿಂದ ಇತ್ತೆಂದು ಖಂಡಿತವಾಗಿ ಊಹಿಸಬಹುದಾಗಿದೆ

ಈ ಸ್ಥಿತಿಯು ಶ್ರೀ ಬಸವೇಶ್ವರನ ಕಾಲದವರೆಗೂ ಇದ್ದಂತೆ ಕಾಣುತ್ತದೆ. ಈ ವಿಚಾರವನ್ನು ಪಂಡಿತರು ಇನ್ನೂ ಚನ್ನಾಗಿ ಪರಿಶೋಧಿಸಿ ನಿಜಸ್ಥಿತಿಯನು ಕಂಡುಹಿಡಿಯಬೇಕಾಗಿದೆ. ನಮಗೆ ನಿಜ ವಿಚಾರವನ್ನು ಕಂಡುಹಿಡಿಯಬೇಕಾದುದು ಮುಖ್ಯವೇ ಹೊರತು ನಮ್ಮ ಮತವು ಪುರಾತನವಾದದ್ದು ಅಥವಾ ಈಚಿನದು ಎಂಬ ಪಕ್ಷದೃಷ್ಟಿಯಿಂದ ಕೆಲಸಮಾಡಕೂಡದು. ಯಾರು ಹೇಗಾದರೂ ಹೇಳಿಕೊಳ್ಳಿರಿ— ನಿಜವು ತನ್ನ ಸ್ವರೂಪವನ್ನು ಬದಲಾಯಿಸದೇ ಇದ್ದಹಾಗೆಯೇ ಇರುತ್ತದೆ. ಅದನ್ನು ಕದಲಿಸುವದಕ್ಕೆ ಯಾರ ಕೈಯಿಂದಲೂ ಆಗುವದಿಲ್ಲ.

ಮತಗಳು ಪೂರ್ವದ ಮತಗಳಾಗುವದರಲ್ಲಿ ಹೆಚ್ಚೇನು? ಈಚಿನ ಮತಗಳಾಗುವದರಲ್ಲಿ ಕಡಿಮೆಯೇನು? "ಸಿಕ್" ಮತ ಯಾವಾಗಾಯಿತು! ಮಹಮ್ಮದೀಯಮತ ಯಾವಾಗಾಯಿತು! ಬ್ರಹ್ಮಸಮಾಜ ಯಾವಾಗಾಯಿತು! ಕಾಲದಲ್ಲಿ ಮತಕ್ಕೆ ಶ್ರೇಷ್ಠತ್ವ ಬರುತ್ತದೆಯೇ? ಮತದ ಉತ್ಕೃಷ್ಟ ತತ್ವಗಳಿಂದ ಶ್ರೇಷ್ಠತ್ವ ಹೊರತು, ಕಾಲದಿಂದ ಶ್ರೇಷ್ಠತ್ವವಿಲ್ಲ.

ಈ ಮಾತು ಇಲ್ಲಿಗೆ ನಿಲ್ಲಲಿ— ಲಿಂಗಧಾರಣ ಮತವು ಬಸವೇಶ್ವರನಿಗಿಂತಲೂ ಪೂರ್ವದಿಂದಲೂ ಅತ್ಯಂತ ವಿರಳವಾಗಿ ಇತ್ತೆಂದು ಮೇಲ್ಕಂಡ ಕೆಲಕಾರಣಗಳಿಂದ ತಿಳಿಯಬಹುದಾಯಿತು. ಇದು ಯಾವ ಸ್ವರೂಪದಲ್ಲಿತ್ತು? ಇದರ ಸ್ವರೂಪದ ವಿಚಾರದಲ್ಲಿ ಇಂಡಿಯಾ ದೇಶದ ಯಾವ ಪ್ರಾಂತದಲ್ಲಾದರೂ ಬಸವೇಶ್ವರನಿಗಿಂತಲೂ ಪೂರ್ವ ಯಾವ ಸ್ವತಂತ್ರ ಗ್ರಂಥಗಳಾದರೂ ಸಿಕ್ಕುತ್ತವೆಯೆ? ಬಸವೇಶ್ವರನ ಕಾಲದಿಂದ ಲಿಂಗಧಾರಣಕ್ಕೆ ಷಟ್ಸ್ಥಲ ತತ್ವವು ಅತ್ಯಂತವಾಗಿ ಪ್ರಚಾರವಾಗಿ ಗ್ರಂಥರೂಪವಾಗಿ ಕರ್ನಾಟಕದ ಎಲ್ಲೆಲ್ಲಿಯೂ ಪ್ರಚಲಿತವಾಯಿತು. ಬಸವೇಶ್ವರನೂ ಅವನನ್ನು ಪರಿವರ್ತಿಸಿದ ಶಿವಶರಣರೆಲ್ಲರೂ ಹೇರಳವಾಗಿ ಷಟ್ಸ್ಥಲ ಸಿದ್ಧಾಂತವನ್ನು ಬರೆದಿರುತ್ತಾರೆ. ಈ ಷಟ್ಸ್ಥಲ ಸಿದ್ಧಾಂತವು ಯಾವಾಗ ನಿರ್ಮಾಣವಾಯಿತು? ಬಸವೇಶ್ವರನಿಗಿಂತ ಪೂರ್ವದಿಂದಲೂ ಬಂದಿದೆ ಎಂಬುದಕ್ಕೆ ಯಾವ ಗ್ರಂಥಗಳೂ ದೊರೆಯುವದಿಲ್ಲ. ಲಿಂಗಧಾರಣವು

ಸಾಧಾರಣ ತತ್ವವುಳ್ಳದ್ದಾಗಿತ್ತೆಂದು ತೋರುತ್ತದೆ. ಹಾಗಾದರೆ ಷಟ್ಸ್ಥಲದ ಮಾರ್ಪಾಟವನ್ನು ಯಾರು ಮಾಡಿದರು? ಈ ಷಟ್ಸ್ಥಲದ ಮಾರ್ಪಾಟು ಉದಾರ ತತ್ವದಿಂದ ಬಸವೇಶ್ವರನಿಗಿಂತಲೂ ನೂರು ಅಥವಾ ಐವತ್ತು ವರ್ಷಗಳಿಗಿಂತಲೂ ಮುಂಚೆ ಕೆಲ ಉತ್ತೇಜಕರಿಂದ ಪ್ರಾರಂಭಿಸಲ್ಪಟ್ಟಂತೆ ಕಾಣುತ್ತದೆ. ಏತಕ್ಕಂದರೆ— ಬಸವೇಶ್ವರನಿಗಿಂತಲೂ ಕೆಲ ದಿನಗಳ ಹಿಂದೆ ಕೆಲ ಶರಣ ವಚನಗಳು ದೊರೆಯುತ್ತವೆ. ಇದೂ ಅಲ್ಲದೆ ಮ|| ರಾ|| ರಾ|| ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತ್ರೆಯಲ್ಲಿ ಬಸವೇಶ್ವರನಿಗಿಂತಲೂ ಸ್ವಲ್ಪ ಹಿಂದೆ ಶೈವದಲ್ಲಿ ಕೆಲ ಚಳವಳಿಗಳು ನಡೆದವೆಂದು ಬರೆದಿರುತ್ತಾರೆ. ಈ ಚಳವಳಿಯಲ್ಲಿ ಶೈವನಾಗಿದ್ದ ಬ್ರಹ್ಮಶಿವನು ಜೈನನಾದನು. ಜೇಡರದಾಸಿಮಯ್ಯನೆಂಬ ವಚನಕಾರನ ಹೆಸರನ್ನು ಬ್ರಹ್ಮಶಿವನು ಎತ್ತಿರುತ್ತಾನೆ. ಈ ಚಳವಳಿಯ ಸ್ವರೂಪವೆಂತಾದ್ದೆಂಬುದು ಸ್ಪಷ್ಟವಾಗಿ ಗೊತ್ತಾಗುವದಿಲ್ಲ. ಈ ಚಳವಳಿಯ ಫಲಿತಾಂಶವೇ ಬಸವಾವತಾರವಿರಬಹುದು. ಬಸವೇಶ್ವರನಿಗಿಂತ ಹಿಂದೆ ಜನಸಮುದಾಯದಲ್ಲಿ ಜಾತಿಭೇದ ಸಂಬಂಧವಾದ ಕ್ರೌರ್ಯಗಳು ಬಹಳ ಹೆಚ್ಚಿ ಅನೇಕ ಪತಿತರು ಬಹಳವಾಗಿ ನೋಯುತ್ತಿದ್ದರೆಂದು ಕಾಣುತ್ತದೆ. ಈ ಪರಿತಾಪವನ್ನು ತಪ್ಪಿಸಿ ಜನಾಂಗಕ್ಕೆ ಸುಖವನ್ನುಂಟು ಮಾಡಬೇಕೆಂಬ ಇಚ್ಛೆಯು ಕೆಲ ಉದಾರ ಜನರ ಮನಸ್ಸಿಗೆ ಹತ್ತದಂತೆ ತೋರುತ್ತದೆ. "ಚಾಂಡಾಲನಾದರೂ ಸರಿಯೇ ಶಿವನಾಮೋಚ್ಚಾರಣವುಳ್ಳವನಾದರೆ ಅವನ ಜತೆಗೆ ತಿರುಗಬೇಕು. ಅವನ ಜತೆಗೆ ಮಲಗಬೇಕು. ಅವನ ಜತೆಗೆ ಉಣ್ಣಬೇಕು" ಎಂಬ ಉಪನಿಷದ್ವಾಕ್ಯವು ಬರೇ ಬಾಯಿಮಾತಿನಲ್ಲಿ ಹೇಳಲ್ಪಡುತ್ತಿತ್ತೇ ಹೊರತು ಕಾರ್ಯದಲ್ಲಿ ಆಚರಿಸಲ್ಪಡುತ್ತಿರಲಿಲ್ಲ. ಇದರ ಆಧಾರವನ್ನು ಹಿಡಿದು ಒಂದು ಸುಧಾರಣೆಯ ಕಾರ್ಯವನ್ನು ಮಾಡಬೇಕೆಂದು ಕೆಲರು ಮನಸ್ಸಿಗೆ ತಂದುಕೊಂಡರು. ಇವಕ್ಕೆ ಯಾವ ಮಾರ್ಗವನ್ನು ಅವಲಂಬಿಸಬೇಕೆಂದು ಯೋಚಿಸಿದರು. ಪೂರ್ವದಿಂದಲೂ ಲಿಂಗಧಾರಣ ಸಂಪ್ರದಾಯವು ವಿರಳವಾಗಿ ಬಂದಿತ್ತಷ್ಟೆ. ಅದನ್ನು ಉಪಯೋಗಿಸಿ ಜಾತಿ ಭೇದವನ್ನು ವಿನಾಶಮಾಡಿ ಪತಿತರಿಗೆ ಉನ್ನತಪದವನ್ನು ಕೊಟ್ಟು ಸರ್ವಸಮಭಾವನ್ನುಂಟುಮಾಡಿ ಸಮಾಜ ಹಿತವನ್ನು ಮಾಡಬೇಕೆಂದು ಪ್ರಾರಂಭಿಸಿದರು. ಇವರು ಯಾರು ಯಾರು ಎಂಬುದು ಅಷ್ಟು ವಿಶದವಾಗಿ ಗೊತ್ತಾಗುವದಿಲ್ಲ. ಜೇಡರ ದಾಸಿಮಯ್ಯ, ಸಕಳೇಶಮಾದ

ರಸ ಮೊದಲಾದ ಕೆಲ ವಚನಕಾರರು ಸಿಗುತ್ತಾರೆ. ಇವರೂ ಇನ್ನೂ ಕೆಲವು ಅಗೋಚರರೂ ಸೇರಿ ಮೊದಲಿದ್ದ ಲಿಂಗಧಾರಣದಲ್ಲಿ ಷಟ್ಸ್ಥಲ ಕ್ರಮವನ್ನು ಏರ್ಪಡಿಸಿ ಎಲ್ಲ ಜಾತಿಯವರಿಗೂ ಇದನ್ನು ಕೊಟ್ಟು ಉದ್ಧಾರ ಮಾಡಬೇಕೆಂದು ಪ್ರಾರಂಭಿಸಿದರು. ಇದೇ ಷಟ್ಸ್ಥಲದ ಮೊಳಕೆಯು. ಈ ರೀತಿಯಾಗಿ ಇದು ಉಪಕ್ರಮವಾದದ್ದು ಬಸವಸ್ವಾಮಿಯಲ್ಲಿ ಪರಿಪೂರ್ತಿಗೊಂಡಿತು. ಪಂಚಾಚಾರ್ಯರಲ್ಲಿ ಪಂಡಿತಾರಾಧ್ಯರು ಬಸವನಿಗಿಂತಲೂ ಹೇಗೆ ಕೆಲ ವರ್ಷ ಚಿಕ್ಕ ವಯಸ್ಸಿನವರೋ ರೇವಣಸಿದ್ಧರು ಬಸವನಿಗಿಂತಲೂ ಹಾಗೆ ಕೆಲ ವರ್ಷ ದೊಡ್ಡ ವಯಸ್ಸಿನವರು. ಇದು ತತ್ತಜ್ಞನರ ಕಥೆಗಳಿಂದ ಗೊತ್ತಾಗುತ್ತದೆ. ಇದನ್ನು ನೋಡಿದರೆ— ರೇವಣಸಿದ್ಧರು ಷಟ್ಸ್ಥಲ ನಿರ್ಮಾಣ ಕಾರ್ಯದಲ್ಲಿ ತೊಡಗಿದವರಲ್ಲೊಬ್ಬರಾಗಿರುತ್ತಾರೆಂದು ಕಾಣುತ್ತದೆ. ಆದರೆ ಇವರ ವಚನಗಳಾವವೂ ಕಂಡುಬರುವದಿಲ್ಲ. ಆದರೆ ಸೊನ್ನಲಾಪುರದ ಸಿದ್ಧರಾಮೇಶ್ವರ ದೇವರ ಸಂಪ್ರದಾಯಸ್ಥರಾದ ಶಿವಯೋಗಿಶ್ವರರು ಬರೆದಿರುವ ಸಿದ್ಧಾಂತಶಿಖಾಮಣಿಯಲ್ಲಿ ರೇಣುಕರು ಅಗಸ್ತ್ಯರಿಗೆ ಬೋಧಿಸಿದ ಷಟ್ಸ್ಥಲ ಸಿದ್ಧಾಂತವನ್ನು ತಾವು ಬರೆದಿರುವದಾಗಿ ಬರೆಯುತ್ತಾರೆ. ಇದರಿಂದ ರೇವಣಸಿದ್ಧರು ಒಂದು ಷಟ್ಸ್ಥಲ ಗ್ರಂಥವನ್ನೇನಾದರೂ ಬರೆದಿರುತ್ತಾರೆಯೋ ಅಥವಾ ಬಾಯಲ್ಲಿ ಏನಾದರೂ ಹೇಳಿದರೋ ಗೊತ್ತಾಗುವದಿಲ್ಲ. ಶ್ರೀಕರರು ಬರೆದಿರುವ ಷಟ್ಸ್ಥಲಾತ್ಮಕವಾದ ಭಾಷ್ಯವು ಬಸವೇಶ್ವರನಿಂದೀಚಿನದಾಗಿರುತ್ತದೆ. ಏತಕ್ಕೆಂದರೆ ಅದು ರಾಮಾನುಜ ಮತ್ತು ಮಾಧ್ವಮತ ಖಂಡನ ಮಾಡುತ್ತದೆ. ಈ ಕಾರಣದಿಂದ ಷಟ್ಸ್ಥಲವು ಬಸವೇಶ್ವರನ ಹಿಂದೆ ಕೆಲ ವರ್ಷಗಳಲ್ಲಿ ಎಳದಾಗಿ ಪ್ರಾರಂಭಿಸಲ್ಪಟ್ಟು ಬಸವೇಶ್ವರನಲ್ಲಿ ಪ್ರಬಲತ್ವವನ್ನು ಹೊಂದಿ ಈಚೆಗೆ ಬೆಳೆಯುತ್ತಾ ಬಂದಿರುತ್ತದೆ. ಈ ಷಟ್ಸ್ಥಲ ರೂಪವಾದ ಲಿಂಗಧಾರಣದ ಉದಾರತತ್ವ ಪ್ರಸರಣಕ್ಕೆ ಶ್ರೀ ಬಸವೇಶ್ವರನೇ ಮುಖ್ಯ ಕರ್ತೃವೆಂದು ಹೇಳಬಹುದು. ಪತಿತೋದ್ಧಾರಕ್ಕೆ ಶ್ರೀ ಬಸವೇಶ್ವರ ದೇವರು ಈ ಲಿಂಗಧಾರಣ ರೂಪ ಷಟ್ಸ್ಥಲ ಮತವನ್ನು ಚನ್ನಾಗಿ ಪ್ರಬಲ ಪಡಿಸಿದನು. ಬಸವೇಶ್ವರನಿಗಿಂತಲೂ ಮೊದಲು ಮೇಲ್ಕಂಡ ಕಾರಣಗಳಿಂದ ಕೆಲ ವರ್ಷಗಳಿಂದಲೂ ಲಿಂಗಧಾರಣಾಂತರ್ಗತ ಷಟ್ಸ್ಥಲ ತತ್ವವು ಎಳದಾಗಿ ಪ್ರಾರಂಭಿಸಲ್ಪಟ್ಟಿತೆಂದು ಊಹಿಸಬಹುದಾದರೂ ಅದನ್ನು ಪೂರ್ತಿಗೊಳಿಸಿ ಪ್ರಸರಣ ಮಾಡಿದ್ದರಿಂದ ಶ್ರೀ ಬಸ

ವೇಶ್ವರ ದೇವರೇ ಲಿಂಗಧಾರಣಾಂತರ್ಗತ ಷಟ್ಸ್ಥಲ ಸಿದ್ಧಾಂತ ನಿರ್ಮಾಣಕನೆಂದು ನಿರ್ವಿವಾದವಾಗಿ ಹೇಳಬಹುದು. ಲಿಂಗಧಾರಣ ಸಂಬಂಧವಾದ ಉದಾರತತ್ವಗಳೆಲ್ಲವೂ ಬಸವೇಶ್ವರನದಾಗಿಯೇ ಇರುತ್ತವೆ. ಶ್ರೀ ಬಸವೇಶ್ವರನು ಹೇಗೆ ಷಟ್ಸ್ಥಲ ವಚನವನ್ನು ಬರೆದಿದ್ದಾನೋ ಹಾಗೆಯೇ ಅವನ ಹಿಂಬಾಲಕರಾದ ಚನ್ನಬಸವೇಶ್ವರ, ಪ್ರಭುದೇವರು ಮೊದಲಾದ ಕೆಲವರು ಷಟ್ಸ್ಥಲ ವಚನವನ್ನು ಬರೆದಿರುತ್ತಾರೆ. ಇವರಿಗೆ ಹಿಂದೆ ಬರೆದ ಜೇಡರ ದಾಸಿಮಯ್ಯ ಮತ್ತು ಸಕಳೇಶ ಮಾದರಸರ ವಚನಗಳು ಷಟ್ಸ್ಥಲವನ್ನು ವಿಶದವಾಗಿ ಬೋಧಿಸುತ್ತವೊ ಅಥವಾ ಇತರ ಕೆಲ ವಚನಗಳಂತೆ ಭಾವ ಮಾತ್ರವಾಗಿ ಬೋಧಿಸುತ್ತವೊ ನನಗೆ ಗೊತ್ತಾಗುವದಿಲ್ಲ. ಏತಕ್ಕಂದರೆ ಅವು ಪೂರ್ತಿಯಾಗಿ ನನ್ನ ಕೈಗೆಸಿಕ್ಕು ನನ್ನಿಂದ ಅವಗಾಹಿಸಲ್ಪಟ್ಟಿಲ್ಲ. ಇದು ಹೇಗಾದರೂ ಆಗಲಿ, ಲಿಂಗಧಾರಣದ ನೂತನ ಉದಾರತತ್ವಗಳೆಲ್ಲವೂ ಜಗದುದ್ಧಾರಕ್ಕಾಗಿ ಬಸವೇಶ್ವರನಿಂದ ಷಟ್ಸ್ಥಲ ರೂಪವಾಗಿ ಏರ್ಪಡಿಸಲ್ಪಟ್ಟವೆಂದು ನಾನು ಕೊನೆಯ ಮಾತನ್ನು ಹೇಳುತ್ತೇನೆ.

ಲಿಂಗಧಾರಣ ಪದ್ಧತಿಯೇನೊ ಬಸವೇಶ್ವರನಿಗಿಂತಲೂ ಬಹು ಪೂರ್ವದಿಂದಲೂ ಬಂದಿರುತ್ತದೆ. ಅವರ ಉದಾರತತ್ವ ಪ್ರಚಾರಕವಾದ ಷಟ್ಸ್ಥಲ ಕ್ರಮವು ಬಸವೇಶ್ವರನಿಂದಲೇ ನಿರ್ಮಾಣ ಮಾಡಲ್ಪಟ್ಟಿತೆಂದು ನಾನು ನಂಬುತ್ತೇನೆ.

ನಾವು ಎಷ್ಟೆಷ್ಟು ಪ್ರಯತ್ನಮಾಡಿದರೂ ಷಟ್ಸ್ಥಲದ ಉದಾರತತ್ವಗಳು ಬಸವೇಶ್ವರನಿಗಿಂತ ಬಹು ಪೂರ್ವದಿಂದ ಯಾವ ಸ್ವತಂತ್ರ ಗ್ರಂಥಗಳಲ್ಲಿಯೂ ಕಂಡು ಬರುವದಿಲ್ಲ. ಇದೆಲ್ಲವೂ ಬಸವೇಶ್ವರನಿಂದೀಚೆಗೆ ಹೇರಳವಾಗಿ ಸಿಕ್ಕುತ್ತದೆ. ಭಾಷ್ಯಗಳಾಗಲಿ, ಇತರ ಉದ್ಗ್ರಂಥಗಳಾಗಲಿ, ಕನ್ನಡದಲ್ಲಾಗಲಿ, ಸಂಸ್ಕೃತದಲ್ಲಾಗಲಿ ಬಸವೇಶ್ವರನಿಂದೀಚೆಗೆನೇ ಹೇರಳವಾಗಿ ಸಿಕ್ಕುತ್ತವೆ. ಬಸವೇಶ್ವರನಿಗಿಂತಲೂ ಹಿಂದೆ ಇಂಥ ಗ್ರಂಥಗಳು ದೊಡ್ಡ ಸೊನ್ನೆಯಾಗಿರುತ್ತವೆ.

ರೇಣುಕ ಭಾಷ್ಯವಿದೆಯೆಂದು ಹೇಳುತ್ತಾರೆ. ಅದು ಷಟ್ಸ್ಥಲಾತ್ಮಕವಾಗಿದ್ದು ಅದು ಸಿಕ್ಕರೆ ಷಟ್ಸ್ಥಲನಿರ್ಮಾಣ ವಿಚಾರದಲ್ಲಿ ಯಾರು ಮೊದಲು? ಬಸವೇಶ್ವರನು ಮೊದಲೊ? ರೇಣುಕರು ಮೊದಲೊ?

ಎಂಬುವದನ್ನು ನಿರ್ಧರಿಸಬೇಕಾಗುತ್ತದೆ. ಅಂತೂ ಷಟ್ಸ್ಥಲವು ಸಮಕಾಲೀನರಾದ ಬಸವ ರೇವಣರ ಕಾಲದಲ್ಲಿ ನಿರ್ಮಾಣವಾಗಿ ಬಂದದ್ದಾಗಿರುತ್ತದೆ.

ಶಿವಾಗಮಗಳಲ್ಲಿ ಪೂರ್ವಭಾಗವು ಶೈವಪರವೆಂದೂ ಉತ್ತರ ಭಾಗವು ವೀರಶೈವ ಪರವೆಂದೂ ಹೇಳುವದರಿಂದ ಷಟ್ಸ್ಥಲವು ಬಸವ ರೇವಣರ ಕಾಲೋತ್ಪನ್ನವಾದದ್ದೆಂದು ಹೇಳಲೇಬೇಕು.

ಅಂತೂ ನಿಜತತ್ವವನ್ನು ಕಂಡು ಹಿಡಿಯುವದಕ್ಕೋಸ್ಕರ ನನಗೆ ತಿಳಿದ ಮಟ್ಟಿಗೆ ಲಿಂಗಧಾರಣಾತ್ಮಕ ಷಟ್ಸ್ಥಲವು ಬಸವೇಶ್ವರನ ಕಾಲದಿಂದ ಬಂದುದೆಂದು ಬರೆದೆನು ಹಾಗಲ್ಲ— ಅದು ಬಹು ಪೂರ್ವದಿಂದಲೂ ಬಂದಿರುತ್ತದೆ, ವೇದಗಳ ಕಾಲದಿಂದಲೂ ಬಂದಿರುತ್ತದೆ, ಎಂದು ಚರಿತ್ರ ರೀತ್ಯಾ ತೃಪ್ತಿಕರವಾಗುವಂತೆ ಸಪ್ರಮಾಣಗಳಿಂದ ತೋರಿಸಿದರೆ ನಾನು ಸಂತೋಷಪಡುತ್ತೇನೆ.

---

# ಶ್ರೀ ಮುರಿಸ್ವಾಮಿಗಳು ಬಳ್ಳಾರಿ.

ಲೇಖಕ:— ವೈ. ನಾಗೇಶಶಾಸ್ತ್ರಿಗಳು ಕನ್ನಡ ಪಂಡಿತ ವಾರ್ಡ್ಲಾ ಹೈಸ್ಕೂಲ ಬಳ್ಳಾರಿ.



ನುಡಿದಂತೆ ನಡೆ ಇದೇ ಜನ್ಮನೆ ಕಡೆ' 'ನಂಬಿ ಕರೆದರೆ ಓ, ಎನ್ನನೆ ಶಿವನು' ಎಂಬ ಶ್ರೀ ಬಸವೇಶ್ವರನ ಬೋಧೆಯ ತತ್ವವನ್ನು ಯಥಾರ್ಥಗೊಳಿಸಿದ ವೀರಶೈವ ಮಹಾತ್ಮರು ಅನೇಕರು ಆಗಿಹೋಗಿರುವರು. ಆ ಮಹಾತ್ಮರ ಚರಿತ್ರಾವಲೋಕನದಿಂದ ನುಡಿದಂತೆ ನಡೆಯುವ ಧೀರನು ಯಾವ ಆಶ್ರಮದಲ್ಲಿದ್ದರೂ ತನ್ನ ನಿಜಾಚರಣೆಯಿಂದ ಚ್ಯುತನಾಗಲಾರನೆಂದು ತಿಳಿದು ಬರುತ್ತಿದೆ. ಗೃಹಸ್ಥನೆಯು ಶತಮಾನದ ಯೋಗಿ ಯಾಜ್ಞವಲ್ಕ್ಯರೆಂದು ಕರೆಯಬಹುದಾದ ಶ್ರೀ ಮುರಿಸ್ವಾಮಿಗಳಿಗೆ ಮೂವರು

ಹೆಂಡತಿಯರು. ಆದರೇನು? ಶಿವಯೋಗಿಪುಂಗವರಾಗಿ ಜಗಜ್ಜ್ಯೋತಿಗಳೆನಿಸಿಕೊಂಡರು. ಜನಕನು ರಾಜ್ಯಭಾರ ಮಾಡುತ್ತ ವೇದಾಂತ ತತ್ವಾಚಾರ್ಯನಾಗಿರಲಿಲ್ಲವೆ? ನಡತೆಗೆಟ್ಟವರು ಮಾತ್ರ ವರ್ಣಾಶ್ರಮದ ತೊಡಕನ್ನು ಮುಂದಿಟ್ಟುಕೊಂಡು ಕಡೆಹಾಯುವುದು ಕಷ್ಟವೆಂದು ಗುನುಗುಟ್ಟುವರು ಇರಲಿ. ಸದ್ಯದಲ್ಲಿ ನಾವು ಕೆಲಸದ ಜಟ್ಟಿಗಳಾಗದೆ ಮಾತಿನ ಮಲ್ಲಂಣನವರಾಗಿ ಪೂರ್ವದ ಮಹಾತ್ಮರಾದ ಬಸವೇಶ್ವರ ರೇಣುಕಾಚಾರ್ಯರೇ ಮೊದಲಾದವರ ಚರಿತ್ರದ ಮೇಲೆ ಇಲ್ಲದ ಸಲ್ಲದ ಕುತ್ಸಿತವಾದವನ್ನು ಎಬ್ಬಿಸಿ ಹೊತ್ತುಗಳೆಯುತ್ತಿರುವೆವು. ಇದರಿಂದ ನಮಗೂ ನಮ್ಮ ಸಮಾಜಕ್ಕೂ ಯಾವ ಲಾಭವೊ ನಮಗೇ ತಿಳಿಯದಂತಾಗಿದೆ. ಶ್ರೀ ಮರಿಸ್ವಾಮಿಗಳಂತಹ ನೂರಾರು ವರ್ಷಗಳ ಹಿಂದಿನ ಮಹಾತ್ಮರ ಚರಿತದ ಪರಿಚಯದಿಂದಲಾದರೂ ವಿಷಲತೆಯಂತೆ ವ್ಯಾಪಕವಾಗಿ ಸಮಾಜವನ್ನೇ ಭ್ರಾಂತಿಗೊಳಿಸುತ್ತಿರುವ ಪೂರ್ವದ ಮಹಾತ್ಮರ ವಿಷಯಕವಾದ ಕುತ್ಸಿತವಾದವು ನಮ್ಮಲ್ಲಿ ದೂರವಾಗಬಹುದೆಂದೂಹಿಸಿ ಇಲ್ಲಿ ಶ್ರೀ ಮರಿಸ್ವಾಮಿಗಳ ಚರಿತ್ರದ ಸಂಕ್ಷೇಪವನ್ನಿಷ್ಟು ವಾಚಕರ ದೃಷ್ಟಿಪಥಕ್ಕೆ ತಂದುಕೊಡುವೆವು.

ಶ್ರೀ ಮರಿಸ್ವಾಮಿಗಳ ಮಠಗಳು ಬಳ್ಳಾರಿಯಲ್ಲಿಯೂ, ಬೆಂಗಳೂರಲ್ಲಿಯೂ, ಮೈಸೂರುಸೀಮೆಯ ಮೊಣಕಾಲ್ಮುರುವು ತಾ॥ ಭೈರಾಪುರ ಗ್ರಾಮದಲ್ಲಿಯೂ, ಕೂಡಿ ಮೂರು ಸ್ಥಲಗಳಲ್ಲಿರುವವು. ಬಳ್ಳಾರಿಯ ಮಠವೇ ವಿಶಾಲವಾಗಿಯೂ, ಶಿಲಾರೂಪವಾಗಿಯೂ, ಇದ್ದು ಬಳ್ಳಾರಿಯ ಇತರ ಮಠಗಳಿಗಿಂತಲೂ ಮನೋಹರವಾಗಿರುವುದು. ಈ ಮಠಕ್ಕೆ ಸದ್ಯದಲ್ಲಿ ಇನಾಮು ಭೂಮಿಗಳು ಇರುವುದಿಲ್ಲ. ಮೈಸೂರ ಕೃಷ್ಣರಾಜ ಒಡೆಯರು ಕೊಟ್ಟ ಕೆಲವು ಆಭರಣಗಳು ಮಾತ್ರ ಇರುವವು. ಇತರ ಭಕ್ತರಿಂದ ಆಗಾಗ ಸಲ್ಲಿಸಿದ ಕೆಲವು ಬೆಳ್ಳಿಬಂಗಾರದ ಒಡವೆಗಳೂ ಇರುವವು. ಕರ್ತೃಗದ್ದುಗೆಯಲ್ಲಿರುವ ಭಕ್ತರ ಭಕ್ತಿಯಿಂದಲೇ ಮಠದ ಎಲ್ಲಾ ವಿಧದ ಉತ್ಸವಾದಿಗಳು ಸುಲಲಿತವಾಗಿ ನಡೆಯುವವು. ಪ್ರತಿಪಕ್ಷದ ನಾಡಹಬ್ಬದಲ್ಲಿ ಮಠದಲ್ಲಿ ಶಿವಕೀರ್ತನಾದಿ ಪುಣ್ಯ ಕಾರ್ಯಗಳು ಜರಗಿ ಕಡೆಯ ದಿನದಲ್ಲಿ (ವಿಜಯ ದಶಮಿ) ಶ್ರೀ ಮರಿಸ್ವಾಮಿಗಳ ಮೂರ್ತಿಯ ಉತ್ಸವವು ಒಳ್ಳೇ ವೈಭವದಿಂದ ನಡೆಯುವದು. ಬಳ್ಳಾರಿಯ ಮತ್ತು ಸುತ್ತುಮುತ್ತಲಿನ ಎಲ್ಲಾ ಮತದವರೂ ಮಠಕ್ಕೆ ನಡೆ

ದುಕೊಳ್ಳುವರು. ಮೂಲಪುರುಷರ ವಂಶೀಯರಾದ ಈಗಿರುವ ಮುರಿಸ್ವಾಮಿಗಳೇ ಮಠದ ಪಾಲಕರು.

## ಶ್ರೀ ಮುರಿಸ್ವಾಮಿಗಳ ಬಾಲ್ಯ.

ಮುರಿಸ್ವಾಮಿಗಳ ಜನ್ಮಕಾಲವು ಸರಿಯಾಗಿ ಗೊತ್ತಾಗಿಲ್ಲ. ಅವರ ಸಮಾಧಿಯ ಕಾಲದ ವಯಸ್ಸಿನಿಂದ ಸುಮಾರು ೧೮ನೇ ಶತಮಾನದ ಮಧ್ಯದಲ್ಲಿ ಜನ್ಮಿಸಿರಬಹುದೆಂದು ಊಹಿಸಲ್ಪಟ್ಟಿದೆ. ಇವರು ಕಲ್ಯಾಣ ಕಲ್ಬುರಗಿ ಪ್ರಾಂತದ ತೋರಗಲ್ಲು ಬಾದಾಮಿ, ಜಾಲೀಹಾಳು ಮೊದಲಾದ ಗ್ರಾಮಗಳ ಮಠಾಧಿಕಾರಿಗಳಾದ 'ಪುರಾಣಮಠದ ಬಸವೇಶವಡಿಯರೆಂಬ ಮಹೇಶ್ವರರಿಂದ ಜನ್ಮಧಾರಣ ಮಾಡಿದರು. ಬಾಲ್ಯದಲ್ಲಿಯೇ ಮಾತಾಪಿತೃಗಳು ಮಡಿದುಹೋದುದರಿಂದ ಮುರಿಸ್ವಾಮಿಗಳು ಚಿಕ್ಕ ತಾಯಿಯ ಪೋಷಣೆಯಲ್ಲಿರಬೇಕಾಯಿತು. ಮಗನ ಭಾವೀ ಮಹಿಮಾಶಕ್ತಿಯನ್ನು ತಿಳಿಯಲಾರದ ಚಿಕ್ಕಮ್ಮನಿಗೆ ಪೋಷಣೆಯ ಕಾರ್ಯವು ಭಾರವಾಯಿತು. ಮುಂದೇವರನ್ನು ವಿದ್ಯಾಭ್ಯಾಸಕ್ಕೆ ಬದಲಾಗಿ ಭಿಕ್ಷಾವೃತ್ತಿಗೆ ಹಚ್ಚಿದಳು. ಭಿಕ್ಷೆಯಿಂದ ಬಂದ ಆದಾಯವೂ ತಾಯಿಮಗನಿಗೆ ಸಾಲದಂತಾಯಿತು. ತಾಯಿಯ ನಿಷ್ಠುರವಾದ ನಿರ್ಬಂಧದಿಂದ ಸ್ವಾಮಿಯು ಕಷ್ಟತರವಾದ ಕೂಲಿಯ ಕೆಲಸಗಳನ್ನು ಮಾಡಬೇಕಾಯಿತು. ಕಷ್ಟಸಹಿಷ್ಣುವೂ, ಕ್ಷಮಾಶೀಲನೂ, ಆದ ಮುರಿಸ್ವಾಮಿಯು ಬಾಲಕನಾಗಿದ್ದರೂ ಚಿಕ್ಕ ತಾಯಿಯ ಆಜ್ಞೆಯ ಕಾರ್ಯಗಳನ್ನು ಮಾಡುತ್ತಾ ಹೇಗೋ ಓದುಬರಹಗಳನ್ನು ಮಾತ್ರ ಕಲಿತುಕೊಂಡನು.

## ಗೃಹತ್ಯಾಗ.

ಮಾಡಬಾರದ ಕಾರ್ಯವನ್ನು ನಿಯಮಿಸಿದರೂ ಶಿವಾಜ್ಞೆಯೆಂದು ನೆರೆನಂಬಿ ಮಾಡುತ್ತಿದ್ದ ಮಗನ ಸೇವೆಯು ತಾಯಿಗೆ ಸರಿಬರಲಿಲ್ಲ. ಒಂದು ದಿನ 'ನೀನು ಕೆಟ್ಟವನು ನನ್ನ ಮನೆಯಲ್ಲಿರಕೂಡದು ಹೋಗು. ಎಲ್ಲಿಯಾದರೂ ಜೀವಿಸು.' ಎಂದು ಸ್ವಾಮಿಗೆ ಕಟ್ಟಪ್ಪಣೆ ಮಾಡಿಬಿಟ್ಟಳು. ಅನಾಥರಾದ ಮುರಿಸ್ವಾಮಿಗಳು ತಾಯಿಯ ಅಪ್ಪಣೆಯಂತೆ ಮನೆಯನ್ನು ಬಿಟ್ಟರು. ಭಿಕ್ಷಮಾಡಿಕೊಂಡು ಮಠಗಳಲ್ಲಿ ಭೋಜನಮಾಡಿ ಕಾಲಕ್ರಮಣ ಮಾಡುತ್ತಿದ್ದರು. ಆಗ ವಯಸ್ಸು ೧೨.

## ಶಿವಯೋಗಿಯಾದುದು.

ಚಿಕ್ಕಮ್ಮನ ಮನೆಯನ್ನು ಬಿಟ್ಟು ೪-೬ ತಿಂಗಳು ಅದೇ ಗ್ರಾಮದಲ್ಲಿ ಭಿಕ್ಷಾವೃತ್ತಿಯಿಂದ ಜೀವಿಸುತ್ತಿದ್ದ ಮರಿಸ್ವಾಮಿಗಳು ಒಂದು ದಿನ ಗ್ರಾಮದವರಿಗೆ ತಿಳಿಯದಂತೆ ಎಲ್ಲಿಯೋ ಹೊರಟು ಬಿಟ್ಟರು. ಇಂತಹ ಸ್ಥಲದಲ್ಲಿರುವರೆಂಬುದು ಯಾರಿಗೂ ತಿಳಿಯದಂತಾಯಿತು. ಯಾವ ಗುಪ್ತ ಗುಹೆಯಲ್ಲಿ ವಾಸಮಾಡುತ್ತಿದ್ದರೋ, ಯಾವ ಗುರುವಿನ ಅನುಗ್ರಹದಿಂದ ಶಿವಯೋಗಿಗಳಾದರೋ, ಸರಿಯಾಗಿ ಓದುಬರಹವನ್ನು ಕಲಿಯದವರು ಶಿವಯೋಗ ತತ್ವಗಳನ್ನು ಹೇಗೆ ತಿಳಿದು ಕೊಂಡರೋ ಊಹಿಸಲಶಕ್ಯ. ಕೆಲವು ವರ್ಷಗಳ ಮೇಲೆ ಮಹಿಮಾಶಾಲಿಗಳಾಗಿ ಬೆಂಗಳೂರು ಪ್ರಾಂತದಲ್ಲಿ 'ಮೇಲು ಸೀಮೆಯ ಶಿವಯೋಗಿಗಳು' ಎಂಬ ಪ್ರಸಿದ್ಧಿಯಿಂದ ಗ್ರಾಮ ಗ್ರಾಮಗಳಲ್ಲಿ ಸಂಚರಿಸಲಾರಂಭಿಸಿರುವರು. ಆಗ ಓಹೋ ನಮ್ಮ ಮರಿಸ್ವಾಮಿಗಳು ಇವರೇ ಎಂಬುದು ಗುಲುಬುರ್ಗ ಪ್ರಾಂತದ ಭಕ್ತರಿಗೆ ಗೊತ್ತಾಗಿದೆ. ಯಾರು ಕರೆದರೂ ಬರದೆ ಯಾರ ಮನೆಯಲ್ಲಿಯೂ ನಿಲ್ಲದೆ ಸ್ವತಂತ್ರ ಶೀಲರಾಗಿ ಶಿವಯೋಗ ಮಹಿಮೆಯಿಂದ ಭಕ್ತರನ್ನುದ್ಧರಿಸುವುದಕ್ಕಾಗಿ ಲೋಕದಲ್ಲಿ ಸಂಚರಿಸಿ ಮರಿಸ್ವಾಮಿಗಳು ಅದ್ಭುತ ಮಹಿಮಾಶಾಲಿಗಳೆಂದೂ ಶಿವಯೋಗಿವರರೆಂದೂ ಪ್ರಸಿದ್ಧರಾದರು.

## ಯೋಗಮಹಿಮೆ.

ದೃಷ್ಟರುಷ (ನೋಟಮಾತ್ರದಿಂದ ರೋಗಾದಿಗಳನ್ನು ಕಳೆಯುವುದು) ಹಸ್ತಪರುಷ (ಸ್ಪರ್ಶನ ಮಾತ್ರದಿಂದ ತಾಪತ್ರಯಗಳನ್ನು ದೂರಮಾಡುವುದು) ವಾಕ್ಪರುಷ (ಶುಭಾ ಶುಭಗಳನ್ನು ಕುರಿತು ಹೇಳಿದ ಮಾತು ಯಥಾರ್ಥವಾಗುವುದು) ಗಳೇ ಮರಿಸ್ವಾಮಿಗಳ ಕೈಗಂಟಾಗಿದ್ದವು. ಮೈಸೂರು ಪ್ರಾಂತದ ಎಲ್ಲಾಮತದ ಭಕ್ತರು ರಾಜ್ಯಾಧಿಕಾರಿಗಳೂ ಸ್ವಾಮಿಗಳ ದಾಸಾನುದಾಸರಾದರು. ಮಧ್ವಾದಿಮತದ ಗುರುಗಳೂ ಸಹಿತ ಮರಿಸ್ವಾಮಿಗಳ ದರ್ಶನಾಶೀರ್ವಾದದಿಂದ ಕೃತಕೃತ್ಯರಾದ ಉಲ್ಲೇಖಗಳು ಹೇರಳವಾಗಿರುವವು. ಸ್ವಾಮಿಗಳು ಅಪೇಕ್ಷಿಸದಿದ್ದರೂ ಕಾಣಿಕೆಯ ರೂಪದಿಂದ ಬೆಂಗಳೂರಿನ ಮಠಕ್ಕೆ ಬಂದ ಆಸ್ತಿಯು ಸುಮಾರು ೧೬ ಲಕ್ಷರೂಪಾಯಿಗಳಾಗಿದ್ದಿತೆಂದು ಬಳ್ಳಾರಿಯ ಮಠದಲ್ಲಿರುವ ಹಳೆಯ ಲೇಖಗಳಿಂದ ಗೊತ್ತಾಗುತ್ತದೆ. ಬೆಂಗಳೂರು ಪ್ರಾಂತದ ಅನೇಕ ಶ್ರೀಮಂತರ ಮನೆ

ಯಲ್ಲಿ ಸ್ವಾಮಿಗಳ ನಗ ನಾಣ್ಯಗಳಿದ್ದಂತೆ ಪೂರ್ವದ ಲೇಖ ಪತ್ರಗಳಿಂದ ಊಹಿಸ ಬಹ ದಾಗಿದೆ. ಇಂತಹ ಸಂಪತ್ತನ್ನು ತೃಣವೆಂದು ಭಾವಿಸಿ ವೈರಾಗ್ಯ ಶೀಲರಾದ ಸ್ವಾಮಿಗಳು ಬೆಂಗಳೂರು ಪ್ರಾಂತವನ್ನು ಬಿಟ್ಟು ಸಂಚಾರಮಾಡುತ್ತಾ ಮಾಡುತ್ತಾ ಬಳ್ಳಾರಿ ಮಂಡಲಕ್ಕೆ ದಯಮಾಡಿಸಿ ರುವರು. ಬೆಂಗಳೂರು ಮಠದ ಆಸ್ತಿಯಲ್ಲಾ ಅನೇಕ ದುಷ್ಕರ ಪಾಲಾಗಿ ಏನೂ ಉಳಿಯದಂತಾಗಿದೆ. ಮರಿಸ್ವಾಮಿಗಳ ಯೋಗ ಪ್ರಭಾವವು ಬಳ್ಳಾರಿ ಮಂಡಲದಲ್ಲಿಯೂ ದ್ವಿಗುಣಿತವಾಗಿದೆ. ಸ್ವಾಮಿಗಳಲ್ಲಿ ಭಾವಿ ಶುಭಾಶುಭ ಸೂಚನವನ್ನು ಮಾಡುವ ಪದ್ಧತಿಯು ವಿಜಾತೀಯವಾಗಿ ದ್ದಿತು. ಬಳ್ಳಾರಿಯಲ್ಲಿ ಶಾಲಿ॥ ಶ. ೧೭೫೪ ನೇ ನಂದನ ಸಂವತ್ಸರದ ಕ್ಷಾಮಾರಂಭದಲ್ಲಿ ಎಲ್ಲರೂ ಸುಖವಾಗಿ ಸಂತೆಯನ್ನು ಮಾಡುತ್ತಿರಲು ಸ್ವಾಮಿಗಳು ಬಜಾರಕ್ಕೆ ಬಂದು ಅಂಗಡಿಯವನ ಒಳಿಗೆ ಹೋಗಿ ಒಂದು ರೂಪಾಯಿ ಕೊಟ್ಟು ೧೨ ಸೇರು ಜೋಳವನ್ನು ಮಾತ್ರ ತೆಗೆದುಕೊಂಡು ಹೋದರಂತೆ. ಆರು ತಿಂಗಳೊಳಗೆ ರೂ. ೧ ಕ್ಕೆ ೫೦-೬೦ ಸೇರು ಮಾರುವ ಜೋಳವು ೧೨ ಸೇರು ಸಹ ಸಿಕ್ಕದಂತಹ ಭಯಂಕರ ಕ್ಷಾಮವು ಪ್ರಾಪ್ತ ವಾಗಿದೆ. ಸ್ವಾಮಿಗಳು ಜೀವಿತಕಾಲದಲ್ಲಿ ಇಂತಹ ಸೂಚನೆಗಳನ್ನು ಎಷ್ಟೋ ಮಾಡುತ್ತಿದ್ದರಂತೆ.

## ಗೃಹಸ್ಥಾಶ್ರಮ.

ಶಿವಯೋಗಿ ಶ್ರೇಷ್ಠರಾಗಿದ್ದರೂ ಮರಿಸ್ವಾಮಿಗಳಿಗೆ ಮೂವರು ಪತ್ನಿ ಯರಿದ್ದರಂತೆ. ಅವರಲ್ಲಿ ಕರಿಬಸವಮ್ಮ ನೆಂಬವರು ಮುಖ್ಯ ಪತ್ನಿಯರು. ಪತಿವ್ರತಾಶಿರೋಮಣಿಯಾದ ಕರಿಬಸವಮ್ಮನ ಯೋಗ್ಯತೆಯು ಸ್ವಾಮಿ ಗಳ ಯೋಗ್ಯತೆಗೆ ಸರಿಗಟ್ಟುವಂತಿದ್ದಿತು. ಭಕ್ತರು ಸ್ವಾಮಿಗಳಲ್ಲಿ ಭಯ ಭಕ್ತಿಯಿಂದ ನಡೆದುಕೊಳ್ಳುವಂತೆ ಇವರಲ್ಲಿಯೂ ನಡೆದು ಕೊಳ್ಳುತ್ತಿದ್ದ ರೆಂದು ಕಂಡುಬರುತ್ತದೆ. ಆದ್ದರಿಂದಲೇ ಬಳ್ಳಾರಿಯ ಮಠದಲ್ಲಿ ಸ್ವಾಮಿ ಗಳ ಸಮಾಧಿಯ ಎಡಭಾಗದಲ್ಲಿಯೇ ಕರಿಬಸವಮ್ಮನವರ ಸಮಾಧಿಯನ್ನು ಮಾಡಿರುವರು. ಸ್ವಾಮಿಗಳಿಗೆ ಒಬ್ಬ ಪುತ್ರನೂ ಜನಿಸಿ, ಸ್ವಲ್ಪ ವಯಸ್ಸಿ ನಲ್ಲಿಯೇ ಶಿವೈಕ್ಯನಾಗಿರುವನು. ಸ್ವಾಮಿಗಳ ಅಪ್ಪಣೆಯಂತೆ ಕರಿಬಸವ ಮ್ಮನವರು ಯೋಗ್ಯರಾದ ಮೂವರು ಮಾಹೇಶ್ವರ ವಟುಗಳನ್ನು ಸಾಕಿ, ದತ್ತ ಪುತ್ರರನ್ನಾಗಿ ಸ್ವೀಕರಿಸಿದ್ದರು. ಅವರಲ್ಲಿ ಒಬ್ಬರಿಗೆ ಮರಿಸ್ವಾಮಿ

ಗಳು ಶಿವೈಕ್ಯರಾದನಂತರ ಶಾ. ಶ. ೧೭೭೪ ನೇ ಪರಿಧಾವಿ ಸಂವತ್ಸರದಲ್ಲಿ ಪಟ್ಟಾಧಿಕಾರವಾಗಿದೆ. ಮರಿಸ್ವಾಮಿಗಳು ಷಡ್ವಿಡಿಸೂತ್ರದ ಗುರುಸ್ಥಲದ ಮಾಹೇಶ್ವರರಾದ್ದರಿಂದ ಆ ಸೂತ್ರದ ಗುರುಗಳಾದ ಶ್ವಾನಸಾಗರದಲ್ಲಿ ಸಮಾಧಿಯಾಗಿರುವ ಬಾಳೇಹಳ್ಳಿಯ ಜಗದ್ಗುರುಗಳು ಶ್ರೀಗುರುಸಿದ್ಧಸ್ವಾಮಿಗಳೇ ಖುದ್ದು, ದಯಮಾಡಿಸಿ, ಸರ್ವ ಭಕ್ತ ಮಾಹೇಶ್ವರರ ಅನುಮತಿಯಿಂದ ಬಳ್ಳಾರಿಯ ಮಠದಲ್ಲಿ ಮರಿಸ್ವಾಮಿಗಳ ಹೆಸರಿನಿಂದ ಪಟ್ಟಾಧಿಕಾರದ ಅಧಿಕಾರವನ್ನು ಕೊಟ್ಟಂತೆ ದಾಖಲೆ ಇರುವುದು. ಉಳಿದ ದತ್ತ ಪುತ್ರರಿಬ್ಬರು ಗೃಹಸ್ಥಾಶ್ರಮಿಗಳಾಗಿರುವರು. ಅವರ ವಂಶಜರೇ ಈಗಲೂ ಮಠದ ಮಾಲಕರು. ಮೊದಲನೇ ಪಟ್ಟಾಧಿಕಾರಿಗಳ ಸಮಾಧಿಯು ಬಳ್ಳಾರಿಯಲ್ಲಿ ಮರಿಸ್ವಾಮಿಗಳ ಗದ್ದುಗೆಯ ಬಲಭಾಗಕ್ಕಾಗಿರುವುದು. ೨ ನೆಯ ಪಟ್ಟದ ಸ್ವಾಮಿಗಳ ಸಮಾಧಿಯು ಭೈರಾಪುರ ಮಠದಲ್ಲಿರುವುದು. ಸದ್ಯದಲ್ಲಿ ಮಠದ ಮಾಲಕರಾಗಿರುವ ಮರಿಸ್ವಾಮಿಗಳಿಗೆ ೧೮೮೫ ನೇ ಸಂವತ್ಸರದಲ್ಲಿ ಧರ್ಮಾರ್ಥವಾದ ೩೦ ಲಗ್ನಗಳಿಂದಲೂ ೬೦ ಶಿವದೀಕ್ಷೆಗಳಿಂದಲೂ ಕೂಡಿದ ಅತ್ಯಂತ ವೈಭವದಿಂದ ಪಟ್ಟಾಧಿಕಾರವಾಗಿದ್ದಿತು. ಮಠಕ್ಕೆ ಮತ್ತಾರೂ ವಂಶಜರಿಲ್ಲದರಿಂದ ಮರಿಸ್ವಾಮಿಗಳು ಪಟ್ಟಾಧಿಕಾರದಿಂದ ಮುಕ್ತರಾಗಿ ಗೃಹಸ್ಥಾಶ್ರಮಿಗಳಾಗಿದ್ದರು. ಇವರ ವಂಶಜರಿಗೆ ಮುಂದೆ ಪಟ್ಟಗಟ್ಟತಕ್ಕದ್ದಿದೆ. ಈ ಮಠದ ವಂಶೀಯ ಶಿಷ್ಯರು ಬಳ್ಳಾರಿ ಪ್ರಾಂತದಲ್ಲಿಯೇ ಇರುವರು.

## ಶ್ರೀ ಮರಿಸ್ವಾಮಿಗಳ ಮುಖ್ಯ ಶಿಷ್ಯರು.

ಮರಿಸ್ವಾಮಿಗಳ ಜೀವಿತಕಾಲದಲ್ಲಿ ಅನೇಕರು ಶಿಷ್ಯವೃತ್ತಿಯಿಂದ ನಡೆದುಕೊಂಡು ಧನ್ಯರಾಗಿರುವರಲ್ಲದೆ, ಈಗಲೂ ಅವರ ಸಮಾಧಿಗೆ ನಡೆದುಕೊಳ್ಳುತ್ತಾ ತಮ್ಮ ಇಷ್ಟಾರ್ಥವನ್ನು ಪಡೆಯುತ್ತಿರುವುದು ಪ್ರತ್ಯಕ್ಷಸಿದ್ಧವಾಗಿರುವುದು. ಬಳ್ಳಾರಿಯ ಮಂಡಲದ ಎಲ್ಲಾ ಮಠದವರ ಮನೆಯಲ್ಲಿ ಮರಿಯಪ್ಪ ಮರಿಯಮ್ಮನೆಂಬ ನಾಮಗಳೇ ಅಧಿಕವಾಗಿರುವವು. ಸ್ವಾಮಿಗಳು ಸ್ಥೂಲ ಶರೀರವನ್ನು ಬಿಟ್ಟಾಗ್ಯೂ ತಮ್ಮ ಸಮಾಧಿಯಲ್ಲಿ ಯೋಗಶಕ್ತಿಯನ್ನು ಕಾದಿಟ್ಟು ತನ್ಮೂಲಕ ಭಕ್ತೋದ್ಧಾರವನ್ನು ಈಗಲೂ ಮಾಡುತ್ತಿರುವರೆಂದರೆ ತಪ್ಪಾಗದು. ಸ್ವಾಮಿಗಳ ಜೀವಿತಕಾಲದ ಶಿಷ್ಯಮಂಡಲದ ಮುಖ್ಯ ಶಿಷ್ಯರಲ್ಲಿ ಒಬ್ಬರು ಕಂಬಳಿ ಸ್ವಾಮಿಗಳು. ಇವರು

ಯಾವಾಗಲೂ ಕಂಬಳಿಯ ನಿಲುವಂಗಿಯಿಂದಲೇ ಸಂಚಾರ ಮಾಡುತ್ತಿದ್ದುದರಿಂದ ಇವರಿಗೆ ಕಂಬಳಿ ಸ್ವಾಮಿಗಳೆಂಬ ನಾಮವು ರೂಢವಾದಂತೆ ಕಾಣುತ್ತದೆ. ಇವರು ವೈರಾಗ್ಯಶೀಲರಾದ ವಿರಕ್ತಮೂರ್ತಿಗಳು. ಇವರು ಯಾವ ಸ್ಥಲದವರೆಂಬುದು ಗೊತ್ತಾಗಿಲ್ಲ. ಹಳ್ಳಿಗೆ ಏಕರಾತ್ರಿ ಪಟ್ಟಣಕ್ಕೆ ಪಂಚರಾತ್ರಿಯಂತೆ ವಾಸ ಮಾಡುತ್ತಿದ್ದು ಆಗಾಗ ಮಠಸ್ವಾಮಿಗಳ ದರ್ಶನಭಾಗಿಗಳಾಗುತ್ತಿದ್ದರಂತೆ ಗುರುಗಳಂತೆ ಇವರ ಶಿವಯೋಗಮಹಿಮೆಯೂ ಜಗತ್ತಿನಲ್ಲಿ ಹೊರಡಿದ್ದಿತೆಂದು ತಿಳಿದುಬರುವದು. ೨ನೇ ಮುಖ್ಯ ಶಿಷ್ಯರೆಂದರೆ ಮೈಸೂರು ಮುಮ್ಮಡಿ ಕೃಷ್ಣರಾಜಒಡೆಯರು. ಇವರು ಸ್ವಾಮಿಗಳನ್ನು ಮೈಸೂರಿಗೆ ಕರೆಯಿಸಿಕೊಂಡು ಅನೇಕರಾಜೋಪಚಾರಗಳಿಂದ ಸತ್ಕರಿಸಿ ರತ್ನಾಭರಣಾದಿ ಕಾಣಿಕೆಯನ್ನು ಒಪ್ಪಿಸಲು ಅದೆಲ್ಲವನ್ನೂ ಸ್ವಾಮಿಗಳು ತಿರಸ್ಕರಿಸಿರುವರು. ಸ್ವಾಮಿಗಳ ವೈರಾಗ್ಯಾತಿಶಯದಿಂದ ಬೆರಗಾದ ಕೃಷ್ಣರಾಜರು ಅಂದಿನಿಂದಲೂ ಶಿಷ್ಯಭಾವದಿಂದ ನಡೆದುಕೊಳ್ಳಲಾರಂಭಿಸಿರುವರು. ಅವರು ಸಮಾಧಿಯ ಅನಂತರದಲ್ಲಿ ಮೊದಲನೆಯ ಪಟ್ಟಾಧಿಕಾರಿಗಳಾದ ೨ನೆಯ ಮಠಸ್ವಾಮಿಗಳನ್ನು ಕರೆಯಿಸಿಕೊಂಡು ಮೊದಲಿನಂತೆಯೇ ಗುರುಭಕ್ತಿಯನ್ನು ಪ್ರಕಟಿಸಿ ಕರ್ತೃಗದ್ದುಗೆಗೆ ಅಮೂಲ್ಯವಾದ ಮುಖವನ್ನೂ ಕೆಲವು ಆಭರಣಗಳನ್ನೂ ದಾನ ಮಾಡಿರುವರು. ಆ ಮುಖವು ಈಗಲೂ ಮಠದಲ್ಲಿರುವುದು. ಕೆಲವು ಇನಾಮು ಭೂಮಿಯನ್ನೂ ಕೊಟ್ಟಿದ್ದರಂತೆ ಈಗ ಆ ಭೂಮಿಗಳು ಮಠದ ಸ್ವಾಧೀನದಲ್ಲಿದ್ದಂತೆ ಕಾಣಲಿಲ್ಲ. ಶ್ರೀ ಕೃಷ್ಣ ಸಾರ್ವಭೌಮ ಎಂಬ ನಾಮದಿಂದ ಮುದ್ರಿತವಾದ ಬೆಳ್ಳಿಯ ಎರಡು ಮೊಹರುಗಳು ಮಾತ್ರ ಮಠದಲ್ಲಿರುವವು. ೩ನೆಯ ಮುಖ್ಯ ಶಿಷ್ಯರೇ ಶ್ರೀ ಮಠಸ್ವಾಮಿಗಳ ವರದಿಂದ ಜನ್ಮಧಾರಣ ಮಾಡಿ ೧೯ನೆ ಶತಮಾನದ ಬಸವೇಶ್ವರನೆಂದು ಕೀರ್ತಿಯನ್ನು ಪಡೆದ ಶ್ರೀ ಸಕ್ಕರಿ ಕರಡೆಪ್ಪನವರು. ಇವರ ಜೀವನಚರಿತ್ರವನ್ನು ಮತ್ತೊಂದು ಸಂಚಿಕೆಯಲ್ಲಿ ಕೊಡಬೇಕೆಂದಿರುವೆವು.

## ಅದ್ಭುತ ಸಮಾಧಿ.

ಶಾ. ಶ. ೧೭೭೩ನೆಯ ಪರೀಧಾವಿ ಸಂವತ್ಸರದ ಆಷಾಢ ಶು. ೩ ಶುಕ್ರವಾರ ಆಶ್ಲೇಷ ನಕ್ಷತ್ರ ಹಗಲು ೮ ತಾಸಿಗೆ ಬಳ್ಳಾರಿಯ ಮಠದಲ್ಲಿ

ಶ್ರೀ ಮಠಸ್ವಾಮಿಗಳು ಸ್ಥೂಲ ಶರೀರವನ್ನು ತ್ಯಜಿಸಿರುವರು. ಅಂಗೈಕ್ಯ ರಾಗುವ ಕಾಲಕ್ಕೆ ಬಳ್ಳಾರಿಯ ಭಕ್ತವರ್ಗವನ್ನೂ ಮುಖ್ಯ ಶಿಷ್ಯನಾದ ಕರಡಪ್ಪನನ್ನೂ ಕರೆಯಿಸಿಕೊಂಡು ಎಲ್ಲರಿಗೂ ದರ್ಶನಾಶೀರ್ವಾದವನ್ನಿತ್ತು ಆಬಳಿಕ "ಕರಡಿ! ಇನ್ನು ಭೂಲೋಕ ನಿವಾಸ ಸಾಕು, ನಮಗೆ ಆಜ್ಞೆ ಯಾಗಿದೆ ಹೊರಡುವೆವು; ನೀನು ಇನ್ನೂ ಕೆಲವು ಕಾಲ ಭೂಲೋಕ ದಲ್ಲಿದ್ದು ಅನಂತರ ನಮ್ಮ ಬಳಿಗೆ ಬರುವಿ, ನೀನು ಈ ಮಠದಲ್ಲಿ ವಿಭೂ ತಿಯ ಕಣಜವನ್ನು ಮಾಡಿಸತಕ್ಕದ್ದು. ಮುಂದೆ ಶರಣರು ಬಂದ ಕಾಲಕ್ಕೆ ಬೇಕಾಗುತ್ತದೆ" ಎಂದು ಅಪ್ಪಣೆಮಾಡಿ ಸಮಾಧಿಸ್ಥರಾಗಿರುವರು. ಅದೇ ಕಾಲಕ್ಕೆ ಬೆಂಗಳೂರು, ಭೈರಾಪುರ ಮಠಗಳಲ್ಲಿ ಭಕ್ತ ವೃಂದಕ್ಕೆ ದರ್ಶನಾಶೀರ್ವಾದವನ್ನು ಕೊಟ್ಟಿರುವರೆಂದು ಕಿಂವದಂತಿರುವುದು. ಇದ ಲ್ಲದೆ ಶಿವಯೋಗ ಶಕ್ತಿಯು. ಏಕ ಕಾಲದಲ್ಲಿ ಅನೇಕ ಸ್ಥಲಗಳಲ್ಲಿ ದರ್ಶ ನವನ್ನು ಕೊಡುವುದು. ಶಿವಯೋಗ ಸಿದ್ಧರಿಗೆ ಅಸಾಧ್ಯವಲ್ಲ. ಇದನ್ನು ಯೋಗಸಿದ್ಧಿಯನ್ನು ಬಲ್ಲವರು ಅಲ್ಲಗಳೆಯಲಾರರು. ಗುರುಗಳ ಆಜ್ಞೆ ಯಂತೆ ಕರಡೆಪ್ಪನವರು ವಿಭೂತಿ ಮಾಡಿಸಿದ ಕಣಜವು ಈಗಲೂ ಮಠ ದಲ್ಲಿರುವುದು.

## ಉಪಸಂಹಾರ.

ಶ್ರೀ. ಮಠಸ್ವಾಮಿಗಳ ವಿಷಯದಲ್ಲಿ ಬಳ್ಳಾರಿಯ ಭಕ್ತರ ಭಕ್ತಿಯು ಈಗಲೂ ಅಚ್ಚಳಿಯದಂತಿರುವುದು. ಇದಕ್ಕೆ ಕಾರಣವೇನಂದರೆ ಸ್ವಾಮಿ ಗಳ ಸಮಾಧಿಗೆ ನಡೆದುಕೊಳ್ಳುವುದರಿಂದಾಗುವ ಇಷ್ಟಾರ್ಥ ಸಿದ್ಧಿಯೇ ಇರುವುದು. ಅವರ ಜೀವಿತ ಕಾಲದ ಅದ್ಭುತಲೀಲೆಗಳು ಎಷ್ಟೋ ಇರುವವು. ಅವುಗಳನ್ನು ಈಗಲೂ ಬಳ್ಳಾರಿಯ ವೃದ್ಧರು ಹೇಳುತ್ತಿರು ವರು, ಸ್ವಾಮಿಗಳು ಯಾವ ಮತದವರಲ್ಲಿಯೂ ದ್ವೇಷಭಾವವನ್ನೇ ತೋರಿ ಸುತ್ತಿದ್ದಿಲ್ಲವಂತೆ. ಮುಹಮ್ಮದೀಯವರಲ್ಲಿಯೂ ತಮ್ಮ ಪ್ರೇಮವನ್ನು ತೋರಿ, ಯೋಗ ಶಕ್ತಿಯ ವರ್ಚಸ್ಸನ್ನು ಹಾಕಿದ್ದರೆಂದು ಕೆಲವು ಕಾರ ಣಗಳಿಂದ ಕಂಡುಬರುತ್ತಿದೆ. ಸರ್ವ ಭೂತದಯೆಯೇ ಪೂರ್ಣವಾದ ಶಿವಯೋಗ ಸಿದ್ಧರ ಹೆಗ್ಗುರುತಲ್ಲವೆ? ಬಳ್ಳಾರಿಯಲ್ಲಿ ನಡೆದ ವೀರಶೈವ ಮಹಾ ಸಭೆಯ ಕಾಲಕ್ಕೆ ಮಠಸ್ವಾಮಿಗಳ ಸಂಕ್ಷೇಪವಾದ ಜೀವಿತ ಚರಿತ್ರೆಯೂ ಕರಡೆಪ್ಪನವರ ಜೀವಿತ ಚರಿತ್ರೆಯೂ ಕೂಡಿ ಮುದ್ರಿತ

ವಾಗಿರುವುದು. ಈ ಯೋಗಿಗಳ ಆಶೀರ್ವಾದವೇ ಕರಡೆಪ್ಪನವರ ಕಾರ್ಯದ ಮಹತ್ವಕ್ಕೆ ಮೂಲಕಾರಣವು. ಕರಡೆಪ್ಪನೇ ಮೊದಲಾದ ಕೆಲವು ಭಕ್ತರಿಗೆ ಸ್ವಾಮಿಗಳ ಹಣೆಗಣ್ಣು ಕಾಣಿಸುತ್ತಿದ್ದಿತೆಂದು ಹೇಳುವರು. ಶಿವಯೋಗ ಸಿದ್ಧರ ವಿಷಯದಲ್ಲಿ ಯಾವ ಅದ್ಭುತ ವಿಷಯವನ್ನು ಹೇಳಿದರೂ ತಪ್ಪಾಗಲಾರದೆಂಬುದೇ ನಮ್ಮ ನಂಬುಗೆ. ಇವರ ಚರಿತ್ರಾವಲೋಕನದಿಂದ ಸಮಾಜದಲ್ಲಿ ಹಬ್ಬಿರುವ ಮಹಾತ್ಮರ ವಿಷಯದ ಕುತ್ಸಿತವಾದವು ಕೆಲವು ಮಟ್ಟಿಗಾದರೂ ದೂರವಾಗಲು ಯತ್ನಿಸುವಂತೆ ನಮ್ಮೆಲ್ಲರಿಗೂ ಸದ್ಬುದ್ಧಿಯನ್ನು ಅನುಗ್ರಹಿಸುವಂತೆ ಶ್ರೀ. ಶಂಕರನನ್ನು ಪ್ರಾರ್ಥಿಸುವೆವು.

---

# ಶರಭಾವತಾರ ಸಿದ್ಧಾಂತ.

**ಲೇಖಕ:--ಹೆಚ್. ಜಿ. ಶಿವಶಂಕರ ಶರ್ಮಾ ಮಧುವನಹಳ್ಳಿ ತಾ|| ಕೊಳ್ಳೆಗಾಲ.**



ಪರಮೇಶ್ವರನು, ಲೋಕೋದ್ಧಾರಾರ್ಥವಾಗಿ ತಾಳಿದ ಲೀಲೆಗಳಲ್ಲಿ ಚಂದ್ರಧರಾದಿ ಮಹಾ ಲಿಂಗೋದ್ಭವಂತ್ಯವಾದ ೨೫ ಲೀಲೆಗಳು ಮುಖ್ಯವಾದವುಗಳೆಂದು ವಾತೂಲಾಗಮಾದಿ ಶಿವಾಗಮಗಳು ಸಾರುತ್ತಿರುವುವು. ಇವುಗಳಲ್ಲಿ ಶರಭಲೀಲೆಯೆಂಬುದು ಒಂದಾಗಿರುವುದು. ಅಲ್ಲದೆ ಅನೇಕ ವ್ಯಾಖ್ಯಾನಕಾರರೂ, ಶ್ರೀ ಷಡಕ್ಷರಿಯೇ ಮೊದಲಾದ ಕವಿಪುಂಗವರೂ ಹಿಂದೆ ಹಿರಣ್ಯಕಶಿಪುವೆಂಬ ದೈತ್ಯನನ್ನು ಮಹಾ ವಿಷ್ಣುವು ನೃಸಿಂಹಾವತಾರವನ್ನೆತ್ತಿಕೊಂಡಾಗ್ಗೆ ಆ ದೈತ್ಯನ ರಕ್ತಪಾನ ಮಾಡಿದ್ದರಿಂದ ಮತ್ತನಾಗಿ ತನ್ನ ಕರ್ತವ್ಯವನ್ನು ಮರೆತು, ಅವನಿಗಿಂತಲೂ ಮಿಗಿಲಾಗಿ ಸಿಕ್ಕಿದವರನ್ನು ಕೊಲ್ಲುತ್ತಾ ಲೋಕಕಂಟಕನಾಗಿದ್ದನೆಂದೂ; ಆಗ ಸಕಲ ದೇವತೆಗಳ ಮೊರೆಯನ್ನು ಕೇಳಿದ ಜಗಜ್ಜನಕನಾದ ಶಂಕರನು ತನ್ನ ರೌದ್ರಾಂಶನಾದ ವೀರೇಶನನ್ನು ಕರೆದು ಆ ನೃಸಿಂಹನಿಂದ ಜಗತ್ತಿಗುಂಟಾಗುತ್ತಿರುವ ಬಾಧೆಯನ್ನು ನಿವಾರಿಸಿಬಾರೆಂದಾಜ್ಞಾಪಿಸಿದನೆಂದೂ, ಅಷ್ಟ

ಣೆಯಂತೆ ನೃಸಿಂಹನು ಅಲ್ಲಿಗೆ ಬಂದು ಎಷ್ಟೆಷ್ಟು ನಯವಿನಯಗಳಿಂದ ಹಿಂತಿರುಗುವಂತೆ ಹೇಳಿದರೂ ಕೇಳದೆ ಅವನನ್ನೇ ಕೊಲ್ಲಲಾರ್ಭಟಿಸಲಾಗಿ ಆ ಸಮಯದಲ್ಲಿ ವೀರೇಶನು ಅವನಿಗಿಂತಲೂ ಮಿಗಿಲಾದ ಮಹಾ ಮೇರುವಿನಂತೆ ಸ್ಥೂಲವಾದ ಶರೀರವೂ, ಭೂಮಿಗೆ ಆಧಾರವಾಗಿ ನಿಂತಿರುವ ಅಷ್ಟದಿಗ್ಗಜಗಳಂತೆ ಆ ಸ್ಥೂಲಕಾಯಕ್ಕೆ ತಕ್ಕ ದೀರ್ಘವೂ ಬಲವೂ ಆದ ಎಂಟು ಪಾದಗಳೂ ಗಟ್ಟಿಯಾಗಿ ಡೊಂಕಾಗಿರುವ ನಖಗಳೂ ಬಲವಾದ ರೆಕ್ಕೆಗಳೂ ಉಳ್ಳ ಮಹಾ ರೂಪವನ್ನು ಧರಿಸಿ ಆ ನೃಸಿಂಹನನ್ನು ಸಂಹರಿಸಿದನೆಂದೂ ಆ ವಿರಾಡ್ರೂಪವೇ ಶರಭರೂಪವೆಂದೂ ನಿರ್ಧರಿಸಿರುವರು.

ಆದರೆ ಈ ವಿಚಾರದಲ್ಲಿ ಈಗೀಗ್ಗೆ ಕೆಲವು ತರ್ಕಗಳುಂಟಾಗಿರುವುವು. ಕೆಲವರು ಈಶ್ವರನು ಶರಭಲೀಲೆಯನ್ನು ತಾಳಲೇ ಇಲ್ಲವೆಂಬದಾಗಿಯೂ, ಹಿರಣ್ಯಕಶಿಪುವನ್ನು ಕೊಂದ ನರಹರಿಯನ್ನು ಲಕ್ಷ್ಮಿಯು ಸಮಾಧಾನಪಡಿಸಿ ಕರೆದುಕೊಂಡು ಹೋದಳೆಂಬದಾಗಿಯೂ, ಮತ್ತೆ ಕೆಲವರು ಈಶ್ವರನು ಶರಭಲೀಲೆಯನ್ನು ತಾಳಿ ನೃಸಿಂಹನನ್ನು ಸಂಹರಿಸಿದನಾದರೂ ಕೊನೆಗೆ ಗಂಡುಭೇರುಂಡ ಪಕ್ಷಿಯ ರೂಪವನ್ನಾಂತ ವಿಷ್ಣುವಿನಿಂದ ಸಂಹರಿಸಲ್ಪಟ್ಟನೆಂಬದಾಗಿಯೂ ಹೇಳುವರು. ನಾನು ರಚಿಸಿರುವ 'ಪರಮೇಶ್ವರನ ಪಂಚವಿಂಶತಿ ಲೀಲಾಕುಸುಮ ಮಂಜರಿ' ಯೆಂಬ ಗ್ರಂಥದಲ್ಲಿ ಈ ಶರಭಾವತಾರವೂ ಬಂದಿರುವುದರಿಂದ ಇದರ ವಾಸ್ತವ್ಯಾಂಶವೇನೆಂಬುದನ್ನು ಕೆಲಕೆಲವು ವೇದಾಗಮಾದಿ ಬಲಪ್ರಮಾಣಗಳಿಂದ ಸಾಧ್ಯವಾದಷ್ಟು ಮಟ್ಟಿಗೆ ನಿರ್ಧರಗೊಳಿಸುವೆನು.

ಈಶ್ವರನು ಶರಭಾವತಾರವನ್ನು ತಾಳಲೇ ಇಲ್ಲವೆಂದು ಹೇಳುವುದಾದರೆ,

ವಾತುಲತಂತ್ರದಲ್ಲಿ — 'ಪ್ರಥಮಂ ಸೋಮಧಾರೀಸ್ಯಾ ದ್ವಿತೀಯ ಮುಮಯಾಸಹ ।...... ತ್ರಯೋದಶಂ ಹರಿಧ್ವಂಸ ಮರ್ಧನಾರೀ ಚತುರ್ದಶಂ । ಎಂಬುವೇ ಮೊದಲಾದ ಶ್ಲೋಕಗಳಲ್ಲಿ ಪರಶಿವನ ಹದಿಮೂರನೇ ಲೀಲೆಯು 'ವಿಷ್ಣುವನ್ನು ಸಂಹಾರಮಾಡಿದ ಲೀಲೆ' ಎಂದು ಹೇಳಿರುವುದು. ಮತ್ತು ಇದನ್ನೇ ಟೀಕಾಕಾರರ ಟೀಕೆಯಲ್ಲಿಯೂ ವ್ಯಾಸನ ಪುರಾಣಗಳಲ್ಲಿಯೂ, ಷಡಕ್ಷರಿ ಮೊದಲಾದವರು ರಾಜಶೇಖರವೇ ಮೊದಲಾದ ತಂತಮ್ಮ ಗ್ರಂಥಗಳಲ್ಲಿಯೂ 'ನೃಸಿಂಹ ಸಂಹರಣ ಲೀಲೆ' ಎಂಬದಾಗಿ ಹೇಳಿರುವರು.

ಲಿಂಗಮುಖದಿಂದ ಬಂದ ಶ್ರೀಮದ್ರೇಣುಕಾಚಾರ್ಯರು ವೈಷ್ಣವ ರಾಜನಾದ ಚೋಳನಿಗೆ ಶಿವಾಧಿಕ್ಯವನ್ನು ಹೇಳುತ್ತಿರುವಾಗ್ಗೆ 'ನೃಸಿಹ್ಮ ಕೃತ್ತಿಮುತ್ಕೃತ್ಯಪರಮೇಶೇನ ಲೀಲಯಾ। ತಯಾಕೃತ್ಯಾ ವಿರಚಿತಾವಸನ ತ್ವವಿಧಾಪಿಚ ॥ ಅಂದರೆ— 'ನೃಸಿಂಹನನ್ನು ಪರಮೇಶ್ವರನು ಲೀಲೆಯಿಂದ ಸಂಹರಿಸಿ ಅವನ ಚರ್ಮವನ್ನು ಹೊದ್ದಿಕೆಯಾಗಿ ಧರಿಸಿದನು ಎಂದು ಹೇಳಿರುವರು. (ಶಿವಾಧಿಕ್ಯ ಶಿಖಾಮಣಿಯ ದ್ವಾದಶೋಪದೇಶದ ಹರಿಯ ಅಚಾರ ಥಿಕ್ಕಾರ ನಿರ್ಣಯ ಎಂಬಲ್ಲಿ.)

ಲಿಂಗಪುರಾಣದ ಕಾಳಿಕಾ ಖಂಡದಲ್ಲಿ—

ಶ್ಲೋ॥ ಅಪಕೃತ್ಯಹರೇ ಪ್ರಾಣಾನ್ ಶರಭಸ್ಸುರ ಪೂಜಿತಃ।
ಸಿಂಹಾಜಿನಾಂಬರೋ ಭೂತ್ವಾ ಜಗಾಮ ಸ ಯಥಾಗತಂ॥

ಅಂದರೆ— ದೇವತೆಗಳಿಂದ ಪೂಜಿಸಿಗೊಳ್ಳಲ್ಪಟ್ಟ ಶರಭೇಶ್ವರನು ನರಹರಿಯ ಪ್ರಾಣಗಳನ್ನು ತೆಗೆದು ಆತನ ಚರ್ಮವನ್ನು ಹೊದ್ದಿಕೆಯಾಗಿ ಉಪಯೋಗಿಸಿಕೊಂಡವನಾಗಿ ಕೈಲಾಸವನ್ನೈದಿದನು' ಎಂದು ಹೇಳಿರುವುದು.

ನೃಸಿಂಹನೇ ತಾನು ಪ್ರಾಣವನ್ನು ಬಿಡುವಾಗ್ಗೆ 'ನಮೋ ರುದ್ರಾಯ ತಾಂದ್ರಾಯ ಮಹೋಗ್ರಾಸಾಯ ಜಿಷ್ಣವೆ......... ಎಂದು ಮೊದಲಾಗಿ ಶರಭಮೂರ್ತಿಯನ್ನು ಸ್ತುತಿಸಿದನೆಂದು ಪರಮೇಶ್ವರನು ನಂದೀಶ್ವರನಿಗೂ, ನಂದೀಶನು ಸನತ್ಕುಮಾರರಿಗೂ, ಸನತ್ಕುಮಾರರು ವ್ಯಾಸರಿಗೂ, ವ್ಯಾಸರು ಸೂತಪುರಾಣಕರಿಗೂ, ಸೂತರು ನೈಮಿಶಾರಣ್ಯದ ಋಷಿಗಳಿಗೂ ಹೇಳಿರುವರು. (ವೀ. ಮಹಾಪುರಾಣ)

ವಾಯುವೀಯ ಸಂಹಿತೆಯಲ್ಲಿ

ಶ್ಲೋ॥ ವಿಷ್ಣೋರಪಿ ನೃಸಿಹ್ಮಸ್ಯ ಪ್ರಸಹ್ಯ ಶರಭಾಕೃತಿಃ॥
ಬಿಭೇದ ಪಧ್ಭಿರಾಕ್ರಮ್ಯ ಹೃದಯಂ ನಖರೈಃ ಖರೈಃ॥

ಅಂದರೆ— ಶರಭಾಕೃತಿಯನ್ನು ಹೊಂದಿದ ಶಿವನು ನೃಸಿಂಹಾವತಾರವನ್ನು ಹೊಂದಿದ ವಿಷ್ಣುವಿನ ಎದೆಯನ್ನು ಹರಿತವಾದ ಉಗುರುಗಳಿಂದ ಸೀಳಿದನು' ಎಂದು ಹೇಳಿದೆ.

ಋಗ್ವೇದದಲ್ಲಿ

'ಅಪಾವೃಣೋಶ್ಶರಭಾಯ ಋಷಿ ಬಂಧವೇ
ಅಂದರೆ—ಋಷಿಗಳಿಗೆ ಬಂಧುವಾಗಿರ್ದಂಥ ಶರಭರೂಪವನ್ನು ಧರಿಸಿದಂಥಾವನಿಗೋಸ್ಕರ ನಮಸ್ಕಾರವು' ಎಂದು ಹೇಳಿರುವದು.

ಇವೇ ಮೊದಲಾದ ವೇದಾಗಮ ಪುರಾಣ ಪ್ರಮಾಣಗಳಿಂದ ಶರಭಲೀಲೆಯು ನಿಜವಾದದ್ದಾಗಿದೆ.

ಇನ್ನು ನೃಸಿಂಹನು ಗಂಡಭೇರುಂಡದ ಅವತಾರದಿಂದ ಶರಭನನ್ನು ಸಂಹರಿಸಿದನೆಂಬುದಕ್ಕೆ ಸಮಾಧಾನವೇನೆಂದರೆ,—

ಒಂದು ವೇಳೆ ಇದೇ ನಿಶ್ಚಯವಾಗಿದ್ದಲ್ಲಿ 'ನಮೋನ್ನೃಸಿಂಹ ಸಂಹರ್ತ್ರೇ ವಿಷ್ಣುಮಾಯಾಂತ ಕಾರಿಣೆ' ಎಂಬಿವೇ ಮೊದಲಾದ ಶ್ಲೋಕಗಳಿಂದ ಶರಭಾಷ್ಟೋತ್ತರವನ್ನು ಮಾಡಿ ಆ ಶರಭಮೂರ್ತಿಯನ್ನು ಸಕಲರೂ ಸ್ತುತಿಸುತ್ತಿರಲಿಲ್ಲ. ಮತ್ತು ಸಕಲರಿಗೂ ಪೂಜ್ಯವಾದದ್ದಾದ ಋಗ್ವೇದವು 'ಋಷಿಗಳಿಗೆ ಬಂಧುವಾದಂಥಾ ಶರಭರೂಪವನ್ನು ಧರಿಸಿದಂಥಾವನಿಗೋಸ್ಕರ ನಮಸ್ಕಾರವು' ಎಂದು ಶರಭನನ್ನು ಮೇಲು ಮಾಡಿ ಹೇಳುತ್ತಿರಲಿಲ್ಲ.

ಇನ್ನು ಶ್ರೀ. ಮಹಾವಿಷ್ಣುವನ್ನೇ ಉದಾಹರಣೆಗಾಗಿ ತೆಗೆದುಕೊಂಡರೆ ಹಿಂದೆ ವೇದ ವ್ಯಾಸರು ಕಾಶಿಯಲ್ಲಿ ಕೈಯೆತ್ತಿ ಶಿವನಿಗಿಂತಲೂ ವಿಷ್ಣುವೇ ಹೆಚ್ಚು ವಿಷ್ಣುವಿಗಿಂತ ಮಿಗಿಲಾದ ದೈವವು ಬೇರೊಂದಿಲ್ಲ ಎಂದು ಹೇಳಿ ನಂದೀಶನಿಂದ ಭುಜ ಸ್ತಂಭನ ಮಾಡಿಸಿಕೊಂಡು ತನ್ನನುದ್ಧರಿಸುವಂತೆ ಶ್ರೀ ಮಹಾವಿಷ್ಣುವನ್ನು ಪ್ರಾರ್ಥಿಸಿಕೊಂಡಾಗ್ಗೆ ಅವನ ಪ್ರತ್ಯಕ್ಷವಾಗಿ ಬಂದು ಅವನನ್ನು ಕುರಿತು,

ಶ್ಲೋ॥ ಯಜ್ಞಕರ್ತಾಚದೇವೇಂದ್ರ, ಸೃಷ್ಟಿಕರ್ತಾಚವಾಕ್ಪತಿಃ।
ಅಹಮೇವ ಜಗತ್ಕರ್ತಾಮಮಕರ್ತಾ ಮಹೇಶ್ವರಃ।

ಎಂಬದಾಗಿ ಹೇಳಿ ಅವನನ್ನೇ ಮರೆಹೊಗುವಂತೆ ಉಪದೇಶ ಮಾಡಿರುವನು. ಅಲ್ಲದೆ ಲಿಂಗಸ್ವರೂಪನಾದ ಆ ವೇದಗೋಚರನನ್ನು

ಶ್ಲೋ॥ ಅನಂತಪದ್ಮನಾಭಸ್ಯಹಸ್ತೇಲಿಂಗಸ್ಯಧಾರಣಂ।
ಪಾಂಡುರಂಗೆ ಕಥಾವಿಷ್ಣೋ ಶಿರ್ಷೇಲಿಂಗಸ್ಯಧಾರಣಂ॥

ಎಂಬಂತೆ ಹಸ್ತ ಮೊದಲಾದ ಸ್ಥಳಗಳಲ್ಲಿ ಧರಿಸಿ ತ್ರಿಕಾಲಗಳಲ್ಲೂ ಪೂಜೆ ಮಾಡುತ್ತಿರುವನು. ಇದಕ್ಕೆ ಶಾಸ್ತ್ರರೀತ್ಯಾಗಿ ಪ್ರತಿಷ್ಠಿಸಿದ ವಿಷ್ಣುವಿಗ್ರಹಗಳ ಮೇಲೆ ಹೇಳಿದ ಅಂಗಗಳಲ್ಲಿ ಈಗಲೂ ಶಿವಲಿಂಗವು ರಂಜಿಸುತ್ತಿರುವುದೇ ಉದಾಹರಣೆಯಾಗಿದೆ.

ಇವೂ ಅಲ್ಲದೆ ವಿಷ್ಣುವು ತಾನು ದಶಾವತಾರಗಳನ್ನೆತ್ತುವುದಕ್ಕೆ ಮೊದಲು ಆ ಶಂಕರನನ್ನು ಕುರಿತು ತಪಸ್ಸು ಮಾಡಿ ತಾನು ಮುಂದೆ ತಾಳುವ ಅವತಾರಗಳಲ್ಲಿ ಅಜ್ಞಾನದಿಂದ ಶಿವಪಾದಸ್ಮರಣೆಯನ್ನೇನಾದರೂ ಮರೆತು ತತ್ಕಾರಣದಿಂದ ಅವನಿಗೆ ದೂರವಾಗುವ ಸಂಭವ ಒದಗಿದಲ್ಲಿ ಆನಾಗ ತನ್ನನ್ನುದ್ಧಾರ ಮಾಡುವಂತೆ ಕೇಳಿಕೊಂಡಿರುವನು.

ಅಲ್ಲದೆ ತಾನು ಮತ್ಸ್ಯಾವತಾರವನ್ನೆತ್ತಿದಾಗ್ಗೆ ಲಂಕೆಯಲ್ಲಿ 'ಮತ್ಸ್ಯಕೇಶ್ವರ' ನೆಂಬ ಹೆಸರಿನಿಂದಲೂ ಕೂರ್ಮಾವತಾರವನ್ನೆತ್ತಿದಾಗ್ಗೆ ಹರಿದ್ವಾರದಲ್ಲಿ 'ಕೂರ್ಮೇಶ್ವರ' ನೆಂಬ ಹೆಸರಿನಿಂದಲೂ ವರಾಹಾವತಾರವನ್ನೆತ್ತಿದಾಗ್ಗೆ ಗಯೆಯಲ್ಲಿ 'ವರಹೇಶ್ವರ' ನೆಂಬ ಹೆಸರಿನಿಂದಲೂ, ಪ್ರಕೃತ ತರ್ಕಾಸ್ಪದವಾಗಿರುವ ನೃಸಿಂಹಾವತಾರವನ್ನೆತ್ತಿದಾಗ್ಗೆ ಶ್ರೀಶೈಲದಲ್ಲಿ 'ನೃಸಿಂಹೇಶ್ವರ' ನೆಂಬ ಹೆಸರಿನಿಂದಲೂ ಆ ಲೋಕೇಶನಾದ ಶಂಕರನನ್ನು ಲಿಂಗರೂಪದಿಂದ ಪ್ರತಿಷ್ಠಿಸಿ ಪೂಜೆ ಮಾಡಿ ಅನಂತರ ತನ್ನ ಕಾರ್ಯದಲ್ಲಿ ತೊಡಗಿ ತದನುಗ್ರಹದಿಂದ ಜಯಶಾಲಿಯಾಗಿರುವನು. ಇದಕ್ಕೆ ಪ್ರತ್ಯಕ್ಷ ಪ್ರಮಾಣವಾಗಿ ಈಗಲೂ ಆ ಸ್ಥಲಗಳಲ್ಲಿ ಆಯಾ ಹೆಸರಿನ ಶಿವಲಿಂಗಗಳು ಇರುವವು. ಅಲ್ಲದೆ ಅನೇಕರು ಯಾತ್ರಾರ್ಥಿಗಳಾಗಿ ಅಲ್ಲಿಗೆಲ್ಲಾ ಹೋಗಿಬರುತ್ತಿರುವದನ್ನು ನಾವೆಲ್ಲಾ ನೋಡುತ್ತಿದ್ದೇವೆ.

ಹೀಗಿರುವಲ್ಲಿ ತನಗೊಡೆಯನೆಂದು ಭಾವಿಸಿರುವ ಅಲ್ಲದೆ ತಕ್ಭಾವನೆಯಂತೆ ವರ್ತಿಸುತ್ತಿರುವ ಆ ಮಹಾ ವಿಷ್ಣುವು ಆ ಶಂಕರನನ್ನೇ (ಶರಭನನ್ನೇ) ಕೊಂದನೆಂದು ಹೇಳುವುದು ಕೇವಲ ಸ್ವಕಪೋಲ ಕಲ್ಪಿತವಾದುದೆಂದು ತಿಳಿದವರಾರೂ ಹೇಳದಿರರು.

ಇವೇ ಮೊದಲಾದ ಕಾರಣಗಳಿಂದ ವಿಷ್ಣುವು ಶರಭನನ್ನು ಕೊಂದ ವಿಚಾರವು ಅಬದ್ಧವಾಗಿ ಪರಶಿವನು ಹಿಂದೆ ವಿಷ್ಣುವು ಮತ್ಸ್ಯಾವತಾರವನ್ನೆತ್ತಿ ಸಮುದ್ರದಲ್ಲಿ ಅಡಗಿದ್ದ ರಾಕ್ಷಸರನ್ನು ಕೊಂದು ಮದದಿಂದ ಉಬ್ಬಿ ಜಲಪ್ರಳಯವಾಗುವಂತೆ ಸಮುದ್ರದ ನೀರನ್ನೆಲ್ಲಾ ಅಲ್ಲೋಲಕಲ್ಲೋಲ ಮಾಡುತ್ತಿರಲು ತಾನೇ ಆ ಮತ್ಸ್ಯರೂಪಹರಿಯಂ ಸೀಳಿ ಲೋಕೋದ್ಧಾರ ಮಾಡಿದಂತೆಯೂ, ಕೂರ್ಮಾವತಾರದಲ್ಲಿ ಮದೋನ್ಮತ್ತನಾಗಿ ಕ್ಷೀರಸಾಗರದಲ್ಲೆಲ್ಲ ಓಡಾಡಿ ಜಲನೆಲಗಳನ್ನೆಲ್ಲಾ ಏಕ ಮಾಡುತ್ತಿರಲು ಆ ಕೂರ್ಮನನ್ನು ಕೊಂದು ಶಾಂತಿಸ್ಥಾಪನೆ ಮಾಡಿದಂತೆಯೂ,

ವರಹಾವತಾರದಲ್ಲಿ ಹಿರಣ್ಯಾಕ್ಷನನ್ನು ಸಂಹರಿಸಿದರೂ ದೇವತೆಗಳನ್ನೆಲ್ಲಾ ಹಿಂಸಿಸುತ್ತಿರಲು ಕುಮಾರ ಸ್ವಾಮಿಯನ್ನು ಕಳುಹಿಸಿ ಭಾಗೀರಥೀ ತೀರದಲ್ಲಿ ಆ ವರಾಹನನ್ನು ಕೊಲ್ಲಿಸಿ ಲೋಕೋಪಕಾರ ಮಾಡಿಸಿದಂತೆಯೂ ಆ ನೃಸಿಂಹಾವತಾರವನ್ನೆತ್ತಿ ದೈತ್ಯರಕ್ತಪಾನ ಮದದಿಂದ ಮತ್ತನಾಗಿ ಲೋಕಕಂಟಕನಾಗಿದ್ದ ಆ ವಿಷ್ಣುವನ್ನು ತನ್ನ ರೌದ್ರರೂಪನಾದ ವೀರೇಶನನ್ನು ಕಳುಹಿಸಿ ಶರಭಾವತಾರದಿಂದ ಕೊಲ್ಲಿಸಿ ಲೋಕೋದ್ಧಾರ ಮಾಡಿ ವಿಷ್ಣುವಿನ ಆ ಜನ್ಮವನ್ನು ಕಳೆದನೆಂಬುದೇ ಸಿದ್ಧಾಂತವಾದುದು.

---

## ಮಾನವಜನ್ಮಾಧಿಕ್ಯ.

(ಲೇಖಕ— ಶ್ರೀ. ರೇಣುಕಾಚಾರ್ಯರು ಶಿವಯೋಗಮಂದಿರ ಬದಾಮಿ.)



"ಕ್ರಿಮಿಕೀಟಪತಂಗೇಭ್ಯಃ ಪಶವಃ ಪ್ರಜ್ಞಯಾಧಿಕಾಃ ।
ಪಶುಭ್ಯೋಪಿ ನರಾಃ ಶ್ರೇಷ್ಠಾಃ ॥"

ವಾಚಕವೃಂದವೇ, ಈ ಜಗತ್ತಿನಲ್ಲಿ ಪ್ರತಿಯೊಬ್ಬ ಮನುಷ್ಯನು ತಿಳಿಗಣ್ಣಿನಿಂದ ಕ್ಷಣಹೊತ್ತು ವಿಚಾರಿಸುತ್ತ ಕುಳಿತರೆ, ೮೪ ಲಕ್ಷ ಜೀವರಾಶಿಗಳಲ್ಲಿ ಮನುಷ್ಯಜನ್ಮವೇ ಅತ್ಯುತ್ಕೃಷ್ಟವೆಂದೂ, ಇಹಾಮುತ್ರಭೋಗಗಳನ್ನು ಭೋಗಿಸಲಿಕ್ಕೆ ಬೇಡಾರವೆಂದೂ ನಿತ್ಯಾನಂದ ಸುಖವನ್ನು ಪ್ರಾಪ್ತ ಮಾಡಿಕೊಳ್ಳಲಿಕ್ಕೆ ಮುಖ್ಯ ಸಾಧನವೆಂದೂ, ಮುಕ್ತಕಂಠದಿಂದ ಹೇಳಬಹುದು. ಯಾಕಂದರೆ ಸತ್ಕರ್ಮಗಳನ್ನು ಆಚರಿಸಿ ತದ್ವಾರಾ ಲಭಿಸತಕ್ಕ ಮೋಕ್ಷ ಅಥವಾ ಸ್ವರ್ಗವನ್ನು ಹೊಂದಲಿಕ್ಕೂ, ಮತ್ತು ಮಾಡಬಾರದ ಕೆಲಸಗಳನ್ನು ಮಾಡಿಯೂ ಮಾಡಿಸಿಯೂ ತಜ್ಜನ್ಯ ಬಹುವಿಧಗಳಾದ ಅಂದರೆ ೨೮ ಕೋಟಿ ನಾಯಕ ನರಕಗಳಲ್ಲಿ ಬಿದ್ದು ಅಸಹ್ಯ ಅನೇಕ ದುಃಖಗಳನ್ನು ಹೊಂದಲಿಕ್ಕೂ ಮನುಷ್ಯಜನ್ಮವೇ ಮುಖ್ಯ ಕಾರಣವಾಗಿರುವದು. ಇನ್ನು ಪಶುಪಕ್ಷ್ಯಾದಿಗಳ ಜನ್ಮಗಳನ್ನು ವಿಚಾರಿಸಿದರೆ ಯಾವದೊಂದು ಸತ್ಕರ್ಮವನ್ನು ಮಾಡಿ ಸುಖವನ್ನು ಸವಿಯಲಿಕೂ

ದುಷ್ಕರ್ಮವನ್ನು ಮಾಡಿ ದುಃಖವನ್ನು ಅನುಭವಿಸಲಿಕ್ಕೂ ಅಧಿಕಾರವಿಲ್ಲವೆಂದು ಶಾಸ್ತ್ರಗಳ ಮುಖಾಂತರ ತಿಳಿಯುವದು. ಯಾಕಂದರೆ ಅವು ಕೇವಲ ಭೋಕ್ತೃವ್ಯ ಶರೀರಗಳು. ಅವುಗಳಿಗೆ ಪುಣ್ಯಾಪುಣ್ಯ ಅಥವಾ, ಧರ್ಮಾಧರ್ಮ, ಕರ್ಮಾಕರ್ಮಗಳೆಂಬ ಯಾವ ನಿರ್ಬಂಧಗಳೂ ಇಲ್ಲ. ಕಾರಣವೇನಂದರೆ ಅವು ಜ್ಞಾನಹೀನಗಳಷ್ಟೆ? ಮನುಷ್ಯರು ಮಾತ್ರ ಹಾಗಲ್ಲ. ಅಸಾಧ್ಯಗಳಾದ ಎಷ್ಟೋ ಪುಣ್ಯಕರ್ಮಗಳನ್ನು ಮಾಡಿ ತನ್ನನ್ನು ನುಂಗಿ ನೀರು ಕುಡಿಯಬೇಕೆಂದು ಹೊಂಚುಹಾಕುತ್ತಿರುವ ಮೃತ್ಯುರೂಪ ಪಿಶಾಚಿಯನ್ನು ಒದ್ದೋಡಿಸಲಿಕ್ಕೆ ಅಷ್ಟೇಕೆ? “ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವಭವತಿ” ಸಲಿಲೇಸೈಂಧವಂ ಯದ್ವತ್ ಸಾಮ್ಯಂಭಜತಿ ಯೋಗತಃ” “ಕ್ಷೀರಂಕ್ಷೀರೇ ಯಥಾಕ್ಷಿಪ್ತಂ” ಎಂಬ ಉಪನಿಷತ್ಪುರಾಣ ಸುಭಾಷಿತಗಳ ವಚನಗಳಂತೆ ಲವಣವು ನೀರಿನಲ್ಲಿ ಬೆರೆತು ಸಮರಸವಾಗುವಂತೆಯೂ, ಅಥವಾ ಕ್ಷೀರವು ಕ್ಷೀರದಲ್ಲಿ ಕೂಡಿ ಏಕವಾಗುವಂತೆಯೂ, ಕರ್ಪೂರವು ಜ್ಯೋತಿಯಲ್ಲಿ ಅಡಗಿ ತತ್ಸ್ವರೂಪವಾಗುವಂತೆಯೂ, ಶುದ್ಧಾಂತಃಕರಣಿಯಾದ ಜೀವಿಯು ಸಚ್ಚಿದಾನಂದಸ್ವರೂಪನಾದ ಪರಮಾತ್ಮನಲ್ಲಿ ಐಕ್ಯನಾಗಲಿಕ್ಕೂ ಸಮರ್ಥನಾಗಿದ್ದಾನೆ. ಅಂದಮೇಲೆ ಇಂಥ ಮಾನವನ ಜನ್ಮವನ್ನು ಪ್ರತಿಭಟಿಸುವ ಜನ್ಮವು ಮತ್ತಾವುದು ನೀವೇ ಊಹಿಸಿರಿ. ಶಕ್ತಿಯಲ್ಲಿಯೂ, ಯುಕ್ತಿಯಲ್ಲಿಯೂ, ಭಾರವಹಿಸುವದರಲ್ಲಿಯೂ, ಮಕ್ಕಳನ್ನು ಹಡೆಯುವದರಲ್ಲಿಯೂ, ಸೌಂದರ್ಯದಲ್ಲಿಯೂ. ಸಿಂಹ, ನರಿ, ಗಜ, ನವಿಲು ಮೊದಲಾದ ಪ್ರಾಣಿಗಳು ಮನುಷ್ಯನಿಗಿಂತಲೂ ಎಷ್ಟೋಪಾಲು ಮಿಗಿಲಾಗಿರುವವು. ಅಂದಮೇಲೆ ಮನುಷ್ಯನಿಗೇನೇ ಶ್ರೇಷ್ಠತ್ವವನ್ನು ಕೊಡುವ ಬಗೆಯೆಂತು ಎಂದು ಓದುಗರು ಊಹಿಸಬಹುದು. ಹಾಗಲ್ಲ, ಮನುಷ್ಯನಲ್ಲಿ ಜ್ಞಾನವೆಂಬ ಚಿಂತಾಮಣಿಯು ಇರುವದರಿಂದ, ಅದರ ಮುಂದೆ ಇನ್ನಿತರ ಪ್ರಾಣಿಗಳ ಆಟವು ಸಾಗುವಂತಿಲ್ಲ. ಹ್ಯಾಗಂದರೆ ವಜ್ರಾಯುಧವು ಕಿರಿದಾಗಿದ್ದರೂ ಸಾವಿರಾರು ಪರ್ವತ ಪಂಕ್ತಿಗಳನ್ನು ಪುಡಿಪುಡಿಮಾಡಿಬಿಡುವಂತೆ ಮನುಷ್ಯನಾದರೂ ತನ್ನ ಜ್ಞಾನಬಲದಿಂದ ಪರ್ವತಪ್ರಾಯವಾದ ಪಶುವರ್ಗವನ್ನೆಲ್ಲ ತನ್ನ ಸ್ವಾಧೀನದಲ್ಲಿಟ್ಟುಕೊಂಡು ಅವುಗಳಿಂದ ಬೇಕಾದಂಥ ಕಾರ್ಯಗಳನ್ನು ಮಾಡಿಸಬಲ್ಲನು ನೋಡಿರಿ! ಸರ್ಕಸ್ಸಿನಲ್ಲಿ ಸಿಂಹ, ಆನೆ ಮೊದಲಾದ ಭೀಕರಪ್ರಾಣಿಗಳಿಂದಲೂ ಸಹ, ಸನ್ನೆಮಾತ್ರದಿಂದ

ಬೇಕಾದಂಥ ಕಾರ್ಯಗಳನ್ನು ಮಾಡಿಸಬಲ್ಲನು. ಇದೇನು ಅರಿದಾದ ಮಾತಲ್ಲ, ಸರ್ವರದೃಷ್ಟಿಪಥಕ್ಕೂ ಬಿದ್ದಿರಬಹುದು. ಅದಕ್ಕಾಗಿಯೇ ನೀತಿಕಾರರು "ಮತಿರೇವ ಬಲಾದ್ಗರೀಯಸೀ" ಅಂದರೆ ಬಲಕ್ಕಿಂತಲು ಬುದ್ಧಿಯೇ ಹಿರಿದಾಗದ್ದೆಂದು ಉಸುರಿರುವರು. ಇನ್ನು ಈ ಮಾನವನ ಜನ್ಮವನ್ನು ದೇವತೆಗಳ ಜನ್ಮಗಳಾಗಲಿ, ರಾಕ್ಷಸರ ಜನ್ಮಗಳಾಗಲಿ ಸರಿಗಟ್ಟಲಾರವು. ಯಾಕಂದರೆ "ಕರ್ಮಭೂಮಿರಿಯಂ ವಿಪ್ರಫಲಭೂಮಿರಸೌಸ್ಮೃತಾ । ಇಹಾಯತ್ಕ್ರಿಯತೇಕರ್ಮ ಸ್ವರ್ಗೇತದನು ಭುಜ್ಯತೇ" ಎಂಬ ವ್ಯಾಸೋಕ್ತಿಯಂತೆ ಈ ಕರ್ಮಭೂಮಿಯಲ್ಲಿ ಮನುಷ್ಯಜನ್ಮವನ್ನು ತಾಳಿ ತನ್ನಿಂದಾಚರಿಸಲ್ಪಟ್ಟ ಸತ್ಕರ್ಮಗಳ ಫಲದಿಂದಲೇ ದೇವತಾಜನ್ಮವನ್ನು ತಾಳಿ ಕೆಲಕಾಲಪರ್ಯಂತರ ಸ್ವರ್ಗದಲ್ಲಿ ಸುಮ್ಮನೇ ಕೂತು ಭೋಗಿಸುತ್ತಿರುವದಷ್ಟೇ ಕೆಲಸ. ಯಾವಾಗ ಬುತ್ತಿಯಂತಿರುವ ಕರ್ಮಜನ್ಯಪುಣ್ಯವು ತೀರಿತೋ, ಕೂಡಲೆ "ತೇತಂಭುಕ್ತ್ವಾ ಸ್ವರ್ಗಲೋಕಂ ವಿಶಾಲಂ । ಕ್ಷೀಣೇಪುಣ್ಯೇಮರ್ತ್ಯಲೋಕಂ ವಿಶಂತಿ ॥" ಎಂಬ ಭಗವದುಕ್ತಿಯಂತೆ ಹೊರಟಿದ್ದು ಬರಬೇಕಾಗುವದು. ಅತ್ಯಾನಂದದಲ್ಲಿ ಲೋಲಾಡತಕ್ಕ ಮನುಷ್ಯನಿಗೆ ಒಮ್ಮೆಲೆ ದುಃಖವು ಅವರಿಸಿದರೆ ಎಷ್ಟು ಕಷ್ಟವಾದೀತು ನೀವೇ ತರ್ಕಿಸಿರಿ. ಅರಸನು ಹೋಗಿ ತಿರುಕನಾದಂತಾಗುವದಿಲ್ಲವೇ? ಅದ್ದರಿಂದ "ದೇವಾಸುರಾಣಾಂ ಸರ್ವೇಷಾಂ ಮಾನುಷ್ಯಂ ಜಾತಿದುರ್ಲಭಂ" "ನರತ್ವಂ ದುರ್ಲಭಂ ಲೋಕೇ" "ದುರ್ಲಭೋ ಮಾನುಷೋದೇಹಃ" ಎಂದು ವ್ಯಾಸರು ಮಾನವಜನ್ಮಾಧಿಕ್ಯವನ್ನು ಹೊಗಳುವ ಗಡಬಿಡಿಯಲ್ಲಿ ಪುನರುಕ್ತಿದೋಷವನ್ನೂ ಕೂಡ ಮರೆತುಬಿಟ್ಟಂತೆ ಕಾಣುತ್ತದೆ. ತಥ್ಯಾಂಶವೇನಂದರೆ, ವ್ಯಾಸರು ಅಷ್ಟು ಅಜ್ಞರಲ್ಲ. ಆದರೆ ಅಜ್ಞರಾದ ಮಾನವರ ಹೃದಯದಲ್ಲಿ ಮನುಷ್ಯಜನ್ಮವೇ ಶ್ರೇಷ್ಠವೆಂಬುದನ್ನು ಮೂಡಿಸುವದಕ್ಕೋಸ್ಕರ ಪುನಃ ಪುನಃ ಹೇಳಿರುವರು. ವಾಚಕವೃಂದವೇ, ಹೆಚ್ಚಿಗೆ ಹೇಳುವದೇನು? ದೇಹವೆಂಬ ದೇವಾಲಯವು ಮಸ್ತಕವೆಂಬ ದಿವ್ಯಕಲಶದಿಂದ ಅಲಂಕೃತವಾಗಿರುವದು. ಇಂಥ ನರದೇಹವನ್ನು ನೋಡಿದರೆ, ಪಂಚಭೂತಗಳಿಂದ ಕೂಡಿದ ಈ ಜಗತ್ತಿನೊಳಗಿನ ಪಂಚ ವಿಷಯಗಳನ್ನು, ಪಂಚೇಂದ್ರಿಯಗಳ ದ್ವಾರದಿಂದ ಅನುಭೋಗಿಸುವ ಪಂಚಾನನ [ಈಶ್ವರ]ನ ದೇಹವೋ ಏನೋ ಎಂಬುವಂತೆ ಭಾಸವಾಗುತ್ತದೆ. ನರದೇಹವು ದಿವ್ಯಕ್ಷೇತ್ರವು. ಪಾಪಪುಣ್ಯಗಳೇ ಈ

ಹೊಲದಲ್ಲಿ ಬೆಳೆಯತಕ್ಕ ಬೆಳೆಗಳು. ಹೊಲವನ್ನು ಹಸನಾಗಿ ಮಾಡಿದರೆ ಪೀಕು ಚನ್ನಾಗಿ ಬರುವಂತೆ, ಪುಣ್ಯವೆಂಬ ಪೀಕು ಚನ್ನಾಗಿ ಬರಬೇಕಾದರೆ ಆಣವಾದಿ ಮಲತ್ರಯಗಳನ್ನೂ, ಕಾಮಕ್ರೋಧಾದಿ ದುರ್ಗುಣಗಳನ್ನೂ, ಅವಿದ್ಯಾದಿ ಪಂಚಕ್ಲೇಶಗಳನ್ನೂ ಕಿತ್ತೊಗೆಯಬೇಕು. ಇಲ್ಲದಿದ್ದರೆ ಪಾಪರೂಪ ಕಸವು ಬೆಳೆವು ದುಃಖಕ್ಕೀಡುಮಾಡುವದು. "ಪುಣ್ಯ ಪಾಪ ಸಮತಾಘಡೇ। ತರೀಚನರದೇಹ ಜೋಡೇ।" ನರದೇಹದಲ್ಲಿ ಪ್ರಕೃತ್ಯಂಶವೂ, ಈಶ್ವರಾಂಶವೂ ಸಮವಾಗಿರುತ್ತವೆ. ಮಾನವನಲ್ಲಿ ಯಾವನು ವಿಕಾರವನ್ನು ಬದಿಗೊತ್ತಿ ವಿಚಾರಿಯಾಗುವನೋ ಅವನೇ ಪುಣ್ಯವಾನ್ ಸುಖೀ ಎನಿಸುವನು. ಮನುಷ್ಯನು ವಿಷಯಸುಖಗಳೇ ನಿತ್ಯಸುಖಗಳೆಂದು ನಂಬಿ ಆ ವಿಷಯಗಳನ್ನೇ ಬೆನ್ನುಹತ್ತಿದ್ದಾದರೆ, ಎರಳೆಯು ಬೇಸಿಗೆಯ ಬಿಸಿಲಿನಲ್ಲಿ ತೋರುವ ಬಿಸಿಲ್ಗುದುರೆಗೆ ಜಲವೆಂದು ಭ್ರಾಂತಿಗೊಂಡು ಓಡಾಡಿ ನಾಶವಾಗುವಂತೆ ಇವನಾದರೂ ಶ್ರೇಷ್ಠವಾದ ಮಾನವಜನ್ಮವನ್ನು ವ್ಯರ್ಥವಾಗಿ ಕಳೆದುಕೊಂಡು ಬಿಡುವನು. ಅಯ್ಯೋ! ಪಚ್ಚರತ್ನವನ್ನು ಕೊಟ್ಟು ಹಕ್ಕರಕೆಯ ಪಲ್ಲೆಯನ್ನು ಕೊಂಡಂಥ ಶುದ್ಧ ಮೂರ್ಖನ ಪಾಡಾಗುವದಿಲ್ಲವೇ? ಇದೇ ವಿಷಯದಲ್ಲಿ "ಹಬ್ಬಕ್ಕೆತಂದ ಹರಕೆಯಕುರಿ ತೋರಣಕ್ಕೆ ತಂದ ತಳಿರಮೇಯಿತ್ತು. ಕೊಂದಿಹರೆಂಬುದನರಿಯದೆ ಬೆಂದೊಡಲ ಹೊರೆವೃತ್ತಲಿದೆ. ಅದೆಂತು ಹುಟ್ಟಿತ್ತು? ಅದೆಂತು ಹೊಂದಿತ್ತು? ಕೊಂದವರುಳಿವರೇ ಕೂಡಲಸಂಗಮದೇವಾ" ಎಂಬ ಬಸವಪ್ರಭುಗಳ ವಚನದಂತೆಯೂ ಮತ್ತು ಈ ಅರ್ಥವನ್ನೇ ಪುಷ್ಟೀಕರಿಸಿದ

ಹರಕೆಗೆಂದೇ ತಂದಕುರಿತಾನರಿಯದಲಟಾ ಕೊಲುವರೆಂಬುದ।
ಹಿರಿದುಹಸಿವಿಗೆ ತಳಿರಮೆಲುವುದು ತೋರಣಕೆತಂದ॥
ನರಕುರಿಗಳದರಂತೆ ತಮಗಹ ಮರಣವನು ತಾವರಿಯದೀ॥
ಸಂಸರಣದುಃಖದಿ ಮಗ್ನರಾಗಿಯೇ ಮೃತ್ಯುವಶರಹರು॥

ಎಂಬ ಮಹಾಲಿಂಗ ರಂಗಕವಿಯ ವಚನದಂತೆಯೂ ನರಕುರಿಯು ಕ್ಷಣಿಕವಹ ಸಂಸಾರದಲ್ಲಿ ಮುಳಿಗಿ ಹೋಗುತ್ತದೆ. ಮನುಷ್ಯನು ಹುಟ್ಟುತ್ತಾನೆ, ತನ್ನ ಜೀವನ ವ್ಯಾಪಾರವನ್ನು ಸಾಗಿಸುತ್ತಾನೆ. ಇವೇ ಆಯುಷ್ಯದ ಸಾಫಲ್ಯ ಕಾರ್ಯಗಳೆಂದು ಕೆಲವರು ಶಂಕಿಸಬಹುದು. ಹಾಗಾದರೆ ಗಿಡುಗಳು ಹುಟ್ಟುವದಿಲ್ಲವೇನು? ಕಂಬಾರನ ತಿದಿಯು ಉಸುರಾಡಿಸುವದಿಲ್ಲವೇನು? ಕಾರಣ ಧರ್ಮವನ್ನಾಚರಿಸಿದ ಜನ್ಮವು ವ್ಯರ್ಥವು.

ಬೇಕಾದಂಥ ಕಾರ್ಯಗಳನ್ನು ಮಾಡಿಸಬಲ್ಲನು. ಇದೇನು ಅರಿದಾದ ಮಾತಲ್ಲ, ಸರ್ವರದೃಷ್ಟಿಪಥಕ್ಕೂ ಬಿದ್ದಿರಬಹುದು. ಅದಕ್ಕಾಗಿಯೇ ನೀತಿಕಾರರು “ಮತಿರೇವ ಬಲಾದ್ಗರೀಯಸೀ” ಅಂದರೆ ಬಲಕ್ಕಿಂತಲು ಬುದ್ಧಿಯೇ ಹಿರಿದಾಗದ್ದೆಂದು ಉಸುರಿರುವರು. ಇನ್ನು ಈ ಮಾನವನ ಜನ್ಮವನ್ನು ದೇವತೆಗಳ ಜನ್ಮಗಳಾಗಲಿ, ರಾಕ್ಷಸರ ಜನ್ಮಗಳಾಗಲಿ ಸರಿಗಟ್ಟಲಾರವು. ಯಾಕಂದರೆ “ಕರ್ಮಭೂಮಿರಿಯಂ ವಿಪ್ರಫಲಭೂಮಿರಸೌಸ್ಮೃತಾ। ಇಹಾಯತ್ಕ್ರಿಯತೇಕರ್ಮ ಸ್ವರ್ಗೇತದನು ಭುಜ್ಯತೇ” ಎಂಬ ವ್ಯಾಸೋಕ್ತಿಯಂತೆ ಈ ಕರ್ಮಭೂಮಿಯಲ್ಲಿ ಮನುಷ್ಯಜನ್ಮವನ್ನು ತಾಳಿ ತನ್ನಿಂದಾಚರಿಸಲ್ಪಟ್ಟ ಸತ್ಕರ್ಮಗಳ ಫಲದಿಂದಲೇ ದೇವತಾಜನ್ಮವನ್ನು ತಾಳಿ ಕೆಲಕಾಲಪರ್ಯಂತರ ಸ್ವರ್ಗದಲ್ಲಿ ಸುಮ್ಮನೇ ಕೂತು ಭೋಗಿಸುತ್ತಿರುವದಷ್ಟೇ ಕೆಲಸ. ಯಾವಾಗ ಬುತ್ತಿಯಂತಿರುವ ಕರ್ಮಜನ್ಯಪುಣ್ಯವು ತೀರಿತೋ, ಕೂಡಲೆ ತೇತಂಭುಕ್ತ್ವಾಸ್ವರ್ಗಲೋಕಂ ವಿಶಾಲಂ। ಕ್ಷೀಣೇಪುಣ್ಯೇಮರ್ತ್ಯಲೋಕಂ ವಿಶಂತಿ॥” ಎಂಬ ಭಗವದುಕ್ತಿಯಂತೆ ಹೊರಟಿದ್ದು ಬರಬೇಕಾಗುವದು. ಅತ್ಯಾನಂದದಲ್ಲಿ ಲೋಲಾಡತಕ್ಕ ಮನುಷ್ಯನಿಗೆ ಒಮ್ಮೆಲೆ ದುಃಖವು ಆವರಿಸಿದರೆ ಎಷ್ಟು ಕಷ್ಟವಾದೀತು ನೀವೇ ತರ್ಕಿಸಿರಿ. ಅರಸನು ಹೋಗಿ ತಿರುಕನಾದಂತಾಗುವದಿಲ್ಲವೇ? ಆದ್ದರಿಂದ “ದೇವಾಸುರಾಣಾಂ ಸರ್ವೇಷಾಂ ಮಾನುಷ್ಯಂ ಜಾತಿದುರ್ಲಭಂ” “ನರತ್ವಂ ದುರ್ಲಭಂ ಲೋಕೇ” “ದುರ್ಲಭೋ ಮಾನುಷೋದೇಹಃ” ಎಂದು ವ್ಯಾಸರು ಮಾನವಜನ್ಮಾಧಿಕ್ಯವನ್ನು ಹೊಗಳುವ ಗಡಬಿಡಿಯಲ್ಲಿ ಪುನರುಕ್ತಿದೋಷವನ್ನೂ ಕೂಡ ಮರೆತುಬಿಟ್ಟಂತೆ ಕಾಣುತ್ತದೆ. ತಥ್ಯಾಂಶವೇನಂದರೆ, ವ್ಯಾಸರು ಅಷ್ಟು ಅಜ್ಞರಲ್ಲ. ಆದರೆ ಅಜ್ಞರಾದ ಮಾನವರ ಹೃದಯದಲ್ಲಿ ಮನುಷ್ಯಜನ್ಮವೇ ಶ್ರೇಷ್ಠವೆಂಬುದನ್ನು ಮೂಡಿಸುವದಕ್ಕೋಸ್ಕರ ಪುನಃ ಪುನಃ ಹೇಳಿರುವರು. ವಾಚಕವೃಂದವೇ, ಹೆಚ್ಚಿಗೆ ಹೇಳುವದೇನು? ದೇಹವೆಂಬ ದೇವಾಲಯವು ಮಸ್ತಕವೆಂಬ ದಿವ್ಯಕಲಶದಿಂದ ಅಲಂಕೃತವಾಗಿರುವದು. ಇಂಥ ನರದೇಹವನ್ನು ನೋಡಿದರೆ, ಪಂಚಭೂತಗಳಿಂದ ಕೂಡಿದ ಈ ಜಗತ್ತಿನೊಳಗಿನ ಪಂಚ ವಿಷಯಗಳನ್ನು, ಪಂಚೇಂದ್ರಿಯಗಳ ದ್ವಾರದಿಂದ ಅನುಭೋಗಿಸುವ ಪಂಚಾನನ [ಈಶ್ವರ]ನ ದೇಹವೋ ಏನೋ ಎಂಬುವಂತೆ ಭಾಸವಾಗುತ್ತದೆ. ನರದೇಹವು ದಿವ್ಯಕ್ಷೇತ್ರವು. ಪಾಪಪುಣ್ಯಗಳೇ ಈ

ಹೊಲದಲ್ಲಿ ಬೆಳೆಯತಕ್ಕ ಬೆಳೆಗಳು. ಹೊಲವನ್ನು ಹಸನಾಗಿ ಮಾಡಿದರೆ ಪೀಕು ಚನ್ನಾಗಿ ಬರುವಂತೆ, ಪುಣ್ಯವೆಂಬ ಪೀಕು ಚನ್ನಾಗಿ ಬರಬೇಕಾದರೆ ಆಣವಾದಿ ಮಲತ್ರಯಗಳನ್ನೂ, ಕಾಮಕ್ರೋಧಾದಿ ದುರ್ಗುಣಗಳನ್ನೂ, ಅವಿದ್ಯಾದಿ ಪಂಚಕ್ಲೇಶಗಳನ್ನೂ ಕಿತ್ತೊಗೆಯಬೇಕು. ಇಲ್ಲದಿದ್ದರೆ ಪಾಪರೂಪ ಕಸವು ಬೆಳೆದು ದುಃಖಕ್ಕೀಡುಮಾಡುವದು. "ಪುಣ್ಯಪಾಪ ಸಮತಾಫಡೇ। ತರೀಚ ನರದೇಹ ಜೋಡೇ।" ನರದೇಹದಲ್ಲಿ ಪ್ರಕೃತ್ಯಂಶವೂ, ಈಶ್ವರಾಂಶವೂ ಸಮವಾಗಿರುತ್ತವೆ. ಮಾನವನಲ್ಲಿ ಯಾವನು ವಿಕಾರವನ್ನು ಬದಿಗೊತ್ತಿ ವಿಚಾರಿಯಾಗುವನೋ ಅವನೇ ಪುಣ್ಯವಾನ್ ಸುಖೀ ಎನಿಸುವನು. ಮನುಷ್ಯನು ವಿಷಯಸುಖಗಳೇ ನಿತ್ಯಸುಖಗಳೆಂದು ನಂಬಿ ಆ ವಿಷಯಗಳನ್ನೇ ಬೆನ್ನುಹತ್ತಿದ್ದಾದರೆ, ಎರಳೆಯು ಬೇಸಿಗೆಯ ಬಿಸಿಲಿನಲ್ಲಿ ತೋರುವ ಬಿಸಿಲ್ಗುದುರೆಗೆ ಜಲವೆಂದು ಭ್ರಾಂತಿಗೊಂಡು ಓಡಾಡಿ ನಾಶವಾಗುವಂತೆ ಇವನಾದರೂ ಶ್ರೇಷ್ಠವಾದ ಮಾನವಜನ್ಮವನ್ನು ವ್ಯರ್ಥವಾಗಿ ಕಳೆದುಕೊಂಡು ಬಿಡುವನು. ಅಯ್ಯೋ! ಪಚ್ಚರತ್ನವನ್ನು ಕೊಟ್ಟು ಹುಕ್ಕರಕೆಯ ಪಲ್ಲೆಯನ್ನು ಕೊಂಡಂಥ ಶುದ್ಧ ಮೂರ್ಖನ ಪಾಡಾಗುವದಿಲ್ಲವೇ? ಇದೇ ವಿಷಯದಲ್ಲಿ "ಹಬ್ಬಕ್ಕೆ ತಂದ ಹರಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯಿತ್ತು. ಕೊಂದಿಹರೆಂಬುದನರಿಯದೆ ಬೆಂದೊಡಲ ಹೊರೆವುತ್ತಲಿದೆ. ಅದೆಂತು ಹುಟ್ಟಿತ್ತು? ಅದೆಂತು ಹೊಂದಿತ್ತು? ಕೊಂದವರುಳಿವರೇ ಕೂಡಲಸಂಗಮದೇವಾ" ಎಂಬ ಬಸವಪ್ರಭುಗಳ ವಚನದಂತೆಯೂ ಮತ್ತು ಈ ಅರ್ಥವನ್ನೇ ಪುಷ್ಟೀಕರಿಸಿದ

ಹರಕೆಗೆಂದೇ ತಂದಕುರಿತಾನರಿಯದೆಕಟಾ ಕೊಲುವರೆಂಬುದ।
ಹಿರಿದುಹಸಿವಿಗೆ ತಳಿರಮೆಲುವುದು ತೋರಣಕೆತಂದ॥
ನರಕುರಿಗಳದರಂತೆ ತಮಗಹ ಮರಣವನು ತಾವರಿಯದೇ॥
ಸಂಸರಣದುಃಖದಿ ಮಗ್ನರಾಗಿಯೇ ಮೃತ್ಯುವಶರಹರು॥

ಎಂಬ ಮಹಾಲಿಂಗ ರಂಗಕವಿಯ ವಚನದಂತೆಯೂ ನರಕುರಿಯು ಕ್ಷಣಿಕವಹ ಸಂಸಾರದಲ್ಲಿ ಮುಳುಗಿ ಹೋಗುತ್ತದೆ. ಮನುಷ್ಯನು ಹುಟ್ಟುತ್ತಾನೆ, ತನ್ನ ಜೀವನ ವ್ಯಾಪಾರವನ್ನು ಸಾಗಿಸುತ್ತಾನೆ. ಇವೇ ಆಯುಷ್ಯದ ಸಾಫಲ್ಯ ಕಾರ್ಯಗಳೆಂದು ಕೆಲವರು ಶಂಕಿಸಬಹುದು. ಹಾಗಾದರೆ ಗಿಡುಗಳು ಹುಟ್ಟುವದಿಲ್ಲವೇನು? ಕಂಬಾರನ ತಿದಿಯು ಉಸುರಾಡಿಸುವದಿಲ್ಲವೇನು? ಕಾರಣ ಧರ್ಮವನ್ನಾಚರಿಸಿದ ಜನ್ಮವು ವ್ಯರ್ಥವು.

ಧರ್ಮ ಒಂದನ್ನು ಬಿಟ್ಟರೆ ಮನುಷ್ಯನಿಗೂ, ಪಶುವಿಗೂ, ಯಾವ ಭೇದವು ಉಳಿಯಲಾರದು. ಅವು ಚತುಷ್ಪಾದ ಪಶುಗಳಾದರೆ ಇವನು ದ್ವಿಪಾದ ಪಶುವೆನಿಸಿಕೊಳ್ಳಬಹುದು. ಇದಿಷ್ಟೇ ತಾರತಮ್ಯವು.

ಆದರೆ ಸರ್ವೋತ್ಕೃಷ್ಟವಾದ ಮನುಷ್ಯ ಜನ್ಮವು ನಮಗೆ ದೊರೆತಿದ್ದರೂ ತನ್ನ ಸ್ವಾರ್ಥ (ಮೋಕ್ಷ)ದ ವಿಷಯದಲ್ಲಿ ಯಾವನು ಉದಾಸೀನ ಮಾಡುವನೋ ಅವನಿಗಿಂತಲೂ ಮೂರ್ಖನು ಜಗತ್ತಿನಲ್ಲಿ ಯಾವನಿದ್ದಾನೆ? ಆದ್ದರಿಂದ ಜನ್ಮ ಮರಣದ ಯಾತಾಯಾತವನ್ನು ತಪ್ಪಿಸಿಕೊಳ್ಳುವದೇ ಈ ನರ ಜನ್ಮದ ಇತಿ ಕರ್ತವ್ಯವು. ಇನ್ನೂ ಬಹುದಿವಸ ಬದುಕುತ್ತೇವೆ, ಸಾವಕಾಶವಾಗಿ ಮೋಕ್ಷವನ್ನು ಸಂಪಾದಿಸೋಣವೆಂದರೆ "ಆಯುಃಸ್ರವತಿ ಭಿನ್ನಘಟಾಂಬುವತ್" ಎಂಬಂತೆ ವಡಕ ಕೊಡದೊಳಗಿನ ಜಲವು ಮೆಲ್ಲಮೆಲ್ಲನೆ ಸ್ರವಿಸಿ ಹೋಗುವಂತೆ ನಮ್ಮ ಆಯುಷ್ಯವಾದರೂ ಕ್ಷೀಣವಾಗುವದು. ಆದಕಾರಣ ದೀರ್ಘ ಪ್ರಯತ್ನದಿಂದ ಸಂಪಾದಿಸಲ್ಪಟ್ಟ ಅಮೌಲ್ಯ ನರಜನ್ಮವನ್ನು ಹದ್ದು ಕಾಗಿಗಳಂತೆ ವ್ಯರ್ಥ ಮಾಡಿಕೊಳ್ಳದೆ ತನ್ನ ಧರ್ಮ ಅಂದರೆ ಕರ್ತವ್ಯಕರ್ಮವನ್ನಾಚರಿಸಿ ತನ್ನ ಜನ್ಮವನ್ನು ಸಾರ್ಥಕ ಮಾಡಿಕೊಳ್ಳಬೇಕೆಂಬುದೇ ನಮ್ಮ ಲೇಖನದ ಗುಟ್ಟುಗುರಿಯು.

# ಲಿಂಗ ರಗಳೆ.

ಸಂಗ್ರಾಹಕರು:— ಶ್ರೀಯುತ. ಸ. ಅ. ಮಠ. ಹೆ. ಮಾ. ಬಟಕುರ್ಕಿ.
ತಾ. ಬದಾಮಿ.



ಶ್ರೀಗುರು ಶಾಂತ ಮಹಾಘನ ಲಿಂಗಂ।
ರಾಗದೊಳೆನ್ನ ಮನೋರಥ ಲಿಂಗಂ ॥೧॥

ಭಕ್ತರ ಹೃತ್ಕಮಲಾರ್ಕನು ಲಿಂಗಂ।
ಮುಕ್ತಿ ಚಿದಾಶ್ರಯ ಸುಖ ಮುಖ ಲಿಂಗಂ ॥೨॥

ನಿರವಯ ನಿರುಪಮ ನಿರ್ಮಳ ಲಿಂಗಂ।
ಹರುಷದಿ ಹರವರ ಘನಮಹ ಲಿಂಗಂ ॥೩॥

ಭಾವದ ಬ್ರಹ್ಮದ ದ್ವೈತದ ಲಿಂಗಂ।
ಕೋವಿದರಂಗ ಕೃಪಾಕರ ಲಿಂಗಂ ॥೪॥

ನಿಡುಜಡೆ ಮುಕುಟ ಸುತೇಜೋಲಿಂಗಂ।
ಉಡುಗಣವರಧರ ಮೆರೆದಿಹ ಲಿಂಗಂ ॥೫॥

ಹೊಳೆವಹಿ ಕುಂಡಲ ಸುಲಲಿತ ಲಿಂಗಂ।
ಬೆಳಗುವದತ್ತ ಪ್ರಭಾಕರ ಲಿಂಗಂ ॥೬॥

ರವಿಶಶಿ ಶಿಖಿತ್ರಯಾಕ್ಷಿತ ಲಿಂಗಂ।
ನವಮಣಿ ಖಚಿತ ಸುಭೂಷಿತ ಲಿಂಗಂ ॥೭॥

ಪಂಚಾನನದಿಂದೊಪ್ಪುವ ಲಿಂಗಂ।
ಪಂಚ ಬ್ರಹ್ಮರ ಮೀರಿದ ಲಿಂಗಂ ॥೮॥

ಚಕಿತಮಭಿಧತ್ತೆ ಶ್ರುತಿರಪಿಲಿಂಗಂ।
ಮುಖ ಮಂಡಲಮಿಗೆ ಬೆಳಗುವ ಲಿಂಗಂ ॥೯॥

ಕೊರಳಲಿ ಗರಳವ ಧರಿಸಿದ ಲಿಂಗಂ।
ಶಿರಮಾಲಾಧರ ಶಾಶ್ವತ ಲಿಂಗಂ ॥ ೧೦ ॥

ಕರದ ಕಪಾಲದ ವಿಪರಿತ ಲಿಂಗಂ।
ಉರಗಾಭರಣದ ಉನ್ನತ ಲಿಂಗಂ ॥ ೧೧ ॥

ನರಸಿಂಹನ ಶಿರಭೇದಿತ ಲಿಂಗಂ।
ನರಸಿಂಹನ ಚರ್ಮಾಂಬರ ಲಿಂಗಂ ॥ ೧೨ ॥

ಉಡಿಗೆಯ ಪುಲಿದೊಗಲೊಪ್ಪಿದ ಲಿಂಗಂ।
ತೊಡರಿನ ಪೆಂಡೆಯ ಚರಣದ ಲಿಂಗಂ ॥ ೧೩ ॥

ಕುಲಿಶಧರಾರ್ಚಿತ ತೇಜೋಲಿಂಗಂ।
ಸುಲಲಿತ ಸುಂದರ ನಿರ್ಮಳ ಲಿಂಗಂ ॥ ೧೪ ॥

ನಿಗಮಂಗಳಮಿಗೆ ನಿಲುಕದ ಲಿಂಗಂ।
ಹೊಗಳುವ ಶ್ರುತಿತತಿದುರ್ಲಭ ಲಿಂಗಂ ॥ ೧೫ ॥

ವ್ಯೋಮ ಜಟಾಮುಕುಟೋನ್ನತ ಲಿಂಗಂ।
ಕಾಮನ ಭಸ್ಮವ ಮಾಡಿದ ಲಿಂಗಂ ॥ ೧೬ ॥

ಪರಿಭವ ವೃತ್ಯ ಲೀಲಾಜಿತ ಲಿಂಗಂ।
ಕರಿವರ ಚರ್ಮ ವಿರಾಜಿತ ಲಿಂಗಂ ॥ ೧೭ ॥

ಅಕ್ಷಯಮನಶ್ವರಮನುಪಮ ಲಿಂಗಂ।
ದಕ್ಷನಯಾಗ ಕೋಲಾಹಲ ಲಿಂಗಂ ॥ ೧೮ ॥

ಕಾಲನ ದಹನವ ಮಾಡಿದ ಲಿಂಗಂ।
ಲೀಲೆಯೊಳಂದು ಸುರಾರ್ಜಿತ ಲಿಂಗಂ ॥ ೧೯ ॥

ತ್ರಿಪುರವನುರುಪಿದನತಿಬಳ ಲಿಂಗಂ।
ವಿಪರಿತ ಚರಿತದ ವಿಸ್ಮಯ ಲಿಂಗಂ ॥ ೨೦ ॥

ಹರಿಯಜ ಮಧ್ಯದಿ ಬೆಳೆದುರಿ ಲಿಂಗಂ।
ಕರುಣಿಸಿ ಚರಣವ ತೋರಿದ ಲಿಂಗಂ ॥ ೨೧ ॥

ವ್ಯಾಸನದರ್ಪವ ಕೆಡಿಸಿದ ಲಿಂಗಂ।
ಶೇಷನ ಕಂಕಣ ವಿಕ್ಕಿದ ಲಿಂಗಂ ॥ ೨೨ ॥

ತ್ರಿಶೂಲದಿ ಹರಿಯನೆಗಪಿದ ಲಿಂಗಂ।
ವಸುಧೆಯು ಶಾಂತಿಯ ಮಾಡಿದ ಲಿಂಗಂ ॥ ೨೩ ॥

ಪ್ರತಿಯಿಡಬಾರದ ಘನತರ ಲಿಂಗಂ।
ರತಿಪತಿಯಂಗ ವಿನಾಶನ ಲಿಂಗಂ ॥ ೨೪ ॥

ವಿಷ ದಳ್ಳುರಿಯಲಿ ಅಭಯದ ಲಿಂಗಂ।
ಬಿಸಜಾಕ್ಷಗೆ ಕೊಟ್ಟತಿಬಳ ಲಿಂಗಂ ॥ ೨೫ ॥

ತಾರಕ ದೈತ್ಯನ ಗರ್ವದ ಲಿಂಗಂ।
ಘೋರನ ಕೆಡಿಸಿದ ನತಿಶಯ ಲಿಂಗಂ ॥ ೨೬ ॥

ನಿತ್ಯನು ಏಕೋರುದ್ರನು ಲಿಂಗಂ।
ತತ್ವಕೆ ವೇದ್ಯನು ಗಭೀರ ಲಿಂಗಂ ॥ ೨೭ ॥

ಮುನಿಗಳ ಹೃದಯದಿ ಬೆಳಗುವ ಲಿಂಗಂ।
ಮನುಗಳ ಚಿತ್ತದಿ ಬೆಳಗುವ ಲಿಂಗಂ ॥ ೨೮ ॥

ಪಂಚಾವರಣದಿ ಪೂರಿತ ಲಿಂಗಂ।
ಪಂಚಾಕ್ಷರಿಯೊಳು ತೋರುವ ಲಿಂಗಂ ॥ ೨೯ ॥

ಬಹಿರಾವರಣದಿ ಪೊಣ್ಮಿದ ಲಿಂಗಂ।
ಮಹದಾವರಣದೊಳಡಗಿದ ಲಿಂಗಂ ॥ ೩೦ ॥

ಭಕ್ತರ ಹೃದಯದಿ ಮೂಡಿದ ಲಿಂಗಂ।
ಭಕ್ತರ ಹೃದಯದೊಳಾಡುವ ಲಿಂಗಂ ॥ ೩೧ ॥

ಭಕ್ತಿಯ ಲೀಲೆಯೊಳೊಪ್ಪಿದ ಲಿಂಗಂ।
ಮುಕ್ತಿಗೆ ನಿಲುಕದ ಭೇದ್ಯದ ಲಿಂಗಂ ॥ ೩೨ ॥

ತ್ರಿಜಗದಿವಾಕರ ವಿಸ್ಫೃತ ಲಿಂಗಂ।
ರಜತಗಿರೀಶ ನಿರಾಮಯ ಲಿಂಗಂ ॥ ೩೩ ॥

ಘನತರವೆನಿಸುವ ನಾಟ್ಯದ ಲಿಂಗಂ।
ದಿಗಧೀಶ್ವರ ಹೊಡೆಗೆಡಹಿದ ಲಿಂಗಂ ॥ ೩೪ ॥

ಜಗದೊಳಗೆಣೆಯಲ್ಲಿಕ್ಷಿದ ಲಿಂಗಂ।
ಹೊಗಳಲಳವಲ್ಲದ ಘನ ಲಿಂಗಂ ॥ ೩೫ ॥

ಅಘಹರನ ಪ್ರತಿಮಹಘನ ಲಿಂಗಂ।
ಎಲ್ಲ ದೇವರ ವಲ್ಲಭ ಲಿಂಗಂ ॥ ೩೬ ॥

ಎಲ್ಲ ದೇವರ ಮೂಲಿಗೆ ಲಿಂಗಂ।
ಎಲ್ಲ ದೇವರ ದೇವನು ಲಿಂಗಂ ॥ ೩೭ ॥

ವೇದವ ಭೇದಿಸಿ ಕಾಣವ ಲಿಂಗಂ।
ಮೂದೇವರ ಮುಖದರ್ಪಣ ಲಿಂಗಂ ॥ ೩೮ ॥

ಗಿರಿಜಾವರಣ ವಿರಾಜಿತ ಲಿಂಗಂ।
ಶರಣರ ಸಂತೋಷದ ಲಿಂಗಂ। ॥ ೩೯ ॥

ಶರಣರ ಕಲ್ಪದ್ರುಮಕಳೆ ಲಿಂಗಂ।
ಶರಣರ ಚಿಂತಾಮಣಿ ಶಿವಲಿಂಗಂ ॥ ೪೦ ॥

ಜಂಗಮವದನ ಸ್ವರೂಪ ಲಿಂಗಂ।
ಜಂಗಮ ಮೂರ್ತಿ ಸುಧಾಮಯ ಲಿಂಗಂ ॥ ೪೧ ॥

ಪರಮಾನಂದದ ಸೊಂಪಿನ ಲಿಂಗಂ।
ಚರಿತದ ಭೃಂಗಿಯ ಹಿಂಗದ ಲಿಂಗಂ ॥ ೪೨ ॥

ನಂದೀಶ್ವರನಾನಂದದ ಲಿಂಗಂ।
ಛಂದದಿ ಪ್ರಮಥರೊಳೊಪ್ಪಿದ ಲಿಂಗಂ ॥ ೪೩ ॥

ಕಲ್ಯಾಣದಸಂಖ್ಯಾತರ ಲಿಂಗಂ।
ಶಾಲ್ಲಿಶಿಯೊಳೊಂದಿದಸಲೆ ಲಿಂಗಂ ॥ ೪೪ ॥

ಅಲ್ಲಮಪ್ರಭುವಿಗೆ ಸಿಕ್ಕಿದ ಲಿಂಗಂ।
ಮೊಲ್ಲಿಯ ಬೊಮ್ಮಣ್ಣಗೊಲಿದ ಲಿಂಗಂ ॥ ೪೫ ॥

ಸಂಗನಬಸವಣ್ಣನೊಡನೆ ಲಿಂಗಂ।
ಸಿಂಗದೆಮುಡಿವಳಗಂಜಿದ ಲಿಂಗಂ ॥ ೪೬ ॥

ಚನ್ನಬಸವ ರಾಜಯ್ಯಗೆ ಲಿಂಗಂ।
ಉನ್ನತ ಷಟ್‌ಸ್ಥಲವರುಪಿದ ಲಿಂಗಂ ॥ ೪೭ ॥

ಕಿನ್ನರಿ ಬೊಮ್ಮನ ನಿಷ್ಠೆಗೆ ಲಿಂಗಂ।
ಹನ್ನೊಂದು ಹಣ ಹಾಗನಿತ್ತ ಲಿಂಗಂ ॥ ೪೮ ॥

ಭಾಷೆಗೆ ಬಾಣನ ಬಾಗಿಲ ಲಿಂಗಂ।
ದೇಶವರಿಯೆ ಕಾಯ್ದುದಾ ಲಿಂಗಂ ॥ ೪೯ ॥

ಪಿಟ್ಟವ್ವೆಯ ದೃಢ ಭಕ್ತಿಗೆ ಲಿಂಗಂ।
ಬಿಟ್ಟಿಗೆ ಮಣ್ಣನು ಅಡಕಿದ ಲಿಂಗಂ ॥ ೫೦ ॥

ರಾಗದಿಕನ್ನಪ್ಪಗೊಲಿದ ಲಿಂಗಂ॥
ಬೇಗನೆ ಬೆನ್ನಲಿ ಉರಳಿದ ಲಿಂಗಂ ॥ ೫೧ ॥

ಕೊಡಗೂಸು ಪಿಡಿದ ಹಾಲಿಗೆ ಲಿಂಗಂ।
ತುಡುಕಿದ ಜಗವೆಲ್ಲರಿಯಲು ಲಿಂಗಂ ॥ ೫೨ ॥

ಕಕ್ಕಯ್ಯನ ನಿಜಭಕ್ತಿಗೆ ಲಿಂಗಂ॥
ಸಿಕ್ಕಿದ ಜಗವೆಲ್ಲರಿಯಲು ಲಿಂಗಂ ॥ ೫೩ ॥

ಹಡದಪ್ಪಣ್ಣನ ದೃಢವುನಲಿಂಗಂ।
ಮಡಿಹಾರಿ ಬೊಮ್ಮನ ಸಡಗರ ಲಿಂಗಂ ॥ ೫೪ ॥

ಮೋಳಿಗೆ ಮಾರನ ಭಕ್ತಿಗೆ ಲಿಂಗಂ।
ಕೇಳಿರಿ ಜಗದೊಳು ಮೆಚ್ಚಿದ ಲಿಂಗಂ ॥ ೫೫ ॥

ಚನ್ನನಕೂಡೊಲಿದುಂಡಿಹ ಲಿಂಗಂ।
ಕನ್ನದ ಮಾರಂಗೊಲಿದಿಹ ಲಿಂಗಂ ॥ ೫೬ ॥

ನಂಬಿಗೆ ಹಡಪವನು ಹಿಡಿದ ಲಿಂಗಂ।
ಕುಂಬರಗುಂಡನ ಹಿಂಗದ ಲಿಂಗಂ ॥ ೫೭ ॥

ಮಡಕೆಯ ಗತಿಗೊಲಿದಾಡಿದ ಲಿಂಗಂ।
ಬಿಡದೆ ಪ್ರಸನ್ನವ ತೋರಿದ ಲಿಂಗಂ ॥ ೫೮ ॥

ದೃಢನನು ಮಿಷಬಾಚಯ್ಯಗೆ ಲಿಂಗಂ।
ತಡೆಯದೆ ಕೆಂಜಡೆಯಲಿತ್ತ ಲಿಂಗಂ ॥ ೫೯ ॥

ಏಕಾಂತದರಾಮಯ್ಯಗೆ ಲಿಂಗಂ।
ಲೋಕಾಂತವನು ಮಾಡಿದ ಲಿಂಗಂ ॥ ೬೦ ॥

ಸಿದ್ಧರಾಮಯ್ಯನ ತಂದ ಲಿಂಗಂ।
ಆದ್ಯಂತವನು ತೋರಿದ ಲಿಂಗಂ ॥ ೬೧ ॥

ಲೊಕ್ಕಿಯ ಬೆಲ್ಲಕೆ ಮೆಚ್ಚಿದ ಲಿಂಗಂ।
ಅಕ್ಕನ ಕೈಯೊಳು ಸಿಕ್ಕಿದ ಲಿಂಗಂ ॥ ೬೨ ॥

ಸುರಗಿಯ ಚೌಡನ ಭಾಷೆಗೆ ಲಿಂಗಂ।
ಹರುಷದೊಳು ನಲಿದು ಧೂಪಿದ ಲಿಂಗಂ ॥ ೬೩ ॥

ಶಂಕರ ದಾಸನ ಛಲಪದ ಲಿಂಗಂ।
ಸುಂಕದ ಬಂಕಣ್ಣಗೊಲಿದ ಲಿಂಗಂ ॥ ೬೪ ॥

ದಾಸನ ವಸ್ತ್ರವ ಸೀಳಿದ ಲಿಂಗಂ।
ಶಾಶ್ವತ ತವನಿಧಿಯನಿತ್ತ ಲಿಂಗಂ ॥ ೬೫ ॥

ಕಂಚಿಯ ಪಿರಿಯಾಳಗೆ ಶಿವಲಿಂಗಂ।
ಪಂಚ ಮುಖಂಗಳ ತೋರಿದ ಲಿಂಗಂ ॥ ೬೬ ॥

ಉಪಮನ್ಯುತಪಕೆಮೆಚ್ಚಿದ ಲಿಂಗಂ।
ಮಿಸರಿತ ಪಾಲ್ಗಡಲನಿತ್ತ ಲಿಂಗಂ ॥ ೬೭ ॥

ನಮಃಶಿವಾಯ ಮೃಗಧರ ಲಿಂಗಂ।
ಸುಮನದ ಸೊಂಪಿನ ಇಂಪಿನ ಲಿಂಗಂ ॥ ೬೮ ॥

ತಿರುನಾಳವರ ಗತಿಮತಿ ಲಿಂಗಂ।
ಕರುಣದ ಸುಧೆಸಾಗರ ದಯ ಲಿಂಗಂ ॥ ೬೯ ॥

ಕೆರೆಯಪದ್ಮರಾಜಯ್ಯಗೆ ಲಿಂಗಂ।
ಮೆರೆಯದೆ ತನ್ನಿರವರುಪಿದ ಲಿಂಗಂ ॥ ೭೦ ॥

ಹಂಪೆಯ ಹರಿದೇವಯ್ಯಗೆ ಲಿಂಗಂ।
ಇಂಪಿನ ಸೊಂಪನು ತೋರಿದ ಲಿಂಗಂ ॥ ೭೧ ॥

ದೇವಪರಾಪರನಿಃಕಳಲಿಂಗಂ।
ದೇವನುಸುಲಭಂಭವ ಹರ ಲಿಂಗಂ ॥ ೭೨ ॥

ದೇವಕೃಪಾಕರ ಸಿಂಧುವು ಲಿಂಗಂ।
ದೇವಶಿಖಾಮಣಿ ವಿಶ್ವತ ಲಿಂಗಂ ॥ ೭೩ ॥

ದೇವಸುಧಾಕಿರಣೋರ್ಜಿತ ಲಿಂಗಂ।
ದೇವಕುಲಾರ್ಕಂ ಭರ್ಗನೆ ಲಿಂಗಂ ॥ ೭೪ ॥

ದೇವಸದಾಶಿವ ಶಾಶ್ವತ ಲಿಂಗಂ।
ದೇವಸುರಾಸುರ ವಂದಿತ ಲಿಂಗಂ ॥ ೭೫ ॥

ದೇವರದೇವನೆ ಕರುಣಿಸು ಲಿಂಗಂ।
ದೇವಮದೀಶನೆ ರಕ್ಷಿಸು ಲಿಂಗಂ ॥ ೭೬ ।

ಎನ್ನಯ ತನುವಿನ ತಮಹರ ಲಿಂಗಂ।
ಎನ್ನಯ ಮನದಾನಂದದ ಲಿಂಗಂ ॥ ೭೭ ॥

ಎನ್ನಯ ಹರುಷದ ಹರಿವರ ಲಿಂಗಂ।
ಎನ್ನಯ ಷಡ್ವಿಧ ಸಂಗದ ಲಿಂಗಂ ॥ ೭೮ ॥

ಜಯ ಜಯ ಎನ್ನ ಮನೋರಥ ಲಿಂಗಂ।
ಜಯ ಜಯ ರಕ್ಷಿಸು ಈಕ್ಷಿಸು ಲಿಂಗಂ ॥ ೭೯ ॥

ಜಯ ಜಯ ಶಂಕರ ಮಹಘನ ಲಿಂಗಂ।
ಜಯ ಜಯ ಶ್ರೀಗುರು ಲಿಂಗ ನಮಸ್ತೇ ॥ ೮೦ ॥

ಜಯ ಜಯ ಚರಪರ ಲಿಂಗ ನಮಸ್ತೇ।
ಜಯ ಜಯ ಲಿಂಗ ನಮಸ್ತೇ ನಮಸ್ತೇ ॥ ೮೧ ॥

ಆವಗಂ ಬಿಡದೆ ಹಸ್ತದೊಳಾಂತು ನಿರೀಕ್ಷಿಸುತ್ತಿರಾ। ಲಿಂಗವಾಪರ ತತ್ವಮಿಗೆಯರ್ಚಿಸಿ। ಪಾಡುತ ಕೀರ್ತಿಸುತ್ತ ಕೇಳ್। ಲಿಂಗವಾಲಿಂಗದಿಂತ ನಿಕೂಟದೊಳಿಪದ ಭಾಗ್ಯಮಂ। ಮಂಗಳಮೂರ್ತಿ ಚಿತ್ರಯಿಸು ಶಾಂತ ಮಹಾಘನ ಲಿಂಗಂ।

॥ ಲಿಂಗರಗಳೆ ಸಮಾಪ್ತಂ ಮಂಗಳಂ ॥



# ಬಸವೇಶ್ವರನು ವೀರಶೈವ ಮತಸ್ಥಾಪಕನಲ್ಲ.

(ಲೇಖಕರು— ವ್ಹಿ. ಸಿ. ಯಾಗಟಿ ಬಿ. ಎ. ಎಲ್. ಎಲ್. ಬಿ. ಹಾವೇರಿ.)



ವೀರಶೈವ ಮತವು ಅನಾದಿಯಾದದ್ದು. ಬಸವನು ಈ ಧರ್ಮವನ್ನು ಕುಗ್ಗಿಹೋದಾಗ ಉದ್ಧರಿಸಿದನಲ್ಲದೆ ಅದನ್ನು ಹೊಸದಾಗಿ ಸ್ಥಾಪಿಸಲಿಲ್ಲ. ಬಸವನೇ ಸ್ಥಾಪಕನೆಂದು ಹೇಳುವದು ಆಳವಾದ ಅಜ್ಞಾನವನ್ನು ತೋರಿಸುತ್ತದೆ. ವೇದಗಳಲ್ಲಿ ವೀರಶೈವ ಮತವು ಬೋಧಿಸಲ್ಪಟ್ಟಿದೆ. ಲಿಂಗಧಾರಣ ಪರವಾಗಿ ಅನೇಕ ಮಂತ್ರಗಳಿವೆ. ಅವುಗಳಲ್ಲಿ ಒಂದನ್ನು ಇಲ್ಲಿ ಕೊಟ್ಟಿದೆ-

ಪವಿತ್ರಂತೆ ವಿತತಂ ಬ್ರಹ್ಮಣಸ್ಪತೆ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ।
ಅತಪ್ತತನೂರ್ನತದಾಮೋಽಶ್ನುತೆಶ್ರತಾಸಯಿದ್ವಹಂತಸ್ತತ್ಸಮಾಗತ
(ಋಗ್ವೇದ ಮಂತ್ರ ೭-೩-೮)

ಹತ್ತು ಶೈವ ಪುರಾಣಗಳನ್ನು ಬರೆದ ವೇದವ್ಯಾಸರು ಲಿಂಗಪುರಾಣದ ಉತ್ತರ ಭಾಗದಲ್ಲಿ ಲಿಂಗಧಾರಣ ವಿಷಯದಲ್ಲಿ ವೇದಮಂತ್ರಗಳಿಗೆ ಹೀಗೆ ಅರ್ಥವನ್ನು ಹೇಳಿದ್ದಾರೆ.

ವೇದೇಷು ಶಾಸ್ತ್ರಸಂಘೇಷು। ಪುರಾಣೇಷ್ವಾಗಮೇಷು ಚ॥
ಬ್ರಾಹ್ಮಣಸ್ಯ ಸಮಾಖ್ಯಾತಂ। ಲಿಂಗಧಾರಣ ಮುತ್ತಮಂ॥
ಬ್ರಹ್ಮೇತಿ ಲಿಂಗಮಾಖ್ಯಾತಂ। ಬ್ರಾಹ್ಮಣಃ ಪತಿರೀಶ್ವರಃ॥
ಪವಿತ್ರಂತದ್ಧಿ ವಿಖ್ಯಾತಂ। ತತ್ಸಂಪರ್ಕಾತ್ತನುಶ್ಶುಚಿಃ॥
ಋಗಿತ್ಯಾಹ ಪವಿತ್ರಂತೆ ವಿತತಂ ಬ್ರಹ್ಮಣಸ್ಪತೆ।
ತಸ್ಮಾತ್ಪವಿತ್ರಂತಲ್ಲಿಂಗಂಧಾರ್ಯಂ ಶೈವಮನಾಮಯಂ॥

ಎಂಬ ಮೊದಲಾದ ಶ್ಲೋಕಗಳಿಂದ ಲಿಂಗಧಾರಣವೇ ಶ್ರೇಷ್ಠವೆಂತಲೂ ಬ್ರಹ್ಮವೇ ಲಿಂಗವೆಂತಲೂ ಬ್ರಾಹ್ಮಣನು ಲಿಂಗ ಧರಿಸತಕ್ಕದ್ದೆಂದು ಋಗ್ವೇದ ಶಾಸ್ತ್ರ, ಪುರಾಣ, ಆಗಮಗಳಲ್ಲಿ ಹೇಳಿದೆಯೆಂದು ವ್ಯಾಸರೇ ಹೇಳಿದ್ದಾರೆ.

ಮಹಾಭಾರತದಲ್ಲಿ ಬ್ರಾಹ್ಮಣ ಶಬ್ದಕ್ಕೆ ಹೀಗೆ ಅರ್ಥವು ಹೇಳಲ್ಪಟ್ಟಿದೆ.

ಜನ್ಮನಾ ಜಾಯತೆ ಶೂದ್ರಃ ಕರ್ಮಣಾ ಜಾಯತೆ ದ್ವಿಜಃ।
ವೇದಾಭ್ಯಾಸೇನ ವಿಪ್ರಸ್ಸ್ಯಾದ್ಬ್ರಹ್ಮವಿದ್ ಬ್ರಾಹ್ಮಣೋಭವೇತ್॥

ಅಂದರೆ ಜನ್ಮದಿಂದ ಶೂದ್ರನಾಗುತ್ತಾನೆ. ಧರ್ಮದಿಂದ ದ್ವಿಜನಾಗುವನು, ವೇದಾಭ್ಯಾಸದಿಂದ ವಿಪ್ರನಾಗುವನು, ಬ್ರಹ್ಮವನ್ನು ತಿಳಿದವನು ಬ್ರಾಹ್ಮಣನಾಗುತ್ತಾನೆ.

ಗಾರುಡ ಪುರಾಣದಲ್ಲಿ ಹೇಳಿರುವದೇನಂದರೆ—

ವಂಶಾವಳಿ ಪ್ರಯಾತಾನಾಂ ಲಿಂಗಧಾರಣ ಮಾಲಿನಾಂ।
ಜ್ಞಾನಿನಾಂ ಶಿವಭಕ್ತಾನಾಂ ಶೂದ್ರತ್ವಂ ನೈವವಿದ್ಯತೆ॥

ವಂಶ ಪರಂಪರೆಯಿಂದ ಲಿಂಗ ಧರಿಸುತ್ತ ಬಂದವರೂ ಜ್ಞಾನಿಗಳೂ ಆದ ಶಿವಭಕ್ತರಿಗೆ ಶೂದ್ರತ್ವವುಂಟಾಗುವದಿಲ್ಲ.

ಮಹಾಭಾರತದ ಅನುಶಾಸನ ಪರ್ವದಲ್ಲಿ ಧರ್ಮರಾಯನು ಭೀಷ್ಮನನ್ನು ದಾನ ಮಾಡುವ ಕಾಲದಲ್ಲಿ ಹೀಗೆ ಕೇಳಿದ್ದಾನೆ.

ಕಿಮಾಹುರ್ಭರತ ಶ್ರೇಷ್ಠ ವಿಪ್ರಾಃ ಪಾತ್ರಂ ಸನಾತನಂ।
ಲಿಂಗಿನಂ ಬ್ರಾಹ್ಮಣಂ ಚೈವ ಬ್ರಾಹ್ಮಣಂ ಚಾಪ್ಯ ಲಿಂಗಿನಂ॥

ಅಂದರೆ ಪಾತ್ರರಾದ ವಿಪ್ರರೆಂದು ಯಾರಿಗನ್ನಬೇಕು? ಲಿಂಗವುಳ್ಳ ಬ್ರಾಹ್ಮಣರಿಗೋ ಅಥವಾ ಲಿಂಗವಿಲ್ಲದ ಬ್ರಾಹ್ಮಣರಿಗೋ? ಇದರಿಂದ ಆ ಕಾಲದಲ್ಲಿ ಲಿಂಗವಿದ್ದ ಬ್ರಾಹ್ಮಣರಿದ್ದರೆಂದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

ಇದಕ್ಕೆ ಭೀಷ್ಮನು ಹೀಗೆ ಉತ್ತರ ಕೊಟ್ಟಿದ್ದಾನೆ—

ಸದ್ವೃತ್ತಿಮಪಿ ವಿಜ್ಞಾಯ ಲಿಂಗಿನೇತರಾಯಚ।
ದೇಯು ಮಾಹುರ್ಮಹಾರಾಜ ಪ್ರಭಾವೇತೋ ತಪಸ್ವಿನಾ ॥

ಅಂದರೆ ಸದಾಚಾರವನ್ನು ತಿಳಿದುಕೊಂಡು ಲಿಂಗಧಾರಿಗಳಿಗೂ ಇತರರಿಗೂ ದಾನಕೊಡತಕ್ಕದ್ದೆಂತಲೂ ಅವರೀರ್ವರೂ ತಪಸ್ವಿಗಳೆಂತಲೂ ಹೇಳಿರುವನು. ಗೌತಮ ಸ್ಮೃತಿಯಲ್ಲಿಯೂ ಸಹ ಹೀಗಿರುವದು—

ಮುಖೇಮಂತ್ರೌ ಹೃದಿಧ್ಯಾನಂ ಮಸ್ತಕೆ ಲಿಂಗ ಧಾರಣಂ।
ಶಿಖಾ ರುದ್ರಾಕ್ಷ ಭಸ್ಮಾನಿ ಇತಿ ಬ್ರಾಹ್ಮಣ ಲಕ್ಷಣಂ ॥

ಅಂದರೆ ಬಾಯಲ್ಲಿ ಮಂತ್ರವೂ, ಹೃದಯದಲ್ಲಿ ಧ್ಯಾನವೂ, ಮಸ್ತಕದಲ್ಲಿ ಲಿಂಗಧಾರಣ, ಶಿಖಾ ರುದ್ರಾಕ್ಷ, ಭಸ್ಮಗಳನ್ನು ಧರಿಸುವದೂ ಬ್ರಾಹ್ಮಣ ಲಕ್ಷಣವೆಂದು ಹೇಳಿದೆ.

ವೀರಶೈವರು ವೇದವನ್ನು ಮಾನ್ಯಮಾಡುವರು. ಆದರೆ ಯಜ್ಞ ಮೊದಲಾದ ಕರ್ಮಗಳಿಗೆ ಒಪ್ಪರು. ಕರ್ಮಕಾಂಡವು ಹಿಂಸಾಮಯವಾದದ್ದೆಂದು ಅವರು ಅವುಗಳನ್ನು ತಮ್ಮ ಗ್ರಂಥಗಳಲ್ಲಿ ಖಂಡಿಸಿರುವರು. ವೀರಶೈವರಲ್ಲಿ ಜ್ಞಾನಕ್ಕೆ ಹೆಚ್ಚು ಪ್ರಾಧಾನ್ಯವಿದೆ. ವೇದಗಳು ಹೇಗೆ ಅನಾದಿ ಪರಮಾತ್ಮನಿಂದ ಬೋಧಿಸಲ್ಪಟ್ಟಿರುವವೋ ಹಾಗೆಯೇ ವೀರಶೈವರಿಗೆ ಆಧಾರ ಗ್ರಂಥಗಳಾದ ೨೮ ಆಗಮಗಳು ಅನಾದಿ ಪರಮಾತ್ಮನಿಂದ ಬೋಧಿಸಲ್ಪಟ್ಟವೆ. ಆಗಮಗಳು ವೇದಕ್ಕೆ ವಿರೋಧವಾಗಿರದೆ ಅವುಗಳಿಗನುಕೂಲವಾಗಿ ಇವೆ. ಋಗ್ವೇದದ ಕಾಲವು ಕ್ರಿ. ಪೂರ್ವ ೪೦೦೦ ವರ್ಷಗಳ ಹಿಂದೆಯೇ ಇರಬೇಕೆಂದು ಲೋ. ಬಾಲ ಗಂಗಾಧರ ತಿಲಕರು ತಮ್ಮ 'ಓರಿಯನ್ ಅಥವಾ ವೇದಗಳ ಪ್ರಾಚೀನತ್ವ' ಎಂಬ ಗ್ರಂಥದಲ್ಲಿ ಸಿದ್ಧಮಾಡಿರುವರು. ಮಹಾಭಾರತದ ಕಾಲವಾದರೂ ಕ್ರಿ. ಪೂರ್ವ ೧೦೦೦ ವರ್ಷವೆಂದು ಕೆಲವು ಚರಿತ್ರಕಾರರ ಮತವು. ಆದ್ದರಿಂದ ಬಸವನ ಕಾಲವಾದ ಕಿ. ಶ. ೧೨ ನೇ ಶತಮಾನಕ್ಕಿಂತ ಮೊದಲು ವೀರಶೈವ ಮತವಿತ್ತೆಂದು ತಾನೇ ಸಿದ್ಧವಾಯಿತು. ಇನ್ನು ಇತ್ತೀಚಿಗೆ ಆಗಿರುವ ಹೊಸ ಶೋಧಗಳನ್ನು ನೋಡುವ.

ಬೆಳಗಾವ ಜಿಲ್ಲೆಯಲ್ಲಿರುವ ಹೂಲಿ ಎಂಬ ಗ್ರಾಮದ ಪಂಚವಣ್ಣಿಗೆ ಮಠವು ಬಹು ಪುರಾತನವಾದದ್ದು. ಆ ಮಠಕ್ಕೆ ಶ್ರೀ. ಸಿದ್ಧಚೈತನ್ಯ ಶಿವಾಚಾರ್ಯರೆಂಬವರು ಮೊದಲಿನ ಪಟ್ಟದ ಸ್ವಾಮಿಗಳಾದರು. ಇವರು ಇಂದಿಗೆ ಎರಡು ಸಾವಿರದ ಎರಡನೂರಾ ಹತ್ತೊಂಭತ್ತು ವರ್ಷಗಳ ಹಿಂದೆ ಅಂದರೆ ಕ್ರಿ. ಪೂ. ೨೯೨ರಲ್ಲಿ ಪಟ್ಟವನ್ನೇರಿ ೧೫೧ ವರ್ಷ ಅಧಿಕಾರ ನಡಿಸಿದರೆಂದು ಮಠದ ಪಟ್ಟಾವಳಿಯಿಂದ ಗೊತ್ತಾಗುವದು. ಇವರು ಯೋಗಬಲದಿಂದ ಇಷ್ಟು ಕಾಲ ಜೀವಿಸಿದರು. (ಈಗ ಕಾನ್‌ಸ್ಟಾಂಟಿನೋಪಲ್ಲಿನಲ್ಲಿ ೧೫೬ ವರ್ಷದವನೊಬ್ಬನಿದ್ದಾನೆ.) ಈ ಸಿದ್ಧಚೈತನ್ಯರು ವ್ಯಾಸರ ಮೂಲ ಬ್ರಹ್ಮಸೂತ್ರಗಳನ್ನೂ ಪೂವಲ್ಲಿ ಸಿದ್ಧಚೈತನ್ಯರ ಚೈತನ್ಯವೃತ್ತಿಯನ್ನೂ ನೀಲಕಂಠ ಶಿವಾಚಾರ್ಯರ ಭಾಷ್ಯವನ್ನೂ ಮಥಿಸಿ ತಮ್ಮ ಗ್ರಂಥವನ್ನು ಬರೆದ ಗ್ರಂಥಕಾರರು ಹೇಳಿದ್ದಾರಲ್ಲದೆ ಇವರ ತರು

ವಾಯು ಸ್ವಾಮಿಗಳಾದ ಶಿವಾನುಭವ ಶಿವಾಚಾರ್ಯರು ತಮ್ಮ ಶಿವಾದ್ವೈತ ದರ್ಪಣದಲ್ಲಿಯೂ ಹೇಳಿದ್ದಾರೆ. ಈ ಸಂಗತಿಯು ಹೂಲಿಯ ಮದನಾಸುರನ ಗುಡಿಯಲ್ಲಿಯೂ ಕೆರೆಸಿದ್ಧೇಶ್ವರನ ಗುಡಿಯಲ್ಲಿಯೂ ಇರುವ ಎರಡು ಶಿಲಾಲಿಪಿಗಳಲ್ಲಿಯೂ ಇದೆ. ಈ ಶೋಧನೆಯನ್ನು ಮ. ರಾ. ಚನ್ನಮಲ್ಲಪ್ಪ ಗಲಗಲಿ ಇವರು ಮಾಡಿ ಶಿವಾನುಭವ ತ್ರೈಮಾಸಿಕದ ೭ ನೇ ಸಂಚಿಕೆಯಲ್ಲಿ (೧೯೨೭ ನೇ ಇಸ್ವಿ) ಒಂದು ಲೇಖವನ್ನು ಬರೆದಿದ್ದಾರೆ.

ಅಗಸ್ತ್ಯಋಷಿಗೆ ವೀರಶೈವ ತತ್ವವನ್ನು ಬೋಧಿಸಿದ ರೇಣುಕರು ಕ್ರಿ. ಪೂ. ೨೦೦೦ ವರ್ಷಗಳ ಹಿಂದೆ ಇದ್ದರೆಂದು ಚರಿತ್ರೆ ಬೋಧೆಯಲ್ಲಿ ಹೇಳಿದೆ.

ಮಿ॥ ಲುಯಿರಾಯಿಸರು ತಮ್ಮ "ಮೈಸೂರು ಮತ್ತು ಕೂರ್ಗ" ಎಂಬ ಗ್ರಂಥದ ೨೧೦ ನೇ ಪುಟದಲ್ಲಿ ಗಂಗವಂಶದ ವೀರಪ್ಪನೆಂಬ ರಾಜನು ಕ್ರಿ. ಶ. ೮೫೦ ರಲ್ಲಿ ರಾಜ್ಯವಾಳುತ್ತಿದ್ದ ಕಾಲದಲ್ಲಿಯು ಶಿಲಾಲಿಪಿಗಳಲ್ಲಿ ವೀರಶೈವ ಸೂಚಕರ ಶಿಲಾಚಿತ್ರಗಳಿರುವವೆಂದು ಬರೆದಿದ್ದಾರೆ. ಇವರೇ ಇನ್ನೊಂದು ಕಡೆಗೆ ಏಕಾಂತ ರಾಮಯ್ಯನೆಂಬವರು ೫೦೦ ಜಂಗಮರೊಡನೆ ಬದಾಮಿಯ ಹತ್ತರ ಐಹೊಳಿಯಲ್ಲಿದ್ದರೆಂತಲೂ ವೀರಶೈವ ಧರ್ಮಪ್ರಸಾರವನ್ನು ಇವರೇ ಮೊದಲು ಕೈಕೊಂಡರೆಂತಲೂ ಇವರ ಕಾರ್ಯವನ್ನೇ ಬಸವನು ಮುಂದುವರಿಸಿದನೆಂತಲೂ ಹೇಳಿದ್ದಾರೆ.

ಮಿ॥ ಫ್ಲೀಟರು ತಮ್ಮ ಕನ್ನಡನಾಡಿನ ವಂಶಾವಳಿ [*Dynasties of Kanarese Districts*] ಎಂಬ ಪುಸ್ತಕದಲ್ಲಿ ಕ್ರಿ. ಶ. ೧೦೧೮ರಿಂದ ೧೦೪೦ ರವರೆಗೆ ಪೋಟಲಕರೆಯಲ್ಲಿ ಆಳಿದ ಚಾಲುಕ್ಯ ವಂಶದ ೨ನೇ ರಾಜನಾದ ಜಯಸಿಂಹನು ದೇವರ ದಾಸಿಮಯ್ಯನಿಂದ ವೀರಶೈವ ದೀಕ್ಷೆಯನ್ನು ಹೊಂದಿದನೆಂದು ಬರೆದಿದ್ದಾರೆ. ಈ ರಾಜನ ಹೆಂಡತಿಯಾದ ಸುಗ್ಗಲದೇವಿಯು ವೀರಶೈವಳಿದ್ದುದರಿಂದ ತನ್ನ ಗುರುವಾದ ದೇವರದಾಸಿಮಯ್ಯನಿಂದ ಬೋಧೆ ತೆಗೆದುಕೊಳ್ಳುತ್ತಿದ್ದುದರಿಂದ ಜೈನರು ಇದನ್ನು ಸಹಿಸದೆ ರಾಜನಿಗೆ ಚಾಡಿಹೇಳಲು ಅವನು ಹೆಂಡತಿಯನ್ನು ಕರೆದು ಇದನ್ನು ಕೇಳಿದನು. ಆಕೆಯು ಅದಕ್ಕೆ ತನ್ನ ಗುರುವಿನ ಕೂಡ ಜೈನ ಪಂಡಿತರು ವಾದಮಾಡಿ ಯಾರು ಗೆಲಿಯುತ್ತಾರೋ ಅವರ ಮತವನ್ನು ನಾವಿಬ್ಬರೂ ಅನುಸರಿಸೋಣವೆಂದು ಹೇಳಲಾಗಿ

ರಾಜನು ಒಪ್ಪಿದನು. ಆಗ ನಡೆದ ವಾದದಲ್ಲಿ ದೇವರದಾಸಿಮಯ್ಯನು ಜಯಹೊಂದಲು ರಾಜನೂ, ಪುಷ್ಪಸೇನನೆಂಬ ಜೈನ ಪಂಡಿತನೂ ಆತನ ಶಿಷ್ಯರನೇಕರೂ ವೀರಶೈವ ದೀಕ್ಷೆಯನ್ನು ಹೊಂದಿದರೆಂದು ಬಸವ ಪುರಾಣದಲ್ಲಿಯೂ ಹೇಳಿದೆ.

ಮಿ॥ ಫಿಲಪ್‌ಚಾನ್ರರು "*Karnatak Chronology*" ಎಂಬ ಗ್ರಂಥದಲ್ಲಿ ಕ್ರಿ. ಶ. ೫೦೦ ರಲ್ಲಿ ಪಾಂಡ್ಯ ವಂಶಕ್ಕೆ ಸೇರಿದ ೨ನೇ ರಾಜನು ಆಳುತ್ತಿದ್ದನು. ಅವನು ವೀರಶೈವ ಧರ್ಮಕ್ಕೆ ಅನುಕೂಲವಾಗಿದ್ದನು.

ಕ್ರಿ. ಶ. ೯೪೧ ರಲ್ಲಿ ಕಂಚಿಯಲ್ಲಿ ಶಿವಕೋಟಿ ಎಂಬ ರಾಜನು ಆಳುತ್ತಿದ್ದನು. ಆಗ ಅಕಳಂಕನೆಂಬ ಜೈನ ಪಂಡಿತನು ವೀರಶೈವರ ಪಕ್ಷ ಹಿಡಿದು ಬೌದ್ಧರೊಡನೆ ವಾದಮಾಡಿ ಜಯಿಸಿದನೆಂದು ಜೈನ ಗ್ರಂಥವಾದ ಅಕಳಂಕ ಚರಿತ್ರೆಯಲ್ಲಿ ಹೇಳಿದೆ.

ಕ್ರಿ. ೭೩೧ ರಲ್ಲಿ ಕಾಶಿಯಲ್ಲಿ ರಾಜ್ಯವಾಳುತ್ತಿದ್ದ ಜಯನಂದರಾಜನು ಅಲ್ಲಿಯ ಜಂಗಮವಾಡೀ ಮಠಕ್ಕೆ ಜಂಗಮಪುರವನ್ನು ಉಂಬಳಿ ಕೊಟ್ಟನೆಂದು ತಾಮ್ರ ಶಾಸನದಿಂದ ತಿಳಿದು ಬರುತ್ತದೆ.

ಆನಂದಗಿರಿಯು 'ಶಂಕರ ದಿಗ್ವಿಜಯದಲ್ಲಿ ಶಂಕರಾಚಾರ್ಯರು ತಲೆಯಲ್ಲಿ ಲಿಂಗ ಧರಿಸಿದ ಜಂಗಮರೊಂದಿಗೆ ವಾದಮಾಡಿದರೆಂದು ಬರೆದಿದ್ದಾನೆ. ಶಂಕರಾಚಾರ್ಯರು ಕ್ರಿ. ಶ, ೮೦೦ ರಲ್ಲಿ ಇದ್ದರು.

ಮಿ. ಆರ್. ಎಸ್. ವೇದಾಚಲಂ ಎಂಬವರು '*Tamil Antiquary*' ಎಂಬ ಮಾಸಿಕದಲ್ಲಿ ನಕ್ಕೀರರ್ ಎಂಬ ತಮಿಳು ಕವಿಯು ಕ್ರಿ. ಶ. ೧೦೦ರಲ್ಲಿದ್ದವನೂ, ತಿರುವುಳ್ಳುವರ್ ಎಂಬ ಶಿವಶರಣನು ಕ್ರಿ. ಶ. ೩೦೦ರಲ್ಲಿದ್ದವನೂ ಇದೇ ವೇಳೆಯಲ್ಲಿದ್ದ ಮಾಣಿಕ್ಯವಾಚಕರ್ ಎಂಬ ಶರಣನೂ ವೀರಶೈವರಿದ್ದರೆಂದು ಬರೆದಿದ್ದಾರೆ.

ನೀಲಕಂಠರೆಂಬವರು ಕ್ರಿ. ಶ. ೭೯೫ ರಲ್ಲಿ ವೇದಕ್ಕೆ ಭಾಷ್ಯವನ್ನು ಬರೆದರು. ಇವರು ವೀರಶೈವರಿದ್ದು ಇವರಿಗೆ ಗೋವಿಂದಗುರು ಮತ್ತು ಶಂಕರಾಚಾರ್ಯರು ಶಿಷ್ಯರಾಗಿದ್ದರು. ಇವರು ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟಿದ್ದರಿಂದ ಶಂಕರಾಚಾರ್ಯರು ತಮ್ಮ ಗ್ರಂಥಗಳಲ್ಲಿ ಇವರನ್ನು ಹೊಗಳಿದ್ದಾರೆ.

ಎ. ಇ. ಪಿ. ರಾಯಿಸರು ತಮ್ಮ *History of Kanarese Literaure* ಎಂಬ ಪುಸ್ತಕದಲ್ಲಿ "*Lingayetism did not origin-ate as is often mistakenly thought with Basava in the 12th century. He was only the propagator and reformer of what had been from ancient times one form of religious faith and practice*....ಲಿಂಗಾಯತ ಮತವು ೧೨ನೇ ಶತಮಾನದಲ್ಲಿ ಬಸವನಿಂದ ಹುಟ್ಟಲಿಲ್ಲ. ಪುರಾತನ ಕಾಲದಿಂದ ಬಂದ ಧರ್ಮವನ್ನು ಆತನು ಸುಧಾರಿಸಿ ಪ್ರಸಾರ ಮಾಡಿದನು" ಎಂದು ಬರೆದಿದ್ದಾರೆ. ಇವೆಲ್ಲ ಆಧಾರಗಳ ಮೇಲಿಂದ ಲಿಂಗಾಯತ ಮತವು ಪುರಾತನವಾದದ್ದೆಂದು ಸಿದ್ಧವಾಗುತ್ತದೆ.

---

## ಅಷ್ಟಾವರಣದ ಮಹಿಮೆ.

ಸಂಗ್ರಾಹಕ:— ಶ್ರೀಯುತ ಚನಬಸಪ್ಪಗೌಡ ಪಾಟೀಲ ಮು॥ ಒಡೇಇಡ

ಸೋಡು ತಾಲೂಕ ಸೊರಬ ಜಿಲ್ಲಾ ಶಿವಮೊಗ್ಗ.

---

ಕಂದ॥ ಗುರುಲಿಂಗ ಜಂಗಮವು ।
ವರಪಾದೋದಕ ಪ್ರಸಾದ ರುದ್ರಾಕ್ಷಿಗಳು ॥
ಶ್ರೀ ವಿಭೂತಿಯು ಮಂತ್ರವು ।
ಪರಮುಕ್ತಿದಷ್ಟವರಣ ಗುರು ನಂದೀಶಾ ॥೧॥
ತೀರ್ಥವೆ ತಾಪತ್ರಯ ಹರ ।
ತೀರ್ಥವೆ ಕರಿಸಂಖ್ಯವದನ ಪರಿಹರಿಸುವುದೂ ॥
ತೀರ್ಥವೆ ಮುಕ್ತಿಯುಗುರುಪದ ।
ತೀರ್ಥಕಿಂದಧಿಕವಿಲ್ಲ ಗುರುನಂದೀಶಾ ॥೨॥
ಲಿಂಗವೆಸಕಲಕ್ಕಾದಿಯು ।
ಲಿಂಗದ ಆದ್ಯಂತವನ್ನು ಹರಿಯಜ ಸುರರೂ ॥

ಲಿಂಗದಿ ಸರ್ವವು ಪುಟ್ಟಿತು ।
ಲಿಂಗದ ಅಂಗದಲಿ ಲೋಕವಿಹುದು ಗುರುನಂದೀಶಾ ॥೩॥

ಲಿಂಗದಪೀಠವು ಬ್ರಹ್ಮನು ।
ಲಿಂಗದಗೋಮುಖವೆ ವಿಷ್ಣುವೆಂಬುದು ವೇದಂ ॥
ಲಿಂಗದ ಗೋಳಕ ರುದ್ರನು ।
ಲಿಂಗವೆ ಅಧಿದೈವ ಕೇಳೊ ಗುರುನಂದೀಶಾ ॥೪॥

ಜಂಗಮನೆ ಜಗಕೆ ಪೂಜ್ಯನು ।
ಜಂಗಮನೆ ಜನ್ಮರಹಿತವೆಂದಾಗಮವೊ ॥
ಜಂಗಮನೆ ಜಾತಿವರ್ಜಿತ ।
ಜಂಗಮರಿಂದಧಿಕವಿಲ್ಲ ಗುರು ನಂದೀಶಾ ॥೫॥

ಧರೆಯೊಳು ಕ್ಷೇತ್ರಗಳುತ್ತಮ ।
ಗಿರಿಗಳೊಳುರಜತಾದ್ರಿ ಅಧಿಕ ಪಶುಗಳೊಳಾವು ॥
ಹರಗುರುವಿಂದಲಿ ಶ್ರೇಷ್ಠವು ।
ವರಜಂಗಮ ಮುಕ್ತಿದಾತ ಗುರುನಂದೀಶಾ ॥೬॥

ಪಾದೋದಕ ಪಾಪನಾಶನ ।
ಪಾದೋದಕ ಪಾನದಿಂದ ಪಾವನನಹೆನು ॥
ಪಾದೋದಕ ಪುಣ್ಯಾವರ್ಧನ ।
ಪಾದೋದಕಕ್ಕಧಿಕವಿಲ್ಲ ಗುರುನಂದೀಶಾ ॥೭॥

ಗಂಗೆಯು ಯಮುನೆಯು ಸರಸ್ವತಿ ।
ತುಂಗೆಯು ಕಾವೇರಿ ಸಿಂಧು ಗೋದಾವರಿಯೂ ॥
ಮಂಗಳ ನರ್ಮದೆ ಯಿಂದಲು ।
ಜಂಗಮ ಪಾದೋದಕಧಿಕ ಗುರು ನಂದೀಶಾ ॥೮॥

ಜಗದೊಳ್ ಪ್ರಸಾದದ ಮಹಿಮೆಯ
ಪೊಗಳಲು ಫಣಿಪತಿಗಸಂಖ್ಯ ಆದ ಬರೆಯಲ್ಕೆ
ಅಗಣಿತ ಸಾಸಿರ ಕರನಿಗೆ ।
ಮಿಗಿಲಾದವರೇನ ಪೇಳಬಲ್ಲರು ಗುರುವೇ ॥೯॥

ಪ್ರಸಾದವೆ ಪರಮ ಸುಖಕರ ।
ಪ್ರಸಾದವೆ ಪಾಪನಾಶನವ ಮಾಡುವದೂ ॥

ಪ್ರಸಾದವೆ ಪವಿತ್ರರೂಪವು।
ಪ್ರಸಾದವೆ ಪರಶಿವೈಕ್ಯನೀವುದು ಗುರುವೇ ॥೧೦॥

ವಿಭೂತಿಯು ವಿಭವದಾಯಕ।
ವಿಭೂತಿಯು ವಿಶ್ವವಶ್ಯವ ಮಾಡುವದು॥
ವಿಭೂತಿಯು ವಿಘ್ನನಾಶಕ।
ವಿಭೂತಿಯು ವಿಪುಳಸಿದ್ಧಿ ನೀವುದು ಗುರುವೇ ॥೧೧॥

ಹರಗುರು ಜಂಗಮ ಋಷಿಗಣ॥
ಶರಣದ್ವಿಜದೇವ ದನುಜ ಮುನಿಸಿದ್ಧರಿಗೆ॥
ಹರಿಯಜ ಗಜಮುಖ ಗುಹನಿಗೆ।
ಸಿರಿಕರ ವಿಭೂತಿಬೇಕು ಗುರುನಂದೀಶಾ ॥೧೨॥

ರುದ್ರಾಕ್ಷಿಯು ಪರಮಪಾವನ।
ರುದ್ರಾಕ್ಷಿಯ ಧರಿಸಿದಲ್ಲಿ ಪದವುಂಟು॥
ರುದ್ರಾಕ್ಷಿಯು ಮೋಕ್ಷದಾಯಕ।
ರುದ್ರಾಕ್ಷಿಯ ಮಹಿಮೆಗೆಣೆಯುಂಟಾಕೆನು ಗುರುವೇ ॥೧೩॥

ಪಾಡಲು ಪಾತಕ ಪಂಚಕ।
ಓಡುವದೈ ಭೂತಪ್ರೇತ ಮಾರಿಗ್ರಹಗಳ್॥
ಬೇಡಿದ ಫಲಸಿದ್ಧಿಯೀವುದು।
ನೋಡಿದು ರುದ್ರಾಕ್ಷಿ ಮಹಿಮೆ ಗುರುನಂದೀಶಾ ॥೧೪॥

ಆರಕ್ಷರ ಮಂತ್ರವಧಿಕವು।
ಆರಕ್ಷರ ಅಮಿತ ಸಿದ್ಧಿಫಲದಾಯಕವು॥
ಆರಕ್ಷರ ಆದಿವರ್ಣವು।
ಆರಕ್ಷರ ಅಧಿಕವೀವುದೈ ಗುರುನಂದೀಶಾ ॥೧೫॥

ಪಂಚಾಕ್ಷರಿ ಮೋಕ್ಷದಾಯಕ।
ಪಂಚಾಕ್ಷರಿ ಮಂತ್ರಮಾತೆ ವೇದಾಧಿಕವು॥
ಪಂಚಾಕ್ಷರಿ ಪರಮದೇವತೆ।
ಪಂಚಾಕ್ಷರಿಮಹಿಮೆ ಪೇಳಲಳವೆ ಗುರುನಂದೀಶಾ ॥೧೬॥



ಶಿವಾನುಭವ ಗ್ರಂಥಮಾಲಾ ನಂ. ೧೮

ಸೊಗ್ಗೆಯ ಮಾಯಿದೇವಕೃತ

# ಶಿವಾನುಭವ ಸೂತ್ರ.



ಪಂಡಿತ

ವೈ. ನಾಗೇಶಶಾಸ್ತ್ರಿಗಳು

ಕನ್ನಡ ಪಂಡಿತ ವಾರ್ಡ್ಲಾ ಹೈಸ್ಕೂಲ್ ಬಳ್ಳಾರಿ

ಇವರಿಂದ ಟೀಕಿಸಲ್ಪಟ್ಟಿತು.

೧ನೇ ಆವೃತ್ತಿ

೧೯೨೯

# ಮುನ್ನುಡಿ.

---

ಅಗಣಿತ ಚೇತನಾಚೇತನಾತ್ಮಕವಾದ ಈ ಜಗತ್ತಿಗೆ ಮೂಲ ಕಾರಣಗಳು ಬಹಳವಿರುವವೆಂದು ಮಾನವ ಜಾತಿಯು ಬಾಲ್ಯಾವಸ್ಥೆಯಲ್ಲಿ ನೆರೆನಂಬಿದ್ದರೂ ಮಾನವರ ಜ್ಞಾನದ ಅಭಿವೃದ್ಧಿಯಾಗಿ ತತ್ತ್ವವಿಚಾರವು ಹೆಚ್ಚಿದಂತೆ ಈ ಅನಂತವಾದ ಸೃಷ್ಟಿಗೆ ಮೂಲಕಾರಣ ವಸ್ತುವು ಒಂದೇ ಇರುವದೆಂತಲೂ ಆ ವಸ್ತುವಿನಿಂದಲೇ ನಾಮರೂಪಾತ್ಮಕವಾದ ಜಗತ್ತು ಹುಟ್ಟಿದುದೆಂತಲೂ ತತ್ತ್ವವೇತ್ತರು ನಿಶ್ಚಯಿಸತೊಡಗಿದರು. ಏಕಂ ಸತ್ ವಿಪ್ರಾ ಬಹುಧಾ ವದಂತಿ' (ಋಗ್ವೇದ ೧೦.೮೨-೩) ಎಂಬ ಋಗ್ವೇದ ಮಂತ್ರವು ಪ್ರಪಂಚೋತ್ಪತ್ತಿಯನ್ನು ತಿಳಿದುಕೊಳ್ಳುವುದಕ್ಕೆ ಮಾನವರ ಬುದ್ಧಿಯು ತತ್ತ್ವವಿಚಾರದಲ್ಲಿ ಹೊಂದಿದ ಅನುಭವದ ಪರಮಾವಧಿಯನ್ನು ಸೂಚಿಸುವುದು. ಹೀಗೆ ಮೂಲ ಕಾರಣದ ಏಕತ್ವವು ಸ್ಫುರಣವಾದೊಡನೆ ಆ ಕಾರಣದ ಸ್ವರೂಪವನ್ನು ತಿಳಿದುಕೊಳ್ಳುವದಕ್ಕೆ ತತ್ತ್ವವೇತ್ತರೊಳಗೆ ತರ್ಕಗಳು ಪ್ರಾರಂಭವಾದವು. ಈ ತಾರ್ಕಿಕ ಕಾಲವೇ ಜನಾಂಗದಲ್ಲಿ ಮತದ ಸ್ಫುರಣವನ್ನುಂಟುಮಾಡಿದುದು. ಚರಿತ್ರ ದೃಷ್ಟಿಯಿಂದ ಈ ಕಾಲವನ್ನು ನಿಶ್ಚಯಿಸುವದು ಕಷ್ಟವು.

ಮತಗಳು.—ಪ್ರಪಂಚದ ಮೂಲಕಾರಣವು ಜಡವೆಂದು ಕೆಲವರೂ, (ಸಾಂಖ್ಯಾದಿ ಮತದವರು) ಚೈತನ್ಯವೆಂದು ಕೆಲವರೂ, (ವೇದಾಂತಿಗಳು) ಜಡಚೈತನ್ಯಾತ್ಮಕವೆಂದು ಕೆಲವರೂ, (ರಾಮಾನುಜಾದಿಗಳು) ವಾದಿಸುತ್ತಿರುವರು. ಮತ್ತು ಆ ಕಾರಣ ವಸ್ತುವನ್ನು ನಿರ್ಗುಣವೆಂದು ಕೆಲವರೂ (ಶಂಕರಾದಿಗಳು) ಸಗುಣವೆಂದು ಕೆಲವರೂ, (ರಾಮಾನುಜಾದಿಗಳು) ಪ್ರತಿಪಾದಿಸುವರು. ಕಾರಣ ವಸ್ತುವು ಕಾರ್ಯರೂಪವಾದ ಪ್ರಪಂಚಕ್ಕಿಂತ ಭಿನ್ನವಲ್ಲವೆಂದು ಕೆಲವರು (ಶಂಕರಾದಿಗಳು) ಭಿನ್ನವೆಂದು ಕೆಲವರು, (ಮಧ್ವಾದಿಗಳು) ಭಿನ್ನಾಭಿನ್ನವೆಂದು ಕೆಲವರೂ, (ನಿಂಬಾರ್ಕಾದಿಗಳು) ತರ್ಕಿಸುವರು. ಹೀಗೆ ನಮ್ಮ ದೇಶದಲ್ಲಿ ಅದ್ವೈತಾದಿ ನಾಮದಿಂದಲೂ, ಪಾಶ್ಚಾತ್ಯ ದೇಶಗಳಲ್ಲಿ ಮೊನಿಜಮ್ (ಏಕತ್ವವಾದ) ಪ್ಯಾಂಥೀಜಮ್ [ಪ್ರಪಂಚ ಪರಮಾತ್ಮೈಕ್ಯಮತ] ಎಂಬ ಹೆಸ

ರಿನಿಂದಲೂ ಪುರಾತನ ಕಾಲದಿಂದ ಅನೇಕ ಮತದರ್ಶನಗಳು ಉಂಟಾಗಿರುವವು. ಹಿಂದೂ ದೇಶದಲ್ಲಿ ಬುದ್ಧ, ಶಂಕರ, ನೀಲಕಂಠ ಮೊದಲಾದವರೂ, ಪಾಶ್ಚಾತ್ಯ ದೇಶದಲ್ಲಿ ಜನೋಫೆನ್ಸ್, ಪ್ಲೋಟಿನಸ್, ಸ್ಪೈನೊಜಾ, ಹೀಗಲ್, ಹೇಕೆಲ್ ಮೊದಲಾದವರೂ ತಮ್ಮ ಮತ ಸಿದ್ಧಾಂತದಲ್ಲಿ ಅನೇಕತರದ ಬುದ್ಧಿ ಚಾತುರ್ಯವನ್ನು ತೋರಿಸಿರುವರು. ಈ ಎಲ್ಲಾ ಮತಗಳ ವಿವೇಚನೆಯು ಪ್ರಕೃತ ಕಾರ್ಯವಲ್ಲ. ಆದರೆ ಶಂಕರನ ಅದ್ವೈತಕ್ಕೂ ವೀರಶೈವರ ಶಿವಾದ್ವೈತಕ್ಕೂ ನಿಕಟಸಂಬಂಧ ವಿರುವುದೆಂದು ಕೆಲವರು ಭ್ರಾಂತಿಗೊಳ್ಳುವರು. ಆದ್ದರಿಂದ ಶಂಕರನ ಮತದ ಸ್ವರೂಪವನ್ನಿಷ್ಟು ವಿಚಾರಿಸಿ, ವೀರಶೈವ ಸಿದ್ಧಾಂತದ ಸ್ವರೂಪವೇನೆಂಬುವದನ್ನು ತಿಳಿದುಕೊಳ್ಳುವುದೇ ಪ್ರಕೃತ ಕಾರ್ಯವಾಗಿರುವುದು.

ಶಾಂಕರಮತಃ— ಶಂಕರನ ಮತವನ್ನು ಕೇವಲಾದ್ವೈತವೆಂದು ಕರೆಯಬಹುದು. ಜೀವಾತ್ಮ ಪರಮಾತ್ಮರು ಬೇರೆಬೇರೆಂಬುದಾಗಿಯೂ, ಬ್ರಹ್ಮವೂ ಜಗತ್ತುಗಳೆರಡೂ ಸತ್ಯಪದಾರ್ಥಗಳೆಂಬುದಾಗಿಯೂ ಹೇಳುವುದೇ ದ್ವೈತವು. ಇದಕ್ಕೆ ವ್ಯತಿರೇಕವಾಗಿ ಅಂದರೆ ಜೀವಾತ್ಮನು ಪರಮಾತ್ಮನೇ ಭಿನ್ನನಲ್ಲ. ಬ್ರಹ್ಮವೊಂದೇ ಸತ್ಯವು, ಜಗತ್ತು ಮಿಥ್ಯವು [ಸುಳ್ಳು] ಎಂದು ಹೇಳುವುದೇ ಶಂಕರನ ಮತವು. "ಬ್ರಹ್ಮ ಸತ್ಯಂ ಜ ಥ್ಯಾ ಜೀವೋ ಬ್ರಹ್ಮೈವ ನಾಪರಃ" ಎಂಬ ವಾಕ್ಯದಲ್ಲಿ ಶಂಕರನ ಸಿದ್ಧಾಂತವು ಸಂಗ್ರಹಿಸಲ್ಪಟ್ಟಿದೆ.

ವೀರಶೈವಮತಃ— ವೀರಶೈವರ ಅದ್ವೈತವು ಕೇವಲಾದ್ವೈತವಲ್ಲ. ಶಕ್ತಿವಿಶಿಷ್ಟಾದ್ವೈತವು. ಇದನ್ನೇ ಶಿವಾದ್ವೈತವೆಂದೂ, ವಿಶೇಷಾದ್ವೈತವೆಂದೂ ಕರೆಯುವರು. ವೀರಶೈವರ ತತ್ವ ವಿಚಾರವು ಇತರ ಮತಗಳಿಗಿಂತಲೂ ಬಹಳ ಮುಂದುವರಿದಿರುವುದು. ಬೀಜದಲ್ಲಿ ಗಿಡವಾಗುವ ಶಕ್ತಿಯು ಅಡಗಿರುವಂತೆ ಜೀವನಲ್ಲಿ ದೇವರಾಗುವ ಶಕ್ತಿಯಡಗಿರುವುದು. ಬೀಜ-ವೃಕ್ಷಗಳ ತಾದಾತ್ಮ್ಯ ಸಂಬಂಧವೇ ಜೀವ-ದೇವರುಗಳಲ್ಲಿರುವುದು. ಬೀಜವು ಮೊಳೆತು, ಬೆಳೆದು ಗಿಡವಾಗುವುದಕ್ಕೆ ಸ್ಥಲಜಲಕಾಲಾದಿಯೇ ಸಾಧನವು. ಅಂತೆ ಜೀವನು ವಿಕಾಸಹೊಂದಿ ದೇವರಾಗುವುದಕ್ಕೆ ಸಾಧನವಾದುದೇ ಮತತತ್ವವೆಂಬುದನ್ನು ವೀರಶೈವರು ಚನ್ನಾಗಿ ಪರಿಶೋಧಿಸಿರುವರು. ವೀರಶೈವವು ಜೀವ-ಜಗತ್ತುಗಳನ್ನು ಮಿಥ್ಯವೆಂಬು

ವುದಿಲ್ಲ. ದೇಹವನ್ನಲ್ಲಗಳೆಯುವದಿಲ್ಲ. ವೃತ್ತಿಯನ್ನು ತುಚ್ಛಮಾಡುವುದಿಲ್ಲ. ಭೋಗವನ್ನು ದುಃಖಪ್ರದವೆಂದು ಜರಿಯುವದಿಲ್ಲ. ಈ ಜಗದಾದಿಗಳೇ ಜೀವವಿಕಾಸಕ್ಕೆ ಮುಖ್ಯ ಸಾಧನವೆಂದು ಹೇಳುವುದು. ಜೀವ ಜಗತ್ತುಗಳು ದೇವರ ಅಂಶಗಳೇ. ಜೀವನಿಗೆ ದೇಹವು ದೇವಾಲಯವು. ಅವನು ತನ್ನ ವಿಕಾಸರೂಪನಾದ ದೇವರನ್ನು ದೇಹದಲ್ಲಿಟ್ಟು ಪೂಜಿಸುವನು. ಜೀವನ ವೃತ್ತಿಗಳೆಲ್ಲವೂ ದೇವರ ಪೂಜೆಯೇ. ಜೀವನಭೋಗವೇ ದೇವರ ಪ್ರಸಾದವು. ಆ ಪ್ರಸಾದದಿಂದಲೇ ಜೀವನು ವಿಕಾಸ ಹೊಂದುವನು. ಅಂದರೆ ದೇವರಾಗುವನು. ಮತ್ತು ದೇವರ ಶಕ್ತಿಯೇ ಬಂಧಕವು. (ಪ್ರವೃತ್ತ್ಯುನ್ಮುಖಿ) ಜೀವನ ಶಕ್ತಿಯೇ ಬಂಧವಿಮೋಚಕವು. (ನಿವೃತ್ತ್ಯುನ್ಮುಖಿ) ಅಂತಹ ಬಂಧವಿಮೋಚಕ ಶಕ್ತಿಯೇ ಭಕ್ತಿಯು. ಆ ಭಕ್ತಿಯಿಂದ ಕೂಡಿದವನೇ ಶಿವಾದ್ವೈತಕ್ಕೆ ಅಧಿಕಾರಿಯು. ಎಂಬುವೇ ಮೊದಲಾದ ಅನೇಕ ಮಾರ್ಮಿಕ ತತ್ವಗಳ ಗುಟ್ಟನ್ನು ವೀರಶೈವ ಸಿದ್ಧಾಂತವು ತೋರಿಸಿಕೊಡುವುದು. ಇದರಿಂದ ಶಂಕರನ ಮತಕ್ಕೂ ವೀರಶೈವರ ವಿಚಾರಕ್ಕೂ ಇರುವ ಅಂತರವೇನೆಂಬುದು ಸುವಿಚಾರಿಗಳಿಗೆ ಹೊಳೆಯದಿರಲಾರದು.

ಶಿವಾನುಭವ ಸೂತ್ರ.— ಮೇಲೆ ಸೂಚಿಸಿದ ವೀರಶೈವ ಸಿದ್ಧಾಂತವನ್ನು 'ಶಿವಾನುಭವ ಸೂತ್ರ' ವೆಂಬ ಗ್ರಂಥವು ವಿಶದವಾಗಿ ಪ್ರತಿಪಾದಿಸುವುದು. ಈ ಗ್ರಂಥವು ಸಂಸ್ಕೃತ ಭಾಷೆಯಲ್ಲಿರುವದು. ಇದರಲ್ಲಿ ೮ ಅಧಿಕರಣಗಳಿರುವವು. ಸೂತ್ರಗಳೆಲ್ಲವೂ ಸುಮಾರು ೪೬೬ ಇದ್ದು ಶ್ಲೋಕಾತ್ಮಕವಾಗಿರುವವು. ಇದು ಮೈಸೂರು ಯಜಮಾನ ವೀರಸಂಗಪ್ಪನವರಿಂದ ಮುದ್ರಿಸಲ್ಪಟ್ಟಿದೆ. ೧೮೯೭ ನೇ ಸಂವತ್ಸರದಲ್ಲಿ ಏಲೂರಿನ ತ್ರಿಪುರ ಸುಂದರೀ ಮುದ್ರಾಕ್ಷರ ಶಾಲೆಯಲ್ಲಿಯೂ ಮುದ್ರಿತವಾದ ಮತ್ತೊಂದು ಪ್ರತಿಯು ನಮ್ಮಲ್ಲಿರುವುದು. ಗ್ರಂಥದಲ್ಲಿ ಪ್ರತಿಪಾದಿತವಾದ ವಿಷಯಾನುಕ್ರಮಣಿಕೆಯು ಪ್ರಥಮಾದಿ ಕರಣದಲ್ಲಿಯೇ ವಿಸ್ತಾರವಾಗಿ ಹೇಳಲ್ಪಡುವದರಿಂದ ಆ ವಿಷಯ ವಿವೇಚನೆಯನ್ನು ಇಲ್ಲಿ ಕೊಟ್ಟಿಲ್ಲವು.

ಸೂತ್ರಕಾರ.— ಶಿವಾನುಭವ ಸೂತ್ರದ ಕರ್ತೃಗಳು ಮಗ್ಗೆಯ ಮಾಯಿದೇವರು. ಮಲಪ್ರಹಾರೀನದಿಯ ತೀರದಲ್ಲಿರವ ಐಪುರ ಕ್ಷೇತ್ರವೇ ಇವರ ಜನ್ಮಸ್ಥಾನವು. ಈ ಸೂತ್ರಕಾರರ ಸ್ಥಾನ ವಂಶ ಮೊದ

ಲಾದ ವಿಷಯವು ಶಿವಾನುಭವ ಸೂತ್ರದ ಪ್ರಥಮಾಧಿಕರಣದಲ್ಲಿ ಇನ್ನೂ ಸ್ಫುಟವಾಗಿ ತಿಳಿಯಲ್ಪಡುವದು. ವಿರೂಪಾಕ್ಷ ಪಂಡಿತನ [೧೫೮೪] ಚನ್ನಬಸವ ಪುರಾಣದಲ್ಲಿಯು

ಎಲೆ ರಾಮ ಕೇಳಿನ್ನು ಸಕಲಾಗಮಂಗಳಿಗೆ।
ನೆಲೆಯೆನಿಪ ಪ್ರೌಢನಿಂ ಪೂಜೆಯಂ ಕೊಂಡು ಷ।
ಟ್ಸ್ಥಲ ಮಾರ್ಗಮಂ ಸಕಲ ಶಿವಭಕ್ತ ಸಂತತಿಗೆ ಕರತಳಾಮಳಕವಾಗಿ॥
ತಿಳಿವೊಲನುಭವಸೂತ್ರವಾದಿ ಶಾಸ್ತ್ರಂಗಳಂ।
ಗೆಲವಿನಿಂ ಪೇಳ್ದು ನಿಜಶಿವಸಮಾಧಿಯಲಿ ಮಿಗೆ।
ನಲವಿನಂದಲ್ಲಿ ಮಗ್ಗೆಯ ಮಾಯಿದೇವಪ್ರಭುವರನಿರದೆ ಮುಕ್ತ
ನಹನು॥

ಎಂಬ ಪದ್ಯದಿಂದ ಇವರು ವಿಜಯನಗರದ ರಾಜನಾದ ಪ್ರೌಢರಾಯನ ಕಾಲದಲ್ಲಿದ್ದಂತೆ ತಿಳಿವುದರಿಂದ ಇವರ ಕಾಲವು ಸುಮಾರು ೧೪೩೦ಆಗ ಬಹುದೆಂದು ಕರ್ನಾಟಕ ಕವಿ ಚರಿತ್ರಕಾರರು ಬರೆದಿರುವರು. ಶಾಂತ ಲಿಂಗದೇಶಿಕನ [೧೬೭೨] ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರ ದಿಂದಲೂ, ಸಿದ್ಧನಂಜೇಶನ (೧೬೫೦) ಗುರುರಾಜಚಾರಿತ್ರದಿಂದಲೂ, ತೋಂಟದಾರ್ಯರ (೧೫೬೦) ಪಾಲ್ಕುರಿಕೆ ಸೋಮೇಶ್ವರ ಪುರಾಣ ದಿಂದಲೂ, ಮಗ್ಗೆಯ ಮಾಯಿದೇವರು ವೀರಶೈವರಿಗೆ ನರಕವಿಲ್ಲೆಂದು ವಿದ್ಯಾನಗರದಲ್ಲಿ ನೆಳಲಿಲ್ಲದ ಜಯಸ್ತಂಭವನ್ನು ನಿಲ್ಲಿಸಿದರೆಂದು ತಿಳಿದು ಬರುವದರಿಂದ ಸೂತ್ರಕಾರರು ವೀರಶೈವ ನಿಜಾಚರಣೆಯ ಶಕ್ತಿಯನ್ನು ಚನ್ನಾಗಿ ಸಂಪಾದಿಸಿದ್ದರೆಂದು ತೋರುತ್ತದೆ. ಇವರಿಗೆ ಇದ್ದ "ಭವತ ವಿಭೇದಿ, ಷಟ್ಸ್ಥಲ ಬ್ರಹ್ಮವಾದಿ"ಯೆಂಬ ಬಿರುದೇ ಇವರ ಅದ್ವಿತೀಯ ಪಾಂಡಿತ್ಯಕ್ಕೆ ನಿದರ್ಶನವಾಗಿರುವದು. ಇವರು ಸಂಸ್ಕೃತದಲ್ಲಿ ವಿಶೇ ಷಾರ್ಥ ಪ್ರಕಾಶಿಕೆಯನ್ನು ಬರೆದಿರುವರು. ಮತ್ತು ಕನ್ನಡದಲ್ಲಿ ಪ್ರಭುಗೀತೆ, ಏಕೋತ್ತರ ಶತಸ್ಥಲಷಟ್ಪದಿ, ಷಟ್ಸ್ಥಲ ಗದ್ಯ, ಶತಕತ್ರಯ, ಮಗ್ಗೆಯ ಮಾಯಿದೇವನ ವಚನ, ಎಂಬ ಗ್ರಂಥಗಳನ್ನು ಬರೆದಿರುವಂತೆ ಕವಿಚರಿ ತ್ರೆಗಳಿಂದ ತಿಳಿದುಬರುತ್ತಿದೆ. ಇವರ ಸೂತ್ರಗಳು ಸುಲಭ ಶೈಲಿಯಲ್ಲಿ ರಚಿಸಲ್ಪಟ್ಟಿದ್ದರೂ ಬ್ರಹ್ಮ ಸೂತ್ರಾದಿಗಳಂತೆ ಬಹ್ವರ್ಥಗರ್ಭಿತವಾಗಿರುವು ದರಿಂದ ಸೂತ್ರಗಳೆಂಬ ಹೆಸರು ಸಾರ್ಥಕವಾಗಿರುವುದು.

ಶಿವಾನುಭವ ಸೂತ್ರಸಾರಃ— ಶಿವಾನುಭವಿಗಳೂ ಮಹಾತ್ಮರೂ ಅದ್ವಿತೀಯ ಪಂಡಿತರೂ ಆದ ಮಾಯಿದೇವರ ಸೂತ್ರಗಳ ನಿಜಾಂಶವನ್ನು ಕಂಡುಕೊಳ್ಳುವುದು ನಡೆಯಲ್ಲಿ ಹಿಂದುಳಿದು ನುಡಿಯಿಂದ ಬಡಬಡಿಸುವ ನಮಗೆ ಕಷ್ಟತರವೆಂಬುದು ಸಹಜ. ಆದರೂ, ಆ ಸೂತ್ರಗಳ ಸಾರವನ್ನು ನಮ್ಮ ಅಲ್ಪ ಮತಿಗೆ ತೋರಿದಷ್ಟು ಸಂಗ್ರಹಿಸಿ 'ಶಿವಾನುಭವ ಸೂತ್ರಸಾರ' ವೆಂಬ ಹೆಸರಿನಿಂದ ಕನ್ನಡದಲ್ಲಿ ಪ್ರಕಟಸಬೇಕೆಂಬ ಕುತೂಹಲವು ನಮಗೆ ತಲೆದೋರಿದ್ದಿತು. ಶಿವಾನುಭವ ಪತ್ರಿಕಾ ಸಂಪಾದಕರೂ ಈ ಕುತೂಹಲವನ್ನು ಪೂರ್ಣಮಾಡಲು ಒಪ್ಪಿದರು. ಆದ್ದರಿಂದ ಇನ್ನು ಮುಂದೆ ಶಿವಾನುಭವ ಪತ್ರಿಕೆಯಲ್ಲಿ ಇದು ಪ್ರಕಟವಾಗುತ್ತಿರುವದು. ಈ ಶಿವಾನುಭವ ಸೂತ್ರ ಸಾರದ ಗುಣ ದೋಷ ವಿಮರ್ಶನವು ವೀರಶೈವ ತತ್ವಜ್ಞರದಾಗಿರುವದೆಂದು ನಂಬಿರುವೆವು. ಶಿವಾನುಭವ ಸೂತ್ರದ ಮೂಲ ಗ್ರಂಥವು ಕಟ್ಟಕಡೆಗೆ ಪ್ರಸಿದ್ಧಿಸಲ್ಪಡುವುದು.



ಓಂ ತತ್ ಸತ್.

# ಶಿವಾನುಭವ ಸೂತ್ರ.

## ಪ್ರಥಮಾಧಿಕರಣಂ

ಕಂದ॥ ಪರಶಿವ ಕಮಲಾಂತರದೊಳ್ ।
ಪರಿಶೋಭಿಪ ದೃಕ್ಕ್ರಿಯಾ ಸುಮಧುವಂ ಪೀರ್ದು ॥
ನೆರೆ ಸುಖಿಪ ಭೃಂಗಭಾವವ ।
ಕರುಣಿಸಿದಾ ಗುರುಚರಗೇ ವಂದಿಪೆನೊಲವಿಂ ॥

### ಸೂತ್ರಕಾರನ ಮಂಗಳವು.

ಈ ಸೂತ್ರಗಳಿಂದ ಗ್ರಂಥದ ನಿರ್ವಿಘ್ನ ಪರಿಸಮಾಪ್ತ್ಯರ್ಥವಾಗಿಯೂ, ಶಿಷ್ಯ ಶಿಕ್ಷಾರ್ಥವಾಗಿಯೂ ಸೂತ್ರಕಾರನು ಗ್ರಂಥಾದಿಯಲ್ಲಿ ಮಂಗಳವ ನ್ನಾಚರಿಸಿರುವನು.

ಸೂ. ೧. ತತ್ವಾದಿಷಡಧ್ವಗಳೂ, ಶ್ರೀ ಷಡಕ್ಷರೀ ವಿದ್ಯೆಯೂ, ಭಕ್ತಾದಿಯಾದ ೬ ಅಂಗಸ್ಥಲದಲ್ಲಿ ನೆಲೆಗೊಂಡ ಷಡ್ವಿಧ ಭಕ್ತಿಯೂ, ಆಚಾರಾದಿ ಷಡ್ಲಿಂಗಸ್ಥಲ ರೂಪಿಯಾದ ಬ್ರಹ್ಮಮೂರ್ತಿಯೂ ಜಯಶೀಲ ರಾಗಿರುತ್ತಾರೆ.

ಗುರುಃ— (ಸೂ ೨) ಅವಾಚ್ಯಾತ್ಮ ಸ್ವರೂಪಪನೂ, (ವಾಕಿಗೆ ನಿಲು ಕದ ಆತ್ಮ ರೂಪನು) ಷಟ್ಸ್ಥಲ ಬ್ರಹ್ಮ ಮೂರ್ತಿಯೂ, ಶಿವಭಾವ ಪ್ರದಾತನೂ ಆದ ಸದ್ಗುರುನಾಥನಿಗೆ. ನಮಸ್ಕಾರವು.

ಶಿವ:—— (ಸೂ. ೩) ಸ್ವಯಂಪ್ರಾಪ್ತವಾದ ನಾಮವೂ, (ಇತರರಿಂದ ಇಡದ) ಸ್ವಭಾವ ಸಿದ್ಧವಾದ ಮಹಿಮೆಯೂ [ಇತರರಿಂದ ಕೊಡದು] ಉಳ್ಳಾತನೂ, ತನ್ನಲ್ಲಿ ಲಯವಾಗುವ ೩೬ ತತ್ವಗಳಿಗೆ ಅಖಂಡಧಾಮನೂ ತನ್ನ ಮಾಯೆಯಿಂದ ಕಲ್ಪಿತವಾದ ಭೂತಭೂಮನೂ ಆದ ಶಿವನಿಗೆ ನಮಸ್ಕಾರವು.

ಶಕ್ತಿ:—(ಸೂ. ೪) ಶಿವಪ್ರಸಾದದಿಂದ ಪ್ರಾಪ್ತವಾದ ಅಮಲ ವಿಗ್ರಹಳೂ, ಮಂಗಳರೂಪಳೂ, ಶಿವವಲ್ಲಭೆಯೂ ಆಗಿ, ಶಿವನ ಅನುಭೂತಿ, ಪ್ರತಿಭೆ, ಕಲೆಗಳೇ [ಶಾಂತ್ಯತೀತೋತ್ತರಾದಿಗಳು] ತಾನಾಗಿರುವ ಶಿವಪ್ರದಳಾದ ಉಮೆಗೆ ನಮಸ್ಕಾರವು.

ಐಪುರಾಧೀಶ್ವರಃ—(ಸೂ. ೪ ೫) ಸಚ್ಚಿದಾನಂದ ಸಂಜ್ಞೆಯುಳ್ಳ ಯಾವ ಶಿವನು, ಯಾವ ಶಕ್ತಿಯು ೩ ಮಾತ್ರೆಗಳುಳ್ಳ 'ಉಮಾ' ಎಂಬ ನಾಮವೇ ವ್ಯತ್ಯಸ್ತವಾಗಿ "ಓಂ" ಎಂಬ ಪ್ರಣವವಾಯಿತೋ, ಅಂತಹ ಉಮೆಯೊಡನೆ ಉಪಾಸಿತನಾದ್ದರಿಂದ ಸೋಮನೆಂದು ಪ್ರಸಿದ್ಧನಾಗಿರುವನೋ ಆ ಐಪುರಾಧೀಶ್ವರನಿಗೆ ಆನತನಾಗಿರುವೆನು.

ಐಪುರೀ—[ಸೂ. ೬-೭-೮] ಯಾವುದು, ಐಕಾರಾಭಿಧೇಯನಾದ ಈಶ್ವರನ ಐಶ್ವರ್ಯ ರೂಪವಾದ ವಪುವೂ, ಪರಂಧಾಮವೂ ಆಗಿರುವುದರಿಂದ "ಐಪುರ" ವೆಂದು ಪ್ರಸಿದ್ಧವಾಗಿರುವುದೊ, ಯಾವುದು, ತ್ರಿದಿಶಾಪಥಗೆಯೂ (ಆದ್ದರಿಂದಲೇ) ತ್ರಿಮಲನಾಶಿನಿಯೂ ಆದ ತೀರ್ಥವೆಂದು ಪ್ರಸಿದ್ಧವಾಗಿರುವ ಮಲಾಪಹಾರಿಣೀ ನಾಮಕ ಗಂಗೆಯ ತೀರದ ಕ್ಷೇತ್ರವಾಗಿರುವುದೊ; ಎಲ್ಲಿ, ಸೋಮಾರ್ಧಶೇಖರನಾದ ಸೋಮೇಶ್ವರನು ಪ್ರೀತಿಯಿಂದ ಸನ್ನಿಹಿತನಾಗಿರುವನೊ, ಭವಪಾಶನಾಶಕವಾದ ಆ ಐಪುರಿಯನ್ನು ವಂದಿಸುವೆನು.

ಐಪುರಸೋಮನಾಥಃ—[ಸೂ. ೯] ಯಾವಾತನು, ಪ್ರಸಿದ್ಧನೂ, ಸರ್ವಲೋಕವ್ಯಾಪಿಯೂ ಆದ ತನ್ನ ತೇಜಸ್ಸಿನಿಂದ ಸೂರ್ಯಚಂದ್ರಾಗ್ನಿ ಮೊದಲಾದ ತೇಜೋವಸ್ತುಗಳನ್ನು ಪ್ರಕಾಶಪಡಿಸುತ್ತ, ವಿಮಲವಿದ್ಯಾಜನ್ಮಸ್ಥಾನವಾದ ಐಪುರದಲ್ಲಿ ವಾಸಮಾಡುತ್ತಿರುವನೋ, ಆ ಐಪುರಸೋಮನಾಥನು ಸರ್ವೋತ್ಕೃಷ್ಟನಾಗಿ ವರ್ತಿಸಲಿ.

## ವಿಚಾರ.

ಪ್ರತಿಯೊಂದು ಗ್ರಂಥಾದಿಯ ಮಂಗಳದಿಂದ ಮಂಗಳಕರ್ತೃಗಳ ಮತಾದಿಗಳು ಕೆಲವುಮಟ್ಟಿಗೆ ವ್ಯಕ್ತವಾಗುತ್ತಿರುವವು. ಅಂತೆಯೇ ಈ ಮಂಗಳದಲ್ಲಿ ಷಡಧ್ವಶುದ್ಧ್ಯಾದಿಮಂಗಳದಿಂದ ಷಡಧ್ವಶುದ್ಧಿಪೂರ್ವಕ ದೀಕ್ಷೆಯೂ, ಮತ್ತು ದೀಕ್ಷಾಂಗವೂ, ಮತಕ್ಕೆ ಮೂಲಮಂತ್ರವೂ ಆದ ಷಡಕ್ಷರಿಯೂ, ಷಡಕ್ಷರೀ ಮಂತ್ರಾತ್ಮಕ ಶಿವತತ್ತ್ವಾಭಿವ್ಯಕ್ತಿಗೆ ಸಾಧನವಾದ

ಭಕ್ತಿಯೂ, ಭಕ್ತಿಗವ್ಯನಾದ ಷಟ್ಸ್ಥಲಬ್ರಹ್ಮನೂ, ಆ ಬ್ರಹ್ಮೋಪದೇಶಕನೂ, ಷಟ್ಸ್ಥಲ ತತ್ವವೇತ್ವನೂ ಆದ ಗುರುವೂ ಇವೇ ಮೊದಲಾದುವು ತನ್ನ ವೀರಶೈವಮತದ ಮುಖ್ಯ ವಿಷಯಗಳೆಂಬುದನ್ನು ಸೂತ್ರಕಾರನು ವ್ಯಕ್ತಗೊಳಿಸಿರುವನು. ಮತ್ತು ಸೋಮಶಬ್ದ ನಿರ್ವಚನದಿಂದ ಪ್ರಣವವೇ ಉಮೆಯೂ, ಪ್ರಣವಾರ್ಥವೇ ಮಹೇಶ್ವರನೂ, ಶಬ್ದಾರ್ಥಗಳಲ್ಲಿರುವ ನಿತ್ಯ ಸಂಬಂಧವೇ ಆ ಉಮಾಮಹೇಶ್ವರರಲ್ಲಿಯೂ ಇರುವುದೆಂದು ತಿಳಿದು ಬರುವುದರಿಂದ ವೀರಶೈವಸಿದ್ಧಾಂತವಾದ ಶಕ್ತಿವಿಶಿಷ್ಟ ಶಿವಾದ್ವೈತವು ಒಡೆದುತೋರುವುದು. ಮತ್ತು ಐಪುರದ ಮಹತ್ವ ಕಥನದಿಂದ ತತ್ಪುರವಾಸಿಯೇ ಸೂತ್ರಕಾರನೆಂದು ಊಹಿಸಬಹುದಾಗಿದೆ.

## ಸೂತ್ರಕಾರನ ವಂಶಪರಿಚಯ.

೧೩ ಸೂತ್ರಗಳಿಂದ ಸೂತ್ರಕಾರನ ವಂಶೋತ್ಕರ್ಷವು ನಿರೂಪಿಸಲ್ಪಟ್ಟಿದೆ.

ಸೂ. ೧೦—೨೩ ಐಪುರದಲ್ಲಿ ಸೋಮನಾಥನ ಅನುಗ್ರಹರೂಪವಾದ ಜ್ಞಾನಕ್ರಿಯಾಚಾರಸಮೇತ ತಪೋಬಲದಿಂದ ದೇಶಿಕನೂ ಆದಿಗುರುವೂ ಆದ ಉಪಮನ್ಯುಶಿವಾಚಾರ್ಯನು ಪ್ರಥಮದಲ್ಲಿ ಹುಟ್ಟಿದನು. ಈ ಉಪಮನ್ಯು ಮುನೀಶ್ವರನ ಮಗ ಭೀಮನಾಥ, ಮಗ ಕಳೀಶ್ವರ, ಮಗ ಬೊಪ್ಪನಾಥ, ಮಗ ನಾಕರಾಜ, ಮಗ ಸಂಗಮೇಶ್ವರನೆಂದು ಅನುಕ್ರಮವಾಗಿ ಹುಟ್ಟಿರುವರು. ಇವರೆಲ್ಲರೂ ವೀರಶೈವಸಿದ್ಧಾಂತಕೋವಿದರೂ ಜ್ಞಾನಕ್ರಿಯಾಚಾರ ಗರಿಷ್ಠರೂ ಉಪದೇಶಕರ್ತರೂ ಆಗಿದ್ದರು. ಸಂಗಮೇಶ್ವರ ಪ್ರಭುವಿನಿಂದ ಸೂತ್ರಕಾರನಾದ ಮಾಯಿದೇವನು ಜನಿಸಿದನು. ಈತನಿಗೆ 'ಕಲ್ಯಾಣದ ಎಂಬ ಹೆಸರೂ ಉಂಟು. ಕಲ್ಯಾಣಕಾಂಕ್ಷಿಗಳಾದ ತನ್ನ ಭಕ್ತರಿಗೆ ನಿತ್ಯ ಕಲ್ಯಾಣದಾತನಾದುದರಿಂದ ಕಲ್ಯಾಣದನೆಂತಲೂ, ಮಾಯಿಯೆಂದರೆ ವಿಷ್ಣುವು ಅವನಿಗಿಂತಲೂಪರವಾದ (ಅಧಿಕನಾದ) ದೇವನು(ಶಿವನು) ಆದುದರಿಂದ ಮಾಯಿದೇವನೆಂತಲೂ ಪ್ರಸಿದ್ಧನಾಗಿ ಸೂತ್ರಕಾರನು ಕಲ್ಯಾಣದ ಮಾಯಿದೇವ ಎಂಬ ಶಿವಪರ್ಯಾಯನಾಮಗಳಿಂದಂಕಿತನೂ ಶಿವಾತ್ಮನೂ ಆಗಿರುವನು. ಈ ಮಾಯಿದೇವನು ಸತ್ಯ ಶುದ್ಧ ಶಿವಾದ್ವೈತ ವಿದ್ಯಾತಂತ್ರಸ್ವತಂತ್ರಧಿ ಎಂದು ಪ್ರಖ್ಯಾತನಾದನು. ಮತ್ತು ವೀರಶೈವಾತ್ಮ ವಿದ್ಯಾಧಿದೈವನೂ ಕುಮತಮತ ವಿಭೇದಿಯೂ,

ಷಟ್ಸ್ಥಲಬ್ರಹ್ಮವಾದಿಯೂ, ಗುರುಪದ ನಿಜಭಕ್ತನೂ, ಅನಾದಿ ಮುಕ್ತ ಸ್ವರೂಪನೂ, ಶಿವಮಾರ್ಗವರ್ತಿಯೂ ಆಗಿ ಮಹಾತ್ಮನಾದ ಮಾಯಿದೇವ ಪ್ರಭುವು ಸರ್ವೋತ್ಕೃಷ್ಟನಾಗಿರುವನು.

## ವಿಚಾರ.

ಮಾಯಿದೇವನು ತನ್ನ ವಂಶದ ಗುಣಕಥನದಿಂದ ತನ್ನ ಸದ್ವಂಶವನ್ನೂ ಗುರುತ್ವವನ್ನೂ, ಸದಾಚಾರವನ್ನೂ, ಸಂಪ್ರದಾಯಸಿದ್ಧ ಪಾಂಡಿತ್ಯವನ್ನೂ ವ್ಯಕ್ತಗೊಳಿಸಿ ತನ್ಮೂಲಕ ತನ್ನಲ್ಲಿರುವ ಶಿವಾಗಮೋಕ್ತ ವೀರಶೈವ ಸಿದ್ಧಾಂತ ಸಂಗ್ರಾಹಕ ಸೂತ್ರಗಳ ರಚನಾಶಕ್ತಿಯನ್ನು ಪುಷ್ಟೀಕರಿಸಿರುವನು.

## ಅನುಬಂಧ ಚತುಷ್ಟಯ ಮತ್ತು ಸೂತ್ರಪ್ರಾಮಾಣ್ಯ.

೧೨ ಸೂತ್ರಗಳಿಂದ ಅನುಬಂಧ ಚತುಷ್ಟಯವನ್ನು ಸೂಚಿಸುವುದಲ್ಲದೆ ಸೂತ್ರ ಪ್ರತಿಪಾದಿತ ಸಿದ್ಧಾಂತದ ಪ್ರಾಮಾಣ್ಯವನ್ನೂ ಬಲಪಡಿಸುವನು.

ಸೂತ್ರ ೨೪ ಶಿವಾದ್ವೈತಪರನೂ, ಪರಂಪರಾಗತವಾದ ಪಾವನ ಸಂಪ್ರದಾಯವುಳ್ಳವನೂ, ಆದ ಮಾಯಿದೇವ ಮಹಾತ್ಮನು ಶಿವನಿಂದ ದೇವಿಗೆ ಹೇಳಲ್ಪಟ್ಟ ರಹಸ್ಯವಾದ ಷಟ್ಸ್ಥಲ ನಿರ್ಣಯವನ್ನು ತನ್ನ ಸೂತ್ರಗಳಲ್ಲಿ ಸಂಗ್ರಹಿಸಿರುವನು. [ನಾನು ಸಂಗ್ರಹಿಸಿರುವೆನೆಂದು ಭಾವವು]

ಸೂ. ೨೫—೨೭ ಶಿವೋಕ್ತವಾದ ಕಾಮಿಕಾದಿ ವಾತುಲಾಂತವಾದ ಆಗಮಗಳಲ್ಲಿ ವಾತುಲಾಗಮೇ ಸರ್ವ ಶ್ರೇಷ್ಠವಾದುದು. ಅದು ಪೂರ್ವೋತ್ತರ ಭಾಗಗಳಾಗಿರುವುದು. ಉತ್ತರ ಭಾಗದಲ್ಲಿ ತಂತ್ರೋತ್ತರ ಪ್ರದೀಪವೆಂಬ ಹೆಸರಿನ ಶಿವ ಸಿದ್ಧಾಂತ ತಂತ್ರವಿರುವದು. ಆ ತಂತ್ರದಲ್ಲಿ ಶಿವನು ಶಿವೆಗೆ ಷಟ್ಸ್ಥಲ ನಿರ್ಣಯವನ್ನು ಹೇಳಿರುವನು. ಆದನ್ನೆ ನಾನು ಹೇಳುವೆನು.

ಸೂ೨೮-೩೪ ಶ್ರುತಿಸ್ಮೃತಿ ಇತಿಹಾಸ ಶಿವಧರ್ಮಾದಿ ಶಾಸ್ತ್ರ, ಪರಮಾರ್ಥಗಳಾದಶಿವಾದ್ವೈತರಹಸ್ಯಗಳುಳ್ಳ ಶಿವಾಗಮಂಗಳು ಉಪನಿಷದ್ವಾಕ್ಯಗಳು ಪುರಾಣಗಳು ಗೀತಗಳು ಇವೆಲ್ಲವುಗಳಲ್ಲಿಯೂ ಷಟ್ಸ್ಥಲ ನಿರ್ಣಯಾತ್ಮಕವಾದ ಶಿವಸಿದ್ಧಾಂತ ತಂತ್ರವು ಹೇಳಲ್ಪಟ್ಟದೆ. ಮತ್ತು ಗುರೂಕ್ತಿ, ಸ್ವಾನುಭವ, ಯುಕ್ತಿ, ಪ್ರಮಾಣ ಇವುಗಳಿಂದಲೂ ಷಟ್ಸ್ಥಲ ನಿರ್ಣಯವು ಸಿದ್ಧವಾ

ಗಿದೆ. ಆಧಾರಭೂತವಾದ ಇವೆಲ್ಲವುಗಳ ಸಾರವನ್ನು ತೆಗೆದುಕೊಂಡು, ಶಿವೋಕ್ತವಾದ ಷಟ್ಸ್ಥಲ ನಿರ್ಣಯಾತ್ಮಕ ಶಿವಸಿದ್ಧಾಂತ ತಂತ್ರವನ್ನು ಸಂಗ್ರಹ ರೂಪದಿಂದ ಹೇಳುವೆನು. ಯಾವ ಸಿದ್ಧಾಂತ ಸಂಗ್ರಹದ ವಿವಕ್ಷೆ [ಹೇಳಲಿಚ್ಛೆ] ಯಿರುವುದೋ ಅದನ್ನು ಮಾತ್ರ ಕೆಲವು ಸೂತ್ರಗಳಿಂದ ಸಮಾಪ್ತಿಗೊಳಿಸುವುದೇ ನನ್ನ ಕಾರ್ಯವು. ವಿಸ್ತೃತವಾದನ್ಯ ವಿಷಯಗಳಿಂದೇನು ಪ್ರಯೋಜನ?

## ವಿಚಾರ.

ಅನುಬಂದಚತುಷ್ಟಯಃ— ಶಾಸ್ತ್ರದ ವಿಷಯ ಪ್ರಯೋಜನ ಅಧಿಕಾರಿ ಸಂಬಂಧವೆಂಬುವೆ ಅನುಬಂಧ ಚತುಷ್ಟಯವು-ಶಾಸ್ತ್ರದಲ್ಲಿ ಪ್ರತಿಪಾದಿತವೆ ವಿಷಯ. ಅದರ ಜ್ಞಾನದ ಫಲವು ಪ್ರಯೋಜನ. ಶಾಸ್ತ್ರಾಭ್ಯಾಸಕ್ಕೆ ಅರ್ಹನು ಅಧಿಕಾರಿ. ಶಾಸ್ತ್ರಕ್ಕೂ ಅದರಲ್ಲಿ ಪ್ರತಿಪಾದಿಸುವ ವಿಷಯಕ್ಕೂ ಪ್ರತಿಪಾದ್ಯಪ್ರತಿಪಾದಕಭಾವ ಸಂಬಂಧವಿರುವುದು. ಅಂತೆ ಈ ಶಿವಾನುಭವ ಶಾಸ್ತ್ರದ ಪ್ರತಿಪಾದ್ಯ ವಿಷಯವೆಂದರೆ ಷಟ್ಸ್ಥಲ ಸಿದ್ಧಾಂತವು. ತತ್ಸಿದ್ಧಾಂತ ಜ್ಞಾನವೂ, ತದಾಚರಣದಿಂದುಂಟಾಗುವ ಶಿವತ್ವಾಭಿವ್ಯಕ್ತಿ ರೂಪವಾದ ಮೋಕ್ಷವೂ ಪ್ರಯೋಜನವಾಗಿರುವುದು. ಶಿವಸಿದ್ಧಾಂತದಲ್ಲಿ ಉತ್ಕಟೇಚ್ಛೆಯೂ, ಶಿವಭಕ್ತಿಯೂ ಉಳ್ಳವನೇ ಅಧಿಕಾರಿಯು. ಸೂತ್ರಗಳಿಗೂ ಸಿದ್ಧಾಂತಕ್ಕೂ ಪ್ರತಿಪಾದ್ಯ ಪ್ರತಿಪಾದಕಭಾವ ಸಂಬಂಧವೂ ಇರುವುದು. ಈ ಅನುಬಂಧ ಚತುಷ್ಟಯವು ಮೇಗಣ ಸೂತ್ರಗಳಿಂದ ಸೂಚಿತವಾಗಿದೆ. ಹೇಗೆಂದರೆ:— ವಿಷಯವು ಷಟ್ಸ್ಥಲ ನಿರ್ಣಯವೆಂಬುದು ಸೂತ್ರಕಾರನಿಂದಲೇ ಉಕ್ತವಾಗಿದೆ. ಗುರೂಪದೇಶದಂತೆ ಆಚರಿಸಿದ ಶಿಷ್ಯನು ಗುರುವೇ ಆಗುವಂತೆ ಶಿವೋಪದೇಶ ರೂಪವಾದ ಷಟ್ಸ್ಥಲ ನಿರ್ಣಯದ ಜ್ಞಾನವನ್ನೂ ಅದರ ಆಚರಣವನ್ನೂ ಪಡೆದ ಜೀವನು ಶಿವನೇ (ಮುಕ್ತನು) ಆಗುವನೆಂಬುದು ಶಿವೋಕ್ತಸಿದ್ಧಾಂತವೇ ನನ್ನಿಂದ ಹೇಳಲ್ಪಡುತ್ತದೆಂಬುದರಿಂದ ಸೂಚಿತವಾಗಿ, ಶಾಸ್ತ್ರ ಪ್ರಯೋಜನವು ವ್ಯಕ್ತವಾಗುತ್ತದೆ. ಇನ್ನು ಶಿವನಲ್ಲಿ ಭಕ್ತಿ ವಿಶ್ವಾಸವಿಲ್ಲದವನಿಗೆ ಶಿವನು ಹೇಳಿದ ಸಿದ್ಧಾಂತದಲ್ಲಿ ಇಚ್ಛೆಯಾದರೂ ಹೇಗೆ ಉಂಟಾಗುವದು? ಯಾವನು ಶಿವಭಕ್ತಿಯುಳ್ಳವನಾಗಿ ಶಿವಸಿದ್ಧಾಂತ ಜ್ಞಾನವನ್ನು ಪಡೆದು ಅದರಂತೆ ನಡೆದು, ಶಿವನಾಗಲಿಚ್ಛಿಸುವನೊ ಅವನೇ ಶಿವಾನು

ಭವ ಶಾಸ್ತ್ರಕ್ಕೆ ಅಧಿಕಾರಿಯೆಂಬುದು ಸೂಕ್ಷ್ಮರೂಪದಿಂದ ಸೂಚಿತವಾಗಿದೆ. ಶಾಸ್ತ್ರಕ್ಕೂ ವಿಷಯಕ್ಕೂ ಸಂಬಂಧವಂತೂ ಇದ್ದೇ ಇರುವುದು.

ಸೂತ್ರಪ್ರಾಮಾಣ್ಯಃ— ಸ್ವತಃ ಪ್ರಮಾಣ ಭೂತನಾದ ಶಿವನಿಂದು ಕ್ತವಾದುದೂ ಶೃತಿ ಸ್ಮೃತ್ಯಾದಿ ಸಾರಭೂತವಾದುದೂ ಆದ ಸಿದ್ಧಾಂತ ವನ್ನೆ ನಾನು ಹೇಳುವೆನೆಂಬುದರಿಂದ ಸೂತ್ರಗಳಿಗೆ ಅಪ್ರಮಾಣ್ಯ ಶಂಕಾ ಕಲಂಕವಿಲ್ಲೆಂಬುದು ನಿಶ್ಚಿತವಾಗುತ್ತಿದೆ.

ಆಕ್ಷೇಪಃ— ಶೃತಿ ಸ್ಮೃತ್ಯಾದಿಗಳಲ್ಲಿ ಷಟ್‌ಸ್ಥಲ ಸಿದ್ಧಾಂತವು ಉಕ್ತ ವಾಗಿರುವುದೆಂದು ಸೂತ್ರಕಾರನು ಹೇಳಿರುವುದು ನಂಬತಕ್ಕದ್ದಲ್ಲ. ಉಪ ಲಬ್ಧವಿರುವ ಯಾವ ಶೃತಿ ಸ್ಮೃತ್ಯಾದಿಗಳಲ್ಲಿಯೂ ಸಮಗ್ರವಾದ ಷಟ್ ಸ್ಥಲಸಿದ್ಧಾಂತವು ಕಂಡುಬರುವುದಿಲ್ಲ.

ಸಮಾಧಾನ:— ವೀರಶೈವ ವಾಙ್ಮಯದ ಪೂರ್ಣ ಪರಿಚಯದಿಂದ ಈ ಆಕ್ಷೇಪವು ದೂರವಾಗದಿರದು. ವೀರಶೈವರ ಆತರ ಗ್ರಂಥಗಳಲಿ (ಪೂರ್ವಪಕ್ಷನಿರಸನದಿಂದ ಸಿದ್ಧಾಂತ ಮಾಡಿದ ಪ್ರಮಾಣಗ್ರಂಥಗಳಲ್ಲಿ) ಶೃತಿ ಸ್ಮೃತ್ಯಾದಿಗಳ ಆಧಾರದಿಂದ ವೀರಶೈವ ತತ್ವಗಳು ಪ್ರತಿಪಾದಿತ ವಾಗಿವೆ. 'ಅಯಂಮೇ ಹಸ್ತೋ ಭಗವಾನ್' ಯಾತೇ ರುದ್ರ ಶಿವಾತನೂ ಇತ್ಯಾದಿ ಶೃತಿ ಪ್ರಮಾಣಗಳೂ 'ಮುಖೇ ಮಂತ್ರಂ ಹೃದಿಧ್ಯಾನಂ' 'ಸರ್ವ ಕರ್ಮ ವಿಮುಕ್ತಸ್ಯ ಧ್ಯಾನಯೋಗರತಸ್ಯಚ' ಇತ್ಯಾದಿ ಸ್ಮೃತಿ ಪ್ರಮಾಣ ಗಳೂ ವೀರಶೈವಕ್ಕೆ ಆಧಾರಗಳಾಗಿರುವವು. ಸ್ಕಾಂದಾದಿ ಪುರಾಣಗಳಲ್ಲಿ ಸಮಗ್ರವಾದ ಸಿದ್ಧಾಂತವೇ ಪ್ರತಿಪಾದಿತವಾಗಿರುವುದು. ಸೂತಗೀತ ಶಿವ ಗೀತವೇ ಮೊದಲಾದ ಗೀತಾಶಾಸ್ತ್ರಗಳಲ್ಲಿ ವೀರಶೈವದ ಅನೇಕ ಪ್ರಮಾ ಣಗಳಿರುವವು. ಶಿವಸೂತ್ರವು ವೀರಶೈವರ ಶಿವಾದ್ವೈತವನ್ನೇ ಪ್ರತಿಪಾ ದಿಸುವುದು. ವ್ಯಾಸಸೂತ್ರಗಳೂ ಶಿವಾದ್ವೈತಕ್ಕೆ ವಿರೋಧಿಗಳಲ್ಲೆಂಬು ದನ್ನು ನೀಲಕಂಠ ಭಾಷ್ಯವೂ ಶ್ರೀ ಕರಭಾಷ್ಯವೂ ಸಿದ್ಧಾಂತಮಾಡಿರು ವವು. ಸ್ಮೃತಿಸೂತ್ರಾದಿಗಳಿರಲಿ, ಶೃತಿಯಲ್ಲಿ ಶಿವಸಿದ್ಧಾಂತವು ಸ್ಫುಟವಾಗಿ ಕಂಡುಬರುವುದಿಲ್ಲವೆಂದರೆ, ಶೃತಿಯಲ್ಲಿ ಯಾವ ಮತದ ಸಿದ್ಧಾಂತವೂ ಸ್ಫುಟವಾಗಿ ಕಾಣುವುದಿಲ್ಲ. ಅಲ್ಲಿ ಮತತತ್ವಗಳು ಸೂಕ್ಷ್ಮರೂಪದಿಂದಿ ರುವವು. ಅವುಗಳನ್ನೇ ಮತಪ್ರವರ್ತಕರು ತಮ್ಮ ತಮ್ಮ ಮತಗ್ರಂಥ

(೪೨) ಪರಮಪಾವನ ಪರಬ್ರಹ್ಮಸ್ವರೂಪವೆ ಚನ್ನವೀರ। ನಿರುಪವು ನಿರಘು ನಿರ್ದ್ವಂದ್ವ ನಿರ್ಲೇಪನೇ ಚನ್ನವೀರ ॥ಪ॥

ಶರಣಹೃದಯ ಮಂದಿರಧಿಕಾರನೆ ಚನ್ನವೀರ। ಕರುಣಸಾಗರ ವೇದಾಗಮ ಶ್ರುತಿಸಾರನೆ ಚನ್ನವೀರ॥ ಶರಣಾದಿ ಗುಣರೂಪ ಹತಿಯಾವಿದೂರನೆ ಚನ್ನವೀರ। ಹರಣವೈರಿಗಳನು ಗೆಲಿದ ಸುಧೀರನೆ ಚನ್ನವೀರ ॥೧॥

ವಿನಮಿತ ಜನರ ಭವದ ಬೇರ ಕೀಳ್ವನೆ ಚನ್ನವೀರ। ಅನುಭವ ಸಾರದರ್ಥವನುರೆ ಪೇಳ್ವನೆ ಚನ್ನವೀರ॥ ಮನವಚನದೊಳುದಯಿಸುವ ಮಂತ್ರಗೇಳ್ವನೇ ಚನ್ನವೀರ। ಘನಭಕ್ತಿಜ್ಞಾನ ವೈರಾಗ್ಯದಿಂ ಕೇಳ್ವನೇ ಚನ್ನವೀರ ॥೨॥

ಅಷ್ಟಾವರಣವೆ ಅಂಗವಾಗಿ ತಾ ತೋರ್ಪನೆ ಚನ್ನವೀರ। ಇಷ್ಟವೆ ತನ್ನ ಪ್ರಾಣವಾಗಿರ್ಪನೇ ಚನ್ನವೀರ॥ ಸೃಷ್ಟಿಪಾವನವಾಗಿ ಚರಿಸುತ್ತೈತಿರ್ಪನೇ ಚನ್ನವೀರ। ನಿಷ್ಠೆಯುಳ್ಳವರ ಕಾಡುವ ಕಷ್ಟದರ್ಪನೇ ಚನ್ನವೀರ ॥೩॥

ಭೂತಪಂಚಕವಾದವನು ತುಳಿವಾತನೇ ಚನ್ನವೀರ। ಧಾತುಸಪ್ತಕ ಪಂಚಸೂತಕ ಕಳೆವನೇ ಚನ್ನವೀರ॥ ನೀತಿಯುಳ್ಳವರಂತರಂಗವ ತಿಳಿವನೇ ಚನ್ನವೀರ। ಭೂತಳದೊಳು ಭಕ್ತಿಹಿತವಾಗಿ ತಿಳಿದವನೇ ಚನ್ನವೀರ ॥೪॥

ವೀರಶೈವವನು ಬೋಧಿಸುವ ಆಚಾರ್ಯನೇ ಚನ್ನವೀರ। ನೂರೊಂದು ಸ್ಥಲದ ಜನ್ಮಕೆ ಚಿತ್ಸೂರ್ಯನೇ ಚನ್ನವೀರ॥ ಆರುಸ್ಥಳಂಗಳ ವಾದ ಸತ್ಕಾರ್ಯನೇ ಚನ್ನವೀರ। ಮಾರಿದಾಚರಣೆ ಮಾರ್ಗವುಳ್ಳ ಶೌರ್ಯನೇ ಚನ್ನವೀರ ॥೫॥

ಶ್ರೀಮಹಾಗುರುವಿಗೆ ಕರದೊಳು ಸೃಜಿಪನೇ ಚನ್ನವೀರ। ವಾಮಹಸ್ತದೊಳಿಷ್ಟ ಲಿಂಗವ ಭಜಿಪನೇ ಚನ್ನವೀರ॥ ತಾಮಸ ಮೊದಲಾದ ಭ್ರಮೆಗಳ ತ್ಯಜಿಪನೇ ಚನ್ನವೀರ। ನೇಮದಿಂದಲಿ ಕ್ರಿಯಾಜ್ಞಾನವನೆ ಭಜಿಪನೇ ಚನ್ನವೀರ ॥೬॥

ಆಚಾರ ಘನವೆಂದು ವಾಚಿಸಿ ನುಡಿವವನೇ ಚನ್ನವೀರ। ವಾಚಕದೊಳು ತಾ ನುಡಿದಂತೆ ನಡಿವವನೇ ಚನ್ನವೀರ॥ ನೀಚವರ್ತನದ

ಬೇರ ಕಡಿವಾತನೆ ಚನ್ನವೀರ। ಶ್ರೀ ಚರಗುರುವಹ ಪರಮುಕ್ತಿಗೊಡೆಯನೆ ಚನ್ನವೀರ ॥೭॥

ಸತ್ಯಲೋಕದೊಳಿಹ ಪ್ರಮಥರುತ್ತುಂಗನೇ ಚನ್ನವೀರ। ತಥ್ಯಮಿಥ್ಯದಲಿ ಕಾಡುವ ಮಾಯಾಭಂಗನೇ ಚನ್ನವೀರ॥ ಸತ್ತ್ವರಂಗೆ ಪ್ರಾಣ ಮಹಲಿಂಗನೇ ಚನ್ನವೀರ। ಉತ್ತುಮ ಬಸವರಸನ ಘನಗುರುಸಂಗಮನೆ ಚನ್ನವೀರ ॥೮॥

ಅಸಮಭಕ್ತರಿಂಗೆ ಬೇಡಿದ ನೀವಸುರತರು ಚನ್ನವೀರ। ವಸುಧೆಪಾವನ ಮಾಡುವದಕೆ ನಿರುತರು ಚನ್ನವೀರ॥ ಶಶಿಯಂತೆ ಷೋಡಶ ಕಳೆ ಭಂತರೂಪನೆ ಚನ್ನವೀರ। ಬಸವನ ತನುಮನ ಭಾವದೊಳಿಹ ಗುರು ಚನ್ನವೀರ ॥೯॥

---

ರಾಗ ನೀಲಾಂಬರಿ.

(೪೩) ಎಂಥ ಕನಸ ಕಂಡೆನೆ ಕೇಳವ್ವಾ ಸುಜಾಣೆ। ಕಾಂತಮುನಿಸುಗೊಂಡನೆ॥ ಇಂತು ಕನಸ ಕಂಡು ಭ್ರಾಂತಿಗೊಂಡಿಹನವ। ಕಾಂತದಿ ತಿಳಿಯ ಪೇಳವ್ವಾ ದಯಾಳೆ ॥ಪಲ್ಲ॥

ಆಲದ ಮರನೊಂದಕ್ಕೆ ಅತ್ತಿಯಕಾಯಿ। ಬಾಳತಂತಿಹುದ ಕಂಡೆ॥ ಬಾಲೆ ಎನ್ನನು ನಿಶ್ಚಲೋಲ ದೃಷ್ಟಿಗೆ ವೃಕ್ಷ। ಮೂಲವೆ ಬಯಲಾಯಿತೆ ಕೇಳವ್ವಾ ಸುಜಾಣೆ ॥೧॥

ತುಂಬಿದ ಕೆರೆಯೊಂದಕೆ ಬಾಯ್ದೆರೆದಿರ್ಪ। ಒಂಬತ್ತು ತುಂಬ ಕಂಡೆ॥ ಒಂಬತ್ತರೊಳಗೊಂದು ತುಂಬ ಬಂಧಿಸಲಾಗಿ। ತುಂಬಿದ ಕೆರೆ ಬತ್ತಿತೆ ಕೇಳವ್ವಾ ಸುಜಾಣೆ ॥೨॥

ಮಡದಿಯರೊಡ ನಿಲ್ಲದೆ ನಾನೊಬ್ಬಳೆ। ಕೊಡನೀರ ತರುತಿದ್ದೆನೆ॥ ನಡುವದಾರಿಗೆ ಹೊತ್ತಕೊಡವ ಒಗೆದು ನೀರ। ಬಿಡದೆ ಹೊತ್ತರುತಿರ್ದೆನೆ ಕೇಳವ್ವಾ ಸುಜಾಣೆ ॥೩॥

ಊರವಿಲ್ಲದ ಚೇಳನವರದ ಬೇನೆ। ಗೂರಲ ನೆರಳಿತಲ್ಲೆ॥ ಬೇರು ಹುಟ್ಟಿ ಎಲೆ। ಯಾರೂ ಮುಟ್ಟದ ಹಚ್ಚಲು ರುಜೆನಳಯಿತಲ್ಲೆಯವ್ವಾ ನೀನೇ ಬಲ್ಲೆ ॥೪॥

ಈ ರೀತಿ ಕನಸಿನೊಳುನಿ। ಬೈರಗಿನಿಂನೊರ್ವಳಿ ಒರಗಿರ್ದೆನೆ॥ ಸಾರ ಸುಂದರ ಚನ್ನವೀರನಪ್ಪಲು ನಿದ್ರೆ। ಹಾರಿ ಕಣ್ದೆರೆದೆನಲ್ಲೆ ಇಂತಾಯಿತಲ್ಲೆ ॥೫॥



(೪೪) ಅಣ್ಣಾ ನೀ ಕೇಳೊ ಪಂಚಾಂಗವ ಕೇಳಿ। ದಣ್ಣಾಗಳೆಲ್ಲರ ಭಂಗವ ॥ಪಲ್ಲವಿ॥

ದ್ವಾರಾವತಿಯೊಳು ಶ್ರೀಕೃಷ್ಣಾನುಶುಭ॥ ವಾರ ಸುಲಗ್ನವ ಬೇಗಗೊಂಡು॥ ಧಾರೆಯೆರಿಸಿಕೊಂಡ ಸ್ತ್ರೀಯರು ಹದಿ। ನಾರು ಸಾವಿರ ಕಾದ ಭಂಗವ ॥೧॥

ರಾಮು ಸೀತೆಯರಿಗೆ ಲಗ್ನವ ತಮ್ಮ। ಸ್ವಾಮಿ ವಶಿಷ್ಠ ಮಾಡಿರಲಾಗಿ॥ ಆ ಮಹಾ ಸೀತೆಯ ಯತಿ ರಾವಣನು ಒಯ್ದು। ರಾಮುನ ವನವಾಸ ಭಂಗವ ॥೨॥

ವರ ಶುಭ ವೇಳೆಯ ಬೆಸಗೊಂಡು ನಿತ್ಯ। ಬರುವ ಬ್ರಹ್ಮಶಿವಸಭೆಯೊಳಗೆ ಶಿರವೈದರೊಳು ನಡುತಲೆಯನು। ಪುರಹರನಿಂದ ಕಳಕೊಂಡ ಭಂಗವ ॥೩॥

ಸರಸ್ವತಿದೇವಿ ಜೋಯಿಸರಿಂದಲನವ। ರತ ಶುಭಾಶುಭ ವಿವರಿಸಿ॥ ಶರಭಾವತಾರನ ದೆಸೆಯಿಂದಲವಳುರು ಮುಖರತಿಯಾದ ಭಂಗವ ॥೪॥

ತಾನೆ ದೇವೇಂದ್ರ ಪಂಚಾಂಗವ। ಸನುಮಾನ ಮನ್ನಣೆಯಿಂದ ಲಾಲಿಸಿ॥ ಪೌನಿಯ ಶಾಪದಿ ತನುವೆಲ್ಲ ಬಹು। ಯೋನಿಮಂಡಲವಾದ ಭಂಗವ ॥೫॥

ಇನನುದಯದೊಳಿದ್ದು ಮನ್ಮಥ ಶುಭ। ದಿನಶುಭ ತಿಥಿಗಳ ಕೇಳುತ್ತ ಘನಶಿವ ನಕ್ಷೆಯ ಬಿಸಿಯಿಂದ। ತನ್ನ ತನುವನೀಗಿದ ಮಾನಭಂಗವ ॥೬॥

ವಾರ ತಿಥಿ ಯೋಗ ಕರಣವ ಶುಭ। ತಾರಿಗಳೊಳು ದಕ್ಷಯಾಗವ॥ ಪೂರೈಸಲು ವೀರಭದ್ರನು ಸೆರೆ। ಸೂರೆಮಾಡಿದ ಮಾನಂಭಗವ ॥೭॥

ಕಷ್ಟಕರ್ಮವ ನೀಗಬೇಕೆಂದು ಬಹು। ನಿಷ್ಠೆಯಿಂ ಪಂಚಾಂಗವ ಕೇಳಿ॥ ಸೃಷ್ಟಿಯೊಳಗೆ ಪಂಚಪಾಂಡವರು ದೇಶ। ಭ್ರಷ್ಟರಾದ ಮಾನ ಭಂಗವ ॥೮॥

ಮಾರೇಶ ವಶಕೋಟಿ ದೇವತರು ಶುಭ। ತಾರಿ ದೈವವೆಂದಾ ರಾಧಿಸಿ॥ ತಾರಕಾಸುರನಿಂದ ಲೊದೆಯುತಿಂದು। ಮಾರವೈರಿಯು ಮರೆ ಹೊಕ್ಕರೇಕಯ್ಯ ॥೯॥

ಕುರುಡ ಕುಂಟಿನ ಹಲ್ಲು ಮುರಕನ ಒನ್ಯ್ಕ। ಗುರುತಲ್ಪಕನ ಬಲ ವನುಕೇಳಿ|| ಚರಿಸಲಾಗದು ವೀರಶೈವರು ಎಂಬ। ವರಪುರಾತನರ ವಚನಗಳುಂಟು ॥೧೦॥

ವೃಡಲಿಂಗ ಪೂಜೆ ಜಂಗಮ ದಾಸೋಹವ। ಧೃಡನಿಷ್ಠೆಯೊಳು ಶುಭ ದಿನವೆಂದು॥ ಒಡೆಯ ಸದ್ಗುರು ಚನ್ನವೀರನ ಪಾದವಿಡಿದ ಭಕ್ತರಿ ಗಾವ ಭಯವಿಲ್ಲ ॥೧೧॥



(೪೫) ಧೃಢವಾಗದವಿರಳ ನಡೆನುಡಿ ಎಂದು ನೀ। ತಡಬಡಗೊಂ ಡೆಲೆ ಬಡ ಮನವೆ॥ಪ॥

ಸತ್ಯ ಸದ್ಗುರುವಿನ ತೊತ್ತು ಸೇವೆಗೆ ತನು। ವಿತ್ತು ನಾ ನಿಜಭಕ್ತ ನಾದೆನೆಂಬೆ॥ ಕರ್ತೃ ಗುರುಕರೆದು ಕಿಂಚಿತ್ ಸೇವೆಯು ಪೇಳೆ। ಹೊತ್ತಲ್ಲ ಬಿಡಿರೆಂಬೆ ಕತ್ತೆ ಮಗುವೆ॥೧॥

ಅನುಪಮ ಲಿಂಗದ ನೆನಹು ನೆಲಸಿ। ಎನ್ನ ಬಿನುಗು ಬುದ್ಧಿಗಳಿಲ್ಲವಳಿ ದವೆಂಬೆ॥ ನಿನಗನ್ಯವಾಗಿಹ ಧನಕಾಮಿನಿಯರೊ। ಳಿನಿತು ಮೋಹವ ಬಿಡೆ ಶುನಕ ಮನವೆ॥೨॥

ಅಂದಿಂದು ಗಳಿಸಿ ತಂದ ಧನವನೆನ್ನ। ತಂದೆ ಜಂಗಮಕ್ಕೀವೆ ನೆಂಬೆ॥ ಬಂದ ಜಂಗಮ ದೇವರೊಂದು ಕಾಣಿಯ ಬೇಡೆ। ಹಿಂದೆ ಮೋರೆಯಾಗುವೆ ಹಂದೆ ಮನವೆ ॥೩॥

ಮಡದಿ ಮಕ್ಕಳು ನಾನು ಒಡೆಯರ ದಾಸೋಹ। ವಿಡಿದವರಲ್ಲದೆ ಬಿಡಲಿಲ್ಲವೆಂಬೆ॥ ಒಡೆಯ ಲಿಂಗಾರ್ಪಿತದೆಡೆಯೊಳ್ ಭಿಕ್ಷ ಎನ್ನೆ। ನಡೆ ಮುಂದಕ್ಕೆಂಬುವೆ ಹಡಿಕಿ ಮನವೆ ॥೪॥

ಎನ್ನ ಮನೆಯಲ್ಲಿ ಸುಪ್ರಸನ್ನ ಸದ್ಗುರುಚರ। ದುನ್ನತವಾದ ಬೀಡಾರವೆಂಬೆ॥ ಮುನ್ನಬಂದರೆ ತಾಸು ಚನ್ನಾಗಿ ಕುಳಿತರೆ। ಇನ್ನು ಸಾಕೇಳೆಂಬೆ ಕುನ್ನಿ ಮನವೆ ॥೫॥

ಹೊರಗೆ ಕಂಡರೆ ಎನ್ನ ಹರಣದೊಡೆಯ ಶಿವ। ಶರಣ ಮನೆಗೆ ಬನ್ನಿ ಸ್ವಾಮಿ ಎಂಬೆ॥ ಕರೆದ ಭಕ್ತನೆಂದು ಮರುದಿನ ಮನೆಗೆ ಬರೆ। ಗರುವಿಡಿದು ತಾ ಸುಮ್ಮನಿರುವೆ ಮರುಳು ಮನವೆ ॥೬॥

ರೊಕ್ಕದಿಂದಲಿ ಸೊಕ್ಕು ಸೊಕ್ಕಿನಿಂದಲಿ ದುಃಖ। ದುಃಖವೆಂಬುದು ಯಮಲೋಕವೆಂಬೆ॥ ರೊಕ್ಕದೊಳಗೆ ಲೆಕ್ಕ ಮುಕ್ಕಾಣೆ ಹೋದರೆ। ಕಕ್ಕುಲಿತೆಯ ಬಿಡೆ ತುಕ್ಕ ಮನವೆ ॥೭॥

ಬಲ್ಲವರಿಗೆ ಹೆರ ವಲ್ಲಭೆಯರ ಸಂಗ। ಸಲ್ಲದ ನಡತೆಗಳೆಂದೆಂಬುವೆ॥ ಹುಲ್ಲೆಗಂಗಳೆಯರ ಚಲ್ವಿಕೆಗಳ ಕಂಡು। ಚಲ್ಲಾಟವಾಡುವೆ ಖುಲ್ಲ ಮನವೆ ॥೮॥

ನಡೆಯಂತೆ ನುಡಿ ನಿಜನುಡಿಯಂತೆ ನಡೆಯುತ। ಕ್ಕಡಿಯಂತೆ ಹೆಚ್ಚು ಕಡಿಮೆ ಇಲ್ಲದೆ॥ ನಡೆ ನುಡಿಯೊಂದಾದನೆನ್ನೊಡೆಯ ಚನ್ನವೀರ। ನಡಿಯ ಭಕ್ತಿಯ ಮಾಡಿ ಪಡೆಯೋ ಮನವೇ ॥೯॥

---

(ರಾಗ ಪುನ್ನಾಗತೋಡಿ ತಾಳ ಆದಿ.)

(೪೬) ಸೂತಕಪಾತಕ ವಿಲ್ಲವೆಂದೊರೆವವು। ನೀತ ಸದ್ಗುರುವಚನವ ॥ಪ॥

ಶಿವಭಕ್ತ ಗರ್ಭದಿಂದೊಗೆದ ಶಿಶುವಿಗೆ। ಶಿವಲಿಂಗವನು ಕಂಠದೊಳ್ ಧರಿಸಿ॥ ಶಿವಮಂತ್ರ ಸ್ಮರಣೆಯಿಂ ಫಣಿಯೊಳ್ ವಿಭೂತಿಯಂ। ತನೆ ಪಟ್ಟಗಟ್ಟಿ ಹುರಿಗೊಯ್ವುದು ಬಳಿಕ ॥೧॥

ಶರಣಸತಿಯರೊಲ್ದು ಶಿಸುವ। ಕರದಿಂ ಪಿಡಿದುರು ಬೆಣ್ಣೆ ಎಣ್ಣೆಯ ಮೈಯೊಳು ಪೂಸಿ॥ ಗುರುಪಾದೋದಕದಿಂದ ಲೆರೆದವಗೊಸ್ತ್ರವ ಪೊಚ್ಚಿ। ವರವಿಭೂತಿಯನು ಫಾಲದೊಳಿಟ್ಟು ಮುದದಿ ॥೨॥

ಗುರುಮಾರ್ಗಾಚಾರದ ಕ್ರಮದಿಂದೆಲ್ಲಗಳು । ನೊರೆವಾಲು ಬೆಣ್ಣೆ ಮೊಲೆವಾಲು ಸಕ್ಕರೆಯು || ಸರಸದಿ ಪೊರೆವುತ ಅಮೃತವನುಣಿಸಲು ದಯ । ದಿರವಿನಿಂ ಪೊರೆವುದು ದಿನದಿನಂಪ್ರತಿಯೊಳ್ ||೩||

ಗುರುಲಿಂಗ ಜಂಗಮದೇವ ಭಕ್ತರ್ಗನ । ವರತ ಭಕ್ತಿಯೊಳಾರಾಧಿಸಿ ತೃಪ್ತಿಮಾಡಿ ॥ ನಿರುತದಿಂ ತನುಮನಧನ ಮುಖ್ಯದ್ರವ್ಯವ । ಪರಿಣತೆಯಿಂ ಕೊಡುವುದೆ ಭಕ್ತಿಮಾರ್ಗ ||೪||

ಇನಿತಲ್ಲದನ್ಯ ಬಿನುಗು ಭವಿಜನದಂತೆ । ಜನನ ಸೂತಕ ಕರ್ಮವನು ಸಂಕಲ್ಪಿಸುತ || ಮನೆಯೊಳ್ಹೈದನೆಯ । ದಿನದೊಳಿರಲು ಗೂಳು ಸೋಂಕನು ಮೂವೇಳೆಯ ದೃಷ್ಟಿಪಾದ ಬಾಲಗ್ರಹ ||೫||

ಸಕಲ ಸಂಕಲ್ಪ ಸೂತಕ ಜಡಜನ್ಮ ಪಾ । ತಕ ಕರ್ಮವ ಕಣಿ ಜೋಯಿಸ ಮುಖದಿಂ ॥ ವಿಕಳತೆಯಿಂ ಕೇಳಿ ಮಾಡುವ ನ । ರರೆಯ ವಭವಿಯುವಗಾಚಾರವಿಲ್ಲ ||೬||

ಅವಗೆ ಗುರುಲಿಂಗಜಂಗಮತೀರ್ಥ ಪ್ರಸಾದ | ಮವಿರತವಿಲ್ಲ ಮತ್ತಾವಭಕ್ತನಲ್ಲಿ ॥ ರವಿಚಂದ್ರರುಳ್ಳನ್ನಕ್ಕ ನರಕದೊಳು ಬೀ । ಳುವ ಪ್ರಾಪ್ತಿಯಿಂದಾದ್ಯರೊಚನಸಾರುವದು ||೭||

ಗುರುಕರಜಾತಗೆ ಲಿಂಗಾರ್ಚಕಗೆ ಶ್ರೀ। ಚರಲಿಂಗಭ ಜಕಂಗೆ ತೀರ್ಥ ಸೇವಿತಗೆ ॥ ಕರುಣಪ್ರಸಾದಭೋಗಿಗೆ ದೇವಭಕ್ತರ್ಗೆ। ಪಂಚಸೂತಕವೆಂದೆಂದಿಗಿಲ್ಲ ||೮||

ಕರಕಂಜಪೀಠದೊಳ್ ಮೆರೆವ ಪ್ರಾಣೇಶವ । ದ್ಗುರು ಚನ್ನವೀರನ ಪಾದಸೇವೆಯೊಡನೆ ಸ್ಥಿರವಾಗಿ ॥ ಕರದೊಳ್ ಬಾಳುವ ಸದ್ಭಕ್ತ । ಶರಣಗೆ ಇಹಪರದೊಳು ಪೂಜ್ಯರವಗೆ ||೯||



(೪೭) ನಂಬಿದೆ ಗುರುವೆ ನಂಬಿದೆ। ಬಹುಡಂಭಕಶಿವನ। ನಂಬಲಾರದೆ ನಿನ್ನ ನಂಬಿದೆ ||ಪ||

ಗುರುವೆ ಪರಾತ್ಪರ ಪರವಸ್ತುವೆಂದೆ। ಗುರುವ ಮೀರುವ ಪರವಿಲ್ಲವೆಂಬುದಕೇಳಿ ||೧||

ನಗರೋರಧಿಕ ಸತ್ಯವಿದಿತ ಶಾಸನವೆಂದು । ಜಗದೊಳು ಸಾರುವ ಶೃತಿಯು ಕರ್ಣದಿ ಕೇಳಿ ॥೨॥

ಗುರು ಮುನಿದರೆ ಹರ ಕಾಯಲರಿಯನೊಮ್ಮೆ । ಹರಮುನಿದರೆ ಗುರು ಕಾಯ್ವನೆಂಬುದ ಕೇಳಿ ॥೩॥

ನಾಸ್ತಿ ತತ್ವಂ ಗುರುಪರವೆಂಬುವ ಶೃತಿ । ಶಾಸ್ತ್ರವೀ ಜಗದೊಳು ಪೊಗಳುತಿರಲು ಕೇಳಿ ॥೪॥

ಭ್ರಮರಕೀಟ ನ್ಯಾಯದಂತೆ ಸದ್ಗುರುಪಾದ । ಕಮಲಕೆರಗಿ ಶಿಷ್ಯ ಗುರುವೆಯಾಗುವನೆಂದು ॥೫॥

ಎಂದೆಂದಿಗೂ ತನ್ನ ಹೊಂದಿದ ವರಭವ । ಬಂಧನಗೊಳಿಸಿದ ಹರನ ಜರಿದು ನಿನ್ನ ॥೬॥

ತವೆ ತನ್ನ ಭಜಿಸಿದ ಹರಿಯ ನೀರ್ಗೈದು ಬು । ರ್ಭವದೊಳು ಬರಿಸಿದ ಹರನ ಜರಿದು ನಿನ್ನ ॥೭॥

ಹಲವು ಕಾಲವು ತನ್ನ ನೆಲಿಸಿದ ಬ್ರಹ್ಮನ । ತಲೆಯ ನೀಗಿದನೆಂದು ಹರನ ಜರಿದು ನಿನ್ನ ॥೮॥

ಅನುದಿನ ತನ್ನಡಿಗೆರಗಿದ ಸುರಪನ । ತನುಲಜ್ಜೆವೆರಸಿದ ಹರನ ಜರಿದು ನಿನ್ನ ॥೯॥

ಇಂದು ತನ್ನಯ ಮಸ್ತಕವನೊಂದಿ ಕ್ಷಯರೋಗದಿಂದ । ಕುಂದುವನೆಂದು ಹರನ ಜರಿದು ನಿನ್ನ ॥೧೦॥

ಎಲ್ಲ ಕಾಲವು ತನ್ನ ಬಲಗೊಂಡ ಸೂರ್ಯನ । ಹಲ್ಲ ಕಳೆದನೆಂದು ಹರನ ಜರಿದು ನಿನ್ನ ॥೧೧॥

ತನ್ನ ಬಾಳದೊಳಿಹ ವಹ್ನಿಯ ನಾಲಿಗೆ । ಯನ್ನು ಸೀಳಿದನೆಂದು ಹರನ ಜರಿದು ನಿನ್ನ ॥೧೨॥

ಹಿರಿಯ ಮಾವನ ಮುಖ್ಯ ಶಿರವನರಿದು ಸಣ್ಣ । ಕುರಿಯ ತಲೆಯನಿತ್ತ ಹರನ ಜರಿದು ನಿನ್ನ ॥೧೩॥

ಹಿತವ ಸಾಧಿಸಿ ತನ್ನ ಕುಸುಮದೊಳೆಸೆವ ಮ । ನ್ಮಥನ ಸುಟ್ಟುರುಹಿದ ಹರನ ಜರಿದು ನಿನ್ನ ॥೧೪॥

ನೆರೆ ತನ್ನಾಭರಣವಾದುರುಗನ ಶಿರದೊಳು । ಧರೆಯ ಭಾರವನಿತ್ತ ಹರನ ಜರಿದು ನಿನ್ನ ॥೧೫॥

ಇರುಳು ಹಗಲು ತನ್ನ ಸ್ಮರಿಸುವ ವಾಣಿಯುಮಾ। ಕೊರತೆ ಎಂದೆನಿಸಿದ ಹರನ ಜರಿದು ನಿನ್ನ ॥೧೬॥

ತನ್ನ ಪಟ್ಟದರಾಣಿ ಮುನ್ನಿನ ಭವದೊಳು। ಬನ್ನಬಟ್ಟುದ ಕೇಳಿ ಹರನ ಜರಿದು ನಿನ್ನ ॥೧೭॥

ಧೀರ ತನ್ನಯ ಭಕ್ತ ನಾರಾಯಣನ ಸತಿ। ಜಾರೆ ಎಂದೆನಿಸಿದ ಹರನ ಜರಿದು ನಿನ್ನ ॥೧೮॥

ಮರವೆಯಿಂದಲಿ ತನ್ನ ತರುಳನೆಂದರಿಯದೆ। ಕೊರಳಹರಿದನೆಂದು ಹರನ ಜರಿದು ನಿನ್ನ ॥೧೯॥

ಕೊಡನೀರ ಕೊಟ್ಟಣದ ಬಡವ ನಂಬಿಯಕೂಸ। ಹೆಡಬಡಿಸಿ ಕೊಂದ ಹರನ ಜರಿದು ನಿನ್ನ ॥೨೦॥

ವಸುಧೆಯೊಳಗೆ ಸಣ್ಣಶಿಸುವ ಹಿಂಸೆಯಮಾಡಿ। ಪಿಸಿತಾಹಾರವ ತಿಂದ ಹರನ ಜರಿದು ನಿನ್ನ ॥೨೧॥

ಹೊರಕುಲದವನಂತೆ ಶಿರದ ಡೋವೆಯೊಳುತಾ। ತಿರುಗಿ ತಿಂಬುವನೆಂದು ಹರನ ಜರಿದು ನಿನ್ನ ॥೨೨॥

ಶೂಲದಿ ಪೆಣ್ಣಶಿರದೊಳು ಕೊರಳೊಳ। ಗೆಲುಮಾಲೆಯ ಧರಿಸಿದ ಹರನ ಜರಿದು ನಿನ್ನ ॥೨೩॥

ಕರಿದೊಗಲುಟ್ಟತಿ ಶರಣಾಚರಣೆಗೆ। ಸರಿಬಾರದವನೆಂದು ಹರನ ಜರಿದು ನಿನ್ನ ॥೨೪॥

ಸೂತಕವಿಡಿದ ಪಾತಕರಂತೆ ಯಜ್ಞೋಪ। ವೀತವ ಧರಿಸಿದ ಹರನ ಜರಿದು ನಿನ್ನ ॥೨೫॥

ಈ ರೀತಿಯೊಳು ಜನಿವಾರವ ಧರಿಸಲು। ಹಾರುವ ಕುಲದವನೆಂದು ಹರನ ಜರಿದು ನಿನ್ನ ॥೨೬॥

ಸುರಪ ಶೂದ್ರಜ ವೈಶ್ಯ ಹರಿಯು ಕ್ಷತ್ರಿಯನು। ಹರನೆ ಬ್ರಾಹ್ಮಣನೆಂಬುದರಿದು ಹರನ ಜರಿದು ನಿನ್ನ ॥೨೭॥

ಲಿಂಗ ಸೂನಂಗ ತದಂತ ಗ್ರಹಣವೆಂದು। ಲಿಂಗವಂಗವಿಸದ ಹರನ ಜರಿದು ನಿನ್ನ ॥೨೮॥

R. N. B. 2554.

# ಶಿವಾನುಭವ.

ಸಂಪುಟ ೪.] (ಮಾಸಪತ್ರಿಕೆ.) [ಸಂಚಿಕೆ ೯.



ದಿಸೆಂಬರ ೧೯೩೯] ವಿಜಾಪುರ. [ಮಾರ್ಗಶಿರ ೧೮೬೧

ವಾ. ಚ. ೪ ರೂ. ೪ ಆ.

## ವಿಷಯಾನುಕ್ರಮಣಿಕೆ.



---

## ಶಿವಾನುಭವ.

ಇದು ವೀರಶೈವ ಧಾರ್ಮಿಕ ಉನ್ನತಿಯ ಬಗ್ಗೆ ಹೆಣಗಾಡುವ ಮೇಲ್ತರದ ಮಾಸಪತ್ರಿಕೆಯು. ಇದು ೬೪ ಪುಟಗಳುಳ್ಳದ್ದು ಚಂದಾ ಮಾತ್ರ. ೪ ರೂಪಾಯಿ. ೪ ಆಣೆ, ಇದು ಪ್ರತಿ ತಿಂಗಳ ಮಧ್ಯಕ್ಕೆ ಹೊರಡುತ್ತದೆ ಲೇಖಕರು ಚಿಕ್ಕ ಚಿಕ್ಕ ಲೇಖಗಳನ್ನು ಕಳಿಸಬೇಕು. ವೀರಶೈವರ ಉನ್ನತಿಯ ಪರವಾಗಿ ಯಾರು ಬೇಕಾದವರು ಬರೆದರೂ ಅವಕಾಶ ಸಿಗುವದು. ಕೆಲವರು ಇದರ ಹಿಂದಿನ ಸಂಚಿಕೆಗಳನ್ನು ಬೇಡುತ್ತಾರೆ. ಆದರೆ ೧-೨ ಸಂಚಿಕೆಗಳು ಸಿಗುವದೇ ಇಲ್ಲ. ೩ ರಿಂದ ೧೨ರ ವರೆಗೆ ಮಾತ್ರ ಸಿಗುತ್ತವೆ. ಬೇಕಾದವರು ಶೀಘ್ರ ತರಿಸಿಕೊಳ್ಳಬಹುದು. ತಡವಾದರೆ ಪ್ರತಿಗಳು ಸಿಗಲಾರವು. ಯಾಕಂದರೆ ಪ್ರತಿಗಳು ಸ್ವಲ್ಪೇ ಉಳಿದಿವೆ. ಪ್ರತಿಯೊಂದು ಸಂಚಿಕೆಗೆ ೮ ಆಣೆ.

ಮ್ಯಾನೇಜರ.

ಶಿವಾನುಭವ.



ಆಸ್ಥಾನ ವಿದ್ವಾನ್

ವೇ॥ ಎನ್. ಆರ್. ಕರಿಬಸವಶಾಸ್ತ್ರಿಗಳು

ಮೈಸೂರ.

# ಶಿವಾನುಭವ.

ವರ್ಷ ೪ ] ಡಿಶಂಬರ ೧೯೩೯ [ ಸಂಚಿಕೆ ೯

## ಆಸ್ಥಾನ ವಿದ್ವಾನ್ ವೇ|| ಎನ್. ಆರ್. ಕರಿಬಸವ ಶಾಸ್ತ್ರಿಗಳ ಸಂಕ್ಷಿಪ್ತ ಜೀವನ ಚರಿತ್ರೆ.

(ಲೇಖಕರು— ಬಿ. ಶಿವಮೂರ್ತಿ ಶಾಸ್ತ್ರಿ ಕೀರ್ತನ ಕೇಸರಿ ಕವಿರತ್ನ ಹುಲುಕುಂಟೆ ಮಠ ತುಮಕೂರು.)

ವೀರಶೈವಸಮಾಜ ಚರಿತ್ರೆಯನ್ನು ಚನ್ನಾಗಿ ವಿಚಾರಿಸಿದರೆ ಅದರಲ್ಲಿ ಕೆಲವು ಅಲೌಕಿಕ ಜೀವಜ್ಯೋತಿಗಳನ್ನು ಕಾಣಬಹುದು. ಆ ವ್ಯಕ್ತಿಗಳಲ್ಲಿ ಒಂದೊಂದು ಅಪೌರ್ವ್ಯ ಶಕ್ತಿಯಿದ್ದು, ಅದು ಮಾನವ ವರ್ಗವನ್ನೇ ಬೆರಗುಗೊಳಿಸುವಂತಿದೆ.

ವೀರಶೈವಸಮಾಜಸೇವೆ ಮಾಡಿ ಕೀರ್ತಿಶೇಷರಾದ ವಿಭೂತಿಗಳನ್ನು ಮುಖ್ಯವಾಗಿ ಶ್ರೀಮಂತರು ಮತ್ತು ಧೀಮಂತರು ಎಂದು ಎರಡು ಭಾಗ ಮಾಡಬಹುದು. ಶ್ರೀಮಂತರು ದ್ರವ್ಯಶಕ್ತಿಯಿಂದಲೂ, ಧೀಮಂತರು ಬುದ್ಧಿಶಕ್ತಿಯಿಂದಲೂ, ಸಮಾಜಕ್ಕೆ ಮಹದುಪಕಾರ ಮಾಡಿ ತಮ್ಮ ಜೀವಿತವನ್ನು ಸಫಲ ಮಾಡಿಕೊಂಡಿರುವರು.

ಅಪಾರವಾದ ತಮ್ಮ ಐಶ್ವರ್ಯವನ್ನು ಸಮಾಜಕ್ಕೆ ಧಾರೆಯೆರೆದು ವಿಖ್ಯಾತರಾದವರಲ್ಲಿ ಕೆಳಗೆ ಸೂಚಿಸಿರುವವರು ಮುಖ್ಯರು.

೧ ಶ್ರೀಮಂತ ಸಿರಸಂಗಿಯ ಲಿಂಗರಾಜರು.

೨ ಶ್ರೀಮಂತ ರಾ. ಬ. ವಾರದ ಮಲ್ಲಪ್ಪನವರು.

೩ ಶ್ರೀಮಂತ ರಾ. ಬ. ಧರ್ಮಪ್ರವರ್ತಕ ಗುಬ್ಬಿ ತೋಟದಪ್ಪನವರು.

೪ ಶ್ರೀಮಂತ ಧರ್ಮವೀರ ಶಂಕರಣ್ಣನವರು.

೫ ಒಂಟಮುರಿ ದೇಸಾಯಿಗಳಾದ ಶ್ರೀಮಂತ ಲಖಮನಗೌಡರು.

೬ ಶ್ರೀಮಂತ ಕಬ್ಬಳ್ಳಿ ಚನ್ನಬಸಪ್ಪನವರು.

೭ ಶ್ರೀಮಂತ ಧರ್ಮಾವತಾರ ಸಕ್ಕರಿ ಕರಡಪ್ಪನವರು.

೮ ಶ್ರೀಮಂತ ಮೈಸೂರು ಮರಿಮಲ್ಲಪ್ಪನವರು

ಮೇಲೆ ಸೂಚಿಸಿರುವ ಮಹಾಪುರುಷರೇ ಅಲ್ಲದೆ ಇನ್ನೂ ಹಲವು ಮಂದಿ ಶ್ರೀಮಂತ ಮಹೋದಯರು ತಮ್ಮ ಅಪಾರವಾದ ದ್ರವ್ಯದಿಂದ ಸಮಾಜಕ್ಕೆ ಮಹದುಪಕಾರ ಮಾಡಿರುವರು.

ಪರಮೇಶ್ವರನು ಒಬ್ಬೊಬ್ಬರಿಗೆ ಒಂದೊಂದು ಶಕ್ತಿಯನ್ನು ಕೊಟ್ಟಿರುವನು. ಐಶ್ವರ್ಯಶಕ್ತಿಯಿಂದ ಹಿಂದಿನವರು ಕೀರ್ತಿಶಾಲಿಗಳಾಗಿದ್ದಾರೆ. ಮುಂದೆ ಸೂಚಿಸುವವರು ಬುದ್ಧಿಶಕ್ತಿ ವಿದ್ಯಾಶಕ್ತಿಯಿಂದ ಯಶಃಕಾಯರಾಗಿರುವುದನ್ನು ಹೇಳಬಹುದು. ಅಂಥವರಲ್ಲಿ ಮುಖ್ಯರಾರೆಂದರೆ.

೧ ಶ್ರೀ ಕೈಲಾಸವಾಸಿ ಯಜಮಾನ್ ವೀರಸಂಗಪ್ಪನವರು.

೨ ಶ್ರೀ ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು.

೩ ಶ್ರೀ ಆಸ್ಥಾನ ಮಹಾವಿದ್ವಾನ್ ಕರ್ನಾಟಕ ಭಾಷಾರತ್ನ ಪಿ. ಆರ್. ಕರಿಬಸವಶಾಸ್ತ್ರಿಗಳು.

೪ ಶ್ರೀ ಆಸ್ಥಾನ ವಿದ್ವಾನ್ ಎನ್. ಆರ್. ಕರಿಬಸವ ಶಾಸ್ತ್ರಿಗಳು.

೫ ಶ್ರೀ ಮೈಸೂರು ಚರಮೂರ್ತಿ ಬಸವಲಿಂಗ ಸ್ವಾಮಿಗಳು.

೬ ಶ್ರೀ ಬೆಂಗಳೂರು ನಂ. ಶಿವಪ್ಪ ಶಾಸ್ತ್ರಿಗಳು

೭ ಶ್ರೀ ರಾ. ಬ. ಅರ್ಟಾಳ್ ರುದ್ರಗೌಡರು.

೮ ಶ್ರೀ ರಾ. ಬ. ಗಿಲಗಂಚಿ ಗುರುಸಿದ್ದಪ್ಪನವರು.

೯ ಶ್ರೀ ರಾ. ಸಾ. ಹಳಕಟ್ಟಿ ವಕೀಲರವರು.

ಇತ್ಯಾದಿಯಾದ ಮಹನೀಯರು ತಮ್ಮ ಬುದ್ಧಿಶಕ್ತಿ. ವಿದ್ಯಾಶಕ್ತಿಯ ಬಲದಿಂದ ಸಮಾಜಕ್ಕೆ ನಾನಾರೀತಿಯಿಂದ ಉಪಕಾರ ಮಾಡಿರುವರು. ಇರುವವರು ಮಾಡುತ್ತಲೂ ಇರುವರು.

ದಿಕ್ಪ್ರದರ್ಶನಕ್ಕಾಗಿ ನಾವು ಕೆಲವರ ಹೆಸರನ್ನು ಇಲ್ಲಿ ಸೂಚಿಸಿದ್ದರೂ ಇನ್ನೂ ಎಷ್ಟೋ ಮಂದಿ ಪುರುಷಪುಂಗವರು ಈ ಪಂಕ್ತಿಗೆ ಸೇರತಕ್ಕವರಿರುವರು.

ಜಗತ್ತಿನಲ್ಲಿ ಹುಟ್ಟಿ ಸಾಯುವುದು ಮಾನವನಿಗೆ ನಿಸರ್ಗ ಸ್ವಭಾವವಾಗಿದೆಯಷ್ಟೆ? ಹಾಗೆ ಹುಟ್ಟಿ ಸಾಯುವ ಜೀವರಾಶಿಗಳ ಮೇಲೆ ನಮಗೆ ಎಳ್ಳಷ್ಟು ಮಮಕಾರವಿಲ್ಲ. ಯಾವ ವ್ಯಕ್ತಿಯಾದರೆ ಹುಟ್ಟಿದುದಕ್ಕೆ ತನ್ನ ದೇಶ, ಸಮಾಜ, ಧರ್ಮ, ಭಾಷೆ ಮೊದಲಾದವುಗಳಿಗೆ ಯಥಾಶಕ್ತಿ ಸೇವೆಮಾಡಿ ಜಗತ್ತಿಗೆ ಹಿತಕಾರಿಯಾಗಿರುತ್ತದೆಯೋ ಅಂತಹ ಮೂರ್ತಿಯು ನಮಗೆ ಅತ್ಯಂತ ಅಪೇಕ್ಷಣೀಯವಾದುದು- ಹಾಗೂ ವಂದನೀಯವಾದುದು.

ನಾವು ಮೇಲೆ ಸೂಚಿಸಿರುವ ವ್ಯಕ್ತಿಗಳಲ್ಲಿ ಯಾರಿಗೆ ಯಾರೂ ಕಡಿಮೆಯಾದವರಲ್ಲ. ಅವರೆಲ್ಲರೂ ಶಿವಕೃಪಾದತ್ತವಾದ ತಮ್ಮ ಶಕ್ತಿಯನ್ನು ಸಮಾಜ ಸೇವೆಯಲ್ಲಿ ಸ್ವಧರ್ಮ ಸೇವೆಯಲ್ಲಿ ಸವೆಯಿಸಿದವರೇ ಆಗಿರುವರು.

ಆದುದರಿಂದ ಇಂತಹ ಮಹಾಪುರುಷರ ಜೀವನ ಚರಿತ್ರೆಯನ್ನು ಬರೆದು ಅಥವಾ ಬರೆಸಿ ಮುಂದಿನ ಜನಾಂಗಕ್ಕೆ ಅವರ ಸ್ಮರಣೆಯು ಮರೆಯದ ಹಾಗೆ ಮಾಡತಕ್ಕದ್ದು ಪ್ರತಿಯೊಬ್ಬ ವೀರಶೈವ ಪಂಡಿತನ ಪ್ರಥಮ ಕರ್ತವ್ಯವಾಗಿದೆ-

ನಮ್ಮ ಅಭಿಮತಕ್ಕೆ 'ಶಿವಾನುಭವ'ವು ಪುಷ್ಟೀಕರಣ ಕೊಡುತ್ತಿದೆ- ಮೈಸೂರ ಕರ್ನಾಟಕದಲ್ಲಿ ಆಗಿಹೋದ ಕೆಲವು ಮಂದಿ ವೀರಶೈವ ವಿಭೂತಿ ಪುರುಷರ ಚರಿತ್ರೆಯನ್ನು ನಾವು ಶಿವಾನುಭವ ಸಂಪಾದಕ ಮಹಾಶಯರ ಅಪ್ಪಣೆ ಮೇರೆಗೆ— ಇಂದಿನ ವೀರಶೈವ ಸಮಾಜಕ್ಕೆ ನವಚೈತನ್ಯವನ್ನುಂಟುಮಾಡುತ್ತಿರುವ 'ಶಿವಾನುಭವ'ಪತ್ರಿಕೆಯಲ್ಲಿ ಅನುಕ್ರಮವಾಗಿ ಬರೆಯಬೇಕೆಂದು ಸಂಕಲ್ಪಿಸಿ ಅದಕ್ಕಾಗಿಯೇ ಈಗ ಕೈಲಾಸವಾಸಿ ಎನ್. ಆರ್ ಕರಿಬಸವಶಾಸ್ತ್ರಿಗಳ ಜೀವನ ಚರಿತ್ರೆಯನ್ನು ಇಲ್ಲಿ ಸಂಗ್ರಹವಾಗಿ ಬರೆದಿರುವೆವು-

ಬಾಲ್ಯ:— ನಮ್ಮ ಲೇಖನಕ್ಕೆ ವಿಷಯರಾದ ವೇ॥ ಎನ್. ಆರ್. ಕರಿಬಸವಶಾಸ್ತ್ರಿಗಳವರ ಮೂಲಸ್ಥಾನ ನಂಜನಗೂಡು. ನಂಜ

ನಗೂಡು ಮೈಸೂರು ಜಿಲ್ಲೆಯಲ್ಲಿದೆ. ಇದು ತಾಲೂಕು ಸ್ಥಳವಾಗಿದೆ. ಇದು ಅಪ್ರಸಿದ್ಧವಾದ ನಗರವೇನೂ ಅಲ್ಲ. ಕಪಿಲಾನದಿಯ ಅರದಲ್ಲಿರುವ ಈ ಪಟ್ಟಣದಲ್ಲಿ ಸುಪ್ರಸಿದ್ಧವಾದ ಶ್ರೀ ಕಂಠೇಶ್ವರ ದೇವಾಲಯವಿದೆ. ಇದು ಶ್ರೀಮನ್ ಮಹರಾಜರ ಮನೆದೇವತೆಯು. ಈ ದೇವಾಲಯದ ಪ್ರಭಾವದಿಂದ ನಂಜನಗೂಡು ಕರ್ನಾಟಕದ ಪ್ರಸಿದ್ಧ ಕ್ಷೇತ್ರ ಪಂಕ್ತಿಯಲ್ಲಿ ಸೇರಿದೆ. ಇದನ್ನು ಕಾವ್ಯಗಳಲ್ಲಿ ಗರಳಪುರೀಕ್ಷೇತ್ರವೆಂದು ಕವಿಗಳು ವರ್ಣಿಸಿರುವರು. ಲಕ್ಷೋಪಲಕ್ಷ ಭಕ್ತರು ಸದಾ ಇಲ್ಲಿಗೆ ಬಂದು ಹೋಗುತ್ತಿರುವರು.

ಇಂತಹ ಪುಣ್ಯ ಕ್ಷೇತ್ರದಲ್ಲಿ ವೀರಶೈವ ಮಾಹೇಶ್ವರ ವರ್ಗಕ್ಕೆ ಸೇರಿದ ವೀರಣಾರ್ಯರೆಂಬ ಗೃಹಸ್ಥರೊಬ್ಬರಿದ್ದರು. ಇವರಿಗೆ ರುದ್ರಶಾಸ್ತ್ರಿಗಳೆಂಬ ಒಬ್ಬ ಕುಮಾರನಾದನು. ಈತನು ಜ್ಯೋತಿಶಾಸ್ತ್ರದಲ್ಲಿ ಒಳ್ಳೆಯ ಪಂಡಿತನೆನಿಸಿದ್ದನು. ಈ ಪುಣ್ಯಾತ್ಮನಿಗೇ ಏಕಮಾತ್ರ ಪುತ್ರನೆನಿಸಿ ಕರಿಬಸವಶಾಸ್ತ್ರಿಗಳು ಹುಟ್ಟಿದರು. ಇವರ ವಂಶವು ವೀರಗೋತ್ರಕ್ಕೆ ಸೇರಿದುದು.

ಕರಿಬಸವಶಾಸ್ತ್ರಿಗಳ ತಾಯಿಯವರ ಊರು ಮೈಸೂರು. ಇವರು ಕ್ರಿ. ಶ. ೧೮೭೨ಕ್ಕೆ ಸರಿಯಾದ ಅಂಗಿರ ಸಂವತ್ಸರ ಶ್ರಾವಣಬಹುಳ ೮ ಭಾನುವಾರ ರಾತ್ರಿ ಕೃತ್ತಿಕಾನಕ್ಷತ್ರದಲ್ಲಿ ಹುಟ್ಟಿದವರು. ಈ ಶಾಸ್ತ್ರಿಗಳಿಗೆ ಬಾಲ್ಯದಲ್ಲಿಯೇ ತಂದೆಯವರ ವಿಯೋಗವಾದುದರಿಂದ ತಾಯಿಯು ತೌರುಮನೆಯಾದ ಮೈಸೂರಿಗೆ ಬಂದು ಸೇರಿದರು.

ಈ ಶಾಸ್ತ್ರಿಗಳು ನಂಜನಗೂಡಿನ ರುದ್ರಶಾಸ್ತ್ರಿಗಳ ಮಕ್ಕಳಾದುದರಿಂದ ಇವರ ಹೆಸರಿನ ಹಿಂದೆ ಅಂಗ್ಲ ಪದ್ಧತಿಯಂತೆ ಎನ್. ಆರ್. ಎಂಬ ಸಂಕ್ಷಿಪ್ತನಾಮವು ಸೇರ್ಪಡೆಯಾಗಿದೆ. ಆದುದರಿಂದಲೇ ಇವರು ಎನ್. ಆರ್. ಕರಿಬಸವಶಾಸ್ತ್ರಿಗಳೆಂಬ ಹೆಸರಿನಿಂದ ವಿಖ್ಯಾತರಾಗಿರುವರು.

ಸನ್ನಿವೇಶ ಮಹತ್ವ:— ಕರಿಬಸವಶಾಸ್ತ್ರಿಗಳು ಪಿತೃವಿಯೋಗದಿಂದ ಮೈಸೂರಿಗೆ ಬಂದರೆಂದು ಹಿಂದೆ ಹೇಳಿದೆಯಷ್ಟೆ. ಹೀಗೆ ಬಾಲ್ಯದಲ್ಲಿ ಅವರು ಕಷ್ಟಕ್ಕೆ ಸಿಕ್ಕಿದರೂ ಅವರ ಬಾಲ್ಯವು ಎಷ್ಟು ಮಾತ್ರಕ್ಕೂ ವ್ಯರ್ಥವಾಗಲಿಲ್ಲ. ಅದು ಹೇಗೆಂಬುದನ್ನು ತಿಳಿಯಬೇಕಾದರೆ ನಾವು ಆಗಿನ ಮೈಸೂರಿನ ಪರಿಸ್ಥಿತಿಯನ್ನು ತಿಳಿಯುವುದವಶ್ಯಕ.

ಕರಿಬಸವಶಾಸ್ತ್ರಿಗಳು ಮೈಸೂರಿಗೆ ಬಂದಾಗ್ಗೆ ಮೈಸೂರಿನಲ್ಲಿ ವೀರಶೈವ ಸಮಾಜದೃಷ್ಟಿಯಿಂದ ಪುಣ್ಯಶ್ಲೋಕರಾದ ಕೈ. ಯಜಮಾನ್ ವೀರಸಂಗಪ್ಪನವರು, ಕೈ. ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಗಳು ಆಸ್ಥಾನ ಮಹಾವಿದ್ವಾನ್ ಕರ್ನಾಟಕ ಭಾಷಾರತ್ನ ವೇ. ಪಿ. ಆರ್. ಕರಿಬಸವಶಾಸ್ತ್ರಿಗಳು, ಕೈ. ಮಲ್ಲಾರಾಧ್ಯರು, ಕೈ. ವ್ಯಾಕರಣ ಪಂಡಿತ ಬಿ. ಮಲ್ಲಪ್ಪನವರು ಮೊದಲಾದ ಮಹಾ ಮಹಾ ಪಂಡಿತರು ಸದಾ ವೀರಶೈವ ಸಮಾಜದ ಹಿತಚಿಂತನೆಯಲ್ಲಿಯೇ ಇದ್ದರು.

ಧರ್ಮ ಧುರಂಧರರಾದ ವೀರಸಂಗಪ್ಪನವರು ವೀರಶೈವ ಸಮಾಜದಲ್ಲಿ ಸಂಸ್ಕೃತ ಜ್ಞಾನವನ್ನು ಅಭಿವೃದ್ಧಿಪಡಿಸಲೋಸುಗ ಒಂದು ಸಂಸ್ಕೃತಪಾಠಶಾಲೆಯನ್ನು ತಮ್ಮ ಸ್ವಂತ ವೆಚ್ಚದಿಂದ ಏರ್ಪಡಿಸಿದ್ದರು. ಅಲ್ಲದೆ ಅನಾಥರಾದ ವೀರಶೈವ ಬಾಲಕರಿಗೆ ಅನ್ನವಸ್ತ್ರಾದಿಗಳನ್ನು ಕೊಟ್ಟು ಅವರಿಗೆಲ್ಲಾ ವಿದ್ಯಾಭ್ಯಾಸಕ್ಕೆ ಅನುಕೂಲ ಪಡಿಸಿಕೊಡುತ್ತಿದ್ದರು.

ಇಂತಹ ಸುಸಮಯದಲ್ಲಿ ಕರಿಬಸವಶಾಸ್ತ್ರಿಗಳು ಮೈಸೂರಿಗೆ ಬಂದು ಯಜಮಾನ್ ವೀರಸಂಗಪ್ಪನವರ ದೃಷ್ಟಿಗೋಚರರಾದ ಕೂಡಲೇ ಸಮಾಜಾಭ್ಯುದಯ ಕಾಂಕ್ಷಿಗಳಾದ ಅವರು ತಮ್ಮ ಸಂಸ್ಕೃತಶಾಲೆಯಲ್ಲಿ ಅವರನ್ನು ಸೇರಿಸಿ ವಿದ್ಯಾಭ್ಯಾಸಕ್ಕೆ ಪ್ರಾರಂಭಮಾಡಿಸಿದರು. ಮಹನೀಯರ ಸಾನ್ನಿಧ್ಯವು ಎಂತಹ ಕಷ್ಟಗಳನ್ನಾದರೂ ಪಾರು ಮಾಡುವುದೆಂಬುದಕ್ಕೆ ಇದೊಂದು ನಿದರ್ಶನವಾಗಿದೆ.

ವಿದ್ಯಾಭ್ಯಾಸಃ— ತಮ್ಮ ತಾಯಿಯವರ ಮನೆಯಲ್ಲಿರುತ್ತಿರುವಾಗಲೇ ಇವರಿಗೆ ಬಾಲಪಾಠವು ಸರ್ಕಾರಿಯ ಪಾಠಶಾಲೆಗಳಲ್ಲಾಗಿದ್ದಿತು. ಅನಂತರವೇ ಇವರು ವೀರಸಂಗಪ್ಪನವರ ಸಂಸ್ಕೃತ ಪಾಠಶಾಲೆಯನ್ನು ಸೇರಿದುದು.

ಈ ಶಾಲೆಯಲ್ಲಿ ಸಂಸ್ಕೃತ ಚಂಪುಗಳನ್ನೂ ಕೆಲಮಟ್ಟಿಗೆ ಕನ್ನಡ ಸಾಹಿತ್ಯವನ್ನೂ ಓದಿದರು. ಅನಂತರ ಆಗ ತಾನೇ ನೂತನವಾಗಿ ಸ್ಥಾಪಿತವಾಗಿದ್ದ ಭಾಷೋಜ್ಜೀವಿನಿ ಪಾಠಶಾಲೆಯಲ್ಲಿ ಓದಲು ಪ್ರಾರಂಭಿಸಿದರು. ಈ ಮಹಾ ಪಾಠಶಾಲೆಯಲ್ಲಿ ಕನ್ನಡ ಸಂಸ್ಕೃತ ಭಾಷೆಗಳಲ್ಲಿ ನಾಟ

ಕಾಂತ್ಯವಾಗಿ ಸಂಪೂರ್ಣಪಾಂಡಿತ್ಯವನ್ನು ಪಡೆದರು. ಈ ಭಾಷೋಜ್ಜೀವಿನಿ ಪಾಠಶಾಲೆಯಲ್ಲಿ ಕೈ ಶ್ರೀಕಂಠ ಶಾಸ್ತ್ರಿಗಳು, ಈಗಲೂ ಜೀವಂತರಾಗಿರುವ ಪಂಡಿತೋತ್ತಮ ಪಿ. ಆರ್. ಕರಿಬಸವಶಾಸ್ತ್ರಿಗಳು ಎಂಬೀ ಪ್ರಚಂಡ ಪಂಡಿತರು ಅಧ್ಯಾಪಕರಾಗಿದ್ದುದರಿಂದ ಎಸ್. ಆರ್. ರವರ ವಿದ್ಯಾಭ್ಯಾಸವು ಅತ್ಯಂತ ಉತ್ತಮವಾಗಲು ಕಾರಣವಾಯಿತು. ಒಟ್ಟಿನಲ್ಲಿ ಪಿ. ಆರ್. ಶಾಸ್ತ್ರಿಗಳಂತಹ ಗುರುಗಳೂ ವೀರಸಂಗಪ್ಪನವರಂತಹ ಹಿತಚಿಂತಕರೂ ಲಭಿಸಿದುದರಿಂದ ಎಸ್. ಆರ್. ರವರ ಬಾಲ್ಯವು ಅತ್ಯಂತ ಫಲಪ್ರದವಾಗಲು ಕಾರಣವಾದುದಲ್ಲದೆ ವಿದ್ಯಾಭ್ಯಾಸವು ಉತ್ತಮವಾಗಿ ನಡೆಯಲವಕಾಶವಾಯಿತು.

ಸ್ವಂತವ್ಯಾಸಂಗ:— ಯಾವನೊಬ್ಬ ಪಂಡಿತನೇ ಆಗಲಿ ಎಲ್ಲವನ್ನೂ ಗುರುಮುಖದಿಂದಲೇ ತಿಳಿಯಲಾಗುವುದಿಲ್ಲ. ತನ್ನ ಅನುಭವದಿಂದಲೂ ದಿವ್ಯಜ್ಞಾನದಿಂದಲೂ. ಸ್ವಂತ ವ್ಯಾಸಂಗದಿಂದಲೂ ಹಲವು ಸಂಗತಿಗಳನ್ನು ಸಂಗ್ರಹಿಸಬೇಕಾಗುತ್ತದೆ. ವೇ|| ಎಸ್. ಆರ್. ಶಾಸ್ತ್ರಿಗಳು ಈ ಗುಟ್ಟು ಬಲ್ಲವರಾದುದರಿಂದ ಪ್ರೌಢ ವರ್ಗಕ್ಕೆ ಸೇರಿದ ಸಾಹಿತ್ಯ ಗ್ರಂಥಗಳನ್ನೂ ಮತಗ್ರಂಥಗನ್ನೂ ಮನೆಯಲ್ಲೇ ಓದಲು ಪ್ರಾರಂಭಿಸಿದರು ತೀಕ್ಷ್ಣಬುದ್ಧಿಯುಳ್ಳವರೂ ದೃಢಪ್ರತಿಜ್ಞರೂ ಆದವರಿಗೆ ಯಾವ ಗ್ರಂಥವೂ ಅಸಾಧ್ಯವಾಗಲಿಲ್ಲ. ಕಾಲಕಾಲಕ್ಕೆ ಯಜಮಾನ ವೀರಸಂಗಪ್ಪನವರ ಸಹಾಯವೂ ಸಲಹೆಯೂ ಇವರಿಗೆ ಲಭಿಸಿದುವು ಅದೃಷ್ಟ ಪರಿಪಾಕದಿಂದ ಇಂತಹ ಮಹನೀಯರ ಆಶ್ರಯ ಸಿಕ್ಕಿದುದನ್ನು ಇವರು ಚನ್ನಾಗಿಯೇ ಸಾರ್ಥಕ ಪಡಿಸಿಕೊಂಡರು. ಒಟ್ಟಿನಲ್ಲಿ ಇವರ ಸ್ವಂತ ವ್ಯಾಸಂಗವು ಇವರ ಪಾಂಡಿತ್ಯಕ್ಕೆ ಪರಿಣತಾವಸ್ಥೆಯನ್ನುಂಟು ಮಾಡಿತು.

ಅಭ್ಯುದಯ ಮಾರ್ಗ:— ಕರಿಬಸವಶಾಸ್ತ್ರಿಗಳು ವ್ಯಾಸಂಗ ಮುಗಿದಕೂಡಲೇ ಸಮಾಜಸೇವೆ ಸಾಹಿತ್ಯಸೇವೆಗಳಿಗಾಗಿ ಕಂಕಣಕಟ್ಟಿದರು. ಇವರಿಗೆ ಕವನಶಕ್ತಿ ಲೇಖನಶಕ್ತಿಗಳು ನಿಸರ್ಗವಾಗಿದ್ದುದನ್ನು ನೋಡಿ ಇವರಿಗೆ ತ್ರಿಕಾಲದಲ್ಲಿಯೂ ಹಿತಚಿಂತಕರಾಗಿದ್ದ ವೀರಸಂಗಪ್ಪನವರು ತಾವು ವೀರಶೈವ ಸಮಾಜದಲ್ಲಿ ಜಾಗ್ರತೆಯನ್ನುಂಟು ಮಾಡುವ ಸಲುವಾಗಿ ಹೊರಡಿಸಿದ್ದ 'ಮೈಸೂರ ಸ್ಟಾರ್' ಎಂಬ ವಾರಪತ್ರಿಕೆಗೆ ಇವರನ್ನು ಉಪಸಂಪಾದಕರನ್ನಾಗಿ ನೇಮಿಸಿಕೊಂಡರು. ಸ್ವಭಾವ ಚತುರರಾದ

ಇವರು ತಮ್ಮ ಲೇಖನ ನೈಪುಣ್ಯದಿಂದ ಸ್ವಲ್ಪ ಕಾಲದೊಳಗಾಗಿ ಸುಪ್ರಸಿದ್ಧ ಲೇಖನ ಕುಶಲರೆಂಬ ಖ್ಯಾತಿಯನ್ನು ಪಡೆದುದ್ದಲ್ಲದೆ ಸ್ಟಾರ್ ಪತ್ರಿಕೆಗೂ ಬಹಳ ಗೌರವವನ್ನುಂಟು ಮಾಡಿದರು.

ಪತ್ರಿಕಾವಾಚನ ಮತ್ತು ಲೇಖನಗಳು ಇವರ ನಿತ್ಯ ಜೀವನವಾದುದರಿಂದ ಪಾಂಡಿತ್ಯದ ಜೊತೆಗೆ ಇವರ ಲೋಕಾನುಭವವೂ ಹೆಚ್ಚಿತು- ಇದರ ಪರಿಶುದ್ಧವಾದ ಭಾಷೆ ಮನೋಹರವಾದ ಶೈಲಿ ಗಂಭೀರವಾದ ವಿಷಯ ಪ್ರತಿಪಾದನೆ ಇವುಗಳಿಂದೊಡಗೂಡಿದ ಲೇಖಗಳು ಕರ್ಣಾಟಕದಲ್ಲಿನ ರಸಿಕ ಜನರ ಚಿತ್ತವನ್ನೆಲ್ಲಾ ಸೂರೆಗೊಂಡುದರಲ್ಲಿ ಆಶ್ಚರ್ಯವಿಲ್ಲ. ಪಂಡಿತರ ಈ ಅತ್ಯದ್ಭುತವಾದ ಶಕ್ತಿಯೇ ಇವರಿಗೆ ಅಭ್ಯುದಯ ಮಾರ್ಗವಾಯಿತೆಂಬುದರಲ್ಲಿ ಸಂಶಯವಿಲ್ಲ. ಬೇಕಾದರೆ ಇವರ ಲೇಖನಗಳಿರುವ ಸ್ಟಾರ್ ಪತ್ರಿಕೆಯ ಸಂಚಿಕೆಗಳನ್ನು ಓದಿ ನೋಡಬಹುದು.

ಕವನಶಕ್ತಿ:— "ಕಲಿಸಿದೊಡೇಂ ಬರ್ಪುದೆ ಸಲ್ಲಲಿತ ಕವಿತ್ವಂ" ಎಂಬ ಮಹಾಕವಿ ಷಡಕ್ಷರಿ ದೇವನ ವಚನದಂತೆ ಕವನಶಕ್ತಿಯು ಕಲಿಸಿದರೆ ಬರತಕ್ಕದ್ದಲ್ಲ. ಇದು ಕವಿಗೆ ಶಿವಕೃಪಾದತ್ತವೂ ಸಂಸ್ಕಾರಯುಕ್ತವೂ ಆದುದು. ವೇ|| ಎನ್. ಆರ್. ರವರಿಗೆ ಕವಿತ್ವಶಕ್ತಿಯು ನಿಸರ್ಗವಾದುದು. ಇವರ ಕೋಮಲವೂ ಅರ್ಥಪೂರ್ಣವೂ ಆದ ಕವಿತೆಯು ರಸಿಕಜನ ಚಿತ್ತಾಹ್ಲಾದಕವಾಗಿರುವುದು- ಉದಾಹರಣೆಗಾಗಿ ಇವರೇ ಮುದ್ರಿಸಿರುವ ಪಂಡಿತಾರಾಧ್ಯಚರಿತ್ರೆಯ ಮುಖಪತ್ರದಲ್ಲಿರುವ ಕೆಲ ಪದ್ಯಗಳನ್ನಿಲ್ಲಿ ಎತ್ತಿ ಬರೆದಿರುವೆನು.

|| ಕಂದ || ಶ್ರೀ ರೇಣುಕ ವಂಶೀಯಂ ।
ವೀರಣಮಾಹೇಶ ಪೌತ್ರಕಂ ಜ್ಯೋತಿರ್ವಿ ||
ದ್ವಾರಸಿಕ ರುದ್ರಶಾಸ್ತ್ರಿ ಕು ।
ಮಾರಂ ಕರಿಬಸವಶಾಸ್ತ್ರೀಯಾಂ ಪದಪಿಂದಂ || ೧ ||

ರುಚಿರತರ ಪಂಡಿತಾರಾ।
ಧ್ಯ ಚರಿತ್ರಕ್ಕಿದಕೆಭಾವಮಂಜರಿ ವೆಸರಿಂ ||

ರಚಿಸಿರ್ಪಂ ಟಿಪ್ಪಣವಂ।
ಪ್ರಚಲಿತ ಕರ್ನಾಟಭಾಷೆಯಿಂ ಸೊಂಪೆನಿಸಲ್ ॥೨॥

ಧರೆಯ ಜನರ್ ಭಕ್ತಿಧುರಂ।
ಧರರೊಲ್ದಿದನೋದಿ ಕೇಳಿ ಪಸರಿಸಿ ಪರಮೇ॥
ಶ್ವರಕೃಪೆಯಿಂ ಸನ್ಮತಿಯಂ।
ಪರತರ ಸುಶ್ರೇಯಮಂ ಪಡೆಗೆ ಮಿಗೆ ಸತತಂ ॥೨॥

ವಿಜಯಿಕೆ ಶಿವಸಮಯಂ ಮೇಣ್।
ವಿಜಯಿಕೆ ಶಿವಧರ್ಮಭಕ್ತಿಸುಜ್ಞಾನಂಗಳ್॥
ವಿಜಯಿಕೆ ಪಂಚಾಚಾರ್ಯರ್ ।
ವಿಜಿತಾಖಿಲವಾದಿ ವಾದರಾದ್ಯತವೇದರ್॥೪॥

ನೆಲದಾಣ್ಮಂ ಕೃಷ್ಣೇಂದ್ರಂ।
ಗೆಲವೊಂದುಗೆ ರಾಜ್ಯಕಾರ್ಯದೊಳ್ ನಾಡೆಲ್ಲಂ॥
ನಲಿದಾಡುಗೆ ಮಳೆಬೆಳೆಯಿಂ।
ನಲವೊಂದುಗೆ ಪ್ರಕೃತಿ ನಿಚಯಮೆಲ್ಲಂ ಸತತಂ ॥೫॥

ಮೇಲಿನ ಐದು ಪದ್ಯರತ್ನಗಳನ್ನು ಓದಿದವರಿಗೆ ಈ ಕವಿಯು ಕವಿತೆಯನ್ನು ಎಷ್ಟು ಸಂಗ್ರಹವಾಗಿಯೂ, ಸರಳವಾಗಿಯೂ, ನಿರಾಯಾಸವಾಗಿಯೂ, ಹೃದಯಂಗಮವಾಗಿಯೂ, ಬರೆಯಬಲ್ಲನೆಂಬುದು ವೇದ್ಯವಾಗುತ್ತದೆ. ಇಂತಹ ಅಮೌಲ್ಯತಮವಾದ ಕವಿತಾಶಕ್ತಿಯು ಪಂಡಿತನಲ್ಲಿದ್ದರೆ ಸುವರ್ಣಕ್ಕೆ ಸೌಂಭ ಬೆರೆದಂತೆಯೇ ಸರಿ. ಕರಿಬಸವ ಶಾಸ್ತ್ರಿಗಳಿಗೆ ಉತ್ತಮ ಪಾಂಡಿತ್ಯವೂ ಉದ್ದಾಮ ಕವಿತಾಶಕ್ತಿಯೂ ಅಂಗಭೂತವಾಗಿದ್ದುದು ಅವರ ಜನ್ಮಾಂತರ ಪುಣ್ಯ ಪರಿಪಾಕವಲ್ಲದೆ ಮತ್ತೇನು?

ಗೃಹಸ್ಥಾಶ್ರಮ:— ಶಾಸ್ತ್ರಿಗಳು ಪ್ರಾಯ ಸಮರ್ಥರಾದ ಕೂಡಲೇ ತಮಗೆ ಅನುರೂಪಳಾದ ಕನ್ಯಾಮಣಿಯನ್ನು ಲಗ್ನವಾದರು. ವೀರ

ಸಂಗಪ್ಪನವರ ಉದಾರಾಶ್ರಯದಿಂದಲೂ ಪ್ರಚಂಡ ಪಾಂಡಿತ್ಯದ ಬಲದಿಂದಲೂ ಇವರ ಸಂಸಾರವು ಸುಖಮಯವಾಗಿ ನಡೆಯಿತು. ಇವರಿಗೆ ಇಬ್ಬರು ಗಂಡು ಮಕ್ಕಳೂ ಒಬ್ಬ ಹೆಣ್ಣು ಮಗಳೂ ಆದರು. ಇವರ ಪುಣ್ಯ ಪ್ರಭಾವದಿಂದ ಇವರು ಲಕ್ಷ್ಮೀದೇವಿಯ ಕಟಾಕ್ಷವೀಕ್ಷಣಕ್ಕೂ ಪಾತ್ರರಾದರು. ವಿದ್ವಜ್ಜನರನ್ನು ಬೆನ್ನಟ್ಟಿ ಹೋಗುವ ದಾರಿದ್ರ್ಯ ಗ್ರಹವು ಅದೇಕೋ ಈ ಶಾಸ್ತ್ರಿಗಳಿಗೆ ಭಯಪಟ್ಟು ಓಡಿದಂತೆ ತೋರುತ್ತದೆ. ಇವರ ತಂದೆಯವರಾದ ಕೈ|| ರುದ್ರಶಾಸ್ತ್ರಿಗಳು ಜ್ಯೋತಿಷ್ಕರಾದುದರಿಂದ ಆ ದಾಕ್ಷಿಣ್ಯಕ್ಕೇನಾದರೂ ನವಗ್ರಹಗಳು ಇವರ ಮೇಲೆ ಕೃಪೆ ಮಾಡಿದುವೋ ಏನೋ.

ಮತಪ್ರಕಾಶಿಕೆ:— ಸ್ಟಾರ್ ಪತ್ರಿಕೆಯಲ್ಲಿ ಲೇಖನ ಬರೆಯುವ ಕೆಲಸವೊಂದೇ ಇವರ ಮನಸ್ಸಿಗೆ ತೃಪ್ತಿಯನ್ನುಂಟು ಮಾಡಲಿಲ್ಲ. ಸಮಾಜ ಹಿತಕ್ಕಾಗಿ ಸಾಹಿತ್ಯ ಸೇವೆಗಾಗಿ ಪ್ರಾಚೀನ ಗ್ರಂಥಗಳನ್ನು ಸಂಸ್ಕರಿಸಿ ಅವನ್ನು ಪ್ರಚುರ ಪಡಿಸುತ್ತಿದ್ದ ಯಜಮಾನ ವೀರಸಂಗಪ್ಪನವರ ಹಾಗೂ ಪಿ. ಆರ್ ಕರಿಬಸವ ಶಾಸ್ತ್ರಿಗಳವರ ಮಾದರಿಯನ್ನು ಇವರು ಅನುಸರಿಸಿದರು.

ಆದುದರಿಂದ ಇವರು ' ವೀರಶೈವ ಗ್ರಂಥ ಪ್ರಕಾಶಿಕಾ ' ಎಂಬ ಮಾಸಿಕವನ್ನು ಹೊರಡಿಸಿ ತಮ್ಮ ಕಾರ್ಯಕ್ಷೇತ್ರವನ್ನು ವಿಶಾಲ ಮಾಡಿಕೊಂಡರು. ಈ ಕಾರ್ಯದಲ್ಲಿ ಇವರು ತಕ್ಕಮಟ್ಟಿಗೂ ಜಯಪ್ರದವನ್ನು ಹೊಂದಿದರು. ಈ ಗ್ರಂಥಪ್ರಕಾಶದಲ್ಲಿ ಮತಪ್ರಕಾಶವೂ ನಡದೇ ನಡೆಯಿತು.

ಗ್ರಂಥ ಪ್ರಸಾರ:— ಪ್ರಾಚೀನಗಳಾದ ಗ್ರಂಥಗಳನ್ನು ತಿದ್ದಿ ಅಂದವಾಗಿ ಮುದ್ರಿಸುವುದು ಸಮಾಜಾಭ್ಯುದಯಕ್ಕೆ ಅತ್ಯಂತ ಅವಶ್ಯವೆಂದು ಮೊದಲು ತಿಳಿದವರು ಶಕಪುರುಷರಾದ ವೀರಸಂಗಪ್ಪನವರು. ಅದನ್ನು ಅಭಿವೃದ್ಧಿ ಪಡಿಸಿದವರು ವೇ|| ಪಿ. ಆರ್. ರವರು. ಇದನ್ನೇ ಅನುಸರಿಸಿದವರು ವೇ|| ಎನ್. ಆರ್. ರವರು ಮತ್ತು ಇವರ ಸ್ನೇಹಿತರು.

ಸ್ವಂತ ಗ್ರಂಥಗಳನ್ನು ಬರೆದು ಪ್ರಚುರ ಪಡಿಸಬೇಕೆಂದು ಕೆಲವು ಪಂಡಿತರಿಗೆ ಹಂಬಲ. ಮತ್ತೆ ಕೆಲವರಿಗೆ ಪ್ರಾಚೀನ ಗ್ರಂಥಗಳನ್ನು ಪ್ರ

ಚಾರವಾಡಬೇಕೆಂಬ ಸಂಕಲ್ಪ. ಎನ್ ಆರ್ ರವರಾದರೋ ಎರಡನೆಯ ಗುಂಪಿಗೇ ಸೇರಿದವರು

ವೀರಶೈವ ಸಮಾಜಾಭ್ಯುದಯಕ್ಕೆ ವೀರಶೈವ ಗ್ರಂಥ ಪ್ರಸಾರವು ಅತ್ಯಂತ ಅವಶ್ಯಕ ಈಗಿನ ಕಾಲವಲ್ಲಿ ವೀರಶೈವರಲ್ಲಿ ಸಾಹಿತ್ಯ ಚಳವಳಿಯು ಪ್ರಬಲವಾಗಿ ನಡೆಯುದಿದ್ದರೂ ಒಂದೆರಡು ಶತಮಾನಗಳ ಹಿಂದೆ ವೀರಶೈವರು ಸಾಹಿತ್ಯ ಸಾಮ್ರಾಜ್ಯದಲ್ಲಿ ಎಂತಹ ಸ್ಥಾನಾಪನ್ನರಾಗಿದ್ದರೆಂಬುದನ್ನು ಕವಿಚರಿತ್ರೆಯಿಂದ ತಿಳಿಯಬಹುದು. ಕನ್ನಡ ಕವಿಚರಿತ್ರೆಯಲ್ಲಿ ಇಂದಿನ ವರೆಗೆ ಆಗಿ ಹೋದ ಕವಿಗಳಲ್ಲಿ ಜೈನ ಮತ್ತು ಬ್ರಾಹ್ಮಣ ಕವಿಗಳಿಗಿಂತಲೂ ವೀರಶೈವ ಕವಿಗಳೇ ಹೆಚ್ಚಾಗಿರುವರೆಂಬುದನ್ನು ಕವಿಚರಿತ್ರೆಯ ಮೂರನೇ ಭಾಗದ ಪೀಠಿಕೆಯಲ್ಲಿ ಓದಿ ನೋಡಬಹುದು. ವೀರಶೈವರ ಪ್ರಾಚೀನ ಸಾಹಿತ್ಯವು ಅಪಾರವಾಗಿದ್ದರೂ ಗ್ರಂಥ ಮುದ್ರಣಕ್ಕೆ ಬ್ರಿಟಿಷ್ ಪ್ರಭುತ್ವದಲ್ಲಿ ಮುದ್ರಣ ಯಂತ್ರಕಾಗದ ಮೊದಲಾದ ಬೇಕಾದಷ್ಟು ಅನುಕೂಲವಿದ್ದರೂ ವೀರಶೈವ ಪ್ರಾಚೀನ ಗ್ರಂಥಗಳು ಹತ್ತರಲ್ಲೊಂದಂಶವಾದರೂ ಪ್ರಕಟವಾಗಿಲ್ಲವೆಂದು ಹೇಳಬಹುದು. ಇಂತಹ ಶೋಚನೀಯಾವಸ್ಥೆಗೆ ವೀರಶೈವ ಪಂಡಿತರ ಹಾಗೂ ಸಮಾಜ ಪ್ರಮುಖರ ಅದೂರ ದರ್ಶಿತ್ವವೇ ಕಾರಣವೆಂದು ಘಂಟಾಘೋಷವಾಗಿ ಹೇಳಬಹುದು.

ವೀರಶೈವ ಸಮಾಜಕ್ಕಿರುವ ಈ ಅನಿಷ್ಟವನ್ನು ನಿವಾರಣೆ ಮಾಡಲು ಮೊದಲು ಟೊಂಕಕಟ್ಟಿದವರು ಮೈಸೂರಿನ ಪಂಡಿತರು. ವೀರಶೈವ ಮತ ಚರಿತ್ರೆಯಲ್ಲಿ ಇವರ ಹೆಸರು ಅತ್ಯಂತ ಪೂಜ್ಯಸ್ಥಾನವನ್ನು ಪಡೆಯತಕ್ಕುದಾಗಿದೆ. ಅಂತಹ ಪಂಡಿತರು ಯಾರೆಂಬುದನ್ನು ಮುಂದಿನ ಪಟ್ಟಿಯಲ್ಲಿ ಕಾಣಬಹುದು.

## ವೀರಶೈವ ಗ್ರಂಥ ಪ್ರಸಾರಕರು.

೧. ಕೈ॥ ಯಜಮಾನ ವೀರಸಂಗಪ್ಪನವರು.

೨. ಆಸ್ಥಾನ ಮಹಾವಿದ್ವಾನ ಕರ್ನಾಟಕ ಭಾಷಾ ರತ್ನ ಪಿ. ಆರ್ ಕರಿಬಸವ ಶಾಸ್ತ್ರಿಗಳು.

೩. ಕೈ॥ ಆಸ್ಥಾನ ವಿದ್ವಾನ ಎನ್. ಆರ್. ಕರಿಬಸವ ಶಾಸ್ತ್ರಿಗಳು,

೪. ಶ್ರೀ ಹೊಸಮಠದ ಚರಮೂರ್ತಿ ಬಸವಲಿಂಗಸ್ವಾಮಿಗಳು.
೫. ಕೈ॥ ಬಿ. ಬಸವಾರಾಧ್ಯ ಬಿ ಎ. ಬಿ ಎಲ್ ರವರು
೬. ಕೈ॥ ಮಲ್ಲಾರಾಧ್ಯರು ( ಬಸವಾರಾಧ್ಯರ ತಂದೆ )
೭. ಬೆಂಗಳೂರು ವೇ॥ ನಂ. ಶಿವಪ್ಪ ಶಾಸ್ತ್ರಿಗಳು.
೮. ನಮಶ್ಶಿವಾಯ ಮಠದ ಶ್ರೀ ಸೋಮಶೇಖರ ಸ್ವಾಮಿಗಳು.
೯. ಒಳ್ಳಾರಿಯ ಶಿವಲಿಂಗಶೆಟ್ಟರು.
೧೦. ಕೈ॥ ಯಂ. ಬಸವಲಿಂಗ ಶಾಸ್ತ್ರಿಗಳು.
೧೧. ವೇ॥ ಮಾಗಡಿ ವೀರಪ್ಪ ಶಾಸ್ತ್ರಿಗಳು.
೧೨. ರಾ. ಬ. ವಾರದ ಮಲ್ಲಪ್ಪನವರು.
೧೩. ರಾ. ಸಾ. ಹಳಕಟ್ಟಿ ವಕೀಲರವರು.
೧೪. ಕೈ॥ ಬಿ. ಮಲ್ಲಪ್ಪನವರು [ ವ್ಯಾಕರಣ ಪಂಡಿತ ]
೧೫. ಕೈ. ಹೆಸರಘಟ್ಟದ ಪಂಡಿತ ಹೊನ್ನಪ್ಪನವರು.
೧೬. ಶ್ರೀಮನ್ನಿರಂಜನ ಬೆಂಗಳೂರು ಗುರುವಣ್ಣ ದೇವರ ಮಠದ ನಂಜುಂಡ ಸ್ವಾಮಿಗಳು.

ಮೇಲಿನ ವೀರಶೈವ ಪಂಡಿತರೇ ಅಲ್ಲದೆ ಇನ್ನೂ ಕೆಲವರು ತಮ್ಮ ತಮ್ಮ ಯಥಾ ಶಕ್ತಿ ಗ್ರಂಥ ಪ್ರಸಾರ ಮಾಡಿರುವರು. ಇದಲ್ಲದೆ ಕೆಲವು ಮಂದಿ ಬ್ರಾಹ್ಮಣ ಪಂಡಿತರೂ ಸಾಹಿತ್ಯ ಪ್ರೇಮದಿಂದ ವೀರಶೈವ ಗ್ರಂಥಗಳನ್ನು ಪ್ರಸಾರ ಮಾಡಿ ತಮ್ಮ ಔದಾರ್ಯವನ್ನು ಪ್ರದರ್ಶನ ಮಾಡಿರುವರು.

ಶ್ರೀವೀರಸಂಗಪ್ಪನವರ ಕಾಲದಲ್ಲಿ ಖಾನೇಸುಮಾರಿಯಲ್ಲಿ ಹೆಸರು ಬರೆವ ನಿಮಿತ್ತ ಬ್ರಾಹ್ಮಣ ಮತ್ತು ವೀರಶೈವರ ಮಧ್ಯೆ ಒಂದು ಭಯಂಕರ ಧರ್ಮ ಯುದ್ಧವೇ ನಡೆದು ಹೋಯಿತು. ಆಗ ವೀರಶೈವ ಧರ್ಮ ಗ್ರಂಥಗಳ ಅವಶ್ಯಕತೆಯು ತೋರಿದುದರಿಂದ ಅಲ್ಲಿನ ವೀರಶೈವ ಪಂಡಿತರು ಬಡಿದೆಬ್ಬಿಸಿದ ಕೇಸರಿಗಳಂತೆ ತಮ್ಮ ಮತ ಗ್ರಂಥ ಪ್ರಸಾರಕ್ಕೆ ಶಕ್ತಿ ಮೀರಿ ಸಾಹಸ ಮಾಡಿದರು.

ವೀರಸಂಗಪ್ಪನವರ ಧರ್ಮ ಯುದ್ಧಕ್ಕೆ ಕೈ. ಬಸವಪ್ಪ ಶಾಸ್ತ್ರಿ, ವೇ॥ ಪಿ. ಆರ್. ಕರಿಬಸವ ಶಾಸ್ತ್ರಿಗಳು ಬಹಳ ಸಹಾಯಕರಾಗಿದ್ದರು. ಆಗ ಎಸ್. ಆರ್ ರವರು ವಿದ್ಯಾರ್ಥಿಗಳಾಗಿದ್ದರು. ವೀರಸಂಗಪ್ಪನವರ

ಧರ್ಮ ಯುದ್ಧವು ಮುಗಿದರೂ ಅಲ್ಲಿನ ವೀರಶೈವ ಪಂಡಿತರಿಗೆ ಆ ಭಯಂಕರ ಪ್ರಘಾತದಿಂದ ರಕ್ತವು ಕುದಿಯಲಾರಂಭಿಸಿತು. ಹೇಗಾದರೂ ಸಮಾಜದ ಗೌರವವನ್ನು ಹೆಚ್ಚಿಸಬೇಕೆಂದು ಸಾಹಸ ಮಾಡತೊಡಗಿದರು. ಎನ್ ಆರ್. ರವರು ಪ್ರಬುದ್ಧರಾದ ಕೂಡಲೇ ಅಂದಿನ ಪರಿಸ್ಥಿತಿಯನ್ನನುಸರಿಸಿ ತಾವೂ ಗ್ರಂಥ ಪ್ರಸಾರಕ್ಕೆ ಪ್ರಾರಂಭಿಸಿದರು.

ಆಗ ಅಲ್ಲಿನ ವೀರಶೈವ ಪಂಡಿತರೆಲ್ಲರೂ ಒಟ್ಟಾಗಿ 'ವೀರಶೈವ ಗ್ರಂಥ ಪ್ರಸಾರಕ ಮಂಡಲಿ' ಎಂಬ ಸಂಘವನ್ನು ಮಾಡಿಕೊಂಡು ಆ ಮಂಡಲಿಯ ಮುಖದಿಂದಲೂ ಸ್ವತಂತ್ರವಾಗಿಯೂ ಗ್ರಂಥಗಳನ್ನು ಪ್ರಕಟಿಸ ತೊಡಗಿದರು. ಈ ಕಾರ್ಯದಲ್ಲಿ ಎನ್. ಆರ್. ರವರೂ ಪಾಲುಗಾರರಾಗಿಯೇ ಇದ್ದರು.

ಗ್ರಂಥ ಸೇವೆ:— ವೇ|| ಎನ್. ಆರ್ ರವರ ಕೀರ್ತಿಯನ್ನು ದೇಶವಿಖ್ಯಾತರಾಗಿ ಮಾಡಿದುದು ಅವರ ಗ್ರಂಥ ಪ್ರಚಾರ ಕಾರ್ಯವೇ. ಅವರು ಪ್ರಕಟಿಸಿದ ಗ್ರಂಥಗಳನ್ನೂ ಆ ಗ್ರಂಥಗಳ ಸಂಕ್ಷಿಪ್ತ ವಿಷಯವನ್ನೂ ಮುಂದೆ ಸಂಗ್ರಹಿಸಿ ಬರೆದಿದೆ.

೧. ಸಿದ್ಧಾಂತ ಶಿಖಾಮಣಿ:— ವೀರಶೈವ ನೆನಿಸಿದ ಪ್ರತಿಯೊಬ್ಬನಿಗೂ ಈ ಗ್ರಂಥದ ಪರಿಚಯವಿದ್ದೇ ಇರಬೇಕು. ಇದು ಶ್ರೀ ಜಗದ್ಗುರು ರೇಣುಕಾಚಾರ್ಯರು ಅಗಸ್ತ್ಯ ಮಹರ್ಷಿಗೆ ಶಿವಸಿದ್ಧಾಂತವನ್ನುಪದೇಶಿಸಿದುದರ ಸಾರವು. ಇದನ್ನು ಬರೆದವನು ಪ್ರಸಿದ್ಧನಾದ ಶ್ರೀಸಿದ್ಧರಾಮೇಶ್ವರನ ವಂಶೋದ್ಭವನಾದ ಶಿವಯೋಗಿ ಶಿವಾಚಾರ್ಯನು. ವೀರಶೈವ ಗ್ರಂಥರಾಶಿಗಳಲ್ಲಿ ಇದು ಇಂದಿಗೂ ಶಿಖಾಮಣಿ ಪ್ರಾಯವಾಗಿಯೇ ಇದೆ. ಇದನ್ನು ಮೊದಲು ಪ್ರಕಟಿಸಿದವರು ಕೈ|| ಯಜಮಾನ ವೀರಸಂಗಪ್ಪನವರು. ಕ್ರಿ. ಶ. ೧೮೮೦ ಸುಮಾರಿನಲ್ಲಿ ಮೈಸೂರಿನಲ್ಲಿ ತೆಲಗು ಲಿಪಿಯಲ್ಲಿ ತಮ್ಮ ಸ್ವಂತ ಮುದ್ರಣಾಲಯದಲ್ಲಿ ಮುದ್ರಿಸಿ ಪ್ರಕಟಿಸಿದರು. ಆಗ ಇದನ್ನು ಮರಿತೋಂಟದಾರ್ಯ ಕೃತತತ್ವ ಪ್ರಕಾಶಿಕಾಖ್ಯ ವ್ಯಾಖ್ಯಾನ ಸಹಿತವಾಗಿ ತಿದ್ದಿಕೊಟ್ಟು ಸಹಾಯ ಮಾಡಿದರು. ವೇ|| ಪಿ. ಆರ್ ಕರಿಬಸವಶಾಸ್ತ್ರಿಗಳು ಅದನ್ನೇ ಎನ್ ಆರ್. ರವರು ಇನ್ನೂ ಸುಧಾರಿಸಿ ತಾವೇ ಎಲ್ಲರಿಗೂ ತಿಳಿಯುವ ಹಾಗೆ ಸುಲಭವಾದ ರೀತಿಯಿಂದ "ತಾತ್ಪರ್ಯದೀಪಿಕೆ" ಎಂಬ ಟಿಪ್ಪಣವನ್ನು ಬರೆದು ಕ್ರಿ. ಶ. ೧೯೨೧ ರಲ್ಲಿ ಪ್ರಕಟ

ಸಿಗುವರು. ಹೀಗಾದ ಮೇಲೆಯೇ ಈ ಗ್ರಂಥವು ಸರ್ವರಿಗೂ ಸುಲಭ ಗ್ರಾಹ್ಯವಾಯಿತೆನ್ನಬಹುದು.

೨. ಪಂಡಿತಾರಾಧ್ಯ ಚರಿತ್ರೆ:— ಇದು ಶ್ರೀಶೈಲದ ವೀರಶೈವ ಜಗದ್ಗುರು ಪೀಠವಾದ ಸೂರ್ಯ ಸಿಂಹಾಸನಕ್ಕೆ ಸೇರಿದ ಮಲ್ಲಿಕಾರ್ಜುನ ಪಂಡಿತಾರಾಧ್ಯನ ಚರಿತ್ರೆಯು. ಇದನ್ನು ಮೊದಲು ತೆಲಗಿನಲ್ಲಿ ಪ್ರಸಿದ್ಧನಾದ ಪಾಲ್ಕುರಿಕೆ ಸೋಮನಾರಾಧ್ಯನು ಬರೆದನು. ಅದನ್ನು ಮಹಾ ಕವಿಯಾದ ಗುರುರಾಜ ಪಂಡಿತನು ಸಂಸ್ಕೃತಕ್ಕೆ ಪರಿವರ್ತಿಸಿದನು. ಇದಕ್ಕೆ ಎನ್. ಆರ್ ರವರು 'ಭಾವ ಮಂಜರಿ' ಎಂಬ ಕರ್ನಾಟಕ ಟಿಪ್ಪಣಿವನ್ನು ಬರೆದು ಕ್ರಿ. ಶ. ೧೯೨೭ ರಲ್ಲಿ ಪ್ರಕಟಿಸಿರುವರು. ಈ ಗ್ರಂಥವು ವೀರಶೈವ ಜಿಜ್ಞಾಸುಗಳಿಗೆ ಅತ್ಯಂತ ಪ್ರಯೋಜನಕಾರಿಯಾಗಿದೆ.

೩. ಚನ್ನಬಸವೇಶ ವಿಜಯಂ:— ಇದು ವಿರುಪಾಕ್ಷ ಪಂಡಿತಕೃತ ಚನ್ನಬಸವ ಪುರಾಣದ ಗದ್ಯಾನುವಾದವು. ಚನ್ನಬಸವ ಪುರಾಣವು ಕನ್ನಡದಲ್ಲಿ ಅತ್ಯಂತ ಶ್ರೇಷ್ಠ ತರಗತಿಗೆ ಸೇರಿರುವ ಷಟ್ಪದೀ ಕಾವ್ಯ. ಇದನ್ನು ಓದಿ ತಿಳಿಯಲಿಕ್ಕೆ ತಕ್ಕಷ್ಟು ಪಾಂಡಿತ್ಯವಿದ್ದ ಹೊರತು ಸಾಧ್ಯವಿಲ್ಲ. ಆದುದರಿಂದ ಆ ಬಾಲವೃದ್ಧರಿಗೆಲ್ಲಾ ಆ ಮಹಾ ಪುರಾಣದ ಸಾರವು ತಿಳಿಯಬೇಕೆಂಬ ಸಂಕಲ್ಪದಿಂದ ಎನ್. ಆರ್ ಶಾಸ್ತ್ರಿಗಳು ಅದನ್ನು ತಿರುಳು ಕನ್ನಡದಲ್ಲಿ ಬರೆದು ಪ್ರಚುರ ಪಡಿಸಿದರು.

೪ ಬಸವರಾಜ ವಿಜಯಃ— ಷಡಕ್ಷರಿಯ ವೃಷಭೇಂದ್ರ ವಿಜಯ ಭೀಮ ಕವಿಯ ಬಸವ ಪುರಾಣಗಳ ಕನ್ನಡ ಗದ್ಯಾನುವಾದ ಶ್ರೀಬಸವೇಶ್ವರನ ಹಾಗೂ ಶಿವಶರಣರ ಕಥೆಗಳನ್ನು ಎಲ್ಲ ಕನ್ನಡಿಗರೂ ಸುಲಭವಾಗಿ ತಿಳಿಯಲು ಈ ಗ್ರಂಥವು ಬಹಳ ಸಹಾಯ ಮಾಡಿದೆ. ಕನ್ನಡ ಗದ್ಯ ರಚನೆಯಲ್ಲಿ ಶಾಸ್ತ್ರಿಗಳಿಗೆ ಎಂತಹನೈಪುಣ್ಯವಿದ್ದಿತೆಂಬದನ್ನು ಮೇಲಿನೆರಡು ಗ್ರಂಥಗಳಲ್ಲಿ ಕಾಣಬಹುದು.

೫. ಸೌಂದರ ಪುರಾಣ: ಅರವತ್ತು ಮೂರು ಮಂದಿ ಪುರಾತನರಲ್ಲಿ ಒಬ್ಬನಾದ ಸುಂದರೇಶನ ಪುರಾಣ. ಇದನ್ನು ಬೊಮ್ಮರಸನೆಂಬ ಒಬ್ಬ ವೀರಶೈವ ಮಹಾಕವಿಯು ಬರೆದಿರುವನು. ಕನ್ನಡ ಷಟ್ಪದಿಗಳಲ್ಲಿ ಇದೊಂದು ಉದ್ದಾಮ ಗ್ರಂಥ. ಈ ಬೊಮ್ಮರಸನ ಶೈಲಿಯು ಕನ್ನಡದಲ್ಲಿ ಹೆಸರಾದುದು. ಇಂತಹ ಉತ್ತಮ ಕಾರ್ಯವನ್ನು ಎನ್.

ಆರ್. ರವರು ತಮ್ಮ ಗುರುಗಳ ಮತ್ತು ಗೆಳೆಯರ ಸಹಾಯದಿಂದ ಪ್ರಕಾಶ ಪಡಿಸಿದರು.

೬. ವೀರಶೈವ ಧರ್ಮ ಶಿರೋಮಣಿಃ— ಕೆಳದಿಯ ವೀರಶೈವ ರಾಜರಲ್ಲಿ ಅಭಿನವ ಭೋಜನೆನಿಸಿದ ಬಸವರಾಜನ ಮಂತ್ರಿಯಾದ ಷಡಕ್ಷರ ಮಂತ್ರಿಯು ಬರೆದ ಈ ಗ್ರಂಥವನ್ನು ಇವರು ಪ್ರಸಿದ್ಧಿಸಿರುವರು.

೭. ರೇವಣ ಶಿದ್ದೇಶ್ವರ ಪುರಾಣಃ— ಇದು ಬೊಮ್ಮರಸಕವಿ ಪ್ರಣೀತವಾದ ಷಟ್ಪದೀಕಾವ್ಯ. ಇದರಲ್ಲಿ ಶ್ರೀರೇಣುಕ ಭಗವತ್ಪಾದರ ವಿಷಯವು ವರ್ಣಿಸಲ್ಪಟ್ಟಿದೆ. ಇದನ್ನು ಎಸ್. ಆರ್. ರವರು ಸಂಸ್ಕರಿಸಿ ಪ್ರಕಟಿಸಿರುವರು.

೮. ಪಾಲ್ಕುರಿಕೆ ಸೋಮೇಶ್ವರ ಪುರಾಣಃ— ಇದು ತೋಂಟದ ಸಿದ್ಧಲಿಂಗ ಶಿವಯೋಗೀಂದ್ರ ವಿರಚಿತವಾದ ಷಟ್ಪದೀಕಾವ್ಯ ಇದೂ ಸಹ ಇವರಿಂದ ಪ್ರಕಟಿಸಲ್ಪಟ್ಟಿದೆ.

೯. ವೀರಶೈವ ದೀಕ್ಷಾ ವಿಧಿಃ— ಶಿವಾಗಮಗಳಲ್ಲಿ ಉಕ್ತವಾಗಿರುವ ಶಿವದೀಕ್ಷಾ ವಿಷಯವನ್ನು ಶ್ರೀಬಸವ ಶಿವಾಚಾರ್ಯರು ಸಂಸ್ಕೃತದಲ್ಲಿ ಸಂಗ್ರಹಿಸಿ ಗ್ರಂಥ ರೂಪವಾಗಿ ಬರೆದಿದ್ದರು. ಅದನ್ನು ವೀರಶೈವ ಮತಾಭಿವರ್ಧಕರಾದ ವೀರಸಂಗಪ್ಪನವರು ತಮ್ಮ ಮುದ್ರಣಾಲಯದಲ್ಲಿ ಕನ್ನಡ ಲಿಪಿಯಲ್ಲಿ ಪ್ರಕಟಿಸಿದರು. ಅದನ್ನು ಎಸ್. ಆರ್. ಶಾಸ್ತ್ರಿಗಳು ಚೆನ್ನಾಗಿ ಸುಧಾರಿಸಿ ಕಲವು ಕಡೆ ಕನ್ನಡ ಟಿಪ್ಪಣಿಯನ್ನೂ ಬರೆದು ಪ್ರಕಟಿಸಿದರು.

೧೦ ಶಿವಯೋಗ ಪ್ರದೀಪಿಕಾಃ— ವೇದಾಂತ ರಾಜ್ಯಕ್ಕೆ ಚಕ್ರವರ್ತಿಗಳೆನಿಸಿದ ಶ್ರೀಮನ್ನಿಜಗುಣ ಶಿವಯೋಗಿಗಳ ಗುರುಗಳಿಂದ ಶ್ರೀ ಚನ್ನ ಸದಾಶಿವಯೋಗಿಗಳು ಈ ಗ್ರಂಥಕರ್ತರು. ಇದಕ್ಕೆ ಬಸವಾರಾಧ್ಯರೆಂಬ ಪ್ರಾಚೀನ ಪಂಡಿತರೊಬ್ಬರು ಕನ್ನಡ ಟೀಕೆಯನ್ನೂ ಬರೆದಿರುವರು. ಇದನ್ನು ಎಸ್. ಆರ್. ರವರು ವಿಶೇಷ ಶ್ರಮವಹಿಸಿ ತಿದ್ದಿ ಪ್ರಕಟಿಸಿರುವರು. ಈ ಗ್ರಂಥವು ಶಿವಯೋಗಾಭ್ಯಾಸಿಗಳಿಗೆ ಅತ್ಯಂತ ಸಹಾಯಕವಾದುದು.

೧೧. ಶತಸೂತ್ರ ರತ್ನಃ— ಶ್ರೀ ಭೋಜದೇವ ಪ್ರಣೀತವಾದೀ ಗ್ರಂಥಕ್ಕೆ ಸರ್ವಶೇಶ ಪಂಡಿತನು ಕನ್ನಡ ಟೀಕೆಯನ್ನು ಬರೆದಿರುವನು. ಇದು ಸಹ ಎಸ್. ಆರ್. ರವರಿಂದ ಪ್ರಕಾಶವಾಗಿದೆ.

೧೨. ತತ್ವ ಪ್ರಕಾಶಿಕಾ:--. ಇದು ಸಹ ಶ್ರೀ ಭೋಜದೇವ ಪ್ರಣೀತವಾದುದೇ. ಇದಕ್ಕೂ ಪರ್ವತೇಶ್ವರನು ಕನ್ನಡ ಟೀಕೆಯನ್ನು ಬರೆದಿರುವನು. ಶತಸೂತ್ರರತ್ನ ಮತ್ತು ತತ್ವ ಪ್ರಕಾಶಿಕಾ ಎಂಬೀ ಗ್ರಂಥಗಳೆರಡೂ ವೀರಶೈವ ತತ್ವಗಳನ್ನು ಅತ್ಯಂತ ಸಂಗ್ರಹವಾಗಿಯೂ ಪ್ರತಿಪಾದಿಸುತ್ತವೆ.

೧೩. ರಕ್ಷಾಶತಕಂ:-- ಮಹಾಕವಿ ಹರಿಹರಾಚಾರ್ಯ ಪ್ರಣೀತವಾದುದು. ಪಂಪಾಪುರದರಸ ವಿರೂಪಾಕ್ಷನ ಅಂಕಿತವಾಗಿದೆ. ಕನ್ನಡದಲ್ಲಿ ಶ್ರೇಷ್ಠತಮ ಶತಕವಾಗಿದೆ.

೧೪. ಶಂಕರಲಿಂಗ ಕಂದ:-- ಸಂಪಾದನೆಯ ಸಿದ್ಧವೀರಣ್ಣೊಡೆಯ ಪ್ರಣೀತವಾದುದು. ಭಕ್ತಿರಸವು ತುಂಬಿ ತುಳುಕುತ್ತದೆ.

೧೫ ಸ್ತುತಿ ಮುಕ್ತಾವಳಿ:— ಬಸವಾದಿ ಪ್ರಮಥರ ಸ್ತುತಿಪರವಾದ ವಚನಗಳೂ ರಗಳೆಗಳೂ ಪದ್ಯಗಳೂ ಕೆಲವು ಪ್ರಾಚೀನ ಕವಿಗಳಿಂದ ಸಂಗ್ರಹಿಸಲ್ಪಟ್ಟಿವೆ.

೧೬. ದೇವೀ ಕಾಲೋತ್ತರಾಗಮದ ಜ್ಞಾನಾಚಾರ ಬೋಧಕ ಪಟಲವು:-- ಪರ್ವತೇಶ ಕೃತ ಕರ್ಣಾಟಕ ಟಿಪ್ಪಣಿ ಸಹಿತವಾಗಿದೆ.

೧೭. ಸಟೀಕಾ ವೃಷಭೇಂದ್ರವಿಜಯಃ— ಮಹಾಕವಿ ಷಡಕ್ಷರಿಯು ವೃಷಭೇಂದ್ರ ವಿಜಯವನ್ನು ತಿದ್ದಿ ಕಷ್ಟಕರ ಶಬ್ದಗಳಿಗೆ ಟಿಪ್ಪಣವನ್ನು ಬರೆದಿರುವರು.

ಮೇಲೆ ವಿವರಿಸಿರುವುಗಳೇ ಅಲ್ಲದೆ 'ಸ್ಟಾರ್' ಕಾರ್ಯಾಲಯದಲ್ಲಿ ಪ್ರಸಿದ್ಧವಾಗಿರುವ ಶತಕತ್ರಯ, ಬಸವೇಶನ ಜನನ, ಕರ್ಣಾಟಕ ಶಬ್ದ ಮಂಜರಿ, ವೀರಶೈವ ಶಿವಪೂಜಾವಿಧಿ ಮೊದಲಾದ ಗ್ರಂಥಗಳನ್ನು ಇವರು ಪರಿಷ್ಕರಿಸಿ ಕೊಟ್ಟಿರುವರು. ಈ ರೀತಿಯಲ್ಲಿ ವೇ॥ ಎಸ್. ಆರ್ ರವರ ಗ್ರಂಥ ಸೇವೆಯು ಅಪಾರವಾಗಿರುವುದಲ್ಲದೆ ಅಭೂತಪೂರ್ವವೂ ಆಗಿರುವುದು.

ಆಸ್ಥಾನ ವಿದ್ವಾನ್:-- ಈ ರೀತಿಯಲ್ಲಿ ಸಾಹಿತ್ಯಸೇವೆ, ಸಮಾಜ ಸೇವೆಯಲ್ಲಿ ಶಾಸ್ತ್ರಿಗಳು ತೋರಿದ ಕುತೂಹಲವು ಇವರನ್ನು ಅತೀವವಾಗಿ ಲೋಕಾದರಕ್ಕೆ ಪಾತ್ರರನ್ನಾಗಿ ಮಾಡಿತು. ಇವರ ಲೇಖನ

ಚಾತುರ್ಯ, ಕವಿತಾಗಾಂಭೀರ್ಯ ಗ್ರಂಥಪಾಂಡಿತ್ಯ, ಮೊದಲಾದ ಶಕ್ತಿಗಳು ವಿದ್ವಜ್ಜನರಿಗೂ ಮೆಚ್ಚಿಕೆಯನ್ನುಂಟು ಮಾಡುತ್ತಿದ್ದುವು.

ಮೈಸೂರು ಅರಮನೆಯ ಮುಜರಾಯಿ ಭಕ್ಷಿಯವರೂ ರಾಮಾಯಣಸಂಗ್ರಹ, ಯದುನೃಪವಿಜಯ, ಮೊದಲಾದ ಗ್ರಂಥಕರ್ತರೂ ವಿದ್ವತ್ಪಕ್ಷಪಾತಿಗಳೂ ಸಾಕ್ಷರ ಶಿರೋಮಣಿಗಳೂ ಆದ ಶ್ರೀ ರಾಜಕವಿ ಭೂಷಣ ಲಿಂಗರಾಜ ಅರಸರು ಈ ಶಾಸ್ತ್ರಿಗಳ ವೈದುಷ್ಯಕ್ಕೆ ಮೆಚ್ಚಿದವರಾಗಿ ಶ್ರೀ ಮನ್ಮಹಾರಾಜರವರಲ್ಲಿ ಅರಿಕೆ ಮಾಡಿ ಕ್ರಿ. ೧೯೧೭ ನೇ ಇಸವಿಯಲ್ಲಿ ವೇ॥ ಎನ್. ಆರ್. ಕರಿಬಸವ ಶಾಸ್ತ್ರಿಗಳನ್ನು ಅರಮನೆಯ ಆಸ್ಥಾನ ವಿದ್ವಾನ್ ಪದವಿಗೆ ಸೇರಿಸಿದರು. ಹೀಗೆ ಶಾಸ್ತ್ರಿಗಳು ತಮ್ಮ ವಿದ್ವತ್ತಿನಿಂದಲೂ ಸೌಜನ್ಯದಿಂದಲೂ ಮೈಸೂರಿನಲ್ಲಿಯೂ ವಿಶಾಲ ಕರ್ಣಾಟಕದಲ್ಲಿಯೂ ಬಹಳ ಪ್ರಸಿದ್ಧಿಗೆ ಬಂದು ಘನಪಂಡಿತರೆನಿಸಿದರು.

ಅಂತ್ಯಕಾಲ:-- ಬಾಲ್ಯದಲ್ಲಿಯೇ ಪಿತೃವಿಯೋಗವಾದರೂ ಅದೃಷ್ಟ ಪ್ರಭಾವದಿಂದ ಒಳ್ಳೆಯ ಆಶ್ರಯದಲ್ಲಿ ಬೆಳೆದು ಉತ್ತಮ ಪಂಡಿತರಲ್ಲಿ ವಿದ್ಯಾಭ್ಯಾಸ ಮಾಡಿ ತಾವೂ ಘನಪಂಡಿತರೆನಿಸಿಕೊಂಡು ಸಮಾಜಸೇವೆಯನ್ನೂ ಮಾಡಿ ಮೈಸೂರು ಸ್ಟಾರ್ ಉಪಸಂಪಾದಕರೂ ಆಸ್ಥಾನ ವಿದ್ವಾಂಸರೂ ವೀರಶೈವ ಪ್ರಮುಖ ಪಂಡಿತರೂ ಎನಿಸಿದ ಈ ಶಾಸ್ತ್ರಿಗಳು ಕಡೆಗೆ ಮೂತ್ರ ವ್ಯಾಧಿಯಿಂದ ಸಂತಪ್ತರಾದರು. ಆಂಗ್ಲ ಹಾಗೂ ಆಯುರ್ವೇದ ಪಂಡಿತರಿಂದ ಔಷಧ ತೆಗೆದುಕೊಂಡರೂ ಫಲವಾಗದೆ ವೇ॥ ಎನ್. ಆರ್. ರವರು ಕ್ರಿ. ಶ. ೧೯೨೩ ನೇ ಇಸವಿ ಮೇ ತಾರೀಖು ೯ ನೇ ಬುಧವಾರ ರಾತ್ರಿ ಕೈಲಾಸವಾಸಿಗಳಾದರು. ಅವರ ಮರಣದಿಂದ ಅವರ ಕುಟುಂಬಕ್ಕೂ ಮೂರು ಮಕ್ಕಳಿಗೂ ಸಮಸ್ತ ವೀರಶೈವರಿಗೂ ಎಲ್ಲ ಕನ್ನಡಿಗರಿಗೂ ಮಹತ್ವದ ದುಃಖವಾಯಿತು. ಅಲ್ಲದೆ ಇವರ ಅಳಿವಿನಿಂದ ಮೈಸೂರು ಸ್ಟಾರ್‌ಪತ್ರಿಕೆಯ ಘನತೆಯೂ ಪ್ರಸಾರವೂ ಬಹುಮಟ್ಟಿಗೆ ಕಡಿಮೆಯಾಯಿತು. ಇವರು ಇನ್ನೂ ಕೆಲವು ವರ್ಷ ಬದುಕಿದ್ದರೆ ಹಲವು ಗ್ರಂಥಗಳು ಹೊರಬಿದ್ದು ಸಾಹಿತ್ಯಕ್ಕೂ ತನ್ಮೂಲಕ ಸಮಾಜಕ್ಕೂ ಮಹದುಪಕಾರವಾಗುತ್ತಿದ್ದಿತು. ಇವರಿಗೆ ಮರಣ ಕಾಲದಲ್ಲಿ ೫೧ ವರ್ಷ ಮಾತ್ರವಾಗಿದ್ದಿತು. ಆದರೂ ವಿಧಿಯು

ಇವರ ಮೇಲೆ ತನ್ನ ಕಠೋರ ದೃಷ್ಟಿಯನ್ನಿಡಲು ಕಾರಣವೇನೋ ತಿಳಿಯದೆ ಹೋಗಿದೆ.

ಗುಣರೂಪಗಳು:--- ಶ್ರೀ ಶಾಸ್ತ್ರಿಗಳು ರೂಪಿನಲ್ಲಿಯೂ ಗುಣದಲ್ಲಿಯೂ ಸಹ ವರ್ಣನೀಯರಾಗಿದ್ದರು. ವಿಶಾಲವಾದ ಹಣೆ, ನೀಳವಾದ ಮೂಗು, ಬಿಗಿಯಾದ ಮೈಕಟ್ಟು, ಆಜಾನುಗಳಾದ ಬಾಹುಗಳು, ಆನಂದಮಯವಾದ ಮುಖಮುದ್ರೆ, ಹರ್ಷ ಸೂಚಕವಾದ ನೇತ್ರಗಳು, ಕೆಂಪಾದ ಮೈಬಣ್ಣ ಇವು ಯಾರಿಗೆ ತಾನೇ ಹರ್ಷವನ್ನುಂಟು ಮಾಡುತ್ತಿರಲಿಲ್ಲ?

ಇವರಲ್ಲಿ ಪರಹಿತಬುದ್ಧಿಯೂ, ಸತತಪ್ರಯತ್ನವೂ, ಶಾಂತಿಸ್ಥೈರಣೆಗಳೂ ಸದಾ ನೆಲಿಸಿರುತ್ತಿದ್ದವು. ಇವರು ಭೂಭಾರಕರಾದ ಕೆಲವು ಪಂಡಿತರಂತೆ ಅಹಂಕಾರ, ಹಟಮಾರಿತನ, ಸ್ವಾರ್ಥಪರತ್ವ ಮೊದಲಾದ ಗುಣಗಳಿಗೆ ಎಂದೂ ಈಡಾದವರಾಗಿರಲಿಲ್ಲ.

ಇವರು ವೀರಶೈವರಲ್ಲಿರುವ ಪಂಚಾಚಾರ್ಯ ಮತ್ತು ವಿರಕ್ತ ಎಂಬೀ ಪಂಗಡಗಳ ಗೊಂದಲಕ್ಕೆ ಹೋಗದೆ ಕೈಲಾದಮಟ್ಟಿಗೂ ತಮಗೆ ತಿಳಿದಮಟ್ಟಿಗೂ ಸಮಾಜಸೇವೆ ಮಾಡಿ ತಮ್ಮ ಮಾತಾಪಿತೃಗಳಿಗೂ ವಿದ್ಯಾ ಗುರುಗಳಿಗೂ ತನ್ನೂರಿಗೂ ತನ್ನ ಸಮಾಜಕ್ಕೂ ಭೂಷಣ ಪ್ರಾಯರೆನಿಸಿ ತಮ್ಮ ಜೀವಿತವನ್ನೂ ಸಫಲ ಮಾಡಿಕೊಂಡು ಶಿವಸನ್ನಿಧಿಯನ್ನೈದಿ ಸುಖವಾಗಿರುವರು.

ಉಪಸಂಹಾರ:-- ಈ ಮಹನೀಯರ ಚರಿತೆಯು ಈ ಪರಿಯಲ್ಲಿ ಸರ್ವಾಂಗ ಸುಂದರವಾಗಿ ಇತರ ವೀರಶೈವ ಪಂಡಿತರಿಗೆ ಮಾರ್ಗದರ್ಶಕವಾಗಿರುವುದು. ಅಲ್ಲದೆ ವೀರಶೈವ ಚರಿತೆಯಲ್ಲಿ ಇದು ಮುಖ್ಯ ಅಧ್ಯಾಯವೇ ಆಗಿರುವುದು.

ಟಿಪ್ಪಣಿ:-- ನನ್ನ ಈ ಲೇಖನಕ್ಕೆ ವೀರಶೈವ ಕರದರ್ಪಣವೂ, ೧೯೩೩ ನೇ ಇಸವಿ ಮೇ ತಾರೀಖು ೧೩ ರ ಸ್ವರಪತ್ರಿಕೆಯೂ ಕೆಲಮಟ್ಟಿಗೆ ಸಹಾಯ ಮಾಡಿದೆ. ಆದುದರಿಂದ ನನ್ನ ಈ ಬರೆವಣಿಗೆಯು ಮೇಲಿನವುಗಳಿಗೆ ಋಣಿಯಾಗಿದೆ.



# ಪಾದಸ್ತೋತ್ರ.

(ಸಂಗ್ರಾಹಕ:— ಕೇ. ಚನಮಲ್ಲಪ್ಪ ಶಿರಾಳಕೊಪ್ಪ ಜಿಲ್ಲಾ ಶಿವಮೊಗ್ಗೆ)



ಎನ್ನ ರಕ್ಷಿಸುಪಾದ । ಚೆನ್ನ ಶ್ರೀ ಗುರುಪಾದ ॥ ಪ.॥
ಮುನ್ನಘನಲೀಲೆಯಲಿ । ಸನ್ನುತದಪಾದ ॥ ಅ. ಪ.॥

ನಾದರೂಪಿನಪಾದ । ಆದಿಗುರುವಿನ ಪಾದ ॥
ವೇದಾಗಮಂಗಳನು । ಬೋಧಿಸುವ ಪಾದ ॥ ೧ ॥

ಬಿಂದುರೂಪಿನ ಪಾದ । ನಂದಿವಂದಿತ ಪಾದ ॥
ಚಂದದಲಿ ಮನವನಾ । ನಂದಿಸುವ ಪಾದ ॥ ೨॥

ಕಲೆಯರೂಪಿನ ಪಾದ । ಲಲಿತಜಂಗಮಪಾದ ॥
ಸುಲಭದಿಂದಲಿ ರೂಪು । ನೆಲೆಗೊಂಡ ಪಾದ ॥ ೩ ॥

ಸತ್ಯರೂಪಿನ ಪಾದ । ಸತ್ಯಭಾವದ ಪಾದ ॥
ಮತ್ತೆ ಭವವನು ಕಳೆವ । ನಿತ್ಯಗುರುಪಾದ ॥ ೪ ॥

ಜ್ಞಾನರೂಪಿನ ಪಾದ । ಪ್ರಾಣಲಿಂಗದ ಪಾದ ॥
ಹೀನ ಗುಣಗಳ ಕಳೆವ । ಜ್ಞಾನಗುರುಪಾದ ॥ ೫ ॥

ತುಷ್ಟಿಪೂರಿತ ಪಾದ । ಇಷ್ಟಲಿಂಗದ ಪಾದ ॥
ನಿಷ್ಠೆವಂತರಿಗೊಲಿದು । ಪುಷ್ಟಿಸುವ ಪಾದ ॥ ೬ ॥

ನಿತ್ಯ ಮೂರ್ತಿಯ ಪಾದ । ನಿತ್ಯಮೋಕ್ಷದ ಪಾದ ॥
ಸತ್ಯಕರ್ಮಜ್ಞಾನ । ಭಕ್ತಿನುತಪಾದ ॥ ೭ ॥

ಪೂರ್ಣರೂಪಿನ ಪಾದ । ವರ್ಣಾಪಾರದ ಪಾದ ॥
ನಿರ್ಣಯದ ತತ್ವವನು । ಬಣ್ಣಿಸುವ ಪಾದ ॥ ೮ ॥

ಭಸಿತ ಭೂಷಣ ಪಾದ । ವ್ಯಸನವಿಲ್ಲದ ಪಾದ ॥
ಬಸವ ರೂಪವ ಧರಿಸಿ । ಎಸೆದ ಚರಪಾದ ॥ ೯ ॥

ಸರುದ್ರಾಕ್ಷದ ಪಾದ । ಶ್ರೀರುದ್ರನುತಪಾದ ॥
ಸು ರುದ್ರ ಮಹೇಶಾದಿ । ವರ ಮೂರ್ತಿ ಪಾದ ॥೧೦॥

ಮಂತ್ರ ಮೂರ್ತಿಯಪಾದ । ತಂತ್ರಕೀರ್ತಿತಪಾದ ॥
ಸ್ತೋತ್ರಗೊಂಬುತ ವರವ । ಬಿತ್ತರಿಪ ಪಾದ ॥೧೧॥

ವರಗುರುರೂಪಪಾದ। ವರಗಳ ಕೊಡುವಪಾದ॥
ಉರುತರ ಕೈವಲ್ಯವ। ನೆರೆತೋರ್ಪ ಪಾದ ॥೧೨॥
ಲಿಂಗರೂಪಿನಪಾದ। ಲಿಂಗವಂದಿತಪಾದ॥
ಸಂಗದಲಿ ಮುಕ್ತಿಯನು। ಸಂಗಿಸುವ ಪಾದ ॥೧೩॥
ಜಂಗಮಾತ್ಮಕ ಪಾದ। ತುಂಗಮಹಿಮೆಯ ಪಾದ॥
ಲಿಂಗವಂತರಿಗೊಲಿವ। ಭಂಗಭವಪಾದ ॥೧೪॥
ತೀರ್ಥಗರ್ಭಿತ ಪಾದ। ಅರ್ಥಸಿದ್ಧಿದಪಾದ॥
ಆರ್ತವಿಂ ಬೇಡುವರ। ಅರ್ಥಿದ ಸುಪಾದ ॥೧೫॥
ಪ್ರಸಾದಾತ್ಮಕ ಪಾದ। ವಿಶಾಲ ಕೃಪಾಪಾದ॥
ಹಸಾದವನು ಕರುಣಿಸುವ। ಈಶಾನ ಪಾದ ॥೧೬॥
ಸರ್ವ ವಂದಿತ ಪಾದ। ಸರ್ವ ಸಿದ್ಧಿದ ಪಾದ॥
ಸರ್ವ ಕೃತ್ಯಾದಿಯನು। ಸುರ್ವಸಿದ್ಧ ಪಾದ ॥೧೭॥

[ಟಿಪ್ಪಣಿಃ—ನಾದಬಿಂದುಕಲಾಯುಕ್ತ, ಸಚ್ಚಿದಾನಂದ ನಿತ್ಯಪರಿಪೂರ್ಣ, ಅಷ್ಟಾವರಣರೂಪಾದಿ, ಶಿವಪಾದ ಸ್ತೋತ್ರವಿದು]

ಮಂಗಲಾತ್ಮನೇ। ದೇವ। ಮಂಗಲಾತ್ಮನೇ॥ ಪ॥
ತುಂಗ ಮಹಿಮ ಲಿಂಗರೂಪ। ಜಂಗಮಾತ್ಮ ಮಲವಿಭಂಗ॥ಅ. ಪ॥
ಅಂಗರೂಪನಾಗಿ ನಾನು। ಸಂಗವನ್ನು ಬಯಸಿ ನಿನ್ನ।
ತುಂಗ ಪಾದದ್ವಯವನೀಗ। ಮಂಗಲಾದಿಯಿಂದ ಭಜಿಪೆ ॥೧॥
ಧರೆಯ ಜನರ ಸಲಹಲೆಂದು। ಪರಸದಾಶಿವಾಖ್ಯನೆಂದು॥
ಮೆರೆದು ಕರುಣದೊಡನೆ ಬಂದು। ಗುರುವು ಪರಮನಾಗಿ ನಿಂದು॥೨॥
ಪಂಚಶಕ್ತಿಯಿಂದ ಕೂಡಿ। ಪಂಚಮೂರ್ತಿಯಾಗಿ ತೋರಿ॥
ಪಂಚಭೂತಗಳನು ಸೃಜಿಸಿ। ಸಂಚಿನಿಂದ ಪೊರೆದ ಸಿದ್ಧ ॥೩॥

[ಟಿಪ್ಪಣಿಃ—ಶಿವನು ಸದಾಶಿವನಾಗಿ ಪಂಚಸಾದಾಖ್ಯನಾದುದನ್ನು ವಿವರಿಸುವ ಮಂಗಲ ಪದವಿದು.]



# ಹಠಯೋಗ.

(ಲೇಖಕ:— ಮಡಿವಾಳಪ್ಪ ಸಾಸನೂರ ಮು. ಕಲಕೇರಿ ಜಿ. ವಿಜಾಪುರ)

ಹಠಯೋಗವು ಹಸಿವೆ, ತೃಷೆ, ನಿದ್ರೆಗಳನ್ನು ಗೆಲ್ಲುವಬಗೆಹೇಗೆ? ಶೀತೋಷ್ಣಗಳಪರಿಣಾಮಗಳನ್ನುಮೀರುವ ರೀತಿಯಾವದು? ಔಷಧೋಪಚಾರ ಮಾಡದೆ ಸಂಪೂರ್ಣ ಆರೋಗ್ಯವನ್ನು ಪಡೆಯುವ ಮತ್ತು ಬೇನೆ ಬೇಸರಿಕೆಗಳನ್ನು ನೆಟ್ಟಗೆ ಮಾಡಿಕೊಳ್ಳುವ ಹಾದಿಯಾವದು? ಉತ್ಸಾಹ ಶಕ್ತಿಯ ನಾಶದಿಂದುಂಟಾದ ಶರೀರದ ಅಕಾಲ ನಾಶವನ್ನು ನಿರ್ಬಂಧಿಸುವ ಬಗೆಯಾವದು? ನೂರು ವರ್ಷಗಳಾದರೂ ಒಂದಾದರೂ ನರೆಗೂದಲಿಲ್ಲದೆ ತಾರುಣ್ಯವನ್ನು ಕಾಯ್ದುಕೊಳ್ಳುವ ರೀತಿ ಯಾವದು? ಅನಂತಕಾಲದವರೆಗೆ ಇದೇ ಶರೀರದಲ್ಲಿ ಜೀವನವನ್ನು ಮುಂದುವರಿಸುವದು ಯಾವ ಹಾದಿಯಿಂದ? ಇವೆಲ್ಲವುಗಳನ್ನು ತಿಳಿಹೇಳುವ ಯೋಗಶಾಸ್ತ್ರದ ಶಾಖೆಯು ಅದನ್ನು ಆಚರಿಸುವ ಪ್ರತಿಯೊಬ್ಬನಿಗೆ ಕಾಲಾಂತರದಲ್ಲಿ ಅದ್ಭುತ ಶಕ್ತಿಗಳ ಸಿದ್ಧಿಯಾಗುವದು. ಈ ಶಕ್ತಿಗಳನ್ನು ನೋಡಿದರೆ ಮನೋ ವೈಜ್ಞಾನಿಕನಿಗೆ ಅಥವಾ ಪರಮಾಣುವಾದಿಗೆ ಆಶ್ಚರ್ಯವಾಗದೆ ಇರದು.

ಕೆಲವು ವರ್ಷಗಳ ಪೂರ್ವದಲ್ಲಿ ಒಬ್ಬ ಹಠಯೋಗಿಯು ಇಂಗ್ಲಂಡಿಗೆ ತರಲ್ಪಟ್ಟಿದ್ದನು. ಅವನು ಮಧ್ಯಮ ವಯಸ್ಕನಾಗಿದ್ದರೂ ಸುಮಾರು ಹದಿನೆಂಟು ವರ್ಷದ ಹುಡುಗನಂತೆ ಕಾಣುತ್ತಿದ್ದನು. ಅವನ ಶಾರೀರಿಕ ಸ್ಥಿತಿಯು ಅತ್ಯುತ್ತಮವಾಗಿತ್ತು. ಇದಲ್ಲದೆ ಅವನು ನಿತ್ಯ ಸಾಧನೆಯಿಂದ ಉಳ ಆಸನಗಳನ್ನು ಸಾಧಿಸಿಕೊಂಡಿದ್ದನು. ಅವನ ಶರೀರದ ಕೀಲುಗಳು ಒಂದಕ್ಕೊಂದು ಕೂಡಿಸಲ್ಪಟ್ಟಿಲ್ಲವೋ ಎಂಬಂತೆ ಎಲ್ಲರಿಗೂ ಆಶ್ಚರ್ಯವಾಗುವ ಹಾಗೆ ಅವನು ತನ್ನ ಶರೀರದ ಅವಯುವಗಳನ್ನು ಮಣಿಸುತ್ತಿದ್ದನು. ಅವನ ಎಲವುಗಳಾದರೂ ಸ್ಥಿತಿಸ್ಥಾಪಕ ಗುಣವುಳ್ಳ ಪದಾರ್ಥದಿಂದ ಮಾಡಿದಂತೆ ಇದ್ದವು. ಅವನನ್ನು ನೋಡಿ ಎಷ್ಟೋ ಇಂಗ್ಲೀಷ ವೈದ್ಯರು ಬೆರಗಾದರು. ಅವನು ಹಾಕುವಂಥ ಆಸನಗಳನ್ನು ಜೋಡಿಸಬೇಕೆಂದು ಒಂದು ಅಸ್ಥಿಪಂಜರವನ್ನು ತಂದು ಪ್ರಯೋಗ ಮಾಡಿದರು. ಆದರೆ ಅವರ ಪ್ರಯತ್ನವು ಸಫಲವಾಗಲಿಲ್ಲ. ಕಡೆಗೆ ಅವರು ಅಂಥ ಆಸನದಲ್ಲಿ ಒಮ್ಮೆ ಜೋಡಿಸಲ್ಪಟ್ಟ ಎಲವುಗಳು ಯಾವ

ದೊಂದು ಕಾರ್ಯಕ್ಕೆ ಅಯೋಗ್ಯವಾದವುಗಳೆಂದು ತಿಳಕೊಂಡರು. ಆದರೆ ಯೋಗಿಯ ಉದಾಹರಣೆಯಿಂದ ಅವರ ತಿಳುವಳಿಕೆಯು ತಪ್ಪೆಂದು ಕಂಡುಬಂದಿತು. ಅವನ ಅವಯವಗಳು ಬಲವುಳ್ಳವುಗಳೂ, ಪ್ರತಿಯೊಂದು ಕೆಲಸದಲ್ಲಿ ಅತಿ ಉಪಯೋಗವುಳ್ಳವುಗಳೂ ಆಗಿದ್ದವು. ಅವನು ಎಷ್ಟೋ ದೊಡ್ಡ ಭಾರಗಳನ್ನು ಎತ್ತುತ್ತಿದ್ದನು. ಮತ್ತು ಬಹು ಅನಾಯಾಸವಾಗಿ ತಿರುಗಾಡುತ್ತಿದ್ದನು. ಅವನು ಹೀಗೆ ಮಾಡುತ್ತಿದ್ದ ಅನೇಕ ಪ್ರಯೋಗಗಳನ್ನು ಅಲ್ಲಿಯ ಪಾಶ್ಚಾತ್ಯ ವೈಜ್ಞಾನಿಕರು ನೋಡಿ ಬಹಳ ಬೆರಗುಬಿಟ್ಟರು. ಹಠಯೋಗದಲ್ಲಿ ಹೇಳಿದ ಬೇರೆ ಬೇರೆ ಆಸನಗಳ ಮುಖ್ಯ ಉದ್ದೇಶವು. ಸಾಧಾರಣ ಮನುಷ್ಯನಿಗೆ ಅಶಕ್ಯವೆಂದು ತೋರುವ ಶರೀರದಲ್ಲಿಯ ಅನೈಚ್ಛಿಕ ಸ್ನಾಯುಗಳ ಸಂಯಮನವಾಗಿರುತ್ತದೆ. ಈ ತರದ ಶಕ್ತಿಯು ನಮ್ಮೆಲ್ಲರಲ್ಲಿಯೂ ಗುಪ್ತವಾಗಿರುತ್ತದೆ. ಆದರೆ ಅದನ್ನು ನಿಯಮಬದ್ಧ ರೀತಿಯಿಂದ ಬೆಳಗೊಡುವ ಬಗೆಯನ್ನು ಮೊದಲು ಹುಡಿಕಿ ತೆಗೆದವರು ಹಠಯೋಗಿಗಳು.

ಎಲ್ಲ ಹಠಯೋಗಿಗಳು ಬಹು ಸ್ವಲ್ಪ ತಿನ್ನುತ್ತಾರೆ. ಆದರೆ ಅವರು ಎಷ್ಟೋ ದಿವಸಗಳ ವರೆಗೆ ಕೆಲಕೆಲವು ಸಾರೆ ಎಷ್ಟೋ ತಿಂಗಳುಗಳ ವರೆಗೆ ಏನೂ ತಿನ್ನದೆ ಇರಬಲ್ಲರು. ಅವರು ನಿದ್ರೆಯನ್ನು ಸಹ ಗೆದ್ದಿರುವರು. ೧೨ ವರ್ಷಗಳವರೆಗೆ ನಿದ್ರೆಮಾಡದಿದ್ದರೂ ಪೂರ್ಣ ಆರೋಗ್ಯವಂತನಾದ ಹಠಯೋಗಿಯನ್ನು ಅನೇಕರು ನೋಡಿರಬಹುದು. ದಿನಾಲು ಒಂದು ತುಣುಕು ರೊಟ್ಟಿಯನ್ನು ತಿಂದು ಬಹಳ ಚಳಿಯಲ್ಲಿಯೂ ಕೂಡ ಅರಿವೆಯನ್ನು ಹೊದ್ದುಕೊಳ್ಳದೆ ದಣುವಿಕೆಯ ಯಾವ ಚಿಹ್ನವನ್ನೂ ತೋರಗೊಡದೆ ಕೆಲಸಮಾಡುತ್ತಿರುವಂಥ ಮತ್ತೊಬ್ಬ ಹಠಯೋಗಿಯನ್ನು ಸಹ ಲೇಖಕನು ನೋಡಿದ್ದಾನೆ. ೨೪ ತಾಸುಗಳಲ್ಲಿ ೮-೯ ತಾಸು ನಿದ್ದೆ ಮಾಡುವಂಥ ನಿದ್ರಾ ಆಹಾರಾದಿಗಳಿಗೆ ದಾಸಾನುದಾಸರಾದಂಥ ಬಹು ಜನರಿಗೆ ಇದು ಅಸಂಭವವೆಂದು ತೋರುವದು. ಹಠಯೋಗಿಗಳನ್ನು ನೋಡಿದರೆ ಅವರಿಗೆ ಚನ್ನಾಗಿ ಮನವರಿಕೆಯಾಗುವದು. ಬಿಗಿಯಾಗಿ ಮುಚ್ಚಿದಂಥ ಒಂದು ಪೆಟ್ಟಿಗೆಯಲ್ಲಿ ಹಾಕಿ ಇಂಗ್ಲಿಷ ಅಧಿಕಾರಸ್ಥರ ಕಾವಲಿಟ್ಟು ನಾಲ್ವತ್ತು ದಿವಸಗಳವರೆಗೆ ಹುಗಿದಿಟ್ಟ ಒಬ್ಬ ಹಠಯೋಗಿಯ ಉದಾಹರಣೆಯಾದರೂ ಕಂಡುಬಂದಿದೆ. ಈ ನಾಲ್ವತ್ತು ದಿವಸಗಳಲ್ಲಿ ಅವನು ತಿಂದಿದ್ದಿಲ್ಲ, ಮಲಗಿದ್ದಿಲ್ಲ, ಉಸುರಾಡಿಸಿದ್ದಿಲ್ಲ. ಆದರೂ ಅವನು

ಏನೂ ಕೆಟ್ಟ ಪರಿಣಾಮಗಳಿಲ್ಲದೆ ಎಚ್ಚತ್ತು ಮುಂದೆ ಎಷ್ಟೋ ವರ್ಷಗಳವರಗೆ ಬಾಳಿದನು. ಈ ಪ್ರಕಾರ ಬಹು ಕಾಲದವರೆಗೆ ತಿನ್ನದೆ ಇರಬಲ್ಲ, ಮಲಗದಿದ್ದ ಮತ್ತು ಏನೂ ಕುಡಿಯದೆ ಇದ್ದ ಯೋಗಿಗಳೇ, ಮನಸಿಗೆ ಬಂದರೆ ಅನಾಯಾಸವಾಗಿ ಹತ್ತುಮಂದಿ ತಿನ್ನುವಷ್ಟು ತಿನ್ನಬಲ್ಲರು. ನಿಜವಾಗಿ ಅವರು ಯಾವ ತರದ ಮಾಂಸವನ್ನೂ ಸೇವಿಸುವದಿಲ್ಲ. ತಮ್ಮ ಆಹಾರವನ್ನು ಇಚ್ಛಾನುಸಾರವಾಗಿ ಪಚನಮಾಡಿಕೊಳ್ಳುತ್ತಾರೆ. ಅಂತರಿಂದ್ರಿಯಗಳಲ್ಲಿ ನಡೆದ ವ್ಯಾಪಾರವನ್ನು ಮೂರನೇದೊಂದು ಕಣ್ಣಿನಿಂದ ತಾವು ನೋಡ ಬಲ್ಲೆವೆಂದು ಅವರು (ಹಠಯೋಗಿಗಳು) ಹೇಳುತ್ತಾರೆ.

ಕೆಲವು ಹಠಯೋಗಿಗಳ ದೃಷ್ಟಿಶಕ್ತಿಯು ಬಹು ವಿಲಕ್ಷಣವಾದದ್ದಿರುತ್ತದೆ. ಬಹು ದೂರದಲ್ಲಿದ್ದ ಪದಾರ್ಥಗಳನ್ನು ಸ್ವಚ್ಛವಾಗಿ ಕಾಣಬಲ್ಲರಲ್ಲದೆ ಕಗ್ಗತ್ತಲೆಯಲ್ಲಿ ಸಹ ಸಣ್ಣ ಸಣ್ಣ ಪದಾರ್ಥಗಳನ್ನು ಅರಿಸಬಲ್ಲರು. ಕಗ್ಗತ್ತಲೆಯುಳ್ಳ ಕೋಣೆಯಲ್ಲಿ ವಾತಾವರಣದ ಅದೃಶ್ಯ ತೇಜವು ಇರುತ್ತದೆಂಬುವದು ನಮಗೆ ಗೊತ್ತಾದರೆ ಅದು ಅಷ್ಟು ಮಹತ್ವವೆನ್ನಿಸುವದಿಲ್ಲ. ಬರಿಗಣ್ಣಿಗೆ ಕಾಣದಿದ್ದ ಈ ಪ್ರಕಾಶದ ಉಪಯೋಗವನ್ನು ಮಾಡಿಕೊಳ್ಳಲಿಕ್ಕೆ ಕಲಿತರೆ ಮತ್ತು ದೃಷ್ಟಿಶಕ್ತಿಯನ್ನು ಬೆಳೆಗೊಟ್ಟರೆ ಕಗ್ಗತ್ತಲೆಯಲ್ಲಿ ಸಹ ನೋಡಬಲ್ಲೆವು. ಇದು ಯೋಗಿಗಳಿಗೆ ಚನ್ನಾಗಿ ಗೊತ್ತಿರುತ್ತದೆ. ದೂರಿನ ಪದಾರ್ಥಗಳನ್ನು ನೋಡುವದು ಅಷ್ಟು ಕಷ್ಟದ ಮಾತಲ್ಲ. ಯಾಕಂದರೆ ಯೋಗಿಗಳಲ್ಲದವರು ಶುಕ್ರನ ಕಲೆಗಳನ್ನು ಬರಿಗಣ್ಣಿನಿಂದ ನೋಡುವದು ಕಂಡುಬಂದಿದೆ.

ಹಠಯೋಗದಲ್ಲಿಯ ನೇತ್ರಸಂಬಂಧವಾದ ಶಾಖೆಗೆ ಸಂಸ್ಕೃತದಲ್ಲಿ 'ತ್ರಾಟಕ' ವೆನ್ನುತ್ತಾರೆ. ಯಾವದೊಂದು ಪದಾರ್ಥದ ಮೇಲೆ ದೃಷ್ಟಿಯಿಟ್ಟು ಅದೇ ಕಾಲಕ್ಕೆ ವಿಶಿಷ್ಟ ಪ್ರಾಣಾಯಾಮ ಮಾಡುವದರಿಂದ ಕಣ್ಣಿನ ಎಷ್ಟೋ ಬೇನೆಗಳನ್ನು ಕಳೆದು ದೃಷ್ಟಿಶಕ್ತಿಯನ್ನು ಹೆಚ್ಚಿಸುವ ಅನೇಕ ರೀತಿಗಳು ಅದರಲ್ಲಿ ವಿವರಿಸಲ್ಪಟ್ಟವೆ. ಹಠಯೋಗದಲ್ಲಿ ನಿಷ್ಣಾತನಾದ ಯೋಗಿಗುರುವಿನ ಹೇಳಿಕೆಯಂತೆ ನಡೆದುಕೊಂಡರೆ ಎಷ್ಟೋ ಲಾಭದಾಯಕ ಪರಿಣಾಮಗಳು ಕಂಡುಬರುವವು.

ಈ ಶಾಸ್ತ್ರದಲ್ಲಿ ನಿಪುಣನಾದ ಯೋಗಿಯು ತನ್ನ ನೇತ್ರಶಕ್ತಿಯಿಂದ ಎರಡನೆಯವರನ್ನು ಮರುಳು ಮಾಡಬಲ್ಲನು. 'ಹಿಪ್ನಾಟಿಝುವಮ್' 'ನೇಸ್ಮೆರಿ

ಝುವು' ಇವು ತಕ್ಕ ಉದಾಹರಣೆಗಳು. ಯಾವನೊಬ್ಬನ ಕಣ್ಣುಗಳನ್ನು ನೋಡಿ ಅವನ ವಿಚಾರಗಳನ್ನು ಯೋಗಿಗಳು ಹೇಳಬಲ್ಲರು. ಇಲ್ಲಿ ಯೋಗಿಗಳು ಇಂಥ ಶಕ್ತಿಗಳನ್ನು ಹೇಗೆ ದೊರಕಿಸುತ್ತಾರೆಂಬ ಪ್ರಶ್ನವು ಮುಂದೆ ಬರುವದು. ಇವನ್ನು ಅವರು ಹೊರಗಿನಿಂದ ದೊರಕಿಸುವದಿಲ್ಲ. ಈ ತರದ ಶಕ್ತಿಗಳು ಪ್ರತಿಯೊಬ್ಬನಲ್ಲಿಯೂ ಗುಪ್ತವಾಗಿರುತ್ತವೆ. ಯೋಗಿಗಳು ಅವನ್ನು ಸಾಧನೆಯಿಂದ ಹೊರಗೆಡಹುತ್ತಾರೆ. ಬ್ರಹ್ಮಾಂಡದಲ್ಲಿದ್ದುದೆಲ್ಲವೂ ಪಿಂಡಾಂಡದಲ್ಲಿರಲೇ ಬೇಕು, ಎಂದು ಅವರು ಅನ್ನುತ್ತಾರೆ. ಅಂದರೆ ಸೂಕ್ಷ್ಮಶಕ್ತಿಗಳೆಲ್ಲ ನಮ್ಮ ಇಂದ್ರಿಯಗಳಲ್ಲಿ ರಹಸ್ಯವಾಗಿರುತ್ತವೆ. ಅವುಗಳ ಸ್ವಭಾವವನ್ನು ನಾವು ಎಚ್ಚರಿಕೆಯಿಂದ ಪರೀಕ್ಷಿಸಿದರೆ ಜಗತ್ತನ್ನಾಳುವ ಶಕ್ತಿಗಳೆಲ್ಲ ನಮಗೆ ಚನ್ನಾಗಿ ವಿದಿತವಾಗುವವು.

ಪ್ರಾಣಾಯಾಮ ಸಾಧನೆಯಿಂದ ಜೀನೆ ಕಳಕೊಳ್ಳುವ ಬಗೆಯನ್ನು, ಸುಷಿವೆಯನ್ನು ಮತ್ತು ದಿನಚರ್ಯದ ಚಟಿಗಳನ್ನು ನಿಯಮಿತವಾಗಿ ಮಾಡುವ ರೀತಿಯನ್ನು ಹಠಯೋಗವು ಕಲಿಸುತ್ತದೆ. ಆದರೆ ಶಾರೀರಿಕ ಆರೋಗ್ಯವೂ, ಆತ್ಮಜ್ಞಾನವೂ ಒಂದೇ ಎಂದು ಹೇಳುವದಿಲ್ಲ. ಅದಕ್ಕೆ ವಿರುದ್ಧವಾಗಿ ನಿರೋಗ ಶರೀರವೇ ಆತ್ಮಜ್ಞಾನದ ಗುರುತಾಗಿದ್ದರೆ ಪೂರ್ಣ ಆರೋಗ್ಯವನ್ನನುಭವಿಸುವ ಕ್ರೂರಪಶುಗಳು ಸಹ ಆತ್ಮಜ್ಞಾನಿಗಳಾಗಬೇಕಾಗಿತ್ತೆಂದು ಅವರು ಅನ್ನುತ್ತಾರೆ. ಈ ಯೋಗಿಗಳ ಮುಖ್ಯ ಭಾವನೆಯೆಂದರೆ ಶಾರೀರಿಕ ಬಾಧೆಗಳು, ಆತ್ಮಿಕಉನ್ನತಿಯ ಮಾರ್ಗದಲ್ಲಿಯ ಎಡರುಗಳೆಂದು, ನಿರೋಗಶರೀರವು ಈ ಜೀವನದಲ್ಲಿ ಅಂತಿಮ ಜ್ಞಾನವನ್ನು ಪಡಕೊಳ್ಳುವದಕ್ಕಾಗಿ ಅತಿ ಸಹಾಯಕಾರಿಯೆಂದು ಇರುತ್ತದೆ. ಆದುದರಿಂದ ಸಂಪೂರ್ಣ ಆರೋಗ್ಯವಿಲ್ಲದವರು ಹಠಯೋಗಾಭ್ಯಾಸವನ್ನು ಆರಂಭಿಸತಕ್ಕದ್ದು.

ಹಠಯೋಗಾಚರಣೆಯನ್ನು ಮಾಡಲಿಚ್ಛಿಸುವವರು ಆಹಾರ ಸಂಬಂಧವಾಗಿ ಬಿಗಿಯಾದ ನಿಯಮಗಳನ್ನನುಸರಿಸಬೇಕಾಗುವದು. ಕಹಿ, ಕಾರವಾದ, ಹುಳಿ, ಬಿಸಿಪದಾರ್ಥಗಳನ್ನು ಉದಾಃ— ಸಾಸಿವೆ, ಮದ್ಯ, ಮೀನ, ಪ್ರಾಣಿಗಳ ಮಾಂಸ, ಮೊಸರು, ಮಜ್ಜಿಗೆ, ಗಜ್ಜರಿ, ಉಳ್ಳೇಗಡ್ಡಿ, ಬೆಳ್ಳೊಳ್ಳಿ ಮುಂತಾದವುಗಳನ್ನು ತಿನ್ನಕೂಡದು. ಒಮ್ಮೆ ಅಟ್ಟಅಡಿಗೆಯು ಆರಿದರೆ ಅದನ್ನು ಪುನಃ ಬಿಸಿಮಾಡಿ ಸೇವಿಸಕೂಡದು. ಉಪ್ಪನ್ನಾಗಲೀ, ಪಚನಕ್ರಿಯೆಗೆ

ಕಠಿಣವೆನಿಸುವ ಯಾವ ಆಹಾರವನ್ನಾದರೂ ಬಿಟ್ಟುಬಿಡಬೇಕು. ಅಕ್ಕಿ, ಜವೆಗೋದಿ, ಗೋದಿ, ಹಾಲು, ಸಕ್ಕರೆ, ಜೇನುತುಪ್ಪ, ಬೆಣ್ಣೆಗಳು ಹಠ ಯೋಗಿಗೆ ತಕ್ಕ ಆಹಾರ. ನೂರಾರು ಜನರಿಗೆ ಊಟಕ್ಕೆ ಬಡಿಸುವ ನಂಬರು ಮನೆಗಳಲ್ಲಿ ಆಹಾರವು ಎಲ್ಲರಿಗೂ ಹಿತಕರವಾಗದೆ, ಎಷ್ಟೋಜನರಿಗೆ ಕೇಡಾಗುವ ಸಂಭವವಾದರೂ ಬಹಳ ಉಂಟು. ಪೂರ್ಣ ಆರೋಗ್ಯ ಪಡೆಯಲಿಚ್ಛಿಸುವ ಪ್ರತಿಯೊಬ್ಬನು ತನ್ನ ಆಹಾರದ ಬಗ್ಗೆ ಬಹಳ ಎಚ್ಚರಿಕೆಯಿಂದಿರಬೇಕಾಗುವದು. ದೇಹನಿರ್ಮಲತೆ, ಶುದ್ಧಹವೆ ಮತ್ತು ಸ್ವಚ್ಛ ನೀರುಗಳ ವಿಷಯವಾಗಿ, ಎಲ್ಲ ಆರೋಗ್ಯ ಸಂಬಂಧವ ನಿಯಮಗಳನ್ನು ಅವರು ಚನ್ನಾಗಿ ಲಕ್ಷದಲ್ಲಿಟ್ಟು ಆಚರಿಸಬೇಕಾಗುವದು. ಬಹಳ ಗವ್ವುವೆನಿಸುವ ಮನೆಗಳಲ್ಲಿ ಅವರ ಇರಬಾರದು. ಅವರು ಹೆಂಡ ಸರಾಯಿ, ಕಾಫಿ ಮುಂತಾದ ಕೃತ್ರಿಮ ಪೇಯಗಳನ್ನು ಸೇವಿಸಕೂಡದು. ಬಹಳ ಕಾಫಿ ಸೇವಿಸುವದರಿಂದಾಗುವ ಕೆಟ್ಟ ಪರಿಣಾಮವು ಅಮೇರಿಕೆಯಲ್ಲಿ ತಲೆದೋರಹತ್ತಿದೆ. ಕಾಫಿಯಿಂದ ಕೆಟ್ಟ ಪರಿಣಾಮಗಳ ಅನುಭವವನ್ನು ತೆಗೆದುಕೊಳ್ಳದ ಜನರು ಬಹು ಸ್ವಲ್ಪ.

ಹಠಯೋಗ ಮಾಡಲಿಚ್ಛಿಸುವವನು ಮೊದಲು ಪೂರ್ವ ಶಾರೀರಿಕ ಸಂಯಮನವುಳ್ಳ ಒಬ್ಬ ಹಠಯೋಗಿಯನ್ನು ಹುಡುಕತಕ್ಕದ್ದು. ಆಮೇಲೆ ಅವನ ಕಟ್ಟಪ್ಪಣೆಗನುಸರಿಸಿ ನಡೆಯುತ್ತ ಹೋಗಬೇಕು. ಅವನು ಒಂದು ಏಕಾಂತ ಸ್ಥಳದಲ್ಲಿರತಕ್ಕದ್ದು. ಅಲ್ಲಿಯ ಹವೆಯಲ್ಲಿ ಹೆಚ್ಚು ಕಡಿಮೆಗಳು ಆಗುತ್ತಿರಬಾರದು. ಅವನು ಕೇವಲ ಶಾಕಾಹಾರಿಯಾಗಿರಬೇಕು. ಶರೀರದಲ್ಲಿ ಕೃತ್ರಿಮ ಪ್ರೇರಣೆಯನ್ನುಂಟು ಮಾಡುವ ಪೇಯವನ್ನು ಅವನು ಸೇವಿಸಕೂಡದು. ಬಹಳ ಆಹಾರವನ್ನು ಸೇವಿಸಬಾರದು. ನೈತಿಕ ನಿಯಮಗಳನ್ನು ಬಿಗಿಯಾಗಿ ಅನುಸರಿಸಬೇಕು. ಮತ್ತು ಪೂರ್ಣಬ್ರಹ್ಮಚಾರಿಯಾಗಿರಬೇಕು. ಇಂದ್ರಿಯಗಳನ್ನು ಬಿಗಿ ಹಿಡಿಯಲಿಕ್ಕೂ, ಶರೀರವನ್ನು ಸ್ವಚ್ಛವಾಗಿಡಲಿಕ್ಕೂ, ಎಲ್ಲ ಪ್ರಾಣಿಗಳಿಗೆ ದಯಾ ಭಾವನೆಯನ್ನು ತೋರಿಸಿ ತನ್ನ ಮನಃ ಶುದ್ಧಿ ಮಾಡಿಕೊಳ್ಳಲಿಕ್ಕೂ ಅವನು ಕಲಿಯಬೇಕು.

ಯೋಗದ ಈ ಭಾಗವನ್ನು ಆರಂಭಿಸಲಿಚ್ಛಿಸುವವನು, ದೇಹ ಮತ್ತು ಅವಯವಗಳ ಬೇರೆಬೇರೆ ಆಸನಗಳನ್ನು ಕೈವಶ ಮಾಡಿಕೊಳ್ಳಬೇಕು. ಹಠಯೋಗದಲ್ಲಿ ಹೇಳಿದ ಆಸನಗಳು ಒಟ್ಟಿಗೆ ೮೪ ಇರುತ್ತವೆ. ಪ್ರಾಣಾ

ಯಾವ ಸಾಧನೆಯಿಂದ ಇವುಗಳಲ್ಲಿಯ ಪ್ರತಿಯೊಂದು ಆಸನ ಸಾಧನೆಯಿಂದ ಶರೀರದಲ್ಲಿ ಸುಪ್ತವಾಗಿದ್ದ ಶಕ್ತಿಯು ಬೆಳವಣಿಗೆಯನ್ನು ಹೊಂದುವದು. ಶರೀರದಲ್ಲಿ ಜಡತ್ವವನ್ನುಂಟುಮಾಡುವ ತಮೋಭಾಗವನ್ನು ತೆಗೆದು ಹಾಕಿ, ಶೈತ್ಯ, ಕೆಮ್ಮು, ದಮ್ಮು, ಸಂಧಿವಾತ ಮೊದಲಾದ ಅನೇಕರೋಗಗಳನ್ನು ಬಿಸುಟುವದು ಈ ಆಸನದ ಮತ್ತೊಂದು ಉದ್ದೇಶ. ಇವುಗಳಲ್ಲಿ ಕೆಲವು ಹೊಟ್ಟೆಯು ಮತ್ತು ಯಕೃತ್ತಿನ ಕಾರ್ಯವನ್ನು ಚುತ್ತರಿಸುವವು. ಮತ್ತೆ ಕೆಲವು ಉಳಿದ ಇಂದ್ರಿಯಗಳನ್ನು ನಿಯಮಿತವಾಗಿ ಮಾಡುವವು. ಶರೀರದಲ್ಲಿಯ ಕಂಪ, ಅವಯವಗಳಲ್ಲಿಯ ಅವಿಶ್ರಾಂತಿ ಮೊದಲಾದ ಶಾರೀರಿಕ ನಿಗ್ರಹದಲ್ಲಿಯ ಎಡರುಗಳು ಆಸನಸಾಧನೆಯಿಂದ ನಿವಾರಿಸಲ್ಪಡುವವು.

ಕೆಳಗಿನ ಆಸನೆಯ ವರ್ಣನೆಯಿಂದ ವಾಚಕರಿಗೆ ಆಸನದ ವಿಚಾರವು ಸ್ವಲ್ಪಿಲ್ಲಸ್ವಲ್ಪ ಆಗುವದು.

೧. ಎಡದ ಅಡಿಯನ್ನು ಬಲದ ತೊಡೆಯ ಮೇಲೆ, ಬಲದ ಅಡಿಯನ್ನು ಎಡದ ತೊಡೆಯ ಮೇಲಿಟ್ಟು, ಶರೀರ ಕುತ್ತಿಗೆ ತಲೆಗಳನ್ನು ಒಂದೇ ರೇಷೆಯಲ್ಲಿಟ್ಟು ನೆಲದ ಮೇಲೆ ಕೂಡ್ರು.

೨. ಈ ಆಸನ ಹಾಕಿದ ಮೇಲೆ ಬಲಗಾಲಿನ ಹೆಬ್ಬೆರಳನ್ನು ಬಲಗೈಯಿಂದ, ಎಡಗಾಲಿನ ಹೆಬ್ಬೆರಳನ್ನು ಎಡಗೈಯಿಂದ ಹಿಡಿ, ಕೈಗಳು ಹಿಂಭಾಗದಿಂದ ಬಂದು ಒಂದನ್ನೊಂದು ತತ್ತು ಬೀಳಬೇಕು.

೩. ತೊಡೆ ಮತ್ತು ಮೊನಗಂಡಗಳ ನಡುವೆ ಮೇಲಡಿಗಳನ್ನು ಗಟ್ಟಿಯಾಗಿ ಸೇರಿಸಿ, ಸಮನೆಲದ ಮೇಲೆ ನೀಟಾಗಿ ಕುಳಿತುಕೊಳ್ಳು.

೪. ಒಂದನೆಯ ಆಸನವನ್ನು ಹಾಕಿ ತೊಡೆಸಂದಿಯಲ್ಲಿ ಕೈಗಳನ್ನು ಸೇರಿಸಿ, ಕೈಗಳನ್ನು ನೆಲದ ಮೇಲೆ ಗಟ್ಟಿಯಾಗಿ ಊರಿ, ಶರೀರವನ್ನು ಆಸನದಿಂದ ಮೇಲಕ್ಕೆತ್ತು.

೫. ನೆಲದ ಮೇಲೆ ಕುಳಿತುಕೊಂಡು ಕಾಲುಗಳನ್ನು ಎದುರಿನಲ್ಲಿ ಚಾಚಿ, ಮೊಣಕಾಲು ಮಣಿಸದೆ ಕೈಗಳಿಂದ ಕಾಲ್ಬೆರಳುಗಳನ್ನು ಹಿಡಿಯಿರಿ.

೬. ಈ ಆಸನವನ್ನು ಹಾಕಿ ಹಣೆಯಿಂದ ಮೊಣಕಾಲು ಮುಟ್ಟಿರಿ.

೭. ಐದನೆಯ ಆಸನದಲ್ಲಿಯಂತೆ ಕಾಲ್ಬೆರಳುಗಳನ್ನು ಹಿಡಿದು, ಒಂದುತೋಳನ್ನು ಉದ್ದವಾಗಿಟ್ಟು, ಎರಡನೆಯದರಿಂದ ಮತ್ತೊಂದು ಕಾಲಿನ ಹೆಬ್ಬೆರಳನ್ನು ನಿಮ್ಮ ಕಿವಿಯ ಕಡೆಗೆ ಜಗ್ಗಿರಿ.

೮. ನೆಲದ ಮೇಲೆ ಕೈಗಳನ್ನು ಗಟ್ಟಿಯಾಗಿ ಊರಿ ಮೈಯ ಭಾರವನ್ನು ಮೊಣಕೈ ಮೇಲೆ ಹಾಕಿ ಶರೀರವನ್ನು ಮೇಲಕ್ಕೆ ಎತ್ತಿರಿ.

ಹಠಯೋಗದಂತೆ ಈ ಆಸನವು ಹೊಟ್ಟೆಯಲ್ಲಿಯ ಎಲ್ಲ ರೋಗಗಳನ್ನು ವಾತ, ಪಿತ್ತ, ಕಫ ಮೊದಲಾದವುಗಳನ್ನು ಹೋಗಲಾಡಿಸುತ್ತದೆ. ಇದರಿಂದ ಪಚನಶಕ್ತಿಯಾದರೂ ಹೆಚ್ಚುತ್ತದೆ.

೯. ನೆಲದ ಮೇಲೆ ಶವದಂತೆ ಮೋರೆ ಮೇಲೆಮಾಡಿ ಮಲಗಿಕೊಂಡು ಶರೀರದ ಉಳಿದ ಭಾಗವನ್ನು ತಲೆಯೊಡನೆ ಸಮರೇಕ್ಷೆಯಲ್ಲಿಟ್ಟು ಮಲಗಿಕೊಳ್ಳಿರಿ. ಇದರಿಂದ ಎಲ್ಲ ದಣುವು ಹೋಗಿ, ವಿಶ್ರಾಂತಿಯೂ ಮನಸ್ಸಮಾಧಾನವೂ ದೊರೆಯುವದು.

ಹಠಯೋಗವನ್ನಭ್ಯಾಸಿಸುವವನು ಈ ಎಲ್ಲ ಆಸನಗಳನ್ನು ಮೊದಲು ಸಾಧಿಸಿಕೊಂಡು, ಪ್ರಾಣಾಯಾಮವನ್ನಾರಂಭಿಸಬೇಕು. ಪ್ರಾಣಾಯಾಮ ಶಾಸ್ತ್ರವನ್ನು ಎಲ್ಲ ಬಗೆಯಿಂದಲೂ ಎಚ್ಚರಿಕೆಯಿಂದ ಅಭ್ಯಾಸಿಸತಕ್ಕದ್ದು. ಪ್ರಾಣನಿಗ್ರಹ ಮಾಡಲಿಕ್ಕೆ ಒಂದನೆಯ ಆಸನವು ಬಹು ಸುಲಭವೂ, ಅತ್ಯುತ್ತಮವೂ ಆಗಿರುವದು. ಇದರಿಂದ ಸಮಾಧಾನವಾದ ರಕ್ತಾಭಿಸರಣವೂ, ಸಾವಕಾಶವಾದ ಶ್ವಾಸೋಚ್ಛ್ವಾಸವೂ, ಅನುಕೂಲಿಸಲ್ಪಡುವವು. ಹೊಸಬನು ತನ್ನ ಮೂಗಿನ ಎರಡೂ ಸೊಳ್ಳೆಗಳೊಳಗಿಂದ ಶ್ವಾಸ-ಉಚ್ಛ್ವಾಸಗಳಿಗೆ ನಿಯಮಿತ ವೇಳೆಯನ್ನು ಗೊತ್ತುಮಾಡಿ, ಪ್ರಾಣವನ್ನು ತೆಗೆದುಕೊಳ್ಳಬೇಕು. ಆ ಮೇಲೆ ತನ್ನ ಗುರುವಿನಿಂದ ಪ್ರಾಣವನ್ನು ಹೊರಗಾಗಲೀ ಒಳಗಾಗಲೀ ಹಿಡಿಯಲಿಕ್ಕೆ ಕಲಿಯಬೇಕು. ಕೆಲವು ವಾರಗಳ ವರೆಗೆ ಪ್ರಾಣವನ್ನು ಹೊರಗೆ ಅಥವಾ ಒಳಗೆ ನಿರ್ಬಂಧಿಸುವ ಸಾಧನೆ ಮಾಡಿದ ತರುವಾಯ ಕೆಲವು ಸೆಕಂದುಗಳ ವರೆಗೆ ಎಡದ ಸೊಳ್ಳೆಯಿಂದ ಉಸುರು ತಕ್ಕೊಂಡು, ಬಲದ ಸೊಳ್ಳೆಯಿಂದ ನಾಲ್ಕು ಸೆಕಂದುಗಳ ವರೆಗೆ ಅದನ್ನು ಬಿಡಬೇಕು. ಆ ಮೇಲೆ ಇದನ್ನು ಬದಲಿಸಿ ಬಲದಿಂದ ತಕ್ಕೊಂಡು ಎಡದಿಂದ ಬಿಡಬೇಕು. ಹೀಗಾಗುವದರಿಂದ ದೇಹ ಶುದ್ಧಿಯಾಗಿ ಹೆಚ್ಚಿನ ಪ್ರಾಣಾಯಾಮ ಸಾಧನೆಗೆ ಅನುಕೂಲವಾಗುವದು. ಆ ಮೇಲೆ ಸಾಧಕನು ಎಡದ ಸೊಳ್ಳೆಯಿಂದ ನಾಲ್ಕು ಸೆಕಂದುಗಳ ವರೆಗೆ ಉಸಿರನ್ನು ಒಳಗೆ ತಕ್ಕೊಂಡು ಅದನ್ನು ಅಲ್ಲಿಯೇ ೧೬ ಸೆಕಂದುಗಳ ವರೆಗೆ ನಿರ್ಬಂಧಿಸಿ, ೮ ಸೆಕಂದುಗಳಾಗುವ ವರೆಗೆ ಅದನ್ನು ಹೊರಗೆ ಬಿಡಬೇಕು. ಈ ರೀತಿಯಾಗಿ ಮೂರು ತಿಂಗಳುಗಳ

ವರೆಗೆ ಸಾಧನೆ ಮಾಡುವದರಿಂದ ಜ್ಞಾನತಂತುಗಳ ಬಲವನ್ನು ಹೆಚ್ಚಿಸಿ ಅವುಗಳಲ್ಲಿ ಗುಪ್ತವಾಗಿದ್ದ ಬೇನೆಗಳನ್ನು ಹೋಗಲಾಡಿಸುವ ಶಕ್ತಿಯನ್ನು ಹೆಚ್ಚಿಸುವದು.

ಇಂದ್ರಿಯಗಳ ಯಾವದೊಂದು ವ್ಯಥೆಯನ್ನು ಅಥವಾ ಯಾವದೊಂದು ಬೇನೆಯನ್ನು ಹೋಗಲಾಡಿಸಲಿಚ್ಛಿಸುವ ಯೋಗಿಯು ವ್ಯಥಿತ ಇಂದ್ರಿಯಗಳಿಗೆ ಸಂಬಂಧಿಸಿದ ಬೇರೆ ಬೇರೆ ಆಸನಗಳನ್ನು ಹಾಕಿ ಪ್ರಾಣಾಯಾಮ ಮಾಡತಕ್ಕದ್ದು. ಬೆನ್ನೆಲುವಿನ ಬುಡದಲ್ಲಿ ಗುಪ್ತವಾಗಿದ್ದ ವಾಸಿಗೊಳಿಸುವ ಶಕ್ತಿಯನ್ನು ಅವನು ಪ್ರಬೋಧಿಸಬೇಕು. ಒಳಗಿನ ಇಂದ್ರಿಯಗಳನ್ನು ಸ್ವಚ್ಛಮಾಡಲಿಕ್ಕೆ ಹಲವು ಬಗೆಯ ರೀತಿಗಳು ಹಠಯೋಗದಲ್ಲಿ ವರ್ಣಿಸಲ್ಪಟ್ಟಿವೆ. ಅವುಗಳಲ್ಲಿ ಕೆಲವು ಬಹುಕಾಲದ ತಲೆಬೇನೆಯಿಂದ, ಶೈತ್ಯದಿಂದ, ನೆಗಡಿಯಿಂದ, ಅಜೀರ್ಣದಿಂದ, ನಿದ್ರಾಭಂಗದಿಂದ ಪೀಡಿಸಲ್ಪಟ್ಟವರಿಗೆ ಬಹು ಪ್ರಯೋಜನಕಾರಿಗಳಾಗಿವೆ.

ಮೂಗಿನೊಳಗಿಂದ ತಣ್ಣೀರು ಕುಡಿಯುವದರಿಂದ ಬಹುಕಾಲದ ತಲೆಬೇನೆಯು ಕೂಡ ಇಲ್ಲದಂತಾಗುವದು. ಮೂಗು ಮತ್ತು ಬಾಯಿಗಳ ನಡುವಿನ ದ್ವಾರವನ್ನು ಹಠಯೋಗಿಯು ಸೂಕ್ಷ್ಮದಾರದ ಮೆತ್ತನ್ನ ಎಳೆಗಳನ್ನು ಸೇರಿಸಿ ಅವನ್ನು ಬಾಯಿಯೊಳಗೆ ತಂದು ಅವುಗಳಿಂದ ಸ್ವಚ್ಛಮಾಡುತ್ತಾನೆ. ಒಂದು ಸೊಳ್ಳೆಯಿಂದ ದಾರವನ್ನು ಸೇರಿಸಿಕೊಂಡು ಮತ್ತೊಂದರಿಂದ ಅದನ್ನು ಹೊರಗೆ ತೆಗೆಯಬಲ್ಲನು. ಇದರಿಂದ ತಲೆಯು ಸ್ವಚ್ಛವಾಗಿ ದೃಷ್ಟಿಯು ತೀಕ್ಷ್ಣವಾಗುತ್ತದೆ. ತೋಳಿನ ಮೇಲ್ಭಾಗದ ಎಲ್ಲ ಬೇನೆಗಳು ಇದರಿಂದ ನಾಶವಾಗುವವು. ಹಠಯೋಗಿಯು ಆಹಾರ ನಳಿಕೆಯನ್ನು ಸೂಕ್ಷ್ಮವಾದ ಮೂರು ಇಂಚು ಅಗಲ ಅರಿವೆಯನ್ನು ನುಂಗಿ ಸ್ವಚ್ಛಮಾಡುತ್ತಾನೆ. ಇವೆಲ್ಲವುಗಳನ್ನು ಯಾವ ಉಪಕರಣವನ್ನು ಉಪಯೋಗಿಸದೆ ಪ್ರಾಣಾಯಾಮ ಸಹಾಯದಿಂದಲೇ ಮಾಡುತ್ತಾನೆ. ಆಮೇಲೆ ಪ್ರಾಣಾಯಾಮ ಸಹಾಯದಿಂದ ಹೊಟ್ಟೆಯೊಳಗೆ ನೀರನ್ನು ಅಲ್ಲಾಡಿಸಿ ಅದನ್ನು ಅದೇ ದ್ವಾರದಿಂದ ಹೊರಗೆ ಚೆಲ್ಲಬಲ್ಲನು. ನಿಷ್ಣಾತನಾದ ಯೋಗಿಯು ಎಲ್ಲ ಆಹಾರ ನಳಿಕೆಯಲ್ಲಿ ಗುದದ್ವಾರದಿಂದ ಬಹಳ ನೀರನ್ನು ತೆಗೆದುಕೊಂಡು ಅದೇ ದ್ವಾರದಿಂದ ಅದನ್ನು ಬಿಡುತ್ತಾನೆ. ಆಮೇಲೆ ಹೊಟ್ಟೆಯ ಅಥವಾ ಕರುಳಿನ ಬೇನೆಯು ಇಲ್ಲದಂತಾಗುವದು. ಈ ಸಾಧನೆಗಳು ವಿಶೇಷತಃ ಸ್ಥೂಲ ಶರೀರದವರಿಗೂ, ಕಫವಿದ್ಧವರಿಗೂ, ಸಡಿಲುಮೈಯವರಿಗೂ, ಉಪಯೋಗವಾಗುವವು.

ನಿದ್ರಾಭಂಗವನ್ನು ಅವನು ೯ನೆಯ ಆಸನವನ್ನು ತಾಳಿ ದೀರ್ಘ ಶ್ವಾಸಗಳನ್ನು ತಕ್ಕೊಂಡು ಪ್ರತಿಯೊಂದು ಶ್ವಾಸಾನಂತರದಲ್ಲಿ ಅದನ್ನು ಒಳಗೆ ಕೆಲಹೊತ್ತು ನಿಲ್ಲಿಸುವದರಿಂದ ಕಳೆದುಕೊಳ್ಳುವನು.

ಹಠಯೋಗಿಯು ತನ್ನ ನಾಲಿಗೆಯನ್ನು ನುಂಗ ಬಲ್ಲನು. ತಿರುವಿದ ನಾಲಿಗೆಯನ್ನು ನುಂಗಬಲ್ಲವನು. ಮುಪ್ಪನ್ನೂ ಸಾವನ್ನೂ ನೀಗಿ; ನಿದ್ರೆ, ಹಸಿವೆ, ತೃಷೆಗಳನ್ನು ಜಯಸುತ್ತಾನೆಂದು ಹೇಳಿದೆ. ನಿಜವಾದ ಹಠಯೋಗಿಯ ಬಲವು ಸತ್ಯವಾಗಿಯೇ ಅತುಲವೂ, ನಿಸ್ಸೀಮವೂ, ಆದದ್ದು. ಅವನು ತನಗೆ ಸರಿದೋರಿದಂತೆ ಯಾವದೊಂದನ್ನು ಮಾಡಬಲ್ಲನು ಅಥವಾ ಕೆಡಿಸಬಲ್ಲನು.

ಹಠಯೋಗಾಚರಣೆಯಿಂದ ತತ್ಕ್ಷಣದಲ್ಲಿಯೇ ಕೈಸೇರುವವಗಳೆಂದರೆ ಸಂಪೂರ್ಣ ಆರೋಗ್ಯ ಮತ್ತು ಆಯುರ್ವರ್ಧನೆ. ಆದರೆ ನಿಜವಾದ ಸತ್ಯಾನ್ವೇಷಿಗೆ ಇವು ಆ ಇಂದ್ರಿಯಾತೀತಸ್ಥಿತಿಗೆ ಮುಟ್ಟುವದಕ್ಕೆ ಸಾಧನಮಾತ್ರಗಳಾಗಿರುವದರಿಂದ ಅವಕ್ಕೆ ಅವನು ಅಷ್ಟು ಬೆಲೆಗೊಡುವದಿಲ್ಲ. ಅವನ ಮತದಂತೆ ಯಾವನೊಬ್ಬನು ನೂರಾರುವರ್ಷ ಬಾಳಿಯೂ ತನ್ನ ನಿಜರೂಪದ ಅರಿವನ್ನು ಮಾಡಿಕೊಳ್ಳದಿದ್ದರೆ ಓಕವೃಕ್ಷಕ್ಕಿಂತ ಹೆಚ್ಚಿನವನಾಗುವನು. ಯಾಕಂದರೆ ಓಕ ಗಿಡವಾದರೂ ಎಷ್ಟೋ ನೂರು ವರ್ಷಗಳವರೆಗೆ ಒಮ್ಮೊಮ್ಮ ಬಾಳಬಹುದು. ಆದರೆ ಕಡೆಗೆ ಅದು ಗಿಡವೇ. (ಅದಕ್ಕಿಂತ ಹೆಚ್ಚಿನದಾಗಲರಿಯದು). ಆದರೆ ೩೦ ವರ್ಷೇ ಬಾಳಿದರೂ ಆತ್ಮ-ಪರಮಾತ್ಮರ ಐಕ್ಯವನ್ನು ತಿಳಿದು ಸಾಯುವವನು, ಸಂಪೂರ್ಣ ನಿರೋಗಿತನ, ಮಾನಸಿಕ ಶಕ್ತಿ, ಬೇನೆಗಳನ್ನು ವಾಸಿಮಾಡುವ ಶಕ್ತಿಗಳೆಲ್ಲವನ್ನು ಸ್ವಾಧೀನಪಡಿಸಿಕೊಂಡವನಿಗಿಂತಲೂ ಅನಂತಪಾಲು ಹೆಚ್ಚಿನವನು. ಯಾಕಂದರೆ ಅವನು ನಮ್ಮಲ್ಲಿಯೇ ಅಡ್ಡಾಡುವ ಸಜೀವ ಆಕಾರವಿಶಿಷ್ಟನಾದ ಪರಮಾತ್ಮನೇ ಆಗಿದ್ದು ಮಾನವ ಜಾತಿಗೆ ಮುಕ್ತಿ ಮಾರ್ಗವನ್ನು ತೋರುವನು. ಆದಕಾರಣ ನಿಜವಾದ ಸತ್ಯಾನ್ವೇಷಿಯಾದವನು ರಾಜಯೋಗವು ಸಾಧಿಸುವ ವರೆಗೆ ಮಾತ್ರ ಹಠಯೋಗವನ್ನು ಆಚರಿಸಬೇಕು. ರಾಜಯೋಗದಿಂದಲೇ ಆತ್ಮಜ್ಞಾನವೂ ಪೂರ್ಣ ಸ್ವಾತಂತ್ರ್ಯವೂ ಲಭಿಸುವವು.

# ಶಿಷ್ಯನ ಖೇದವು.

(ಲೇಖಕ:— ಕಥಾಲಪ್ಪಾ ಮಾದಿಗರ ಮು- ಮಳಖೇಡ ಜಿ॥ ಕಲಬುರ್ಗಾ)



ಗುರುವೇ ಯಾರಿಗಿ ಯಾ। ರಿಲ್ಲ ನೀ ಕಾಯೊಗುರುವೇ।
ಸಂಸಾರ ಕಷ್ಟವನ್ನು। ತಾಳಲಾರೆನು ನಾನು।
ಎತ್ತಕಡೆಗೆನೋಡಿದತ್ತ। ಕತ್ತಲೆ ಮುಸುಕಿದೆ।
ಗುರುವೇ ಯಾರಿಗಿ ಯಾ।ರಿಲ್ಲ ನೀ ಕಾಯೊ ಗುರುವೇ ॥೧॥
ಹಿಂದಿನ ಜನ್ಮದಲ್ಲಿ। ಪಾಪ ಮಾಡಿದ್ದೆ ನಾನು।
ಶಿಕ್ಷೆಮಾಡಲಿಕ್ಕೆ ಎನ್ನ। ಮಾದರ ಒಡಲಲ್ಲಿ ಹುಟ್ಟಿಸಿ ನೀನು।
ಗುರುವೇ ಯಾರಿಗಿ ಯಾ।ರಿಲ್ಲ ನೀ ಕಾಯೊ ಗುರುವೇ ॥೨॥
ಶಿಕ್ಷಾ ಗುರುಗಳು ಎನ್ನ। ಹಗಲು ಇರುಳು ಶಿಕ್ಷಿಸುವರು।
ಶಿಕ್ಷಾ ಗುರುಗಳ ಬಾಧೆಯನ್ನು। ತಾಳಲಾರೆನು ನಾನು।
ಗುರುವೇ ಯಾರಿಗಿ ಯಾ।ರಿಲ್ಲ ನೀ ಕಾಯೊ ಗುರುವೇ ॥೩॥
ವೀರಶೈವ ದೀಕ್ಷೆಯನ್ನು। ಶ್ರೇಷ್ಠವೆಂದು ತಿಳಿದು ನಾನು।
ದೀಕ್ಷೆನಾದರೆ ನಾನು। ಶಿಕ್ಷಾ ಗುರುಗಳ ಬಾಧೆ ಎನಗೆ।
ಗುರುವೇ ಯಾರಿಗಿ ಯಾ। ರಿಲ್ಲ ನೀ ಕಾಯೊಗುರುವೇ ॥೪॥
ಮೋಕ್ಷಾ ಗುರುವಿನ ಮಾರ್ಗವನ್ನು। ತಿಳಿಸಿಕೊಟ್ಟ ಎನ್ನ ಗುರುವೇ
ಸನ್ಮಾರ್ಗವ ಬಿಟ್ಟೆ। ಕೆಟ್ಟೆನಲ್ಲ ನಾನು ಭ್ರಷ್ಟೆ।
ಗುರುವೇ ಯಾರಿಗಿ ಯಾ। ರಿಲ್ಲ ನೀ ಕಾಯೊ ಗುರುವೇ ॥೫॥
ಈಗ ತಿಳಿದುಬಂತು ಗುರುವೇ। ಪುಣ್ಯಾಪಾಪದ ಮಾರ್ಗವು ಎನಗೆ।
ಮುಕ್ತಿ ದೊರೆಯುವ ಸಾಧನವನ್ನು। ಪುನಃ ತಿಳಿಸಿಕೊಡಿರಿ ಎನಗೆ।
ಗುರುವೇ ಯಾರಿಗಿ ಯಾ।ರಿಲ್ಲ ನೀ ಕಾಯೊ ಗುರುವೇ ॥೬॥
ನೆರಳನೇ ಅದಂಥ। ಗಿಡಕ್ಕೆ ನಾಹೋದೆ।
ಪಂಟಿಮವುರಿದು ನೆರಳು। ಬಯಲಾಯಿತು ಗುರುವೇ।
ಗುರುವೇ ಯಾರಿಗಿ ಯಾ।ರಿಲ್ಲ ನೀ ಕಾಯೊ ಗುರುವೇ ॥೭॥
ನೀರಡಿಸಿ ನಾನು। ಬಾವಿನೀರಿಗಿ ಹೋಗತಿದ್ದೆ।
ಬಾವಿ ಬತ್ತಿ ನೀರು। ಬಯಲಾಯಿತು ಗುರುವೇ।
ಗುರುವೇ ಯಾರಿಗಿ ಯಾ।ರಿಲ್ಲ ನೀ ಕಾಯೋ ಗುರುವೇ ॥೮॥

ಕೇಳಿನ್ನಗುರುವೇ। ದಯಪಾಲಿಸು ಪಾಲಿಸೋ ಎನಗೇ।
ಪತ್ರ ಬರೆದೆನು ನಿಮಗೆ।ಉತ್ತರಕೊಡಲಿಲ್ಲೋ ಗುರುವೇ।
ಶಿಷ್ಯನ ಖೇದ, ಹೇಳಿಕೊಂಡೆ। ಶಾಂತಿಮಾಡಲಿಲ್ಲೋ ಎನಗೇ।
ನೀತಿವಚನ ಹೇಳಿ ಎನಗೇ।ಸತ್ಪಥಕೆ ಹಚ್ಚಿರಿ ಗುರುವೇ।
ಶಿಷ್ಯನ, ಖೇದವು ನಿಮಗೇ। ಪುನಃ ಹೇಳಿಕೊಳ್ಳುವೆ ಗುರುವೇ।
ಕೇಳಿನ್ನ ಗುರುವೇ। ದಯಪಾಲಿಸು ಪಾಲಿಸೋ ಎನಗೇ ॥೯॥

ಭವಭವದೊಳ್ ಎನಗೇ। ಬರಿಸಿದಿ ನೀನೇ ಗುರುವೇ।
ಭವತಾಪ ತಾಳಲಾರೆ। ದಯಮಾಡಿರಿಗುರುವೇ।
ಬಂದವಧಿಯಾದದು ಎನಗೇ। ಹರಕಿಮಾಡಬಾರದೆ ಗುರುವೇ।
ಮಾದರ ಒಡಲಲಿ ಹುಟ್ಟಿಸಿ ಎನಗೇ। ಭಯಂಕರ ಶಿಕ್ಷೆ ಕೊಟ್ಟೆ ಗುರುವೇ
ಇನ್ನೆಷ್ಟು ಪರಿಕಾಡುವಿರಿನಗೇ। ರಕ್ಷಿಸು ರಕ್ಷಿಸೋ ಗುರುವೇ।
ಕೇಳಿನ್ನ ಗುರುವೇ।ದಯಪಾಲಿಸು ಪಾಲಿಸೋ ಎನಗೇ ॥೧೦॥

ಭವಸಾಗರದೊಳಿರುವವಗೆ। ನಾನಾಕಷ್ಟಗಳೊದಗುವವೇ।
ಗುರುವೇ, ಧ್ಯಾನಮಾಡುವೆನಿಲ್ಲಿ।ದಯಮಾಡಿರಿ,ನೀವಲ್ಲಿ।
ವ್ಯರ್ಥಸಂಸಾರದ ಸಂಕಷ್ಟ।ಸುಖವಿಲ್ಲಿದರಲ್ಲೆಳ್ಳಷ್ಟು।
ಅಯ್ಯಯ್ಯೋ ಭವಸಾಗರ। ನೋಡಿದತ್ತತ್ತನೀರೆನೀರ।
ಸುಳ್ಳಿಸಂಸಾರದಲಂಪಟ। ಸುಖವು ಕಾಣಲಿಲ್ಲೆಳ್ಳಷ್ಟು।
ಕೇಳಿನ್ನ ಗುರುವೇ। ದಯಪಾಲಿಸು ಪಾಲಿಸೋ ಎನಗೇ ॥೧೧॥

---

## ವಿಮರ್ಶೆ.

**ವೈದಿಕ ವಾಙ್ಮಯ ರಹಸ್ಯಃ**— ಈ ಗ್ರಂಥವು ವಿಜಾಪುರ ಬೃಹನ್ಮಠಾಧೀಶರಾದ ಶ್ರೀ ಶಂಭುಲಿಂಗ ಶಿವಾಚಾರ್ಯರಿಂದ ರಚಿಸಲ್ಪಟ್ಟಿದೆ. ಈ ಚಿಕ್ಕ ಗ್ರಂಥದಲ್ಲಿ ವೀರಶೈವ ಮತದ ಪ್ರಾಚೀನತ್ವವು ಯುಕ್ತಿ ಪ್ರಯುಕ್ತಿಗಳಿಂದ ಬಹು ವಿಶದವಾಗಿ ಸಿದ್ಧಗೊಳಿಸಲ್ಪಟ್ಟಿದೆ. ವೀರಶೈವ ಮತದ ಆರಂಭಕಾಲವನ್ನು ನಿಶ್ಚಯಿಸುವದು ಈಗಿನ ಕಾಲಕ್ಕೆ ಬಹುಮಹತ್ವದಾ

ಗಿದೆ. ಇದನ್ನು ಪಾಶ್ಚಿಮಾತ್ಯ ಪದ್ಧತಿಯಿಂದ ಪ್ರಕೃತಿ ಶಾಸ್ತ್ರದೃಷ್ಟ್ಯಾ ಸಿದ್ಧಪಡಿಸುವದೊಂದು ಮಾರ್ಗವಾಗಿದೆ. ಇದಕ್ಕೆ ಆಧುನಿಕ ಪಂಡಿತರು ಮಹತ್ವವನ್ನು ಕೊಟ್ಟು ಆ ರೀತಿಯಾಗಿ ಅವರು ಇಂಥ ವಿಷಯಗಳನ್ನು ವಿವೇಚಿಸುವದುಂಟು. ಪುರಾತನ ಪದ್ಧತಿಯಿಂದ ವಿಚಾರ ಮಾಡುವದೊಂದು ಎರಡನೇ ಮಾರ್ಗವು. ಇವುಗಳಲ್ಲಿ ೧ನೇ ಮಾರ್ಗವು ೨ ನೇ ಪದ್ಧತಿಯವರಿಗೆ ರುಚಿಸದೆ ಹೋದರೂ ಈ ಬಗೆಯಿಂದಲೂ ಕೂಡ ಮತದ ಪ್ರಾಚೀನತ್ವವನ್ನು ಶೋಧಿಸುವದು ಮಹತ್ವದ್ದಿರುತ್ತದೆ. ಪುರಾತನ ಪದ್ಧತಿಯಿಂದರೆ ಧರ್ಮಗ್ರಂಥಗಳನ್ನೇ ದೃಢವಾಗಿ ನಂಬಿಕೊಂಡು ಅವುಗಳಲ್ಲಿ ಕಂಡುಬರುವ ಸಂಗತಿಗಳ ಮೇಲಿಂದಲೇ ಮತದ ಅನಾದಿತ್ವ ಮತ್ತು ಮಹತ್ವವನ್ನು ಕಂಡುಹಿಡಿಯುವದು. ಇದನ್ನು ಆಧುನಿಕ ವಿಜ್ಞಾನಶಾಸ್ತ್ರ ಪರಿಚಯವುಳ್ಳವರು ನಿರಾಕರಿಸಿದರೂ, ಈ ಬಗೆಯಾಗಿ ಶೋಧ ಮಾಡುವದಾದರೂ ಮಹತ್ವದ್ದಾಗಿರುತ್ತದೆಂಬದನ್ನು ನಾವು ಲಕ್ಷಿಸತಕ್ಕದ್ದಾಗಿದೆ.

ಈ ಗ್ರಂಥದಲ್ಲಿ ಅನೇಕ ಮಹತ್ವದ ವಿಷಯಗಳು ವಿವೇಚಿಸಲ್ಪಟ್ಟಿವೆ. ಆರ್ಯರ ಅಧ್ಯಾತ್ಮ ವಿದ್ಯೆಗೆ ವೈದಿಕ ವಾಙ್ಮಯವೇ ಮೂಲಭೂತವಾದದ್ದು. ಅದರಲ್ಲಿ ಪರಾವಿದ್ಯಾ ಮತ್ತು ಅಪರಾವಿದ್ಯಾ ಎಂಬೆರಡು ಭಾಗಗಳಿವೆ. ಇವುಗಳಲ್ಲಿ ಅಪರಾವಿದ್ಯೆ ಎಂಬದು ಋಗ್ವೇದ,ಯಜುರ್ವೇದ, ಸಾಮವೇದ, ಅಥರ್ವವೇದ, ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ ಇವುಗಳಿಗೆ ಸಂಬಂಧಪಟ್ಟಿದ್ದು ಪರಾವಿದ್ಯೆಯು ಉಪನಿಷದ್ಭಾಗಕ್ಕೆ ಸಂಬಂಧಪಟ್ಟದ್ದಿರುತ್ತವೆ. ಈ ಪರಾಭಾಗದಲ್ಲಿ ವೇದಗಳೊಳಗಿನ ತತ್ವಜ್ಞಾನ ವಿಷಯಗಳು ಸ್ಪಷ್ಟೀಕರಿಸಲ್ಪಟ್ಟಿರುತ್ತವೆ. ಮೊದಲಿನದು ಪ್ರವೃತ್ತಿಧರ್ಮವನ್ನು ಹೇಳುವಂಥದೂ ಎರಡನೆಯದು ನಿವೃತ್ತಿಧರ್ಮವನ್ನು ಹೇಳುವಂಥದೂ ಇದ್ದು, ಮೊದಲಿನಕಿಂತಲೂ ಎರಡನೆಯದೇ ಉಚ್ಚತರವಾದುದೆಂಬದನ್ನು ಗ್ರಂಥಕರ್ತರು ಈ ಗ್ರಂಥದಲ್ಲಿ ಬಹು ಚನ್ನಾಗಿ ಸಮರ್ಥಿಸಿರುವರು.

ಮುಂದೆ ಗ್ರಂಥಕಾರರು ಋಗ್ವೇದದಲ್ಲಿ ರುದ್ರ ಶಬ್ದವು ಮೇಲಿಂದ ಮೇಲೆ ಬರುತ್ತಿದ್ದು ಈ ಶಬ್ದವು ಕೇವಲ ಭೌತಿಕ ಚಮತ್ಕಾರದೊಡನಿದ್ದುದು ಕಂಡುಬರುವದಿಲ್ಲ. ಆದರೆ ಗುಣಮೂರ್ತಿಗಳಲ್ಲಿ ಪರಿಗಣಿಸಲ್ಪಡುವ ರುದ್ರನಿಗಿಂತಲೂ ಅಧಿಕರೆನಿಸುವ ಈಶ್ವರ ಸದಾಶಿವನಿಗೂ ಸಹ

ಅಧಿಷ್ಠಾನ ಭೂತನಾದ ಪರಮಶಿವನನ್ನೇ ರುದ್ರಾಭಿಧಾನದಿಂದ ಸ್ತುತಿ ಸುತ್ತವೆಂದು ಅಭಿಪ್ರಾಯ ಪಟ್ಟಿದ್ದಾರೆ. ಮತ್ತು ವೇದಗಳಲ್ಲಿ "ಪ್ರಥಮಜ"ರ ಉಲ್ಲೇಖವಿದ್ದು ಇವರು ಪ್ರಾಕೃತ ಋಷಿಗಳಿಂದ ಬಹುವಾಗಿ ಸ್ತುತಿಸಲ್ಪಟ್ಟಿರುವರೆಂತಲೂ, ಯಜುರ್ವೇದ ಮೊದಲಾದ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟ "ಗಣ" ಗಳು ಇವರೇ ಎಂತಲೂ ಹೇಳಿ ಈ ಶಬ್ದಗಳು ಪ್ರಮಥರನ್ನೇ ನಿರ್ದೇಶಿಸುತ್ತವೆಂದು ಗ್ರಂಥಕಾರರು ಈ ಬಗ್ಗೆ ಅನೇಕ ಉದಾಹರಣೆಗಳನ್ನು ಇದರಲ್ಲಿ ಕೊಟ್ಟಿರುತ್ತಾರೆ. ಅವುಗಳನ್ನು ವಾಚಕರು ನೋಡತಕ್ಕದ್ದು. ಈ ವಿವೇಚನೆಯು ಹೊಸ ರೀತಿಯದಾಗಿದೆ.

ತಾತ್ವಿಕ ವಿಚಾರವು ಅರಣ್ಯಕ ಉಪನಿಷತ್ತುಗಳ ಕಾಲದಲ್ಲಿ ಪಲ್ಲವಿಸಿದ್ದು ಅದು ಮಂತ್ರ ಭಾಗದಲ್ಲಿ ಬೀಜ ಭೂತವಾಗಿರುತ್ತದೆಂದು ಗ್ರಂಥಕಾರರು ಹೇಳಿದ್ದು ನಿಜವಿರುತ್ತದೆ. ಗ್ರಂಥಕಾರರು ಹೀಗೆ ಹೇಳಿ ಈ ಸ್ಕಂದ ನಂದ್ಯಾದಿ ಪ್ರಥಮಜರು ಸಾಕ್ಷಾದುಪದಿಷ್ಟರಾದ ಮಹರ್ಷಿಗಳಾದ್ದರಿಂದ ಅವರೇ ಮೊದಲು ಸನಕ ಸನಂದನ ಸನತ್ಕುಮಾರಾದಿ ಪ್ರಾಕೃತ ಋಷಿಗಳಿಗೆ ತಾತ್ವಿಕ ವಿಚಾರಗಳನ್ನು ಬೋಧಿಸಿದರೆಂತಲೂ, ನಂದಿಕೇಶ್ವರನ ಶಿಷ್ಯನಾದ ಸನತ್ಕುಮಾರನು ತನ್ನ ಶಿಷ್ಯರಾದ ನಾರದ ಗೌತಮ ಮೊದಲಾದ ಮುನಿವೃಂದಕ್ಕೆ ಶಿವದೀಕ್ಷೆಯನ್ನಿತ್ತನೆಂತಲೂ ಗ್ರಂಥಕರ್ತರು ವಿವರಿಸಿ ಈ ವಿಷಯದ ಬಗ್ಗೆ ಛಾಂದೋಗ್ಯ, ಹಂಸ ಮುಂತಾದ ಉಪನಿಷತ್ತುಗಳಲ್ಲಿಯ ವಾಕ್ಯಗಳನ್ನು ಉದಹರಿಸಿದ್ದಾರೆ. ಮತ್ತು ಈ ಬಗ್ಗೆ ವಾಯವೀಯಸಂಹಿತಾ ಮಹಾಭಾರತದೊಳಗಿನ ಆಧಾರಗಳನ್ನು ಕೊಟ್ಟಿರುವರು. ಈ ಪರಾಜ್ಞಾನವೇ ಮಹತ್ತರವಾದದ್ದು, ಇದೇ ಅಪ್ರಾಕೃತ ಧರ್ಮವು. ಈ ಧರ್ಮವನ್ನು ಪರಿಪಾಲಿಸುತ್ತ ಇರುವವರೇ ನಿಜವಾದ ವೀರಮಾಹೇಶ್ವರರೆಂಬ ವಿಷಯವು ಇದರಲ್ಲಿ ಬಹು ಚನ್ನಾಗಿ ಪ್ರಕಟಿಸಲ್ಪಟ್ಟಿದೆ.

ಈ ಮೇರೆಗೆ ಶ್ರೀ ಶಂಭುಲಿಂಗ ಶಿವಾಚಾರ್ಯರು ಈ ಮಹತ್ವದ ವಿಷಯವನ್ನು ಈ ಗ್ರಂಥದಲ್ಲಿ ಅನೇಕ ಆಧಾರಗಳೊಡನೆ ವಿವೇಚಿಸಿದ್ದು ಅದು ವಿದ್ವಜ್ಜನರ ವಿಚಾರಕ್ಕೆ ಅತ್ಯರ್ಹವಾಗಿದೆ. ಈ ತೆರದ ಗ್ರಂಥವನ್ನು ಶ್ರೀ ಸ್ವಾಮಿಗಳವರು ಬರೆದದ್ದಕ್ಕೆ ನಾವು ಅವರನ್ನು ಅಭಿನಂದಿಸುತ್ತೇವೆ.

---

ಗಳಲ್ಲಿ ಸ್ಫುಟಗೊಳಿಸಿರುವರು. ನಮಗೆ ಉಪಲಬ್ಧವಿರುವ ವೇದದಲ್ಲಿ ಮತತತ್ವಗಳಿಗೆಲ್ಲಾ ಆಧಾರವು ದೊರೆಯದಿದ್ದರೂ 'ವೇದಾ ಅನಂತಾಃ' ಎಂಬ ಪ್ರಮಾಣದಿಂದ ಕೆಲವು ತತ್ವಗಳಿಗಾಧಾರವಾದ ವೇದಭಾಗವು ನಷ್ಟವಾಗಿರುವುದೆಂಬ ಅನುಮಾನ ಪ್ರಮಾಣವನ್ನು ತತ್ವಜ್ಞರು ಒಪ್ಪಿಕೊಳ್ಳುವರು. ಆದ್ದರಿಂದ ಶ್ರುತಿಯಲ್ಲಿಲ್ಲದ ಕೆಲವು ವಿಷಯಗಳು ಮನ್ವಾದಿ ಸ್ಮೃತಿಗಳಲ್ಲಿ ಉಕ್ತವಾಗಿದ್ದರೂ, ಅವುಗಳ ಪ್ರಾಮಾಣ್ಯವು ಅಂಗೀಕರಿಸಲ್ಪಟ್ಟಿದೆ. ಅಂತೆ, ವೀರಶೈವ ಸ್ಮೃತಿಗಳಲ್ಲಿ (ಧರ್ಮ ಗ್ರಂಥಗಳಲ್ಲಿ) ಹೇಳಲ್ಪಟ್ಟ ಕೆಲವು ವಿಷಯಗಳಿಗೆ ವೇದ ಪ್ರಾಮಾಣ್ಯವು ಅನುಮಾನದಿಂದ ಸಿದ್ಧವಾಗುತ್ತಿರುವುದು. ಈ ವಿಚಾರದಿಂದ ಸೂತ್ರಕಾರನ ಉಕ್ತಿಯು ಸತ್ಯವಿರುವದರಲ್ಲಿ ಆಕ್ಷೇಪವಿಲ್ಲ.

ಆಕ್ಷೇಪಃ— ಸೂತ್ರಕಾರನು ವಾತುಲ ತಂತ್ರೋಕ್ತ ಶಿವಸಿದ್ಧಾಂತದ ಸಂಗ್ರಾಹಕಗಳೇ ತನ್ನ ಸೂತ್ರಗಳೆಂದು ಹೇಳುವದರಿಂದಲೂ, ಆಗಮಗಳು ಅವೈದಿಕಗಳೆಂದು ಕೆಲವರಿಂದಾಕ್ಷೇಪಿಸಲ್ಪಡುವುದರಿಂದಲೂ ಸೂತ್ರೋಕ್ತ ಷಟ್‌ಸ್ಥಲ ಸಿದ್ಧಾಂತವು ತಾಂತ್ರಿಕವೇ ವೈದಿಕವಲ್ಲವು.

ಸಮಾಧಾನಃ— ಈ ಸಿದ್ಧಾಂತವು ಮೇಗಣ ವಿಚಾರದಿಂದ ವೈದಿಕವೆಂಬುದು ನಿರ್ವಿವಾದ. ಇನ್ನು ಆಗಮಗಳು ಅವೈದಿಕಗಳೆಂಬುದು ನಿರಾಧಾರವು. ವೇದಾಗಮಗಳ ಆಧಾರದಿಂದಲೇ ಪ್ರತಿಯೊಂದು ವೈದಿಕ ಮತವು ಪೂರ್ಣತ್ವವನ್ನು ಹೊಂದಿರುವುದು. ಪಾಂಚರಾತ್ರಾದ್ಯಾಗಮಗಳಿಂದಲೇ ರಾಮಾನುಜಾದ್ಯಾಚಾರ್ಯರು ತಮ್ಮ ಮತಸಿದ್ಧಾಂತವನ್ನು ಪೂರ್ಣಗೊಳಿಸಿರುವರು. ಶ್ರೀನೀಲಕಂಠಾಚಾರ್ಯರು ಆಗಮಗಳು ಅವೈದಿಕಗಳಲ್ಲೆಂದು, ಆಗಮ ಪ್ರಮಾಣತ್ವವನ್ನು ತಮ್ಮ ಕ್ರಿಯಾಸಾರದ ೨೬ನೇಯ ಉಪದೇಶದಲ್ಲಿ ಸ್ಥಿರಪಡಿಸಿರುವುದನ್ನು ನೋಡಿದರೆ ಈ ಆಕ್ಷೇಪವು ದೂರವಾಗುವದು. ಗ್ರಂಥಾಧಿಕ್ಯ ಭಯದಿಂದ ಅವರ ವಿಚಾರವನ್ನಿಲ್ಲಿ ಕೊಟ್ಟಿಲ್ಲವು. ವೇದಾಗಮಗಳಿಗೆ ಶಿವೈಕಕರ್ತೃತ್ವವಿರುವದರಿಂದ ಅವುಗಳಿಗೆ ಪರಸ್ಪರ ವಿರೋಧವಿಲ್ಲದೆ ಏಕತ್ವವೇ ಸಿದ್ಧವಾಗುವದು. ಶಿವ ನಿಶ್ವಸಿತವು ವೇದವು. ಶಿವಮುಖೋದಿತವು ಆಗಮವು.

## ಅಧಿಕರಣಾನುಕ್ರಮಣಿಕೆ.

ನಾಲ್ಕು ಸೂತ್ರಗಳಿಂದ ಅನುಕ್ರಮಣಿಕೆಯು ನಿರೂಪಿಸಲ್ಪಡುವದು.

ಸೂ. ೩೫-೩೮ ಅಧಿಕರಣ--(೧) ಪಾರಂಪರ್ಯ ಕ್ರಮ. (೨) ಸ್ಥಲ ನಿರ್ದೇಶ

(೩.) ಲಿಂಗಸ್ಥಲ ನಿರೂಪಣ. (೪) ಅಂಗಸ್ಥಲ ನಿರೂಪಣ (೫) ಲಿಂಗಾಂಗ ಸಂಯೋಗವಿಧಿ. (೬) ಸರ್ವಾಂಗಲಿಂಗ ಮಹಸ್ವ. (೭) ಅರ್ಪಣ ಸದ್ಭಾವ (೮) ಕ್ರಿಯಾವಿಶ್ರಾಂತಿ.

## ವಿಚಾರ.

ಈ ಅನುಕ್ರಮಣಿಕಾ ಜ್ಞಾನದಿಂದ ಸೂತ್ರಪ್ರತಿಪಾದ್ಯ ಷಟ್‌ಸ್ಥಲ ಸಿದ್ಧಾಂತದ ಪೂರ್ವಾಪರ ಸಂಗತಿಯು ವ್ಯಕ್ತವಾಗುತ್ತಿದೆ. ಹೇಗೆಂದರೆ ಪ್ರಥಮಾಧಿಕರಣದಲ್ಲಿ ಸೂತ್ರಕಾರನ ವಂಶಪಾರಂಪರ್ಯಜ್ಞಾನದಿಂದ ಆತನಲ್ಲಿ ಸಿದ್ಧಾಂತ ಪ್ರತಿಪಾದನಶಕ್ತಿಯು ನಿರ್ದುಷ್ಟವಾದುದೆಂದು ವ್ಯಕ್ತವಾಗುವುದು. ದ್ವಿತೀಯಾಧಿಕರಣದಲ್ಲಿ—ಜಗಜ್ಜನ್ಮಾದಿ ಕಾರಣನಾದ ಶಿವನೇ ಆ ಷಟ್‌ಸ್ಥಲ ಸಿದ್ಧಾಂತದ ಸ್ಥಲಶಬ್ದವಾಚ್ಯನೆಂದೂ, ಆ ಸ್ಥಲವೇ ಲಿಂಗಾಂಗಸ್ಥಲವಾಗಿರುವದೆಂದೂ ಸ್ಥಲವಿಚಾರವು ನಿರ್ದೇಶಿಸಲ್ಪಟ್ಟಿದೆ. ತೃತೀಯಾಧಿಕರಣದಲ್ಲಿ—ಲಿಂಗಸ್ಥಲಸ್ವರೂಪವೂ ಅದರ ಷಡ್ವಿಧ ಕ್ರಮವೂ ಚತುರ್ಥಾಧಿ ಕರಣದಲ್ಲಿ ಅಂಗಸ್ಥಲ ಸ್ವರೂಪವೂ ಅದರ ಷಡ್ವಿಧಕ್ರಮವೂ ಪ್ರತಿಪಾದಿತವಾಗಿದೆ. ಪಂಚಮಾಧಿಕರಣದಲ್ಲಿ ಆ ಲಿಂಗಾಂಗಗಳ ಐಕ್ಯವೂ ಅದೇ ಮುಕ್ತಿಯೂ ಎಂಬುದಾಗಿ ಸವಿಸ್ತಾರ ನಿರೂಪಣವಿರುವದು. ಷಷ್ಠಾಧಿಕರಣದಲ್ಲಿ—ಐದನೆಯ ಅಧಿಕರಣದಲ್ಲಿ ಹೇಳಿದಂತೆ ಅಂಗನಿಗೆ ಲಿಂಗೈಕ್ಯತೆ ಸಮನಿಸುವದಕ್ಕಾಗಿ, ಗುರೂಪದೇಶದಿಂದ ಸರ್ವಾಂಗಗಳಲ್ಲಿ ಸರ್ವದಾ ಸರ್ವತೋ ಮುಖವಾಗಿ ಲಿಂಗವು ಸುಪ್ರತಿಷ್ಠಿತವಾಗಿ ಆ ಲಿಂಗೋಪಾಸನೆಗೆ ತಕ್ಕುದಾದ ಸರ್ವಾಂಗಲಿಂಗ ಸಾಹಿತ್ಯವು ಹೇಳಲ್ಪಟ್ಟಿದೆ. ಸಪ್ತಮಾಧಿಕರಣದಲ್ಲಿ ಸರ್ವಾಂಗಗಳಲ್ಲಿ ಪ್ರತಿಷ್ಠಿತವಾದ ಲಿಂಗಕ್ಕೆ ಅರ್ಪಿಸತಕ್ಕ ಅಂಗನ ಕ್ರಿಯಾಜ್ಞಾನಾತ್ಮಕವಾದ ಅರ್ಪಣವಿಧಿಯು ನಿರ್ದೇಶಿತವಾಗಿದೆ. ಅಷ್ಟಮಾಧಿಕರಣದಲ್ಲಿ ಲಿಂಗಾರ್ಪಿತ ಕ್ರಿಯೆಯು ಸುಖರೂಪವಾದ ವಿಶ್ರಾಂತಿಯೂ, ಆ ಕ್ರಿಯಾ ವಿಶ್ರಾಂತಿಯೇ ಸಮ್ಯಗ್ ಜ್ಞಾನವೂ, ಆ ಜ್ಞಾನದಿಂದಲೇ ಆತ್ಮನು ಆತ್ಮಕಾಮನಾಗಿ ಸುಖಿಯಾಗುವನು ಎಂಬ ವಿಷಯವು ಉಕ್ತವಾಗಿರುವದು. ಈ ರೀತಿಯಾಗಿ ಸಂಗತವಾದ ಸೂತ್ರಪ್ರತಿಪಾದ್ಯ ವಿಷಯದ ಸಾಮಾನ್ಯ ಜ್ಞಾನವು ಜಿಜ್ಞಾಸುಗಳಿಗುಂಟಾಗದಂತೆ ಸೂತ್ರಕಾರನಿಂದ ಅಧಿಕರಣಾನುಕ್ರಮವು ನಿರೂಪಿಸಲ್ಪಟ್ಟಿದೆ.

## ಫಲಶ್ರುತಿ.

ಸೂ. ೩೯ ಮೇಲೆ ಹೇಳಿದಂತೆ ಅಧಿಕರಣಗಳಿಂದ ಯುಕ್ತವಾದ ಶಿವಾದ್ವೈತ ರೂಪವಾದ ಈ ಶಿವಸಿದ್ಧಾಂತ ತಂತ್ರವನ್ನು ತಿಳಿದಾತನೇ ಪ್ರಭುವು, ಆತನೇ ಅವಿದ್ಯಾಗ್ರಂಥಿಯನ್ನು ಭೇದಿಸಿ ಸುಖಿಯಾಗುವನು.

ಶಿವಾನುಭವ ಸೂತ್ರದ ಪಾರಂಪರ್ಯ ಕ್ರಮವೆಂಬ ಹೆಸರಿನ
**ಪ್ರಥಮಾಧಿಕರಣವು ಸಂಪೂರ್ಣವು.**



# ದ್ವಿತೀಯಾಧಿಕರಣಂ

## ಸ್ಥಲನಿರ್ದೇಶ.

ವೀರಶೈವಮತದ ಷಟ್‌ಸ್ಥಲ ಸಿದ್ಧಾಂತವನ್ನು ಪ್ರತಿಪಾದಿಸುವ ಆಗ ಮಗಳಲ್ಲಿ ಪರಬ್ರಹ್ಮವು ಸ್ಥಲಶಬ್ದದಿಂದ ವ್ಯವಹರಿಸಲ್ಪಡುತ್ತದೆ. ಸೂತ್ರ ಕಾರನು ಆ ಸ್ಥಲದ ಸ್ವರೂಪವನ್ನು ೯ ಸೂತ್ರಗಳಿಂದ ನಿರೂಪಿಸುತ್ತಾನೆ.

ಸೂ. ೧. ದೇವರ ದೇವನಾದ ಶಿವನು ಗುಪ್ತವಾದ [ಅನುಭವ ದಿಂದ ತಿಳಿಯಲು ಸಾಧ್ಯವಾದ] ಅರ್ಥವುಳ್ಳ ಯಾವ ಸ್ಥಲದ ನಿರ್ದೇಶ ವನ್ನು ಆಗಮದಲ್ಲಿ ಹೇಳಿರುವನೊ ಅದನ್ನೆ ಮೊದಲು ಸಂಕ್ಷೇಪವಾಗಿ ಹೇಳಲಿಚ್ಛಿಸುವೆನು.

ಸೂ. ೨. "ಏಕಮೇವಾ ದ್ವಿತೀಯಂ ಬ್ರಹ್ಮ" ಎಂಬುದಾದಿಯಾದ ಶ್ರುತಿಯ ಪ್ರಮಾಣದಿಂದ–ತನ್ನಂತೆ ಅನ್ಯವಿಲ್ಲದೆ ತಾನೊಂದೇ ಒಂದಾ ದುದೂ, ಪರಬ್ರಹ್ಮವೆಂದು ಕರೆಯಿಸಿಕೊಳ್ಳುವುದೂ, ಸಚ್ಚಿದಾನಂದ ಲಕ್ಷ ಣದಿಂದ ಕೂಡಿದುದೂ ಆದ ಯಾವ ಶಿವತತ್ವವಿರುವುದೊ ಅದನ್ನೆ ಆದ ರದಿಂದ ಶಿವಾಚಾರ್ಯರು ಸ್ಥಲವೆಂದು ಹೇಳಿರುವರು.

ಸೂ. ೩. ಆ ಶಿವತತ್ವವು ಮಹದಾದಿಯಾದ ಸರ್ವ ತತ್ವಗಳಿಗೆ ಸ್ಥಾನಭೂತವೂ, ಲಯಭೂತವೂ ಆಗಿರುವದರಿಂದ ಸ್ಥಲವೆಂದು ಹೇಳ ಲ್ಪಡುತ್ತದೆ.

ಸೂ. ೪. ಚೇತನಾಚೇತನಾತ್ಮಕವಾದ ಪ್ರಪಂಚವು ಮೊದಲು ಸ್ಥಿತಿಯನ್ನೂ ಅಂತದಲ್ಲಿ ಲಯವನ್ನೂ ಯಾವ ತತ್ವದಲ್ಲಿ ಹೊಂದುವುದೊ ಅದೇ ಸ್ಥಲವೆಂದು ಹೇಳಲ್ಪಡುತ್ತದೆ.

ಸೂ. ೫. 'ಸ್ಥಲ' ಎಂಬ ಶಬ್ದದಲ್ಲಿ 'ಸ್ಥ' ಎಂಬ ವರ್ಣವು ಸ್ಥಾನ ವಾಚಕವೂ 'ಲ' ಎಂಬಕ್ಷರವು ಲಯವಾಚಕವೂ ಆಗಿರುವವು. ಈ ಎರಡಕ್ಕೆ ಅಂದರೆ ಸೃಷ್ಟಿಯ ಸ್ಥಿತಿಲಯಗಳಿಗೆ ಯಾವುದು ಅಭಿನ್ನ ನಿಮಿತ್ತೋ ಪಾದಾನಕಾರಣವಾಗಿರುವುದೊ ಅದೇ ಸ್ಥಲವು.

ಸೂ. ೬. ಆ ಸ್ಥಲತತ್ವವೇ ಚರಾಚರಾತ್ಮಕವಾದ ಸರ್ವ ಜಗತ್ತಿಗೆ ಅಧಿಷ್ಠಾನ [ಆಶ್ರಯ] ವಸ್ತುವಾಗಿರುವದು.

ಸೂ. ೭. ಜಗತ್ತಿನ ಸರ್ವಶಕ್ತಿಗಳಿಗೂ, ಅಖಿಳ ತೇಜಃಪದಾರ್ಥಗಳಿಗೂ, ಸಮಸ್ತಾತ್ಮರಿಗೂ ಯಾವುದು ಆಧಾರವಾಗಿರುವುದೊ ಅದೇ ಸ್ಥಲವೆಂದು ಪ್ರಾಜ್ಞರ ಮತವು.

ಸೂ. ೮. ಸಮಸ್ತವಾದ ಭೂತಗಳಿಗೂ, ಲೋಕಗಳಿಗೂ, ಸಂಪತ್ತುಗಳಿಗೂ ಯಾವುದು ಆಲಯವೊ ಅದೇ ಸ್ಥಲವು.

ಸೂ. ೯ ಸಂಸಾರದ ಉಪಶಮ ಅಂದರೆ ಪರನಿರ್ವಾಣದಲ್ಲಿ ನಿಷ್ಠೆಯುಳ್ಳವರಿಗೆ ಅಂತಿಮಸ್ಥಾನವು ಯಾವುದೊ ಅದ್ವೈತರಹಿತವಾದ ವಸ್ತುವನ್ನೆ ಶಿವಜ್ಞಾನಿಗಳು ಸ್ಥಲವೆಂದು ಹೇಳುವರು.

## ವಿಚಾರ.

ಮೇಗಣ ಸೂತ್ರಾರ್ಥ ವಿಚಾರದಿಂದ ತಿಳಿದುಬರುವುದೇನಂದರೆ—ಚೇತನಾಚೇತನಾತ್ಮಕವಾದ ಪ್ರಪಂಚದ ಸೃಷ್ಟಿಸ್ಥಿತಿಲಯಂಗಳಿಗೆ ಯಾವುದು ಕಾರಣವೊ, ಅಂದರೆ ಸೃಷ್ಟಿ ಸ್ಥಿತಿಲಯವೆಂಬ ಚಿತ್ರಕ್ಕೆ ಯಾವುದು ಭಿತ್ತಿ (ಗೋಡೆ) ಯಂತೆ ಅಧಾರವಾಗಿರುವದೋ ಅದೇ ಸ್ಥಳವೆನಿಸುತ್ತದೆ. ಸ್ಥಳವೆ ಶಿವನೆಂದು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. "ಶೇರತೇ ಅಸ್ಮಿನ್ ಭುವನಾನಿ ಇತಿ ಶಿವಃ" ಎಂಬ ವ್ಯುತ್ಪತ್ತಿಯಿಂದ ಶಿವಶಬ್ದವಾದರೂ ಸಕಲ ಲೋಕಂಗಳಿಗೆ ಆಧಾರವಾದ ವಸ್ತುವೆಂಬ ಅರ್ಥವನ್ನೇ ಬೋಧಿಸುತ್ತದೆ. ಶಿವನು ಜಗಜ್ಜನ್ಮಾದಿ ಕಾರಣನೆಂಬುದಕ್ಕೆ "ಯತೋವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯಭಿಸಂವಿಶಂತಿ, ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ" ಎಂಬ ತೈತ್ತರೀಯ ಶೃತಿಯೂ "ಜನ್ಮಾದ್ಯಸ್ಯಯತಃ" ಎಂಬ ಬ್ರಹ್ಮಸೂತ್ರವೇ ಮೊದಲಾದುವೂ ಪ್ರಮಾಣವಾಗಿರುವವು.

ಇಂತು ಸ್ಥಳ ಶಬ್ದವಾಚ್ಯನಾದ ಶಿವನೇ ಸಚ್ಚಿದಾನಂದ ಸ್ವರೂಪನಾಗಿಹನು. ಶಿವನು ಸಮಸ್ತ ಪ್ರಪಂಚಕ್ಕೆ ಕಾರಣನಾಗಿ ತನಗೆ ಅನ್ಯಕಾರಣವಿಲ್ಲದುದರಿಂದ ಸದ್ರೂಪನಾಗಿರುವನು. ತಾನು ಸರ್ವ ತೋರಿಕೆಗೆ ಹೇತುವಾಗಿ ತನ್ನ ತೋರಿಕೆಗೆ ಪ್ರಮಾಣಾದಿ ಸಾಧನವನ್ನು ಬಯಸದುದರಿಂದ ಚಿದ್ರೂಪನಾಗಿರುವನು. ಪ್ರಪಂಚವು ಅನುಭವಿಸುವ ಆನಂದಕ್ಕೆಲ್ಲಾ ಮೂಲ ಕಾರಣನಾಗಿರುವದರಿಂದ ಆನಂದಸ್ವರೂಪನಾಗಿರುವನು. "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂಬುದಾದಿಯಾದ ಶೃತಿವಾಕ್ಯವು ಶಿವನ ಸಚ್ಚಿದಾನಂದ ಸ್ವರೂಪಕ್ಕೆ ಪ್ರಬಲ ಪ್ರಮಾಣವಾಗಿರುವುದು.

ಶಿವನಿಗೆ ಈ ಸಚ್ಚಿದಾನಂದ ಸ್ವರೂಪದ ಎಚ್ಚರವು ಸ್ವತಃ ಸಿದ್ಧವಾಗಿರುವದು. ಆ ಎಚ್ಚರವೇ ವೀರಶೈವ ಶಾಸ್ತ್ರದಲ್ಲಿ 'ವಿಮರ್ಶ'ವೆಂದು ಹೇಳಲ್ಪಡುವದು. ಅದೇ ಶಕ್ತಿಯು. ಈ ವಿಮರ್ಶ ಶಕ್ತಿಯಿಂದಲೇ "ಅಸ್ಮಿ, ಪ್ರಕಾಶೇ, ನಂದಾಮಿ" ಎಂಬ ಸತ್, ಚಿತ್, ಆನಂದದ ಅನುಭವವು ಶಿವನಿಗುಂಟಾಗುವದು. ಈ ಶಕ್ತಿಯು ಇಲ್ಲವಾದರೆ ಶಿವನು ಜಡವೆನಿಸುವನು. ಲೋಕದಲ್ಲಿ ಸ್ಫಟಿಕಾದಿಗಳು ಸ್ವಚ್ಛವಾಗಿ ಪ್ರಕಾಶಿಸುವವು. ಅವುಗಳಿಗೆ ತಮ್ಮ ಪ್ರಕಾಶದ ವಿಮರ್ಶವಿರುವದಿಲ್ಲ. ಆದರಿಂದ ಅವು ಜಡವೆನಿಸುವವು. ಅರುವಿಲ್ಲದೆ ಹೊಳೆಯುವ ಪದಾರ್ಥವು ಚೇತನವೆನಿಸಲಾರದು. ಹೀಗೆ ಚೇತನನಾದ ಪರಶಿವನು ತನ್ನ ವಿಮರ್ಶಶಕ್ತಿಯ ವಿಲಾಸದಿಂದ ಸೃಷ್ಟಿಯನ್ನುಂಟುಮಾಡುವನು. ಈ ವಿಷಯದಲ್ಲಿ ಶಿವಾದ್ವೈತಮಂಜರಿಯಲ್ಲಿ ಉಕ್ತವಾದ "ಸನ್ ಹೃದಯ ಪ್ರಕಾಶೊ ಭವನಸ್ಯ ಕ್ರಿಯಾಯಾ ಭವತಿ ಕರ್ತಾ ಸ್ಯೈವ ಕ್ರಿಯಾವಿಮರ್ಶಃ ಸ್ವಸ್ಥಾ ಕ್ಷುಭಿತಾಚ ವಿಶ್ವವಿಸ್ತಾರಾ" ಎಂಬ ಸಾರಸ್ವತ ಸೂತ್ರವು ಪ್ರಮಾಣವಾಗಿರುವದು.

ಶಂಕೆ:— ಕಾರಣವು ಅನೇಕ ಪ್ರಕಾರವಾಗಿರುವುದು. ಕೊಡಕ್ಕೆ ಕುಂಬಾರನು ನಿಮಿತ್ತಕಾರಣನು, ಮಣ್ಣು ಉಪಾದಾನಕಾರಣವು. ಚಕ್ರದಂಡಾದಿಗಳು ಸಹಕಾರಿ ಕಾರಣಗಳಾಗುವವು. ಅಂತೆ ಶಿವನು ಜಗತ್ತಿಗೆ ಯಾವ ತರದ ಕಾರಣನಾಗಿರುವನು?

೧. ನಿಮಿತ್ತಕಾರಣನೆಂದರೆ— ಕೊಡಕ್ಕೆ ಮಣ್ಣಿನಂತೆ, ಜಗತ್ತಿಗೆ ಉಪಾದಾನಕಾರಣವಾದ ಮತ್ತೊಂದು ವಸ್ತುವು ಬೇಕಾಗುವದು. ವಸ್ತ್ವಂತರವನ್ನು ಅಂಗೀಕರಿಸಿದರೆ ಸರ್ವವೂ ಶಿವನೇ ಶಿವಾತಿರಿಕ್ತವಾದ ಸದ್ವಸ್ತುವಿಲ್ಲವೆಂದು ಹೇಳುವ "ಸರ್ವಂ ಖಲ್ವಿದಂ ಬ್ರಹ್ಮ" "ಸರ್ವೋ ವೈ ರುದ್ರಃ" ಎಂದುದಾದಿಯಾದ ಶೃತಿಗೆ ಬಾಧೆಯುಂಟಾಗುವುದು.

೨. ಉಪಾದಾನ ಕಾರಣನೆಂದರೆ— ಮಣ್ಣು ಮೊದಲಾದವುಗಳಿಗೆ ಹೇಗೋ ಹಾಗೆ ಶಿವನಿಗೂ ವಿಕಾರಾದಿ ದೋಷಗಳುಂಟಾಗುವವು. ಉಪಾದಾನಕ್ಕೆ ನಿಮಿತ್ತವಾದ ಕಾರಣಾಂತರವನ್ನು ಸ್ವೀಕರಿಸಬೇಕಾಗುವುದರಿಂದ ಜಗತ್ತಿಗೆ ಬೇರೊಬ್ಬ ಅಧಿಷ್ಠಾತೃವನ್ನು ನಿಷೇಧಿಸುವ "ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೆ" ಇವೇ ಮೊದಲಾದ ಶೃತಿವಾಕ್ಯಗಳಿಗೆ ಭಂಗಬರುವುದು. ತಮಃ ಪ್ರಕಾಶದಂತೆ ಪರಸ್ಪರ ವಿರುದ್ಧವಾಗುವುದರಿಂದ ನಿಮಿ

ತ್ತೋಪಾದಾನಕಾರಣಗಳೆರಡನ್ನೂ ಒಬ್ಬ ಶಿವನಿಗೆ ಹೇಳಲಿಕ್ಕೆ ಬರುವು ದಿಲ್ಲ.

ಸಮಾಧಾನಃ— ಶಿವನಿಗೆ ನಿಮಿತ್ತೋಪಾದಾನಗಳಲ್ಲಿ ಒಂದು ಕಾರಣವನ್ನು ಮಾತ್ರ ಹೇಳಿದರೆ ವೇದಗಣ ಶ್ರುತಿಗಳಿಗೆ ಬಾಧೆಯುಂಟಾಗುವುದು. ಶಿವನು ಜಗತ್ತಿಗೆ ಅಭಿನ್ನನಿಮಿತ್ತೋಪಾದಾನಕಾರಣನಾಗಿರುವನು. ತೈತ್ತರೀಯ ಶ್ರುತಿಯಲ್ಲಿ "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಎಂಬುದರಿಂದ ಶಿವನಿಗೆ ನಿಮಿತ್ತಕಾರಣವೂ, "ಯತ್ಪ್ರಯಂತಿ" ಎಂಬುದರಿಂದ ಉಪಾದಾನ ಕಾರಣವೂ ಉಪದೇಶಿಸಲ್ಪಡುತ್ತದೆ. "ಜನ್ಮಾದ್ಯಸ್ಯ ಯತಃ" "ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್" ಎಂಬ ಬ್ರಹ್ಮಸೂತ್ರಗಳಾದರೂ ಇದನ್ನೇ ಬೋಧಿಸುತ್ತವೆ. ಅಘಟಿತ ಘಟನಾಸಾಮರ್ಥ್ಯವುಳ್ಳ ಶಿವನಿಗೆ ಉಭಯಕಾರಣತ್ವವು ವಿರುದ್ಧವಲ್ಲ, ಮತ್ತು ವಿಕಾರಾದಿ ದೋಷವು ಸಂಭವಿಸುವುದಿಲ್ಲ.

ಶಂಕೆಃ— ಈ ಸಮಾಧಾನದಿಂದ ಮಣ್ಣು ಮಡಕೆಯಾದಂತೆ ಶಿವನೇ ಜಗದಾಕಾರವಾಗಿ ಪರಿಣಮಿಸುವನೆಂದು ಸೂಚಿತವಾಗುತ್ತದೆ. ಶಿವನು ಅವಯವ ರಹಿತನು. ಆದುದರಿಂದ ಪರಿಣಮಿಸಲಾರನು. ಯಾವುದಕ್ಕೆ ಅವಯವವಿಲ್ಲವೋ ಅದಕ್ಕೆ ಪರಿಣಾಮವಿಲ್ಲ. ಆದರೆ ಶಿವನು ಸರ್ವಾಧಿಷ್ಠಾನನಿದ್ದು ಜಗದ್ರೂಪನಾಗಿ ಅನ್ಯಥಾ ತೋರುತ್ತಾನೆ. ಅಧಿಷ್ಠಾನವಸ್ತುವಿನ ಅನ್ಯಥಾ ತೋರಿಕೆಯೇ ವಿವರ್ತವು. ಅವಿದ್ಯೆಯು ಪರಿಣಮಿಸುತ್ತದೆ. ಆದುದರಿಂದ ಈ ಜಗತ್ತು ಅವಿದ್ಯೆಯ ಪರಿಣಾಮವು. ಬ್ರಹ್ಮದ ವಿವರ್ತವೆಂದು ಅದ್ವೈತಿಗಳು ಹೇಳುವಂತೆ ಶಿವನಿಗೆ ವಿವರ್ತಕಾರಣವನ್ನು ಹೇಳುವದೇ ಯುಕ್ತವಲ್ಲವೆ?. ಮತ್ತು ಶಿವನ ಪರಿಣಾಮವೇ ಜಗತ್ತೆಂದು ಹೇಳಿದರೆ— ಶಿವನು ಸಂಪೂರ್ಣವಾಗಿ ಪರಿಣಮಿಸುವನೋ ? ಅಥವಾ ಯತ್ಕಿಂಚಿದಂಶದಿಂದ ಪರಿಣಮಿಸುವನೋ ? ಸಂಪೂರ್ಣ ಪರಿಣಾಮವನ್ನು ಹೇಳುವ ಪಕ್ಷದಲ್ಲಿ ಕ್ಷೀರವು ದಧಿರೂಪವಾಗಿ ಪರಿಣತವಾದ ಕಾಲದಲ್ಲಿ ಕ್ಷೀರವಿಲ್ಲವೆನ್ನುವಂತೆ ಶಿವನು ಸಂಪೂರ್ಣ ರೂಪದಿಂದ ಪರಿಣಮಿಸಿದಾಗ ಶಿವನಿಲ್ಲವೆನ್ನಬೇಕಾಗುವದು. ಈ ರೀತಿಯಿಂದ ಜಗತ್ಕರ್ತೃವಿಲ್ಲದೆ ಹೋದರೆ ಜಗತ್ತಿನ ವ್ಯವಹಾರವು ಯಜಮಾನನಿಲ್ಲದ ಮನೆಯಂತೆ ಅವ್ಯವಸ್ಥಿತವಾದೀತು. ಶಿವನು ತನ್ನ ಒಂದಂಶದಿಂದ ಜಗದಾಕಾರವಾಗಿ ಪರಿಣಮಿಸುವನೆಂದರೆ ಆತನು ನಿರವಯವನೆಂದು ಹೇಳುವ ಶ್ರುತಿಗಳಿಗೆ ವಿರೋ

ಧವಾಗುವುದು. ಆದ್ದರಿಂದ ಬ್ರಹ್ಮವು ವಿವರ್ತಿಸುತ್ತದೆ. ಅವಿದ್ಯೆಯು ಪರಿಣಮಿಸುತ್ತದೆ ಎಂದು ಹೇಳುವದೇ ಹಿತವು.

ಸಮಾಧಾನ:—ಶಿವನು ನಿರವಯವನಾದರೂ ತನ್ನ ವಿಮರ್ಶ ಶಕ್ತಿಯಿಂದ ಪರಿಣಮಿಸಬಲ್ಲನು. ನಿರವಯವತ್ವದ ಉಪಮರ್ದನ ಮಾಡದೆ ಜಗತ್ಪರಿಣಾಮವು ಉಪಪನ್ನವಾಗುವದು. ಪೂರ್ವರೂಪವನ್ನು ಬಿಟ್ಟು ರೂಪಾಂತರವನ್ನು ಹೊಂದುವದೇ ಪರಿಣಾಮವೆಂದು ನಾವು ಹೇಳುವದಿಲ್ಲ. ಸ್ವರ್ಣಕುಂಡಲ ಸ್ಥಲದಲ್ಲಿ ಉಪಾದಾನ ಕಾರಣವಾದ ಸ್ವರ್ಣಕ್ಕೆ ನಾಶವಿಲ್ಲದೆ, ಅದಕ್ಕೆ (ಸ್ವರ್ಣಕ್ಕೆ) ಭಿನ್ನವಾಗಿ, ಕುಂಡಲವೆಂದು ವ್ಯವಹರಿಸಲು ಯೋಗ್ಯವಾದ ಕುಂಡಲೋತ್ಪತ್ತಿಯು ಕಂಡುಬರುತ್ತದೆ. ಅದರಂತೆ ಶಿವನಲ್ಲಿ ಶಿವಸ್ವರೂಪವು ನಾಶವಾಗದೆ ಜಗದುತ್ಪತ್ತಿಯಾಗುವುದು. ಉಪಾದಾನಕಾರಣದ ಸ್ವರೂಪ ಚ್ಯುತಿಯಿಲ್ಲದೆ ಅದರಿಂದ ವ್ಯವಹಾರಯೋಗ್ಯವಾದ ಕಾರ್ಯೋತ್ಪತ್ತಿಯೇ ಪರಿಣಾಮವು. ಈ ರೀತಿಯಾದ ಪರಿಣಾಮಲಕ್ಷಣದಿಂದ ಮೇಗಣ ಶಂಕೆಗೆ ಅವಕಾಶವಿಲ್ಲವು. ಜಗತ್ತು ಶಿವನ ಯತ್ಕಿಂಚಿದಂಶದ ಪರಿಣಾಮವೆಂದೂ ಹೇಳಬೇಕಾಗಿಲ್ಲವು. ಪೂರ್ವರೂಪಪರಿತ್ಯಾಗದಿಂದ ರೂಪಾಂತರಾಪತ್ತಿಯೇ ಪರಿಣಾಮವೆಂದು ಹೇಳುವ ಪಕ್ಷದಲ್ಲಿ—ಅವಿದ್ಯೆಯ ಪರಿಣಾಮವೇ ಜಗತ್ತೆಂದು ಹೇಳುವ ಅದ್ವೈತಿಗಳ ಅವಿದ್ಯೆಯಾದರೂ ಸಂಪೂರ್ಣವಾಗಿ ಪರಿಣಮಿಸುವದೋ? ಯತ್ಕಿಂಚಿದಂಶದಿಂದ ಪರಿಣಮಿಸುವದೊ? ಎಂಬ ಶಂಕೆಯುಂಟಾಗುವದು. ಅವಿದ್ಯೆಯಲ್ಲಿರುವ ವಿಚಿತ್ರ ಶಕ್ತಿಯಿಂದ ಜಗದ್ರೂಪಪರಿಣಾಮವಾಗುವದೆಂದು ಹೇಳಿದರೆ "ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನ ಬಲಕ್ರಿಯಾ ಚ" ಎಂಬ ಶೃತಿಯಿಂದ ಶಿವನಿಗೆ ವಿಚಿತ್ರ ಶಕ್ತಿಯಿರುವದಲ್ಲದೆ ಅವಿದ್ಯೆಗಿರುವುದೆಂಬುವಲ್ಲಿ ಪ್ರಮಾಣವಿಲ್ಲವು. ಶೃತಿಸೂತ್ರಗಳು ಜಗತ್ತು ಬ್ರಹ್ಮದ ಪರಿಣಾಮವೆಂದು ಹೇಳುತ್ತಿರಲು ಅವಿದ್ಯೆಯು ಪರಿಣಮಿಸುತ್ತದೆ, ಬ್ರಹ್ಮವು ವಿವರ್ತಿಸುತ್ತದೆ ಎಂಬುದನ್ನು ವೀರಶೈವವು ಒಪ್ಪುವದಿಲ್ಲ. ಶಾಂಕರಮತದ ವಿವರ್ತ ವಾದವು ವೀರಶೈವದ ಲಿಂಗಾಂಗ ಸಮರಸದಲ್ಲಿ ಸಂಗತವಾಗದು. "ಸ್ವೇಚ್ಛಯಾ ಸ್ವಚಿತ್ತೇ ವಿಶ್ವಮುನ್ಮೀಲಯತಿ" ಎಂಬ ಶಕ್ತಿಸೂತ್ರವೂ, "ಸ್ವಶಕ್ತಿ ಪ್ರಚಯೋಽಸ್ಯ ವಿಶ್ವಂ" ಎಂಬ ಶಿವಸೂತ್ರವೂ ಜಗತ್ತು ಶಿವನ ಪರಿಣಾಮವೆಂದೇ ಹೇಳುತ್ತವೆ. ಶಿವಾ

ನುಭವ ಸೂತ್ರಕಾರನಾದರೂ ಮುಂದೆ "ಶಕ್ತ್ಯಾ ಪ್ರಪಂಚ ಸೃಷ್ಟಿಃಸ್ಯಾತ್" ಎಂಬ ಸೂತ್ರದಿಂದ ಇದೇ ವಿಷಯವನ್ನು ದೃಢಪಡಿಸುವನು.

## ಲಿಂಗಾಂಗ ಸ್ಥಲಗಳು.

೧೦ನೆಯ ಸೂತ್ರದಿಂದ ೧೯ನೆಯ ಸೂತ್ರದವರೆಗೂ ಸ್ಥಲವು, ಲಿಂಗಸ್ಥಲ ಅಂಗಸ್ಥಲವೆಂದು ದ್ವಿವಿಧವಾದ ಬಗೆಯನ್ನು ವಿವರಿಸುವನು:—

ಸೂ. ೧. ಆ ಸ್ಥಲತತ್ವವು ತನ್ನ ವಿಮರ್ಶ ಶಕ್ತಿಯ ಕ್ಷೋಭೆಯಿಂದ (ಚಲನದಿಂದ) ಲಿಂಗಸ್ಥಲವೆಂದೂ, ಅಂಗಸ್ಥಲವೆಂದೂ ಎರಡು ವಿಧವಾಯಿತು.

ಸೂ. ೧೧. ೧೨. ಬಯಲು [ಆಕಾಶ], ಅಖಂಡವಾಗಿದ್ದರೂ ಕೊಡದೆಡೆಯನ್ನು ಸೇರಿ ಕೊಡದ ಉಪಾಧಿಯಿಂದ ಕೊಡದ ಬಯಲೆಂತಲೂ, (ಘಟಾಕಾಶ) ಕೊಡವನ್ನು ಬಿಟ್ಟುಳಿದುದು ದೊಡ್ಡ ಬಯಲೆಂತಲೂ (ಮಹಾಕಾಶ) ಎರಡು ವಿಧವಾಗುವಂತೆ ಲಿಂಗಾಂಗಗಳ ಉಪಾಧಿಯಿಂದ ಸ್ಥಲವೇ ಎರಡು ತೆರನಾಯಿತು. ಆ ಸ್ಥಲವು ಶಿವ ರುದ್ರ ಮೊದಲಾದ ಸಂಜ್ಞೆಯುಳ್ಳುದಾಗಿದೆ.

ಸೂ. ೧೩. ಸ್ಥಲವೇ ಉಪಾಸ್ಯವೂ, (ಪೂಜೆಗೊಳ್ಳುವದು) ಉಪಾಸಕವೂ (ಪೂಜೆಮಾಡುವದು) ಆಗಿರುವುದು. ಅಂದರೆ ಲಿಂಗಸ್ಥಲವೇ ಉಪಾಸ್ಯವು. ಅಂಗಸ್ಥಲವೇ ಉಪಾಸಕವು.

ಸೂ. ೧೪. ಉಪಾಸ್ಯತ್ವಕ್ಕೂ ಉಪಾಸಕತ್ವಕ್ಕೂ ಭೇದವಿಲ್ಲ. ಎರಡನ್ನೂ ಪರಶಿವನೆಂದೇ ತಿಳಿಯತಕ್ಕದ್ದು. ಎರಡರಲ್ಲಿಯೂ ಶಿವನು ತನ್ನ ಲೀಲೆಯಿಂದ ವಿಕಾರವಾಗದ ಚೇತನ ಸ್ವರೂಪದ ಭೇದದಿಂದಿರುವನು.

ಸೂ. ೧೫. ೧೬. ಶಿವನು ತನ್ನ ವಿಮರ್ಶ ಶಕ್ತಿಯಿಂದ ಏಕಕಾಲದಲ್ಲಿ ತಾನೇ ಉಪಾಸ್ಯನೂ ಉಪಾಸಕನೂ ಆದನು. ಏಕೆಂದರೆ— "ಶಿವೋ ಭೂತ್ವಾ ಶಿವಂ ಯಜೇತ್" ನಾ ರುದ್ರೋ ಕೀರ್ತಯೇದ್ರುದ್ರಂ ನಾರುದ್ರೋರುದ್ರಮರ್ಚಯೇತ್" ಇತ್ಯಾದಿ ವಾಕ್ಯಗಳಿಂದ ಶಿವನಾಗದವನಿಗೆ ಶಿವೋಪಾಸನೆಯು ಕೋಟಿ ಜನ್ಮಗಳನ್ನೆತ್ತಿದರೂ ಸಂಭವಿಸದಾಗಿ ಶಿವನೇ ಪೂಜ್ಯನೂ ಪೂಜಕನೂ ಆಗಿರುವನಲ್ಲದೆ ಅನ್ಯವಿಲ್ಲ.

ಸೂ. ೧೭. ೧೭. ೧೮. ೧೯. ಚಿನ್ಮಾತ್ರವೂ ಸ್ಥಲವೂ ಆದ ಸತ್ಯಾದಿ ಲಕ್ಷಣದಿಂದ ಕೂಡಿದ ಸಾಕ್ಷಾತ್ಪರವಸ್ತುವೇ ಲಿಂಗಾಂಗತ್ವಭೇದ

ಧವಾಗುವುದು. ಆದ್ದರಿಂದ ಬ್ರಹ್ಮವು ವಿವರ್ತಿಸುತ್ತದೆ. ಅವಿದ್ಯೆಯು ಪರಿಣಮಿಸುತ್ತದೆ ಎಂದು ಹೇಳುವದೇ ಹಿತವು.

ಸಮಾಧಾನ:—ಶಿವನು ನಿರವಯವನಾದರೂ ತನ್ನ ವಿಮರ್ಶ ಶಕ್ತಿಯಿಂದ ಪರಿಣಮಿಸಬಲ್ಲನು. ನಿರವಯವತ್ವದ ಉಪಮರ್ದನ ಮಾಡದೆ ಜಗತ್ಪರಿಣಾಮವು ಉಪಪನ್ನವಾಗುವದು. ಪೂರ್ವರೂಪವನ್ನು ಬಿಟ್ಟು ರೂಪಾಂತರವನ್ನು ಹೊಂದುವದೇ ಪರಿಣಾಮವೆಂದು ನಾವು ಹೇಳುವದಿಲ್ಲ. ಸ್ವರ್ಣಕುಂಡಲ ಸ್ಥಲದಲ್ಲಿ ಉಪಾದಾನ ಕಾರಣವಾದ ಸ್ವರ್ಣಕ್ಕೆ ನಾಶವಿಲ್ಲದೆ, ಅದಕ್ಕೆ (ಸ್ವರ್ಣಕ್ಕೆ) ಭಿನ್ನವಾಗಿ ಕುಂಡಲವೆಂದು ವ್ಯವಹರಿಸಲು ಯೋಗ್ಯವಾದ ಕುಂಡಲೋತ್ಪತ್ತಿಯು ಕಂಡುಬರುತ್ತದೆ. ಅದರಂತೆ ಶಿವನಲ್ಲಿ ಶಿವಸ್ವರೂಪವು ನಾಶವಾಗದೆ ಜಗದುತ್ಪತ್ತಿಯಾಗುವುದು. ಉಪಾದಾನಕಾರಣದ ಸ್ವರೂಪ ಚ್ಯುತಿಯಿಲ್ಲದೆ ಅದರಿಂದ ವ್ಯವಹಾರ ಯೋಗ್ಯವಾದ ಕಾರ್ಯೋತ್ಪತ್ತಿಯೇ ಪರಿಣಾಮವು. ಈ ರೀತಿಯಾದ ಪರಿಣಾಮಲಕ್ಷಣದಿಂದ ಮೇಗಣ ಶಂಕೆಗೆ ಅವಕಾಶವಿಲ್ಲವು. ಜಗತ್ತು ಶಿವನ ಯತ್ಕಿಂಚಿದಂಶದ ಪರಿಣಾಮವೆಂದೂ ಹೇಳಬೇಕಾಗಿಲ್ಲವು. ಪೂರ್ವರೂಪಪರಿತ್ಯಾಗದಿಂದ ರೂಪಾಂತರಾಪತ್ತಿಯೇ ಪರಿಣಾಮವೆಂದು ಹೇಳುವ ಪಕ್ಷದಲ್ಲಿ—ಅವಿದ್ಯೆಯ ಪರಿಣಾಮವೇ ಜಗತ್ತೆಂದು ಹೇಳುವ ಅದ್ವೈತಿಗಳ ಅವಿದ್ಯೆಯಾದರೂ ಸಂಪೂರ್ಣವಾಗಿ ಪರಿಣಮಿಸುವದೋ? ಯತ್ಕಿಂಚಿದಂಶದಿಂದ ಪರಿಣಮಿಸುವದೊ? ಎಂಬ ಶಂಕೆಯುಂಟಾಗುವದು. ಅವಿದ್ಯೆಯಲ್ಲಿರುವ ವಿಚಿತ್ರ ಶಕ್ತಿಯಿಂದ ಜಗದ್ರೂಪಪರಿಣಾಮವಾಗುವದೆಂದು ಹೇಳಿದರೆ "ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನ ಬಲಕ್ರಿಯಾ ಚ" ಎಂಬ ಶೃತಿಯಿಂದ ಶಿವನಿಗೆ ವಿಚಿತ್ರ ಶಕ್ತಿಯಿರುವದಲ್ಲದೆ ಅವಿದ್ಯೆಗಿರುವುದೆಂಬುವಲ್ಲಿ ಪ್ರಮಾಣವಿಲ್ಲವು. ಶೃತಿಸೂತ್ರಗಳು ಜಗತ್ತು ಬ್ರಹ್ಮದ ಪರಿಣಾಮವೆಂದು ಹೇಳುತ್ತಿರಲು ಅವಿದ್ಯೆಯು ಪರಿಣಮಿಸುತ್ತದೆ, ಬ್ರಹ್ಮವು ವಿವರ್ತಿಸುತ್ತದೆ ಎಂಬುದನ್ನು ವೀರಶೈವವು ಒಪ್ಪುವದಿಲ್ಲ. ಶಾಂಕರಮತದ ವಿವರ್ತ ವಾದವು ವೀರಶೈವದ ಲಿಂಗಾಂಗ ಸಮರಸದಲ್ಲಿ ಸಂಗತವಾಗದು. "ಸ್ವೇಚ್ಛಯಾ ಸ್ವಚಿತ್ತೇ ವಿಶ್ವಮುನ್ಮೀಲಯತಿ" ಎಂಬ ಶಕ್ತಿಸೂತ್ರವೂ, "ಸ್ವಶಕ್ತಿ ಪ್ರಚಯೋಸ್ಯ ವಿಶ್ವಂ" ಎಂಬ ಶಿವಸೂತ್ರವೂ ಜಗತ್ತು ಶಿವನ ಪರಿಣಾಮವೆಂದೇ ಹೇಳುತ್ತವೆ. ಶಿವಾ

ನುಭವ ಸೂತ್ರಕಾರನಾದರೂ ಮುಂದೆ "ಶಕ್ತ್ಯಾ ಪ್ರಪಂಚ ಸೃಷ್ಟಿಃ ಸ್ಯಾತ್" ಎಂಬ ಸೂತ್ರದಿಂದ ಇದೇ ವಿಷಯವನ್ನು ದೃಢಪಡಿಸುವನು.

## ಲಿಂಗಾಂಗ ಸ್ಥಲಗಳು.

೧೦ನೆಯ ಸೂತ್ರದಿಂದ ೧೯ನೆಯ ಸೂತ್ರದವರೆಗೂ ಸ್ಥಲವು, ಲಿಂಗಸ್ಥಲ ಅಂಗಸ್ಥಲವೆಂದು ದ್ವಿವಿಧವಾದ ಬಗೆಯನ್ನು ವಿವರಿಸುವನು:—

ಸೂ. ೧. ಆ ಸ್ಥಲತತ್ವವು ತನ್ನ ವಿಮರ್ಶ ಶಕ್ತಿಯ ಕ್ಷೋಭೆಯಿಂದ (ಚಲನದಿಂದ) ಲಿಂಗಸ್ಥಲವೆಂದೂ, ಅಂಗಸ್ಥಲವೆಂದೂ ಎರಡು ವಿಧವಾಯಿತು.

ಸೂ. ೧೧. ೧೨. ಬಯಲು [ಆಕಾಶ]. ಅಖಂಡವಾಗಿದ್ದರೂ ಕೊಡದೆಡೆಯನ್ನು ಸೇರಿ ಕೊಡದ ಉಪಾಧಿಯಿಂದ ಕೊಡದ ಬಯಲೆಂತಲೂ, (ಘಟಾಕಾಶ) ಕೊಡವನ್ನು ಬಿಟ್ಟುಳಿದುದು ದೊಡ್ಡ ಬಯಲೆಂತಲೂ (ಮಹಾಕಾಶ) ಎರಡು ವಿಧವಾಗುವಂತೆ ಲಿಂಗಾಂಗಗಳ ಉಪಾಧಿಯಿಂದ ಸ್ಥಲವೇ ಎರಡು ತೆರನಾಯಿತು. ಆ ಸ್ಥಲವು ಶಿವ ರುದ್ರ ಮೊದಲಾದ ಸಂಜ್ಞೆಯುಳ್ಳದಾಗಿದೆ.

ಸೂ. ೧೩. ಸ್ಥಲವೇ ಉಪಾಸ್ಯವೂ, (ಪೂಜೆಗೊಳ್ಳುವದು) ಉಪಾಸಕವೂ (ಪೂಜೆಮಾಡುವದು) ಆಗಿರುವುದು. ಅಂದರೆ ಲಿಂಗಸ್ಥಲವೇ ಉಪಾಸ್ಯವು. ಅಂಗಸ್ಥಲವೇ ಉಪಾಸಕವು.

ಸೂ. ೧೪. ಉಪಾಸ್ಯತ್ವಕ್ಕೂ ಉಪಾಸಕತ್ವಕ್ಕೂ ಭೇದವಿಲ್ಲ. ಎರಡನ್ನೂ ಪರಶಿವನೆಂದೇ ತಿಳಿಯತಕ್ಕದ್ದು. ಎರಡರಲ್ಲಿಯೂ ಶಿವನು ತನ್ನ ಲೀಲೆಯಿಂದ ವಿಕಾರವಾಗದ ಚೇತನ ಸ್ವರೂಪದ ಭೇದದಿಂದಿರುವನು.

ಸೂ. ೧೫. ೧೬. ಶಿವನು ತನ್ನ ವಿಮರ್ಶ ಶಕ್ತಿಯಿಂದ ಏಕಕಾಲದಲ್ಲಿ ತಾನೇ ಉಪಾಸ್ಯನೂ ಉಪಾಸಕನೂ ಆದನು. ಏಕಂದರೆ— "ಶಿವೋ ಭೂತ್ವಾ ಶಿವಂ ಯಜೇತ್" ನಾ ರುದ್ರೋ ಕೀರ್ತಯೇದ್ರುದ್ರಂ ನಾರುದ್ರೋರುದ್ರಮರ್ಚಯೇತ್" ಇತ್ಯಾದಿ ವಾಕ್ಯಗಳಿಂದ ಶಿವನಾಗದವನಿಗೆ ಶಿವೋಪಾಸನೆಯು ಕೋಟಿ ಜನ್ಮಗಳನ್ನೆತ್ತಿದರೂ ಸಂಭವಿಸದಾಗಿ ಶಿವನೇ ಪೂಜ್ಯನೂ ಪೂಜಕನೂ ಆಗಿರುವನಲ್ಲದೆ ಅನ್ಯವಿಲ್ಲ.

ಸೂ. ೧೬-೧೭. ೧೮. ೧೯. ಚಿನ್ಮಾತ್ರವೂ ಸ್ಥಲವೂ ಆದ ಸತ್ಯಾದಿ ಲಕ್ಷಣದಿಂದ ಕೂಡಿದ ಸಾಕ್ಷಾತ್ಪರವಸ್ತುವೇ ಲಿಂಗಾಂಗತ್ವಭೇದ

ದಿಂದಲೂ ಶಿವಾತ್ಮತ್ವ ಭೇದದಿಂದಲೂ ತೋರುತ್ತಿರುವುದು. ಚಿನ್ಮಾತ್ರವೆ ಶಿವನೂ ಆತ್ಮನೂ ಎಂಬ ಭೇದವಾಗಿರುವುದೆಂದು ಹೇಳುವಂತೆ (ಉಪನಿಷದಾದಿಗಳಲ್ಲಿ) ಸ್ಥಲವೇ ಲಿಂಗವೂ ಅಂಗವೂ ಎಂದು ಎರಡು ತೆರನಾಗಿರುವುದೆಂದು ಹೇಳಲ್ಪಡುತ್ತದೆ. [ಶಿವಾಗಮಾದಿಗಳಲ್ಲಿ] ಅಂದರೆ ಸ್ಥಲವೇ ಚಿನ್ಮಾತ್ರವು, ಲಿಂಗವೇ ಶಿವನು, ಅಂಗವೇ ಆತ್ಮನು ಎಂಬುದೇ ಶಿವಸಿದ್ಧಾಂತವು.

## ವಿಚಾರ.

ಸ್ಥಲ ಶಬ್ದ ವಾಚ್ಯನಾದ ಪರಶಿವನಲ್ಲಿ ಸ್ವವಿಮರ್ಶ, ರೂಪವಾದ ಅಂದರೆ ತನ್ನ ಸ್ವರೂಪದ ಎಚ್ಚರವೆಂಬ ಶಕ್ತಿಯುಂಟು. ಆ ಶಕ್ತಿಯಿದ್ದುದರಿಂದಲೇ ಶಿವನು ಸ್ವತಃ ಸಿದ್ಧನೆನಿಸುವನು. ಜಗತ್ತಿನ ಪದಾರ್ಥಗಳಲ್ಲಿ ಸ್ವಾನುಭವ (ಸ್ವವಿಮರ್ಶ) ವೆಂಬುದಿಲ್ಲದಿದ್ದರೆ ಅವು ಜಡವೆನಿಸುತ್ತವೆ. ಮತ್ತು ಅವನ್ನು ತಿಳಿಯಲಿಕ್ಕೆ ಬೇರೆ ಪ್ರಮಾಣಗಳು ಬೇಕಾಗುತ್ತವೆ. ಆದುದರಿಂದ ಆ ಪದಾರ್ಥಗಳು ಪರತಃ ಸಿದ್ಧಗಳೆನಿಸುವವು. ಪರಶಿವನು ಸ್ವಾನುಭೂತಿಯಿಂದಲೇ ಸಿದ್ಧನಾಗಿರುವದರಿಂದ ಸ್ವತಃ ಸಿದ್ಧನಾಗಿರುವನು. ಆತನ ಅನುಭೂತಿಯು ಆತನಂತೆ ಸಚ್ಚಿದಾನಂದ ಮಯವಿಹುದು. ಅದೇ ಶಕ್ತಿಯು "ಅಸ್ತಿ ಕಶ್ಚಿತ್ ಸ್ವತಃ ಸಿದ್ಧಃ ಸಚ್ಚಿದಾನಂದಲಕ್ಷಣಃ" ಎಂಬ ಸೂಕ್ಷ್ಮಾಗಮವು ಈ ವಿಷಯದಲ್ಲಿ ಪ್ರಮಾಣವಾಗಿರುವದು. ಶಕ್ತಿವಿಶಿಷ್ಟನಾದ ಶಿವನಿಗೆ ಪೂಜ್ಯಪೂಜಕ ಭಾವ ಲೀಲೆಯುಂಟಾಗಲಾಗಿ ನಿಸ್ತರಂಗ ಸಮುದ್ರದಲ್ಲಿ ತರಂಗೋತ್ಪತ್ತಿಗೆ ಮೊದಲು ಪ್ರವಾಹವು ಉಂಟಾಗುವಂತೆ ಶಕ್ತನಾದ ಶಿವನಲ್ಲಿ ಕಿಂಚಿಚ್ಚಲನವು ಅಂದರೆ ಶಕ್ತಿಯು ಕ್ಷೋಭೆಯುಂಟಾಗುವದು. ಆಕ್ಷೋಭೆಯಿಂದ ಶಿವನು ಭಕ್ತೋದ್ಧಾರಕ್ಕಾಗಿ ಲಿಂಗಾಂಗ ಸ್ಥಲ ಭೇದವನ್ನು ಹೊಂದಿದನು. ಲಿಂಗತತ್ವವೆ ಉಪಾಸ್ಯವು ಅಂಗತತ್ವವೆ ಉಪಾಸಕವು. ಈ ಎರಡಕ್ಕೂ ಭೇದವಿಲ್ಲವು. ಎರಡರಲ್ಲಿಯೂ ಶಿವನು ತನ್ನ ಪರಮಾತ್ಮ ಭಾವಕ್ಕೆ ಚ್ಯುತಿಯಿಲ್ಲದಿರುವನು. ಅಂದರೆ ಉಪಾಸಕನೂ (ಅಂಗನು) ಶಿವಸ್ವರೂಪನಲ್ಲದೆ ಅನ್ಯನಲ್ಲ. ಶಿವನಲ್ಲದವನಿಗೆ ಶಿವೋಪಾಸನೆಯು ಘಟಿಸದು. ಇದರ ವಿಸ್ತೃತ ವಿಚಾರವು ಮುಂದೆ ಮಾಡಲ್ಪಡುತ್ತದೆ.

ಶಂಕೆ— ಪ್ರಪಂಚದ ಲಯಕ್ಕೆ ಅಧಿಷ್ಠಾನವಾದುದೇ ಸ್ಥಲವೆಂದು ಮೇಲೆ ಹೇಳಲ್ಪಟ್ಟಿದು. ಪ್ರಸಿದ್ಧವಾದ ಲಿಂಗತತ್ವಕ್ಕೆ ಸ್ಥಲವೆಂದು ಹೇಳ

ಬೇಕಲ್ಲವೆ ಅಂಗತತ್ವಕ್ಕೂ ಸ್ಥಲವೆಂದು ಹೇಳಕೂಡದು. ಏಕೆಂದರೆ ಅಂಗನೆಂದರೆ ಜೀವನು. ಅವನು ಪ್ರಪಂಚದ ಲಯಕ್ಕೆ ಅಧಿಷ್ಠಾನನಾಗಿಲ್ಲವು. ಶ್ರುತಿಸೂತ್ರಗಳು ಶಿವನಿಗೆ ಜಗದಧಿಷ್ಠಾನವನ್ನು ಹೇಳುವಂತೆ ಜೀವನಿಗೂ ಹೇಳುವುದಿಲ್ಲ.

ಸಮಾಧಾನಃ— ಲಿಂಗಾಂಗಗಳ ತತ್ವವನ್ನು ಸ್ವಲ್ಪ ವಿಚಾರಮಾಡಿದರೆ ಈ ಶಂಕೆಯುಂಟಾಗಲಾರದು. ಶಿವನಲ್ಲಿಯ ವಿಮರ್ಶಶಕ್ತಿಯು ನ್ಯೂನಾಧಿಕಭಾವವನ್ನು ಹೊಂದುವ ಸಾಮರ್ಥ್ಯವುಳ್ಳದಾಗಿದೆ. ಅಧಿಕಭಾವಾಪನ್ನವಾದ ಶಕ್ತಿಯೇ ಶಿವನನ್ನು ಲಿಂಗನನ್ನಾಗಿ ಮಾಡಿತು. ನ್ಯೂನವಾದ ಶಕ್ತಿಯೇ ಶಿವನನ್ನು ಅಂಗನನ್ನಾಗಿ ಮಾಡಿತು. ಬಂಗಾರದ ಘಟ್ಟಿಯಲ್ಲಿ ಒಂದು ವಿಭಾಗವಾದ ಕಡಗವು. ಕಡಗವೆಂಬ ವ್ಯವಹಾರದಿಂದ ಬಂಗಾರಕ್ಕೆ ಭಿನ್ನವಾಗಿ ತೋರಿದರೂ ಸ್ವರೂಪದಿಂದ ಬಂಗಾರಕ್ಕನ್ಯವಲ್ಲವು. ಇದರಂತೆಯೇ ಲಿಂಗಾಂಗಗಳ ವಿವರಣವಿರುವದು. ಬಂಗಾರದ ಜ್ಞಾನದಿಂದ ಕಟಕಾದಿಗಳನ್ನು ಅದರಿಂದನ್ಯವಲ್ಲದೆ ಸಾಕ್ಷಾತ್ತರಿವುದೇ ಲಿಂಗತತ್ವವು. ಕಟಕಾದಿಗಳನ್ನು ಕಂಡು ಅವುಗಳೆಲ್ಲಾ ಬಂಗಾರದ ವಿಭಾಗಗಳೇ ಎಂಬನುಭವವುಳ್ಳದೇ ಅಂಗತತ್ವವು. ಆದುದರಿಂದ ಎರಡಕ್ಕೂ ಭೇದವಿಲ್ಲ. ಮತ್ತು ಇಲ್ಲಿ ಅಂಗನೆಂದರೆ ಶುದ್ಧ ಜೀವನು. ಇವನ ಇಂದ್ರಿಯಾದಿ ಪದಾರ್ಥಗಳು ಶಿವನ ಚಿಚ್ಛಕ್ತಿಯಿಂದಲೇ ಉಂಟಾಗಿವೆ. ಮಾಯೆಯಿಂದುಂಟಾದುವಲ್ಲ. ಚಿಚ್ಛಕ್ತಿಯಿಂದುಂಟಾದುದೆಲ್ಲಾ ಊರ್ಧ್ವಸೃಷ್ಟಿ ಅಥವಾ ಶಿವಸೃಷ್ಟಿಯೆಂದು ಹೇಳಲ್ಪಡುವದು. ಮಾಯೆಯಿಂದುಂಟಾದುದೇ ಅಧಃಸೃಷ್ಟಿಯೆಂದೂ ಬ್ರಹ್ಮಸೃಷ್ಟಿಯೆಂದೂ ಹೇಳಲ್ಪಡುತ್ತದೆ. ಜೀವನು ಗುರುಲಬ್ಧವಾದ ದೀಕ್ಷಾತ್ರಯದಿಂದ ಮಲತ್ರಯರಹಿತನಾಗಿ ಶುದ್ಧ ಜೀವಿಯೆನಿಸುವನು. ಇವನಿಗೆಯೇ ಅಂಗನೆಂದು ಹೇಳಬೇಕಲ್ಲದೆ ಬದ್ಧಜೀವಿಗೆ ಹೇಳಕೂಡದು.

ಇಂತಹ ಶುದ್ಧಜೀವನಿಗೂ ಶಿವನಿಗೂ ಭೇದವಿಲ್ಲವು. ಶಿವನಲ್ಲದವನಿಗೆ ಶಿವೋಪಾಸನೆಯು ಘಟಿಸದೆಂಬ ಶ್ರುತಿಸೂತ್ರಪ್ರಮಾಣದಿಂದ ಶುದ್ಧಜೀವನಾದ ಅಂಗನು ಶಿವನೇ ಆಗಿರುವದರಿಂದ ಅಂಗತತ್ವಕ್ಕೆ ಸ್ಥಲವೆಂದು ಹೇಳಿದರೆ ಯಾವ ದೋಷವೂ ಇಲ್ಲವು.

## ಶಕ್ತಿ-ಭಕ್ತಿಗಳು.

೧೯ ನೆಯ ಸೂತ್ರದಿಂದ ೨೭ನೆಯ ಸೂತ್ರದವರೆಗೂ ಲಿಂಗಾಂಗ ಸ್ಥಲಗಳನ್ನಾಶ್ರಯಿಸಿದ ಶಕ್ತಿಭಕ್ತಿಗಳ ಸ್ವರೂಪವು ಪ್ರತಿಪಾದಿಸಲ್ಪಡುವದು.

ಸೂ. ೧೯. ೨೦. ಸ್ಥಲವು ಎರಡಾದಂತೆ ಸ್ಥಲಗತವಾದ ಶಕ್ತಿಯೂ ಎರಡು ತೆರನಾದುದು. ಆ ಶಕ್ತಿಯು ಅಘಟಿತಘಟನಾಸಾಮರ್ಥ್ಯವುಳ್ಳದರಿಂದ ಸಮಾನರಹಿತವೆಂದೂ, ಶಿವನೊಡನೆ ತಾದಾತ್ಮ್ಯ ಸಂಬಂಧದಿಂದಿರುವದರಿಂದ ಶಿವನ ಸಹಧರ್ಮಿಣಿಯೆಂದೂ ಹೇಳಲ್ಪಡುವದು. ಮತ್ತು ಆ ಶಕ್ತಿಯು ಸರ್ವಸಾಕ್ಷಿಣಿಯೂ, ಸತ್ಯಸಂಪೂರ್ಣೆಯೂ, ( ಮಾಯಾವಾದಿಗಳು ಹೇಳುವಂತೆ ಮಿಥ್ಯೆಯಲ್ಲ ) ವಿಕಲ್ಪ ರಹಿತೆಯೂ, ಮಹೇಶ್ವರಿಯೂ ಎಂಬ ಹೆಸರುಳ್ಳದಾಗಿರುವದು.,

ಸೂ. ೨೧. ೨೨. ೨೩. ಆ ಶಕ್ತಿಯು ತನ್ನ ಸ್ವಾತಂತ್ರ್ಯದ ಬಲದಿಂದ ಭಕ್ತಹಿತಾರ್ಥವಾಗಿ ಸಮಾನಧರ್ಮದಿಂದ ಎರಡು ತೆರನಾಗಿ, ಒಂದು ಲಿಂಗಸ್ಥಲವನ್ನೂ ಮತ್ತೊಂದು ಅಂಗಸ್ಥಲವನ್ನೂ ಆಶ್ರಯಿಸಿತು. ಲಿಂಗಗತಶಕ್ತಿಯು ಕಲೆಯೆಂತಲೂ ಅಂಗಗತಶಕ್ತಿಯು ಭವವನ್ನು ನೀಗುವ ಭಕ್ತಿಯೆಂತಲೂ ಹೇಳಲ್ಪಡುವುದು.

ಸೂ. ೨೩. ೨೪. ೨೫. ೨೬. ೨೭. ದೊಡ್ಡದಾದ ಅಗ್ನಿಯ ಜ್ವಾಲೆಯಲ್ಲಿ ದೀಪದ ಆಕೃತಿಯು ವಿಭಾಗಿಸಲ್ಪಡುವಂತೆ ಆ ಮಹೇಶ್ವರ ಶಕ್ತಿಯಲ್ಲಿ ಭಕ್ತಿರೂಪವು ವಿಭಾಗಿಸಲ್ಪಟ್ಟಿದೆ. ಮಹಾಜ್ವಾಲೆಯಲ್ಲಿ ಹೊಗೆಯ ಮಿಶ್ರಣದಿಂದ ಮಂಧಪ್ರಕಾಶವೂ, ಹೊಗೆಯ ಮಿಶ್ರಣವಿಲ್ಲದ ದೀಪದಲ್ಲಿ ಒಳ್ಳೆಯ ಪ್ರಕಾಶವೂ ಕಂಡು ಬರುವುದು. ಅಂತೆಯೇ ಮಹಾಜ್ವಾಲೆಯಂತಿರುವ ಲಿಂಗಗತಶಕ್ತಿಯಲ್ಲಿ ಹೊಗೆಗೆ ಸದೃಶವಾದ ವಾಸನ ಅಂದರೆ ಸೃಷ್ಟಿ ಸಾಮರ್ಥ್ಯವು ಇರುವದು. ದೀಪದಂತೆ ಸುಪ್ರಕಾಶಿತವಾದ ಭಕ್ತಿಯಲ್ಲಿ ವಾಸನವಿಲ್ಲವು. ವಾಸನರಹಿತವಾದ ಭಕ್ತಿಯು ಮಹತ್ತರವೂ, ಶುದ್ಧವೂ, ಸೂಕ್ಷ್ಮವೂ, ಶುಭವೂ, ಶ್ರೇಷ್ಠವೂ, ಸಚ್ಚಿದಾನಂದರೂಪವೂ ಎನಿಸಿಕೊಂಡು ಅಂಗನಿಗೆ ಭೋಗಮೋಕ್ಷಗಳನ್ನುಂಟುಮಾಡುವದು. ಆದರೆ ಯಥಾರ್ಥ ವಿಚಾರದಲ್ಲಿ ಶಕ್ತಿಭಕ್ತಿಗಳಿಗೆ ಭೇದವಿಲ್ಲವು. ಶಕ್ತಿಯೇ ಭಕ್ತಿಯು. ಭಕ್ತಿಯೇ ಶಕ್ತಿಯು.

ಅತ್ಯತಿಷ್ಠದ್ದ ಶಾಂಗುಲ ಮಧ್ಯ ಲಿಂಗವ। ನಿತ್ಯ ತಾ ಭಜಿಸಿದ ಹರನ ಜರಿದು ನಿನ್ನ ॥೨೯॥

ಕಂಗಳು ಮೂರುಳ್ಳ ಶಿವನಾದರೇನಿಷ್ಟಲಿಂಗ ಒಂದಿಲ್ಲದೆಂದಂಗವಿಸದೆ ನಿನ್ನ ॥೩೦॥

ಸಿಪಿವಿಷ್ಟಗಾಚಾರವನು ವಿಚಾರಿಸಿ ನೋಡ। ಲಪವಿತ್ರ ನಡತೆ ಎಂದರಿದು ಜರಿದು ನಿನ್ನ ॥೩೧॥

ಹರನಿಂದಲಧಿಕ ಸದ್ಗುರುವೆಂದು ಜಗದೊಳು। ಹರನ ಜರಿದು ನಿನ್ನ ಚರಣವೆ ಗತಿ ಎಂದು ॥೩೨॥

ವೀರಶೈವಾಚಾರ ಸಾರ ಸದ್ಗುರು ಚನ್ನ। ವೀರ ಮತ್ಕರದಿಷ್ಟಲಿಂಗ ಜಂಗಮವೆಂದು ॥೩೩॥

---

(೪೪) ನೋಡಿರಮ್ಮಾ ಮೈಲಾರಲಿಂಗನ ಜಾತ್ರೆಯಾಗುತ್ತಿದೆ। ನಾಡ ಜನರಿಗೆ ತಿಳಿಯದು ಇದರ ಗೋಪ್ಯವು ಬೇರಿದೆ ॥ಪ॥

ಧರೆಯಾಕಾಶಕೆ ಮಾರ ಸೊಂಕದ ಘನತೇರು ಕಾಣುತಿದೆ। ಪರಿಕಿಸಿ ನೋಡಲು ನವ ನೆಲೆಗಳ ಕೀಲೊಂದು ಕಾಣುತಿದೆ॥ ಹುರಿಗೂಡಿದ ಮಿಣಿ ಹತ್ತರಿಂದ ಬಿಗಿದೊಪ್ಪಿ ತೋರುತಿದೆ। ಗೊರವ ಮಂಡಲದತ್ತ ನೋಡಲುರಿ ಕಳಸವದೆಸೆಯುತಿದೆ ॥೧॥

ಮತ್ತೆ ದ್ವಿಶತ ಷೋಡಶ ಪಟದ ವಿಚಿತ್ರ ಕಾಣುತ್ತಿದೆ। ಸುತ್ತಿ ನೋಡಲೊಂಬತ್ತು ಬಾಗಿಲದ ಕತ್ತಲಿಳಿವುತಿದೆ॥ ಬತ್ತಿತೈಲಗಾಳಿಯಿಲ್ಲದೆ ಬೆಳಗುವ ಜ್ಯೋತಿ ಕಾಣುತಿದೆ॥ ಕರ್ತು ನೀಲ್ಗಿರಿಲಿಂಗ ಸಹಿತ ರಥ ತಾನೆ ಸಾಗುತ್ತಿದೆ ॥೨॥

ಮುಂದಣ ದಿಕ್ಕಲಿ ನಂದಿ ನಾಮದ ಬೆಟ್ಟ ಒಪ್ಪುತಿದೆ। ಚಂದ ಚಂದದಿ ಸಾಲುದೀವಿಗೆ ಮೇಲು ಕಾಣುತಿದೆ॥ ದುಂದುಭಿ ನಗಾರೆ ಕಾಳೆ ಗಂಟೆಯು ಬಹುನಾದ ಕಾಣುತಿದೆ। ಇಂದು ಮೈಲಾಸುರ ದೈತ್ಯನ ಕೊಂದಾನಂದ ತೋರುತಿದೆ ॥೩॥

ಅಷ್ಟವರಣದರುದುರಿಗೆ ಹಲ್ಲಣವೈದು ಕಾಣುತಿದೆ। ಕಷ್ಟಜೀವರು ನಡೆವ ಮಾರ್ಗವ ಬಿಟ್ಟು ಚರಿಸುತಿದೆ॥ ಮೆಟ್ಟಿ ಹಾರಲು ರಥ

ಸೋಪಾನವನಿಕ್ಕಿ ನಿಲ್ಲುತಿದೆ। ದಿಟ್ಟ ನೀಲ್ಗಿರಿ ರಾಹುತನಿಗೆ ವೈಗೊಟ್ಟು ಮೆರೆಯುತಿದೆ ॥೪॥

ಹಿರಿಯ ಗುಡ್ಡದೊಳೊಂದಾಶ್ಚರ್ಯ ಕಾಣುತಿದೆ। ಅತಿಶ ಮಹಿಮರಿಂಗಾರುವರ್ಣದ ವೃಕ್ಷ ತೋರುತಿದೆ॥ ಸ್ಪರ್ಶಿಸಿ ನೋಡಲು ಮೂರು ಬಣ್ಣದಧುಯ್ಯಾಲೆಯುಲೆಯುತಿದೆ। ಮರವೆಯ ಜನ್ಮಕಿಪ್ಪ ಕೇಳು ಕರಿಯಾಲವೆನಿಸುತಿದೆ ॥೫॥

ಗಂಧ ಪರಿಮಳದಂಗಡಿ ಸಾಲೊಂದು ಕಾಣುತಿದೆ। ಒಂದು ಕಡೆಯಲಿ ಅರವಟಿಗೆ ಅನ್ನಛತ್ರ ಒಪ್ಪುತಿದೆ॥ ಒಂದು ದಿಕ್ಕಿಲಿ ನವರತ್ನ ಮುತ್ತುಗಳಿಂದಲೆಸೆವುತಿದೆ। ಒಂದುದೆಸೆಯಲಿ ಸಂಗೀತ ವಾದ್ಯಗಳಿಂದ ಮೆರೆವುತಿದೆ ॥೬॥

ಭವಗರ್ಪುರದನುಕೂಲಕೆ ವಗ್ಗರನೇಕರಲ್ಲಿ ಹಾಕುತಿದೆ। ತನೆಯೋಳಿನ್ನೇಟಗೆ ವಿಗೆ ಮಂತ್ರವ ನೆನೆಗೊರವರೊಪ್ಪುತಿದೆ। ಶಿವಸಂದಕರಲ್ಲಿ ಕಡುಗಲಿ ವೀರರೆಸೆವುತಿದೆ। ಶಿವರೊಳಧಿಕ ಗುರು ಚನ್ನವೀರ ವೈಲಾರ ಲಿಂಗವಹರೇ ॥೭॥

---

(೪೯)ಭವಿಯ ಭಕ್ತರ ಭೇದ ವಿವಿಧ ವರ್ತನೆಯಿಂದ। ಭವಿ ಭವ ಜೀವಿ ಭಕ್ತ ನಿತ್ಯ ಮುಕ್ತ ॥ಪ॥

ಅಂಗವಿಷಯ ವ್ಯಸನಂಗಳಿಚ್ಛೆಯಪಾರ। ಹೆಂಗಳೆಯರ ಕಾವಿಸುವದೇ ಭವಿ॥ ಅಂಗತ್ರಯವ ಗುರುಲಿಂಗಜಂಗಮಕಿತ್ತು। ಲಿಂಗಸಂಯೋಗ ಕಾವಿಃ ಶ್ರದ್ಧಭಕ್ತ ॥೧॥

ಪರತತ್ವದಿರವನು ಕರತಳಕಿತ್ತ ಗುರು। ನರನೆಂದು ಕೋಪಿಸುವ ಪಾತಕಭವಿ॥ ದುರಿತಪಂಚಕ ನಿತ್ಯಗೆರಗುವ ಮನಸಾದಿ। ಕರಣಗಳಲ್ಲಿ ಕೋಪಿ ಸೈಷ್ಠ ಭಕ್ತ ॥೨॥

ಒಡಲಾಸೆಯಿಂದ ದ್ರವ್ಯಕೊಡನ ಗಳಿಸಿ ಧರ್ಮಕ್ಕೆ। ಕೊಡಸೊಂದ ಕಾಸನೆಂಬ ಲೋಭಿಯೇಭವಿ॥ ಒಡೆಯಜಂಗಮಲಿಂಗವಡಿ ಯಂಬ ಶಿವವ। ಬಿಡೆನೆಂಬ ಲೋಭಿ ಸಾವಧಾನಭಕ್ತ ॥೩॥

ಅತಿಮೂಢ ಪಿತಮಾತೆ ಮತಿಹೀನ ಸತಿ ಸುತರತಿ। ಹಿತರೆಂದು ಮೋಹಿಸುವವನೆ ಭವಿ॥ ಕ್ಷಿತಿಯೊಳು ಶರಣ ಸಂತತಿಯೆ ಬಂಧುಗಳೆಂದು ಅತಿ ಮೋಹವಿರಲನುಭಾವಿಭಕ್ತಾ ॥೪॥

ಸದಮಲಾತ್ಮಕರ ಕಂಡು ಇದಿರೆದ್ದು ಶರಣೆನ್ನ। ದಧಮ ಧರ್ಮದ ಸದನಮಾಂಭವಿ॥ ವಿದಿತ ಶೈವರಲಿ ಮಾಹೇಶ್ವವೀರಶೈವ। ಕಧಿಕವಿಲ್ಲೆಂ ಬುವಾನಂದಭಕ್ತಾ ॥೫॥

ಸಚ್ಚಿದಾನಂದ ಬ್ರಹ್ಮದೆಚ್ಚರಿಗಳ ಕೂಡೆ। ಮುಚ್ಚರಿಸುವನವ ಹುಚ್ಚ ಭವಿ॥ ಇಚ್ಛೆಯೊಳಿರದನ್ಯ ತುಚ್ಛ ಸಂಸಾರದಿ ಮುಚ್ಚರಿಸುವ ಸಮರಸ ಭಕ್ತಾ ॥೬॥

ಆರುಭಕ್ತಿಗಳಿಂದಾರು ವೈರಿ ವರ್ಗವ ಗೆಲ್ವ। ಶೂರನಲ್ಲದ ನರ ಕ್ರೂರಭವಿ॥ ವೀರ ಮಾಹೇಶ ಚನ್ನವೀರ ಮದ್ಗುರುವಿನ। ಕಾರುಣ್ಯದಿಂದ ಗೆಲ್ವ ಧೀರಭಕ್ತಾ ॥೭॥

---

(೫೦)ಸೃಷ್ಟಿಯೊಳಗುದಿಸಿದಶರಣರಿ। ಗಿಷ್ಟಸಿದ್ಧಿಯನಿತ್ತು ಪಾಲಿಸು। ಅಷ್ಟ ವರಣಸ್ವರೂಪ ಮದ್ಗುರುಚನ್ನವೀರ ನಮೋ ॥ಪಲ್ಲ॥

ಗುರುವೆ ಪರಶಿವಶರಣರನುಭವದಿರವೆ ದಯದಾ। ಗರವೆ ಸುಖ ಸಾಗರವೆ ವರಸತ್ಕ್ರಿಯ ಸಮ್ಯಜ್ಞಾನ ಮಂದಿರವೆ॥ ಗುರುದೀಕ್ಷಾಗುರುವೆ ಶೀಕ್ಷಾಗುರುವೆ ಮೋಕ್ಷಾಗುರುವೆ ಸಾಕ್ಷಾತ್। ಗುರುಪರಾತ್ಪರಬೊಮ್ಮ ಸದ್ಗುರುಚನ್ನವೀರನಮೋ ॥೧॥

ಲಿಂಗವಾಚಾರಲಿಂಗ ಗೌರವಲಿಂಗ ಪರಶಿವ। ಲಿಂಗ ಜಂಗಮಲಿಂಗ ಶೀವಸುಲಿಂಗ ಮಹಘನಲಿಂಗ ಕರದಿಷ್ಟ॥ ಲಿಂಗ ಪ್ರಾಣವು ಲಿಂಗಭಾವವು ಲಿಂಗನಿಷ್ಕಳಲಿಂಗ ಶೂನ್ಯಕ। ಲಿಂಗಪರಮ ನಿರಂಜನ ಪ್ರಭುಚನ್ನವೀರ ನಮೋ ॥೨॥

ಜಂಗಮವೆ ನಿರುಪಮ ನಿರವಯ ಜಂಗಮವೆ ನಿಜಪರಶಿವಸ್ವರೂ। ಜಂಗಮವೆ ಲಿಂಗಾಂಗವೆರಡರ ಸಂಗ ಸಹಾಶ್ಚರ್ಯ॥ ಜಂಗಮವೆ ತ್ರೈಲೋಕಪಾವನ ಜಂಗಮ ಸದ್ಭಕ್ತಿವಾಹನ। ಜಂಗಮವೆ ಪ್ರಭುವರ ನಿರಂಜನ ಚನ್ನವೀರ ನಮೋ ॥೩॥

ಗುರು ಪಾದೋದಕ ಲಿಂಗದಡಿ ಜಲ ಪರಮ ಜಂಗಮದಂಘ್ರಿ ತೀರ್ಥ। ಸ್ಪರಿಶನಾಂಬುವ ಧಾರಜಲವಾಪಾಯನೋದಕವು ॥ ಕರ ಸಲಿಲ ಪರಿಣಾ ಮವಾರಿಯು ನಿರುತ ನಿರ್ನಾವಮಾಂಬುಸತ್ಯಾ। ಚರಣ ಜಲವೆರಡೈದು ಹರಣ ಚನ್ನವೀರನಮೋ ॥೪॥

ಗುರುಲಿಂಗದ ಶುದ್ಧ ಸಿದ್ಧವ್ರ ವರಸು ಜಂಗಮದ ಪ್ರಸಿದ್ಧವು। ಸ್ಪರಿ ಶವಾಪ್ಯಾಯನ ಸಮಯ ಪಂಚೇಂದ್ರಿಯ ರಹಿತ ॥ ಕರಣ ಚೌಚಹಿತ ಪ್ರಸಾದಿಯು ನಿರುತ ಸದ್ಭಾವವು ಸಮತಮಃ। ಪರಮವರ ದಶಶೇಷ ಕಾಯನೆ ಚನ್ನವೀರನಮೋ ॥೫॥

ಶಿರವೇ ಭಕ್ತಾ ಭುಜದ್ವಯಂಗಳು ವರ ಮಹೇಶ ಪ್ರಸಾದಿ ಶರೀರ। ಹರಣ ಲಿಂಗಿಯು ಚರಣಯುಗ ಶರಣೈಕ್ಯರುಗಳಷ್ಟ॥ ವರಣ ತನುವೆಂಟು ತೆರೆನೆಂದರಿದು ನಾಲ್ವತ್ತೆಂಟುಸ್ಥಾನದಿ। ಪರಮಚಿಧ್ಭಸಿತವನು ಧರಿಸುವ ಚನ್ನವೀರ ನಮೋ ॥೬॥

ಹರನರುದ್ರಾಕ್ಷಿಯನು ಫಣಿಯೊಳು ಧರಿಸಲೊಂದದರಿಂದ। ಹರಿಯಜ ಸುರಪಮನು ಮುನಿ ದಿವಿಜತತಿಗಳೆ॥ ಶರಣುಹೋಗುತಿಹರು ಹರಗಧಿಕ ಶಿವಶರಣರಹುದೆಂದರಿದು। ಕರಶಿರ ಕರ್ಣ ಕಂಠಾಭರಣ ರುದ್ರಾಕ್ಷಿಯನು ಧರಿಸುವ ಚನ್ನವೀರ ನಮೋ ॥ ೭ ॥

ಆರುಲಿಂಗಗಳಾರು ಲಿಂಗಗಳಾರು ಶಕ್ತಿಗಳಾರು ಭಕ್ತಿಗ। ಳಾರು ಹಸ್ತಗಳಾರು ವಕ್ತ್ರ ಪದಾರ್ಥ ಷಡ್ವಿಧವು ॥ ಆರುಶೇಷಗಳಷ್ಟ ವಿಧದಿಂ ತೋರುತಿರ್ಪ ಸಕೀಲ ವರ್ವಗ। ಳಾರುವಿಧ ಷಣ್ಮಂತ್ರಮೂರ್ತಿಯೆ ಚನ್ನ ವೀರ ನಮೋ ॥ ೮ ॥

ಪರಮ ಶ್ರೀಗುರುಲಿಂಗಜಂಗಮ ಚರಣಜಲವು। ವರ ಶೇಷಭಸಿತವು ಚಿರದ ರುದ್ರಾಕ್ಷಿಯು ಷಡಕ್ಷರ ಮಂತ್ರವೆನಿಪಷ್ಟ ॥ ವರಣವಂಗಾಚಾರ ಪಂಚಕ ಹರಣ ನಡೆ ನುಡಿ ಚನ್ನ। ವೀರ ಚರಣಮತ್ಕರ ಮನ ಸುಭಾವ ದೊಳಿರಲಿ ಸಂತಸದೊಳು ॥ ೯ ॥



(೫೧) ಶ್ರೀ ಗುರುವೆ ಎನ್ನ ಮುನ್ನಾಳ್ಗೊಂಡ ಕತದಿಂದ। ಲೀಗಾ
ನೀನೇಬನ್ನಿ ಕಾಯಿ। ಆಗಮಾಂಮ್ನಾಯುಸೇವಕ ಹೃದಯನಿಳಯನೆನ
ಲಾಗಿ। ಎನ್ನೊಳಗಿಪ್ಪೆ ಕಾಯಿ ॥ ಪಲ್ಲ ॥ ಸ್ಮರನಸುಟ್ಟುರುಹಿ। ಕಾಲನ ಶಿರವ
ನಿಳುಹಿದತ್ತುರುಪುಣ್ಯಮುತಪಶಿಕಾಯಿ। ಶರಣಘ ಕುಲತಿಮಿರ ಮಾರ್ತಾಂ
ಡನೆನಿಸುತಿಹ ಸುರವಿನುತ ಭವ ಕಾರಿ ಕಾಯಿ। ಗುರುವೆನೀವೆ। ನ್ನೊಳವಗುಣ
ಗಣವ ನೋಡಡೆನ್ನರಸೆ ಕರುಣದ ಕಡಲೆಕಾಯಿ। ತರುಳ ನಾನೆನ್ನ ನೀನಿಂತು
ಕಾಡಿದಡೊಲ್ದು ಪೊರೆವರಿ। ನ್ನಾವವರೆಕಾಯಿ ॥ ೧ ॥

ಸದಯಾಂತರಂಗ ನೀನೆ ಮುನಿಯುಲಾಗಿ ನಾಂ ಪದುಕದಿಂದಿ
ಹುದೆಂ ನೆಲ್ಲಿಕಾಯಿ। ಮಡಡ ಬುದ್ಧಿಯು ಬಿಡಿಸಿ ವೃತ್ತ್ಯ ಸಂಹರ ಶುಭ
ಪ್ರದ ನಿತ್ಯನೆನಿಶೆಂಬಿಕಾಯಿ ॥ ಬುಧ ವನ ವಸಂತ ನಿನ್ನಡಿವಿಡಿದು ಪೊಡವಿ
ಯೊಳು ಬದುಕುತಿರ್ಪ ಕಾಕಿಕಾಯಿ। ಕದುಬಿಕೋಟಲೆಗೊಂಡು ಜನನ
ಮರಣದಬಾಧೆಗೊದಗುವವಿದೇಂ ಬಾಳೆಕಾಯಿ ॥ ೨ ॥

ನೀನೆ ಕೃಪೆಯಾಗೆ ಭವಮಾರ್ಗಕ್ಕೆ ಬುತ್ತಿಯುನು ನಾನು ಬೇಸತ್ತಡಕೆ
ಕಾಯಿ॥ ಹೀನವೆನಿಸುವ ದುಷ್ಟಮತದಿ ಬಳಲುವ ದುಃಖ। ಏನು ಎನಗಿಚ್ಚಿಲ್ಲ
ಕಾಯಿ ॥ ಆನತ ಸುರಕ್ಷಶರಣಾಳಿ ಶಂಕರನೆಂಬನೂನ ತರವಹ ಕೌಳಿ
ಕಾಯಿ। ಏನನರಿಯದ ಮದಾಂಧಕನ ಕೈವಿಡಿದು ನೀನೊಯ್ದು ಬೆಂಬತ್ತಿ
ಕಾಯಿ ॥೩॥

ಭವಮಾರ್ಗದೊಳು ಬಂದು ಭವಿಯಾಗಿ ಯಮಪುರಕ್ಕಪತರಿಸುವ
ದಕ್ಶಾರಿಕಾಯಿ ॥ ಭವನಂಘ್ರಿಸ್ಮರಣೆಯಲ್ಲದೆ ಮನದೊಳಿನ್ನೊಂದು ಶಿವ
ಶಿವಾ ಎಂಬಿಕ್ಕೆಕಾಯಿ ॥ ಭವವೃಷ ಮಹೇಶನೆಂದೆನುತ ನೆನೆವವರ ನಿಜ
ಭವನಕೈದಿಪ ಸೋಮೆಕಾಯಿ। ಭವ ಭವ ಭವೌಘ ನಿಮ್ಮಡಿವಿಡಿದು
ಮತ್ತಡಸೆ ದಿವಿಜ ದನುಜರು ನಗರೆಕಾಯಿ ॥೪॥

ಹರ ಭಿಕ್ಷ ಭೀಮವಿಷಕಂಠೋಗ್ರನೆಂದು ನಾಂ ಪರಿಭವಿತಕ್ಕಲಸಂ
ದಿಕಾಯಿ। ಶರಣ ಸತಿಯುರಸ ನೀನೆನಿಸಿದುರ್ಮ ಮತ್ತೆನ್ನೊಳ್ ವಿರಸ
ಗೊಂಡಿಹದೇ ಕವಡೆ ಕಾಯಿ ॥ ಗುರು ಚನ್ನವೀರ ನೀನೆ ಭಕ್ತಿ ಇಷ್ಟಾ
ರ್ಥಕರನೆನಿಸುತಿಹ ಹೆಸರಕಾಯಿ। ಪರಮ ಗುರುವೆ ನಿಮ್ಮ ಪಾದ ಪದ್ಮವ
ಹೊಂದಿ ಪರಮನೆಂದೆಂಬ ಸಿರಿಕಾಯಿ ॥೫॥

(೫೨) ನೋಡು ನಡೆ ಶ್ರೀಚನ್ನವೀರನ ಬೇಕಾದವರವ ಬೇಗ ಕೊಡುವ ಸುಗುಣರನ್ನನ ॥ಪ॥

ಜೋಡುದೃಷ್ಟಿ ಎರಕವಾಗಿ ನೋಡು ಶಿವನ ಮೂರ್ತಿಯೊಡನೆ ಕೂಡಿ ಲೋಕದೊಡನೆ ರಹಿತನ। ನಿರತ್ತುಚರಣವ ॥ಅ ಪ॥

ಕಾಮ ಕ್ರೋಧ ಲೋಭ ಮೋಹವು ಮದ ಮತ್ಸರವೆಂಬ। ಸೀಮೆ ಮುಟ್ಟಿ ಸ್ವಪ್ನಾವಸ್ಥೆಯಲಿ॥ ಭೀಮರೂಪು ನೋಡು ಭವಕೆ ಪ್ರೇಮ ಭಕ್ತ ಜನರುಗಳಿಗೆ। ರಮಣ ಏಕವಾದ ಜಂಗಮ। ಕೈಲಾಸಧಾಮ ॥೧॥

ಅಷ್ಟಾವರಣವಂಗವಾಗಿಹ। ಪಿಡಿದಿರುವ ನೇಮ ಶ್ರೇಷ್ಠವಾಗಿ ನಡೆಸುತಿಹರು। ಕಟ್ಟವೆಂಟು ಮದವನೆಲ್ಲ ಹುಟ್ಟಗುಟ್ಟ ಪಾದದಲ್ಲಿ ಮೆಟ್ಟಿ ಚರಿಸುತಿಹಂರಾವಿಗೆ। ಕೇಳಾತ ಯೋಗಿ ॥೨॥

ಹಸ್ತದಲ್ಲಿ ರುದ್ರನಕ್ಷಿಯ। ಮಾಲೆಯನು ಪಿಡಿದು। ಸ್ತೋತ್ರದಿಂದ ತತ್ವಶಾಸ್ತ್ರವ। ವಿಸ್ತರವಾಗಿ ಪೇಳಿ ನಲಿದು। ಮಸ್ತಕವನ್ನು ತೂಗಿ ಪೂಗಿ ಸ್ಪಷ್ಟದಿಂದ ಹಸನಗೈಯುತ। ಪ್ರಭುಕೇಳಾತ ॥೩॥

ಧೂಳಪಾದೋದಕವಲ್ಲದೆ ಉಳಿದಾದ ಜಲವು ಸ್ಥೂಲವೆಂದು ತಿಳಿದ ದೇವನು। ಶೀಲಸೋಮಾರಾಧ್ಯರಂತೆ ಬಸವಲಿಂಗನೆಂಬ ಚಿಂತೆ ವೇಳೆ ವೇಳೆಕೆ ಉಳಿಯುತಿಹರ। ಕೇಳವರ ಸಾರು ॥೪॥

ಧರೆಗೆ ದಕ್ಷಿಣಕಾಶಿ ಎನಿಸುವ ಕುರುಕ್ಷೇತ್ರದಲ್ಲಿ ಮೆರೆವ ಗುರುನಂದೀಶನಾತ್ಮಜ। ಹರನರೂಪು ಚನ್ನವೀರನ। ಸ್ಮರಣೆಮಾಡಿ ಭವಗಳಲಿ ಉರುಹಿ ಪರಮ ಪದವ ಪಡೆದನ ಪೇಳಲಿನ್ನೇನು ॥೫॥



[೫೩] ಜಯದೇವ ಜಯದೇವ ಜಯಜಂಗಮಲಿಂಗ। ಶುಭ ಗೌರವಲಿಂಗ। ಜಯಮಾ, ಚರ ಗುರು ಶಿವ ಚರ ಶೇಷ ಮಹಲಿಂಗ ॥ಪಲ್ಲ॥

ಗುರು ಕರ ದೀಕ್ಷಿತನಾಗಿ ಗುರುಸೇವೆಯಮಾಡಿ। ಚರಲಿಂಗವೆಂದೆಂಬ ನಿರವಂಚನೆಯರಿದು। ವಂಚನೆಯನು ಮರೆದು ಗುರುಲಿಂಗಜಂಗಮದಾಸೋಹಿ ಎನಿಸಿರುವಾ। ಸ್ಥಿರ ಭಕ್ತಂಗೊಲಿದಿಹ ಪರಮ ಚರಲಿಂಗ ॥೧॥

ಪರದೈವ ಪರಧನ ಪರ ಸತಿಯ ಕಾಂಕ್ಷೆಯನು।ಪರಜೀವರ ಹಿಂಸೆಯನು ಪರನಿಂದೆಯನೈದು ಪಾತಕವ ಪರಿಹರಿಸಿ ಸೂತಕವ ಪರಿಹರಿಸಿ। ಗುರು ಕೊಟ್ಟ ಲಿಂಗದಿ। ಬಹುಸಿಷ್ಯಾಪರನಾದ। ನಿಜ ಶಿಷ್ಯಕರನಾದ। ಚರ ಮಹೇಶಂಗೊಲಿದಿಹ ಪರಮಗುರುಲಿಂಗ ॥೨॥

ಗುರುಲಿಂಗಕೆ ತನುಗೊಡೆ ತನು ರೂಪೆಲ್ಲ ಶುದ್ಧ। ಘನ ರೂಪೆಲ್ಲ ಶುದ್ಧ। ಚರಲಿಂಗದಿ ಮನವಿಡೆ ಮನ ರುಚಿಯೆ ತಾ ಸಿದ್ಧಾ। ಘನ ರುಚಿಯೆ ತಾ ಸಿದ್ಧಾ। ಚರಕೆ ಧನ ಗೊಡಲು ಧನ ತೃಪ್ತಿ ಪ್ರಸಿದ್ಧ। ಘನ ತೃಪ್ತಿ ಪ್ರಸಿದ್ಧ ಪರತರ ಶೇಷಂ ಗೊಲಿದಿಹ ನಿರುಪಮ ಶಿವಲಿಂಗಾ ॥೩॥

ಪ್ರಾಣಾದಿ ದಶವಿಧ ವಾಯುಗಳ ಪರಿಹರಿಸಿ। ಜೀವಗಳ ಪರಿಹರಿಸಿ। ಪ್ರಾಣಸ್ಥಾನದೊಳಿಷ್ಟಲಿಂಗವೆಂದರಿದು। ರೇಣು ಮಹ ಸುಖ ದುಃಖ ಸ್ತುತಿ ನಿಂದ್ಯಪರವಾ। ಸಮಗಂಡಿರುವ। ಪ್ರಾಣಲಿಂಗಿಗೆ ಒಲಿದಿಹ ಪ್ರಾಣ ಚರಲಿಂಗಾ ॥೪॥

ಪಂಚೇಂದ್ರಿಯಂಗಳ ಪ್ರಪಂಚವ ಮರೆದು। ವಂಚನೆಯನ ಕಳೆದು ಪಂಚೇಂದ್ರಿಯಗಳೆ ಪಂಚಲಿಂಗವೆಂದರಿದು। ಮಹಲಿಂಗವೆಂದರಿದು। ಪಂಚಮಹ ಲಿಂಗವೆ ನಿಜ ಪತಿ ಎಂದು ತಿಳಿದು। ತಾ ಸತಿ ಎಂದು ತಿಳಿದು ಪಂಚಮುಖ ಶರಣಂಗೊಲಿದಿಹ ಶೇಷ ಲಿಂಗಾ ॥೫॥

ಅರಿ ಷಡ್ವರ್ಗವನಳಿದು ಆರೂರ್ಮೆಯ ಗೆಲಿದು। ನಿಜಪರ್ಮವ ತಿಳಿದು। ನಿರುತಪ್ಪ ವಿಧಾರ್ಚನೆಯ ಪಲಬಗೆಯಲಿ ಮಾಡಿ। ಫಲ ಪದ ವಿಯ ಬೇಡ। ಉರಿ ಕರ್ಪೂರ ಯೋಗದಂತಿರುತಿಹ ಲಿಂಗಾಂಗ। ಯೋಗವ ನಿಜಸಂಗ। ಪರತತ್ವನಿಜೈಕ್ಯಂಗೊಲಿದಿರುತಿಹ ಮಹಲಿಂಗಾ ॥೬॥

ಶಿವಭಕ್ತ ವೀರ ಮಹೇಶ ಶೇಷ ಪ್ರಸಾದ। ತವೆ ಪ್ರಾಣಲಿಂಗಿ। ಶರಣೈಕ್ಯಸ್ಥಲವಾ। ಗುರುಚರಪರಮರು। ನವಸ್ಥಲದೊಳಗಿರುತಿಹ ನವ ಲಿಂಗವೆ ತಾನಾಗಿ। ನವಲಿಂಗವೆತಾನಾಗಿತವೆ ರಾಜಿಪಗುರು ಚನ್ನವೀರ ಮಹಯೋಗಿ ॥೭॥

# ಅಷ್ಟಾವರಣ ಷಟ್‌ಸ್ಥಳ-ಪಾರ್ಥಿಗಳ.

(೫೪) ಶ್ರೀ ಪರಮ ತರತತ್ವಮೂರ್ತಿಯಷ್ಟಾವರಣ। ರೂಪಕದೊಳವ ತರಿಸಿ ಸದ್ಭಕ್ತಮೊದಲಾದ। ವ್ಯಾಪಕ ಷಟ್‌ಸ್ಥಲ ಚಿದಂಗವಾಗಿರ್ಪ ಸತ್ಕ್ರ ಮವದೆಂತೆನೆ ಪೇಳುವೆ ॥ಪಲ್ಲ॥

ಮಂಗಳ ಸುದೀಕ್ಷ ಗುರು ಆಚಾರಲಿಂಗಸ್ವಯ:। ಜಂಗಮವು ಸ್ಪರಿಶ ನಾಂಬುವದು ಪಾದೋದಕವು । ಕಂಗೊಳಿಸುವಾಪ್ಯಾಯನ । ಪ್ರಸಾದಂ ಭೂತಿ ನಿಜವಿಭೂತಿಯು ಪರಶಿವಾ ॥ ಕಂಗಳಭಿಧಾನದೈವೊಗದ ಮಣಿ ಮಾಲೆಗಳ ಪಿಂಗದೆ ನಕಾರಾದಿ ಷಣ್ಮಾಲಮಂತ್ರವನು । ಅಂಗವಿಸಲದು ತಾನೆ ಶ್ರದ್ಧೆ ಸದ್ಭಕ್ತನ ಚಿದಂಗದಷ್ಟಾವರಣವು ॥೧॥

ಪರಮ ಪಾವನಶೀಕ್ಷ ದೇಶಿಕನು ಗುರುಲಿಂಗ। ಚರಜಂಗಮವದರ ಜಲ ವೆ ಪಾದೋದಕವು । ವರಸಮಯ ಸುಪ್ರಸಾದಂ ಭಸ್ಮವಿಭೂತಿ ನಾಲಸ್ಕರು ವದನವುಳ್ಳ ॥ ಪರಶಿವಾಕ್ಷಿಯು ಮಣಿಯೆ ಕರಗೊಳಿಸಿ ಧರಿಸುವದು । ನಿರು ತದಿ ಮಕಾರಾದಿ ಷಣ್ಮಾಲ ಮಂತ್ರವನು । ಸ್ಮರಿಸಲದು ವರ ನೈಷ್ಠೆ ಯುಳ್ಳ ಮಹೇಶನ ಚಿದಂಗದಷ್ಟಾವರಣವು. ॥೨॥

ಸತ್ಯಸದ್ಯೋನ್ಮೋಕ್ಷಪಾಚಾರಶಿವಲಿಂಗ । ಮತ್ತೆ ಜಂಗಮಸದಾ । ಪ್ಯಾಯನ ಪಾದೋದಕವು ಅತ್ಯಧಿಕ ಪಂಚೇಂದ್ರಿಯವಿರಹಿತ ಪ್ರಸಾದ ಚಿದ್ಭಸಿತ ನಿಜವಿಭೂತಿಯು ॥ ಪ್ರತ್ಯೇಕ ಮೂರೇಳು ಮುಖದ ಚಿದ್ರುದ್ರಾಕ್ಷಿ। ಚಿತ್ತದಿ ಶಿಕಾರಾದಿ ಷಣ್ಮಂತ್ರಗಳನ್ನು ನೆನೆಯುತ್ತಿರಲು । ವರ ಸಾವಧಾನಿ ಪ್ರಸಾದಿಯ ಚಿದಂಗದಷ್ಟಾವರಣವು ॥೩॥

ಪರಮ ಗುರುವಿನ ಗುರುವು ಬಳಿಕ ಜಂಗಮಲಿಂಗ। ನಿರುಪಾಧಿ ಜಂಗಮ ಉಕಾರ ಜಲಪಾದೋದಕವು। ನಿರುತದಂತಃಕರಣ ಚತುರಹಿತ ಪ್ರಸಾದ ಕರ್ಪೂರ ನಿಜವಿಭೂತಿಯು ॥ ಎರಡೆಂಟು ಮುಖದ ಚಿದ್ರುದ್ರಾಕ್ಷಿ ಮಣಿದೊಡವು ನಿರುತದಿ ವಕಾರಾದಿ ಷಣ್ಮಾಲ ಮಂತ್ರವನು । ಮರೆಯ ದೆಚ್ಚರವಿರಲು ಅನುಭಾವ ಸತ್ಪ್ರಾಣಲಿಂಗಿಯ ಚಿದಂಗದಷ್ಟಾವರಣವು ॥೪॥

ಮುಂತೆ ಶ್ರೀ ಪರಮಗುರುವರ ಶೇಷಲಿಂಗ ಸ್ವಾ । ತಂತ್ರಜಂಗಮವು ಪರಿಣಾಮಪಾದೋದಕ ಓ ರಂತೆ ನಿಜ ಸುಪ್ರಸಾದಿಯ ಸುಪ್ರಸಾದಸಂರಕ್ಷ ನಿಜವಿಭೂತಿಯು॥ ಇಂತೆಸೆವ ನವಮೋಕಮುಖದ ಘನರುದ್ರಾಕ್ಷಿ। ಸಂತತ

ಯಕಾರಾದಿ ಷಣ್ಮೂಲಮಂತ್ರವನು ಚಿಂತಿಸುತ್ತಿರಲದು ನಿಜಾನಂದ ಶರಣನ ಚಿದಂಗದಷ್ಟಾವರಣವು ॥೫॥

ಗುರುವೆ ಪರಮಾರಾಧ್ಯ ಮಹಲಿಂಗ ನಿಜಪರಾತ್ಪರವೆ ಜಂಗಮವು ನಿರ್ನಾಮ ಪಾದೋಕವು। ಪರಮ ಸದ್ಭಾವಪ್ರಸಾದಪ್ರಪಂಚದಹ ಪಂಚವಿಧ ವಿಭೂತಿಯು॥ ಚಿರಹತ್ತು ಮುಖದ ಪರಶಿವಾಕ್ಷಮಾಲೆಗಳ। ಧರಿಸಿ ಓಂಕಾರಾದಿ ಷಣ್ಮೂಲಮಂತ್ರವನು। ಸ್ಮರಿಸಲದು ತಾನೆ ವರ ಸಮರಸನಿಜೈಕ್ಯನ ಚಿದಂಗದಷ್ಟಾವರಣವು ॥೬॥

ಗುರುವಾರು ಲಿಂಗ ಷಡ್ವಿಧ ಜಂಗಮಗಳಾರು। ಚರಣ ಜಲವಾರು ಪ್ರಸಾದ ಷಡ್ವಿಧ ಭಸಿತ। ಪರಿಯಾರು ರುದ್ರಾಕ್ಷಿ ಮಣಿಮಾಲೆಯಾರು ಷಡ್ವಿಧ ಮೂಲಮಂತ್ರಂಗಳೂ॥ ವರಣ ಎಂಟಾರು ತೆರನಾಗಿ ಲಿಂಗಾಂಗದೊಳು। ಧರಿಸಿ ಶೋಭಿಸುವ ಷಟ್ಸ್ಥಲ ಬ್ರಹ್ಮ ಸದ್ಧರ್ಮದಿರವೆ ಮದುರುವೆ ಸುರತರುವೆ ನಡೆ ನುಡಿ ಚನ್ನವೀರ ಪಾಲಿಪುದೆಮ್ಮನು ॥೭॥

---

## ಷಟ್‌ಚಕ್ರ ಪರಾಗ-ಪರಿವರ್ಧಿನಿ.

(೫೫) ಸಾಲು ಚಕ್ರದಳಕುಳದ ಸುಹಂಸನ। ಕೀಲನರಿದು ಷಡ್ವಿಧಲಿಂಗಾಂಗದ ಮೂಲಷಡಕ್ಷರ ಮಂತ್ರವ ಮರೆಯದೆಜಪಿಸುವನೆ ಜ್ಞಾನಿ॥ಪಲ್ಲ॥

ಲೇಸೆನಿಸಾಧಾರದ ಚೌದಳದ ನಿವಾಸದೊಳಿರುತಿಹ ಕರಣ ಚತುಷ್ಟಯ। ವಾಸನೆಯನು ಪರಿಹರಿಸುವ ಚತುರ್ವಿಧ ಸಾರಾಯುವನರಿದೂ॥ ನಾಸಿಕ ಮುಖದಾಚಾರ ಸುಲಿಂಗದ ಶೇಷ। ಸುಗಂಧವನನುಭವಿಸುತ ಜಪ। ಸಾಸಿರದೇಳ್ನೂರಿಪ್ಪತ್ತೆಂಟನು ಜಪಿಸುವನೇ ಭಕ್ತನು ॥೧॥

ಸಿರಿಯುಪವ ಸ್ವಾಧಿಷ್ಠಾನದ ಷಡ್ದಳ। ದಿರವಿನೊಳಿರುತಿರ್ಪರಿ ಷಡ್ವರ್ಗದ। ಉರವಣೆಗೆಡಿಸುವ ಪರಮ ಷಟ್ಸ್ಥಲದನ್ವಯುವನೆ ತಿಳಿದೂ॥ ವರ ಜಿಹ್ವಾನನ ಮೂರುಲಿಂಗದ। ಸರಸಪ್ರಸಾದವ ಸವಿದು ಜಪವ ಸಾಸಿರವೆರಡ್ನೈಶತ ತೊಂಭತ್ತೆರಡನು ಜಪಿಸುವನೆ ಮಹೇಶ ॥೨॥

ವರ ಮಣಿಪೂರಕ ದಶದಳದೊಳು ಸಂಚರಿಸುವ ದಶವಿಧ ಮರುತ ಗುಣಂಗಳ। ತ್ವರಿತದಿ ಕೆಡಿಸುವ ದಶವಿಧ ಚರಣ ಜಲಾಚರಣೆಯು ತಿಳಿದು॥ ಚಿರನಯನಾಸ್ಯದ ನಯ ಶಿವಲಿಂಗದರೂ। ಖರಿದು ಪ್ರಸಾದವ ಸವಿದು ಚತುಸ್ಸಾಸಿರದ ತ್ರಿವಿಧ ಶತ ವಿಂಶ ಜಪವ ಜಪಿಸುವನೆ ಪ್ರಸಾದಿ ॥೩॥

ದ್ವಾದಶದಳದಿಂದೊಪ್ಪುವ ನಾಹತ। ಸ್ವಾಧಿಷ್ಠಾನದೊಳಿಹ। ದ್ವಾದಶೇಂದ್ರಿಯಂಗಳ। ಮೂದಲಿಸುವ ಘನದ್ವಾದಶ ಪ್ರಣಮಪ್ರಸಾದವ ನೆರೆ ತಿಳಿದು॥ ಸಾದೇಹವೆ ಮುಖವಹ ಚರಲಿಂಗಸ। ದೋದಿತ ಸ್ವರ್ಶನ ಶೇಷ ಸವಿದು ಜಪ। ವೈದು ಸಾಸಿರ ಶತವೆಂಬೈ ನಾಲ್ಕನು ಜಪಿಸುವನಸುಲಿಂಗಿ ॥೪॥

ಬೀರು ವಿಶುದ್ಧಿಯ ಷೋಡಶದಳದೊಳು ತೋರುವ ಷೋಡಶವಾದ ದತಮಂಥವ। ತೋರುವ ಷೋಡಶ ಚಿತ್ಕಳೆಗಳ ಸದ್ಗುರು ಮುಖ ದಿಂದರಿದು। ಚಾರು ಶ್ರೋತ್ರ ಮುಖದ ಪ್ರಸಾದಲಿಂ। ಗಾರೂಢತೆಯಿಂ ಶೇಷವ ಸವಿ। ದಾರು ಸಾಸಿರದ ನವಶತ ದ್ವಾದಶವನು ಜಪಿಸುವನೆ ಶರಣ ॥೫॥

ಸಿಟ್ಟಿಸಲಾಜ್ಞೆಯ ದ್ವಿದಳಬ್ಜದೊಳಿಹ। ಛಸ್ವದ್ವಿ ಮಮಕಾರ ಹಂಕಾರಗಳ। ಬಿಟ್ಟು ಲಿಂಗಾಂಗದ ನಡೆನುಡಿಗಳ ದೃಢವಿಡಿದಾಚರಿಸೆ॥ ದಿಟ್ಟ ಹೃದಯ ಮುಖವಹ ಮಹಲಿಂಗ ವಿಶಿಷ್ಟ ಸುತೃಪ್ತಿ ಪ್ರಸಾದದ ಭೋಗಿಸು। ತಷ್ಟಶತದ ಚೌಷಷ್ಟಿ ಜಪವನುರೆ ಜಪಿಸುವನೆ ಮಹದೈಕ್ಯ ॥೬॥

ಆರೈಯ್ಯಲ್ಕೊಂದೆ ಮೂರಾದುದು। ಆರಾದುದು ಮುವತ್ತಾರಾದುದು। ಬೀರುವ ಇನ್ನೂರು ಹದಿನಾರಾದುದು। ಶತದಳ ವರ್ತನೆಗೆ ॥ ತೋರುವ ಇಪ್ಪತ್ತೊಂದು ಸಾಸಿರದಾರು। ನೂರು ಜಪವ ತಾಂ ಷಟ್ಸ್ಥಲಬ್ರಹ್ಮದ। ಸಾರ ಸುಬೋಧೆಯ ಸದ್ಗುರು ಚನ್ನವೀರೇಶ್ವರ ಜಯ ಸತತಂ ॥೭॥

## (ವಿದ್ಯುನ್ಮಾಲಾವೃತ್ತ)

(೫೬) ಶ್ರೀ ವೀರಶೈವಾಚಾರಾಂಗಂ। ಭಾವದಿ ಶೈವ ಜ್ಯೋತಿರ್ಲಿಂಗಂ। ಶಿವ ಯುಗ್ಮಂ ಕೂಡಲಸಂಗಂ॥ ದೇವಂ ಚನ್ನಂ ವೀರೋತ್ತುಂಗಂ॥೧॥

ದಾನಂಧರ್ಮಂ ಕ್ರಿಯಾಚಾರಂ। ಮೌನಧ್ಯಾನಂ ಜ್ಞಾನೋದ್ಧಾರಂ॥ ನಾನಾ ದುರ್ವೈಕಾರಂ ದೂರಂ। ತಾನಾಚಾರಂ ಚನ್ನವೀರಂ॥೨॥

ಅಷ್ಟಾವರಣಾಂಗಂ ದೇಹಿ। ಇಷ್ಟ ಕ್ರಿಯಾ ಲಿಂಗಂ ಸ್ನೇಹಿ॥ ನಿಷ್ಠೆಯಿಂದಂ ಪೂಜಾ ಮೋಹೀ। ಶ್ರೇಷ್ಠಂ ಚನ್ನವೀರಂ ಪಾಹಿ॥೩॥

ಶಾಂತ್ಯಾರೂಢಂ ಪಾದಾ। ಕ್ರಾಂತಪಾಲಂನಿಶ್ಚಿಂತಂ। ನಿಭ್ರಾಂತಂ ನಿತ್ಯಾನಂದಂ ಮುಕ್ತಿ। ಶಾಂತಂ ಚನ್ನವೀರಂ ಪಾಹಿ॥೪॥

ಜ್ಞಾನೋತ್ಪತ್ಯಂ ಮಾಗಲ್ಸಘಂ। ತಾನೆ ಪಾದಾಕ್ರಾಂತಂ ಮಾಗಲ್॥ ನೀನೆ ನಿತ್ಯನಂಪಂಪೇಳ್ದಾ। ಸ್ವಾನುಭಾವಾಚಾರ್ಯಂ ಪಾಹಿ॥೫॥

ವೃತ್ತಂ ಮಧ್ಯಂ ನಾಲ್ವತ್ತೆಳ್ಗಾ। ವಕ್ತ್ರಂ ಪೀಠಂ ಷಣ್ಮಾತ್ರಂಗಳ್॥ ಗೋತ್ರಂಬೀರುತ್ತಿಪಂದ್ಯೈತಂ। ತತ್ವಾಚಾರಂ ಲಿಂಗಂ ಪಾಹಿ॥೬॥

ಭಕ್ತಿಜ್ಞಾನಂ ವೈರಾಗ್ಯಂ ಸಂಯುಕ್ತಂ। ತಾ ಷಣ್ಮಂತ್ರ ಧ್ಯಾನಾ॥ ಸಕ್ತಂ ಭಕ್ತಿಪ್ರಿಯಂ ಮದ್ವಿರಕ್ತಂ ನಿತ್ಯಮುಕ್ತಂ ಪಾಹಿ॥೭॥

ಶಿಷ್ಯಾಚಾರಂ ಅಂಘ್ರಿಯುಗ್ಮಂ। ಗುಪ್ತಸಂಜಾತಂ ಭೂಮಾತಂ॥ ಇಷ್ಟಲಿಂಗಸ್ನಾನಂಗೈವಂ ಶ್ರೇಷ್ಠ ಚನ್ನವೀರಂ ಪಾಹಿ॥೮॥

ಹೃದಾಚಾರ್ಯರಿಂದೋತ್ಪತಂ। ಶುದ್ಧವಿಷ್ಟಲಿಂಗಂ ಜಾತಂ॥ ಸಿದ್ಧಂ ಸದ್ವಿರಕ್ತಂ ನಪ್ರ। ಸಿದ್ಧಂ ಶೈವವಿಶೇಷಂ ಪಾಹಿ॥೯॥

ದಾವಾಲ್ಯಾಂಗಂ ಕ್ರಿಯಾಸಂಗಂ। ಅವಂ ಕಾಲಂ ಪೂಜಾಮೂಲಂ॥ ಭಾವಾದಾಂತೆ ಮುಕ್ತಿಕಾಂತೆ ಶ್ರೀಭೂತಿ ನೀ ಮನ್ನಾತೆ॥೧೦॥

ಕ್ಷುದ್ರೋಪದ್ರೋಪ್ರೇಕಂಗಳ್ನಷ್ಟದೃಶ್ಯಂಗಳ್ಮಡಲ್ಮಟ್ಟಂ। ರುದ್ರಾಕ್ಷಾಲಂಕಾರ ಚಿತ್ಸಾಮುದ್ರಂ ಚನ್ನವೀರಂ ಪಾಹೀ॥೧೧॥

ಪಾಪಂ ಪುಣ್ಯಾರಣ್ಯಂ ವಹ್ನಿ। ತಾಪತ್ರೈ ಕರ್ದಮಕಾದಿತ್ಯಂ॥ ಗೋಪ್ಯಂ ತರ್ಜೇಜ್ಯೋತಿತ್ರ್ಯಲಿಂಗಂ। ಶ್ರೀಪಂಚಾಕ್ಷರಮೂಲಂ ಮಂತ್ರಂ॥೧೨॥



(೫೭) ಕಣಿಯು ಕೇಳಿರಣ್ಣಗಳಿರಾ ಕಣಿಯ ಕೇಳಿರೋ। ಗುರುವಿನ
ಣುಗಧರಿಯೊಳಿರೆಯಬಂದ ಕಣಿಯ ಕೇಳಿರೋ ॥ಪ॥

ಧರಿಗೆ ಹಿರಿಯಭೂತನೊಬ್ಬ ಕಣಿಯ ಕೇಳಿರೋ। ಅವಗೆ ಎರಡು
ಕೋಡು ಮೂಡುತಾವೆ ಕಣಿಯ ಕೇಳಿರೋ॥ ನಿರುತ ಪರಮ ಶಿವನು
ಇವನು ಕಣಿಯ ಕೇಳಿರೋ॥ ಕೈಯ್ಯ ಸೆರೆಯ ಸಿಕ್ಕು ಹೋಗುತಾನೆ ಕಣಿ
ಯ ಕೇಳಿರೋ ॥೧॥

ಕಂಡ ಮಂಡಲೀಕನೊಬ್ಬ ಕಣಿಯ ಕೇಳಿರೋ। ಭೂಮಂಡಲವನು
ಕೆಡಿಸುತಾನೆ ಕಣಿಯ ಕೇಳಿರೊ। ಭಂಡ ಭಜನೆಗಳನು ಬಿಡಿಸಿ ಕಣಿಯ
ಕೇಳಿರೋ। ಜಗದ ಗಂಡನೆನಿಸಿಕೊಂಬುತಾನೆ ಕಣಿಯ ಕೇಳಿರೋ ॥೨॥

ಬಿಳಿಯ ತಲೆಯ ಹಿಡಿದುಕೊಂಡು ಕಣಿಯ ಕೇಳಿರೋ। ಜೀವ
ವಳಿದು ಜಗದಿ ಸುಳಿವನೊಬ್ಬ ಕಣಿಯ ಕೇಳಿರೋ। ಇಳೆಯೊಳವನ
ಹೊಲಬುದಪ್ಪಿ ಕಣಿಯ ಕೇಳಿರೋ। ಲೋಕವಳಿದು ಹೋಗುತ್ತಿದೆ ಮುಂದೆ
ಕಣಿಯ ಕೇಳಿರೋ ॥೩॥

ಮತ್ತೆ ಕಲಿಯ ಕಟ್ಟಳೆಯನು ಕಣಿಯ ಕೇಳಿರೋ। ಮೋಹಿ
ಸುತ್ತ ಅಣ್ಣತಂಗಿಕೂಡಿ ಕಣಿಯ ಕೇಳಿರೋ॥ ಹತ್ತು ಮಕ್ಕಳನ್ನು
ಪಡೆದು ಕಣಿಯ ಕೇಳಿರೋ। ಅವರು ಸತ್ಯವಂತರೆನಿಸುತಾರೆ ಕಣಿಯ
ಕೇಳಿರೋ ॥೪॥

ತಂದೆಮಕ್ಕಳಿಬ್ಬರಿಂದ ಕಣಿಯ ಕೇಳಿರೋ॥ ಹುಟ್ಟಿ ಬಂದ ತಾಯಿ
ಭೋಗಿಸುವರು ಕಣಿಯ ಕೇಳಿರೋ॥ ಕುಂದು ಕೊರತೆಗಳನು ನೀಗಿ
ಕಣಿಯ ಕೇಳಿರೊ। ಅವರು ಸಂದ ಶರಣರೆನಿಸುತಾರೆ ಕಣಿಯ ಕೇಳಿರೊ ॥೫॥

ಶ್ವೇತಭೂತಿಯಂಗ ಫಣಿಯ ಕಣಿಯಕೇಳಿರೋ। ತಾನು ಸೋತು
ಮನೆಯ ಮಾಡಿಕೊಂಡು ಕಣಿಯ ಕೇಳಿರೋ॥ ನೀತಿದಪ್ಪಿ ನಡೆವರನ್ನು
ಕಣಿಯ ಕೇಳಿರೋ। ಭವಘಾತಿನೊಳಗೆ ಕೆಡವುತಿಹರು ಕಣಿಯ ಕೇಳಿರೋ॥೬॥

ಅಣೆಯೊಳೊಗೆದು ಶರಣರಡಿಗೆ ಕಣಿಯ ಕೇಳಿರೋ। ಮಣಿದು
ಮಣಿಯ ಪೆಸರ ಪಡೆದಳಬಲೆ ಕಣಿಯ ಕೇಳಿರೋ॥ ಅಣಿಮಮಹಿಮಗರಿ
ಮೆಯಿಂದ ಕಣಿಯ ಕೇಳಿರೋ। ಜಗವ ತೃಣವ ಮಾಡಿ ದಹಿಸುತಾಳೆ
ಕಣಿಯ ಕೇಳಿರೋ ॥೭॥

ಆರುವರ್ಣ ಮುಳ್ಳ ಪಕ್ಷಿ ಕಣಿಯ ಕೇಳಿರೋ। ಮುಂದೆ ಹಾರುತೈತಿ ಗಗನದತ್ತ ಕಣಿಯ ಕೇಳಿರೋ॥ ಏರಿ ಶರಣ ಹೃದಯ ಗುಡ್ಡ ಕಣಿಯ ಕೇಳಿರೋ। ತಾನು ಸೇರಿ ಹಾರದಿನ್ನು ಮತ್ತೆ ಕಣಿಯ ಕೇಳಿರೋ ॥೮॥

ಸೃಷ್ಟಿಯೊಳಗೆ ಜನಿಸಿದವರು ಕಣಿಯ ಕೇಳಿರೋ। ಮುಂದೆ ಅಷ್ಟ ಇಷ್ಟ ಪಡೆಯಬಹುದು ಕಣಿಯ ಕೇಳಿರೋ॥ ಇಷ್ಟ ಸಿದ್ಧಿ ಇಲ್ಲದವಗೆ ಕಣಿಯ ಕೇಳಿರೋ। ಮುಂದೆ ಕಷ್ಟ ಕರ್ಮ ಭಯಗಳುಂಟು ಕಣಿಯ ಕೇಳಿರೋ ॥೯॥

ಎಮ್ಮ ಪುತ್ರಗಮನನೊಬ್ಬ ಕಣಿಯ ಕೇಳಿರೋ। ಅವಗೆ ಧರ್ಮ ಎಂಬ ನಾಮ ಉಂಟು ಕಣಿಯ ಕೇಳಿರೋ॥ ಕರ್ಮ ಜಗವ ಕೊಲ್ಲುತಾನೆ ಕಣಿಯ ಕೇಳಿರೋ। ಹೇಳಲಮ್ಮ ಅವನ ಬಾಧೆಗಳನು ಕಣಿಯ ಕೇಳಿರೋ ॥೧೦॥

ಪೂಷರಂತ ಪೆಸರಿನವನು ಕಣಿಯ ಕೇಳಿರೋ॥ ತಾನು ಮೋಸದಿಂದ ಮರೆಯ ಮಾಡಿ ಕಣಿಯ ಕೇಳಿರೋ॥ ಆಸೆ ಎಂಬ ಗುಟಕ ನಿಕ್ಕಿ ಕಣಿಯ ಕೇಳಿರೋ। ಒಳಿಯ ಬೀಸಿ ಜಗವ ಕೊಲ್ಲುತಾನೆ ಕಣಿಯ ಕೇಳಿರೋ ॥೧೧॥

ತಲೆಯು ಇಲ್ಲದಂಗನೆಯಳು ಕಣಿಯ ಕೇಳಿರೋ। ತಾನು ಹಲವು ಜಗವನಾಳುತಾಳೆ ಕಣಿಯ ಕೇಳಿರೋ॥ ಹುಲಿಯ ತಲೆಯ ಧರಿಸಿಕೊಂಡು ಕಣಿಯ ಕೇಳಿರೋ। ಜಗವ ಸುಲಭದಿಂದ ನುಂಗುತಾಳೆ ಕಣಿಯ ಕೇಳಿರೋ ॥೧೨॥

ಶತ್ರು ತನಗೆ ಮಾರ ಮಲೆತು ಕಣಿಯ ಕೇಳಿರೋ। ಚಿತ್ರ ಕಲ್ಲದುರ್ಗ ತಾನು ಕಣಿಯ ಕೇಳಿರೋ॥ ಮಿತ್ರರಾಜನು ತಾ ಬರಲು ಕಣಿಯ ಕೇಳಿರೋ। ನೋಟಮಾತ್ರದಲ್ಲಿ ಹೋಗುತದೆ ಕಣಿಯ ಕೇಳಿರೋ ॥೧೩॥

ಹುಟ್ಟ ಗುರುಡ ರಾಜನೊಬ್ಬ ಕಣಿಯ ಕೇಳಿರೋ। ಅವಗೆ ಪಟ್ಟಗಟ್ಟುತೈತಿ ಮುಂದೆ ಕಣಿಯ ಕೇಳಿರೋ॥ ಅಟ್ಟುಉಂಬ ಕಾಲದಲ್ಲಿ ಕಣಿಯ ಕೇಳಿರೋ। ಜಗವ ಬಿಟ್ಟು ಓಡಿಹೋಗುತೈತಿ ಕಣಿಯ ಕೇಳಿರೋ ॥೧೪॥

ಅಂತಃಪುರದ ಒಡೆಯನೊಬ್ಬ ಕಣಿಯ ಕೇಳಿರೋ। ತಾನು ಕುಂತಳಾಂಗನೆನಿಸುತಾನೆ ಕಣಿಯ ಕೇಳಿರೋ॥ ಕುಂತು ನಿಂತರವಗೆ ಮರಣ ಕಣಿಯ ಕೇಳಿರೋ। ಚರಿಸುತಿಂತು ಜಗವನಾಳುತಾನೆ ಕಣಿಯ ಕೇಳಿರೋ ॥೧೫॥

ಹತ್ತು ನಡೆವ ದಾರಿಯೊಳಗೆ ಕಣಿಯ ಕೇಳಿರೋ। ಒಂದು ಸತ್ತ ಹೆಣ ದಸು ಳ್ಳವು ಕಂಡು ಕಣಿಯ ಕೇಳಿರೋ ॥ ಮುತ್ತಿ ಅಳುವ ಬಳಗ ಬಹಳ ಕಣಿಯ ಕೇಳಿರೋ। ಅವರು ಸತ್ತ ಹೆಣವು ಬದುಕುತ್ತೈತಿ ಕಣಿಯ ಕೇಳಿರೋ ॥೧೬॥

ನವಖಂಡ ಪೃಥ್ವಿಯನ್ನು ಕಣಿಯ ಕೇಳಿರೋ। ಒಬ್ಬ ಯುವತಿ ಆಳುತಾಳೆ ಮುಂದೆ ಕಣಿಯ ಕೇಳಿರೋ॥ ಅವಳ ಕಾಲ ಮಹಿಮೆಯಿಂದ ಕಣಿ। ಪಾಪ ನಿವಹ ಹೆಚ್ಚುತ್ತೈತಿ ಮುಂದೆ ಕಣಿಯ ಕೇಳಿರೋ ॥೧೭॥

ಒಂಟಿ ಮುಖದ ದೇಹದವನು ಕಣಿಯ ಕೇಳಿರೋ। ಒಬ್ಬ ಎಂಟು ಜಗವ ಸೇರುತಾನೆ ಕಣಿಯ ಕೇಳಿರೋ॥ ಎಂಟು ಏಳು ದೇಶದಲ್ಲಿಯು ಕಣಿಯ ಕೇಳಿರೋ। ಬಹಳ ತುಂಟನೆನಿಸಿಕೊಂಬುತಾನೆ ಕಣಿಯ ಕೇಳಿರೋ ॥೧೮॥

ಕಾಳು ದೇಹ ಕೇಳದಂತ ಕಣಿಯ ಕೇಳಿರೋ। ಇವಳು ಬಾಳು ಗೆಟ್ಟು ಊರಸೂಳೆಯು ಕಣಿಯ ಕೇಳಿರೋ॥ ಏಳು ಮಲೆಯು ಹಾಲ ನೀಡಿ ಕಣಿಯ ಕೇಳಿರೋ। ಮುಂದೆ ಕೋಳುಕೊಂಬುತಾಳೆ ಜಗವ ಕಣಿಯ ಕೇಳಿರೋ। ॥೧೯॥

ಆರು ವೈರಿವರ್ಗದವರು ಕಣಿಯ ಕೇಳಿರೋ। ಮುಂದೆ ಸೂರೆಗೊಂಬುತಾರೆ ಜಗವ ಕಣಿಯ ಕೇಳಿರೋ॥ ಮೂರು ಲೋಕದೊಳಗೆ ನೋಡೆ ಕಣಿಯ ಕೇಳಿರೋ। ಅವರ ಸಾರಿ ಗೆಲುವರಾರು ಕಾಣೆ ಕಣಿಯ ಕೇಳಿರೋ ॥೨೦॥

ಅಂಜಿಗವನೆ ಗಂಡಗಿಂದ ಕಣಿಯ ಕೇಳಿರೋ। ತಾನು ಮುಂಚೆ ಹುಟ್ಟಿ ಮೂರು ಜಗವ ಕಣಿಯ ಕೇಳಿರೋ॥ ಪಂಚ ಲಿಖಿತ ವಿಧಿಗಳಿಂದ ಕಣಿಯ ಕೇಳಿರೋ। ಭವದ ಸಂಚಿನೊಳಗೆ ಕೆಡಹುತಿಹಳು ಕಣಿಯ ಕೇಳಿರೋ। ॥೨೧॥

ಧರಣಿಯಾಣ್ಮ ಹಿರಿಯನೊಬ್ಬ ಕಣಿಯ ಕೇಳಿರೋ। ತಾನು ಕರಣಮಥನ ಕರ್ಕಶದೊಳು ಕಣಿಯ ಕೇಳಿರೋ॥ ತರಣಿ ಶಶಿಗಳುಳ್ಳನಕ್ಕ ಕಣಿಯ ಕೇಳಿರೋ। ತನ್ನ ಸ್ಮರಣೆ ದಪ್ಪಿ ಹೋಗುತಾನೆ ಕಣಿಯ ಕೇಳಿರೋ ॥೨೨॥

ಮೂರು ಮುಖದ ನಾರಿ ತಾನು ಕಣಿಯ ಕೇಳಿರೋ। ಮುಂದೆ ಮೂರು ಜಗದ ಜೀವರುಗಳ ಕಣಿಯ ಕೇಳಿರೋ॥ ಘೋರತರ ವಿಕಾರ ರಸವ ಕಣಿಯ ಕೇಳಿರೋ। ತನ್ನ ಮೂರು ಮುಖದಿ ಹೀರುತಾಳೆ ಕಣಿಯ ಕೇಳಿರೋ ॥೨೩॥

ಮೃಗಧರಾರ್ಕರೀರ್ವರಿಂದ ಕಣಿಯ ಕೇಳಿರೋ। ಮೂರು ಜಗದ ಕೃತ್ಯ ನಡೆವುತ್ತೈತಿ ಕಣಿಯ ಕೇಳಿರೋ॥ ಹಗಲು ಇರುಳು ಎರಡರೊಳಗೆ ಕಣಿಯ ಕೇಳಿರೋ॥ ನಾಲ್ಕು ಯುಗವು ಸತ್ತು ಹುಟ್ಟುತ್ತೈತಿ ಕಣಿಯ ಕೇಳಿರೋ ॥೨೪॥

ತಥ್ಯಪಾರಮಾರ್ಥ ಮಿಥ್ಯ ಕಣಿಯ ಕೇಳಿರೋ। ಎಂದು ಮಿಥ್ಯ ಭೋಗ ತಥ್ಯವೆಂದು ಕಣಿಯ ಕೇಳಿರೋ॥ ತೊತ್ತು ಓಲಿ ಕಂಠಪಿಡಿದು ಕಣಿಯ ಕೇಳಿರೋ। ಈ ಪೃಥ್ವಿಯಲ್ಲಿ ಲಿಖಿಸುತಾಳೆ ಕಣಿಯ ಕೇಳಿರೊ॥೨೫॥

ಖಂಡಭಂಡ ಶಿಟ್ಟಿಕಾತಿ ಕಣಿಯ ಕೇಳಿರೋ। ಅವಳ ಗಂಡಗೆ ರಡು ನಯನವಿಲ್ಲ ಕಣಿಯ ಕೇಳಿರೋ॥ ಗಂಡಹೆಂಡರಿಬ್ಬರಿಂದ ಕಣಿಯ ಕೇಳಿರೋ॥ ಬ್ರಹ್ಮಾಂಡ ಸರಕು ಮಾರುತಾರೆ ಕಣಿಯ ಕೇಳಿರೋ ॥೨೬॥

ಕಾರಣಿಕ ಪುರುಷರೆಲ್ಲಕಣಿಯ ಕೇಳಿರೋ। ಸುವಿಚಾರಿಸಲ್ಕೆ ಮಧುರ ಬೆಲ್ಲ ಕಣಿಯ ಕೇಳಿರೋ॥ ಆರುಅರಿಯದಂತ ಸೊಲ್ಲ ಕಣಿಯ ಕೇಳಿರೋ। ಚನ್ನವೀರ ದೇಶಿಕೇಂದ್ರ ಬಲ್ಲ ಕಣಿಯ ಕೇಳಿರೋ ॥೨೭॥

---

(೫೮) ನಂಬುವದೆಮ್ಮ ಮೈಲಾರ ಲಿಂಗದ ಸೊಲ್ಲ ಕೇಳಿ ಕೇಳಿ। ಡಂಭಕ ಮಾತಲ್ಲ ಕಾರಣಿಕನೆ ಬಲ್ಲ ಕೇಳಿ ಕೇಳಿ ॥ಪ॥

ಪರತತ್ವದಿರವೆಮ್ಮ ಗೊರವನ ಶೌರ್ಯವ ಕೇಳಿ ಕೇಳಿ। ನೆರೆ ಮೂರು ಲೋಕವನಿರದೆತ್ತಿ ತೂಗುವ ಕೇಳಿ ಕೇಳಿ॥ ಹರಿಯಜ ರುದ್ರರಿಗಳಿಗಧಿಕಾರವ ಕೇಳಿ ಕೇಳಿ। ಮುರಿದೊತ್ತಿ ಹರನ ಕೈಸೆರೆ ತಂದು ತೋರುವ ಕೇಳಿ ಕೇಳಿ ॥೧॥

ಕರಿಯಾಲದೊಳಗೊಂದು ಮರುಜೀವಣಿಯು ಪುಟ್ಟಿ ಕೇಳಿ ಕೇಳಿ। ಕರದಲ್ಲಿ ಬರುತಿದೆ ಸುಪಥ ದಾರಿಯ ಮೆಟ್ಟಿ ಕೇಳಿ ಕೇಳಿ॥ ನೆರೆ ನಂಬಿದವಂಗೆ ಪರಪುರುಷವ ಕಟ್ಟಿ ಕೇಳಿ ಕೇಳಿ। ನಿರುಪಮಮೂರ್ತಿ ತಂದು ಗಮಿಸುವನೀ ಬಟ್ಟೆ ಕೇಳಿ ಕೇಳಿ ॥೨॥

ಮೂರುಲೋಕದೊಳೆಮ್ಮ ಹೆಗ್ಗಯ್ಯ ಮಂತ್ರಿಯು ಕೇಳಿ ಕೇಳಿ। ಸಾರಿದ್ದು ಇಲ್ಲದಂತೆ ಪರತಂತ್ರಿಯು ಕೇಳಿ ಕೇಳಿ॥ ಗಾರುಡ ಕುಟಿಲ ಕುಹಕದೊಳಭ್ಯಂತ್ರಿಯು ಕೇಳಿ ಕೇಳಿ। ಬೇರಿಟ್ಟು ಕಾಣದವಂಗೆ ಸ್ವತಂತ್ರಿಯು ಕೇಳಿ ಕೇಳಿ ॥೩॥

ಮರ್ತ್ಯಲೋಕವೆ ವಗ್ಗರಂಣತಂಗಿಯುಕೂಡಿ ಕೇಳಿ ಕೇಳಿ॥ ಸತ್ಯಪುತ್ರನ ಪಡೆದರ್ಥಿಯಿಂ ಮುಖನೋಡಿ ಕೇಳಿ ಕೇಳಿ॥ ಹಸ್ತಭಿಧಾನವನಿಟ್ಟು ಜೋಗುಳ ಪಾಡಿ ಕೇಳಿ ಕೇಳಿ। ಕರ್ತುವೆನೀಲ್ಗಿರಿ ಲಿಂಗವೆಂದೆತ್ತಿ ಮುದ್ದಾಡಿ ಕೇಳಿ ಕೇಳಿ ॥೪॥

ಹನ್ನೊಂದು ಹೆಡೆಯುಳ್ಳ ಪನ್ನಂಗ ಮಹಿಮೆಯು ಕೇಳಿ ಕೇಳಿ। ಪನ್ನಂಗ ಸೇವಿಸಿದಣ್ಣನೆಂದಿಗೂ ಸಾಯ ಕೇಳಿ ಕೇಳಿ॥ ತನ್ನಂಗ ತ್ರೈ। ವಿಧ ಪನ್ನಂಗ ನಿಜಕಾಯ ಕೇಳಿ ಕೇಳಿ। ಚನ್ನ ನೀಲ್ಗಿರಿ ಲಿಂಗದುನ್ನತದೊಲುಮೆಯು ಕೇಳಿ ಕೇಳಿ ॥೫॥

ಧವಳಂಗದವಳೊಬ್ಬ ನವ ಮನ್ಮಥೆಯು ಕೇಳಿ ಕೇಳಿ। ಶಿವನಂಶಿಭೂತರಿಗಗಣಿತ ಪ್ರೀತಿಯು ಕೇಳಿ ಕೇಳಿ॥ ಭವವಿದೂರನ ಪೂಜಾಪ್ರಥಮ ಪ್ರಖ್ಯಾತಿಯು ಕೇಳಿ ಕೇಳಿ। ಅವಸಾನಕಾಲಕ್ಕೆ ಅವಳೆ ಸಂಗಾತಿಯು ಕೇಳಿ ಕೇಳಿ ॥೬॥

ಶರಣಂರಾಭರಣವಾಗಿಹಳೊಬ್ಬ ಬಾಲೆಯು ಕೇಳಿ ಕೇಳಿ। ಪರಿಕಿಸಲೀರೇಳು ಮುಖದ ಚಿಜ್ವಾಲೆಯು ಕೇಳಿ ಕೇಳಿ॥ ಚರಣಸಖನ ನಾಮವೆರಚಿದ ಮಾಲೆಯು ಕೇಳಿ ಕೇಳಿ। ಉರಗಭೂಷಣದಂತೆ ಧರಿಸುವ ಲೀಲೆಯು ಕೇಳಿ ಕೇಳಿ ॥೭॥

ಪಂಚಂಗದವನೊಬ್ಬ ಹಾರುವ ಬರುತಾನೆ ಕೇಳಿ ಕೇಳಿ। ಸಂಚಿತವನು ಮೀರಿ ಸಾರುತ್ತೈತರುತಾನೆ ಕೇಳಿ ಕೇಳಿ॥ ವಂಚಿಸಿದವರಿಗೆ ದೂರನಾಗಿರುತಾನೆ ಕೇಳಿ ಕೇಳಿ। ಹಿಂಚುಮುಂಚೆಡೆ ಬಲ ಮಧ್ಯ ಸ್ವಸ್ಥಿರತಾನೆ ಕೇಳಿ ಕೇಳಿ ॥೮॥

ಕಾರಣಿಕವ ನಮ್ಮ ಗೊರವನ ದಯವಿಟ್ಟು ಕೇಳಿ ಕೇಳಿ। ಸಾರುತ ಬರುವ ನೋಡಿತರ ಮಾರ್ಗವ ಬಿಟ್ಟು ಕೇಳಿ ಕೇಳಿ॥ ಮೀರಿದಾಚರಣೆಯುಳ್ಳವರೆಲ್ಲಕಿವಿಗೊಟ್ಟು ಕೇಳಿ ಕೇಳಿ। ಧಾರುಣಿಯ ಜನರಿಗೆ ತಿಳಿಯಬಾರದೀಗುಟ್ಟು ಕೇಳಿ ಕೇಳಿ ॥೯॥

ಅರಗಿನ ಪುರಕೆ ಬಹಳುರಿ ಹತ್ತಿ ಸುಡುತ್ತಿದೆ ಕೇಳಿ ಕೇಳಿ। ಅರಗು ಕರಗದುರಿ ನಂದದಲಿರುತಿದೆ ಕೇಳಿ ಕೇಳಿ॥ ಕುರಿಯಾಲದೊಡೆಯನ ಪುರವನು ಪೋಗಲಾಗ ಕೇಳಿ ಕೇಳಿ। ಅರಗು ಕರಗಿ ತಾ ನಂದಿತು ಕಡು ಬೇಗ ಕೇಳಿ ಕೇಳಿ ॥೧೦॥

ನೀರು ಮಧ್ಯದಿ ಕಿಚ್ಚು ಊರೆಲ್ಲ ಸುಡುತಿದೆ ಕೇಳಿ ಕೇಳಿ। ಮೀರಿ ತಾ ಮೊದಲಿರ್ಪ ನೀರಟ್ಟಿ ಸುಡುತಿದೆ ಕೇಳಿ ಕೇಳಿ। ಊರು ನೀರನು ಸುಟ್ಟು ಮೂರು ಬೊಟ್ಟೆಡುತಿದೆ ಕೇಳಿ ಕೇಳಿ। ಮೂರುಲೋಕದ ಪ್ರಜೆ ನೋಡಿಕಂಗೆಡುತಿದೆ ಕೇಳಿ ಕೇಳಿ ॥೧೧॥

ಹತ್ತು ನಡೆವ ದಾರಿ ಗೊತ್ತಿನೊಳಗೆ ಒಂದು ಕೇಳಿ ಕೇಳಿ। ಸತ್ತ್ವಶ್ರವಕೆ ಜಗ ಮುತ್ತಿ ಮೋಹಿಪನೆಂದು ಕೇಳಿ ಕೇಳಿ। ಕರ್ತ ನಿರ್ಲಿಂ ಲಿಂಗವರ್ತಿಯಿಂದೈತಂದು ಕೇಳಿ ಕೇಳಿ। ಸತ್ತ್ವವನಿಗೆ ಪ್ರಾಣವಿತ್ತ ಸುದ್ದಿಯನಿಂದು ಕೇಳಿ ಕೇಳಿ ॥೧೨॥

ಮಡದಿ ಒಬ್ಬಳು ನೀರಕೊಡ ಹೊತ್ತು ಬರುತಾಳೆ ಕೇಳಿ ಕೇಳಿ। ಕೊಡನ ಒಡೆದು ನೀರ ಬಿಡದೆ ಹೊತ್ತಿರುತಾಳೆ ಕೇಳಿ ಕೇಳಿ। ದೃಢದಿಂದ ಸಪ್ತೇಳು ಕಡಲ ಬತ್ತಿಸುತಾಳೆ ಕೇಳಿ ಕೇಳಿ। ಪೊಡವಿ ಈರೇಳಕ್ಕೆ ಒಡೆಯಳೆನಿಸುತಾಳೆ ಕೇಳಿ ಕೇಳಿ ॥೧೩॥

ಕೋಣನ ಕೊಂಬಿಲಿ ನೇಣು ಕಾಣಿಸುತಿದೆ ಕೇಳಿ ಕೇಳಿ। ನೇಣುವಿನ ಬಲೆಯೊಳು ಮೂಲೋಕವಡಗಿದೆ ಕೇಳಿ ಕೇಳಿ। ನೇಣುಕೋಡುಗಳ ಕಿತ್ತೊಗೆಯಲು ಕಡು ಬೇಗ ಕೇಳಿ ಕೇಳಿ। ಕೋಣನಳಿದು ಮುಕ್ತಿ ತಾಣವೆನಿಸುತಿದೆ ಕೇಳಿ ಕೇಳಿ ॥೧೪॥

ಆನೆಯನೇರಿ ಮಾವುತನೊಬ್ಬ ಬರುತಾನೆ ಕೇಳಿ ಕೇಳಿ। ಆನೆ ಮಾವುತನೊಂದು ಆಡು ನುಂಗುತಲಿದೆ ಕೇಳಿ ಕೇಳಿ॥ ಆನೆ ಮಾವುತ ಸಹ ಭಕ್ಷಿಸಿದಡಾನು ಕೇಳಿ ಕೇಳಿ। ಏನು ಹೇಳಲಿ ಬೆಕ್ಕು ನುಂಗಿದ ಕೇಡನು ಕೇಳಿ ಕೇಳಿ ॥೧೫॥

ಕತ್ತಲೆ ಪುರವನು ತೊತ್ತೊಬ್ಬಳಾಳ್ವಳು ಕೇಳಿ ಕೇಳಿ। ತಥ್ಯಮಿಥ್ಯವ ಮಾಡಿ ಪತ್ರವ ಬರೆವಳು ಕೇಳಿ ಕೇಳಿ॥ ತೊತ್ತಿನ ಮೊಲೆ ಮೂಗ ಕತ್ತಿ ಬಿಸುಟಲಾಗ ಕೇಳಿ ಕೇಳಿ। ತಥ್ಯ ಮಿಥ್ಯದ ಕತ್ತಲಳಿದೀತು ಕಡು ಬೇಗ ಕೇಳಿ ಕೇಳಿ ॥೧೬॥

ಕಃಪೂರ ಧರೆಗೊಬ್ಬ ಧರೆ ಮೂರನಾಳ್ವನು ಕೇಳಿ ಕೇಳಿ। ಕರಕರ ದೊಳು ಬಂದು ತಿರಿದುಂಡು ಬಾಳ್ವನು ಕೇಳಿ ಕೇಳಿ॥ ನೆರೆನಂಬಿದವರ ಭವದ ಬೇರ ಕೀಳ್ವನು ಕೇಳಿ ಕೇಳಿ। ಹರಣವನಳಿದು ತನ್ನಿರವನು ಪೇಳ್ವನು ಕೇಳಿ ಕೇಳಿ ॥೧೭॥

ಕರಿಯ ಬಣ್ಣದ ಪಕ್ಷಿ ಗರಿಯು ಗಾಳಿಯು ಕೂಡಿ ಕೇಳಿ ಕೇಳಿ। ಬರಿದೆ ಮೂಲೋಕವ ಚರಿಸಾಡುತಿದೆ ನೋಡಿ ಕೇಳಿ ಕೇಳಿ॥ ಕರಿಯ ಬಣ್ಣದ ಪಕ್ಷಿ ಗರಿಯು ಕಿತ್ತೊಗೆಯಲು ಕೇಳಿ ಕೇಳಿ। ನೆರೆಮೂರುಲೋಕವು ಸ್ಥಿರ ಬಾಳುತಿರೆ ಮೇಲು ಕೇಳಿ ಕೇಳಿ ॥೧೮॥

ಕುಲವಂತರೊಳಗೊಬ್ಬತಲೆಯಿಲ್ಲದಿರುತಾನೆ ಕೇಳಿ ಕೇಳಿ। ಛಲದಿಂದ ತ್ರೈವಿಧ ಮಲವ ಭುಂಜಿಸುತಾನೆ ಕೇಳಿ ಕೇಳಿ॥ ಮಲವಭುಂಜಿಸುವಂಥ ಛಲವಳಿವ ಮೇಲೆ ಕೇಳಿ ಕೇಳಿ। ಕುಲಗೆಟ್ಟು ತಲೆ ಬಂದು ಸುಲಭದೋರುವ ಲೀಲೆ ಕೇಳಿ ಕೇಳಿ ॥೧೯॥

ಆರು ಬಣ್ಣದ ಪಕ್ಷಿ ಹಾರಿತು ಗಗನಕ್ಕೆ ಕೇಳಿ ಕೇಳಿ। ಮೀರಿತು ನೋಡಿನ್ನು ಈರೇಳು ಭುವನಕ್ಕೆ ಕೇಳಿ ಕೇಳಿ॥ ತೋರಿತು ತಲೆಯು ತನ್ನಿರವಿನ ಸುಮನಕ್ಕೆ ಕೇಳಿ ಕೇಳಿ। ಹಾರಿತು ಶರಣರ ಹೃದಯ ಚಿದ್ಭವನಕ್ಕೆ ಕೇಳಿ ಕೇಳಿ ॥೨೦॥

ಪರತತ್ವ ಧೀರವೀರ ಕುರುಹ ಪೇಳಿದ ಸೊಲ್ಲು ಕೇಳಿ ಕೇಳಿ। ಅರಿತ ಮಹಿಮರಾಗಿನಿದು ಪಾಲುಸವಿಬೆಲ್ಲ ಕೇಳಿ ಕೇಳಿ॥ ಅರಿಯದ ಜನರಿಗೆ ತಿಳಿಯಲಳವಲ್ಲ ಕೇಳಿ ಕೇಳಿ। ನಿರುಪಮ ದ್ವಯ ಚನ್ನವೀರ ಮುದ್ಗುರು ಬಲ್ಲ ಕೇಳಿ ಕೇಳಿ ॥೨೧॥



ಮಲ್ಲಿಕಾಮಾಲಾ.

(೫೯) ಇದು ಶಿವಾನುಭವಾಮೃತಾರ್ಣವ ಪೂರ್ಣ ಚಂದ್ರಗಣೇಂದ್ರ ಸಂ। ಕಾಶ ಪೂತ ವಿಭೂತಿ ಸ್ನಾನ ಸುಧೂಳ ಧಾರಣ ಜ್ಯೋತಿಸ। ವೇಶ ಷಡ್ವ್ರತ ಶೀಲಭಾವನ ಭಕ್ತಪಾಲನ ವೀರಮಾ॥ ಹೇಶ ಶ್ರೀ. ಚರಲಿಂಗದಂಘ್ರಿಗಳೊಲ್ದು ಕಾಯಲಿ ಸಂತತಂ ॥೧॥

ಆಣವಾದಿ ಮಲತ್ರಯ ಪ್ರವಿದೂರ ತತ್ವವಿಚಾರ ಕಲ್ಯಾಣ ಶ್ರೀವೃಷಭೇಶ ಮುಖ್ಯ ಸ್ವಕೀಯಭಕ್ತಿಯೋಳ್ಪ್ರಿಯನಿ। ವಾರ್ಣರೂಪ ಸುಚಿತ್ಕಲಾಪ ಜಿತ ತ್ರಿಹೌಪಪ್ರದೀಕ್ಷ ಷಟ್ಪಾಣಿಯೊಳ್ಪಿಡದಿರ್ಪ ಜಂಗಮ ಪಾದ ಎಮ್ಮನು ಕಾಯಲಿ ॥೨॥

ಭಕ್ತಿ ಜ್ಞಾನವಿರಕ್ತಿಸಂಪದ ಬಿತ್ತು ಬ್ರಹ್ಮದ ಗೊತ್ತು ಸದ್ಭಕ್ತರಂತರ ಬಹಿರಂಗ ಪ್ರಸಂಗಿಗಂ ಮಹಲಿಂಗಿಕಂ ॥ ಉಕ್ತಷಟ್ಸ್ಥಲ ಸಾರ ಯೋಗ ಸುಮಾರ್ಗ ಮೀರಿದ ಕ್ರಿಯಸಂ। ಯುಕ್ತ ಮುಕ್ತಿಫಲ ಪ್ರಪಂಚರ ಪಾದವೆಮ್ಮನು ಕಾಯಲೀ ॥೩॥

ದೇಶ ಗ್ರಾಮ ಸುಗೇಹ ಬಂಧನವರ್ಜಿತಂ ಸಕಲೋರ್ಜಿತಂ। ಈಶಶ್ರೀಗುರುಲಿಂಗಜಂಗಮತೀರ್ಥಶೇಷ ವಿಭೂತಿ ಪ್ರೋ। ಭ್ರಿಸಿವಾಕ್ಷಿ ಷಡಕ್ಷರಾದಿಕ ವರ್ಣ ಭೂಷಣ ಪುಣ್ಯಪೋತ್ರಸೆ ಸತ್ಪರಜಂಗಮಾಂಘ್ರಿಗಳೊಲ್ದು ಕಾಯಲಿ ಸಂತತಂ ॥೪॥

ದೇವಭಕ್ತಸದೇಶಗ್ರಾಮ ಸುವರ್ಣ ಲೋಷ್ಟಗಳೊಂದೆಯಂ। ದಾವಗಂ ರಮಗಾಜೊನರ್ಗಳ-ನದ್ವಿತೀಯ ಮತರ್ಕ್ಯ ಸ। ದ್ಭಾವಿಕಂ ನಿರುಪಾಧಿಕಂ ಪರಮಾರ್ಥಿಕಂ ಸ್ವಯತಂತ್ರಿಕಂ। ವ್ಯೋಮದೆನ್ನಜಸ್ರ ಜಂಗಮಲಿಂಗದಂಘ್ರಿಗಳರ್ಥಿಯಿಂ ॥೫॥

ನೈಷ್ಠಿಯಿಂದಲಿ ತಟ್ಟಿ ಮುಟ್ಟಿದ ಕಂಡು ಕೇಳಿದರಾಕ್ಯಪಾ। ದೃಷ್ಟಿಯಿಂದವಲೋಕಿಸುತ್ತಲೆ ದೈನ್ಯರಂ ನೆರೆಮಾಳ್ಪ ಸಂ। ತುಷ್ಟಪಾವನ ಚರ್ಯಮಾಚರಣೈಕ ಪ್ರಣಮುದಾರ್ಯಮೂ ॥ ತುಷ್ಟ ಶ್ರೀ ಪರಜಂಗಮಾಂಘ್ರಿಗಳೊಲ್ದು ಕಾಯಲಿ ಸಂತತಂ ॥೬॥

ಶ್ರದ್ಧೆ ನೈಷ್ಠಿಕ ಸಾವಧಾನ ಮಹಾನುಭಾವನುಮಖಂಡ ಸಂಶುದ್ಧಭಕ್ತನ ಧ್ಯಾನನೋಟ ಸಮರ್ಚನ ಸ್ತುತಿಗಾವಗಂ॥ ಸಿದ್ಧವಾಗವತರ್ಯ ಮತ್ಪ್ರಭುಚನ್ನವೀರ ಮಹೇಶ ಪ್ರಸಿದ್ಧಭಾವ ಪ್ರಸಾದ ಸ್ವಾಮಿಯ ಪಾದವೆಮ್ಮನು ಕಾಯಲಿ।೭॥

### ಸುಲಭನಾಮವೃತ್ತ

(೬೦) ವರಸೌಶೀಲರುವೆ । ಕರರು ಹದಿರವೇ । ಪರಿಸದ್ಗುರುವೇ । ಚರಣಕೆ ರಗುವೆ ॥೧॥

ಸದಮಲ ಶಿವಲಿಂಗದ ಹೊಲಬನು ಪೇಳ್ದ ಗುರುವಿನ ಶ್ರೀಪಾದಕೆರಗುವೆ ನಾಂ ॥೨॥

ನವ ವಿಧವೆನಿಸಿರ್ಪವಿರಳ ಶಿವಲಿಂಗವನನವರತಂ । ತವೆ ಭಜಿಸುವೆನಾಂ ॥೩॥

ಶಿವನ ಭಜಿಸಿ ದುರ್ಭವ ಬಿಡದದರಿಂ । ಶಿವನ ತ್ಯಜಿಸಿ ಲಿಂಗವ ಭಜಿಸುವೆ ನಾಂ ॥೪॥

ಗಜಜಿನಧರನಂ ತ್ಯಜಿಸಿ ಸುಚರವಂ । ತ್ರಿಜಗವರಿಯೆ ನಂ ನಮಿಸುವೆ ಸತತಂ ॥೫॥

ಶಮೆ ದಮೆಯುತ ಜಂ । ಗಮದ ಸುದುದಕಂ ಮಹಕರದೊಳು ನಾಂ ನಮಿಸುವೆ ಸತತಂ ॥೬॥

ಅವಿರತಾಚಾರ ಪಾದವನು ಭಜಿಸಿ ಶೀ । ರ್ಥವ ನೆರೆ ಪೊಡೆಕೊಂಡವಧರಿಸುವೆ ನಾಂ ॥೭॥

ಸದುಗುರುವಿನ ಲಿಂಗದ ಚರದ ತ್ರಿವಿಧ । ಪದಸುಖಪ್ರಸಾದದೊಳಿಹೆ ನಾಂ ॥೮॥

ಲಸಿತ ಭಸಿತವಂ । ನೊಸಲೊಳಿಸೆದು ನಾಂ । ಬಸವ ಪೆಸರ ಮೂರಸಳ ಧರಿಸುವೆ ನಾಂ ॥೯॥

ಸ್ವಯುವೆನಿಸುವ ಚಿನ್ಮಯ ಪರಶಿವನ । ಕ್ಷಯಮಣಿಗಳ ಮಾಲೆಯ ಧರಿಸುವೆ ನಾಂ ॥೧೦॥

ಅವಿರಳಪರಿಪೂರ್ಣವೆ ಸ್ವಯುಪರಂ । ಶಿವನ ಪೆಸರ ಮಂತ್ರವ ಜಪಿಸುವೆ ನಾಂ ॥೧೧॥

# ವಿಷಯಾನುಕ್ರಮಣಿಕೆ.



ಕನಸು (ಕ್ರವದ) 426

---

# ಶಿವಾನುಭವ.

ಇದು ವೀರಶೈವ ಧಾರ್ಮಿಕ ಉನ್ನತಿಯ ಬಗ್ಗೆ ಹೆಣಗಾಡುವ ಮೇಲ್ತರದ ಮಾಸಪತ್ರಿಕೆಯು. ಇದು ೬೪ ಪುಟಗಳುಳ್ಳದ್ದಿದ್ದು ಚಂದಾ ಮಾತ್ರ ೪ರೂ. ೪ಆ. ಇದು ಪ್ರತಿತಿಂಗಳ ಮಧ್ಯಕ್ಕೆ ಹೊರಡುತ್ತದೆ. ಲೇಖಕರು ಚಿಕ್ಕ ಚಿಕ್ಕ ಲೇಖಗಳನ್ನು ಕಳಿಸಬೇಕು. ವೀರಶೈವರ ಉನ್ನತಿಯ ಪರವಾಗಿ ಯಾರು ಬೇಕಾದವರು ಬರೆದರೂ ಅವಕಾಶ ಸಿಗುವದು. ಕೆಲವರು ಇದರ ಹಿಂದಿನ ಸಂಚಿಕೆಗಳನ್ನು ಬೇಡುತ್ತಾರೆ. ಆದರೆ ೧-೨ ಸಂಚಿಕೆಗಳು ಸಿಗುವದೇ ಇಲ್ಲ. ೩ ರಿಂದ ೧೨ ವರೆಗೆ ಮಾತ್ರ ಸಿಗುತ್ತವೆ. ಬೇಕಾದವರು ಶೀಘ್ರ ತರಿಸಿಕೊಳ್ಳಬಹುದು. ತಡವಾದರೆ ಪ್ರತಿಗಳು ಸಿಗ[illegible]ಂದರೆ ಪ್ರತಿಗಳು ಸ್ವಲ್ಪೇ ಉಳಿದಿವೆ. ಪ್ರತಿಯೊಂದು



ಆಸ್ಥಾನ ಮಹಾವಿದ್ವಾನ ಕರ್ನಾಟಕ ಭಾಷಾರತ್ನ

ವೇ|| ಪಿ. ಆರ್ ಕರಿಬಸವ ಶಾಸ್ತ್ರಿಗಳು ಮೈಸೂರ.

# ಶಿವಾನುಭವ.

ವರ್ಷ ೪] ಜನವರಿ ೧೯೨೯ 1930 [ ಸಂಚಿಕೆ ೧೦

## ಆಸ್ಥಾನ ಮಹಾವಿದ್ವಾನ ಕರ್ನಾಟಕ ಭಾಷಾರತ್ನ ವೇ|| ಪಿ. ಆರ್. ಕರಿಬಸವ ಶಾಸ್ತ್ರಿಗಳ ಜೀವನ ಚರಿತ್ರೆ.

ಲೇಖಕಃ— ಬಿ. ಶಿವಮೂರ್ತಿಶಾಸ್ತ್ರಿ ಕೀರ್ತನ ಕೇಸರಿ ಕವಿರತ್ನ
ಹುಲುಕುಂಟೆಮಠ ತುಮಕೂರು.

ವೀರಶೈವ ಸಮಾಜದಲ್ಲಿ ಮಹಾಕವಿ ಹರಿಹರ ದೇವನಿಂದ ಇಂದಿನವರೆಗೆ ಆಗಿಹೋದ ಶ್ರೇಷ್ಠ ಸಾಹಿತ್ಯ ಸೇವಕರಲ್ಲಿ ವೇ|| ಪಿ. ಆರ್. ಕರಿಬಸವಶಾಸ್ತ್ರಿಗಳೊಬ್ಬರು. ಈ ಮಹಾಪಂಡಿತರ ಪರಿಚಯವಿಲ್ಲದವರು ಕನ್ನಡಿಗರಲ್ಲಿಯಾಗಲಿ ವೀರಶೈವರಲ್ಲಾಗಲಿ ಅಪರೂಪವಾಗಿರುವರು. ಅರುವತ್ತು ವರ್ಷಕಾಲ ಅಪಾರವಾದ ಸಾಹಿತ್ಯ ಸೇವೆಯನ್ನೂ ಅತುಲವಾದ ಸಮಾಜಸೇವೆಯನ್ನೂ ಮಾಡಿ ತಮ್ಮ ವೃದ್ಧಾಪ್ಯದಲ್ಲಿಯೂ ಕೂಡ ಸಮಾಜದ ಹಿತಚಿಂತನೆಯಲ್ಲಿಯೇ ಇರುವ ವಿದ್ವನ್ಮಣಿಗಳ ಪರಿಚಯವು ನಮ್ಮ ಶಿವಾನುಭವ ವಾಚಕರಿಗಾಗಲೆಂಬ ಸಂಕಲ್ಪದಿಂದ ಈ ಬರಹವನ್ನು ಬರೆಯಲಾಯಿತು.

ಶಾಸ್ತ್ರಿಗಳ ಜನ್ಮಃ— ಸುಮಾರು ಒಂದು ಶತಮಾನದ ಹಿಂದೆ ಮೈಸೂರು ಪಟ್ಟಣದಲ್ಲಿ ಸುಪ್ರಸಿದ್ಧ ವೀರಶೈವ ಮನೆತನಕ್ಕೆ ಸೇರಿದ ರುದ್ರಪ್ಪನವರೆಂಬ ಒಬ್ಬ ಗೃಹಸ್ಥರಿದ್ದರು. ಇವರಿಗೆ ನಂಜಮ್ಮನವರೆಂಬ ಓರ್ವ ಸಾಧ್ವಿಯು ಧರ್ಮಪತ್ನಿಯಾಗಿದ್ದರು. ಪಂಡಿತ ರುದ್ರಪ್ಪನವರು ಆಯ್ವೈದ್ಯದಲ್ಲಿ ಬಹಳ ಗಟ್ಟಿಗರಾದುದರಿಂದ ಜನರು ಇವರನ್ನು 'ಪಂಡಿತ'

ಎಂಬ ಪ್ರಶಸ್ತಿಯಿಂದ ಸಂಬೋಧಿಸುತ್ತಿದ್ದರು. ಅದೃಷ್ಟವಂತರಾದ ರುದ್ರಪ್ಪನವರಿಗೆ ನಾಲ್ಕು ಮಂದಿ ಗಂಡುಮಕ್ಕಳಾದರು. ಅವರುಗಳೇ

೧. ಪಂಡಿತ ವೀರಣ್ಣಾ ಶಾಸ್ತ್ರಿ.
೨. ಪಂಡಿತ ಕರಿಬಸವ ಶಾಸ್ತ್ರಿ.
೩. ಪಂಡಿತ ಚನ್ನಬಸವ ಶಾಸ್ತ್ರಿ.
೪. ಪಂಡಿತ ನಂಜುಂಡ ಶಾಸ್ತ್ರಿ.

ಎಂಬವರು. ಮೇಲಿನ ನಾಲ್ವರಲ್ಲಿ ಎರಡನೇಯವರೇ ನಮ್ಮ ಚರಿತ್ರನಾಯಕರಾದ ಕರಿಬಸವ ಶಾಸ್ತ್ರಿಗಳು. ಇವರು ಪಂಡಿತ ರುದ್ರಪ್ಪದೇವರ ಮಕ್ಕಳಾದುದರಿಂದ ತಮ್ಮ ಹೆಸರಿನ ಹಿಂದೆ ಪಿ ಆರ್. ಎಂಬ ಸಂಕೇತವನ್ನು ಇಟ್ಟುಕೊಂಡಿರುವರು- ಮೈಸೂರು ಕನ್ನಡಿಗರು ಆಂಗ್ಲೇಯ ಪದ್ಧತಿಯನ್ನು ಅನುಸರಿಸಿ ತಮ್ಮ ಹೆಸರಿನ ಹಿಂದೆ ಸಂಕ್ಷಿಪ್ತಾಕ್ಷರಗಳನ್ನು ಇಟ್ಟುಕೊಳ್ಳುವುದುಂಟು ಉತ್ತರ ಕರ್ನಾಟಕದಲ್ಲಿ ಬಹುಶಃ ಈ ಪದ್ಧತಿಯಿಲ್ಲ. ಪಾಶ್ಚಾತ್ಯರನ್ನು ಅನುಕರಿಸುವ ಈ ಪದ್ಧತಿಯನ್ನು ಉತ್ತರ ಕನ್ನಡಿಗರು ಇಷ್ಟಾಗಿ ಪ್ರೀತಿಸುವದು ಇಲ್ಲ.

ಶ್ರೀಮನ್ನೃಪ ಶಾಲಿವಾಹನ ಶಕ ೧೭೭೦ ರಕ್ಕೆ ಸಲ್ಲುವ ಕೀಲಿಕ ಸಂವತ್ಸರದಲ್ಲಿ ನಮ್ಮ ಚರಿತ್ರ ನಾಯಕರು ಹುಟ್ಟಿದುದು. ಶೈಶವಾವಸ್ಥೆಯು ಕಳೆಯುತ್ತಲೇ ತಮ್ಮ ಮಕ್ಕಳೆಲ್ಲವುಗಳನ್ನೂ ಪಾಠಶಾಲೆಗೆ ಕಳಿಸುವಂತೆ ರುದ್ರಪ್ಪನವರು ಕರಿಬಸವಶಾಸ್ತ್ರಿಗಳನ್ನೂ ಕಳಿಸಿದರು. ಬಾಲಪಾಠವಾಯಿತು. ಈ ಬಾಲಕನು ಸ್ವಭಾವತಃ ಕುಶಾಗ್ರ ಬುದ್ಧಿಯುಳ್ಳವನಾದುದರಿಂದ ವಿದ್ಯೆಯಲ್ಲಿ ತನ್ನ ಗೆಳೆಯರನ್ನೆಲ್ಲಾ ಹಿಮ್ಮೆಟ್ಟಿಸುತ್ತಿದ್ದನು. ತಂದೆಗೆ ಈ ಬಾಲಕನಮೇಲೆ ಪ್ರೇಮಾಧಿಕ್ಯವಾಗಲು ಇದೊಂದು ಕಾರಣವಾಯಿತು.

ವಿದ್ಯಾಭ್ಯಾಸ:— ಈ ಬಾಲಕನಿಗೆ ಬಾಲಪಾಠವು ಮುಗಿದ ಕೂಡಲೇ ತಂದೆಯು ಮುಂದೆ ಸಾಹಿತ್ಯವನ್ನು ಕಲಿಸಲು ಪ್ರಾರಂಭಿಸಿದನು. ಆಗ ಮೈಸೂರಿನಲ್ಲಿದ್ದ ವೀರಶೈವ ಪಂಡಿತರಲ್ಲಿ ಬೆಟ್ಟದ ಪುರದ ಬಸವದೇವರೆಂಬ ವಿರಕ್ತರು ಸಂಸ್ಕೃತದಲ್ಲಿಯೂ ಪಂಡಿತ ಚಿಟಿಗಿ ಬಸವಲಿಂಗಪ್ಪನವರು ಕನ್ನಡದಲ್ಲಿಯೂ ಹೆಸರಾದ ವಿದ್ವಾಂಸರಾಗಿದ್ದರು. ಕರಿಬಸವ ಶಾಸ್ತ್ರಿಗಳು ಮೇಲಿನ ವಿದ್ವಾಂಸರಿಬ್ಬರಲ್ಲಿ ತಕ್ಕಮಟ್ಟಿಗೆ ಸಾಹಿತ್ಯವನ್ನು ಓದಿ ಮುಂದೆ ಸಂಸ್ಕೃತ ನಾಟಕಾಲಂಕಾರಾದಿ ಪ್ರೌಢ ಪಾಠಗಳನ್ನು

ಬಾಚಳ್ಳಿ ಶ್ರೀಕಂಠ ಶಾಸ್ತ್ರಿಗಳೆಂಬ ಪ್ರಸಿದ್ಧ ಬ್ರಾಹ್ಮಣ ಪಂಡಿತರಲ್ಲಿ ಕಲಿತರು. ಸುಮಾರು ತಮ್ಮ ಇಪ್ಪತ್ತನೇ ವರ್ಷ ವಯಸ್ಸಿನೊಳಗಾಗಿ ಶಾಸ್ತ್ರಿಗಳು ನಾಟಕಾಂತ್ಯ ಸಾಹಿತ್ಯದಲ್ಲಿ ಒಳ್ಳೆಯ ಪಾಂಡಿತ್ಯವನ್ನು ಸಂಪಾದಿಸಿದರು.

ಸ್ವಂತವ್ಯಾಸಂಗ:— ಶಾಸ್ತ್ರಿಗಳು ಪ್ರೌಢ ವಿದ್ಯಾರ್ಥಿಗಳಾಗಿರುವಾಗಲೇ ಇವರ ಶಕ್ತಿಯು ಜನರಿಗೆ ತೋರಲಾರಂಭಿಸಿತು. ವಿದ್ಯಾಭಿಮಾನಿಗಳಾದ ತಂದೆಯವರೂ ಸದಾ ಮಕ್ಕಳ ಪುರೋಭಿವೃದ್ಧಿಯಲ್ಲಿಯೇ ಇರುತ್ತಿದ್ದರು. ಶಾಸ್ತ್ರಿಗಳ ಮಿಕ್ಕ ಮೂವರು ಸಹೋದರರೂ ತಕ್ಕಮಟ್ಟಿಗೆ ಸಾಹಿತ್ಯ ಪಂಡಿತರೆನಿಸಿದರು. ಹಿರಿಯವರಾದ ಪಂಡಿತ ವೀರಣ್ಣನವರು ಮಾತ್ರ ತಮ್ಮ ತಂದೆಯಂತೆ ವೈದ್ಯದಲ್ಲಿಯೂ ಪಂಡಿತರೆನಿಸಿದರು. ಕಿರಿಯರಾದ ನಂಜುಂಡ ಶಾಸ್ತ್ರಿಗಳು ಗ್ರಂಥ ವಾಚನದಲ್ಲಿ ಅತ್ಯಂತ ಪ್ರಸಿದ್ಧಿಗೆ ಬಂದರು.

ವೇ|| ಪಿ. ಆರ್. ರವರು ತಮ್ಮ ಅಪಾರವಾದ ಬುದ್ಧಿಶಕ್ತಿಯ ಬಲದಿಂದ ವೀರಶೈವ ಮತ ಗ್ರಂಥಗಳನ್ನೂ, ಇತರ ವೇದಾಂತ ಗ್ರಂಥಗಳನ್ನೂ, ಶ್ರೇಷ್ಠತಮ ಸಾಹಿತ್ಯ ಗ್ರಂಥಗಳನ್ನೂ ಚನ್ನಾಗಿ ಮನೆಯಲ್ಲಿಯೇ ಓದತೊಡಗಿದರು. ಇವರಿಗೆ ಅಭಿನವ ವಿದ್ಯಾನಗರಿಯೆನಿಸುವ ಮೈಸೂರಿನಲ್ಲಿ ಹಲವು ಮಂದಿ ವಿದ್ವನ್ಮಿತ್ರರೂ ಲಭಿಸಿದರು. ಒಟ್ಟಿನಲ್ಲಿ ಶಾಸ್ತ್ರಿಗಳ ಸ್ವಂತ ವ್ಯಾಸಂಗವು ಬಹಳ ಫಲಪ್ರದವಾಯಿತು.

ಉಪಾಧ್ಯಾಯವೃತ್ತಿ:— ಶಾಸ್ತ್ರಿಗಳು ಯಾವಾಗ ಕನ್ನಡ ಸಂಸ್ಕೃತ ಸಾಹಿತ್ಯದಲ್ಲಿ ಉದ್ದಾಮಪಂಡಿತರೆಂಬುದು ತಿಳಿಯಿತೋ ಇವರನ್ನು ಕಲಿಸಕ್ಕೆ ಕರೆವವರೂ ಬಹುಮಂದಿಯಾದರು. ಆಗ ತಾನೇ ಮೈಸೂರಿನಲ್ಲಿ ಸ್ಥಾಪಿತವಾಗಿದ್ದ ವೆಸ್ಲಿಯನ ಮಿಷನ ಹೈಸ್ಕೂಲಿನಲ್ಲಿ ಇವರನ್ನು ಪ್ರಥಮ ಕನ್ನಡ ಪಂಡಿತನ್ನಾಗಿ ನಿಯಮಿಸಿದರು. ಇಲ್ಲಿ ಶಾಸ್ತ್ರಿಗಳು ಸುಮಾರು ೧೫ ವರ್ಷಕಾಲ ಉಪಾಧ್ಯಾಯರಾಗಿ ಒಳ್ಳೆಯ ಕೀರ್ತಿಯನ್ನು ಸಂಪಾದಿಸಿದರು. ಮುಂದೆ ಮೈಸೂರಿನಲ್ಲಿ ಮಹಾರಾಜರವರ ಕಾಲೇಜು ಪ್ರಾರಂಭವಾದುದರಿಂದ ಸರ್ಕಾರದ ವಿದ್ಯಾಇಲಾಖೆಯವರು ಈ ಶಾಸ್ತ್ರಿಗಳನ್ನು ತಿಂಗಳಿಗೆ ೯೦ ರೂಪಾಯಿ ಸಂಬಳ ಗೊತ್ತುಮಾಡಿ ಕಾಲೇಜಿನ ಕನ್ನಡ ಪ್ರಥಮ ಪಂಡಿತರಾಗಿರುವಂತೆ ಗೊತ್ತುಪಡಿಸಿದರು. ಈ ಕಾಲೇಜಿನಲ್ಲಿ ಸುಮಾರು ೩೦

ವರ್ಷ ಕಾಲ ಅಧ್ಯಾಪಕರಾಗಿದ್ದು ಶಾಸ್ತ್ರಿಗಳು ಅಪಾರವಾಗಿ ಸಾಹಿತ್ಯಸೇವೆ ಮಾಡಿರುವರು.

ಶಿಷ್ಯವೃಂದಃ--ಪಿ. ಆರ್. ರವರು ಮೈಸೂರಿನಲ್ಲಿರುವ ಪಂಡಿತೋತ್ತಮರಲ್ಲಿ ಅತ್ಯಂತ ಶ್ರೇಷ್ಠರಾದುದರಿಂದ ಇವರಲ್ಲಿ ವಿದ್ಯಾಭ್ಯಾಸ ಮಾಡಲು ಹಲವು ಮಂದಿ ಕುತೂಹಲಿಗಳಾಗಿದ್ದರು. ಶಾಸ್ತ್ರಿಗಳ ಶಿಷ್ಯವೃಂದವನ್ನು ಮುಖ್ಯವಾಗಿ ಮುಂದೆ ಹೇಳುವ ಹಾಗೆ

೧. ಇಂಗ್ಲಿಷರು. ೨. ಕನ್ನಡಿಗರು.

ಎಂದು ಎರಡು ವರ್ಗಮಾಡಬಹುದು.

ವೆಸ್ಲಿಯನ ಮಿಷನಃ--ಹಿಂದೂ ದೇಶದಲ್ಲಿ ಕ್ರೈಸ್ತಮತ ಪ್ರಸಾರ ಮಾಡುವಸಲುವಾಗಿ ಪಾಶ್ಚಾತ್ಯರು ಹಲವು ಸಂಘಗಳನ್ನು ಮಾಡಿರುವರು. ಅಂಥವರಲ್ಲಿ ಇಂಗ್ಲಂಡಿನಲ್ಲಿ ಆಗಿಹೋದ 'ವೆಸ್ಲಿ' ಎಂಬಾತನು ಒಂದು ಕ್ರೈಸ್ತಮತ ಪ್ರಚಾರಕ ಸಂಘಗಳನ್ನು ಸ್ಥಾಪಿಸಿದನು. ಆ ಸಂಸ್ಥೆಗೆ 'ವೆಸ್ಲಿಯನ ಮಿಷನ' ಎಂದು ಹೆಸರು.

ಈ ವಿಧದ ಸಂಸ್ಥೆಗಳು ಇಂಗ್ಲಂಡ, ಜರ್ಮನಿ, ಫ್ರಾನ್ಸ, ಅಮೇರಿಕಾ ಮೊದಲಾದ ಪಾಶ್ಚಾತ್ಯದೇಶಗಳಲ್ಲಿ ಬಹಳವಾಗಿರುವವು. ಇವು ಆಫ್ರಿಕಾ ಇಂಡಿಯಾ ಚೀನ ಮೊದಲಾದ ಪೂರ್ವ ದೇಶಗಳಿಗೆ ಬಂದು ನಾನಾವಿಧವಾದ ಯುಕ್ತಿಗಳಿಂದ ತಮ್ಮ ಮತಪ್ರಚಾರ ಮಾಡುತ್ತಿರುವವು.

ಹಿಂದುಸ್ತಾನದಲ್ಲಿ ಅದರಲ್ಲಿಯೂ ಕರ್ನಾಟಕದಲ್ಲಿ ಕ್ರೈಸ್ತಮತ ಪ್ರಚಾರಮಾಡುತ್ತಿರುವ ವಿದೇಶೀಯ ಸಂಸ್ಥೆಗಳಲ್ಲಿ ಈ ವೆಸ್ಲಿಯನ ಮಿಷನ ವೆಂಬುದು ಬಹು ಹೆಸರಾದುದು. ಈ ಮಿಷನನವರು ಮೈಸೂರಿನಲ್ಲಿ ಮುಖ್ಯ ಕಚೇರಿಯನ್ನು ಮಾಡಿಕೊಂಡಿರುವರು. ಈ ಸಂಸ್ಥೆಗೆ ಒಬ್ಬ ಆಂಗ್ಲಪಾದ್ರಿಯೇ ಸಾಮಾನ್ಯವಾಗಿ ಅಧ್ಯಕ್ಷನಾಗಿರುವನು. ಈತನು ಯಾವ ದೇಶಕ್ಕೆ ಬರುವನೋ ಆ ದೇಶಭಾಷೆಯನ್ನು ಕಲಿತು ಅದರಲ್ಲಿ ಇಲ್ಲಿನ ಮರುಳು ಜನರಿಗೆ ಬೋಧಿಸಿ ತನ್ನ ಮತಪ್ರಚಾರ ಮಾಡುವನು.

ನಮ್ಮ ಪಿ. ಆರ್ ಶಾಸ್ತ್ರಿಗಳಿಗೂ ಈ ಪಾದ್ರಿಗಳಿಗೂ ಬಹಳ ಸಂಬಂಧವಿದೆ. ಹೇಗೆಂದರೆ ಇವರು ಮೊದಲು ಹದಿನೈದು ವರ್ಷ ಕಾಲ ಉಪಾಧ್ಯಾಯರಾಗಿದ್ದುದು ಮಿಷನ ಹೈಸ್ಕೂಲಿನಲ್ಲಿ ಹಲವುಕಾಲ ಬೈಬಲ್ ಕಮಿಟಿಗೆ ಸದಸ್ಯರಾಗಿ ಬೈಬಲ್ಲನ್ನು ಕನ್ನಡಕ್ಕೆ ಭಾಷಾಂತರಿಸುವಾಗ

ಪಾದ್ರಿಗಳಿಗೆ ಬಹಳವಾಗಿ ಸಹಾಯ ಮಾಡಿರುವರು. ಅಲ್ಲದೆ ಹಲವು ಮಂದಿ ರೆವರೆಂಡರಿಗೆ ಅಂದರೆ ಶ್ರೇಷ್ಠ ಪಾದ್ರಿಗಳಿಗೆ ಗುರುಗಳಾಗಿ ಕನ್ನಡ ಹಾಗೂ ಸಂಸ್ಕೃತವನ್ನು ಅವರಿಗೆ ಹೇಳಿಕೊಟ್ಟಿರುವರು.

ವೇ|| ಪಿ. ಆರ್ ರವರಲ್ಲಿ ಹಲವು ಮಂದಿ ಇಂಗ್ಲಿಷ ಪಾದ್ರಿಗಳು ಓದಿ ಇವರ ಸಾಮರ್ಥ್ಯವನ್ನು ಕೊಂಡಾಡಿರುವರು. ಅವರ ವಿದ್ಯಾರ್ಥಿಗಳಾಗಿದ್ದವರಲ್ಲಿ ಕೆಳಗೆ ಸೂಚಿಸತಕ್ಕವರು ಬಹು ಮುಖ್ಯರು

೧. ರೆವರೆಂಡ್ ಗ್ರೀನೊಡ್ ೨. ರೆವರೆಂಡ್ ಹಾಕಿನ್. ೩ ರೆವರೆಂಡ್ ಹೆಗ್ಗ್ ೪. ರೆವರೆಂಡ್ ಕಾಸ್ವಿಕ್. ೫. ರೆವರೆಂಡ್ ಗಲಿಫಲ್ಡ್. ೬. ರೆವರೆಂಡ್ ರಿಡಿಟ್ಟ. ೭. ರೆವರೆಂಡ್ ಥಾಂಸನ್. ೮. ಮಿಸೆಸ್ ಗಲಿಫಲ್ಡ್

ಹಿಂದೆ ಸೂಚಿಸತಕ್ಕ ಆಂಗ್ಲೇಯರೇ ಅಲ್ಲದೆ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಪ್ರಸಿದ್ಧರಾಗಿರುವ ಮಿ|| ಕಿಟಲ್ ಮಿ|| ಗ್ರೈಸ್ ಪ್ರಭೃತಿಗಳೆಲ್ಲರೂ ಶಾಸ್ತ್ರಿಗಳಿಂದ ಒಂದಿಲ್ಲೊಂದು ರೀತಿಯಿಂದ ವಿಷಯ ಸಂಗ್ರಹ ಮಾಡಿದವರೇ ಆಗಿರುವರು.

ವೇ|| ಪಿ. ಆರ್. ರವರಲ್ಲಿ ಅವರು ೪೫ ವರ್ಷಗಳ ಕಾಲ ಹೈಸ್ಕೂಲು ಮತ್ತು ಕಾಲೇಜುಗಳಲ್ಲಿ ಪಂಡಿತರಾಗಿದ್ದಾಗ್ಗೆ ಸಾವಿರಾರು ಮಂದಿ ವಿದ್ಯಾರ್ಥಿಗಳು ಓದಿರುವರು. ಪ್ರಾಯೇಣ ಆ ವಿದ್ಯಾರ್ಥಿಗಳಲ್ಲಿ ಬಹುಮಂದಿ ಮೈಸೂರು ಸರ್ಕಾರದಲ್ಲಿ ದೊಡ್ಡ ದೊಡ್ಡ ಅಧಿಕಾರಸ್ಥಾನಾಪನ್ನರಾಗಿ ಈಗಲೂ ಈ ಪಂಡಿತೋತ್ತಮರಲ್ಲಿ ತಮಗಿರುವ ಗೌರವ ಬುದ್ಧಿಯನ್ನು ವ್ಯಕ್ತಮಾಡುತ್ತಿರುವರು. ಶಾಸ್ತ್ರಿಗಳಲ್ಲಿ ಸ್ವಂತವಾಗಿಯೂ ನೂರಾರು ಮಂದಿ ಓದಿ ವಿದ್ವಾಂಸರಾಗಿರುವರು. ಅವರುಗಳಲ್ಲಿ ಮುಖ್ಯರಾದವರನ್ನು ಕೆಳಗೆ ಕೊಟ್ಟಿದೆ. ಮುಂದೆ ಸೂಚಿಸುವವರಲ್ಲಿ ವೀರಶೈವರೂ. ಬ್ರಾಹ್ಮಣರೂ ಅರಸುಗಳೂ ಸಹ ಇರುವುದನ್ನು ನೋಡಿದರೆ ಇವರಲ್ಲಿ ಎಲ್ಲ ಮತೀಯರಿಗೂ ಹೇಗೆ ಸಮಾನವಾದ ಗೌರವವು ವಿತ್ತೆಂಬುದು ವ್ಯಕ್ತವಾಗುತ್ತದೆ.

೧. ಕೈ|| ಆಸ್ಥಾನ ವಿದ್ವಾನ ಎನ್ ಆರ್ ಕರಿಬಸವಶಾಸ್ತ್ರಿಗಳು.

೨. ವೇ|| ಆಸ್ಥಾನ ವಿದ್ವಾನ ಸಿದ್ಧಲಿಂಗಶಾಸ್ತ್ರಿಗಳು.

೩. ವೇ|| ಆಸ್ಥಾನ ವಿದ್ವಾನ ಮಹದೇವ ಶಾಸ್ತ್ರಿಗಳು. (ಇವರುಪ್ರಸಿದ್ಧರಾದ ಮಹಾಕರಿಬಸಪ್ಪ ಶಾಸ್ತ್ರಿಗಳ ಮಕ್ಕಳು)

೪. ವೇ|| ಆಸ್ಥಾನ ವಿದ್ವಾನ ಶಿರ್ಶಿ ಗುರುಶಾಂತ ಶಾಸ್ತ್ರಿಗಳು.
೫. ಕೈ|| ಆಸ್ಥಾನ ವಿದ್ವಾನ ದಾವಣಗೆರೆ ಚಂದ್ರಶೇಖರ ಶಾಸ್ತ್ರಿಗಳು.
೬. ವೇ ಸಿಂಗಿರಾಜ ಪುರಾಣದ ಬಸವಲಿಂಗ ಶಾಸ್ತ್ರಿಗಳು.
೭. ವೇ|| ಶಿವಾತ್ರ ಗಣೇಶ ಪುರಾಣದ ಶಿ. ಶಿ. ಬಸವಲಿಂಗಶಾಸ್ತ್ರಿಗಳು.
೮. ವೇ|| ಸುತ್ತೂರು ಶಾಂತವೀರಶಾಸ್ತ್ರಿಗಳು.
೯. ವೇ|| ಟಿಪಟೂರು ವಿರೂಪಾಕ್ಷಶಾಸ್ತ್ರಿಗಳು.
೧೦. ಶ್ರೀ. ರಾಜರವಿಭೂಷಣ ಲಿಂಗರಾಜ ಅರಸರು.
೧೧. ಶ್ರೀ. ವೀರಪ್ಪಾಜಿ ಅರಸರು.
೧೨. ಶ್ರೀ. ವೀರನಗೆರೆ ಚಂದ್ರಶೇಖರ ಶಾಸ್ತ್ರಿಗಳು.
೧೩. ವೇ|| ಪಿ. ಆರ್. ರವರ ಅನಂತರ ಮಹಾರಾಜ ಕಾಲೇಜಿನ ಕನ್ನಡ ಪ್ರಥಮ ಪಂಡಿತರಾಗಿದ್ದ ಶ್ರೀ. ಕೆ. ವರದಾಚಾರ್ಯರು.
೧೪. ಶ್ರೀ. ಪಂಡಿತ ವೀರರಾಘವಾಚಾರ್ಯರು.
೧೫. ವೇ|| ಸಂಪಿಗೆ ಸಿದ್ಧಲಿಂಗ ಶಾಸ್ತ್ರಿಗಳು.

ಮೇಲೆ ಕಂಡವರೇ ಅಲ್ಲದೆ ಇನ್ನೂ ಹಲವು ಮಂದಿ ಇವರಲ್ಲಿ ವಿದ್ಯಾಭ್ಯಾಸ ಮಾಡಿ ಘನಪಂಡಿತರಾಗಿರುವರು. ಈ ಚರಿತ್ರ ಲೇಖಕನೂ ಈ ಶಾಸ್ತ್ರಿಗಳ ಶಿಷ್ಯ ಕೋಟಿಗೆ ಸೇರಿದವನೇ.

ಅದ್ಭುತ ಪಾಂಡಿತ್ಯ:— ವೇ|| ಪಿ. ಆರ್. ರವರಿಗೆ ಕನ್ನಡ ಮತ್ತು ಸಂಸ್ಕೃತ ಸಾಹಿತ್ಯದಲ್ಲಿ ಅದ್ಭುತ ಪಾಂಡಿತ್ಯ ವಿರುವದು. ಅಲ್ಲದೆ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಸಿದ್ಧಾಂತಗಳಲ್ಲಿಯೂ ಇವರು ಪ್ರವೀಣರಾಗಿರುವರು. ಶಕ್ತಿ ವಿಶಿಷ್ಟಾದ್ವೈತ ಅಥವಾ ವೀರಶೈವ ಸಿದ್ಧಾಂತ ಜ್ಞಾನದಲ್ಲಿ ಶಾಸ್ತ್ರಿಗಳಿಗೆ ಸರಿಸಮಾನವಾದ ಜ್ಞಾನವುಳ್ಳವರು ಬಹಳ ಅಪೂರ್ವವೆಂದೇ ಹೇಳಬಹುದು. ವ್ಯಾಕರಣ ತರ್ಕ ಶಾಸ್ತ್ರಗಳಲ್ಲಿಯೂ ಅವರಿಗೆ ಪರಿಚಯ ಕಡಿಮೆಯಾಗಿಲ್ಲ. ಅಷ್ಟಾದಶ ಪುರಾಣಗಳು ಷಡ್ದರ್ಶನಗಳು ಸ್ಮೃತಿಗಳು ಆಗಮಗಳು ವೇದಗಳು ಉಪನಿಷತ್ತುಗಳು ಇವುಗಳಲ್ಲೆಲ್ಲಾ ಅವರಿಗೆ ತಿಳಿಯದ ವಿಷಯವೇ ಇಲ್ಲ. ಭಾರತ, ರಾಮಾಯಣ, ಭಾಗವತಾದಿ ಗ್ರಂಥಗಳಲ್ಲಿಯೂ ಅವರಿಗೆ ಸರಿಸಮರು ಸಿಗುವುದು ಅಪೂರ್ವ. ಕನ್ನಡ ಸಾಹಿತ್ಯದಲ್ಲಿಯಂತೂ ಇವರಿಗೆ ತಿಳಿಯದ ಸಂಗತಿಯೇ ಇಲ್ಲ. ಕವಿಚರಿತ್ರೆಯ ರಚನೆಗೂ ಇವರ ಸಹಾಯವು ಆಗಿಯೇ ಆಗಿದೆಯೆಂಬುದನ್ನು ಸುಪ್ರಸಿದ್ಧರಾದ ಆರ್. ನರಸಿಂಹಾಚಾರ್ಯರೇ ಒಪ್ಪಿಕೊಂಡು ಇವರ ಉಪಕಾರವನ್ನು ತಮ್ಮ ಗ್ರಂಥದ ಪೀಠಿಕೆಯಲ್ಲಿ ಸ್ಮರಿಸಿರುವರು.

ಆಸ್ಥಾನ ಮಹಾವಿದ್ವಾನ್:— ಶಾಸ್ತ್ರಿಗಳ ಅದ್ಭುತ ಪಾಂಡಿತ್ಯವು ಕರ್ನಾಟಕವನ್ನೆಲ್ಲಾ ಹಬ್ಬಿತು. ವಿದ್ಯಾಭಿಮಾನಿಗಳಾದ ನಮ್ಮ ಶ್ರೀಮನ್ ಮಹಾರಾಜರವರು ಈ ಶಾಸ್ತ್ರಿಗಳನ್ನು ಅರಮನೆಯ ಆಸ್ಥಾನ ಮಹಾವಿದ್ವಾನ್ ಪದವಿಗೆ ಸೇರಿಸಲು ಅಪ್ಪಣೆಕೊಟ್ಟರು. ವೀರಶೈವ ಪಂಡಿತರಲ್ಲಿ ಮೈಸೂರು ಆಸ್ಥಾನ ಮಹಾ ವಿದ್ವಾನ್ ಪದವಿಯನ್ನು ಹೊಂದಿದವರು ಈ ಪಂಡಿತೋತ್ತಮರೊಬ್ಬರೇ. ವೇ|| ಪಿ. ಆರ್. ರವರ ಶಿಷ್ಯವೃಂದದಲ್ಲಿ ಐದು ಮಂದಿಮಾತ್ರ ಅರಮನೆಯ ವಿದ್ವಾನ್ ಪದವಿಗೆ ಸೇರಿದವರಾಗಿರುವರು.

ಕರ್ನಾಟಕಭಾಷಾರತ್ನ:— ಶ್ರೀಮನ್ಮಹಾರಾಜರವರು ಪಿ. ಆರ್ ರವರ ವಿಷಯದಲ್ಲಿ ಬಹಳ ಅಭಿಮಾನಿಗಳು. ಈ ಶಾಸ್ತ್ರಿಗಳು ಆಳಿದ ಮಹಾ ಪ್ರಭುಗಳಿಂದ ಶ್ರೀ. ಮುಮ್ಮಡಿ ಕೃಷ್ಣರಾಜೇಂದ್ರ ಒಡೆಯರಿಂದಲೂ, ಶ್ರೀ ಚಾಮರಾಜೇಂದ್ರ ಒಡೆಯರಿಂದಲೂ ಅನೇಕ ಸಂದರ್ಭದಲ್ಲಿ ಮರ್ಯಾದೆಯನ್ನು ಸಂಪಾದಿಸಿರುವರು. ಆದುದರಿಂದಲೇ ತಮ್ಮ ತಂದೆ ತಾತಂದಿರಕಾಲದಿಂದಲೂ ಅರಮನೆಗೆ ಪರಿಚಯಸ್ಥರಾದ ಈ ಪಂಡಿತೋತ್ತಮರನ್ನು ಈಗಿನ ನಾಲ್ವಡಿ ಶ್ರೀಕೃಷ್ಣರಾಜೇಂದ್ರ ಒಡೆಯರವರು ಕ್ರಿ. ಶ. ೧೯೧೮ ನೇ ವರ್ಷದಲ್ಲಿ ನಡೆದ ದಸರಾದರ್ಬಾರ್‌ನಲ್ಲಿ "ಕರ್ನಾಟಕ ಭಾಷಾರತ್ನ" ಎಂಬ ಘನವಾದ ಬಿರುದನ್ನೂ ವಜ್ರ ಕಂಕಣ ಶಾಲು ಜೋಡಿಯನ್ನೂ ಕೊಟ್ಟು ಮರ್ಯಾದಿಸಿದರು.

ಸಮಾಜಸೇವೆ:— ಶಾಸ್ತ್ರಿಗಳು ೪೫ ವರ್ಷ ಹೈಸ್ಕೂಲು ಮತ್ತು ಕಾಲೇಜುಗಳಲ್ಲಿ ಶ್ರೇಷ್ಠ ಬೋಧಕರಾಗಿ ಕೆಲಸ ಮಾಡಿದುದಲ್ಲದೆ ಸ್ವಂತವಾಗಿ ಮನೆಯಲ್ಲಿ ಅನ್ನ ಬಟ್ಟೆ ಕೊಟ್ಟು ಹಲವು ಮಂದಿ ಅನಾಥ ವೀರಶೈವ ಬಾಲಕರಿಗೆ ವಿದ್ಯಾಭ್ಯಾಸ ಮಾಡಿಸಿರುವರು. ಅಲ್ಲದೆ 'ಭಾಷೋಜ್ಜೀವಿನಿ' ಎಂಬ ಹೆಸರಿನಿಂದ ಸಂಸ್ಕೃತ ಪಾಠಶಾಲೆಯೊಂದನ್ನು ಸ್ಥಾಪಿಸಿ ಅದರಲ್ಲಿ ಪುಕ್ಕಟೆಯಾಗಿ ಹಲವರಿಗೆ ಪಾಠಬೋಧೆಮಾಡಿರುವರು. ಶಾಸ್ತ್ರಿಗಳು ತ್ರಿಮತಸ್ಥ ಬ್ರಾಹ್ಮಣರಿಗೂ ವೀರಶೈವರಿಗೂ ಶಾಸ್ತ್ರವಾದವು ಪ್ರಾರಂಭವಾದ ಸಮಯದಲ್ಲ ಅತ್ಯಂತ ಧೈರ್ಯದಿಂದ ವಾದಮಾಡಿ ಜಯಪ್ರದರಾಗಿರುವರಲ್ಲದೆ ತಮ್ಮ ಸಮಾಜಕ್ಕೂ ಕೀರ್ತಿಯನ್ನು ತಂದಿರುವರು. ಶಾಸ್ತ್ರಿಗಳು ಮಾಡಿದ ಸಾಹಿತ್ಯ ಸೇವೆಗೆ ಬೇರೊಂದು ಪ್ರಕರಣವೇ ಮುಂದೆ ಬರೆಯಲ್ಪಡುವುದು.

ಧರ್ಮಯುದ್ಧ:— ಕೈ॥ ಯಜಮಾನ ವೀರಸಂಗಪ್ಪನವರಿಗೂ ವೇ॥ ಪಿ. ಆರ್. ಕರಿಬಸವಶಾಸ್ತ್ರಿಗಳವರಿಗೂ ಬಹಳ ವಿಷಯದಲ್ಲಿ ಸಂಬಂಧ ಇದೆ. ಈ ಸಂಬಂಧವನ್ನು ಭೋಜರಾಜ ಕಾಳಿದಾಸರ ಸಂಬಂಧಕ್ಕೆ ಹೋಲಿಸಬಹುದು.

ಕ್ರಿ. ಶ. ೧೮೮೪ ನೇ ವರ್ಷದಲ್ಲಿ ಮೈಸೂರಿನಲ್ಲಿ ವೀರಶೈವರಿಗೂ ಬ್ರಾಹ್ಮಣರಿಗೂ ಒಂದು ಭಯಂಕರವಾದ ಧರ್ಮಯುದ್ಧವು ನಡೆದು ಹೋಯಿತು. ಕೈ॥ ಯಜಮಾನ ವೀರಸಂಗಪ್ಪನವರು ಪ್ರಕಟಿಸಿರುವ "ಮೈಸೂರ ಸ್ವಾರ್ ಕರಸ್‌ಪಾಂಡೆನ್ಸಿ" ಎಂಬ ಗ್ರಂಥದ ಎರಡು ಭಾಗಗಳನ್ನೂ ಓದಿದರೆ ಆಗಿನ ಪರಿಸ್ಥಿತಿಯು ಕಣ್ಣಿಗೆ ಕಟ್ಟಿದಂತಾಗುತ್ತದೆ. ಆ ಸಮಯದಲ್ಲಿ ಮೈಸೂರಿನಲ್ಲಿನ ವೀರಶೈವರಲ್ಲಿ

೧. ಕೈ॥ ಯಜಮಾನ ವೀರಸಂಗಪ್ಪನವರೂ
೨. ಕೈ॥ ಅಭಿನವ ಕಾಳಿದಾಸ, ಬಸವಪ್ಪಶಾಸ್ತ್ರಿಗಳೂ
೩. ಕೈ॥ ಆಸ್ಥಾನ ಮಹಾವಿದ್ವಾನ, ಕರ್ನಾಟಕಭಾಷಾರತ್ನ ಪಿ. ಆರ್. ಕರಿಬಸವಶಾಸ್ತ್ರಿಗಳು.

ಎಂಬೀ ಮೂವರನ್ನು ಅತ್ಯಂತ ಮುಖ್ಯರೆಂದು ಹೇಳಬಹುದು. ಈ ಮೂವರ ಚರಿತ್ರೆಗೂ ಪರಸ್ಪರ ಸಂಬಂಧ ವಿದ್ದೇ ಇದೆ. ಇವರಲ್ಲಿ ೧ ನೇ ೨ ನೇ ಯವರು ಒಂದೊಂದು ವಿಷಯದಲ್ಲಿ ಪ್ರಖ್ಯಾತರಾಗಿದ್ದರೂ ಪಾಂಡಿತ್ಯದಲ್ಲಿಯೂ ಲೇಖನ ವಾಗ್ವಾದ ನೈಪುಣ್ಯದಲ್ಲಿಯೂ ವೇ॥ ಪಿ. ಆರ್. ರವರನ್ನು ಸರಿಗಟ್ಟಲಾರರು. ಈ ವಿಷಯವನ್ನು ಇವರ ಸಮಗ್ರ ಚರಿತ್ರೆಯನ್ನು ಓದಿದ ವಾಚಕರೆಲ್ಲರೂ ತಿಳಿಯ ಬಹುದು.

ಬ್ರಾಹ್ಮಣ ವೀರಶೈವ ಧರ್ಮ ಯುದ್ಧದಲ್ಲಿ ವೀರ ಸಂಗಪ್ಪನವರೇ ಮುಖ್ಯನಾಯಕರು. ೧೮೮೪ ಸುಮಾರಿನಲ್ಲಾದ ಮೈಸೂರು ಸರಕಾರದ ಜನ ಪರಿಗಣನೆಯ ಪಟ್ಟಿಯಲ್ಲಿ ವೀರಶೈವರನ್ನು ಶೂದ್ರಗೋಷ್ಠಿಗೆ ಸೇರಿಸಿದರು. ಆಗ ಶ್ರೀವೀರಸಂಗಪ್ಪ, ಪಿ. ಆರ್. ಪ್ರಭೃತಿಗಳು ಅದನ್ನು ಪ್ರತಿಭಟಿಸಿ, ವೀರಶೈವರನ್ನು ಬ್ರಾಹ್ಮಣಾದರ್ಜೆಯಲ್ಲಿ ಸೇರಿಸಬೇಕೆಂದೂ, ಶೂದ್ರರ ಗುಂಪಿನಲ್ಲಿ ಸೇರಿಸಿರುವುದು ಅನ್ಯಾಯವೂ, ಅಶಾಸ್ತ್ರೀಯವೂ, ಅಪಮಾನಕರವೂ ಆಗಿದೆಯೆಂದೂ ವಾದಿಸಿದರು. ಈ ಪ್ರಸಂಗವಿವರಣೆಯನ್ನು ಸ್ವಾರ ಕರಸ್ಪಾಂಡೆನ್ಸಿನಲ್ಲಿ ವಾಚಕರು ಓದಿ ತಿಳಿಯಬಹುದು.

ಶ್ರೀ ವೀರಸಂಗಪ್ಪನವರು ಹೂಡಿದ ಈ ಧರ್ಮಯುದ್ಧದಲ್ಲಿ ವೀರಶೈವ ಸಮಾಜಪರವಾಗಿ ವಾಗ್ಯುದ್ಧ ಲೇಖನಯುದ್ಧ ಮಾಡಿದವರಲ್ಲಿ ವೇ|| ಪಿ ಆರ್ ರವರಿಗೆ ಸಮಾನರಾದವರು ಮತ್ತೊಬ್ಬರಿಲ್ಲ. ಆಗ ಶಾಸ್ತ್ರಿಗಳಿಗೆ ಒಳ್ಳೆಯ ತಾರುಣ್ಯ. ಆ ತಾರುಣ್ಯಕ್ಕೆ ನವಚೈತನ್ಯವನ್ನುಂಟು ಮಾಡುವ ಸಮಾಜ ಸೇವೆಯನ್ನು ಮಾಡಬೇಕೆಂಬ ಉತ್ಸಾಹ. ಉತ್ಸಾಹಕ್ಕೆ ತಕ್ಕ ಬುದ್ಧಿಶಕ್ತಿ. ಆ ಬುದ್ಧಿಶಕ್ತಿಗೆ ತಕ್ಕ ಅದ್ಭುತ ಪಾಂಡಿತ್ಯ. ಆ ಪಾಂಡಿತ್ಯಕ್ಕೆ ತಕ್ಕ ಧೈರ್ಯಸ್ಥೈರ್ಯಸಾಹಸಗಳು. ಈ ಪರಿಯ ವೀರಗುಣಗಳಿಂದ ಯುಕ್ತರಾದ ಆ ವೀರಶೈವ ವೀರಪಂಡಿತರ ವೀರ ಲೇಖಣಿಯಿಂದ ಹೊರಬಿಪ್ಪ ಸಾರವತ್ತಾದ ಆ ಲೇಖನಗಳು ಹ್ಯಾಗೆ ಪರವಾದಿ ಜನ ಹೃಚ್ಛಲ್ಯಗಳಾಗಿದ್ದವೆಂಬುದನ್ನು ಸ್ಟಾರ್ ಕರೆಸ್ ಪಾಂಡೆನ್ಸಿನಲ್ಲಿ ಓದಿ ತಿಳಿಯಬಹುದು.

ಆಗಿನ ಧರ್ಮ ಯುದ್ಧವನ್ನು ಕುರುಕ್ಷೇತ್ರ ಯುದ್ಧ ಪ್ರಸಂಗಕ್ಕೆ ಹೋಲಿಸಿದರೆ ವೀರಶೈವರನ್ನೇ ಪಾಂಡವರೆಂದೂ, ಪ್ರತಿವಾದಿಗಳನ್ನೇ ಕೌರವರೆಂದೂ, ವೀರಸಂಗಪ್ಪನವರನ್ನೇ ಶ್ರೀ ಕೃಷ್ಣನೆಂದೂ, ಪಿ. ಆರ್. ಶಾಸ್ತ್ರಿಗಳನ್ನೇ ಗಾಂಡೀವಿಯೆಂದೂ ಭಾವಿಸಬಹುದು.

ಮುಖ್ಯವಾಗಿ ಆ ಸಮಯದಲ್ಲಾದಂತೆ ಧರ್ಮಕ್ರಾಂತಿಯೂ ಸಮಾಜ ಚಳವಳಿಯೂ ಶ್ರೀ ಬಸವೇಶ್ವರನ ಕಾಲದಿಂದೀಚೆಗೆ ವೀರಶೈವ ಸಮಾಜದಲ್ಲಿ ಆಗಿಯೇ ಇಲ್ಲವೆಂದು ಹೇಳಬಹುದು.

೧೯೦೧ ರಲ್ಲಿ ಮೈಸೂರ ಸೆನ್ಸಸ್ ಇಲಾಖೆಯವರೂ, ೧೯೦೪ ರಲ್ಲಿ ಇಂಡಿಯಾ ಯತ್ನಾಗ್ರ. ಫಿ ಯವರೂ ವೀರಶೈವ ಸಮಾಜದ ವಿಷಯವಾಗಿ ಪಟ್ಟ ದುರಭಿಪ್ರಾಯ ಗರ್ಭಿತವಾದ ಪ್ರಶ್ನೆಗಳಿಗೆ ಶ್ರೀ ಶಾಸ್ತ್ರಿಗಳು ಎಂತಹ ಶಾಸ್ತ್ರೀಯವೂ ಯುಕ್ತಿ ಯುಕ್ತವೂ ಆದ ಪ್ರಶ್ನೆಗಳನ್ನೂ ಕೊಟ್ಟಿರುವರೆಂಬುದನ್ನೂ ವೇ|| ಆಸ್ಥಾನ ವಿದ್ವಾನ ಶಿರ್ಶಿ ಗುರುಶಾಂತ ಶಾಸ್ತ್ರಿಗಳು ಪರಿಗ್ರಹಿಸಿ ಪ್ರಕಟಿಸಿರತಕ್ಕ 'ಉಪನ್ಯಾಸ' ಸಂಗ್ರಹ ಎಂಬ ಗ್ರಂಥದಲ್ಲಿ ತಿಳಿಯಬಹುದು. ಈ ರೀತಿಯಲ್ಲಿ ಶಾಸ್ತ್ರಿಗಳ ಧಾರ್ಮಿಕ ಸೇವೆಯು ವೀರ ಸಂಗಪ್ಪನವರ ಕಾಲದಿಂದ ಇಲ್ಲಿಯ ವರೆಗೆ ನಡೆದ ಪ್ರತಿಯೊಂದು ಧಾರ್ಮಿಕ ವಿಷಯದಲ್ಲಿಯೂ ಸಮಾಜಕ್ಕೆ ಹೇಗೆ ಉಪಕಾರ ಮಾಡಿರುವರೆಂಬುದು ಇದರಿಂದ ತಿಳಿಯುತ್ತದೆ.

ಮುಡುಕುತೊರೆ ಸಭೆ:— ವೇ|| ಪಿ. ಆರ್. ಶಾಸ್ತ್ರಿಗಳ ಶಕ್ತಿಯು ವಿಶಾಲ ವ್ಯಾಪ್ತಿಯುಳ್ಳದ್ದು. ಇವರು ಸಮಾಜದಲ್ಲಿ ಧರ್ಮಜಾಗ್ರತೆಯಾಗುವ ಸಲುವಾಗಿ ನಾನಾ ಚಳವಳಿ ಮಾಡಿರುವರು. ಈ ಉದ್ದೇಶದಿಂದಲೇ ಮೈಸೂರು ಜಿಲ್ಲೆಗೆ ಸೇರಿದ ಮುಡುಕುತೊರೆ ಎಂಬ ನಗರದಲ್ಲಿ ೧೯೦೪ ರಲ್ಲಿ 'ಶ್ರೀ ವೀರಶೈವಮತ ಸಂವರ್ಧಿನೀ ಸಭಾ' ಎಂಬ ಹೆಸರಿನಿಂದ ಒಂದು ದೊಡ್ಡ ಸಂಘವನ್ನು ಸ್ಥಾಪಿಸಿದರು. ಅದಕ್ಕೆ ಈ ಶಾಸ್ತ್ರಿಗಳೇ ಆಜೀವ ಸಭಾಧ್ಯಕ್ಷರಾಗಿರುವರು. ಆ ಸಭೆಯು ಪ್ರತಿವರ್ಷವೂ ಸೇರಿ ವೀರಶೈವ ಸಮಾಜದ ಹಿತಚಿಂತನೆ ಮಾಡಿ ಹಲವು ಸಮಾಜ ಕಾರ್ಯಗಳನ್ನು ಮಾಡುತ್ತಿರುವುದು. ಈ ಸಭೆಯ ಉತ್ಪತ್ತಿಗೂ, ಇದರ ಚಿರಂಜೀವಿತ್ವಕ್ಕೂ ಬಹುಮಟ್ಟಿಗೆ ಶಾಸ್ತ್ರಿಗಳೇ ಕಾರಣಭೂತರು. ಈ ಸಭೆಯ ಪರಿಚಯವನ್ನು ಮಾಡಿಕೊಡಲು ನಾವು ಬೇರೊಂದು ಲೇಖನವನ್ನೇ ಬರೆಯಬೇಕಾದೀತು. ಆದುದರಿಂದ ಈ ಸಭೆಯ ವಾರ್ಷಿಕ ವರದಿಗಳಿಂದಲೂ, ನಾವು ಹಿಂದೆ ಸೂಚಿಸಿದ 'ಉಪನ್ಯಾಸ ಸಂಗ್ರಹ' ದಿಂದಲೂ ಈ ಸಭೆಯ ವಿಷಯವನ್ನು ವಾಚಕರು ತಿಳಿಯಬಹುದು. ವೀರಶೈವ ಮಹಾಸಭೆ ನಿಂತರೂ ಈ ಮುಡುಕುತೊರೆಯ ಸಭೆ ಮಾತ್ರ ಇಂದಿಗೂ ನಿರ್ವಿಘ್ನವಾಗಿ ನಡೆದು ಸಮಾಜ ಸೇವೆಯನ್ನು ಯಥಾಮತಿ ಮಾಡುತ್ತಲೇ ಇದೆ.

ಭಾಷೋಜ್ಜೀವಿನೀ ಪಾಠಶಾಲೆ:— ಇದರ ಉತ್ಪಾದಕರೂ ಅಧ್ಯಾಪಕರೂ ನಮ್ಮ ಲೇಖನ ನಾಯಕರೇ. ಇದರಲ್ಲಿಯೇ ಪ್ರಸಿದ್ಧರಾದ ಕೈ. ಎನ್. ಆರ್. ಕರಿಬಸವ ಶಾಸ್ತ್ರಿ ಕೈ. ಯಂ. ಬಸವಲಿಂಗ ಶಾಸ್ತ್ರಿ ಮೊದಲಾದ ವೀರಶೈವ ಪಂಡಿತರು ತಯಾರಾದುದು. ಇಷ್ಟು ಮಾತ್ರದಿಂದಲೇ ಈ ಶ್ರೇಷ್ಠ ಪಾಠಶಾಲೆಯ ಯೋಗ್ಯತೆಯನ್ನು ತಿಳಿಯಬಹುದು.

ವೀರಶೈವಮತ ಪ್ರಕಾಶಿಕಾ:— ಧರ್ಮಯುದ್ಧವಾದನಂತರ ಯಜಮಾನ ವೀರಸಂಗಪ್ಪನವರಿಗೂ ಪಿ. ಆರ್. ಕರಿಬಸವ ಶಾಸ್ತ್ರಿಗಳಿಗೂ ಕೆಲವು ವಿಷಯಗಳಲ್ಲಿ ಭಿನ್ನಾಭಿಪ್ರಾಯ ಬಂದಂತೆ ತೋರುತ್ತದೆ. ಆದುದರಿಂದ ಶಾಸ್ತ್ರಿಗಳು ತಾವು ಸ್ವತಂತ್ರರಾಗಿಯೇ ಮತಸೇವೆ ಹಾಗೂ ಸಾಹಿತ್ಯ ಸೇವೆಮಾಡಲು ತೊಡಗಿದರು. ಯಜಮಾನ ವೀರಸಂಗಪ್ಪನವರು ಸಮಾಜಸೇವೆಗಾಗಿ 'ಮೈಸೂರ ಸ್ಟಾರ್' ಎಂಬ ವಾರಪತ್ರಿಕೆಯನ್ನು ಹೊಗಡಿಸಿದ್ದರು. ಅದಕ್ಕೆ ಮುಖ್ಯ ಲೇಖಕರಾಗಿ ಆ ಪತ್ರಿಕೆಯ ಗೌರವವನ್ನು ಹೆಚ್ಚಿ

ಸಿದ ಕೀರ್ತಿ ಮೊಟ್ಟಮೊದಲು ಪಿ. ಆರ್. ರವರಿಗೆ. ಅನಂತರ ಇವರ ಮುಖ್ಯ ಶಿಷ್ಯರೂ ಲೇಖನಚತುರರೂ ಆದ ಕೈ॥ ಎಸ್. ಆರ್ ಕರಿಬಸವ ಶಾಸ್ತ್ರಿಗಳವರಿಗೆ ಸಲ್ಲತಕ್ಕದ್ದು.

ಶಾಸ್ತ್ರಿಗಳಿಗೆ ಮತಗ್ರಂಥಗಳನ್ನೂ ಸಾಹಿತ್ಯ ಗ್ರಂಥಗಳನ್ನೂ ಪ್ರಕಟಸಬೇಕೆಂಬ ಇಚ್ಛೆಯು ಪೂರ್ಣವಾಗಿದ್ದಿತು. ಅದಕ್ಕಾಗಿ ತಾವು ಶಂಕರ ವಿಲಾಸ ಮುದ್ರಣಾಲಯವೆಂಬ ಹೆಸರಿನಿಂದ ಒಂದು ಮುದ್ರಣಯಂತ್ರವನ್ನೂ ವೀರಶೈವಮತ ಪ್ರಕಾಶಿಕ ಎಂಬ ಒಂದು ಮಾಸಪತ್ರಿಕೆಯನ್ನೂ ಪ್ರಾರಂಭಿಸಿದರು. ಈ ಕೆಲಸದಲ್ಲಿ ಇವರಿಗೆ ಇವರ ಅಣ್ಣನವರ ಮಗ ಕೈ॥ ಪಿ. ವಿ. ರುದ್ರಪ್ಪನವರು ಬಹಳ ಸಹಾಯಕರಾಗಿದ್ದರು. ಅಲ್ಲದೆ ಮುದ್ರಣಾಲಯಕ್ಕೆ ಇವರೇ ಯಜಮಾನರಾಗಿದ್ದರು. ಏತಕ್ಕೆಂದರೆ ಶಾಸ್ತ್ರಿಗಳು ಕಾಲೇಜಿನ ಪ್ರಥಮ ಪಂಡಿತರಾಗಿದ್ದುದರಿಂದ ಆ ಕೆಲಸವನ್ನು ಮಾಡಿ ಮಿಕ್ಕ ಕಾಲದಲ್ಲಿ ಸಮಾಜ ಸಾಹಿತ್ಯಗಳ ಸೇವೆಯನ್ನು ಮಾಡಬೇಕಾಗಿದ್ದಿತು. ಈ ಪತ್ರಿಕೆಯು ಮೂರು ನಾಲ್ಕು ವರ್ಷ ನಡೆಯಿತು. ಇದರಲ್ಲಿ ಶ್ರೀ ಶಂಕರಾರಾಧ್ಯನೆಂಬ ವೀರಶೈವ ಪಂಡಿತನು ಸಂಸ್ಕೃತದಲ್ಲಿ ಅತ್ಯಂತ ರಮಣೀಯವಾಗಿ ರಚಿಸಿದ್ದ 'ಬಸವೇಶವಿಜಯಃ' ವೆಂಬ ಮಹಾಕಾವ್ಯವು ಕರ್ನಾಟಕ ಟಿಪ್ಪಣಿಯೊಡನೆ ಹೊರಬಿದ್ದಿತು. ಇದಲ್ಲದೆ ಈ ಮಾಸಪತ್ರಿಕೆಯಲ್ಲಿ ಹಲವು ಉಪಯುಕ್ತ ಲೇಖನಗಳೂ ಕವಿತೆಗಳೂ ಪ್ರಕಟವಾಗಿವೆ.

ಕೆಲವು ಮುಖ್ಯ ಸಂಗತಿ:—ಶಾಸ್ತ್ರಿಗಳ ಕೀರ್ತಿಯು ಎಲ್ಲೆಲ್ಲಿಯೂ ಹಬ್ಬಿತು. ಸಮಾಜ ಪ್ರಮುಖರೂ ಸ್ವಾಮಿಗಳೂ ಇವರನ್ನು ಗೌರವಿಸಹತ್ತಿದರು. ಒಮ್ಮೆ ದೇಶಪ್ರಸಿದ್ಧರಾದ ರಾವಬಹದ್ದೂರ ವಾರದ ಮಲ್ಲಪ್ಪನವರು ಶಾಸ್ತ್ರಿಗಳನ್ನು ಸೊಲ್ಲಾಪುರಕ್ಕೆ ಕರೆಸಿ ಇವರಿಂದ ಹಲವು ಮತ ವಿಷಯಗಳನ್ನು ಕೇಳಿ ಸಂತುಷ್ಟರಾಗಿ ವಿಪುಲ ಧನದಿಂದಲೂ ಶಾಲು ಜೋಡಿಯಿಂದಲೂ ಶಾಸ್ತ್ರಿಗಳನ್ನು ಗೌರವಿಸಿ ಕಳಿಸಿದರು.

ಮೈಸೂರು ಸರಕಾರದ ಪರ್ಯಗ್ರಂಥ ಸಮಿತಿಯಲ್ಲಿ ಇವರು ಕೆಲವು ವರ್ಷ ಸದಸ್ಯರಾಗಿದ್ದರು. ಇದರಿಂದ ವೀರಶೈವ ಸಾಹಿತ್ಯ ಗ್ರಂಥಗಳನ್ನು ದೊಡ್ಡದೊಂದು ಪರೀಕ್ಷೆಗಳಿಗೆ ನಿಯಮಿಸುವಂತೆ ಸಲಹೆಕೊಟ್ಟು ಶಾಸ್ತ್ರಿಗಳು ಯಥಾಶಕ್ತಿ ಸಮಾಜಕ್ಕೆ ಸಹಾಯ ಮಾಡಲು ಅನುಕೂಲವಾಯಿತು.

ಸಾಹಿತ್ಯಸೇವೆಮಾಡಬೇಕೆಂಬ ಉತ್ಕಟೇಚ್ಛೆಯಿಂದ ಶಾಸ್ತ್ರಿಗಳು ಹಲವು ತಾಡವೋಲೆಯ ಗ್ರಂಥಗಳನ್ನು ಸಂಗ್ರಹಿಸಿದರು. ಕೆಲವನ್ನು ಪ್ರಕಟಿಸಿದರು. ಮತ್ತೆ ಕೆಲವುಗಳನ್ನು ಮೈಸೂರು ಪ್ರಾಚೀನ ಗ್ರಂಥ ಭಂಡಾರಕ್ಕೆ ಬರೆಸಿಕೊಟ್ಟರು. ಕನ್ನಡ ಕವಿಚರಿತ್ರೆಗೂ ಶಾಸ್ತ್ರಿಗಳಲ್ಲಿದ್ದ ಹಲವು ಪ್ರಾಚೀನ ಗ್ರಂಥಗಳು ಸಹಾಯ ಮಾಡಿದವು. ಗುರುಗಳ ಮೇಲ್ಪಂಕ್ತಿಯನ್ನನುಸರಿಸಿ ವೇ॥ ಎನ್. ಆರ್. ಕರಿಬಸವ ಶಾಸ್ತ್ರಿ ವೇ॥ ಯಂ. ಬಸವಲಿಂಗ ಶಾಸ್ತ್ರಿ ಪ್ರಭೃತಿಗಳು ತಾವೂ ಕೆಲವು ಗ್ರಂಥಗಳನ್ನು ಪರಿಷ್ಕರಿಸಿ ಪ್ರಕಟಿಸಿ ಕೀರ್ತಿಶೇಷರಾದರು.

ತೀರ್ಥಪ್ರಸಂಗಃ— ವೇ॥ ಪಿ. ಆರ್. ಶಾಸ್ತ್ರಿಗಳು ಒಂದು ರೀತಿಯಿಂದ ಸಮಾಜ ಸುಧಾರಕರೆಂದು ಹೇಳಬಹುದು. ಇಂಗ್ಲೀಷನ್ನು ಕಲಿಯದಿದ್ದರೆ, ವೈಮರ್ಶಿಕ ಶಕ್ತಿಯೂ, ಸುಧಾರಣಾಭಿಮಾನವೂ ಬರಲಾರದೆಂದು ವಾದಿಸುವ ಭಂಟರು ಈ ಶಾಸ್ತ್ರಿಗಳ ಚರಿತ್ರೆಯನ್ನು ಓದಿ ತಮ್ಮ ಭ್ರಾಂತಿಯನ್ನು ಕಳೆದುಕೊಳ್ಳಬಹುದು.

ಈಗ ವೀರಶೈವ ಸಮಾಜದಲ್ಲಿ ರೂಢಿಯಲ್ಲಿರುವ ಹಲವು ಆಚಾರ ವಿಚಾರಗಳನ್ನು ಶಾಸ್ತ್ರಿಗಳು ಸಾಧಾರ ಪೂರ್ವಕವಾಗಿ ಖಂಡಿಸುವರು. ಅಂತಹ ವಿಷಯಗಳಲ್ಲಿ ಪಾದತೀರ್ಥ ಪ್ರಸಂಗವೊಂದು.

ವೀರಶೈವರಲ್ಲಿ ಗುರುಜಂಗಮ ಪಾದ ತೀರ್ಥವನ್ನು ಸ್ವೇಷ್ಟಲಿಂಗದ ಮೇಲೆ ಅಭಿಷೇಕಿಸಿ ಸ್ವೀಕರಿಸುವ ರೂಢಿಯು ಎಲ್ಲೆಲ್ಲಿಯೂ ಇದೆಯಷ್ಟೆ? ಈ ಪದ್ಧತಿಯು ಅಶಾಸ್ತ್ರೀಯವೆಂದು ಈ ಶಾಸ್ತ್ರಿಗಳು ಖಂಡಿಸಿ ಈ ಬಗ್ಗೆ ೩೭ ಪ್ರಶ್ನೆಗಳನ್ನು ಹೊರಡಿಸಿರುವರು. ಈ ಪ್ರಶ್ನೆಗಳು ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಅಚ್ಚಾಗಿ ಪ್ರಕಟವಾಗಿವೆ.

ಈ ವಿಷಯವು ಸದ್ಯಃ ವಾದಗ್ರಸ್ತವಾಗಿದೆ. ಕೆಲವರು ಶಾಸ್ತ್ರಿಗಳ ಅಭಿಪ್ರಾಯವನ್ನೇ ಸಮರ್ಥಿಸುವರು. ಮತ್ತೆ ಕೆಲವರು ಈಗಿನ ರೂಢಿಯೇ ಶಾಸ್ತ್ರೀಯವೆಂದು ಪ್ರತಿಪಾದಿಸುವರು. ಈ ಬಗೆಯ ಎಷ್ಟೋ ವಿಷಯಗಳು ಅನಿರ್ಣಯವಾಗಿ ವಾದ ವಿಷಯಗಳಾಗಿಬಿಟ್ಟವೆ. ಆದುದರಿಂದ ಈ ವಿಷಯವನ್ನು ನಾವು ಮತ್ತೊಂದು ಪ್ರತ್ಯೇಕವಾದ ಲೇಖನದಲ್ಲಿ ಸೂಚಿಸಿ ಆವಶ್ಯವಿದ್ದರೆ ಶಾಸ್ತ್ರಿಗಳ ಪ್ರಶ್ನೆಗಳನ್ನು ವೀರಶೈವ ಪಂಡಿತರ ಅವಗಾಹನೆಗಾಗಿ ಪ್ರಕಟಿಸಬೇಕೆಂದಿರುವೆವು. ಈ ಪಾದ ತೀರ್ಥ ಪ್ರಸಂಗದಿಂದ

ಶಾಸ್ತ್ರಿಗಳ ವಿಷಯದಲ್ಲಿ ಹಲವರಿಗೆ ದುರಭಿಪ್ರಾಯವುಂಟಾಗಿದೆಯೆಂದು ತೋರುತ್ತದೆ. ಮತ್ತೆ ಕೆಲವರು ಇದರಿಂದಲೇ ಇವರನ್ನು ಹೊಗಳುತ್ತಲೂ ಇರುವರು. ಈ ವಿಷಯದಲ್ಲಿ ವಾಚಕರು ಚಕಿತರಾಗಬಹುದು. ಪಾದತೀರ್ಥವನ್ನು ಸ್ವೀಕರಿಸಬಾರದೆಂದು ಶಾಸ್ತ್ರಿಗಳ ಅಂಬೋಣವಿಲ್ಲ ಅದನ್ನು ಲಿಂಗಾಭಿಷೇಕವಮಾಡದೆ ಲಿಂಗಕ್ಕೆ ನೈವೇದ್ಯಮಾಡಿ ಸ್ವೀಕರಿಸುವುದೇ ಶಾಸ್ತ್ರೀಯವೆಂಬುದು ಇವರ ಅಭಿಮತವು. ಇದು ವಾದಗ್ರಸ್ತವಾದುದರಿಂದ ಇದನ್ನು ಇಲ್ಲಿಯೇ ವಿರಮಿಸಿ ಮುಂದಿನ ವಿಷಯಗಳ ಕಡೆಗೆ ಹೊರಳುವ.

ಸಾಹಿತ್ಯಸೇವೆಃ— ವೇ|| ಪಿ ಆರ್ ಕರಿಬಸವ ಶಾಸ್ತ್ರಿಗಳ ಅಪಾರ ಪಾಂಡಿತ್ಯಕ್ಕೆ ಅವರ ಸಾಹಿತ್ಯಸೇವೆಯೇ ಸಾಕ್ಷಿಯಾಗಿದೆ. ಇವರು ತಮ್ಮ ಜೀವಿತದಲ್ಲಿ ಗ್ರಂಥಪ್ರಚಾರಕ್ಕೆ ಎಷ್ಟುಮಟ್ಟಿಗೆ ದುಡಿದಿರುವರೆಂಬುದನ್ನು ನೋಡಿದರೆ ಎಂತಹ ಶೂರ ಪಂಡಿತನಿಗಾದರೂ ಆಶ್ಚರ್ಯವಾಗುವಂತಿದೆ. ಶಾಸ್ತ್ರಿಗಳು ಪರಿಷ್ಕರಿಸಿದ ಹಾಗೂ ಪ್ರಕಟಿಸಿದ ಗ್ರಂಥಗಳ ಪಟ್ಟಿಯನ್ನು ನನಗೆ ತಿಳಿದಮಟ್ಟಿಗೆ ಮುಂದೆ ಸಂಗ್ರಹಿಸಿಕೊಟ್ಟಿರುವೆನು.

೧. ಕ್ರಿಯಾಸಾರಃ— ನೀಲಕಂಠ ಶಿವಾಚಾರ್ಯನ ವೀರಶೈವ ಭಾಷ್ಯವನ್ನು ಸಂಗ್ರಹಿಸಿ ಅದಕ್ಕೆ ಕಾರಿಕಾರೂಪವಾಗಿ ನೀಲಕಂಠಾರ್ಯನೆಂಬ ಓರ್ವ ಪ್ರಾಚೀನ ಪಂಡಿತನು ಈ ಗ್ರಂಥವನ್ನು ಬರೆದನು. ಇದು ವೀರಶೈವರಿಗೆ ಪ್ರಾಚೀನವೂ ಉದ್ದಾಮವೂ ಆದ ಗ್ರಂಥ. ಇದನ್ನು ಪ್ರಚಾರ ಮಾಡಿದವರು ವೀರಸಂಗಪ್ಪನವರು. ತಿದ್ದಿದವರು ಪಿ. ಆರ್. ಶಾಸ್ತ್ರಿಗಳು.

೨. ಸಿದ್ಧಾಂತ ಶಿಖಾಮಣಿಃ— ಇದಂತೂ ಎಲ್ಲರಿಗೂ ಪರಿಚಯವಾದ ಪ್ರಾಚೀನಗ್ರಂಥ. ಇದನ್ನು ಮೊದಲು ಪ್ರಕಟಿಸಿದವರು ವೀರಸಂಗಪ್ಪನವರು. ಪರಿಷ್ಕರಿಸಿದವರು ಪಿ. ಆರ್. ಶಾಸ್ತ್ರಿಗಳು.

೩. ದೀಕ್ಷಾವಿಧಿಃ— ಬಸವಶಿವಾಚಾರ್ಯಕೃತ. ಪ್ರಕಾಶಕರು ವೀರಸಂಗಪ್ಪನವರು. ಪರಿಷ್ಕರಿಸಿದವರು ಪಿ. ಆರ್. ರವರು.

೪. ಮಾಚಿದೇವ ಮನೋವಿಲಾಸಃ— ಬಸವಲಿಂಗ ಶಿವಯೋಗಿ ಕೃತ. ಪ್ರಕಾಶಕರು ವೀರಸಂಗಪ್ಪನವರು. ಪರಿಷ್ಕರಿಸಿದವರು ಪಿ. ಆರ್ ರವರು.

೫. ಲಿಂಗಧಾರಣ ಚಂದ್ರಿಕಾ:— ನಂದಿಕೇಶ್ವರ ಶಿವಾಚಾರ್ಯಕೃತ ಇದನ್ನು ಮೊದಲು ಕನ್ನಡದಲ್ಲಿ ಪ್ರಕಟಿಸಿದವರು (ಕನ್ನಡ ಲಿಪಿಯಲ್ಲಿ) ವೀರಸಂಗಪ್ಪನವರು. ಅದನ್ನು ತಿದ್ದಿ ಕೊಟ್ಟವರು ಪಿ. ಆರ್. ಶಾಸ್ತ್ರಿಗಳು.

೬. ಅನುಭವಸೂತ್ರ:— ಮಾಯಿದೇವಕೃತ. ವೀರಸಂಗಪ್ಪನವರು ಪ್ರಕಟಿಸಿದರು. ಪಿ. ಆರ್. ರವರು ತಿದ್ದಿದರು.

೭. ವಿವಾಹ ವಿಧಿ:— ಪ್ರಕಾಶಕರು ವೀರಸಂಗಪ್ಪನವರು. ಪರಿಷ್ಕರಿಸಿದವರು ಪಿ ಆರ್. ಶಾಸ್ತ್ರಿಗಳು.

೮. ವೀರಶೈವೋತ್ಕರ್ಷ ಸಂಗ್ರಹ:— ಇದನ್ನು ಸಂಸ್ಕೃತದಲ್ಲಿ ಪ್ರಾಚೀನ ಗ್ರಂಥಗಳ ಉದಾಹರಣಾ ಪೂರ್ವಕ ವೇ॥ ಪಿ ಆರ್. ಶಾಸ್ತ್ರಿಗಳೇ ಬರೆದರು. ವೀರಸಂಗಪ್ಪನವರೇ ಪ್ರಕಟಿಸಿದರು. ಇದೂ ಮೇಲಿನ ಗ್ರಂಥಗಳ ಹಾಗೆ ಸಂಸ್ಕೃತ ಗ್ರಂಥವೇ.

೯. ಸ್ಟಾರ್ ಕರಸ್ ಪಾಂಡೆನ್ಸ್:— ವೀರಶೈವ ಮತ ವಿಷಯವನ್ನು ತಿಳಿಯತಕ್ಕವರಿಗೆ ಈ ಗ್ರಂಥವು ಅತ್ಯವಶ್ಯಕ. ಇದರಲ್ಲಿ ಎರಡು ಭಾಗಗಳಿವೆ. ಮೊದಲನೇ ಭಾಗವು ಪಿ. ಆರ್. ರವರು ಬರೆದುದೆಂದೂ ಎರಡನೇ ಭಾಗವು ವೀರಸಂಗಪ್ಪನವರು ಬರೆದುದೆಂದೂ ತಿಳಿದು ಬಂದಿದೆ.

೧೦. ಸಂಸ್ಕೃತ ಬಸವೇಶ ವಿಜಯ:— ಶಂಕರಾರಾಧ್ಯಕೃತ. ಇದನ್ನು ಶಾಸ್ತ್ರಿಗಳು ತಮ್ಮ ಮಾಸ ಪತ್ರಿಕೆಯಲ್ಲಿ ಪ್ರಕಟಿಸಿದರು. ಇದನ್ನು ಇವರ ಹೊರತು ಇದುವರೆಗೆ ಮತ್ತಾರೂ ಪ್ರಕಟಿಸಿಲ್ಲ.

೧೧. ಕನ್ನಡ ಬಸವೇಶ ವಿಜಯ:— ಇದು ಸಂಸ್ಕೃತ ಬಸವೇಶ ವಿಜಯದ ಕನ್ನಡ ಗದ್ಯಾನುವಾದ ಬರೆದವರು ಪಿ. ಆರ್ ಶಾಸ್ತ್ರಿಗಳೇ ಇದರಲ್ಲಿ ಗ್ರಂಥಕಾರರ ಗದ್ಯರಚನಾ ನೈಪುಣ್ಯವನ್ನು ಕಾಣಬಹುದು.

೧೨. ಕನ್ನಡ ಮಹಾಭಾರತ:— ಕುಮಾರ ವ್ಯಾಸಕೃತ. ದಶಪರ್ವ ಭಾರತವನ್ನು ಶಾಸ್ತ್ರಿಗಳು ತಿದ್ದಿ ಪ್ರಕಟಿಸಿರುವರು.

೧೩. ಸಟೀಕಾಜೈಮಿನಿ:— ಲಕ್ಷ್ಮೀಶ ಕವಿಕೃತ ಜೈಮಿನಿಭಾರತಕ್ಕೆ ೧ ರಿಂದ ೧೭ ಸಂಧಿಪೂರ್ಣವಾಗಿ ಟೀಕಾ ಬರೆದಿರುವರು. ಇದು ವಿದ್ಯಾರ್ಥಿಗಳಿಗೂ, ಗ್ರಂಥಾಭ್ಯಾಸಿಗಳಿಗೂ, ಬಹಳ ಅನುಕೂಲವಾದುದು. ಶಾಸ್ತ್ರಿಗಳ ಪಾಂಡಿತ್ಯಕ್ಕೆ ಇದು ಒರೆಗಲ್ಲೆಂದು ಹೇಳಬಹುದು.

೧೪. ಕನ್ನಡ ಜೈಮಿನಿಭಾರತಃ— ಲಕ್ಷ್ಮೀಶ ಕವಿಕೃತಃ— ಅನೇಕರು ಈ ಗ್ರಂಥವನ್ನು ತಿದ್ದಿ ಮುದ್ರಿಸಿದ್ದರೂ ಈ ಶಾಸ್ತ್ರಿಗಳು ಪರಿಷ್ಕರಿಸಿ ಪ್ರಕಟಿಸಿರುವುದಕ್ಕಿರುವಷ್ಟು ಗೌರವವು ಮತ್ತಾರದಕ್ಕೂ ಇಲ್ಲ.

೧೫. ರಾಜಶೇಖರ ವಿಳಾಸ:— ಷಡಕ್ಷರದೇವಕೃತ. ಇದನ್ನು ಉತ್ತಮವಾಗಿ ತಿದ್ದಿ ಮುದ್ರಿಸಿದ ಮಹನೀಯರು ಇವರೇ.

೧೬. ಶಬರಶಂಕರ ವಿಳಾಸ:— ಇದೂ ಷಡಕ್ಷರೀಕೃತ. ಇದನ್ನು ಶಾಸ್ತ್ರಿಗಳು ಉತ್ತಮವಾಗಿ ತಿದ್ದಿ ಮುದ್ರಿಸಿ ಪ್ರಕಟಿಸಿರುವರು.

೧೭. ಭಕ್ತಾಧಿಕ್ಯ ರತ್ನಾವಳಿಃ— ಇದು ಷಡಕ್ಷರಿದೇವನ ಸಂಸ್ಕೃತ ಗ್ರಂಥ. ಇದನ್ನು ಕನ್ನಡಟೀಕೆಯೊಂದಿಗೆ ಪ್ರಕಟಿಸಿರುವರು ಇದರಲ್ಲಿ ಕವಿಯ ಸಂಸ್ಕೃತ ನೈಪುಣ್ಯವನ್ನು ಕಾಣಬಹುದು.

೧೮. ದಶಗ್ರಂಥಃ—ವಿಶ್ವನಾಥಾಚಾರ್ಯಕೃತ ವೀರಣಾರಾಧ್ಯಕೃತ ಶಿವಜ್ಞಾನ ಪ್ರದೀಪಿಕಾನಾಮ ಟೀಕಾಸಹಿತ ಪ್ರಕಟಿಸಿರುವರು. ಪಿ. ಆರ್ ಶಾಸ್ತ್ರಿಗಳು.

೧೯ ಅನುಭವಸಾರಃ—ಶಿವಯೋಗಿ ನಿಜಗುಣಕೃತ ಇದಕ್ಕೆ ಶಾಸ್ತ್ರಿಗಳು ಕನ್ನಡ ಟಿಪ್ಪಣವನ್ನು ಬರೆದಿರುವರು ಪ್ರಕಾಶಕರು ರೆವರೆಂಡ್ ಥಾಂರ್ಸನವರು.

೨೦. ವ್ಯಾಸೋಕ್ತ ಬಸವ ಪುರಾಣ:— ಮಹರ್ಷಿವ್ಯಾಸಕೃತವೆಂದು ವಿಖ್ಯಾತವಾದೀ ಕಾವ್ಯವನ್ನು ವೇ॥ ಪಿ. ಆರ್. ರವರು ಮೊಟ್ಟಮೊದಲು ಕನ್ನಡ ಲಿಪಿಯಲ್ಲಿ ಪ್ರಕಟಿಸಿದರು. ಅನಂತರ ರಾ. ಬ. ಪಾರದವರು ಮರಾಠಿಯಲ್ಲಿ ಛಾಪಿಸಿರುವರು.

೨೧ ಶಿವಾದ್ವೈತಮಂಜರಿಃ—ಸ್ವಪ್ರಭಾನಂದ ಪಂಡಿತಕೃತ ಇದನ್ನು ಶಾಸ್ತ್ರಿಗಳು ಪ್ರಕಟಿಸಿರುವರು. ಇದನ್ನೂ ಪಾರದವರು ಮರಾಠಿ ಲಿಪಿಯಲ್ಲಿ ಮುದ್ರಿಸಿರುವರು.

೨೨ ಸಿದ್ಧೇಶ್ವರ ಪುರಾಣಃ— ಮರಿತೋಂಟದಾರ್ಯಕೃತ ಕನ್ನಡ ಷಟ್ಪದೀಗ್ರಂಥ ಇದನ್ನು ಪ್ರಕಟಿಸಿದವರು. ಈ ಪಂಡಿತೋತ್ತಮರೇ.

೨೩. ಪ್ರಹ್ಲಾದ ಚರಿತ್ರೆ:—ನರಹರಿದೇವಕೃತ ಕನ್ನಡ ಷಟ್ಪದೀ ಕಾವ್ಯ ಇದನ್ನು ತಿದ್ದಿ ಪ್ರಕಟಿಸಿರುವರು. ಈ ನಮ್ಮ ಶಾಸ್ತ್ರಿಗಳೇ.

೨೪ ವೀರಶೈವ ಪ್ರದೀಪಿಕಾ:—ಮರಿತೋಂಟದಾರ್ಯಕೃತ ಇದನ್ನು ತಿದ್ದಿ ಮುದ್ರಿಸಿ ಪ್ರಕಟಿಸಿದವರು ಈ ಪಂಡಿತ ಶ್ರೇಷ್ಠರೇ.

೨೫. ನಳಚರಿತ್ರೆ:—ಕನಕದಾಸಕೃತ ಕನ್ನಡ ಷಟ್ಪದೀಕಾವ್ಯ ಇದನ್ನು ಶಾಸ್ತ್ರಿಗಳು ಚನ್ನಾಗಿ ಪರಿಷ್ಕರಿಸಿ ಮೂಲವನ್ನೂ ಗ್ರಂಥಕ್ಕೆ ಟೀಕೆ ಬರೆದು ಸಟೀಕವನ್ನೂ ಪ್ರಕಟಿಸಿರುವರು.

೨೬. ಶಿವಭಕ್ತಿಸಾರ:—ಶಿವರಾಮ ಕವಿಕೃತ ಕನಕದಾಸನ ಹರಿಭಕ್ತಿ ಸಾರದಂತೆಯೇ ಈ ಶಿವಭಕ್ತಿಸಾರವೂ ಕನ್ನಡ ನಾಡಿನಲ್ಲಿ ಬಹಳ ಪ್ರಚಾರದಲ್ಲಿದೆ. ಇದನ್ನು ಶಾಸ್ತ್ರಿಗಳು ತಿದ್ದಿ ಟೀಕೆಯೊಂದಿಗೆ ಮುದ್ರಿಸಿರುವರು.

೨೭. ನಯುಶತಕ: — ಮೈಸೂರು ಯುವರಾಜರ ಮದುವೆಯ ಜ್ಞಾಪಕಾರ್ಥವಾಗಿ ವೇ॥ ಪಿ. ಆರ್ ರವರಿಂದ ಬರೆದ ಒಂದು ನೀತಿಶತಕ ಶಾಸ್ತ್ರಿಗಳ ಕವನ ನೈಪುಣ್ಯವನ್ನು ಇದರಲ್ಲಿ ಕಾಣಬಹುದು.

೨೮ ತ್ರಿಕಾಂಡ ಅಮರಕೋಶ:—ಇದನ್ನು ಚನ್ನಾಗಿ ತಿದ್ದಿ ವಿದ್ಯಾರ್ಥಿಗಳಿಗಾಗಿ ಕನ್ನಡ ಲಿಪಿಯಲ್ಲಿ ಪ್ರಕಟಿಸಿರುವರು.

೨೯. ಸಚಿತ್ರ ಕರ್ನಾಟಕ ಬಾಲಬೋಧೆ:—ಇದನ್ನು ಕನ್ನಡ ಭಾಷೆಯನ್ನು ಕಲಿಯುವ ಸಣ್ಣಮಕ್ಕಳಿಗಾಗಿ ಬರೆದಿರುವರು. ಸರಕಾರದವರು ಇದನ್ನು ಬಾಲಶಾಲೆಗಳಿಗಾಗಿ ನಿಯಮಿಸಿರುವರು.

೩೦. ಶಬ್ದರೂಪಾವಳಿ:—ಸಂಸ್ಕೃತವನ್ನು ಕಲಿಯುವ ವಿದ್ಯಾರ್ಥಿಗಳಿಗಾಗಿ ಸಂಸ್ಕೃತ ಶಬ್ದಗಳನ್ನು ಕನ್ನಡ ಲಿಪಿಯಲ್ಲಿ ಶುದ್ಧವಾಗಿ ಪ್ರಕಟಿಸಿರುವರು.

೩೧. ಶಿವಪೂಜಾವಿಧಿ:—ಇದನ್ನು ಮೊಟ್ಟ ಮೊದಲು ಪ್ರಕಟಿಸಿದವರು ವೇ॥ ಪಿ. ಆರ್. ಕರಿಬಸವ ಶಾಸ್ತ್ರಿಗಳೇ. ವೀರಸಂಗಪ್ಪನವರೂ. ಮದರಾಸ ನಿಂಗಪ್ಪಶೆಟ್ಟರೂ ಇದನ್ನೇ ತಾವೂ ಅಲ್ಪ ಸ್ವಲ್ಪ ವ್ಯತ್ಯಾಸ ಮಾಡಿ ಪ್ರಕಟಿಸಿದರು. ರಾ. ಬ. ವಾರದವರೂ ಇದನ್ನು ಸಂಗ್ರಹಿಸಿ ಮರಾಠಿ ಲಿಪಿಯಲ್ಲಿ ಪ್ರಕಟಿಸಿದರು.

೩೨. ಸಂಕ್ಷೇಪ ಶಿವಪೂಜಾವಿಧಿ:—ತಾವು ಮೊದಲು ಪ್ರಕಟಿಸಿದ್ದ ದೊಡ್ಡ ಶಿವಪೂಜಾವಿಧಿಯು ನಿತ್ಯಗಟ್ಟಲೆಗೆ ಅಸಾಧ್ಯವೆಂದು ತಿಳಿದು ಜನಸಾಮಾನ್ಯರ ಅನುಕೂಲಕ್ಕಾಗಿ ಇದನ್ನು ಪ್ರಕಟಿಸಿರುವರು.

೩೩. ಗಣಸಹಸ್ರ ನಾಮಾವಳೀ ಸ್ತೋತ್ರವು:— ಶಿವಪೂಜಾ ಕಾಲದಲ್ಲಿ ಪಾರಾಯಣಕ್ಕೆ ಅನುಕೂಲವಾಗಿರುವಂತೆ ಶಾಸ್ತ್ರಿಗಳು ಈ ಗ್ರಂಥವನ್ನು ಸಂಗ್ರಹಿಸಿರುವರು.

ಮೇಲಿನ ಗ್ರಂಥಗಳಲ್ಲದೆ ಮುಂದೆ ಹೇಳುವ ಗ್ರಂಥಗಳನ್ನು ಶಾಸ್ತ್ರಿಗಳು ಆ ಮೂಲಾಗ್ರವಾಗಿ ಪರಿಷ್ಕರಿಸಿಕೊಟ್ಟು ಆ ಗ್ರಂಥಕರ್ತರಿಗೆ ಸಹಾಯ ಮಾಡಿರುವರು.

೧. ರಾಮಾಯಣ ಸಂಗ್ರಹ.
೨. ಶೇಷರಾಮಾಯಣ.
೩. ದಮಯಂತೀ ಚರಿತ್ರೆ.
೪. ಘನಲಿಂಗಿಯ ವಚನ (ಮುಡುಕುತೊರೆ ಸಭೆಯ ಆಶ್ರಯದಲ್ಲಿ ಅಚ್ಚಾಗಿದೆ.)
೫. ಕರ್ನಾಟಕ ಶಾಕುಂತಲ ನಾಟಕ (ಬಸವಪ್ಪ ಶಾಸ್ತ್ರಿಕೃತ)
೬. ಪಂಡಿತಾರಾಧ್ಯ ಚರಿತ್ರೆಯ ದೀಕ್ಷಾ ಪ್ರಕರಣ.
೭. ಅಥಣಿ ಶಿವಯೋಗೀಶ ಪುರಾಣ
೮. ಸವ್ಯಾಖ್ಯಾನ ಪಂಚಶ್ಲೋಕೀ
೯. ಪದ್ಮರಾಜ ಪುರಾಣಂ
೧೦. ಶಿವಾತ್ರ ಗಣೇಶ ಪುರಾಣ
೧೧. ಗಾಂಧಿ ತತ್ವ ಬೋಧೆ
೧೨. ನಾಲ್ವಡಿ ಶ್ರೀ ಕೃಷ್ಣರಾಜವಿಳಾಸಂ

ಇವುಗಳೇ ಅಲ್ಲದೆ ಕೈ. ಬಿ. ಮಲ್ಲಪ್ಪನವರು ಪ್ರಕಟಿಸಿರುವ ನಾಗವರ್ಮನ ಕಾದಂಬರಿಯಲ್ಲಿ ಗ್ರಂಥ ಪಾತವಾದ ಒಂದು ಸ್ಥಳದಲ್ಲಿ ಹತ್ತಾರು ಪದ್ಯಗಳನ್ನು ಈ ಶಾಸ್ತ್ರಿಗಳು ಬರೆದು ಕೊಟ್ಟಿರುವರು. ಉಪನ್ಯಾಸ ಸಂಗ್ರಹದಲ್ಲಿ ಶಾಸ್ತ್ರಿಗಳ ಭಾಷಣಗಳೂ, ಪ್ರಶ್ನೋತ್ತರಗಳೂ ಹೇರಳವಾಗಿರುವವು. ವೀರಶೈವ ಮತ ಪ್ರಕಾಶಿಕಾ ಮಾಸಪತ್ರಿಕೆಯಲ್ಲಿಯೂ ಮೈಸೂರಿನಲ್ಲಾದ ವಿಶೇಷ ಸಂದರ್ಭದಲ್ಲಿಯೂ ಶಾಸ್ತ್ರಿಗಳು ಬರೆದ ಕವಿತೆಗಳು ಪ್ರಕಟವಾಗಿವೆ. ಈ ಪ್ರಕಾರವಾಗಿ ಶಾಸ್ತ್ರಿಗಳು ಕನ್ನಡ ಮತ್ತು ಸಂಸ್ಕೃತ ಸಾಹಿತ್ಯಕ್ಕೂ, ವೀರಶೈವ ಸಮಾಜಕ್ಕೂ ಹಲವು ರೀತಿಯಿಂದ ಅಪಾರವಾಗಿ ಸೇವೆ ಮಾಡಿದ್ದರೂ ಅವರಿಗೆ ತಮ್ಮ ಸೇವೆಯ ವಿಷಯದಲ್ಲಿ ತೃಪ್ತಿಯಿಲ್ಲವಾಗಿದೆ. ಆಚಾರ್ಯ ಕೃತಗಳಾದ ವೀರಶೈವ ಭಾಷ್ಯ

ಗಳು ಸಿಕ್ಕಿದ್ದರೆ ಅವನ್ನು ತಾವು ಪ್ರಕಟಿಸಬೇಕಾಗಿತ್ತೆಂಬ ಹಂಬಲವು ಈಗಲೂ ಅವರನ್ನು ಹಗಲಿರುಳು ಬಾಧಿಸುತ್ತಿದೆ. ಅಲ್ಲದೆ ಈ ವಾರ್ಧಿಕ್ಯದಲ್ಲಿಯೂ ಚನ್ನಬಸವ ಪುರಾಣವನ್ನು ಪರಿಷ್ಕರಿಸಿ ಇಟ್ಟಿರುವರು. ಇದಲ್ಲದೆ ಪರಾಶರ ಸ್ಮೃತಿಗೆ ವೀರಶೈವ ಪರವಾಗಿ ಭಾಷ್ಯ ಬರೆಯಲು ತೊಡಗಿರುವರು. ವಾರ್ಧಿಕ್ಯದ ಪ್ರಾಬಲ್ಯದಿಂದ ಈ ಮಹಾಗ್ರಂಥವು ಅಪೂರ್ಣವಾಗಿದೆ. ಇದುವರೆಗೂ ಪ್ರಕಟವಾಗದೇ ಇರತಕ್ಕ ಹಲವು ಕನ್ನಡ ಸಂಸ್ಕೃತ ಗ್ರಂಥಗಳು ಶಾಸ್ತ್ರಿಗಳ ಭಂಡಾರದಲ್ಲಿವೆ. ಈ ಶಾಸ್ತ್ರಿಗಳ ಮನೆಯಲ್ಲಿರುವ ಪುಸ್ತಕ ಭಂಡಾರವಾದರೂ ವರ್ಣನೀಯವಾದುದು. ಇವರು ಬಹು ಶ್ರಮಪಟ್ಟು ಧನವ್ಯಯದಿಂದಲೂ, ಕಾಲವ್ಯಯದಿಂದಲೂ ಹಲವು ಗ್ರಂಥಗಳನ್ನು ಸಂಗ್ರಹಿಸಿ ಇಟ್ಟಿದ್ದಾರೆ. ಪಂಡಿತನಾದವನಿಗೆ ಗ್ರಂಥ ಭಂಡಾರವು ನೇತ್ರ ಸದೃಶವಾದುದೆಂಬುದನ್ನು ಹೇಳಬೇಕಾಗಿಯೇ ಇಲ್ಲ. ಈ ಪ್ರಕಾರದ ಶಾಸ್ತ್ರಿಗಳ ಸಾಹಿತ್ಯ ಸೇವೆಯು ಎಷ್ಟು ಅಪಾರವಾದುದೂ ಶ್ಲಾಘನೀಯವಾದುದೂ, ಆಗಿದೆಯೆಂಬುದನ್ನು ವಾಚಕರು ಊಹಿಸಬಹುದು. ವೀರಶೈವ ಮತ ಚರಿತ್ರೆಯಲ್ಲಿ ಈ ಪಂಡಿತೋತ್ತಮನ ಚರಿತ್ರೆಯು ಎಂತಹ ಪ್ರಾಮುಖ್ಯಸ್ಥಾನವನ್ನು ಅಲಂಕರಿಸುವುದೆಂಬುದು ಇದರಿಂದ ಧೃಡಪಡುವುದಿಲ್ಲವೇ?

ಕವನಶಕ್ತಿ:— ಈ ಶಾಸ್ತ್ರಿಗಳಲ್ಲಿ ಅಪೂರ್ವವಾದ ಕವನಶಕ್ತಿಯೂ ಇರುವುದು. ಕವನ ಕಲೆಯಲ್ಲಿ ಇತ್ತೀಚಿನ ಕವಿಗಳಲ್ಲಿ ಅಭಿನವ, ಕಾಳಿದಾಸ, ಬಸವಪ್ಪಶಾಸ್ತ್ರಿಗಳನ್ನೂ ಸರಿಗಟ್ಟುವವರು ಯಾರೂ ಇಲ್ಲದಿದ್ದರೂ ಮನಸ್ಸಿಟ್ಟು ಬರೆದರೆ ಈ ಶಾಸ್ತ್ರಿಗಳ ಕವಿತ್ವವು ಉತ್ತಮ ಕವಿತೆಯಲ್ಲಿಯೇ ಗಣ್ಯವಾದುದು. ಇವರು ಸಂಸ್ಕೃತ ಮತ್ತು ಕನ್ನಡವೆಂಬ ಉಭಯ ಭಾಷೆಗಳಲ್ಲಿಯೂ ಧಾರಾಳವಾಗಿಯೂ, ಸರಸವಾಗಿಯೂ, ಭಾವಗರ್ಭಿತವಾಗಿಯೂ, ಕವಿತ್ವ ಬರೆಯಬಲ್ಲವರಾಗಿದ್ದರೆಂಬುದನ್ನು ಇವರು ಬರೆದಿರುವ ಕವಿತೆಗಳಿಂದ ನಿರ್ಧರಿಸಬಹುದು. ಉದಾಹರಣೆಗಾಗಿ ಕೆಲವು ಮಾದರಿ ಪದ್ಯಗಳನ್ನು ಕೊಟ್ಟಿದೆ.

ರಾಜಶೇಖರ ವಿಳಾಸದ ಕಡೆಯಲ್ಲಿ ತಾವು ಆ ಮಹಾ ಗ್ರಂಥವನ್ನು ಪರಿಷ್ಕರಿಸಿ ಮುದ್ರಿಸಿದ ವಿಷಯವನ್ನು ಕುರಿತು ಹೀಗೆ ಬರೆದಿರುವರು.

ವೃ॥ ಬಾಲಸುಧಾಂಶುಪತ್ತನ ಷಡಕ್ಷರ ಸತ್ಕವಿನಿರ್ಮಿತಂ ಸುಧೀ।
ಲಾಲಿತ ರಾಜಶೇಖರ ವಿಳಾಸ ಸಮಾಹ್ವಯಸು ಪ್ರಬಂಧಮಾ॥
ಮಾಲಿತ ಬುದ್ಧಿಪಾಠಕ ವಿಲೇಖಕ ಸಂಗತಿಯಿಂದ ಬದ್ಧಮಾ।
ಲಾಲಯಮಾಗಿ ನಂಜುಮೆರಸಿರ್ದೀ ನಿಮಾಲ ಪೊಲಿದಿರ್ದುದಕ್ಕಟಾ ॥೧॥

ಪಂಡಿತ ರುದ್ರ ದೇವತನಯಂ ಗಿರಿಜಾಪತಿ ಪಾದಪೂಜನೋ।
ದ್ದಂಡತರ ಪ್ರಭಾವ ಪರಿಲಬ್ಧಲಸತ್ಕವಿತಾ ವಿಲಾಸನಾ॥
ಖಂಡಲ ಸಾಮ್ಯ ಕೃಷ್ಣವಸುಧಾಪತಿ ದಿವ್ಯ ಸಭಾ ಮನೀಷಿರ್ರೈ॥
ಕೊಂಡುಗಪುಂತಿದಂ ಕರಿವೃಷಾಂಕನೆ ತಿರ್ದುತೆ ಮುದ್ರಿಗೈಸಿದಂ ॥೨॥

ಇವರು ಬರೆದಿರುವ ನಯಶತಕದಲ್ಲಿನ ಕೆಲವು ಪದ್ಯಗಳು.

ಕಂ॥ ನೀತಿಯು ನರಿತನನೆಲ್ಲಂ ।
ಪ್ರೀತಿಸುಗುಂ ಖ್ಯಾತಿವಡೆವನವನಿಯೊಳವನೇ।
ಸಾತಿಶಯ ಸುಖವನೆಯ್ದುವ।
ನೋತುವಲಂ ನೀತಿಯರಿಯ ವೇಳ್ಕುಂ ಮನುಜಂ ॥೧॥

ದಾರಿಯನರಿಯದ ಮಾನವ।
ನೂರಂಸೇರುವನೆ ಬುದ್ಧಿಯುತ ನಾದೊಡಮೇಂ॥
ಸಾರತರ ನೀತಿಯರಿಯ್ದುದ।
ಧೀರಂ ತಾಂ ಲೋಕಯಾತ್ರೆಯೊಳ್ಸರ ಮೆಳವಂ ॥೨॥

ಗುಣಹೀನಂ ಗುಣವಂತನ।
ನೆಣಿಸಂ ಗುಣಿ ಸುಗುಣಶಾಲಿಯಂ ಮಚ್ಚರಿಪಂ॥
ಗುಣಿಸುಗುಣ ವತ್ಸಲನೀಧಾ।
ರಿಣಿಯೋಳ್ ದುರ್ಲಭನೆನಿಪ್ಪನಿದು ಪರಮಾರ್ಥಂ ॥೩॥

ಮೇಲೆ ಉದಾಹರಿಸಿರುವ ಪದ್ಯಗಳಲ್ಲದೆ ಹೊಸದಾಗಿ ಈ ಶಾಸ್ತ್ರಿಗಳಿಂದಲೇ ಪರಿಷ್ಕೃತವಾಗಿ ಪ್ರಕಟವಾಗಿರುವ ಕರ್ನಾಟಕ ಶಾಕುಂತಲ ನಾಟಕದ ಪೀಠಿಕಯಲ್ಲಿ ಕೈ॥ ಬಸವಪ್ಪ ಶಾಸ್ತ್ರಿಗಳ ಜೀವನ ಚರಿತ್ರೆಯನ್ನು ಸಂಗ್ರಹವಾಗಿ ಪದ್ಯಗಳಲ್ಲಿ ಹೇಳಿರುವುದನ್ನು ವಾಚಕರು ಅವಲೋಕಿಸಬಹುದು. ಇನ್ನು ಶಾಸ್ತ್ರಿಗಳ ಸಂಸ್ಕೃತ ಕವಿತೆಯ ಮಾದರಿಗಾಗಿ, ಶಾಸ್ತ್ರಿಗಳೇ ತಮ್ಮ 'ವೀರಶೈವ ಮತ ಪ್ರಕಾಶಿಕಾ' ಎಂಬ ಮಾಸ ಪತ್ರಿಕೆಯಲ್ಲಿ ಉಜ್ಜಯನಿ ಸಂಸ್ಥಾನದ ಚರಪಟ್ಟಾಧ್ಯಕ್ಷರಾಗಿದ್ದ ಶ್ರೀ ಗುರು

ಸಿದ್ಧದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳ ಸ್ತೋತ್ರರೂಪವಾದ ಕೆಲವು ಪದ್ಯಗಳನ್ನು ಪ್ರಕಟಿಸಿರುವರು. ಅವುಗಳಲ್ಲಿ ಕನ್ನಡ ಸಂಸ್ಕೃತ ವೆಂಬ ಎರಡು ಭಾಷೆಯ ಕವಿತೆಗಳೂ ಇವೆ. ಅವುಗಳಲ್ಲಿ ಸಂಸ್ಕೃತ ದವನ್ನು ಮಾತ್ರ ಮುಂದೆ ಕೊಟ್ಟಿದೆ.

## ಪಂಚರತ್ನಂ

ಶ್ಲೋ॥ ಶ್ರೀಮತ್ಕೈವಲ್ಯ ಲಕ್ಷ್ಮೀವಿಹರಣಸದನೋದ್ಯಜ್ಜ್ವಿಯ
ನ್ಯಾಖ್ಯವ್ಯ।
ರ್ಯ್ಯರಾಜತ್ಸದ್ಧರ್ಮ ಸಿಂಹಾಸನ ಪತಿರತಿ ನಿರ್ಧೂತಸಂಸಾರಭೀತಿಃ॥
ನೀತಿಖ್ಯಾತಿ ಪ್ರತಿಷ್ಠಾಧೃತಿಕೃತಿಸುಕೃತಾಚಾರಸೌಶೀಲ್ಯಸತ್ಯಶ್ರೀ ।
ರಾಂಭೋರಾಶಿಚಂದ್ರಸ್ಸ ಜಯತಿ ಗುರುಸಿದ್ಧಾಖ್ಯಸದ್ದೇಶಿಕೇಂದ್ರಃ ॥೧॥

ವಿಬುಧ ವಿಸರ ಪೋಷಸ್ತ್ಯಕ್ತ ಸಂಸಾರದೋಷಃ।
ಭಜಕನಿಕರ ತೋಷೋ ಹೃದ್ಯ ವಿದ್ಯಾಭಿಲಾಷಃ॥
ಸುಗುಣಮಣಿ ವಿಭೂಷೋ ಸತ್ಯವಾನ್ ಸನ್ಮನೀಷಃ।
ಜಯತಿ ಮಧುರ ಭಾಷೋದಾರುಕಾಚಾರ್ಯ ಏಷಃ ॥೨॥

ಸದಯಂ ವಿಜಿತಮನೋಜಂ ನಿಜವಿತರಣ ನಿರ್ಜಿತಾಮರ ಮಹೀಜಂ॥
ವಿಲಚ್ಛ್ರೇಯೋಬೀಜಂ ಗುರುಸಿದ್ಧಂ ಸಾಮಿಯತಿರಾಜಂ ॥೩॥

ಯಃಕಲ್ಯಾಣ ನಿಧಿರ್ಭಜಂತಿಶರಣಂ ಯಂ ಪಂಡಿತಾಸ್ಸರ್ವದಾಯೇನ।
ಖ್ಯಾತನ ಪಾವನಂ ವಿಲಸಿತಂ ಯಸ್ಮೈಶಿವಸ್ಸರ್ವದಃ॥
ಯಸ್ಮಾಜ್ಜಾಗ್ರತಿ ಭವ್ಯಕಾರ್ಯ ನಿವಹಾಯುಸ್ಯ ಪ್ರದೀಪ್ತಂ ಯಶೋಯಃ।
ಸ್ಮಿನ್ ಸಂತಿಗುಣಾ ವಿಭಾತಿ ಗುರುಸಿದ್ಧಾಚಾರ್ಯ ವರ್ಯೋಮಹಾನ್ ॥೪॥

ದುರಂತ ದುಃಖವಾರಿಧಿ ಪ್ರತಾರಣೈಕ ನಾವಿಕಂ।
ಚಿರಂತನೋಸ್ತ ಪೋಕಜಂ ಜಿತಾತ್ಮಸತ್ಪ್ರಭಾವಕಂ॥
ಹರಂತಮಾ ಶ್ರಿತಾಘಸಂಚಯಂ ಸ್ಮರಾಪ ಹಾರಕಂ।
ಪರಂತಪೋಧಿಕಂ ವಿಸಾಮುದಾರುಕಾಖ್ಯ ದೇಶಿಕಂ ॥೫॥

ಇದುವರೆಗೆ ನಾವು ಉದಾಹರಿಸಿದವೇ॥ ಪಿ. ಆರ್. ಶಾಸ್ತ್ರಿಗಳ ಸಂಸ್ಕೃತ ಕನ್ನಡ ಪದ್ಯಗಳಿಂದ ಉಭಯ ಭಾಷೆಗಳಲ್ಲಿಯೂ ಅವರ ಕವನ ಶಕ್ತಿಯು ಎಂತಹ ಅಪಾರವಾದುದೆಂಬುದನ್ನು ವಾಚಕರು ಸುಲಭವಾಗಿ ತಿಳಿಯ ಬಹುದು.

ಬೋಧನಾಶಕ್ತಿ:— ಇವರಲ್ಲಿರುವ ಶಕ್ತಿಗಳಲ್ಲಿ ಜ್ಞಾಪಕಶಕ್ತಿಯೂ ಪ್ರತಿಭಾಶಕ್ತಿಯೂ ವರ್ಣನೀಯವಾದವುಗಳು ಪಂಡಿತನೂ ಕವಿಯೂ ಆದವನಿಗೆ ಈ ಬಗೆಯ ಶಕ್ತಿಗಳು ಅತ್ಯವಶ್ಯಕ. ಇವೆಲ್ಲವುಗಳಿಗಿಂತಲೂ ಇವರ ಬೋಧನಾಶಕ್ತಿಯು ಅಪೂರ್ವವಾದುದು. ಇವರಲ್ಲಿ ವ್ಯಾಸಂಗಮಾಡಿದವರೆಲ್ಲರೂ ಇಂತಹ ಪಾಠಬೋಧಕರನ್ನು ನಾವೆಲ್ಲಿಯೂ ಕಾಣೆವೆಂದು ಇಂದಿಗೂ ಏಕಕಂಠದಿಂದ ಹೇಳುತ್ತಿರುವರು. ಇದು ಈ ಲೇಖಕನಿಗೂ ಅನುಭವವೇದ್ಯವಾದ ವಿಷಯವೇ ಆಗಿದೆ. ಇವರ ಕೀರ್ತಿಯನ್ನು ಹಬ್ಬಿಸಲು ಈ ಬೋಧನಾಶಕ್ತಿಯು ಬಹಳ ಸಹಾಯಕವಾಯಿತೆನ್ನಬಹುದು. ಇವರಲ್ಲಿ ಅಭ್ಯಾಸಮಾಡಿದ, ನಾವು ಹಿಂದೆ ಸೂಚಿಸಿರುವ ಬ್ರಿಟಿಷ ಪಾದ್ರಿಗಳೂ ಏಕಕಂಠದಿಂದ ಶಾಸ್ತ್ರಿಗಳ ಬೋಧನಾಶಕ್ತಿಯನ್ನು ಹೊಗಳಿರುವರು.

ಪರಿಶೋಧನಾ ಶಕ್ತಿ:— ಪಂಡಿತನಾದ ಮಾತ್ರಕ್ಕೇ ವ್ಯಕ್ತಿಯು ಅಭಿವೃದ್ಧಿಗೆ ಬರುವನೆಂದು ಹೇಳಲಾಗುವುದಿಲ್ಲ. ಅವನಿಗೆ ಹಲವು ಅಮೌಲ್ಯಗುಣಗಳೂ ಅತ್ಯವಶ್ಯಕವಾಗಿ ಇರಬೇಕಾಗುತ್ತವೆ. ವೇ॥ ಪಿ ಆರ್. ರವರಲ್ಲಿ ಅಂತಹ ಶ್ಲಾಘನೀಯವಾದ ಗುಣಗಳು ಅನಂತವಾಗಿವೆ. ಹಾಗಿಲ್ಲದಿದ್ದರೆ ಸಾಹಿತ್ಯ ಪ್ರಪಂಚಕ್ಕೆ ಅವರಿಂದ ಅಷ್ಟೊಂದು ಅಪಾರವಾದ ಸೇವೆಯು ಆಗುತ್ತಿರಲಿಲ್ಲ. ಈ ಪಂಡಿತೋತ್ತಮರ ಅಮೌಲ್ಯ ಶಕ್ತಿಗಳಲ್ಲಿ ಗ್ರಂಥ ಪರಿಶೋಧನಾ ಶಕ್ತಿಯು ಅತ್ಯಂತ ಶ್ರೇಷ್ಠವಾದುದು. ಇವರು ಈ ಶಕ್ತಿಯನ್ನು ಕರ್ನಾಟಕ ಜೈಮಿನಿ. ರಾಜಶೇಖರ ವಿಲಾಸ. ಶಬರಶಂಕರ ವಿಲಾಸ, ಕ್ರಿಯಾಸಾರ, ಲಿಂಗಧಾರಣ ಚಂದ್ರಿಕಾದಿ ಶ್ರೇಷ್ಠ ತಮ ಗ್ರಂಥಗಳನ್ನು ಪರಿಷ್ಕರಿಸುವದರಲ್ಲಿ ತೋರಿರುವರು. ಈ ಶಕ್ತಿ ಪ್ರಭಾವದಿಂದಲೇ ಅವರು ಮೈಸೂರ ಅರಮನೆಯಲ್ಲಿ ಇದು ವರೆಗೆ ಯಾವ ವೀರಶೈವ ಪಂಡಿತನೂ ಅನುಭವಿಸದಿದ್ದ ಆಸ್ಥಾನ ಮಹಾವಿದ್ವಾನ ಪದವಿಯನ್ನೂ ಕರ್ನಾಟಕ ಭಾಷಾರತ್ನವೆಂಬುವ ಘನವಾದ ಬಿರುದನ್ನೂ ಶ್ರೀಮನ್ ಮಹಾರಾಜರವರಿಂದ ಹೊಂದಿ ವಿಖ್ಯಾತರಾದುದು ಅವರಲ್ಲಿರುವ ಈ ಅತುಲಶಕ್ತಿ ಪ್ರಭಾವದಿಂದಲೇ. ಇಂದಿನ ವರೆಗೆ ಆಗಿಹೋದ ಸಾಹಿತ್ಯ ಭಕ್ತರಲ್ಲಿ ಇವರೊಬ್ಬರು ಶ್ರೇಷ್ಠ ವ್ಯಕ್ತಿಯೆಂದು ಗಣಿಸಲ್ಪಟ್ಟಿರುವದು.

ಸದ್ಗುಣಗಳು:— ಇವರಲ್ಲಿರುವ ವಿದ್ವತ್ಪ್ರೇಮ, ಶಿಷ್ಯಾಭಿಮಾನ, ಸತತ ಪ್ರಯತ್ನ, ಮಹತ್ವಾಕಾಂಕ್ಷೆ, ಸತ್ಯಪ್ರತಿಜ್ಞಾ, ನಿಷ್ಕಾಪಟ್ಯ, ಮೊದಲಾದ ಗುಣಗಳು ಈಗಿನ ಎಷ್ಟೋ ಮಂದಿ ಸಾಮಾನ್ಯ ಪಂಡಿತರಲ್ಲಿ ಕಾಣಲಾರವು.

ಇವರು ಧಾರ್ಮಿಕ ರೀತಿಯಿಂದ ವೀರಶೈವ ಪಕ್ಷಪಾತಿಗಳಾದರೂ, ಸಾಹಿತ್ಯ ದೃಷ್ಟಿಯಿಂದ ನಿಷ್ಪಕ್ಷಪಾತಿಗಳು ಅದಕ್ಕೆ ಇವರು ಪ್ರಕಟಿಸಿರುವ ಕನ್ನಡ ಜೈಮಿನಿ, ಪ್ರಲ್ಹಾದ ಚರಿತ್ರೆ ಮೊದಲಾದ ಬ್ರಾಹ್ಮಣ ಕವಿಪ್ರಣೀತವಾದ ಗ್ರಂಥಗಳೇ ಸಾಕ್ಷಿಯಾಗಿವೆ. ಮೈಸೂರ ಸೀಮೆಯಲ್ಲಿ ಇವರನ್ನು ವೀರ ಶೈವರಿಗಿಂತಲೂ ಬ್ರಾಹ್ಮಣ ಪಂಡಿತರು ಹೆಚ್ಚಾಗಿ ಗೌರವಿಸುತ್ತಿರುವ ರೆಂಬ ವಿಷಯವನ್ನು ಕೇಳಿ ಯಾರಿಗೆ ತಾನೇ ಸಂತೋಷವುಂಟಾಗುವದಿಲ್ಲ.

ನಿರ್ಗುಣವೂ ನಿರ್ದೋಷಯುಕ್ತವೂ ಆದ ವ್ಯಕ್ತಿಯು ಜಗತ್ತಿನಲ್ಲಿ ಲ್ಲವಾದರೂ ಇವರಲ್ಲಿ ಗಣನೀಯವಾದ ದುರ್ಗುಣಗಳಾವೂ ಇಲ್ಲವೆಂದೂ ಸದ್ಗುಣಗಳು ಮಾತ್ರ ತಂಡೋಪ ತಂಡವಾಗಿವೆಯೆಂದೂ ಈ ಲೇಖಕನು ಅನುಭವದಿಂದ ಹೇಳಬಲ್ಲನು.

ಗೃಹಸಂಪತ್ತು:— ಶಾಸ್ತ್ರಿಗಳ ಗೃಹಸಂಪತ್ತು ಅಷ್ಟು ಆನಂದದಾ ಯಕವಾಗಿಲ್ಲ. ಶಾಸ್ತ್ರಿಗಳಿಗೆ ತುಮಕೂರಿಗೆ ಹದಿನಾಲ್ಕು ಮೈಲು ದೂರ ದಲ್ಲಿರುವ ಗುಬ್ಬಿಹೊಸಳ್ಳಿಯೆಂಬ ಗ್ರಾಮದಲ್ಲಿ ಸುಪ್ರತಿಷ್ಠಿತ ವೀರ ಶೈವ ಗೃಹಸ್ಥರೋರ್ವರ ಮನೆಯಲ್ಲಿ ಕನ್ಯೆಯೊಬ್ಬಳನ್ನು ಕೊಟ್ಟು ಲಗ್ನ ವಾಗಿತ್ತು. ಆ ಸುಕೃತಶಾಲಿನಿಯಾದ ಚನ್ನಮ್ಮನೆಂಬ ನಾರೀಮಣಿಯು ಬಹುಕಾಲ ಪತಿಯ ಜೊತೆಯಲ್ಲಿ ಸಂಸಾರಮಾಡುವ ಭಾಗ್ಯವನ್ನು ಪರಮೇಶ್ವರನಿಂದ ಕೇಳಿಕೊಂಡು ಬಂದಿರಲಿಲ್ಲ. ಆರೆ ವಯಸ್ಸಿನಲ್ಲಿಯೇ ಶಾಸ್ತ್ರಿಗಳು ಪತ್ನೀ ವಿಯೋಗ ದುಃಖವನ್ನನುಭವಿಸಬೇಕಾಯಿತು. ಮೇಲಾಗಿ ಔರಸ ಪುತ್ರರ ಭಾಗ್ಯವೂ ಇವರಿಗಿಲ್ಲದೇ ಹೋಯಿತು. ಈ ಕಾರಣಗಳಿಂದ ಸಂಸಾರದಲ್ಲಿ ಶಾಸ್ತ್ರಿಗಳಿಗೆ ಮನಸ್ತೃಪ್ತಿಯಾಗಲಿಲ್ಲವೆಂದು ಹೇಳಬಹುದು. ಇವರ ಧರ್ಮಪತ್ನಿಯವರು ತಮ್ಮ ಮನೆಯಲ್ಲಿದ್ದ ಅನಾಥ ವಿದ್ಯಾರ್ಥಿಗಳನ್ನು ತಮ್ಮ ಹೊಟ್ಟೆಯ ಮಕ್ಕಳಂತೆ ಕಾಣುತ್ತಿ ದ್ದರೆಂದೂ ಅಂತಹ ಗುರು ಪತ್ನಿಯನ್ನು ಕಾಣುವುದು ಈಗಿನ ಕಾಲ ದಲ್ಲಿ ದುರ್ಲಭವೆಂದೂ ಇವರ ಮನೆಯಲ್ಲಿ ಉಂಡುಟ್ಟ ಹಳೆಯ ವಿದ್ಯಾ ರ್ಥಿಗಳು ಈಗಲೂ ಹೇಳುವರು.

ವಿಶಾಲ ಮತಿಗಳಾದ ಶಾಸ್ತ್ರಿಗಳು ತಮಗೆ ಔರಸ ಪುತ್ರರಿಲ್ಲದಿದ್ದರೂ ತಮ್ಮಣ್ಣನವರ ಮಗ ಪಿ. ವಿ. ರುದ್ರಪ್ಪನೆಂಬುವವರನ್ನೇ ಸಾಕಿ ಸಲಹಿದರು. ಇವರೇ ವೀರಶೈವಮತ ಪ್ರಕಾಶಿಕಾ ಎಂಬ ಮಾಸಪತ್ರಿಕೆಗೆ ಪ್ರಕಾಶಕರಾಗಿ ಶಾಸ್ತ್ರಿಗಳ ಗ್ರಂಥ ಪ್ರಚಾರಕ ಕಾರ್ಯದಲ್ಲಿ ಸಹಾಯಕರಾಗಿದ್ದವರು.

ಈಗ ಈ ರುದ್ರಪ್ಪನವರೂ ಪರಲೋಕವಾಸಿಗಳಾಗಿರುವುದರಿಂದ ಅವರ ಮಗ ವೀರಭದ್ರಪ್ಪನೆಂಬುವರು ಶಾಸ್ತ್ರಿಗಳ ಸೇವಾಸತ್ಕಾರದಲ್ಲಿರುವರು. ಅಲ್ಲದೆ ಇವರ ಬಂಧು ಪುತ್ರರೂ ಈ ಮಹಾ ಪಂಡಿತರ ಸೇವೆಯನ್ನು ಆದರದಿಂದ ಮಾಡುತ್ತಿರುವರು. ಈಗ ಈ ಪಂಡಿತ ಶ್ರೇಷ್ಠರು ಅತ್ಯಂತ ವೃದ್ಧರಾಗಿರುವರು. ಈಗ ಇವರ ವಯಸ್ಸು ೮೧ ವರ್ಷ. ಒಟ್ಟಿನಲ್ಲಿ ಇವರ ಗೃಹಸಂಪತ್ತು ಅವರ ಮನಸ್ಸಿಗೆ ಆನಂದದಾಯಕವಾಗಿಲ್ಲವೆಂದು ಹೇಳಬಹುದು.

ವಾರ್ಧಿಕ್ಯಃ— ಜ್ಞಾನವೃದ್ಧರೂ ವಯೋವೃದ್ಧರೂ ಆದೀ ನರಪುಂಗವರು ಇಂದಿಗೆ ೮೧ ವರ್ಷದವರಾಗಿದ್ದರೂ ಇಂಗ್ಲಂಡಿನ ನ್ಯೂಟನ್ ಎಂಬ ತತ್ವಜ್ಞಾನಿಯಂತೆ ಈ ವಯಸ್ಸಿನಲ್ಲಿಯೂ ನವತರುಣರಂತೆ ಉತ್ಸಾಹಿಗಳೂ, ಕಾರ್ಯಪ್ರೇಮಿಗಳೂ, ಆಗಿರುವರು. ಈಗಲೂ ಕಾಲಕಾಲಕ್ಕೆ ಇವರು ಸ್ನಾನ ಶಿವಪೂಜೆಗಳನ್ನು ನಡೆಸುತ್ತಿರುವರು. ಅರವತ್ತು ವರ್ಷವಾದ ಮೇಲೆ ಅರುಳೋ ಮರುಳೋ ಎಂಬ ಗಾದೆಯು ಮಾತು ಇವರ ವಿಷಯದಲ್ಲಿ ಮಾತ್ರ ಸುಳ್ಳಾಗಿ ತೋರುತ್ತದೆ.

ಪ್ರಸ್ತುತದಲ್ಲಿ ಈ ಪಂಡಿತರು ತುಮಕೂರಿನಲ್ಲಿ ತಮ್ಮ ಬಾಂಧವರ ಮನೆಯಲ್ಲಿ ಮುಪ್ಪಿನಿಂದ ಜರ್ಝರಿತಾಂಗರಾಗಿ ಕಾಲಹರಣ ಮಾಡುತ್ತಿರುವರು. ಪರಮೇಶ್ವರನು ಇವರಿಗೆ ಅಪಾರವಾದ ವಿದ್ಯಾಸಂಪತ್ತನ್ನೂ, ಧನ ಸಂಪತ್ತನ್ನೂ, ಕೊಟ್ಟಿದ್ದರ ಜೊತೆಗೆ ದೀರ್ಘಾಯುರ್ಭಾಗ್ಯವನ್ನೂ ಕೊಟ್ಟಿರುವುದು ವೀರಶೈವಸಮಾಜದ ಹಾಗೂ ಕರ್ನಾಟಕದ ಭಾಗ್ಯವೆಂದು ಹೇಳಬಹುದು.

ಉಪಸಂಹಾರಃ-- ಮೈಸೂರಿನ ಪಂಡಿತ ರುದ್ರಪ್ಪದೇವರ ತನುಜರೂ. ಮಹಾರಾಜ ಕಾಲೇಜಿನ ನಿವೃತ್ತಕರ್ನಾಟಕ ಪ್ರಥಮ ಪಂಡಿತರೂ ದೇಶ ಪ್ರಸಿದ್ಧರೂ. ರಾಜಸನ್ಮಾನಿತರೂ ಆದ ಆಸ್ಥಾನ ಮಹಾವಿದ್ವಾನ್ ಕರ್ನಾಟಕ ಭಾಷಾರತ್ನವೇ॥ ಪಿ. ಆರ್ ಕರಿಬಸವಶಾಸ್ತ್ರಿಗಳು ಬಾಲ್ಯದಲ್ಲಿ ಕಷ್ಟಪಟ್ಟು ಸಕಲವಿದ್ಯೆಗಳನ್ನೂ ಕಲಿತು ಯುವ್ವನದಲ್ಲಿ ಅಪಾರವಾದ ಸಮಾಜ ಸೇವೆಯನ್ನೂ, ಸಾಹಿತ್ಯ ಸೇವೆಯನ್ನೂ ಮಾಡಿ ಪರಮೇಶ್ವರನು ತಮಗಿತ್ತ ಪಾಂಡಿತ್ಯವನ್ನೂ ಆಯುಷ್ಯವನ್ನೂ ಸಾರ್ಥಕಪಡಿಸಿ ಸಾವಿರಾರು ಮಂದಿಗೆ ಜ್ಞಾನಾಮೃತವನ್ನು ಪಾನಮಾಡಿಸಿ ವೀರಶೈವ ಮತದಲ್ಲಿ ಇಲ್ಲಿಯ ವರೆಗೆ ಯಾವಪಂಡಿತನೂ ಪಡೆಯದಿದ್ದಷ್ಟು ಗೌರವವನ್ನೂ, ಕೀರ್ತಿಯನ್ನೂ ಶಿಷ್ಯ

ಸಂಪತ್ತನ್ನೂ, ಹೊಂದಿ ವಿಖ್ಯಾತರಾಗಿ ಪಕ್ಷಪಾತ, ಆಲಸ್ಯ, ಅನೃತ ಮೊದಲಾದ ಗುಣಗಳಿಗೆ ಇಂಬುಗೊಡದೆ. ಸಾರ್ವದಾ ದೇವದೇವನಾದ ಶಂಕರನ ಪೂಜೆಯಲ್ಲಿ ಆಸಕ್ತರಾಗಿ ವೃದ್ಧರಾದರೂ ವಾರ್ಧಿಕ್ಯಧರ್ಮಕ್ಕೆ ಎಡೆಗೊಡದೆ ನವತರುಣರಂತೆ ಉತ್ಸಾಹದಿಂದಲೂ, ಆನಂದದಿಂದಲೂ ಶಿಷ್ಯರಿಗೆ ಅನುಭವ ಬೋಧೆಮಾಡುತ್ತಾ ಕಾಲಕ್ಷೇಪ ಮಾಡುತ್ತಿರುವರು. ಈ ಪಂಡಿತೋತ್ತಮರಲ್ಲಿ ತಮಗಿರುವ ಗೌರವವನ್ನು ವ್ಯಕ್ತಪಡಿಸಲೋಸುಗ ಮೈಸೂರುಮಹಾರಾಜರವರ ಕಾಲೇಜಿನ ಕರ್ನಾಟಕ ಸಂಘದವರು ಇವರ ಎಣ್ಣೆ ಬಣ್ಣದ ಭಾವಚಿತ್ರವನ್ನು ಬರೆಸಿ ಕಾಲೇಜುಹಾಲಿನಲ್ಲಿಟ್ಟಿರುವರು. ಅಲ್ಲದೆ ಶಾಸ್ತ್ರಿಗಳಿಗೆ ಮಾನಪತ್ರವೊಂದನ್ನು ಕೊಟ್ಟು ಗೌರವಿಸಿರುವರು. ಇಂತು ಈ ಮಹಾನುಭಾವರ ಚರಿತ್ರೆಯು ಪ್ರತಿಯೊಬ್ಬ ವೀರಶೈವನಿಗೂ ಸ್ಮರಣೀಯವಾಗಿರುವುದು.

**ಓಂ**

**ಶಾಂತಿ ಶಾಂತಿ ಶಾಂತಿಃ**



# ಶ್ರೀ ಷಡಕ್ಷರ ದೇವರ ಸ್ತೋತ್ರಗಳು.

(ಲೇಖಕ:— ಎಸ್. ಜಿ. ಕಾಡಾದೇವರ ಮಠ ಬಿ. ಎ, ಬಿ ಟಿ.
ಹೆಡ್‌ಮಾಸ್ತರ ಬಾರ್ಶಿ ಹೈಸ್ಕೂಲ.)

೧. ಈ ಯತೀಂದ್ರರು ಕ್ರಿಸ್ತಶಕದ ೧೭ ನೇ ಶತಮಾನದಲ್ಲಿ ಒಳ್ಳೇ ಖ್ಯಾತಿಯಿಂದ ಮೆರೆದವರು. ಇವರು 'ಶಾಸ್ತ್ರನ್ಯಾಯಾಗಮಜ್ಞ' ರು, "ಸ್ಫುರದುಭಯ ಕವಿತ್ವಾತ್ತವಿಖ್ಯಾತಕೀರ್ತಿ" ಯುಳ್ಳವರು ಮತ್ತು ಅಪ್ರತಿಮ ಭಕ್ತಿಯುಳ್ಳವರು ಇದ್ದರೆಂಬುವದು ಅವರು ವಿರಚಿಸಿದ ಸಂಸ್ಕೃತ ಪ್ರಾಕೃತ ಮಹಾಕಾವ್ಯಗಳ ಮೇಲಿಂದಲೂ ಅಂದರೆ ರಾಜಶೇಖರ ವಿಳಾಸ, ವೃಷಭೇಂದ್ರ ವಿಜಯ, ಕವಿಕರ್ಣರಸಾಯನ, ಮತ್ತು ಶಬರ ಶಂಕರ ವಿಳಾಸ ಇವುಗಳ ಮೇಲಿಂದಲೂ ಸಂಸ್ಕೃತದಲ್ಲಿ ವಿರಚಿಸಿದ ಶಿವಮಹಿಮಾಗದ್ಯ ಮತ್ತು ವೀರಭದ್ರೋದಾಹರಣಗದ್ಯಗಳಿಂದಲೂ, ಅದೇ ಭಾಷೆಯಲ್ಲಿದ್ದ ಶಿವಾಧಿಕ್ಯ ಮತ್ತು ಭಕ್ತಾಧಿಕ್ಯ ಎಂಬ ಕೃತಿಗಳಿಂದಲೂ, ವೀರಭದ ದಂಡಕಾದಿಗಳಿಂದಲೂ, ಶಿವಸ್ತವಮಂಜರಿ, ಇಂದುಧರ ಸ್ತೋತ್ರಮುಂತಾದ ಈಶಸ್ತವನಗಳಿಂದಲೂ, ಅನೇಕ ಶರಣರ ಸ್ತೋತ್ರಗಳಿಂದಲೂ ಮತ್ತು ಕನ್ನಡದೊಳಗಿದ್ದ ಷಡಕ್ಷರ ಮಂತ್ರಸ್ತವನ ಮುಂತಾದವುಗಳಿಂದ ತಾನೇ ವ್ಯಕ್ತವಾಗುತ್ತದೆ. ಇವರು ಪರಮೇಶ್ವರನನ್ನೂ ಆತನ ಶರಣರನ್ನೂ "ಪದೆದು ಮುದವೊದವೆ ಬಲ್ಲಂದದೆ" ನುತಿಸಿರುವರಲ್ಲದೆ ಪಂಪ, ರನ್ನ ಮೊದಲಾದ ಎಷ್ಟೋ ಜೈನ ಕವಿಗಳಂತೆ ಬಲ್ಲಂದದೆ ವಿ-ತಿವಿರಿ, ತಮಗೆ ಆಶ್ರಯ ಕೊಟ್ಟ ನರೇಂದ್ರರ ಸ್ತುತಿಯನ್ನು ಮಾಡಿರುವದಿಲ್ಲ; ಮತ್ತು ಅಂಥವರಿಂದ ತಮಗಾಗುವ ಭೌತಿಕಲಾಭಗಳನ್ನು ಲಕ್ಷೀಕರಿಸಿ 'ಶಾಕಾಯುವಾಸ್ಯಾತ್ ಲವಣಾಯುವಾಸ್ಯಾತ್' ಎಂದೆನ್ನುವ ಜಗನ್ನಾಥ ಪಂಡಿತನಂತೆ ಕಾವ್ಯಗಳನ್ನು ವಿಶೇಷತಃ ರಚಿಸಲುದ್ಯುಕ್ತರಾದವರು ಅಲ್ಲ. ಪರಮೇಶ್ವರಾನುಗ್ರಹದಿಂದ "ರಸವತ್ಕವಿತೆಯನುಸರಲ್ಪಡೆದು", "ಮಹಿತಮಹಿಮಾಸ್ಪದನಂ ತದೀಯ ಶರಣವ್ರಜಮಂ" ನುತಿಸುವಲ್ಲಿ ಕಾವ್ಯಕಲಾ ಚಾತುರಿಯನ್ನು ತೋರಿಸಿ ತಮ್ಮ ಆಶ್ರಮಕ್ಕೆ ಅಂದರೆ ಮಹಾಸ್ವಾಮಿತ್ವಕ್ಕೆ ಮತ್ತು ಮಹಾಗುರುತ್ವಕ್ಕೆ ಅನುರೂಪವಾಗಿ ಪ್ರತಿಭೆಯು ಬೀರುವಂತೆ

ಮಾಡಿರುವರು. ಅವರು ತಮ್ಮ ಅಪಾರವಾದ ಪಾಂಡಿತ್ಯದಿಂದ ಶಾಸ್ತ್ರ ಸಿದ್ಧಾಂತಗಳನ್ನು ಕಂಡು ಹಿಡಿದು,

"ಬ್ರಹ್ಮಾಸ್ಯಂಬುಜಲೋಚನೋಪಿಯದಿದಂ ಸರ್ವಂತ್ವಮೇವೇ
ತ್ಯಾಹುಃಕೇಚಿದುಪಾಸನೇ ಕುಮತಯಸ್ತೇಮಾಯಯಾಮೋಹಿತಾಃ।
ವಿಶ್ವಂಸಾರ್ಧಮುಮಾಭಿದೇತದಖಿಲಂ ಶಕ್ತೇಸ್ಸಮಾಸ್ತಂ ಕಿಯ
ತ್ಯಂಶೇಚಂದ್ರಕಲಾಕಲಾಪತದಿದಂಭೂಯಸ್ತ್ರಯೀವಿಶ್ರುತಂ ॥

ಎಂದು ತಿಳಿದವರಾಗಿ, ಚನ್ನಬಸವೇಶ್ವರ ಪುರಾಣವನ್ನು ಮನಮುಟ್ಟಿ ನೋಡಿದರೂ ಲಕ್ಷ್ಮೀಶಕವಿಯಂತೆ ಹರಿಹರರ ಅಭೇದವನ್ನು ಒಮ್ಮೆಯಾ ದರೂ ಹೇಳಿ ಗೊಂದಲಕ್ಕೆ ಆನುವು ಕೊಟ್ಟವರಲ್ಲ.

೨. ಅದ್ವೈತ, ವಿಶಿಷ್ಟಾದ್ವೈತ, ಶಿವಾದ್ವೈತ ಇವುಗಳ ತಾರತಮ್ಯ ವನ್ನು, ಶಾಸ್ತ್ರಾಮ್ನಾಯಾಗಮಗಳ ಗತಿಗಳು ಒಂದಕ್ಕೊಂದು ಸಂಬಂ ಧಿಸಿವೆ. ಮತ್ತು ಅವುಗಳ ತತ್ವಗಳು ಏಕರೂಪವಾಗಿ ಪರಿಣಮಿಸುತ್ತ ವೆಂದು ಸಾಕ್ಷಾದನುಭವಕ್ಕೆ ಗೋಚರಮಾಡಿಕೊಂಡವರಾದ್ದರಿಂದ, ಒಳ್ಳೇ ಮಾರ್ಮಿಕ ದೃಷ್ಟಿಯಿಂದ

"ಭಾಷ್ಯೇ ಶಂಕರನಿರ್ಮಿತೆ ನಿಗದಿತಂ ಬ್ರಹ್ಮೇತಿಚಿತ್ತೇಪರಾ
ಶಕ್ತಿಸ್ತೇಭವತಿಪ್ರಭೋಹರಿರಪಿ ಬ್ರಹ್ಮೇತಿ ನಿರ್ಧಾರಿತಂ ।
ಶ್ರೀಭಾಷ್ಯೇಸಚಶಕ್ತಿರೇವ ಭವತಃ ಶ್ರೀಕಂಠಭಾಷ್ಯೇಪರ
ಬ್ರಹ್ಮತ್ವಂ ತವಶಕ್ತಿ ಮತ್ವಮುದಿತಂತ್ರಯ್ಯಂತಸಾರೋಕ್ತಿಭಿಃ ॥

ಎಂದು ಉಸುರಿರುವರು.

ಕಾಮಿಕಾದಿ ವಾತುಳಾಂತಗಳಾದ ೨೮ ದಿವ್ಯಾಗಮಗಳನ್ನು ಮರೆದು ಕೇವಲ ಶಾಸ್ತ್ರಾಮ್ನಾಯಗಳನ್ನವಲಂಬಿಸಿದರೆ, ರಾಜಸಮಯ, ಪ್ರಭು ಸಮಯ, ಮತ್ತು ಸಾಮಾನ್ಯ ಜನಸಮಯ ಇವುಗಳಿಂದ ಏಕತಾನ ವಾಗಿ ನಡೆಯುವ ಬ್ರಿಟಿಶ ಸಾಮ್ರಾಜ್ಯವನ್ನು, ತದ್ಗತ ಒಂದು ಅಂಗವನ್ನು ಬಿಟ್ಟು ತಿಳಿಯಲಿಕ್ಕೆ ಪ್ರಯತ್ನ ಮಾಡಿದಂತೆ ಆಗುವದು; ಹಿಂದುಮತ ತತ್ವವು ಯಥಾರ್ಥವಾಗಿ ಗೋಚರಿಸದು. ಇದೇ ಕಾರಣದಿಂದ ಬ್ರಾಹ್ಮಣ ಗ್ರಂಥಗಳೊಳಗಿಲ್ಲದ ವೈಶಿಷ್ಟ್ಯವು ಶ್ರೀ ಷಡಕ್ಷರಿದೇವಯತೀಂದ್ರರ ಕೃತಿ ಗಳಲ್ಲಿ ಪುಷ್ಪದೊಳಗಿನ ಸುಗಂಧದಂತೆ ತತ್ವಜ್ಞಾನಿಗಳ ಮನೋಭೃಂಗ ಗಳನು ಸಹಜವಾಗಿ ಸೆಳೆಯುವದು ಮತ್ತು ಮುದವನ್ನೊದವಿಸುವದು.

೩. ಮಾನುಷ್ಯಂ ಬಹುದುರ್ಲಭಂ ಮಮಪುನರ್ದತ್ವಾತು ಸಜ್ಜನ್ಮತಾಂ
ನೀತ್ವಾಸದ್ಗುರು ವಿಗ್ರಹಾಧಿಗತವಾನ್ ಕೃತ್ವಾಪಿ ದೀಕ್ಷಾವಿಧಿಂ
ಸ್ಥಿತ್ವಾಮತ್ಕರಪಂಕಜೇಚ ವಿಲಸಲ್ಲಿಂಗಾಕೃತಿಸ್ತ್ವಂ ಕೃತ
ಸ್ತ್ವದ್ಭಕ್ತಿನ್ನದದಾಷಿ ಸಾಂಪ್ರತಮಿದಂ ಕಿಂತೇಕೃಪಾಶಾಲಿನಃ

ಈ ಶ್ಲೋಕದೊಳಗೆ ಮೊದಲಿನ ಮೂರು ಚರಣಗಳೊಳಗೆ ತೋರುವ ಗೌರವವನ್ನು ಹಿಂದುಧರ್ಮದೊಳಗೆ ಉತ್ತರಭಾಗವಾಗಿರುವ ಮೇಲ್ತರದ ಮತವಲ್ಲಿ ಕಂಡು ಆತ್ಮೋನ್ನತಿಯನ್ನುಮಾಡಿಕೊಳ್ಳುವದಕ್ಕೆ ಬಂದಂತೆ ಅನ್ಯಕ್ರಿಸ್ತ ಬೌದ್ಧಾದಿ ಧರ್ಮಗಳಲ್ಲಿ ಬರುವದಿಲ್ಲ. ಮೇಲಿನ ಶ್ಲೋಕವನ್ನು ಅನ್ನುವದಕ್ಕೆ ಅಧಿಕೃತನಾದವನು ತಾನು ಮನದೊಳಗೆ ಉಚ್ಚತಮನಾದ ಗೌರವಾತಿಶಯವನ್ನು ಹೊಂದುವನು. ಪರಮಾತ್ಮ ಮತ್ತು ತದ್ಭಕ್ತ ಇವರ, ಒಳ್ಳೇ ಗೌರವವನ್ನು ತರುವ ಸಾಮಿಪ್ಯ ಸನ್ನಿಧಿಯ ಲಾಭವು ಸ್ಥಾವರ ಮೂರ್ತಿಯ ಪೂಜೆಯಿಂದ ಬರದು.

೪. ಮಾಯಾಪಾದತಲಾದಧಃಸ್ಥಿತಿಗಭೂತ್ಸಂಸಾರ ಯಾತ್ರಾಪುನ
ರ್ಮಾಯಾ ಮಸ್ತಕವರ್ತಿನೀಯದಪರಾ ಚಿಚ್ಛಕ್ತಿಪಾದಾದಧಃ
ಮುಕ್ತಿಃ ಸಂಸ್ಥಿತಿರೇವ ಮೂರ್ಧನಿ ಚಿದಃ ಶಕ್ತೇಃ ಪರಾಮುಕ್ತಿರಿ
ತ್ಯಾಹುಸ್ತತ್ವ ವಿದುಸ್ತದೇತದಖಿಲಂ ತ್ವದ್ಭ್ರುಕೃಷ್ಟಿ ಲೀಲಾಯುತಂ ॥

ಸಂಸಾರಯಾತ್ರಾ, ಮಾಯಾ, ಅಪರಾಶಕ್ತಿ, ಚಿಚ್ಛಕ್ತಿ, ಮುಕ್ತಿ ಇವೆಲ್ಲ ಪರಮೇಶ್ವರನ ಕರುಣಾಶಕ್ತಿಯ ಲೀಲೆಯು ಎಂಬ ಆಗಮಿಕ ತಾತ್ವಿಕ ರಹಸ್ಯವು ಮೇಲಿನ ಶ್ಲೋಕದಲ್ಲಿ ಸಂಗ್ರಹಿಸಲ್ಪಟ್ಟಿದೆ. ಪರಮೇಶ್ವರನ ಶಕ್ತಿಯು ಎರಡು ವಿಧವಾದದ್ದು. ಕರುಣಾಸ್ವರೂಪ ಮತ್ತು ಭಕ್ತಿಸ್ವರೂಪವಾದದ್ದು. ಭಕ್ತಿಯೇ ಊರ್ಧ್ವ ಮುಖವಾದದ್ದು; ನಿರ್ಧೂಮ ಜ್ಯೋತಿಯಂತಿರುವದು. ಭಕ್ತಿಯೇ ನಿವೃತ್ತಿ ಮಾರ್ಗವನುಳ್ಳದು. ಪರಮಶಕ್ತಿ ಮಾಯಾ ಪ್ರಪಂಚವುಳ್ಳದ್ದು; ಭಕ್ತಿಯು ಆ ಮಾಯಾ ಪ್ರಪಂಚರಹಿತ ಶಕ್ತಿ ಪುಣ್ಯಪ್ರದಂಗಳ ಕೊಡುವದು; ಭಕ್ತಿ ಶಿವನಲ್ಲಿ ಯುಕ್ತವ ಮಾಳ್ಪುದು. ಜ್ಞಾನ, ಸತ್ಕರ್ಮ, ಯೋಗಸಾಧನೆ, ತಪಸ್ಸು, ಜಪ ಮತ್ತು ಸನ್ಯಾಸ ಇವು ಭಕ್ತಿಯ ಯೋಗದಿಂದ ಮುಕ್ತಿಪ್ರದಗಳು; ಇಲ್ಲದಿದ್ದರೆ ವ್ಯರ್ಥವಾಗುವವು.

೫. 'ಪೂಜಾವ್ಯಾಜತ ಏವಸರ್ವವರದಃ' ಎಂಬಲ್ಲಿ ಸಂಗ್ರಹಿಸಲ್ಪಟ್ಟ ತಾತ್ಪರ್ಯವು ಆಂಗ್ಲಕವಿ ಪುಂಗವರಾದ ಲಾರ್ಡಟೆನಿಸನ್ ಇವರು ಉಸುರಿದ *Marc things arc wronght by prayer than this world dreams of*. ಮುಂತಾದ ಚರಣಗಳಲ್ಲಿ ಕಂಡು ಬರುವದು.

೬. ಇದಲ್ಲದೆ ಪರಶಿವನ ಸಂಬಂಧಿ ಕೆಲವು ಲೀಲೆಗಳನ್ನು ಉದಾಹರಿಸಿರುವರು. ಗಂಗಾಧರಲೀಲೆ, ವಾಮನ ಕಂಕಾಳಧರಲೀಲೆ, ತ್ರಿಪುರಹರಲೀಲೆ, ವಿಷ್ಣು ಚಕ್ರಪ್ರದಾನಲೀಲೆ ಮುಂತಾದವುಗಳಲ್ಲಿ ಪದಲಾಲಿತ್ಯದಿಂದ ಪರಮೇಶ್ವರನ ಆಧಿಕ್ಯವು ವಿಕಾಸಹೊಂದುವಹಾಗೆ ಹೇಳಿದ್ದಾರೆ. ಪರಮೇಶ್ವರನು ದಾರುಕವನದಲ್ಲಿ ನಿಸರ್ಗ ಸೌಂದರ್ಯದಿಂದ ಸಂಚಾರಮಾಡಿ ಮುನಿಗಳನ್ನು ಉದ್ಧರಿಸಿದ್ದನ್ನು, ಯೋಗಿಗಳಿಗೆ ಮೋಹ ಭ್ರಾಂತಿಯನ್ನು ದೂರಮಾಡುವದಕ್ಕೆ ವಹಿಸಿದ ಸುಖಾವಹಲೀಲೆಯನ್ನೂ, ಗಣಪತಿಗೆ ಗಣಪದವಿಯನ್ನು ಕೊಟ್ಟಿದ್ದನ್ನೂ, ಷಡಕ್ಷರ ಮಂತ್ರದ ಮಹಿಮೆಯನ್ನೂ ' ಯಾಮಂತ್ರೋಘಶಿಖಾಮಣಿ ರ್ಮಸಿಮುಖಾಂ ಭೋಜೋತಾನಾರಕಾನ್। ಜೀವಾನಪ್ಯುದತಾರಯದ್ಭವ ಮಹಾರೋಗಸ್ಯ ದಿವ್ಯೌಷಧಿಃ' ಎಂಬಲ್ಲಿ ಪ್ರಕಟಿಸಿರುವರು. ಮತ್ತು ಪರಮೇಶ್ವರನ ಕೂಡ ಕಲ್ಪನೆಯಿಂದ ಮಾಡಿದ ಒಳ್ಳೇ ವಿನಯಭರಿತಗಳಾದ ಮತ್ತು ಚಿತ್ರಾರ್ಥಗಳನ್ನು ಬೀರುವ ವಾಗ್ವಿರಚನೆಗಳಿಂದ ಸಂಭಾಷಣೆಯು ಸ್ಫುರಿಸುವದು. ಹೀಗೆ ಒಳ್ಳೇ ಭಕ್ತಿಭಾವವನ್ನು ಬೀರುವ ಮನೋಹರಗಳಾದ ವೃತ್ತಗಳಲ್ಲಿ ಆಗಮಿಕ ವಿದ್ಯೆಯು ಆದರಿಂದ ವಿಕಾಸಹೊಂದಿದ ಬುದ್ಧಿಯು, ಶಾಸ್ತ್ರನಿರ್ಣಯವನ್ನು ಹೇಳುವ ತಾತ್ವಿಕ ವಿಚಾರಗಳೂ ಇದಲ್ಲದೆ ಅತಿ ಮಧುರಗಳಾದ ಚಿತ್ರಾರ್ಥ ಸೂಕ್ತಿಗಳು ಅರಣ್ಯದಲ್ಲಿ ಜಯಶೀಲನಾಗಿ ಸಂಚರಿಸುವ ಶಾರ್ದೂಲನ ವಿಕ್ರೀಡಿತದಂತೆ ಅಧಿಕಾರವಾಣಿಯಲ್ಲಿ ಪರಿಣಮಿಸುವವು. ಶಿವಸ್ತವಮಂಜರಿಗೆ ಒಳ್ಳೇ ಶೋಭೆಯನ್ನುಂಟುಮಾಡಿರುವವು ಶ್ರೀ ಷಡಕ್ಷರದೇವರ ಕೃತಿಗಳೆಲ್ಲ ಪರಮೇಶ್ವರಾರ್ಪಿತಗಳಾಗಿದ್ದರೂ ಅವು ಬಹಳಮಾಡಿ ಶಿವಶರಣ ಕಥಾರೂಪದಿಂದ ಹೇಳಲ್ಪಟ್ಟಿವೆ. ಆದರೆ ಶಿವಸ್ತವಮಂಜರಿಯು ಹಾಗಲ್ಲ. ಇದು ಕೇವಲ ಭಕ್ತಿಭಾವದ ಆವಿರ್ಭಾವವು, ಶಿವಸ್ತುತಿಪರಂಪರೆಯು. ಶಂಕರಾಚಾರ್ಯರಿಂದ ವಿರಚಿಸಲ್ಪಟ್ಟಿದ್ದೆಂದು ಹೇಳುತ್ತಿರುವ ಶಿವಾನಂದಲಹರಿಗಿಂತ ಶಿವಸ್ತವಮಂಜರಿಯು ಹೆಚ್ಚು ಫಲ

ಪ್ರದವಾಗಿರುವದು. ಮತ್ತು ಹೆಚ್ಚು ಪ್ರಾಮಾಣ್ಯ ಮಾರ್ಗವನ್ನು ಅನುಸರಿಸಿರುವದು. ಶೈವ, ವೀರಶೈವರಿಗಿರುವ ಅಂತರದಂತೆ ಆವೆರಡು ಸ್ತೋತ್ರಗಳಲ್ಲಿ ಅಂತರವಿರುವದು.

೬. ಇದರಂತೆ ಶ್ರೀ ಷಡಕ್ಷರಿದೇವರು ವಿರಚಿಸಿದ ಶ್ರೀ ಸಿದ್ಧಲಿಂಗಸ್ತವನ, ಇಷ್ಟಲಿಂಗಸ್ತವನ, ಇಷ್ಟಲಿಂಗಾಷ್ಟಕ, ಇಂದುಧರಸ್ತೋತ್ರ, ಶಿವಮಾನಸಸ್ತೋತ್ರ, ಬಸವಾಷ್ಟಕ, ನೀಲಾಂಬಿಕಾಸ್ತೋತ್ರ, ತತ್ವತ್ರಯಸ್ತೋತ್ರ, ನಮಃಶಿವಾಯಾಷ್ಟಕ ಇನ್ನು ಕನ್ನಡದೊಳಗೆ ವಿರಚಿಸಿದ ಒಳ್ಳೇ ಮನೋಹರವಾದ ಭಜನೆಗೆ ಒಪ್ಪುವ ಚಂದವಾಗಿ ಅನೇಕ ವಿಧದಿಂದ ಸ್ಫುರಿಸುವ ರಗಳೆಗಳಿಂದ ವಿಂಜಿಸುವ ಷಡಕ್ಷರ ಮಂತ್ರಸ್ತವವು ಇವೆಲ್ಲ ಸ್ತುತಿಗಳು ಒಳ್ಳೇ ಫಲದಾಯಕವಿರುವವೆಂಬುದು ಮತ್ತು ಅನ್ಯಮತೀಯ ಆ ಸ್ತೋತ್ರಗಳಿಗಿಂತ ಹೇಗೆ ವಿಶಿಷ್ಟವಾದವುಗಳೆಂಬುದು ವೀರಶೈವರಿಗೆ ವಿಶೇಷತಃ ಲಿಂಗಾಯತರಿಗೆ ಅನುಭವಕ್ಕೆ ತಾನೇ ಗೋಚರವಾಗುವದು. ಇವೆಲ್ಲ ಸ್ತುತಿಗಳಲ್ಲಿ ಕಾವ್ಯಕಲಾಚಾತುರಿಯು ಪರಮೇಶ್ವರನ, ಶಿವಯತೀಂದ್ರರ, ಶರಣರ, ಶಿವಯೋಗಿನಿಯಾದ ನೀಲಾಂಬಿಕೆಯು ಇವರೆಲ್ಲರ ಗುಣಕ್ರಿಯಾ ರೂಪಗಳನ್ನು ಆಯಾ ವೃತ್ತಗಳಲ್ಲಿ ಒಳ್ಳೇ ಸುಲಭವಾಗಿ ಮತ್ತು ಲಲಿತವಾಗಿ ಉಸುರುವಲ್ಲಿ ತೊಡಗಿಸಲ್ಪಟ್ಟಿದೆ. ಪದರಚನೆಯು ಅಪೂರ್ವವಾಗಿ, ಮಧುರವಾಗಿ, ಗಂಭೀರವಾಗಿ, ಸಹಜಲಾಲಿತ್ಯ ವಿಶಿಷ್ಟತೆಯು ಭಕ್ತಿಭಾವದಿಂದ ಅಧಿಕವಾಗಿ ಸ್ಫುರಿಸುವಂತೆ ಮತ್ತು ಸ್ಮರಣಶಕ್ತಿಗೆ ಒಳ್ಳೇ ಅನುಕೂಲವಾಗುವಂತೆ ಪರಿಣಮಿಸುತ್ತದೆ. ಈ ಸಂದರ್ಭದಲ್ಲಿ ಇಂದುಧರ ಸ್ತೋತ್ರದಿಂದ ಉದಾಹರಣೆಯೊಂದನು ಕೊಡಬಹುದು.

ಶಿವಮುದ್ರಿತ ದುರ್ದಮದಕ್ಷಮುಖಂ
ಭುವನಾವನ ಭಾವನ ದೇವನತಂ।
ಭವನಾಶನ ಮೀಶ ಮನಾದ್ಯಮಜಂ
ಪ್ರಣತೋಸ್ಮಿಗುಣಾಕರ ಮಿಂದುಧರಂ ॥ ತೋಟಕವೃತ್ತ॥

ಒಂದು ಉದಾಹರಣೆಯನ್ನು ಶಿವಮಾನಸಸ್ತೋತ್ರದಿಂದ ಹೇಳಬಹುದು.

ಜಲಂಧರ ಕಲಾಪಹಮಿಳಾರಥ ಮಿಳಿದ್ಯುತಿಹಲಾಹಲಸಮನ್ವಿತಗಳಂ
ಬಲಾನುಜಬಲಿಪ್ರಿಯಮಲೇಸಕ ಫಲಪ್ರದಮಲಂಘ್ಯ ನಿಜಶಾಸನಸುರಂ।

ಜ್ವಲತ್ಪ್ರಭಲಲಾಟಗ ವಿಲೋಚನ ಮಲಕ್ಷಿತಕಲೇವರಮವದ್ಯರಹಿತಂ
ಬಲೇಶಯು ಕುಲೇಶ್ವರ ಕಲಾಪಕಲಾಧರ ವಿಲಾಸಿನಮುಹಂಹೃದಿಭಜೇ ।೮॥

ಇನ್ನೊಂದು ಉದಾಹರಣೆಯನ್ನು ಶ್ರೀ ತೋಂಟದ ಸಿದ್ಧಲಿಂಗೇಶ ಸ್ತೋತ್ರದಿಂದ ಉದಾಹರಿಸಬಹುದು.

ಪವಿತ್ರ ಸ್ವಗಾತ್ರಂ ಬುಧಸ್ತೋತ್ರಪಾತ್ರಂ
ನಿಕೃತ್ತಾವರೋಧಂ ನಿಸರ್ಗಾವಬೋಧಂ।
ಚಿದಾಮೋದಭಾಜಂ ಚರಾಚಾರ್ಯರಾಜಂ
ಮಹಾಲಿಂಗಸಂಗಂ ಭಜೇಸಿದ್ಧಲಿಂಗಂ ॥೭॥ ಭುಜಂಗ ಪ್ರಯಾತವೃತ್ತ॥

೮. ಮತ್ತು ಬಸವೇಶ್ವರ ಸ್ತೋತ್ರದಲ್ಲಿ ಒಳ್ಳೇ ಉತ್ಕೃಷ್ಟ ಶಂಖಿನ ಗಂಭೀರ ಧ್ವನಿಯನ್ನು ಬೀರುವಂತೆ ಶಬ್ದನಾದವು ಕರ್ಣದಲ್ಲಿ ತುಂಬಿ ಕೆಲವು ಕ್ಷಣ ಉಳಿದಂತೆ ಬಸವೇಶ್ವರನ ಮಹಿಮೆಯನ್ನು ಸಾರುವ ಒಂದು ವಾದ್ಯ ಧ್ವನಿಯ ಭಾಸವನ್ನುಂಟುಮಾಡುತ್ತದೆ.

ಈ ತರವು ಅಪೂರ್ವವಾದದ್ದು. ಇಲ್ಲಿ ನೋಡಬಹುದು.

ಶುಭ್ರಾದ ಭ್ರಾಭ್ರಾವೃತರುಗ್ಭಾಸಿತಕೀರ್ತಿಂ
ಪ್ರಭ್ರಾಜದ್ವಾಗ್ವಿಸ್ತೃತ ವೇದಾಗಮಜಾಲಂ।
ಕಾರುಣ್ಯಾದ್ರಾರ್ಪಾಂಗ ಮನಂಗಸಖಮಾಹಂ
ವಂದೇಹಂ ತ್ವಾಂ ನಿರ್ಜಿತಪಾಶಂ ಬಸವೇಶಂ ॥೩॥

ಇದರಂತೆಯೇ ಆ ಸ್ತೋತ್ರದ ಮೊದಲಿನ ಎಂಟು ಶ್ಲೋಕಗಳನ್ನು ಓದಿ ಆನಂದಪಡಬಹುದು.

೯. ಕ್ರಿಯಾ ಆದಕ್ಕೆ ಅನುಗುಣವಾದ ನಾದವನ್ನು ಚರಣಗಳಲ್ಲಿ ಬೀರುವ ಗುಣವು ಆಂಗ್ಲ ಕವಿಗಳಲ್ಲಿ ವಿಪುಲವಾಗಿ ಕಂಡುಬಂದಂತೆ ಸಂಸ್ಕೃತ ಕವಿಗಳಲ್ಲಿ ವಿಶೇಷವಾಗಿ ಕಂಡುಬರುವದಿಲ್ಲ. ಕವಿತಾ ಕಾಮಿನೀ ವಿಲಾಸದ ಮೂರ್ತಿಯಾದ ಕಾಳಿದಾಸನು ಶಾಕುಂತಲ ನಾಟಕದಲ್ಲಿ ಆಕಾಶವಾಣಿಯು ಕಣ್ವಮುನಿಗೆ ತಿಳಿಸಿದ ಶ್ಲೋಕದಲ್ಲಿ ಕಂಡುಬರುತ್ತದೆ;

ದುಷ್ಯಂತೇನಾಹಿತಂ ತೇಜೋದಧಾನಾಭೂತಯೇಭುವಃ।
ಅವೇಹಿ ತನಯಾಂ ಬ್ರಹ್ಮನ್ನಗ್ನಿಗರ್ಭಾಂಶಮೀಮಿವ ॥

ಇದರಲ್ಲಿ ಸ್ವರ್ಗದಿಂದ ಬಿದ್ದ ಶ್ಲೋಕದಂತೆ ಒಂದು ಅಲೌಕಿಕ ನಾದಶಕ್ತಿಯು ಒಡೆದುತೋರುತ್ತದೆ.

ಈ ಯುಕ್ತಿಯು ಶ್ರೀ ಷಡಕ್ಷರದೇವಯತೀಂದ್ರರು ಕೆಳದೀ ರಾಜ್ಯವು ಒಳ್ಳೇ ವೈಭವಶಾಲಿಯಾಗಿ ಮೆರೆಯುತ್ತಿರುವಾಗ ಆಸ್ಥಾನದಲ್ಲಿಯ ಒಳ್ಳೇ ವಿದ್ವಜ್ಜನವು ತಲೆದೂಗುವಂತೆ ವಿರಚಿಸಿಕೊಟ್ಟ ವೀರಭದ್ರೋದಾಹರಣ ಗದ್ಯದಲ್ಲಿ ವಿಪುಲವಾಗಿ ಕಂಡುಬರುವದು. ಭೂಮಿಯ ಹೊತ್ತ ಕೂರ್ಮನ ಕವಚವು ಒಡೆದು ಸೀಳಿದಂತೆ ಧ್ವನಿಯು 'ಭಿದ್ಯತ್ಪಾತಾಳ ಪಾದಸ್ಫುಟಿತ ಸುಕಮಠಪ್ರಾಂಶು ಪೃಷ್ಠೈನಯುಷ್ಟೇ' ಈ ಚರಣದಲ್ಲಿ ಸ್ಫು, ಟಿ, ಠ ವರ್ಣಗಳಿಂದ ಭಾಸವಾಗುತ್ತದೆ.

ಒಳ್ಳೇ ವೇಗದಿಂದ ಬರುವ ಮೇಘದ ಗರ್ಜನೆಯಂತೆ ಧ್ವನಿಯು

'ದಿವ್ಯದ್ದಂಷ್ಟ್ರಾಗ್ರವಿದ್ಯುದ್ದ್ಯುತಿ ಮುಕುಟತಟಸ್ಥಾಸ್ಫುರತ್ನಾಂಶು ಜೃಂಭ ಜ್ಜೃಂಭದ್ದಿವ್ಯಟ್ಟಪ ಶುಂಭದ್ಧುಮುರುರವಘನಧ್ವಾನಕಃ ಕಾಯಮೇಘಃ।'

ಈ ಎರಡು ಚರಣಗಳಲ್ಲಿ ಕೇಳಬರುತ್ತದೆ. ಜಂಭ, ಡ್ಡು, ಧ್ವಾ, ಘವರ್ಣಗಳ ಪೂರ್ಣ ಧ್ವನಿಯು ಅನುಸ್ವಾರದ ಯೋಗದಿಂದ ತಡೆದು ಒಮ್ಮೆಲೆ ವಿಸರ್ಜನ ಮಾಡಿದಂತೆ ಕರ್ಣಕ್ಕೆ ಬೀಳುತ್ತದೆ.

(೧೦) ಇದಲ್ಲದೆ ಈ ಕವಿಸಾರ್ವಭೌಮರ ಆಶ್ಚರ್ಯಕರವಾದ ಯಮಕಕುಶಲತೆಯನ್ನು, ಉತ್ತಮೋತ್ತಮ ಕಲ್ಪನಾ ಚಾತುರಿಯನ್ನು ಪದವಿನ್ಯಾಸದಲ್ಲಿ ತಂದು ಕೊಟ್ಟದ್ದನ್ನು, ಆದಿತಾಳ, ಏಕತಾಳ, ರೂಪತಾಳ ಈ ತಾಳಗಳಿಗನುಸರಿಸಿ ಅನ್ನುವಂತೆ, ಕಳಿಕಾ, ವಿಭಕ್ತ್ಯಾಭಾಸ, ಡವಡೆ, ಮತ್ತು ವೃತ್ತಗಳನ್ನು ರಾಜಕುಲದೇವತೆಯ ಮುಂದೆ ನೆರೆಯುವ ಸಭೆಯಲ್ಲಿ ಒಪ್ಪುವಂತೆ ಎಲ್ಲರೂ ಭಾಗಿಗಳಾಗಿ ಅನ್ನಲಿಕ್ಕೆ ಬರುವಂತೆ ರಚನಾಸಾಮರ್ಥ್ಯದ ಆವಿರ್ಭಾವವನ್ನು ನೋಡಿ ಯಾವಾತನ ಮನಸ್ಸು ಆನಂದಪಡಲಿಕ್ಕಿಲ್ಲ? ಮತ್ತು ಕವೀಂದ್ರರ ವಿಷಯದಲ್ಲಿ ಅಭಿಮಾನ ಹುಟ್ಟಲಿಕ್ಕಿಲ್ಲ? ಈ ಗದ್ಯವು ಅಪ್ರತಿಮ ಶಿಲ್ಪಕಲಾದುರೀಣನಾದ ಶಿಲ್ಪಿಯಿಂದ ಮನಮುಟ್ಟಿ ರಚಿಸಿದ ಭವ್ಯ ಮಂದಿರವು ಅನೇಕ ಸುಂದರ ಚಿತ್ರಗಳ ಕೊರೆಯೋಣ, ಪ್ರಮಾಣ ಶೀಲತೆಯಿಂದ ತೋರುವ ಸುಂದರವಾದ ಭಾಗಗಳಿಂದ ಶೋಭೆಯನ್ನು ಪಡೆದು ತೋರೋಣ ಮುಂತಾದವುಗಳಿಂದ ಒಳ್ಳೇ ಕಳೆವೆತ್ತು ಅಮರತ್ವವನ್ನು ಸೆಳೆದುಕೊಳ್ಳುವಂತೆ

ಈ ಗದ್ಯವು ಎಂದೆಂದಿಗೂ ಅಚ್ಚಳಿಯದಂತೆ ಅಮರವಾಗಿ ಶ್ರೀ ಷಡಕ್ಷರಿ ದೇವರ ಅಪ್ರತಿಮ ಪ್ರತಿಭೆಯನ್ನು ಮತ್ತು ರಚನಾಸಾಮರ್ಥ್ಯವನ್ನು ತೋರಿಸುವದಲ್ಲದೆ, ತತ್ಸಂಬಂಧದಿಂದ ಕೆಳದೀ ಭೂಪಾಲ ಮನೆತನದ ಹೆಸರು ಅದರಲ್ಲಿ ಕಳೆದು ಹೋಗದಂತೆ ಮಾಡಿರುತ್ತದೆ. ಯಾವ ರೀತಿಯಲ್ಲಿ ಒಂದು ಭವ್ಯ ಮಂದಿರದ ಒಂದು ಭಾಗದೊಳಗಿನ ಒಂದು ಕಡೆಯ ಚಿತ್ರವು ಒಡೆದು ಹೋದರೆ ಅದರಂತೆ ಇದ್ದ ಇನ್ನೊಂದು ಭಾಗವನ್ನು ಲಕ್ಷಿಸಿ ಆ ಚಿತ್ರವನ್ನು ಕಲ್ಪಿಸಲಿಕ್ಕೆ ಬರುತ್ತದೋ ಅದರಂತೆಯೇ ವೀರಭದ್ರೋದಾಹರಣ ಗದ್ಯದಲ್ಲಿ ಒಂದು ಚರಣದಲ್ಲಿ ಒಂದು ಅಕ್ಷರವು ಹೋದರೆ, ಅದನ್ನು ಹಿಂದಿನ ಅಥವಾ ಮುಂದಿನ ಭಾಗಗಳ ಮೇಲಿಂದ ಮತ್ತು ಅದರಂತೆ ಇದ್ದ ಚರಣಗಳ ಭಾಗದಿಂದ ಪ್ರಮಾದವಾಗದಂತೆ ತುಂಬಲಿಕ್ಕೆ ಬರುತ್ತದೆ.

ಅಪಿಚಖರ ಪ್ರಭಸು—ಭಗಾತ್ರಂ
ವಿಪುಲಮತಪ್ರಮ—ಪ್ರಿಯಮಿತ್ರಂ (ತ ಅಥವಾ ಥ)
ದಿತಿಸುತ ಭೀಷಣಭೂ—ಯುಕ್ತಂ
ಹಿತವಿ—ಭಾಷಣತೋ—ರಕ್ತಂ
ಯತಿಪದ ದೀಚಿ ಸ—ರಪಕ್ವಂ
ಕೃತಮುಖಧೀರವಿದಾ—ಣದಕ್ಷಂ
ಫಣಿಪತಿ ಕುಂಡಲಮಂ—ಗಂಡಂ
ಕ-ರುಚಿ ಮಂಡನ ಖಂ—ಚಂಡಂ

ಈ ಕಳಕೆಯಲ್ಲಿ ಬಿಟ್ಟ ವರ್ಣಗಳನ್ನು ವಾಚಕರೇ ಪೂರ್ಣಮಾಡಿ ಹೇಳಬಹುದು.

(೧೧) ಹೀಗೆಯೇ ಕೇವಲ ಬಾಹ್ಯರೂಪದಲ್ಲಿ ತೋರುವ ಅನೇಕ ವಿಧವಾದ ಮಧುರತೆ, ಕುಶಲತೆ, ಚಮತ್ಕೃತಿ, ವೆಗ್ಗಳವಾದ ಲಾಲಿತ್ಯ ಮುಂತಾದವುಗಳನ್ನು ವಿಚಾರಿಸುತ್ತ ಹೋದಹೋದಹಾಗೆ ರಚನಾಶಕ್ತಿಯು ಪರಿಪೂರ್ಣವಾದ ಕವಿತಾಪ್ರಾಗಲ್ಭ್ಯವು ಹೆಚ್ಚು ಹೆಚ್ಚು ಒಡೆದು ತೋರಬರುತ್ತದೆ. ಈ ಗುಣವು ಶ್ರೀ ಷಡಕ್ಷರಿ ದೇವರಲ್ಲಿ ಅಭಿನವವಾಗಿ ಪರಿಣಮಿಸುವದರಿಂದ (ತಾವೇ ತಮ್ಮ ಗ್ರಂಥಗಳಲ್ಲಿ ಹೇಳಿರುವದು. ಕವಿಕರ್ಣರಸಾಯನದಲ್ಲಿ ಒಂದನೇ ಸರ್ಗದ ೫೬ ನೇ ಶ್ಲೋಕದಲ್ಲಿ

ಯುಸ್ಯಾಸ್ತಿ ಭಾಷಾದ್ವಯು ಸತ್ಕವಿತ್ವಂ ಜಗನ್ನುತಂ ನೂತ್ನಮನನ್ಯ ಲಭ್ಯಂ। ನೈಪುಣ್ಯಮಿಶಾಗಮಶಾಸ್ತ್ರ ರಾಶಾವೀಶ ಪ್ರಸಾದಾತ್ಪರಿಲಬ್ಧ ಮುರ್ವ್ಯಾಂ ॥೫೬॥) ಇದೀ ಕರ್ನಾಟಕವು ಇಷ್ಟೇ ಅಲ್ಲ; ಇದೀ ಜಗತ್ತು ಆ ಯತೀಂದ್ರರು ನೈಸರ್ಗಿಕವಾಗಿ ಉಂಟುಮಾಡಿದ ಉಪಕಾರದ ದೆಶೆ ಯಿಂದ ಋಣಿಯಾಗಿರುತ್ತದೆಂಬದನ್ನು ಸುಜ್ಞವಾಚಕರಿಗೆ ಹೇಳುವ ಕಾರ ಣವಿಲ್ಲ. ಇನ್ನೊಂದು ವೈಶಿಷ್ಟ್ಯವೇನಂದರೆ, ಯಾವ ವೃತ್ತಗಳಲ್ಲಿ ಅಥವಾ ಪದಗಳಲ್ಲಿ ಬಾಹ್ಯರೂಪಸೌಂದರ್ಯವನ್ನು ಗುರು, ಲಘು, ಮಾತ್ರೆಗಳ ಗಣನೆಯಿಂದ ಅಥವಾ ಕೇವಲ ಮಾತ್ರಾಗಣನೆಯಿಂದ ವಿವಿಧವಾಗಿ ರಚಿ ಸಲಿಕ್ಕೆ ಸಾಧ್ಯವಿದೆಯೋ ಅಂಥ ಅಗಣಿತ ಯುಕ್ತಿಗಳನ್ನು ಕವಿಸಾರ್ವ ಭೌಮರಾದ ಶ್ರೀ ಷಡಕ್ಷರದೇವರು ತಮ್ಮ ಕೃತಿಗಳಲ್ಲಿ ವಿಪುಲವಾಗಿ ರಂಜಿಸಿರುವರು. ಏನೂ ಅರ್ಥವನ್ನು ತಿಳಿಯದ ಮನುಷ್ಯನಿಗಾದರೂ ಲಲಿತವಾಗಿ ಗೋಚರಿಸುವದು; ಅವನ ಶ್ರವಣೇಂದ್ರಿಯವನ್ನು ಪ್ರೀಣಿಸು ವದು. ಸದ್ವರ ಕಾಳಿದಾಸ ಕವೀಂದ್ರನು ತನ್ನ ಮೆಲ್ನುಡಿಯ ವಿಕಾಸ ದಲ್ಲಿ ಮೇಲೆ ಹೇಳಿದ ವಿವಿಧರೂಪರಚನಾಯುಕ್ತಿಗಳ ಕಡೆಗೆ ಲಕ್ಷ್ಯ ವನ್ನು ಹರಿಯಗೊಡಲಿಕ್ಕೆ ಅವಕಾಶವನ್ನು ವಿಶೇಷವಾಗಿ ಕೊಟ್ಟಿಲ್ಲ. ಈ ವಿಷಯದಲ್ಲಿ ಆಯಾ ಕಾಲದ ವಿದ್ವಜ್ಜನತೆಯ ಸಂಕಲ್ಪವು ಕಾರಣೀಭೂ ತವಾಗಿರಬಹುದು. ಇದರಿಂದ ಸಂಸ್ಕೃತವಾಙ್ಮಯವನ್ನು ಶ್ರೀ ಷಡಕ್ಷರ ದೇವರು ಕೇವಲ ಬಾಹ್ಯರೂಪದಲ್ಲಿ ಎಷ್ಟು ಪ್ರಗತಿಗೆ ಒಯ್ದರೆಂಬದನ್ನು ವಾಚಕರು ಊಹಿಸಬಹುದು. ಈ ಯತೀಂದ್ರರ ವಿಷಯದಲ್ಲಿ ಅವರು ಪ್ರಸನ್ನ ಗೀರ್ವಾಣ ವಾಣಿಯಿಂದ ವಿರಚಿಸಿದ ಕವಿಕರ್ಣರಸಾಯನವೆಂಬ ಸತ್ಕಾವ್ಯಕ್ಕೆ "ಸಾಹಿತ್ಯ ಸುಧೋದಯಾ" ಎಂಬ ವ್ಯಾಖ್ಯೆಯನ್ನು ಬರೆದ ಮಾನವನ್ನು ಹೊಂದಿದ ಶ್ರೀ ವೆಂಗನ ಸುಧೀಗಳು ಹೀಗೆ ಸ್ವಲ್ಪದರಲ್ಲಿ ಸಂಗ್ರಹಿಸಿ ಬರೆದಿದ್ದಾರೆ. ಅದನ್ನು ಇಲ್ಲಿ ಹೇಳಿದರೆ ಭೂಷಣವಾಗದೆ ಇರದು.

ನಿಖಿಲ ಕಲಾಕಲಾಪ ವಿಜ್ಞಾನ ಸಮಧಿಗತನೈಪುಣೀ ಸಮೇಧಿತ ಬಹುವಿಧ ಮಧುರ ಕವಿತಾ ವಿಶಾರದಃ ಶಾರದ ಸುಧಾಕರ ಚಂದ್ರಿಕಾ ವಿನಿರ್ಮಲ ಚಿತ್ರಶ್ಚಿತ್ತ ಜಾರಾತಿ ಕೃಪಾಮೃತರಸಸೇಚನ ಪರಿಹೃತ ಸಂಸೃತಿ ಜನಿತ ಸಂತಾಪಸ್ತಾಪಸ ಜನಮಾನ್ಯಪುಣ್ಯಚರಿತ್ರಃ ಸಕಲ ಸುಧೀಸಮೂಹ

ಶ್ಲಾಘನೀಯ ಸರಸಸದ್ವಚೋವಿಸ್ತರ ವಿನ್ಯಾಸ ವಿಲಾಸ ಚಾತುರೀಧು ರೀಣ ಕೋವಿದ ಮಹಾಕವಿ ಶ್ರೀ ಷಡಕ್ಷರದೇವನಾವರಾ—

*A thing of beauty is a joy forever- Keats*

ಕನಕವದುಕಾ।

ಸಿದಡೆ ಮಿಗೆಮಿಗೆ ಬಣ್ಣ ವೆಗ್ಗಳವಾಗಿ ತೋರ್ಪುದಲಾ ॥೬೫॥

ತಡೆ ಯದ್ದಿತಾಗಲಿಕ್ಷುವ। ಕಡಿವಡಗ್ಗದ ಮಧುರವಾಗದೆ। ಹಿಡಿದು ಕರಗಸದಿಂದ ಕೊರಡೊಡೆ ಚಂದನದ್ರುಮವು॥ ಒಡನೆ ಕಡುಗಂಪ ಹುದಲಾ (ಭೀಮಕವೀಂದ್ರರ ಅಭ್ಯುದಯ ಬಸವಪುರಾಣ ೨೨-೬೬) ಎಂಬಂತೆ ಬಾಹ್ಯರೂಪದಲ್ಲಿಯಾದರೂ ಸೌಂದರ್ಯವು ಮನಕೆ ಆನಂದ ವನ್ನು ಬೀರುತ್ತ ಬೀರುತ್ತ ಇರುವದು ನೈಸರ್ಗಿಕವಾದದ್ದು.

೧೨. ಉತ್ತಮ ವರ್ಗದಲ್ಲಿ ಮಿಗಿಲಾದ ಸ್ಥಾನವನ್ನು ಹೊಂದಿದ ಕವೀಂದ್ರರಲ್ಲಿ ಬಾಹ್ಯರೂಪರಚನಾಸಾಮರ್ಥ್ಯವು ಯಾವ ಘನತೆಯನ್ನು ಹೊಂದಿ ಸ್ಫುರಿಸುವದೋ ಅಷ್ಟೇ ಪರಿಪೂರ್ಣವಾದ ಪ್ರೌಢಿಮೆಯನ್ನು ಹೊಂದಿ ಕಲ್ಪನಾ ಚಾತುರ್ಯದಲ್ಲಿ ಕವಿತಾಪ್ರತಿಭೆಯು ಅಂತರಾತ್ಮ ದಂತೆ ಸ್ಫುರಿಸುವದು. ಆದ್ದರಿಂದ ಕವಿ ಸಾರ್ವಭೌಮರಾದ ಶ್ರೀ ಷಡ ಕ್ಷರಿದೇವಯತೀಂದ್ರರ ವಿಷಯದಲ್ಲಿ ಕವಿತಾಪ್ರತಿಭೆಯ ಬಗ್ಗೆ ಸ್ವಲ್ಪ ವಿವರಿಸುವದು ವಿಹಿತವಾಗುವದು. ಈ ಕವಿತಾಪ್ರತಿಭೆಯು ಕವಿಕರ್ಣ ರಸಾಯನದಲ್ಲಿ ಮತ್ತು ರಾಜಶೇಖರವಿಳಾಸ ಮೊದಲಾದ ಕನ್ನಡ ಪ್ರಬಂ ಧಗಳಲ್ಲಿ ಒಳ್ಳೇ ತೇಜೋಯುಕ್ತವಾಗಿ ವಿಸ್ಫುರಿಸುತ್ತಿರುವದು. ಕಲ್ಪನಾ ಶಕ್ತಿಯು ದ್ವಿವಿಧವಾದದ್ದು. ಒಂದು ಸೃಷ್ಟಿಯಲ್ಲಿ ತೋರುವ ನೋಟ, ಕ್ರಿಯಾ, ರೂಪಾದಿಗಳನ್ನು ಇದ್ದಂತೆಯೇ ಉತ್ತಮವಾಗಿ ರಮಣೀಯತೆ ಯಿಂದ ವರ್ಣಿಸುವಲ್ಲಿ ತೋರುವದು. 'ಸ್ಫುರದ್ದಂಷ್ಟ್ರ ಭೀಮಸ್ಫುಟ ಮುಖ ಚಲದ್ದೀರ್ಘ ರಸನಃ' ಕವಿಕರ್ಣರಸಾಯನದಲ್ಲಿ ೧-೯೬ ನೇ ಶ್ಲೋಕದಲ್ಲಿ ಮಿಂಚುವ ಶೂಲದ ಹಲ್ಲುಗಳಿಂದ ಭಯಂಕರವಾದ ಸ್ಫುರಿಸುವ ಬಾಯೊ ಳಗೆ ಚಲಿಸುತ್ತಿರುವ ಉದ್ದವಾದ ಜಿಹ್ವೆಯುಳ್ಳ ಸಿಂಹವು ಎಂಬ ವರ್ಣ ನೆಯು ಒಂದನೇ ವಿಧವಾದದ್ದು. ಇನ್ನೊಂದು ಅನೇಕ ವಿಧವಾದ ನಿರೀ ಕ್ಷಣೆಯಿಂದ ಸ್ಮರಣೆಯೊಳಗೆ ಸಂಗ್ರಹಿಸಲ್ಪಟ್ಟ ವಸ್ತುಗಳ ನೂತನವಾದ ಸಂಮೇಳನದಿಂದ ಒಂದು ಲೋಕವಿಲಕ್ಷಣವಾದ ರೂಪದೊಳಗೆ ಲಲಿತ

ವಾಗಿ ವರ್ಣಿಸೋಣಪರಲ್ಲಿ ಕಂಡುಬರುವದು. ಅದು ಕವಿಯ ಸ್ವಕಪೋಲ ಕಲ್ಪಿತ ಸೃಷ್ಟಿಯು.

ವೀಚ್ಯಗ್ರಪಾತನವಮುದುನ್ನಮದಬ್ಜಯುಗ್ಮ
ಚಂಚತ್ಕರದ್ವಯುತತಾಹತಿಭಿರ್ನಿತಾನ್ತ್ಯಾಃ।
ಪದ್ಮಾಂತರಸ್ಥಮಧು ತೈಲರಸಾರ್ದ್ರಭೃಂಗ
ಕೇಶಾಘಮರ್ದನಕರೀವ ಬಭೌ ಸರಶ್ರೀಃ॥ (೨-೧೯ ಕವಿಕರ್ಣರಸಾಯನದಲ್ಲಿ)

ಸರೋವರದಲ್ಲಿ ತೆರೆಗಳ ಮೇಲ್ಭಾಗಗಳು ತಡೆಯೋಣದರಿಂದ ಕಮಲಗಳು ಮೇಲಕ್ಕೆ ಮತ್ತು ಕೆಳಗೆ ಹೋಗೋಣದರಿಂದ ಕೇಶಮರ್ದನ ಕ್ರಿಯೆಯಲ್ಲಿ ಚಲಿಸುವ ಕರದ್ವಯದ ಭಾವವನ್ನು ಕಲ್ಪಿಸೋಣವಾಗಿದೆ. ಇನ್ನೊಂದು ಕಮಲದಲ್ಲಿ ಮಕರಂದದಲ್ಲಿ ಮುಳುಗಿದ ಭೃಂಗಪಟಲವು ಎಣ್ಣೆಯಿಂದ ಸ್ನಿಗ್ಧವಾಗಿ ತೋರುವ ಕಚಭರದಂತೆ ಕಲ್ಪಿಸಲ್ಪಟ್ಟು ಸರೋವರ ಲಕ್ಷ್ಮಿಯು ತನ್ನ ಕೇಶವನ್ನು ಮರ್ದಿಸುವಂತೆ ಭಾವಿಸಲ್ಪಟ್ಟಿದೆ. ಈ ತರದ ರಮ್ಯ ವರ್ಣನೆಯು ಎರಡನೇ ವಿಧದಲ್ಲಿ ತೋರುತ್ತದೆ. ಈ ತರಧ ನಿರ್ಮಾಣ ಶಕ್ತಿಯು ಎಷ್ಟು ಪ್ರಬಲವಿರುತ್ತದೋ ಅಷ್ಟು ಘನತೆಯು ಕವಿಗಳಿಗೆ ಬರುತ್ತದೆ. ಈ ಶಕ್ತಿಯು ಶ್ರೀ ಷಡಕ್ಷರದೇವಯತೀಂದ್ರರಲ್ಲಿ ಪರಮಾವಧಿಯನ್ನು ಹೊಂದಿ ವಿಕಸಿತವಾಗಿ ಪರಿಣಮಿಸುತ್ತದೆ. ಇದೇ ಶಕ್ತಿಬಲದಿಂದಲೇ ತಮ್ಮ ರಾಜಶೇಖರವಿಳಾಸವು ಕವಿತಾದೇವತೆಯ ಸೀಮಂತರತ್ನವೆಂದು ಸಿದ್ಧೀತಿಯಿಂದ ಸ್ವಾಭಾವಿಕವಾಗಿ ಉಸುರಿದ್ದಾರೆ. ಇದು ಅವರು ಎಳೆಯ ಪ್ರಾಯದಲ್ಲಿಯೇ ಬಂಧದ್ದು. ಸರಸ್ವತಿಯ ಚಲ್ವಿಕೆಗೆ ತನ್ನ ಕಾವ್ಯವನ್ನು ಹೋಲಿಸಿ ಹೇಳಿಕೊಳ್ಳುವ ಲಕ್ಷ್ಮೀಶ ಕವೀಂದ್ರನಲ್ಲಿ ಈ ಶಕ್ತಿಯು ಪೂರ್ಣ ವಿಕಾಸವನ್ನು ಹೊಂದಿರುವದಿಲ್ಲ. ಮತ್ತು ಅನೇಕ ವಿಧದಿಂದ ಪರಿಣಮಿಸುವದಿಲ್ಲ. ಆದ್ದರಿಂದಲೇ ಜೈಮಿನಿ ಭಾರತದೊಳಗಿನ ಪದಗಳನ್ನು ಓದಿ ಆಮೇಲೆ ಅದೇ ತರವ ವರ್ಣನೆಯಿಂದ ವಿಶಿಷ್ಟವಾದ ವರ್ಣನೆಯ ವೃತ್ತಗಳನ್ನು ಓದಿದರೆ, ರಾಜಶೇಖರ ವಿಳಾಸದೊಳಗಿನ ವರ್ಣನೆಯು ಜೈಮಿನಿಭಾರತದೊಳಗಿನ ವರ್ಣನೆಯನ್ನು ಮರೆಸುವದು. ಮತ್ತು ತಾನು ಹೆಚ್ಚು ಮನದೊಳಗೆ ಪ್ರತಿಫಲಿತವಾಗಿ ಕಲ್ಪನಾಶಕ್ತಿಗೆ ಪ್ರೇರಣೆಯನ್ನು ಕೊಡುತ್ತ ಉಳಿಯುವದು. ಆಧುನಿಕ ಕಾವ್ಯಕಲಾ ವಿಮರ್ಶೆಯಲ್ಲಿ ಅತಿ ಕೋವಿದರಾದ ಪ್ರೋಫೆಸರ ಸೇಂಟಸಬ

ರಿಯುವರು. ಇದೇ ತರದ ಪರೀಕ್ಷೆಯಿಂದ ಯಾವ ಕಾವ್ಯವಾಗಲಿ ಅದರ ಭಾಗವಾಗಲಿ ಇನ್ನೊಂದರಿಂದ ಉಚ್ಚವಾದದ್ದು ಅಥವಾ ಕಡಿಮೆ ತರಗತಿಯಲ್ಲಿ ಸಮಾವೇಶ ಹೊಂದಲರ್ಹವಾದದ್ದು ಎಂಬದನ್ನು ನಿರ್ಧರಿಸತಕ್ಕದ್ದು ಎಂದು ತಮ್ಮ ೧೯ನೇ ಶತಮಾನದ ಕವಿಚರಿತೆಯಲ್ಲಿ ಉಲ್ಲೇಖಿಸಿದ್ದಾರೆ. ಜೈಮಿನಿ ಭಾರತದಲ್ಲಿ ಕಥನಶೈಲಿಯು ಪಕ್ವಾವಸ್ಥೆಯನ್ನು ಹೊಂದಿದೆ ಎಂದು ಭಾಸವಾಗುತ್ತದೆ. ಇದೇನೂ ಸಾಮಾನ್ಯವಾದದ್ದಲ್ಲ. ವರ್ಣಕ ಪ್ರೌಢಿಮೆಯಲ್ಲಿ ಭೀಮಕವೀಂದ್ರರು ಸರ್ವಸಮ್ಮತವಾಗುವಂತೆ ಯಾವ ಪರಿಪೂರ್ಣಾವಸ್ಥೆಯ ಘನತೆಯನ್ನು ಹೊಂದಿರುವರೋ ಅಷ್ಟೇ ಪರಿಪಕ್ವವಾದ ವಸ್ತುಕ ಘನತೆಯು ಶ್ರೀ ಷಡಕ್ಷರಿದೇವರಲ್ಲಿ ಸ್ಫುಟವಾಗಿ ತೋರುವದು. ಮೊದಲನೆಯವರ ಕಾವ್ಯವು ವರ್ಣಕ ಕಾವ್ಯಗಳಲ್ಲಿ ಅತ್ಯುಚ್ಚ ಸ್ಥಾನವನ್ನು ಹೊಂದಿ ಮೆರೆಯುತ್ತಿರುವದು. ಎರಡನೇ ಕವೀಂದ್ರರ ಕಾವ್ಯವು ವಸ್ತುಕ ಕಾವ್ಯಗಳಲ್ಲಿ ಹಾಗೆ.

೧೩. ಇನ್ನು ಶ್ರೀ ಷಡಕ್ಷರದೇವಯತೀಂದ್ರರೂ ಮತ್ತು ಜಾನ್ ಮಿಲ್ಟನ್ ಕವೀಂದ್ರನೂ ಒಂದೇ ಶತಮಾನದವರು. ಪ್ರಗಲ್ಭಸರಣಿಯಲ್ಲಿ ಮತ್ತು ಉನ್ನತ ಕವಿತ್ವ ಪ್ರೌಢಿಮೆಯಲ್ಲಿ ಆಂಗ್ಲ ಕವಿವರೇಣ್ಯನೂ ಮತ್ತು ಶ್ರೀ ಷಡಕ್ಷರದೇವಯತೀಂದ್ರ ಕವಿಪುಂಗವರೂ ಒಂದೇ ವರ್ಗದಲ್ಲಿ ಗಣನೆಗೆ ಅರ್ಹರು. ಆ ಯತೀಂದ್ರರು ಕಲ್ಪನಾ ಚಾತುರಿಯದಲ್ಲಿ ಆಂಗ್ಲ ಕವಿ ಸಾರ್ವಭೌಮನಾದ ಶೇಕ್ಸಪೀಯರನ ಕಲ್ಪನಾಶಕ್ತಿಗೆ ಮಿಗಿಲಾದ ಕಲ್ಪನಾ ಶಕ್ತಿಯನ್ನು ತೋರಿಸಿದ 'ಶೆಲಿ' ಕವಿವರ್ಯನನ್ನು ಮನಸ್ಸಿಗೆ ಒಮ್ಮೆಲೆ ಚಿತ್ರದಂತೆ ಪ್ರತಿಬಿಂಬಿಸುವ ಸ್ಫುಟವಾದ, ಪ್ರಪಂಚದೊಳಗಾಗುವ ಸಂಗತಿಗಳ ಸ್ವರೂಪಗಳನ್ನು ಅಚೇತನ ವಸ್ತುಗಳಲ್ಲಿ ಒಳ್ಳೇ ಕುಶಲತೆಯಿಂದ ಸಮಾರೋಪಿಸುವ ಪ್ರಾವೀಣ್ಯದಿಂದ ಸ್ಫುರಿಸುವ ಕಲ್ಪನಾ ತೇಜೋವಿಶಿಷ್ಟವರ್ಣನೆಯಲ್ಲಿ ಸುಲಭವಾಗಿ ಹಿಂದೆ ಹಾಕುವದು. ಪ್ರಗಲ್ಭಸರಣಿ, ಕಲ್ಪನಾಚಾತುರ್ಯ, ಪರಿಪಕ್ವವಿಚಾರ, ಸುಪಾಂಡಿತ್ಯ ಪರಿಮಿತಶಬ್ದಗಳಲ್ಲಿ ಒಂದು ವರ್ಣನೆಯನ್ನು ಲಲಿತವಾಗಿ ಉಸುರೋಣ ಮತ್ತು ಅನೇಕ ತರದ ಛಂದಸ್ಸಿನ ಸೌಂದರ್ಯವನ್ನು ಬೀರೋಣ ಇದಲ್ಲದೆ ಇನ್ನು ಅನೇಕ ಗುಣಗಳಲ್ಲಿ ಶ್ರೀ ಷಡಕ್ಷರಿದೇವಯತೀಂದ್ರರನ್ನು ಮತ್ತು ಈಗಿನ ಆಂಗ್ಲ ಆಸ್ಥಾನಕವಿಪುಂಗವರಾದ 'ರಾಬರ್ಟಬ್ರಿಜಿಸ' ಇವರನ್ನೂ ತುಲನೆ ಮಾಡಿ ನೋಡಿದರೆ ವಾಚಕರಿಗೆ ಅವರೀರ್ವರು ಕವೀಂದ್ರ ಚಕ್ರವರ್ತಿಗಳು ಹೇಗೆ

ವಿಶೇಷವಾಗಿ ಸಮತಿಯನ್ನು ಹೊಂದುವರೆಂಬದು ಗೋಚರಿಸುವದು. ಅವರೀರ್ವರ ಕಾವ್ಯಗಳಲ್ಲಿ ಸೃಷ್ಟಿಯೊಳಗೆ ತೋರುವ ಅಚೇತನವಸ್ತುಗಳು ಚೇತನಾ ವಿಶಿಷ್ಟ ಚೇಷ್ಟೆಗಳನ್ನು ಪಡೆದು ವರ್ತಿಸುವಂತೆ ಸರ್ವದಾ ಸ್ಫುರಿಸುವವು.

*Where spreading crowfoot mars*
*The drowning nenuphars,*
*Waving the tassels of her silken grass*
*Below her silver stars.* (*Robrrt bridgrs*)

ಚೂತೋಪ್ಯಸೂತ ಸಹ ಮಲ್ಲಿಕಯಾಪ್ರವಾಳ। ಚಂಚತ್ಪ್ರಸೂನವಿಶಿ
ಖಾಙ್ಗತಾಂ ವಿಜೇತುಃ। ಕಾಮಸ್ಯ ಚೇತ್ಯಳಿಗುಣಾನ್ ಸ್ವಯಮಪ್ಯ
ಸೂತ ಜಂಬೂಕುಜಃ ಸ್ಫುರಿತ ಪಕ್ವಫಲಾಪದೇಶಾಲ್॥

(ಕವಿಕರ್ಣರಸಾಯನ ೨ ನೇಸರ್ಗ)

ಮೇಲೆ ಬರೆದ ವಿಚಾರಗಳು ದಾವಣಗೆರೆಯ ಮಿ॥ ನಿಶಾನಿಮಠ ಇವರು ಮಠಮಾನ್ಯಗಳಿಂದ ದೊರಕಿಸಿ ಪ್ರಸಿದ್ಧಮಾಡಿದ "ಸ್ತೋತ್ರಮಂಜರಿ" ಎಂಬ ಸರ್ವಲಿಂಗಾಯತ ಮತ ಗ್ರಾಹ್ಯವಾದ ಪುಸ್ತಕವನ್ನು ವಿಹಂಗಮ ದೃಷ್ಟಿಯಿಂದ ನಿರೀಕ್ಷಿಸೋಣ ಉಂಟಾದವುಗಳು ಇರುತ್ತವೆ. ಇಲ್ಲಿಗೆ ಶ್ರೀ ಷಡಕ್ಷರ ದೇವಯತೀಂದ್ರರ ದಿವ್ಯ ಪಾದಾರವಿಂದಗಳನ್ನು ನೆನೆದು ವಿರಮಿಸುತ್ತೇನೆ.



# ಕನಸು.

(ಲೇಖಕ:— ಈಶ್ವರ ಸಣಕಲ್ಲ.)



ಗಾಳಿಯ ಹೊಡೆತಕೆ ಭುಸ್ಸೆಂದೇಳುವ ವ್ಯಾಳಗಳೆರೆಡರ ತಳ್ಳಿಯಲಿ ಲೀಲೆಯೊಳೋಲಾಡುವ ಸಾಸಿರ ದಳಗಳ ತಾವರೆ ಘಮಘಮಿಸುತಲಿ ॥೧॥

ಎಳೆಬೆಳಕಿನ ಸವಿಯನು ಸವಿಯುತ ತಾ ನಿರುತದೊಳರಳಿಯೆ ಇರುತಿಹುದು ನೆಲಸಿಹನದರೊಳು ಕನಸೆಂಬರಸನು ಬಗೆಬಗೆಸೊಗವನು ತಾ ಪಡೆದು ॥೨॥

ರವಿಯನು ಶಶಿಯನು ಶನಿಯನು ಮಂಗಳಬುಧಗುರುಶುಕ್ರರ ಸೆರೆಹಿಡಿದು ಕವಿಯುತರಾಹುವ ಮುಸುಕುತ ಕೇತುವಮುಗಿಲಿನಕಡೆಗೆ ತಾ ನಡೆದು ॥೩॥

ದಿಕ್ಕರಿಯಿಂದಿಕ್ಕರಿಯನು ಹತ್ತು ತಲಕ್ಕರೆಯೊಳು ತಿರುಗುತ ತಾನು ಗಕ್ಕನೆ ಪಾತಾಳದ ತಳಕಿಳಿಯುತ ಬ್ರಹ್ಮಾಂಡವನಾಕ್ರಮಿಸಿಹನು ॥೪॥

ಆಸೆಯ ತೆರದೊಳು ನೆನಹಿನತೆರದೊಳು ತರತರ ರೂಪವ ಧರಿಸುವನು ಆಸೆಯ ಮೊಗವನು ನೆನಹಿನ ಮೊಗವನು ಕನ್ನಡಿಯೊಲು ಪ್ರತಿಬಿಂಬಿಸನು ॥೫॥

ಜಾಗರ ರಮಣನ ನಿದ್ರಾ ರಮಣಿಯು ಮುದ್ದಿಸುತಿರೆಯಾಗಮಿಸುವನು ಆಗಮಿಸುತನೋಡುತ ತಾ ಬಗೆಬಗೆ ಲೀಲೆಯ ನೆಸಗುತ ನಿಲ್ಲುವನು ॥೬॥

ನಿಲ್ಲಲು ನಿದ್ರೆಯು ನೋಡುತಲವನನು ಪತಿಯೊಳು ಬೆರೆಯುವದನು ಬಿಟ್ಟು ಮೆಲ್ಲನೆ ಜಾರ್ವಳು ನಾಚುತಲವನಿಗೆ ಮನವನು ಪತಿಯಾಸೆಯೊಳಿಟ್ಟು ॥೭॥

ಇನಿಯಳ ಅಗಲಿಕೆಗಾವನು ಕಾರಣನೆನ್ನುತ ಜಾಗರನಲೆಯುವನು ಕನಸರಸನು ತಾ ನೆನಹಾಗುತೆ ಜಾಗರನಿಗೆಕಾಣಿಸಿಕೊಳ್ಳುವನು ॥೮॥

ನೆನಹಾಸೆಗಳೆಲ್ಲವು ಘನವಾಗಲು ಕನಸಾಗುತೆ ತೋರುತಲಿಹವು ಕನಸುಗಳುಂ ಕೊನೆಯೊಳು ಜಾಗರದೊಳು ನೆನಸಾಗುತೆ ಕಾಣುತಲಿಹವು ॥೯॥

ನೆನಸೇ ನೀನೋ, ನೀನೇ ನೆನಸೋ, ಎಂಬೀ ಮರುಳ್ಗೊಡಿಸುವ ಕನಸೇ ಮನದೊಳು ಸೇರುತ ಘನತರ ಕಾರ್ಯವ ನೆಸಗಿಸಿ ಜಗವನು ನೀ ಹರಸು ॥೧೦॥

ಸೂ. ೨೭. ೨೮. ೨೯. ೩೦. ೩೧. ಶಕ್ತಿಯು ಪ್ರವೃತ್ತಿಯೆಂದೂ ಭಕ್ತಿಯು ನಿವೃತ್ತಿಯೆಂದೂ ಹೇಳಲ್ಪಡುತ್ತವೆ. ಅಂದರೆ ಶಕ್ತಿಯಿಂದ ಪ್ರಪಂಚದ ಸೃಷ್ಟಿಯೂ, ಭಕ್ತಿಯಿಂದ ಪ್ರಪಂಚದ ಲಯವೂ ಆಗುವವು. ಶಕ್ತಿವೈಚಿತ್ರ್ಯದಿಂದ ರೂಪವಿಲ್ಲದ್ದು ರೂಪುಗೊಳ್ಳುವುದು. ಭಕ್ತಿ ವೈಚಿತ್ರ್ಯದಿಂದ ರೂಪವು ರೂಪರಹಿತವಾಗುವುದು. ಯಾವಾಗಲೂ ಪ್ರಪಂಚದ ವೃದ್ಧಿಯನ್ನಪೇಕ್ಷಿಸುವುದೇ ಶಕ್ತಿಯ ಸ್ವಭಾವವಾದರೆ, ಪ್ರಪಂಚದ ಕ್ಷಯವನ್ನು ಕೋರುವುದೇ ಭಕ್ತಿಯ ಸ್ವಭಾವವಾಗಿರುವುದು. ಶಕ್ತಿಯು ಅಧೋಮುಖಿಯು ಸಮಾಯೆಯು. ಭಕ್ತಿಯು ಊರ್ಧ್ವಮುಖಿಯು ನಿರ್ಮಾಯೆಯು. ಯುಕ್ತಿ ಪ್ರಮಾಣಗಳಿಂದ ತರ್ಕಿಸಿ ನೋಡಿದರೂ ಶಕ್ತಿಗಿಂತ ಭಕ್ತಿಯ ಗುಣವೇ ಅಧಿಕವಾಗುವುದು.

## ವಿಚಾರ.

ಶಕ್ತಿ ಭಕ್ತಿಗಳಿಗೆ ಅಭೇದವಿದ್ದರೂ, ಭಕ್ತಿಯು ಗುಣಾಧಿಕ್ಯವನ್ನು ಹೇಳುವುದರ ತಾತ್ಪರ್ಯವೇನೆಂದರೆ—ಶಿವನ ಶಕ್ತಿಗೆ ಇಚ್ಛಾಶಕ್ತಿ ಅಥವಾ ಸಂಕಲ್ಪವೆಂತಲೂ, ಶಾಸ್ತ್ರಗಳಲ್ಲಿ ಪರ್ಯಾಯವಿರುವುದು. ಶಿವಸಂಕಲ್ಪವು ಚೇತನಾಚೇತನಾತ್ಮಕವಾದ ಜಗತ್ತನ್ನು ಉದ್ಧರಿಸುವುದರಲ್ಲಿ ಇರುವುದೇನೋ ಸಹಜವು. ಆದರೆ ಜಗನ್ನಾಟಕ ಸೂತ್ರಧಾರನಾದ ಶಂಕರನು ಲೀಲಾರ್ಥವಾಗಿ ಲಿಂಗಾಂಗಾದಿ ಭೇದದಿಂದಲೂ, ಜಗದಾಕಾರವಾಗಿಯೂ ಪರಿಣಮಿಸುವುದರಲ್ಲಿ ಪ್ರವೃತ್ತಿಯುಳ್ಳವನಾಗಿರುವನೆಂದು ಕಂಡುಬರುತ್ತದೆ. ಆದುದರಿಂದಲೇ ಸೂತ್ರಕಾರನು ಲಿಂಗಗತಶಕ್ತಿಯು ಪ್ರವೃತ್ತಿಪರವು (ಸೃಷ್ಟಿಯಲ್ಲಿ ಇಚ್ಛೆಯುಳ್ಳದು) ಎಂದು ಹೇಳಿರುವನು.

ಅಂಗನೆಂದರೆ ಗುರುವಿನಿಂದ ದೀಕ್ಷೆಗೊಂಡು, ಆಣವಾದಿಮಲತ್ರಯರಹಿತನಾದ ಶುದ್ಧಜೀವನು; ಮಲಬದ್ಧನಾದ ಮಲಿನ ಜೀವನಲ್ಲವು. ಅಂಗಗತ ಭಕ್ತಿಯೆಂದರೆ ಶುದ್ಧ ಜೀವನ ಸ್ವಭಾವವೇ. ಈ ಸ್ವಭಾವವು ನಿವೃತ್ತಿಪರವಾಗಿರುವುದು. ಅಂದರೆ ಶಿವನಲ್ಲಿ ಸಮರಸವಾಗುವುದನ್ನೇ ಕೋರುವುದು. ಶಿವನ ಸ್ವಭಾವದಂತೆ ಲೀಲಾರ್ಥವಾಗಿಯಾದರೂ ಸೃಷ್ಟಿಯಲ್ಲಿ ಉನ್ಮುಖವಾಗದು. ಆದುದರಿಂದಲೇ ಪ್ರವೃತ್ತಿಪರವಾದ ಶಿವನ ಸ್ವಭಾವಕ್ಕಿಂತಲೂ ನಿವೃತ್ತಿಪರವಾದ ಅಂಗನ ಸ್ವಭಾವ ಗುಣವು (ಭಕ್ತಿ) ಅಧಿಕವೆಂದು ಸೂತ್ರದಲ್ಲಿ ಪ್ರತಿಪಾದಿಸಲ್ಪಟ್ಟಿದು.

ಇಲ್ಲಿ ಪ್ರತಿಪಾದಿಸಲ್ಪಟ್ಟ ಅಂಗನ ಭಕ್ತಿಗೆ "ಪೂಜ್ಯೇಷ್ವನುರಾಗೋ ಭಕ್ತಿಃ" (ಗುರುದೇವತೆಗಳಲ್ಲಿ ಪ್ರೇಮವು) ಇತ್ಯಾದಿಯಾದ ಭಕ್ತಿಲಕ್ಷಣವನ್ನು ಹೇಳಿದರೆ ಸಾಕಾಗದು. ಆ ಲಕ್ಷಣಗಳು ಭಕ್ತಿವಿಶೇಷವನ್ನು (ಒಂದು ವಿಧವಾದ ಭಕ್ತಿಯನ್ನು) ಲಕ್ಷೀಕರಿಸುವುನಾಗಿರುವವು. ಇಲ್ಲಿ ಅಂಗನ ಭಕ್ತಿಯೆಂದರೆ ಅಂಗನ ಸ್ವಭಾವವು. ಈ ಸ್ವಭಾವದಲ್ಲಿ ಶಿವಪ್ರೇಮ, ಶಿವಜ್ಞಾನ, ಶಿವಕ್ರಿಯಾದಿಗಳು ಅಡಕವಾಗಿರುವವು. ಶಿವತ್ವ ಪ್ರಾಪ್ತಿಯ ಸಾಧನ ಸಾಮಗ್ರಿಯನ್ನು ಹೆತ್ತವಳೇ ಈ ಭಕ್ತಿಮಾತೆಯು. ಈ ಭಕ್ತಿಯಿಂದಲೇ ಮುಕ್ತಿಯು. ಜ್ಞಾನಕ್ರಿಯೆಗಳು ಈ ಭಕ್ತಿಯ ಅಂಗಗಳಾಗಿ ಮುಕ್ತಿಸಾಧಕಗಳಾಗಿರುವವು. ಈ ವಿಷಯವು ಮುಂದಿನ ಸೂತ್ರಗಳಲ್ಲಿ ಪ್ರತಿಪಾದಿತವಾದ ಭಕ್ತಿಯ ಪ್ರಾಶಸ್ತ್ಯದಿಂದ ಒಡೆದು ತೋರುತ್ತಿರುವುದು.

ಆಕ್ಷೇಪಃ— "ಸತ್ಯಂ ಜ್ಞಾನಮಾನಂದಂ ಬ್ರಹ್ಮ" ಇತ್ಯಾದಿ ಶ್ರುತಿಗಳು ಜ್ಞಾನನೇ (ಚಿಚ್ಛಕ್ತಿ) ಬ್ರಹ್ಮನೆಂದು ಪ್ರತಿಪಾದಿಸುತ್ತವೆ. ಶಿವನು ಚಿಚ್ಛಕ್ತಿ (ಜ್ಞಾನ) ವಿಶಿಷ್ಟನು. ಆ ಶಕ್ತಿಯ ಕ್ಷೋಭೆಯಿಂದ ಲಿಂಗಾಂಗ ಭೇದವನ್ನು ಹೊಂದಿದನೆಂದು ಹೇಳಿದರೆ ಮೇಗಣ ಶ್ರುತಿವಾಕ್ಯಕ್ಕೆ ಬಾಧೆಯುಂಟಾಗುವುದು. ಮತ್ತು ಶಕ್ತಿಗೂ ಶಕ್ತನಾದ ಶಿವನಿಗೂ ಧರ್ಮಧರ್ಮೀಭಾವವನ್ನೂ ಉಭಯ ಸಂಬಂಧವನ್ನೂ ಹೇಳಬೇಕಾಗುವುದು. ಹಾಗೆ ಹೇಳಿದರೆ ಶಿವನು ನಿರ್ಗುಣನೂ ನಿಸ್ಸಂಗನೂ ಎಂದು ಬೋಧಿಸುವ ಶ್ರುತಿಗೆ ವಿರೋಧವಾಗುವುದಲ್ಲವೆ ?

ಸಮಾಧಾನಃ— "ದೃಷ್ಟಾನುಸಾರೇಣ ಕಲ್ಪನಾ" ಎಂಬುಕ್ತಿಯಂತೆ ಲೋಕದ ಪದಾರ್ಥಗಳೆಲ್ಲವೂ ಶಕ್ತಿಯುಳ್ಳವುಗಳಾಗಿರುವುದರಿಂದ ಶಿವನು ಶಕ್ತಿವಿಶಿಷ್ಟನಾಗಿರುವನು. ನಿಶ್ಶಕ್ತಿಕವಾದ ಯಾವ ಪದಾರ್ಥವೂ ಲೋಕದಲ್ಲಿಲ್ಲವು. ಪ್ರತಿಯೊಂದು ಪದಾರ್ಥದಲ್ಲಿಯೂ ಒಂದು ವಿಧವಾದ ಶಕ್ತಿಯು ಇದ್ದೇ ಇರುವುದು. ಪೃಥ್ವಿಯಲ್ಲಿ ಧಾರಣ ಶಕ್ತಿಯೂ, ಜಲದಲ್ಲಿ ಆಪ್ಯಾಯನ ಶಕ್ತಿಯೂ, ತೇಜಸ್ಸಿನಲ್ಲಿ ಜ್ವಲನ ಶಕ್ತಿಯೂ, ವಾಯುವಿನಲ್ಲಿ ಸಂಚಲನ ಶಕ್ತಿಯೂ, ಆಕಾಶದಲ್ಲಿ ವ್ಯಾಪನ ಶಕ್ತಿಯೂ, ಆತ್ಮನಲ್ಲಿ ಬುದ್ಧಿಶಕ್ತಿಯೂ ಇರುವುದೆಂಬುದು ಲೋಕಪ್ರಸಿದ್ಧವು. ಅಂತೇ ಶಿವನಲ್ಲಿಯೂ ಒಂದು ಶಕ್ತಿಯಿರುವುದು. ಅದೇ ಚಿಚ್ಛಕ್ತಿಯು. ಇದನ್ನೆ ಚಂದ್ರನಲ್ಲಿ ಚಂದ್ರಿಕೆಯಂತೆ ಶಿವನಲ್ಲಿ ಸ್ವಾಭಾವಿಕವಾಗಿರುವ ವಿಮರ್ಶಶಕ್ತಿಯೆಂದು "ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತು ಪ್ರಕಾ

ಶಿನೀ । ತಥಾ ಶಕ್ತಿರ್ವಿವರ್ತಾತ್ಮಾ ಪ್ರಕಾರೇಬ್ರಹ್ಮಣಿ ಸ್ಥಿತಾ" ಎಂದು ಮೊದಲಾಗಿ ವೀರಶೈವ ಗ್ರಂಥಗಳು ಪ್ರತಿಪಾದಿಸುತ್ತವೆ. "ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ" ಇತ್ಯಾದಿ ಶೃತಿಗಳೂ ಈ ವಿಷಯಕ್ಕೆ ಪ್ರಮಾಣವಾಗಿರುವವು. ಈ ಶಕ್ತಿಯಿಂದಲೇ ಶಿವನು ಭಕ್ತೋದ್ಧಾರಕ್ಕಾಗಿ ಲಿಂಗಾಂಗಾದಿ ಭೇದದಿಂದಲೂ, ಲೀಲಾರ್ಥವಾಗಿ ಚೇತನಾಚೇತನಾತ್ಮಕವಾದ ಜಗದ್ರೂಪದಿಂದಲೂ ಪರಿಣಮಿಸಬಲ್ಲನು.

"ಸತ್ಯಂ ಜ್ಞಾನಮಾನಂದಂ ಬ್ರಹ್ಮ" ಎಂಬುದಾದಿಯಾದ ವೇದವಾಕ್ಯವು ಚಿಚ್ಛಕ್ತಿಗೂ ಶಿವನಿಗೂ ತಾದಾತ್ಮ್ಯಸಂಬಂಧದಿಂದ ಅಭೇದವನ್ನು ಹೇಳುತ್ತದೆಂಬುದನ್ನು "ಶಕ್ತಯಃ ಜಗತ್ ಕೃತ್ಸ್ನಂ ಶಕ್ತಿ ಮಾಂಸ್ತು ಮಹೇಶ್ವರಃ। ಶಕ್ತಿಸ್ತು ಶಕ್ತಿ ಮದ್ರೂಪಾದ್ವ್ಯತಿರೇಕಂ ನಗಚ್ಛತಿ। ತಾದಾತ್ಮ್ಯಮನಯೋ ರ್ನಿತ್ಯಂ ವಹ್ನಿ ದಾಹಿಕಯೋರಿವ" ಇವೇಮೊದಲಾದ ಪ್ರಾಮಾಣಿಕ ವಾಕ್ಯಗಳು ದೃಢಪಡಿಸುತ್ತವೆ. ನಿರ್ಗುಣನೂ ನಿಸ್ಸಂಗನೂ ಎಂದು ಹೇಳುವ ಶೃತಿಯಾದರೂ ಶಿವನಲ್ಲಿ ಹೇಯಗುಣವನ್ನೂ ಸಂಸಾರ ಸಂಗವನ್ನೂ ನಿಷೇಧಿಸುವುದಲ್ಲದೆ ಸರ್ವಜ್ಞತ್ವಾದಿ ಗುಣಗಳನ್ನೂ ಚಿಚ್ಛಕ್ತಿಯ ಸಂಗವನ್ನೂ ನಿಷೇಧಿಸುವುದಿಲ್ಲ.

ಆಕ್ಷೇಪಃ– ಶಿವನಲ್ಲಿ ಸತ್ಯವಾದ ಸ್ವಾಭಾವಿಕ ಶಕ್ತಿಯನ್ನು ಅಂಗೀಕರಿಸಿದರೆ ಆಶಕ್ತಿಯಿಂದುಂಟಾದ ಮಾಯಾಶಕ್ತಿಗೂ, ಆಮಾಯೆಯಿಂದುಂಟಾದಜಗತ್ತಿಗೂ ಸತ್ಯತ್ವವನ್ನು ಸ್ವೀಕರಿಸಬೇಕಾಗುತ್ತದೆ. ಆಗ "ಅಸದ್ವಾ ಇದಮಗ್ರ ಆಸೀತ್" "ನೇಹನಾನಾಸ್ತಿ ಕಿಂಚನ" ಇತ್ಯಾದಿ ಶೃತಿಗಳಿಗೆ ಬಾಧೆಯುಂಟಾಗುವದು. ಆದುದರಿಂದ ಶಿವನಲ್ಲಿ ಜಗತ್ಕಾರಣ ಭೂತವಾದ ಶಕ್ತಿಯೇ ಮಾಯೆಯು. ಅದು ಮಿಥ್ಯಾಭೂತವಾದುದೆಂದು ಹೇಳಿ, ಅದರಿಂ ಹುಂಟಾದ ಜಗತ್ತಿಗೆ ಮಿಥ್ಯಾತ್ವವನ್ನು ಹೇಳುವದೇ ಸಂಗತವಾಗುವದಲ್ಲವೆ?

ಸಮಾಧಾನಃ–– "ಅಸದ್ವಾ ಇದಮಗ್ರ ಆಸೀತ್" ಎಂಬ ವಾಕ್ಯವು ಸೃಷ್ಟ್ಯಾದಿಯಲ್ಲಿ ಜಗತ್ತಿನ ಮಿಥ್ಯಾತ್ವವನ್ನು ಪ್ರತಿಪಾದಿಸುವುದಿಲ್ಲ. ಆದರೆ ಬೇಸಿಗೆಯಲ್ಲಿ ತೃಣಬೀಜಗಳು ಸೂಕ್ಷ್ಮರೂಪದಿಂದ ಭೂಮಿಯಲ್ಲಿ ಅಡಗಿರುವಂತೆ ಸೃಷ್ಟ್ಯಾದಿಯಲ್ಲಿ ಪ್ರಪಂಚವು ಸೂಕ್ಷ್ಮರೂಪದಿಂದ (ಕಾರಣಾವಸ್ಥೆಯಿಂದ) ಶಿವನಲ್ಲಿ ಲೀನವಾಗಿರುವುದೆಂಬುದನ್ನು ಹೇಳುತ್ತದೆ. "ತತೋವೈಸ

ದಜಾಯತ" ಎಂಬ ಉತ್ತರವಾಕ್ಯವು ಭೂಮಿಗತತೃಣ ಬೀಜವು ಮಳೆಗಾಲದಲ್ಲಿಸ್ಥೂಲರೂಪದಿಂದ ತಲೆದೋರುವಂತೆ ಶಿವನಲ್ಲಿ ಲೀನವಾದ ಜಗತ್ತು ಸ್ಥೂಲರೂಪದಿಂದ (ಕಾರ್ಯಾವಸ್ಥೆಯಿಂದ) ಪ್ರಕಟವಾಗುವುದನ್ನು ದೃಷ್ಟಿಪಡಿಸುತ್ತದೆ. ಇದೇ ಶೃತ್ಯರ್ಥವನ್ನೇ "ಸತ್ಯಜ್ಞಾನಘನಾನಂದೇ ಶಿವೇ ಪರಮಕಾರಣೇ। ಚರಾಚರ ಜಗಜ್ಜಾಲಂ ಗ್ರಿಷ್ಮೇ ಕ್ಷ್ಮಾಲೀನಬೀಜವತ್ ಸೂಕ್ಷ್ಮರೂಪೇಣ ಸಂಸ್ಥಿತ್ಯ ಪುನಸ್ತಸ್ಯ ಚಿಕೀರ್ಷಯಾ ಸ್ಥೂಲತ್ವೇನ ಬಹಿರ್ಯಾತಂ" ಇತ್ಯಾದಿ ಸ್ಮೃತಿವಾಕ್ಯಗಳು ವಿಸ್ತೃತವಾಗಿ ಪ್ರತಿಪಾದಿಸುತ್ತಿರುವವು. "ನೇಹನಾನಾಸ್ತಿ" ಎಂಬ ವಾಕ್ಯವು ಜಗತ್ತಿನ ಪ್ರಳಯಾವಸ್ಥೆಯನ್ನು ತೋರಿಸುತ್ತದೆ.

ಶಿವಶಕ್ತಿಯಿಂದುಂಟಾದ ಮಾಯೆಯೂ ತತ್ಕಾರ್ಯವಾದ ಜಗತ್ತೂ ಮಿಥ್ಯವಲ್ಲವು. "ಮಂ ಶಿವಂ ಪರಮಂ ಬ್ರಹ್ಮ ಪ್ರಾಪ್ನೋತೀತಿ ಸ್ವಭಾವತಃ। ಮಾಯೇತಿ ಪ್ರೋಚ್ಯತೇ ಲೋಕೇ ಬ್ರಹ್ಮನಿಷ್ಠಾಸನಾತಿನೀ" ಎಂಬ ಸಿದ್ಧಾಂತಾಗಮವು ಮಾಯೆಗೆ ಮಿಥ್ಯಾತ್ವವನ್ನು ಹೇಳದೆ, ಅದು ಸತ್ಯವಾದ ಶಿವನ ಶಕ್ತಿಯೆಂದೇ ಹೇಳುತ್ತದೆ. ಮಾಯೆಯಂತೆ ತತ್ಕಾರ್ಯವಾದ ಜಗತ್ತೂ ಸತ್ಯವಾಗಿರುವುದು. ಮಿಥ್ಯಾವಾದವು ವೀರಶೈವರ ಲಿಂಗಾಂಗ ಸಾಮರಸ್ಯಕ್ಕೆ ಸಂಗತವಾಗದು. ಲೇಖನಗೌರವ ಭಯದಿಂದ ಮಿಥ್ಯಾವಾದ ಖಂಡನದ ಯುಕ್ತಿ ಪ್ರಮಾಣಗಳನ್ನಿಲ್ಲಿ ಹೆಚ್ಚಾಗಿ ಕೊಡದಿರುವೆವು.

## ಲಿಂಗಾಂಗವಿಚಾರದ ಉಪಸಂಹಾರ.

ಸೂ. ೩೨. ೩೩. ಶಕ್ತಿಯಿಂದ ಉಪಾಸ್ಯತ್ವವೂ, ಭಕ್ತಿಯಿಂದ ಉಪಾಸಕತ್ವವೂ ಉಂಟಾಗುವವು. ಆದುದರಿಂದಲೇ ಶಕ್ತಿಯು ಲಿಂಗಸ್ಥಲದಲ್ಲಿಯೂ, ಭಕ್ತಿಯು ಅಂಗಸ್ಥಲದಲ್ಲಿಯೂ ನೆಲೆಗೊಂಡಿರುವವು.

ಸೂ. ೩೪. ಲಿಂಗಸ್ಥಲವೆಂದರೆ ಸಾಕ್ಷಾತ್ಶಿವನಲ್ಲದೆ ಬೇರಿಲ್ಲ. ಅಂಗಸ್ಥಲವಾದರೂ ಜೀವಾತ್ಮನಲ್ಲದೆ ಅನ್ಯವಲ್ಲವು. ಈ ಲಿಂಗಾಂಗಗಳ ಐಕ್ಯವೇ ಶಿವಜೀವರ ಐಕ್ಯವು.

ಸೂ. ೩೪. ಶಿವಾದ್ವೈತವೂ ಶಿವಸಿದ್ಧಾಂತವೂ ಎಂಬ ಹೆಸರಿನ ಈ ಶಿವನ ಪರಮಪದಸ್ವರೂಪವಾದ ಲಿಂಗಾಂಗಸಾಮರಸ್ಯದ ಸಿದ್ಧಾಂತವನ್ನು ಯಾವಾತನು ತಿಳಿಯುತ್ತಾನೆಯೋ ಆತನೇ ಪ್ರಭುವು (ಮುಕ್ತನು) ಆ ಪ್ರಭುವಿನಿಂದ ಅಜ್ಞಾನಗ್ರಂಥಿಯು ಕತ್ತರಿಸಲ್ಪಡುವುದು.

## ವಿಚಾರ.

ಸೂತ್ರಕಾರನು ಸ್ಥಲತತ್ವದ ವಿಭಾಗವಾದ ಲಿಂಗಾಂಗಗಳ ವಿಚಾರವನ್ನು ಪ್ರತಿಪಾದಿಸಿ, ಆ ವಿಚಾರಕ್ಕೆ ಪರಮಪ್ರಯೋಜನವೆಂದರೆ ಲಿಂಗಾಂಗಸಾಮರಸ್ಯವೇ ಎಂಬುದನ್ನು ಸೂಚಿಸಿ, ಪ್ರಯೋಜನ ಸಿದ್ಧಿಯು ಸಿದ್ಧಾಂತದ ಅನುಭವದಿಂದ ಸಿದ್ಧಿಸಿ, ಅಜ್ಞಾನವು ದೂರವಾಗುವುದೆಂಬುದನ್ನು ತಿಳಿಯಪಡಿಸಿ ಅಧಿಕರಣವನ್ನು ಮುಗಿಸಿರುವನು.

### ದ್ವಿತೀಯಾಧಿಕರಣಂ ಸಮಾಪ್ತಂ



# ತೃತೀಯಾಧಿಕರಣಂ.

## ಲಿಂಗಸ್ಥಲ ನಿರೂಪಣಂ.

ಪರಶಿವವಾಚಕವಾದ ಸ್ಥಲವು ಲಿಂಗಾಂಗಸ್ಥಲಭೇದದಿಂದ ದ್ವಿವಿಧವಾದುದೆಂದು ಹಿಂದೆ ಹೇಳಿದನು. ಈಗ ಲಿಂಗಸ್ಥಲದ ಸ್ವರೂಪವನ್ನೂ ಅದರ ಭೇದವನ್ನೂ ನಿರೂಪಿಸುತ್ತಿರುವನು.

ಸೂ. ೧. ಶಿವಾಗಮಗಳಲ್ಲಿ ಶಿವನಿಂದ ವಿಸ್ತಾರವಾಗಿ ಹೇಳಲ್ಪಟ್ಟ ಲಿಂಗಸ್ಥಲದ ಸ್ವರೂಪವನ್ನು ಈಗ ಸಂಕ್ಷೇಪದಿಂದ ನಿರೂಪಿಸುವೆನು.

ಸೂ. ೨. ೩. ೪. ಶಿವನೇ ತಾನು ಲಿಂಗರೂಪನಾಗಿರುವನು. ಆದುದರಿಂದಲೇ ಲಿಂಗದ ವೈಭವವು. [ಭಕ್ತರಿಂದ ಪೂಜೆಗೊಳ್ಳುವ ಸಂಪತ್ತು] ಇಲ್ಲಿ ಲಿಂಗವೆಂದರೆ ಚಿಹ್ನೆ (ಗುರುತು) ಮೊದಲಾದುದಲ್ಲವು. ಅದೆಲ್ಲವೂ ಕೃತಕರೂಪ (ಕಲ್ಪಿತ) ವಾದುದು.

ಈ ಚರಾಚರಾತ್ಮಕವಾದ ಜಗತ್ತು ಯಾವ ವಸ್ತುವಿನಲ್ಲಿ ಲೀನವಾಗುತ್ತದೆಯೋ ಮತ್ತು ಎಲ್ಲಿಂದ ಗತಿಯನ್ನು [ಉತ್ಪತ್ತ್ಯಾದಿಯನ್ನು] ಹೊಂದುತ್ತದೆಯೋ ಆ ವಸ್ತುವೇ ಲಿಂಗವೆಂದು ಲಿಂಗತತ್ವವನ್ನು ಬಲ್ಲವರು ಹೇಳುವರು. ಸಕಳನಿಷ್ಕಳನಾದ ಸಾಕ್ಷಾಚ್ಛಿವನು ಸಕಲದೇಹಿಗಳ ಲಯಗತಿಗಳಿಗೆ ಕಾರಣ ಭೂತನಾಗಿರುವುದರಿಂದ ಲಿಂಗವೆಂದು ಹೇಳಲ್ಪಡುವನು.

### ವಿಚಾರ.

“ಅರೂಪಂ ನಿಃಕಲಬ್ರಹ್ಮ ಭಾವಾತೀತಂ ನಿರಂಜನಂ। ಶಬ್ದಾದಿ ವಿಷಯಾತೀತಂ ಮೂಲಲಿಂಗ ಮಿಹೋಚ್ಯತೇ ॥” [ಅರ್ಥ— ರೂಪಿಲ್ಲದ, ಕುಂದಿಲ್ಲದ, ರಂಜನವಿಲ್ಲದ, ಶಬ್ದಾದಿ ವಿಷಯಗಳಿಗೂ, ಭಾವಕ್ಕೂ ಮೀರಿದ ಯಾವ ಪರಬ್ರಹ್ಮವೆಂಬ ವಸ್ತುವುಂಟೋ ಅದೇ ಮೂಲಲಿಂಗವೆಂದು ಹೇಳಲ್ಪಡುತ್ತದೆ.] ಇತ್ಯಾದಿ ಪ್ರಮಾಣಗಳಿಂದ ಸ್ವಶಕ್ತಿವಿಶಿಷ್ಟವಾದ ನಿರಾಕಾರ ವಸ್ತುವು ಭಕ್ತರ ಉದ್ಧಾರಕ್ಕಾಗಿ ಉಪಾಸನೆಗೆ ಯೋಗ್ಯವಾದ ಲಿಂಗಾಕಾರವನ್ನು ಹೊಂದಿರುವುದು. ಈ ಆಕಾರವು ಕೃತಕವ

ಲ್ಲವು. ಏಕೆಂದರೆ— ಲಿಂಗವೆಂದರೆ ಶಿವನಲ್ಲದನ್ಯವಲ್ಲವು. "ಜ್ಯೋತಿರ್ಮಯಂ ಪರಂ ಲಿಂಗಂ ಶೃತಿರಾಹ ಶಿವಾತ್ಮಕಂ" (ಅರ್ಥ— ಜ್ಯೋತಿರ್ಮಯ ವಾದ ಯಾವ ಪರಲಿಂಗವಿರುವುದೋ ಅದು ಶಿವಾತ್ಮಕವೆಂದು ವೇದವು ಹೇಳುತ್ತದೆ) ಎಂಬ ಉಕ್ತಿಯಾದರೂ ಲಿಂಗಕ್ಕೂ ಶಿವನಿಗೂ ಭೇದವಿ ಲ್ಲೆಂಬುದರಲ್ಲಿ ಪ್ರಮಾಣವಾಗಿರುವುದು.

## ತ್ರಿವಿಧಲಿಂಗ.

ಮೂಲಲಿಂಗವು ೩ ವಿಧವಾದ ಬಗೆಯನ್ನೂ ೩ ವಿಧಲಿಂಗದ ಸ್ವರೂ ಪವನ್ನೂ ೧೨ ಸೂತ್ರಗಳಿಂದ ಪ್ರತಿಪಾದಿಸುವನು.

ಸೂ ೪. ೫. ಲಿಂಗಸ್ಥಲವು ಮೂರು ಪ್ರಕಾರವಾಗಿರುವುದು. ಅಂದರೆ ಒಂದನೆಯದು ಭಾವಲಿಂಗವು. ಎರಡನೆಯದು ಪ್ರಾಣಲಿಂಗವು. ಮೂರನೆ ಯದು ಇಷ್ಟಲಿಂಗವು.

ಸೂ. ೫. ೮. ಭಾವಲಿಂಗವು ನಿಷ್ಕಳವೂ ಭಾವಗ್ರಾಹ್ಯವೂ [ಭಾವ ದಿಂದ ಗ್ರಹಿಸತಕ್ಕದು] ಆಗಿರುವುದು. ಪ್ರಾಣಲಿಂಗವು ಸಕಳನಿಷ್ಕಳ ವಾಗಿ ಮನಸ್ಸಿನಿಂದ ಗ್ರಹಿಸತಕ್ಕದಾಗಿರುವುದು. ತತ್ಪ್ರಾಣೇ ಷ್ವಂತರ್ಮ ನಸೋ ಲಿಂಗ ಮಾಹುರಿತಿಶ್ರುತಿಃ" [ಅರ್ಥ— ಆ ಪರಶಿವತತ್ವವು ಪ್ರಾಣಾಂ ತರ್ಯಾಮಿಯಾಗಿ ಅಂದರೆ ಪ್ರಾಣಲಿಂಗವಾಗಿ ಮನಸ್ಸಿನ ಮನೋಗ್ರಾ ಹ್ಯವಾದ ಲಿಂಗವಾಗಿರುವುದೆಂದು ಶೃತಿಯು ಹೇಳುತ್ತಿರುವುದು] ಎಂಬ ಸೂತ್ರಭಾವದಿಂದ ಸೂತ್ರಕಾರನು ಪ್ರಾಣಲಿಂಗವಿಷಯದಲ್ಲಿ ಶೃತಿಯ ಪ್ರಾಮಾಣ್ಯವನ್ನೂ ತಿಳಿಸಿರುವನು. ಇಷ್ಟಲಿಂಗವು ಸಕಳವೂ ದೃಷ್ಟಿಗ್ರಾ ಹ್ಯವೂ ಆಗಿರುವುದು.

ಸೂ. ೯-೧೦-೧೧ ಇಷ್ಟಲಿಂಗವು ಇಷ್ಟಪ್ರಾಪ್ತಿಯನ್ನುಂಟುಮಾಡು ವುದೂ ಅನಿಷ್ಟವನ್ನು ಪರಿಹರಿಸತಕ್ಕದೂ ಆಗಿರುವುದು. ಇಷ್ಟಿಯೆಂದರೆ ಪೂಜೆಯು, ಅದರಿಂದ ಕೂಡಿದುದು ಅಂದರೆ ನಿತ್ಯದಲ್ಲಿಯೂ ಪೂಜಿಸ ಲ್ಪಡುವುದು ಯಾವುದೋ ಅದು ಇಷ್ಟವು. ಅಂತಹ ಇಷ್ಟವಸ್ತುವೇ ಇಷ್ಟಲಿಂಗವೆಂದು ಲಿಂಗಪೂಜಕರಾದ ಆಚಾರ್ಯರಿಂದ ಹೇಳಲ್ಪಟ್ಟಿದೆ. ಮತ್ತು ಯಾವಾಗಲೂ ತನ್ನ ಭಕ್ತರಿಗೆ ಇಷ್ಟಾರ್ಥವನ್ನು ಕೊಡುವುದ ರಿಂದ ಇಷ್ಟಲಿಂಗವೆಂಬ ಹೆಸರನ್ನು ಪಡೆದಿರುವುದೆಂದು ಅಥರ್ವಣಶೃತಿಯ ತಾತ್ಪರ್ಯ ಇರುವುದು.

ಸೂ. ೧೨–೧೫ ಶಿವನ ಸಚ್ಚಿದಾನಂದ ರೂಪದಲ್ಲಿ — ಕ್ರಮವಾಗಿ ಭಾವಲಿಂಗವು ಸದ್ರೂಪವನ್ನೂ, ಪ್ರಾಣಲಿಂಗವು ಚಿದ್ರೂಪವನ್ನೂ, ಇಷ್ಟಲಿಂಗವು ಆನಂದರೂಪವನ್ನೂ ಹೊಂದಿರುವವು. ಏಕತ್ವ ಬೋಧಕವಾದ "ತತ್ವಮಸಿ" ಎಂಬ ಉಪನಿಷದ್ವಾಕ್ಯದಲ್ಲಿರುವ ತತ್, ತ್ವಂ, ಅಸಿ, ಎಂಬ ಪದತ್ರಯದ ಅರ್ಥವೇ ಕ್ರಮವಾಗಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳಾಗಿರುವವೆಂದು ನಿರೂಪಿಸಲ್ಪಟ್ಟಿದೆ. ಮತ್ತು ಭಾವಲಿಂಗವು ಪರವೂ, ಪ್ರಾಣಲಿಂಗವು ಸೂಕ್ಷ್ಮವೂ, ಇಷ್ಟಲಿಂಗವು ಸ್ಥೂಲವೂ ಆಗಿರುವವು. ಸ್ಥೂಲವು ಬಾಹ್ಯವೆಂದೂ, ಸೂಕ್ಷ್ಮವು ಅಭ್ಯಂತರವೆಂದೂ, ಪರವು ಸಬಾಹ್ಯಾಭ್ಯಂತರವೆಂದೂ ಹೇಳಲ್ಪಡುತ್ತದೆ.

ಸೂ. ೧೫. ೧೬ ಇಷ್ಟಪ್ರಾಣಭಾವಲಿಂಗಗಳು ಕ್ರಮವಾಗಿ ದೇಹ ಪ್ರಾಣ ಆತ್ಮರೂಪದಿಂದಲೂ, ಕ್ರಿಯಾ, ಮಂತ್ರ, ಪ್ರಯೋಗ [ಅನುಸಂಧಾನ] ರೂಪದಿಂದಲೂ, ಬಿಂದು ನಾದ ಕಳಾಭೇದದಿಂದಲೂ ಇರುವವೆಂದು ಉದಾಹೃತವಾಗಿವೆ.

## ವಿಚಾರ.

ಏಕರೂಪಿಯಾದ ಶಿವನು ಮೊದಲು ಅಂಗಲಿಂಗರೂಪದಿಂದ ದ್ವಿವಿಧವಾದನು. ಈ ದ್ವಿವಿಧದಲ್ಲಿ ನ್ಯೂನಾಧಿಕ ಭಾವವಿರುವುದು, ಅಂದರೆ ಲಿಂಗರೂಪಕ್ಕಿಂತಲೂ ಅಂಗರೂಪದಲ್ಲಿ ನ್ಯೂನತೆಯುಂಟಾಯಿತು. ಇಲ್ಲಿ ನೂನತ್ವವೆಂದರೆ ಸಂಕೋಚಭಾವವೆಂದರ್ಥವು. ಅಂಗನ [ಶುದ್ಧ ಜೀವನ] ಈ ಸಂಕೋಚಭಾವವನ್ನು [ಜೀವತ್ವವನ್ನು] ಕಳೆದು ವಿಕಾಸಭಾವವನ್ನು [ಶಿವತ್ವವನ್ನು] ಉಂಟುಮಾಡುವದಕ್ಕಾಗಿ ಲಿಂಗರೂಪನಾದ ಶಿವನು ಇಷ್ಟಪ್ರಾಣಭಾವಾದಿ ಲಿಂಗಭೇದವನ್ನು ಹೊಂದಬೇಕಾಯಿತು. ಈ ಲಿಂಗಭೇದದಿಂದ ಅಂಗನ ವಿಕಾಸವಾಗುವುದು ಹೇಗೆಂಬುದು ಮುಂದಿನ ಅಧಿಕರಣಗಳಲ್ಲಿ ಪ್ರತಿಪಾದಿಸುವ ವಿಚಾರದಿಂದ ಗೊತ್ತಾಗುತ್ತಿರುವುದು. ಆದುದರಿಂದ ಆ ವಿಷಯವನ್ನು ಇಲ್ಲಿ ನಿರೂಪಿಸುವದಿಲ್ಲ.

ಆಕ್ಷೇಪ–"ತತ್ವಮಸಿ" ಎಂಬ ವಾಕ್ಯವು ಶಿವಜೀವರ ಏಕತ್ವವನ್ನು ಬೋಧಿಸುವುದಾಗಿದೆ. ಆದುದರಿಂದಲೇ ಗುರುವು ಜೀವನನ್ನು ಕುರಿತು ಹೇ ಜೀವನೆ! 'ತತ್' ಆ ಪರಶಿವನೇ 'ತ್ವಂ' ನೀನು 'ಅಸಿ' ಇರುವಿಯೆಂದು ಬೋಧಿಸುವನು. ಇದರಿಂದ ತ್ವಂ ಪದಾರ್ಥವು ಜೀವನೆಂದು

ವ್ಯಕ್ತವಾಗುತ್ತದೆ. ಮೇಲೆ 'ತತ್ವಮಸಿ' ಎಂಬ ಪದತ್ರಯದ ಅರ್ಥವೇ ಇಷ್ಟ, ಪ್ರಾಣ, ಭಾವಲಿಂಗಗಳಾಗಿರುವವೆಂದು ಹೇಳಿದುದು ಹೇಗೆ ಸಂಗತವಾಗುವುದು ?

ಸಮಾಧಾನಃ— ಇಲ್ಲಿ ಅಭೇದ ದೃಷ್ಟಿಯಿಂದ ಹೀಗೆ ಹೇಳಲ್ಪಟ್ಟಿದೆ. 'ತತ್ವಮಸಿ, ಎಂಬ ಪದತ್ರಯಾತ್ಮಕ ವಾಕ್ಯವು ಏಕತ್ವ ಬೋಧಕವಾಗಿರುವುದು. ಆ ಏಕತ್ವವು "ಏಕಮೇವಾ ದ್ವಿತೀಯಂ ಬ್ರಹ್ಮ" ಎಂಬ ವಚನದಿಂದ ಶಕ್ತಿವಿಶಿಷ್ಟ ಶಿವತತ್ವದಲ್ಲಿರುವುದಾಗಿದೆ. 'ತತ್ವಮಸಿ, ಎಂಬ ವಾಕ್ಯದ ಅರ್ಥವು ಮೂಲ ಲಿಂಗವೇ (ಶಿವನೇ) ಆಗಿರುವುದರಿಂದ ವಾಕ್ಯದಲ್ಲಿರುವ ಪದತ್ರಯದ ಅರ್ಥವು ಮೂಲಲಿಂಗದ ಭೇದವಾದ ಇಷ್ಟಾದಿ ತ್ರಿವಿಧಲಿಂಗವೇ ಆಗಿರುವುದೆಂಬ ಅಭಿಪ್ರಾಯವನ್ನು ಸೂಚಿಸುವುದಕ್ಕಾಗಿ ಹೀಗೆ ಹೇಳಲ್ಪಟ್ಟಿರುವುದು. ಮುಂದೆ ಲಿಂಗಾಂಗ ಸಂಯೋಗವಿಧಿಯಲ್ಲಿ 'ತತ್, ಪದವು ಲಿಂಗವನ್ನೂ 'ತ್ವಂ, ಪದವು ಅಂಗನನ್ನೂ (ಜೀವ) 'ಅಸಿ, ಪದವು ಲಿಂಗಾಂಗಗಳ ಸಂಯೋಗವನ್ನೂ ಬೋಧಿಸುವುದಾಗಿ ಹೇಳಲ್ಪಟ್ಟಿದೆ. ಅಲ್ಲಿ ಅಭೇದದಲ್ಲಿ ಮುಗಿಯುವ ಭೇದದೃಷ್ಟಿಯಿಂದ ಹೇಳಿದುದಾಗಿ ತಿಳಿಯಬೇಕಾಗಿದೆ.

## ಷಡ್ವಿಧಲಿಂಗ.

ಇಷ್ಟಾದಿ ಮೂರು ಲಿಂಗಗಳೇ ಆರು ವಿಧವಾದ ಬಗೆಯನ್ನು ವಿವರಿಸುವನು.

ಸೂ. ೧೬. ೧೭. ಒಂದೊಂದು ಸ್ಥಲವೇ ದ್ವಿವಿಧವಾಯಿತು. ಅಂದರೆ ಭಾವಲಿಂಗಸ್ಥಲದಲ್ಲಿ ೨, ಪ್ರಾಣಲಿಂಗಸ್ಥಲದಲ್ಲಿ ೨, ಇಷ್ಟಲಿಂಗಸ್ಥಲದಲ್ಲಿ ೨, ಈ ಪ್ರಕಾರವಾಗಿ ೩ ಲಿಂಗಗಳೇ ೬ ಲಿಂಗಗಳಾದವು.

ಸೂ. ೧೮. ಸ್ವಾನುಭವ ಪ್ರಮಾಣದಿಂದ ಭಾವಲಿಂಗವೇ ಮಹಾಲಿಂಗ ಪ್ರಸಾದಲಿಂಗವೆಂದು ದ್ವಿವಿಧವಾಯಿತು.

ಸೂ. ೧೯. ಪ್ರಾಣಲಿಂಗವೇ ಚರಲಿಂಗ ಶಿವಲಿಂಗವೆಂದು ಎರಡು ಪ್ರಕಾರವಾಗಿರುವದೆಂದು ಅನುಭವಿಗಳ ತಾತ್ಪರ್ಯವು. ಇದರಲ್ಲಿ ಯಾವ ಸಂಶಯವಿಲ್ಲವು.

ಸೂ. ೨೦. ಇಷ್ಟಲಿಂಗವೇ ಗುರುಲಿಂಗ ಆಚಾರಲಿಂಗವೆಂದು ದ್ವಿವಿಧವಾದುದೆಂಬುದು ನಿಜವು.

ಸೂ. ೨೧. ೨೨ ೨೩. ಶಿವಾತ್ಮಕವಾದ ಪರಲಿಂಗವೇ ತನ್ನ ಶಕ್ತಿಯ ವೈಭವದಿಂದ ಅಥವಾ ಸ್ವಾತಂತ್ರ್ಯದಿಂದ ಇಲ್ಲವೆ ಲೀಲೆಯಿಂದ ಈ ಪ್ರಕಾರವಾಗಿ ಮಹಾಲಿಂಗ, ಪ್ರಸಾದಲಿಂಗ, ಚರಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗವೆಂದು ೬ ಬಗೆಯಾಗಿರುವುದಲ್ಲದೆ ಬೇರಿಲ್ಲವು.

## ವಿಚಾರ.

ಪರಶಿವನು ತ್ರಿವಿಧಲಿಂಗರೂಪನಾಗಿ ಮತ್ತು ಒಂದೊಂದರಲ್ಲಿ ದ್ವಿವಿಧಲಿಂಗವಾದುದು ಭಕ್ತರ ಧ್ಯಾನಪೂಜಾ ನಿಮಿತ್ತವಲ್ಲದೆ ಅನ್ಯವಿಲ್ಲವು ಸೂಕ್ಷ್ಮಭೇದಾಗಮದಲ್ಲಿ "ಯತೀನಾಂ ಮಂತ್ರಿಣಾಂ ಚೈವ ಜ್ಞಾನಿನಾಂ ಯೋಗಿನಾಂ ತಥಾ। ಧ್ಯಾನಪೂಜಾ ನಿಮಿತ್ತಂ ಹಿತನುಂ ಗೃಹ್ಣಾತಿ ಮಾಯಯಾ" (ಪರಶಿವನು ಯತಿಗಳ, ಮಂತ್ರಸಾಧಕರ, ಜ್ಞಾನಿಗಳ ಮತ್ತು ಯೋಗಿಗಳ ಧ್ಯಾನಪೂಜೆಗಳಿಗಾಗಿ ಮಾಯೆಯಿಂದ (ಇಲ್ಲಿ ಮಾಯೆಯೆಂದರೆ ವಿಮರ್ಶಶಕ್ತಿಯು) ಲಿಂಗಾದ್ಯಾಕಾರವನ್ನು ಗ್ರಹಿಸುತ್ತಾನೆ.) ಎಂಬ ವಚನವು ಈ ವಿಷಯದಲ್ಲಿ ಪ್ರಮಾಣವಾಗಿರುವುದು. ಷಡ್ವಿಧಲಿಂಗಗಳ ಧ್ಯಾನಪೂಜಾದಿ ಕ್ರಮವು ಮುಂದಿನ ಅಧಿಕರಣಗಳಲ್ಲಿ ಪ್ರತಿಪಾದಿತವಾಗುವುದು.

## ಷಡ್ವಿಧ ಶಕ್ತಿಗಳು.

ವಿಮರ್ಶಶಕ್ತಿವಿಶಿಷ್ಟನಾದ ಪರಶಿವನು ಭಕ್ತಾನುಗ್ರಹಕ್ಕಾಗಿ ಯಾವ ಆಕಾರವನ್ನು ಧರಿಸಿದರೂ ಆಯಾ ಆಕಾರಗಳಲ್ಲಿ ಶಿವಗತಶಕ್ತಿಯೂ ನೆಲಸಿರುವುದೆಂಬುದು ಸಹಜವು. ಅಂತೆ ಷಡ್ವಿಧಲಿಂಗಗಳಲ್ಲಿ ಷಡ್ವಿಧ ಶಕ್ತಿಗಳಿರುವವೆಂಬುದನ್ನು ಹೇಳುತ್ತಾನೆ.

ಸೂ. ೨೨. ೨೪. ಆರು ಲಿಂಗಸ್ಥಲಗಳಲ್ಲಿ ಇರುವ ಶಕ್ತಿಗಳು ಆರು ವಿಧವಾಗಿರುವವು. ಈಗ ಅವುಗಳ ಸದ್ಭಾವವು ಕ್ರಮವಾಗಿ ವರ್ಣಿಸಲ್ಪಡುತ್ತದೆ.

ಸೂ. ೨೪. ೨೫. ಶಾಂತ್ಯತೀತೋತ್ತರ ಕಲೆಯೆಂಬ ಹೆಸರಿನ ಚಿಚ್ಛಕ್ತಿಯೂ, ಶಾಂತ್ಯತೀತಕಲೆಯೆಂಬ ಪರಾಶಕ್ತಿಯೂ, ಶಾಂತಿಕಲೆಯೆಂಬ ಆದಿಶಕ್ತಿಯೂ, ವಿದ್ಯಾಕಲೆಯೆಂಬ ಇಚ್ಛಾಶಕ್ತಿಯೂ, ಪ್ರತಿಷ್ಠಾಕಲೆಯೆಂಬ ಜ್ಞಾನಶಕ್ತಿಯೂ, ನಿವೃತ್ತಿಕಲೆಯೆಂಬ ಕ್ರಿಯಾಶಕ್ತಿಯೂ ಎಂದು ಆರು ವಿಧವಾದ ಶಕ್ತಿಗಳಿರುವವು.

## ವಿಚಾರ.

ಈ ಶಕ್ತಿಗಳು ಷಡ್ವಿಧ ಲಿಂಗಗಳನ್ನಾಶ್ರಯಿಸಿ ಲಿಂಗೋಪಾಸಕನಾದ ಅಂಗನನ್ನು ಲಿಂಗಾಭಿಮುಖನನ್ನು ಮಾಡಿ, ಕಡೆಗೆ ಲಿಂಗರೂಪಿಯನ್ನೆ ಮಾಡುವುದರಲ್ಲಿ ಸಾಧಕಗಳಾಗಿರುವವು. ಹೇಗೆ ಸಾಧಕಗಳೆಂಬುದು ಮುಂದೆ ವಿವರಿಸಲ್ಪಡುವುದು.

## ಶಕ್ತಿವಿಶಿಷ್ಟವಾದ ಷಡ್ವಿಧಲಿಂಗಸ್ವರೂಪವು.

ಆರು ಲಿಂಗಸ್ಥಲಗಳು ಶಕ್ತಿಯುಕ್ತಿಗಳಾಗಲಾಗಿ. ಅವುಗಳ ಸ್ವರೂಪ ವೆಂತಿರುವುದೆಂಬುದನ್ನು ವಿವರಿಸುವನು.

ಸೂ. ೨೭ ೨೮. ಈಗ ಶಕ್ತಿಯುಕ್ತಗಳಾದ ಆರು ಲಿಂಗಸ್ಥಲಗಳ ಸ್ವರೂಪ ಲಕ್ಷಣವು ಬೇರೆ ಬೇರೆಯಾಗಿ ಕ್ರಮದಿಂದ ವಿವರಿಸಲ್ಪಡುವುದು.

ಸೂ. ೨೮. ಮಹಾಲಿಂಗವು—ಆದ್ಯಂತರಹಿತ, ನಿರ್ಮಲ, ಪರಿಪೂರ್ಣ, ಏಕ, ಸೂಕ್ಷ್ಮ, ಪರಾತ್ಪರ, ಭವರಹಿತ, ಅಪ್ರಮೇಯ, (ಸ್ವತಃ ಸಿದ್ಧವು) ಜಡರಹಿತ [ಚೇತನಾತ್ಮಕ] ವಾದ ಶಿವತತ್ವವೇ ಚಿಚ್ಛಕ್ತಿ ಸಮೇತವಾದ ಭಾವಗಮ್ಯವಾದ ಮಹಾಲಿಂಗವೆಂದು ಹೇಳಲ್ಪಡುತ್ತದೆ.

ಸೂ. ೨೯. ಪ್ರಸಾದಲಿಂಗವು—ಪರಂಜ್ಯೋತಿಸ್ಸ್ವರೂಪ, ಸತ್ಯ, ಅಖಂಡ, ಇಂದ್ರಿಯಾಗೋಚರ, ಅಮೃತಸ್ವರೂಪ, ಜಗತ್ಪರಿಣಾಮ ಕಾರಣವೂ ಆಗಿ, ಪರಾಶಕ್ತಿಯುಕ್ತವೂ, ಸಾದಾಖ್ಯತತ್ವಾಶ್ರಯವೂ, ಉಪಾಧಿರಹಿತವೂ, ಜ್ಞಾನಗಮ್ಯವೂ ಆಗಿರುವ ಲಿಂಗವನ್ನೆ ಪ್ರಸಾದಲಿಂಗವೆಂದು ಹೇಳುತ್ತಾರೆ.

ಸೂ. ೩೦. ಜಂಗಮಲಿಂಗವು—ಜ್ಯೋತಿಸ್ವರೂಪ ಬಹಿರಂತರ್ವ್ಯಾಪಕ, ಪರಮಪುರುಷ ಅಮೂರ್ತಸಾದಾಖ್ಯತತ್ವಾಶ್ರಯ ಆದಿಶಕ್ತಿಸಮೇತ, ಮನೋಗೋಚರ ಅಂದರೆ ಮನಸ್ಸಿನಿಂದ ನಿತ್ಯದಲ್ಲಿ ಧ್ಯಾನಿಸಲು ತಕ್ಕುದಾದುದೇ ಜಂಗಮಲಿಂಗವು.

ಸೂ. ೩೧. ಶಿವಲಿಂಗವು— ವಿದ್ಯಾಕಲಾಯುಕ್ತ, ವಿರಾಜಮಾನ ದಿವ್ಯಪ್ರಭಾಸಂಗತ, ಏಕಮುಖ, ಪ್ರಶಾಂತ, ಇಚ್ಛಾಶಕ್ತಿಯುಕ್ತ, ಮೂರ್ತಸಾದಾಖ್ಯತತ್ವಾಶ್ರಯವೂ ಆಗಿ, ಅಹಂಕಾರಗಮ್ಯವಾದುದೇ ಶಿವಲಿಂಗವು.

ಸೂ. ೩೨. ಗುರುಲಿಂಗವು— ತೇಜೋನಿಧಿ, ಪರಮಸುಖಾಂಬುಧಿ, ಸರ್ವೋಪದೇಶವಿಧಿಕರ್ತೃ, ಜ್ಞಾನಶಕ್ತಿಯುಕ್ತ, ಕರ್ತೃಸಾದಾಖ್ಯತತ್ವಾಶ್ರಯವೂ ಆಗಿ, ಬುದ್ಧಿಗಮ್ಯವಾದುದೇ ಗುರುಲಿಂಗವು.

ಸೂ. ೩೩. ಆಚಾರಲಿಂಗವು— ಕರ್ಮಾತ್ಮಕ, ಸಕಲತತ್ವಾಶ್ರಯ, ನಿವೃತ್ತಿಮಾರ್ಗೋನ್ಮುಖ, ಕ್ರಿಯಾಶಕ್ತಿಯುಕ್ತವೂ ಆಗಿ, ಚಿತ್ತಗಮ್ಯವಾದುದೇ ಆಚಾರಲಿಂಗವು.

ಸೂ. ೩೪. ಮಹಾಲಿಂಗಾದಿಯಾದ ಆರು ಲಿಂಗಸ್ಥಲಗಳ ಸ್ವರೂಪ ಲಕ್ಷಣವು ಕ್ರಮದಿಂದ ಈ ರೀತಿಯಾಗಿ ಹೇಳಲ್ಪಟ್ಟುದು.

## ವಿಚಾರ.

ಮೇಲೆ ಹೇಳಿದ ಷಡ್ವಿಧಲಿಂಗಗಳ ಸ್ವರೂಪಲಕ್ಷಣ ಪರಿಜ್ಞಾನದಿಂದ ಭಕ್ತನಿಗೆ [ಅಂಗನಿಗೆ] ಉಪಾಸನ ಕ್ರಮವು ಸುಲಲಿತವಾಗುವುದು ಈ ಷಡ್ವಿಧಲಿಂಗಗಳನ್ನು ಯಾವ ಯಾವ ಸ್ಥಾನದಲ್ಲಿ ಹೇಗೆ ಉಪಾಸಿಸಬೇಕೆಂಬುದು ಮುಂದಿನ ಅಧಿಕರಣಗಳಲ್ಲಿ ಗೊತ್ತಾಗುವುದು. ಈ ಲಿಂಗಗಳಿಗೆ ಆಚಾರಾದಿ ನಾಮಗಳು ಹೇಗೆ ಸಂಭವಿಸಿದವು? ಅವುಗಳ ಅರ್ಥವೇನು? ಇವೇ ಮೊದಲಾದ ಪ್ರಶ್ನೆಗಳಿಗೆ ಸರಿಯಾದ ಉತ್ತರವು ಮುಂದಿನ ಅಧಿಕರಣಗಳ ವಿಷಯ ವಿವೇಚನದಿಂದ ವಾಚಕರಿಗೆ ತಾನಾಗಿಯೇ ಹೊಳೆಯುವಂತಿರುವದು.

## ಷಡ್ವಿಧಲಿಂಗಗಳ ಉತ್ಪತ್ತಿಕ್ರಮ.

ಭಕ್ತಾದಿಯಾದ ಆರು ಅಂಗಸ್ಥಲಗಳಿಗೆ ಉಪಾಸನಾರ್ಥವಾಗಿ, ಮಹಾ ಲಿಂಗಾದಿಗಳು ಕ್ರಮವಾಗಿ ಒಂದರಿಂದೊಂದು ಉತ್ಪನ್ನವಾಗಿರುವವೆಂದು ವಿವರಿಸುವನು.

ಸೂ. ೩೫-೩೬. ಈ ಷಡ್ವಿಧಲಿಂಗಸ್ಥಲಗಳ ಉತ್ಪತ್ತಿಯು ಪ್ರದರ್ಶಿಸಲ್ಪಡುವುದು. ಮೊದಲು ಶಿವನೇ ತನ್ನ ಚಿಚ್ಛಕ್ತಿಯಿಂದ ಮಹಾಲಿಂಗಸ್ಥಲವಾದನು. ಆ ಮಹಾಲಿಂಗದ ಉಪಾಸನ ಮಾಡುವುದಕ್ಕಾಗಿ ಐಕ್ಯಸ್ಥಲವೆಂಬ ಅಂಗಸ್ಥಲವುಂಟಾಯಿತು.

ಸೂ. ೩೬-೩೭ ಮಹಾಲಿಂಗಸ್ಥಲದಲ್ಲಿರುವ ಪರಾಶಕ್ತಿರೂಪವಾದ ಶಿವ ಶಕ್ತಿಯು ಸ್ಫುರಣದಿಂದ [ಚಲನದಿಂದ] ಪ್ರಸಾದಲಿಂಗಸ್ಥಲವು ಪ್ರಾದುರ್ಭ ವಿಸಿತು. ಆ ಲಿಂಗೋಪಾಸನಾರ್ಥವಾಗಿ ಶರಣಸ್ಥಲವುಂಟಾಯಿತು.

ಸೂ. ೩೮-೩೯ ಪ್ರಸಾದಲಿಂಗವನ್ನಾಶ್ರಯಿಸಿದ ಆದಿಶಕ್ತಿಯ ಪ್ರಭಾ ವದಿಂದ ಚರಲಿಂಗದ ಉತ್ಪತ್ತಿಯಾಯಿತು ಆ ಲಿಂಗದ ಉಪಾಸನಾ ರ್ಥವಾಗಿ ಪ್ರಾಣಲಿಂಗಿಸ್ಥಲದ ಪ್ರಾದುರ್ಭಾವವಾಯಿತು.

ಸೂ. ೩೯-೪೦ ಚರಲಿಂಗಗತವಾದ ಇಚ್ಛಾಶಕ್ತಿಯಿಂದ ಜ್ಯೋತಿರ್ಮ ಯವಾದ ಸುಶೋಭನ ಶಿವಲಿಂಗದ ಆವಿರ್ಭಾವವಾದುದು. ಆ ಶಿವಲಿಂ ಗೋಪಾಸನ ನಿಮಿತ್ತವಾಗಿ ಪ್ರಸಾದಿಸ್ಥಲವುಂಟಾಯಿತು.

ಸೂ. ೪೧-೪೨ ಶಿವಲಿಂಗದ ಜ್ಞಾನಶಕ್ತಿಸ್ಫುರಣದಿಂದ ಗುರುಲಿಂಗದ ಉದಯವಾಯಿತು. ಆ ಗುರುಲಿಂಗದ ಉಪಾಸಕರೂಪದಿಂದ ಮಹೇಶ್ವರ ಸ್ಥಲದ ಉತ್ಪತ್ತಿಯಾಯಿತು.

ಸೂ. ೪೨-೪೩ ಗುರುಲಿಂಗಗತವಾದ ಕ್ರಿಯಾಶಕ್ತಿಯಿಂದ ಆಚಾರಲಿಂ ಗದುದಯವಾಯಿತು. ತದುಪಾಸನಾರ್ಥವಾಗಿ ಭಕ್ತಸ್ಥಲವು ಸಂಜನಿಸಿತು.

ಸೂ. ೪೪. ೪೫. ೪೬. ಮಹಾಲಿಂಗ, ಪ್ರಸಾದಲಿಂಗ, ಚರಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗವೆಂದು ಈ ಆರು ವಿಧವಾದ ಪ್ರವೃತ್ತಿ ಮಾರ್ಗದ ಲಿಂಗೋತ್ಪತ್ತಿಯು ವಿವರಿಸಲ್ಪಟ್ಟಿತು. ಈ ಷಡ್ವಿಧಲಿಂಗೋತ್ಪ ತ್ತಿಯ ವಿವರಣವು ಇಲ್ಲಿ ಸಂಕ್ಷಿಪ್ತವಾಗಿರುವುದು. ಪ್ರತಿಯೊಂದು ಲಿಂಗಸ್ಥ ಲದಲ್ಲಿಯೂ ಭೇದೋಪಭೇದಗಳು ಇರತಕ್ಕುವಾಗಿವೆ. (ಆ ಭೇದಗಳನ್ನು ಇತರ ಗ್ರಂಥಗಳಿಂದ ತಿಳಿಯತಕ್ಕುದೆಂದು ಭಾವವು)

## ಅಧಿಕರಣ ಸಮಾಪ್ತಿ.

ಸೂ. ೪೭. ಶಿವಪದಪ್ರಾಪ್ತಿಯನ್ನುಂಟುಮಾಡುವ ಶಿವಾದ್ವೈತನಾಮ ಕವಾದ ಈ ಶಿವಸಿದ್ಧಾಂತತಂತ್ರವನ್ನು ತಿಳಿದವನು ಅಜ್ಞಾನ ಗ್ರಂಥಿವನ್ನು ಭೇದಿಸುವನು.

## ತೃತೀಯಾಧಿಕರಣಂ ಸಮಾಪ್ತಂ.



# ಚತುರ್ಥಾಧಿಕರಣಂ.

## ಅಂಗಸ್ಥಲನಿರೂಪಣಂ.

ಅಂಗನೆಂದರೆ ಶಿವದೀಕ್ಷೆಯಿಂದ ಶುದ್ಧನಾದ ಜೀವನೆಂದರ್ಥವು. ಅಂತಹ ಶುದ್ಧಜೀವನಾದ ಅಂಗನ ಸ್ವರೂಪವನ್ನು ಪ್ರತಿಪಾದಿಸುವನು.

ಸೂ. ೧. ೪. ಪೂರ್ವದಲ್ಲಿ ಶಂಭುವು ಸಾರಭೂತವಾದ ಅರ್ಥವುಳ್ಳ ರಹಸ್ಯವಾದ ಯಾವ ಅಂಗಸ್ಥಲದನಿರೂಪಣವನ್ನು ಮಾಡಿರುವನೋ ಅದನ್ನೆ ಸಂಕ್ಷೇಪರೂಪದಿಂದ ಹೇಳಲಿಚ್ಛಿಸುವೆನು ಅನಾದ್ಯನಂತವಾದ ಜನ್ಮರಹಿತ ವಾದ ಯಾವ ಪರಾತ್ಪರಲಿಂಗವುಂಟೋ ಅದನ್ನು ಮಹಾಭಕ್ತಿಯಿಂದ ಯಾವ ವಸ್ತುವು ಹೊಂದುತ್ತಿರುವುದೋ (ಲಿಂಗೈಕ್ಯವಾಗುವುದೋ) ಅದೇ ಅಂಗಸ್ಥಲವೆಂದು ನಿಶ್ಚಿತವಾಗಿದೆ. 'ಅಂಗ, ಎಂಬ ಶಬ್ದದಲ್ಲಿ 'ಅಂ, ಎಂ ಬುದು ಪರಬ್ರಹ್ಮವು. ಆ ಪರಬ್ರಹ್ಮವನ್ನು ಹೊಂದಿದುದಾಗಿ ತತ್ಪರಾಯಣ ವಾದುದು ಆವುದೋ ಅದೇ ಅಂಗಸ್ಥಲವೆಂದು ಅಂಗತತ್ವವಿಶಾರದರು ಹೇಳುವರು. ಮತ್ತು 'ಅಂ, ಎಂಬುದು ಸದ್ರೂಪವಾದ ಬ್ರಹ್ಮಬೋಧಕವೂ 'ಗಂ, ಎಂಬುದು ಗಚ್ಛತಿ (ಹೊಂದುತ್ತದೆ) ಯೆಂಬ ಅರ್ಥಬೋಧಕವೂ ಆಗಿರುವವು ಆ ಎರಡರಿಂದಲೇ 'ಅಂಗಂ, ಎಂಬುದು ರೂಪಿಸಲ್ಪಟ್ಟಿರು ವುದು. ಅಂದರೆ ಪರಬ್ರಹ್ಮವನ್ನು ಹೊಂದಿ ತಾದಾತ್ಮ್ಯರೂಪದಿಂದಿರುವದೇ ಅಂಗವೆಂದು ಪ್ರಾಜ್ಞರಾದ ಅಂಗತತ್ವಚಿಂತಕರ ಮತವಿರುವುದು.

### ವಿಚಾರ.

ಪರಶಿವನೇ ಲಿಂಗಾಂಗ ಭೇದದಿಂದ ದ್ವಿವಿಧವಾದನೆಂದು ಹಿಂದೆ ಹೇಳಲ್ಪಟ್ಟದೆ. ಆದುದರಿಂದ ಎರಡಕ್ಕೂ ಭೇದವಿಲ್ಲ. ಸ್ವರ್ಣದಿಂದ ಕಡ ಗವು ಕೆಲವುಕಾಲಭೇದವ್ಯವಹಾರದಿಂದಿದ್ದು, ಅನಂತರ ಸ್ವರ್ಣರೂಪವನ್ನು ಹೊಂದುವಂತೆ ಅಂಗನು ಲಿಂಗರೂಪವನ್ನು ಹೊಂದುವನು. ಅಂಗ ಶಬ್ದ ವಾದರೂ ಯೋಗಣವಿಚಾರದಿಂದ ಇದೇ ಅರ್ಥವನ್ನು ಬೋಧಿಸುವುದೆಂಬು ದು ಒಡೆದು ತೋರುವುದು.

## ತ್ರಿವಿಧವಾದ ಅಂಗಸ್ಥಲಗಳು.

ಲಿಂಗವು ಅಂಗನನ್ನು ತನ್ನಲ್ಲಿ ಲೀನಮಾಡಿಕೊಳ್ಳುವ ನಿಮಿತ್ತವಾಗಿ ಹೇಗೆ ಹೇಗೆ ತ್ರಿವಿಧಾದಿಭೇದವನ್ನು ಹೊಂದಿರುವುದೋ ಹಾಗೆಯೇ ಅಂಗ

ವಾದರೂ ತಲ್ಲಿಂಗೋಪಾಸನದಿಂದ ತತ್ಸ್ವರೂಪವನ್ನು ಹೊಂದುವುದಕ್ಕಾಗಿ ತ್ರಿವಿಧಾದಿಭೇದವನ್ನು ಹೊಂದುತ್ತಿರುವುದು. ಆ ತ್ರಿವಿಧವಾದ ಅಂಗದ ವಿವರವನ್ನು ಹೇಳುವನು.

ಸೂ. ೫-೬ ಅಂಗಸ್ಥಲವು ಮೂರು ಪ್ರಕಾರವಾಗಿರುವುದು. ೧ನೆಯದು ಯೋಗಾಂಗವು. ೨ನೆಯದು ಭೋಗಾಂಗವು. ೩ನೆಯದು ತ್ಯಾಗಾಂಗವು.

ಸೂ. ೬ ಶಿವಯೋಗಸುಖವನ್ನು ಹೊಂದುವುದರಿಂದ (ಇಲ್ಲಿ ಶಿವಯೋಗವೆಂದರೆ ಶಿವನಲ್ಲಿ ಸಮರಸರೂಪವಾದ ಅನುಸಂಧಾನವು) ೧ನೆಯದು ಯೋಗಾಂಗವೆಂದು ಹೇಳಲ್ಪಡುವುದು.

ಸೂ. ೭ ಶಿವನೊಡನೆ ಭೋಗಿಸುವುದರಿಂದ ಅಂದರೆ ಅಂಗನು ತನ್ನ ಭೋಗವನ್ನು ಮೊದಲು ಶಿವನಿಗರ್ಪಿಸಿ ಅನಂತರ ಶಿವಪ್ರಸಾದರೂಪದಿಂದ ಶಿವಾಭೇದಬುದ್ಧಿಯುಳ್ಳವನಾಗಿ ತಾನು ಭೋಗಿಸುವುದರಿಂದ ೨ನೆಯದು ಭೋಗಾಂಗವೆಂದು ಹೇಳಲ್ಪಡುವುದು. ಸಂಸಾರಭ್ರಾಂತಿಯು ತ್ಯಾಗದಿಂದ ಅಂದರೆ ಶಿವದೀಕ್ಷಿತನಾಗಿ ಅಂಗನಾಮಕನಾದ ಮೇಲೆ ಅಂಗನಿಗೆ ಆಣವಾದಿ ಮಲತ್ರಯದ ಭ್ರಾಂತಿಯು ಸಹಜವಾಗಿಯೇ ತ್ಯಾಗವಾಗಿರುವುದರಿಂದ ೩ನೆಯದು ತ್ಯಾಗಾಂಗವೆಂದು ಹೇಳಲ್ಪಡುವುದು.

ಸೂ ೮-೧೦ ಕಾರಣ, ಸೂಕ್ಷ್ಮ, ಸ್ಥೂಲಶರೀರಗಳೂ, ನಿದ್ರಾ, ಸ್ವಪ್ನ, ಜಾಗ್ರದವಸ್ಥೆಗಳೂ, ಪ್ರಾಜ್ಞ, ತೈಜಸ, ವಿಶ್ವನಾಮಕರಾದ ತ್ರಿವಿಧಜೀವರೂ ಕ್ರಮವಾಗಿ ಯೋಗಾಂಗ, ಭೋಗಾಂಗ, ತ್ಯಾಗಾಂಗಗಳಿಗೆ ಉಕ್ತರಾಗಿರುವರು.

## ವಿಚಾರ.

ಯೋಗಾಂಗಾದ್ಯಂಗತ್ರಯಕ್ಕೆ ಶರೀರತ್ರಯ, ಅವಸ್ಥಾತ್ರಯ, ಜೀವತ್ರಯವನ್ನು ಹೇಳಿದುದರ ತಾತ್ಪರ್ಯವನ್ನು ಶಿವಾನುಭವಿಗಳು ಕೆಳಗೆ ಹೇಳಿದಂತೆ ವಿವರಿಸುವರು. ಕಾರಣಶರೀರದಲ್ಲಿರುವ ಜೀವನಿಗೆ ಪ್ರಾಜ್ಞನೆಂದೂ ಪರಮಾತ್ಮನೆಂದೂ, ಸೂಕ್ಷ್ಮಶರೀರದಲ್ಲಿರುವ ಜೀವನಿಗೆ ತೈಜಸವೆಂದೂ ಅಂತರಾತ್ಮನೆಂದೂ, ಸ್ಥೂಲಶರೀರದಲ್ಲಿರುವ ಜೀವನಿಗೆ ವಿಶ್ವನೆಂದೂ, ಜೀವಾತ್ಮನೆಂದೂ ಅನ್ನುವರು. ಅಂಗನೆಂದರೆ ಶುದ್ಧಜೀವನು. ಪ್ರಾಜ್ಞಜೀವನು ನಿದ್ರಾವಸ್ಥೆಯಲ್ಲಿ ಕಾರಣಶರೀರದಲ್ಲಿರುವ ಭಾವಲಿಂ

ಗದ ಉಪಾಸಕನಾಗುವನು. ತೈಜಸ ಜೀವನು ಸ್ವಪ್ನಾವಸ್ಥೆಯಲ್ಲಿ ಸೂಕ್ಷ್ಮ ಶರೀರದಲ್ಲಿರುವ ಪ್ರಾಣಲಿಂಗದ ಉಪಾಸಕನಾಗುವನು. ವಿಶ್ವಜೀವನು ಜಾಗ್ರಾವಸ್ಥೆಯಲ್ಲಿ ಸ್ಥೂಲಶರೀರದಲ್ಲಿರುವ ಇಷ್ಟಲಿಂಗದ ಉಪಾಸಕನಾಗುವನು. ಅಂದರೆ ಜೀವನೊಬ್ಬನೇ ವಿಶ್ವ, ತೈಜಸ, ಪ್ರಾಜ್ಞರೂಪದಿಂದ ಸರ್ವದಾ [ಅವಸ್ಥಾತ್ರಯದಲ್ಲಿ] ಶರೀರತ್ರಯದಲ್ಲಿ ಗುರುವು ದೀಕ್ಷಾತ್ರಯದಿಂದ ಯೋಜಿಸಿದ ಇಷ್ಟ, ಪ್ರಾಣ, ಭಾವವೆಂಬ ಅಂಗತ್ರಯದ ಉಪಾಸಕನಾಗಿ, ಯೋಗಾಂಗಾದ್ಯಂಗತ್ರಯನಾಮವನ್ನು ಪಡೆದು ವಿರಾಜಿಸುವನು. ಆದುದರಿಂದ ಇಲ್ಲಿ ಶರೀರತ್ರಯಾದಿಗಳು ಅಂಗತ್ರಯಕ್ಕೆ ಅಭೇದದೃಷ್ಟಿಯಿಂದ ಉಕ್ತಗಳಾಗಿರುವವು.

## ಷಡ್ವಿಧವಾದ ಅಂಗಸ್ಥಲಗಳು.

ಲಿಂಗಸ್ಥಲದಂತೆ ಅಂಗಸ್ಥಲವಾದರೂ ಆರು ಪ್ರಕಾರವಾಗುವದೆಂಬುದನ್ನು ಹೇಳುವನು.

ಸೂ. ೧೧. ೧೩. ಮೂರು ಪ್ರಕಾರವಾದ ಅಂಗಸ್ಥಲೂ ಪ್ರತ್ಯೇಕ್ಷವಾಗಿ ಎರಡೆರಡು ತೆರನಾಗುವದು. ಯೋಗಾಂಗವು ಶರಣ, ಐಕ್ಯ ಎಂಬುದಾಗಿಯೂ, ಭೋಗಾಂಗವು ಪ್ರಾಣಲಿಂಗಿ, ಪ್ರಸಾದಿ ಎಂಬುದಾಗಿಯೂ, ತ್ಯಾಗಾಂಗವು ಮಹೇಶ, ಭಕ್ತ ಎಂಬುದಾಗಿಯೂ ಒಂದೊಂದರಲ್ಲಿ ಎರಡು ತೆರನಾಗಿರುವುದು.

ಸೂ. ೧೪. ೧೭. ಐಕ್ಯ, ಶರಣನೆಂಬ ಸ್ಥಲದ್ವಯವು ಕಾರಣದೇಹದಲ್ಲಿ ಪ್ರಾಜ್ಞಜೀವಾಶ್ರಿತವಾಗಿರುವುದು. ಪ್ರಾಣಲಿಂಗಿ, ಪ್ರಸಾದಿಯೆಂಬೆರಡು ಸ್ಥಲವು ಸೂಕ್ಷ್ಮದೇಹದಲ್ಲಿ ತೈಜಸಜೀವನಿಗೆ ಆಶ್ರಯವಾಗಿರುವುದು. ಮಹೇಶ, ಭಕ್ತನೆಂಬ ಸ್ಥಲದ್ವಯವು ಸ್ಥೂಲದೇಹದಲ್ಲಿ ವಿಶ್ವನೆಂಬ ಜೀವನಿಗೆ ಆಶ್ರಯವಾಗಿರುವುದು.

ಸೂ. ೧೮. ೧೯. ಎಲ್ಲಿ ಸಂಸಾರಸಂಗರಾಹಿತ್ಯದಿಂದ ಪರಾಭಕ್ತಿಯು ಸ್ಥಿರವಾಗಿರುವುದೋ ಅದೇ ಅಂಗಸ್ಥಲವೆಂದು ಹೇಳಲ್ಪಟ್ಟಿದು. ಆ ಅಂಗಸ್ಥಲಗತವಾದ ಭಕ್ತಿಯ ವೈಚಿತ್ರ್ಯವಾದ ಸಂಯೋಗದ ಮಹಿಮೆಯಿಂದ ನಾಮರೂಪಕ್ರಿಯೆಗಳಿಂದ ಭಿನ್ನ ಭಿನ್ನವಾದ ಷಡಂಗಸ್ಥಲಗಳುಂಟಾವುದು.

## ವಿಚಾರ.

ಅಂಗಗತ ಭಕ್ತಿಯು ನಿವೃತ್ತ್ಯುನ್ಮುಖಿಯೆಂದು ಹಿಂದೆ ಹೇಳಲ್ಪಟ್ಟಿದೆ. ಅಂದರೆ ಅಂಗನನ್ನು ಸಂಸಾರದಿಂದ ನಿವೃತ್ತನನ್ನು ಮಾಡಿ ಲಿಂಗದಲ್ಲಿ ಬೆರೆಯುವಂತೆ ಮಾಡುವುದೇ ಭಕ್ತಿಯ ಸ್ವಭಾವವು. ಅಂತಹ ಭಕ್ತಿಯ ಸಂಯೋಗ ವಿಶೇಷದಿಂದ ಅಂಗನು ಮಹದಾದಿ ಲಿಂಗೋಪಾಸನೆಗೆ ತಕ್ಕ ಐಕ್ಯಾದ್ಯಂಗಭಾವವನ್ನು ಹೊಂದಿ ಷಡ್ವಿಧನಾದನು.

## ಷಡ್ವಿಧವಾದ ಭಕ್ತಿಯು.

ಶಿವನ ಸ್ವಪ್ರಕಾಶತಾರೂಪವಾದ ಶಕ್ತಿಯು ಲಿಂಗಗತವಾಗಿ ಲಿಂಗದ ಆರು ಭೇದಗಳನ್ನನುಸರಿಸಿ ಆರು ತೆರನಾದಂತೆ ಆ ಸ್ವಪ್ರಕಾಶತಾ ಶಕ್ತಿಯೇ ಅಂಗಗತವಾಗಿ ಭಕ್ತಿಯೆನಿಸಿಕೊಂಡು ಆರು ವಿಧವಾದ ವಿವರವನ್ನು ದೃಷ್ಟಾಂತಪೂರ್ವಕವಾಗಿ ಪ್ರತಿಪಾದಿಸುವನು.

ಸೂ. ೨೦. ೨೩. ಜಲವು ಮಧುರಾದಿಯಾದ ಆರು ರಸಗಳಲ್ಲಿ ಪ್ರವೇಶಿಸಿ, ಅವುಗಳ ಸ್ವರೂಪದಿಂದ ತೋರುವಂತೆ ಸಾಕ್ಷಾಚ್ಛಿವಾತ್ಮಕವಾದ ಭಕ್ತಿಯು ಐಕ್ಯಾದಿ ಷಡಂಗಸ್ಥಲಗಳಲ್ಲಿ ಪ್ರವೇಶಿಸಿ, ಅಂಗೋಪಾಧಿಯಿಂದ ಷಡ್ವಿಧವಾದ ಆಕಾರದಿಂದ ಭಿನ್ನಭಿನ್ನವಾಗಿ ಷಡ್‌ಸ್ಥಲಗಳಲ್ಲಿ ತೋರುತ್ತಿರುವುದು. ಶಕ್ತಿಯು ಮಹಾಲಿಂಗಾದ್ಯಾಚಾರಾಂತವಾದ ಆರು ಲಿಂಗಸ್ಥಲಗಳಲ್ಲಿ ನೆಲಸಿರುವಂತೆ ಭಕ್ತಿಯು ಐಕ್ಯಾದಿ ಭಕ್ತಾಂತವಾದ ಷಡಂಗಸ್ಥಲಗಳಲ್ಲಿ ನೆಲಸಿರುವುದು.

ಸೂ. ೨೪. ೨೬. ಐಕ್ಯಾದಿ ಸ್ಥಲಗಳಲ್ಲಿ ಕ್ರಮವಾಗಿ ೧ ಸಮರಸಭಕ್ತಿ, ೨ ಆನಂದಭಕ್ತಿ, ೩ ಅನುಭವಭಕ್ತಿ, ೪ ಅವಧಾನಭಕ್ತಿ, ೫ ನೈಷ್ಠಿಕೀಭಕ್ತಿ, ೬ ಸದ್ಭಕ್ತಿಯೆಂಬ ರೂಪದಿಂದ ಅಂಗಗತಶಕ್ತಿಯು (ಭಕ್ತಿ) ವಿರಾಜಿಸುತ್ತಿರುವುದು.

## ವಿಚಾರ.

ಅಂಗಗತ ಭಕ್ತಿಯ ಸಮರಸಾದ್ಯಾಕಾರದ ಲಕ್ಷಣವೂ ಪ್ರಯೋಜನವೂ ಮುಂದಿನ ಲಿಂಗಾಂಗಸಂಯೋಗವಿಧಿಯಲ್ಲಿ ಸೂತ್ರಕಾರನಿಂದ ವಿಶದವಾಗಿ ಪ್ರತಿಪಾದಿತವಾಗಿದೆ.

## ಷಡ್ವಿಧ ಭಕ್ತಿಯುಕ್ತಗಳಾದ ಷಡಂಗಸ್ಥಲಗಳ ಸ್ವರೂಪವು.

ಐಕ್ಯಾದಿ ಷಡಂಗಸ್ಥಲಗಳಲ್ಲಿ ಪ್ರತಿಯೊಂದಕ್ಕೂ ಇರುವ ಲಕ್ಷಣದ ತಾರತಮ್ಯವನ್ನು ಹೇಳುತ್ತಾನೆ.

ಸೂ. ೨೬-೨೭ ಆರುವಿಧವಾದ ಭಕ್ತಿಯಿಂದ ಕೂಡಿದ ಆ ರಂಗಗಳ ಪೃಥುಕ್ಕಾದ ಲಕ್ಷಣ ಸದ್ಭಾವಸ್ಥಿತಿಯು ಆನುಪೂರ್ವಿಕವಾಗಿ ಹೇಳಲ್ಪಡುತ್ತದೆ.

ಸೂ. ೨೮ ಐಕ್ಯ—ನಾನು ನೀನೆಂಬ ಭೇದವೂ ದೇಹ, ಪ್ರಾಣ, ಇಂದ್ರಿಯಾದಿ ಭೇದವ್ಯವಹಾರವೂ ಇದೆಲ್ಲವೂ ಭ್ರಾಂತಿಜನ್ಯವು. ಅಂದರೆ ಅಭೇದದಲ್ಲಿ ಕೂಡಿದ ಭೇದವುಳ್ಳದ್ದಲ್ಲದೆ ಯಥಾರ್ಥವಲ್ಲವು. ಈ ಭೇದವು ನನ್ನಲ್ಲಿಲ್ಲವೆಂಬ ಶಿವಾದ್ವೈತಭಾವದಿಂದ ಸಮರಸಭಕ್ತಿಯು ಸುಖಸ್ವರೂಪವನ್ನು ಪಡೆದಿರುದೇ ಐಕ್ಯಸ್ಥಲದ ಲಕ್ಷಣವು.

ಸೂ. ೨೯. ಶರಣ—ಜ್ಞಾನಪ್ರಕಾಶ ಬಲದಿಂದ ನಾನೂ ನನ್ನ ದೇಹೇಂದ್ರಿಯಾದಿಗಳೂ ಸ್ವತಃ ಲಿಂಗರೂಪವಾಗಿರುವವೆಂದು ತಿಳಿದು, ಸಕಲ ವಿಷಯಗಳಿಂದ ಕೂಡಿದ್ದರೂ ವಿಶುದ್ಧನಾಗಿ (ಶುದ್ಧವಾದ ಆನಂದಭಕ್ತಿಯಿಂದ ಕೂಡಿ) ಇರುವುದೇ ಶರಣಸ್ಥಲದ ಲಕ್ಷಣವು.

ಸೂ. ೩೦. ಪ್ರಾಣಲಿಂಗಿ—ಪ್ರಾಣೇಂದ್ರಿಯಾದಿಗಳಲ್ಲಿ ನಾನು ನನ್ನದೆಂಬ ಭ್ರಮಜನ್ಯವಾದ ಮೋಹವನ್ನು ತ್ಯಜಿಸಿ, ಇದೆಲ್ಲವೂ ಲಿಂಗಮಯವಾದುದೆಂದು ತಿಳಿದು ತದೇಕಾಯತ್ತ ಮಾನಸನಾಗಿರುವುದೇ ಪ್ರಾಣಲಿಂಗಿಯ ಸ್ವರೂಪವು.

ಸೂ. ೩೧. ಪ್ರಸಾದಿ—ಪ್ರತಿಯೊಂದು ಇಂದ್ರಿಯದ ಮುಖದಿಂದಲೂ ತಾನು ಅನುಭವಿಸುವ ಪದಾರ್ಥಗಳನ್ನು ಮೊದಲು ಲಿಂಗಕ್ಕೆ ಸಮರ್ಪಿಸಿ ಬಳಿಕ ಅದನ್ನು ಅವಧಾನಭಕ್ತಿಪೂರ್ವಕವಾಗಿ ಲಿಂಗಮುಖದಿಂದ ಪ್ರಸಾದರೂಪವಾಗಿ ಪರಿಗ್ರಹಿಸುವುದೇ ಪ್ರಸಾದಿಯ ಲಕ್ಷಣವು.

ಸೂ. ೩೨. ಮಹೇಶ್ವರ— ಆಸ್ತಿಕ್ಯಬುದ್ಧಿಯಿಂದಲೂ, ಲಿಂಗಪೂಜಾದಿನಿತ್ಯವ್ರತದಿಂದಲೂ, ಸತ್ಯ, ಧರ್ಮ, ಶೌಚಾದಿಗಳ ಆಚರಣೆಯಿಂದಲೂ ಕೂಡಿದ ಸಚ್ಚರಿತ್ರನಾಗಿ, ಲಿಂಗೈಕನಿಷ್ಠನಾಗಿ, ವೀರವ್ರತತತ್ಪರನಾಗಿರುವುದೇ ಮಹೇಶ್ವರನ ಲಕ್ಷಣವು.

ಸೂ. ೩೩. ಭಕ್ತ — ಶರೀರ ಪ್ರಾಣಾದಿ ವಸ್ತುಜಾಲವು ಸತ್ಯವೆಂಬಂತೆ ತೋರುತ್ತಿದ್ದರೂ ಇದೆಲ್ಲವೂ ಅಸ್ಥಿರವೆಂದು ತಿಳಿದು, ಅಲ್ಲಿಂದ ನಿವೃತ್ತಿಗೊಳಿಸಿದ ಚಿತ್ತವನ್ನು ಸದ್ಭಕ್ತಿ ಕ್ರಿಯಾಚರಣದಲ್ಲಿ ಅಳವಡಿಸಿರುವುದೇ ಭವವಿಕಾರ ದೂರನಾದ ಭಕ್ತನ ಲಕ್ಷಣವು.

ಸೂ. ೩೪. ಈ ರೀತಿಯಾಗಿ ಶಿವತೇಜಸ್ಸಿನಿಂದ ಕೂಡಿದ ಆರು ತೆರದ ಆಶ್ರಮಿಗಳಾದ ಐಕ್ಯಾದಿ ಭಕ್ತಾಂತವಾದ ಶುದ್ಧಜೀವರ ಭಿನ್ನವಾದ ಆಚಾರಸ್ವರೂಪವು ಹೇಳಲ್ಪಟ್ಟಿದು.

## ಆತ್ಮಾದಿ ಷಡಂಗಗಳು.

ಆತ್ಮಾದಿಗಳ ಉತ್ಪತ್ತಿಯನ್ನು ಹೇಳಿ, ಅವುಗಳು ಕ್ರಮವಾಗಿ ಐಕ್ಯಾದಿ ಷಟ್‌ಸ್ಥಲಗಳಿಗೆ ಅಂಗವಾಗಿರುವದೆಂದು ಹೇಳುತ್ತಾನೆ.

ಸೂ. ೩೫. ಆತ್ಮಾದಿಗಳ ಉತ್ಪತ್ತಿಯು ಭೇದವು ವಿವರಿಸಲ್ಪಡುವುದು.

ಸೂ. ೩೫ ೩೬. ಆತ್ಮನಿಂದ ಆಕಾಶವೂ, ಆಕಾಶದಿಂದ ವಾಯುವೂ, ವಾಯುವಿನಿಂದ ಅಗ್ನಿಯೂ, ಅಗ್ನಿಯಿಂದ ಜಲವೂ, ಜಲದಿಂದ ಭೂಮಿಯೂ ಉದಿಸಿದವು.

ಸೂ. ೩೭. ೩೯. ಈ ಆತ್ಮಾದಿಗಳು ಷಡಾಶ್ರಮಿಗಳಾದ ಐಕ್ಯಾದಿ ಷಟ್‌ಸ್ಥಲಗಳಿಗೆ ಅಂಗಗಳಾಗಿರುವವು. ಹೇಗೆಂದರೆ, ಐಕ್ಯಸ್ಥಲಕ್ಕೆ ಆತ್ಮಾಂಗವು, ಶರಣಸ್ಥಲಕ್ಕೆ ಆಕಾಶಾಂಗವು, ಪ್ರಾಣಲಿಂಗಸ್ಥಲಕ್ಕೆ ವಾಯ್ವಂಗವು, ಪ್ರಸಾದಿಸ್ಥಲಕ್ಕೆ ಅಗ್ನ್ಯಂಗವು, ಮಹೇಶಸ್ಥಲಕ್ಕೆ ಜಲಾಂಗವು ಭಕ್ತಸ್ಥಲಕ್ಕೆ ಭೂಮ್ಯಂಗವು.

## ಷಡಂಗಸ್ಥಲಗಳ ಬಿಂದ್ವಾದಿ ಮತ್ತು ಶರೀರಾದಿ ವಿಭಾಗ.

ಸೂ. ೪೦. ೪೧. ಬಿಂದು, ನಾದ, ಕಳಾಭೇದದಿಂದಲೂ ಷಡಂಗಸ್ಥಲಗಳ ವಿಭಾಗವಾಗಿದೆ. ಹೇಗೆಂದರೆ, ಬಿಂದುವಿಗೆ ಭಕ್ತಮಹೇಶಸ್ಥಲಗಳೂ, ನಾದಕ್ಕೆ ಪ್ರಸಾದಿ ಪ್ರಾಣಲಿಂಗಿಸ್ಥಲಗಳೂ, ಕಳೆಗೆ ಶರಣ ಐಕ್ಯಸ್ಥಲಗಳೂ ಸಂಬಂಧಿಸಿರುವವು. ಮತ್ತು ದೇಹಕ್ಕೆ ಭಕ್ತಿಮಹೇಶ್ವರರೂ, ಪ್ರಾಣಕ್ಕೆ ಪ್ರಸಾದಿ ಪ್ರಾಣಲಿಂಗಿಗಳೂ, ಆತ್ಮನಿಗೆ ಐಕ್ಯಶರಣರೂ ಸಲುವಳಿಯಾಗಿರುವರು.

## ಜ್ಞಾನಕ್ರಿಯಾತ್ಮಕ ಷಡಂಗಸ್ಥಲ.

ಸೂ. ೪೨. ೪೩. ಷಡಂಗಸ್ಥಲಗಳಲ್ಲಿ ಮೂರು ಜ್ಞಾನಾತ್ಮಕವಾಗಿಯೂ, ಮೂರು ಕ್ರಿಯಾತ್ಮಕವಾಗಿಯೂ ಇರುವವು. ಐಕ್ಯ, ಶರಣ, ಪ್ರಾಣಲಿಂಗಿಗಳು ಜ್ಞಾನಾತ್ಮಕವು. ಪ್ರಸಾದಿ ಮಹೇಶ ಭಕ್ತಸ್ಥಲಗಳು ಕ್ರಿಯಾತ್ಮಕವು.

### ವಿಚಾರ.

ಇಲ್ಲಿ ಮೂರುಅಂಗಸ್ಥಲಗಳು ಜ್ಞಾನಾತ್ಮಕವಾಗಿಯೂ ಉಳಿದ ಮೂರು ಕ್ರಿಯಾತ್ಮಕವಾಗಿಯೂ ಇರುವದೆಂದು ಹೇಳುವುದರಿಂದ ಭಕ್ತಾದಿಯಾದ ಮೂರು ಸ್ಥಲಗಳಲ್ಲಿ ಮಾತ್ರ ಕ್ರಿಯಾಚರಣವಿದ್ದು ಮುಂದಿನ ಮೂರು ಸ್ಥಲಗಳಲ್ಲಿ ಕ್ರಿಯೆಯಿಲ್ಲದೆ ಜ್ಞಾನವೊಂದೇ ಸಾಕಾಗಿರುವುದು. ಆ ಜ್ಞಾನವೇ ಲಿಂಗಾಂಗಸಮರಸ್ಯ ರೂಪಮುಕ್ತಿಗೆ ಸಾಧನವಾಗಿರುವುದೆಂದು ತಿಳಿಯ ಕೂಡದು. ವೀರಶೈವಸಿದ್ಧಾಂತದಲ್ಲಿ ಜ್ಞಾನಕ್ರಿಯೆಗಳೆರಡೂ ಸಮಸಮುಚ್ಚಯರೂಪದಿಂದ ಮುಕ್ತಿಗೆ ಸಾಧನವಾಗಿರುವವಲ್ಲದೆ ಕ್ರಮಸಮುಚ್ಚಯದಿಂದಲ್ಲವು. ಶಿವಸ್ವರೂಪಜ್ಞಾನವಿಲ್ಲದಿದ್ದರೆ ಶಿವನ ಧ್ಯಾನಾದಿ ಕ್ರಿಯೆಯನ್ನು ಮಾಡಲಿಕ್ಕಾಗುವದಿಲ್ಲ. ಜ್ಞಾನವಿಲ್ಲದ ಕ್ರಿಯೆಯು ನಿಷ್ಫಲವು. ಅಂತೆ ಕ್ರಿಯೆಯಿಲ್ಲದ ಜ್ಞಾನವಾದರೂ ನಿಷ್ಪ್ರಯೋಜನವು. ಪರಬ್ರಹ್ಮವೇ ನಾನೆಂಬ ಜ್ಞಾನವು ಎಷ್ಟೋಜನರಿಗಿರಬಹುದು. ಅಂತಹ ಜ್ಞಾನವೊಂದರಿಂದ ಅವರೆಲ್ಲರಿಗೂ ಮುಕ್ತಿಯಾಗಲಾರದು. ಯಾವುದಾದರೊಂದು ವಸ್ತುವಿನ ಜ್ಞಾನಮಾತ್ರದಿಂದ, ವಸ್ತುಪ್ರಾಪ್ತಿಗೆ ತಕ್ಕ ಕ್ರಿಯೆಯನ್ನಾಚರಿಸದೆ, ಆ ವಸ್ತುವು ಕೈಸೇರಲಾರದು. ಕಾಲಿಲ್ಲದ ಮನುಷ್ಯನೂ ಕಣ್ಣಿಲ್ಲದವನೂ ಒಬ್ಬೊಬ್ಬರೇ ಬೇರೆಯಾಗಿ ಪಟ್ಟಣಕ್ಕೆ ಹೋಗಲಾರರು; ಇಬ್ಬರೂ ಕೂಡಿಕೊಂಡರೆ ಮಾತ್ರ ಪರಸ್ಪರಸಹಾಯದಿಂದ ಹೋಗುವರು. ಜ್ಞಾನವು ಎಳವನಂತೆಯೂ, ಕ್ರಿಯೆಯು ಕುರುಡನಂತೆಯೂ ಇರುವವು. ಆದುದರಿಂದ ಜ್ಞಾನವಿಲ್ಲದ ಕರ್ಮವುಳ್ಳವನೂ, ಕರ್ಮವಿಲ್ಲದ ಜ್ಞಾನವುಳ್ಳವನೂ ಮುಕ್ತಿಪಟ್ಟಣಕ್ಕೆ ಹೋಗಲಾರನು. ಅವೆರಡನ್ನೂ ಕೂಡಿಕೊಂಡೇ ಹೋಗುವನು ಕರ್ಮದಿಂದ ಮುಕ್ತಿಯಿಲ್ಲವೆಂಬ 'ನಾಸ್ತ್ಯಕೃತಃ ಕೃತೇನ, ಇತ್ಯಾದಿ ಶ್ರುತಿವಾಕ್ಯವು ಜ್ಞಾನರಹಿತವಾದ ಕರ್ಮವನ್ನು ಅಥವಾ ಯಜ್ಞಾದಿ ಪಶುಕರ್ಮವನ್ನು ನಿಷೇಧಿಸುವುದಲ್ಲದೆ ಜ್ಞಾನಯುಕ್ತವಾದ ಶಿವಕ್ರಿಯೆಯನ್ನು ನಿಷೇಧಿಸುವದಿಲ್ಲ.

ಶಿವಾನುಭವ ಗ್ರಂಥಮಾಲಾ ನಂ|| ೧೯

ಮೈಲಾರ ಬಸಪ್ಪನವರ

# ಶಿವಾನುಭವ ದರ್ಪಣ.



ಸಂಪಾದಕರು

ರಾ|| ಸಾ|| ಫ. ಗು. ಹಳಕಟ್ಟಿ
ಬಿ. ಏ. ಎಲ್. ಎಲ್. ಬಿ. ವಕೀಲ.

ವಿಜಾಪುರ.

೧೯೩೦

ಬೆಲೆ ೮ ಆಣೆ.

# ಪ್ರಸ್ತಾವನೆ.

ವೈಲಾರ ಬಸಪ್ಪನೆಂಬ ಶಿವಶರಣರು ಹೋದಶತಮಾನದಲ್ಲಿ ಕರ್ನಾಟಕದಲ್ಲಿ ಬಹುಪ್ರಸಿದ್ಧರಾಗಿದ್ದರು. ಅವರು ರಚಿಸಿದ ಕವನಗಳು ಈ ಕಾಲಕ್ಕೆ ರಾಣೇಬಿನ್ನೂರು ಹರಪನಹಳ್ಳಿ ಭಾಗಗಳಲ್ಲಿ ಬಹು ಪ್ರಚಲಿತವಾಗಿವೆ. ಆದರೆ ಅವುಗಳಲ್ಲಾವವೂ ಈ ವರೆಗೆ ಪ್ರಸಿದ್ಧವಾಗಿರುವದಿಲ್ಲ. ಅವುಗಳು ಅಲ್ಲಲ್ಲಿ ಉಪಲಬ್ಧವಿದ್ದು ಅವುಗಳನ್ನು ಸಂಗ್ರಹಿಸಿ ಪುಸ್ತಕರೂಪದಿಂದ ಅಚ್ಚುಹಾಕುವದು ಕಷ್ಟವಾಗಿದ್ದರೂ ಈ ಕಾರ್ಯದಲ್ಲಿ ರಾ|| ರಾ|| ಗುರುನಂಜಪ್ಪಾ ನೀಲಪ್ಪ, ಪ್ರೇಮನಿ ಸ್ಕೂಲ ಮಾಸ್ತರ ರಾಣೇಬಿನ್ನೂರು ಮತ್ತು ರಾ|| ರಾ|| ಬಸಪ್ಪಾ ಅಂಕಲಕೋಟಿ ಸಾ|| ರಾಣೇಬಿನ್ನೂರು ಈ ಉಭಯ ಮಹನೀಯರು ನಮಗೆ ಬಹು ಸಹಾಯಕರಾಗಿದ್ದದರಿಂದ ನಾವು ಅವರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ. ಈ ಸದ್ಗೃಹಸ್ಥರು ಪ್ರತ್ಯೇಕವಾಗಿ ಬರೆದಿಟ್ಟುಕೊಂಡಿದ್ದ ತಮ್ಮ ಪದ್ಯ ಪುಸ್ತಕಗಳನ್ನು ನಮ್ಮ ಕಡೆಗೆ ಕಳಿಸಿ ಕೊಟ್ಟಿದ್ದರಿಂದ ಅವುಗಳ ಸಹಾಯದಿಂದ ನಾವು ಈ ಗ್ರಂಥವನ್ನು ಪ್ರಸಿದ್ಧಪಡಿಸಲು ಬಹಳ ಸಹಾಯ್ಯವಾಯಿತು. ಈ ಎರಡು ಗ್ರಂಥಗಳಲ್ಲಿ ರಾ|| ರಾ|| ಬಸಪ್ಪ ಅಂಕಲಕೋಟಿಯವರ ಗ್ರಂಥದಲ್ಲಿ ೨ ಪದ್ಯಗಳು ಮಾತ್ರ ಹೆಚ್ಚಿಗಿದ್ದು ಅವುಗಳನ್ನು ಇದರಲ್ಲಿ ಸೇರಿಸಿದ್ದೇವೆ.

ಈ ಪದ್ಯಗಳ ಮೇಲಿಂದ ವೈಲಾರ ಬಸಪ್ಪನವರು ವೀರಶೈವ ಷಟ್‌ಸ್ಥಲ ಮಾರ್ಗವನ್ನು ಬಹು ಚನ್ನಾಗಿ ಅರಿತವರಾಗಿದ್ದರೆಂಬುದು ಸ್ಪಷ್ಟವಾಗುತ್ತದೆ. ಇವುಗಳಲ್ಲಿ ಈ ವಿಷಯತತ್ವಗಳು ಬಹು ಸ್ಫುಟವಾಗಿ ನಿರೂಪಿಸಲ್ಪಟ್ಟಿವೆ. ಷಟ್‌ಸ್ಥಲ ಮಾರ್ಗವು ಒಂದು ವಿಶೇಷತರ ಸ್ವರೂಪದ್ದಿದ್ದು ಅದರ ವರ್ಣನೆಯು ಇತರ ವೀರಶೈವ ಸಾಧುಸತ್ಪುರುಷರ ಕವನಗಳಲ್ಲಿ ಪರಿಪೂರ್ಣವಾಗಿ ತೋರಿಸಲ್ಪಟ್ಟಿದ್ದು ಕಂಡುಬರುವದಿಲ್ಲ. ಆದರೆ ವೈಲಾರ ಬಸಪ್ಪನವರ ಪದ್ಯಗಳು ಹೀಗಿರದೆ ಅವು ಬಸವಾದಿಪ್ರಮಥರ ತತ್ವಗಳನ್ನೇ ಬಹು ವಿಶದವಾಗಿ ಸ್ಪಷ್ಟೀಕರಿಸುತ್ತವೆ. ಈ ದೃಷ್ಟಿಯಿಂದ ಈ ಗ್ರಂಥದಮಹತ್ವವು ಬಹಳವಿರುತ್ತದೆ. ಈ ಕವಿಯ ರಚನಾ ಶೈಲಿಯಾದರೂ ಬಹು ಸುಬೋಧವೂ ಲಲಿತವೂ ಆಗಿರುತ್ತದೆ. ಆದರೆ ನಮಗೆ ದೊರೆದ ಪ್ರತಿಗಳು ಅಶುದ್ಧವಾದವುಗಳು. ಇವು ಹಾಡಿದವರನ್ನು ಕೇಳಿ ಬರೆದಿಟ್ಟವುಗಳಿರುವದರಿಂದ ಇವುಗಳ ಸ್ಥಿತಿಯು

ಹೀಗಾಗಿರುವದು ಸ್ವಾಭಾವಿಕವಾದದ್ದು. ಬೇರೆ ಯಾರಲ್ಲಾದರೂ ಈ ಹಾಡುಗಳ ಪ್ರತಿಗಳು ಇದ್ದಿದ್ದರೆ ಅವುಗಳನ್ನು ಅವರು ನಮ್ಮ ಕಡೆಗೆ ಕಳಿಸಿಕೊಡಬೇಕೆಂದು ನಮ್ಮ ವಿನಂತಿ ಇದೆ. ಇವುಗಳ ಸಹಾಯದಿಂದ ಈ ಪದಗಳನ್ನು ಹೆಚ್ಚಿಗೆ ಶುದ್ಧಪಡಿಸಲು ನಮಗೆ ಬಹಳ ಸಹಾಯವಾಗುವದು. ಒಂದುವೇಳೆ ಶುದ್ಧವಾದಾಗ್ಗೆಯೇ ಈ ಪದ್ಯಗಳನ್ನು ಅಚ್ಚುಹಾಕುವದನ್ನು ನಾವು ಕೈಕೊಂಡಿದ್ದಾದರೆ ಈ ಕಾರ್ಯವು ಅನಿಶ್ಚಯಾತ್ಮಕವಾಗಿ ಬಹುದಿವಸ ಉಳಿಯಬಹುದೆಂದು ಎಣಿಸಿ ನಾವು ಈ ಕಾರ್ಯದಲ್ಲಿ ತೊಡಗಿದ್ದಕ್ಕೆ ವಾಚಕರು ನಮ್ಮನ್ನು ಕ್ಷಮಿಸಬೇಕು. ಮೈಲಾರ ಬಸಪ್ಪನವರ ಇನ್ನೂ ಅಸಂಖ್ಯ ಪದ್ಯಗಳಿರುತ್ತವೆ. ಅವುಗಳು ಯಾರಲ್ಲಾದ್ದರೂ ಇದ್ದರೆ ಅವುಗಳನ್ನು ನಮ್ಮ ಕಡೆಗೆ ಕಳಿಸಿಕೊಟ್ಟಲ್ಲಿ ಈ ಪುಸ್ತಕದ ಪುನರಾವೃತ್ತಿಯ ಕಾಲಕ್ಕೆ ಇದರೊಡನೆ ಅವುಗಳನ್ನು ಸೇರಿಸುವೆವು.

**ವಿಜಾಪುರ.** **ಫ. ಗು. ಹಳಕಟ್ಟಿ.**

ತಾ॥ ೨೦-೧೨-೨೯ ಸಂಪಾದಕ.

# ವೈಲಾರ ಬಸಪ್ಪನವರ ಚರಿತ್ರೆ.

ಬಳ್ಳಾರಿ ಜಿಲ್ಹಾ ಹರಪನಹಳ್ಳಿ ತಾಲೂಕು ವೈಲಾರವೆಂಬ ಗ್ರಾಮ ಉಂಟು. ಈ ಗ್ರಾಮದಲ್ಲಿ ಶೆಟ್ರ ಬಸಪ್ಪನೆಂಬ ಹೆಸರಿನಿಂದ ನಮ್ಮ ಚರಿತ್ರ ನಾಯಕರು ವಾಸಿಸುತ್ತಿದ್ದರು. ಇವರಿಗೆ ಶೆಟ್ರ ಎಂಬ ಇವರ ಅಡ್ಡಹೆಸರು ಹೋಗಿ ಆ ಗ್ರಾಮದ ಹೆಸರೇ ಇವರ ಅಡ್ಡಹೆಸರಾಗಿರುತ್ತದೆ. ಇವರು ವ್ಯಾಪಾರದಿಂದ ಜೀವನ ಮಾಡಿಕೊಂಡಿರುತ್ತಿದ್ದರು. ಬರಬರುತ್ತ ಇವರಿಗೆ ಸಂಸಾರದಲ್ಲಿ ಜಿಗುಪ್ಸೆಯುಂಟಾಗಿ ಒಬ್ಬ ಸದ್ಗುರುವಿನ ಆಶ್ರಯವನ್ನು ಹೊಂದಿ ಈ ಮಾಯಾಪ್ರಪಂಚಿನಿಂದ ಬಿಡುಗಡೆಹೊಂದಬೇಕೆಂದು ಬಹಳ ಆತುರತೆಯುಳ್ಳವರಾಗಿ ಅನನ್ಯಭಾವದಿಂದ ದೇವರನ್ನು ಸದಾ ಬೇಡಿಕೊಳ್ಳುತ್ತಿದ್ದರು. ಹೀಗಿರುತ್ತಿರಲಾಗಿ ವೈಲಾರಕ್ಕೆ ನಾಲ್ಕು ಮೈಲು ದೂರದಲ್ಲಿ ತುಂಗಭದ್ರಾ ನದಿಯ ದಂಡೆಯ ಮೇಲೆ ಲಿಂಗನಾಯಕನಹಳ್ಳಿ ಎಂಬ ಗ್ರಾಮದ ಹತ್ತರಿರುವ ಘೋರಾರಣ್ಯದಲ್ಲಿ ಗಿಡದ ಗುಂಪಿನಲ್ಲಿ ಯಾರಿಗೂ ಕಾಣದಂತೆ ಪರಮ ಶಿವಯೋಗಿಗಳಾದ ನಿರಂಜನ ವೈರಾಗ್ಯ ಮೂರ್ತಿಗಳಾದ ಚನ್ನವೀರ ಸ್ವಾಮಿಗಳೆಂಬ ಯತಿವರ್ಯರು ಶಿವಾರ್ಚನೆಯನ್ನು ಮಾಡುತ್ತ ಲಿಂಗಾನಂದದಲ್ಲಿರುತ್ತಿದ್ದರು. ಹೀಗೆಯೇ ಅವರು ಗಿಡದ ಗುಂಪಿನಲ್ಲಿ ಯಾರಿಗೂ ಕಾಣಿಸದಂತೆ ಎಷ್ಟೋ ದಿವಸಗಳವರೆಗೆ ವಾಸವಾಗಿರುತ್ತಿದ್ದರು.

ಹೀಗಿರುತ್ತಿರಲು ಪುರಾಣದಪ್ಪನವರೆಂಬ ಒಬ್ಬ ಅಯ್ಯನವರ ಆಕಳು ಆ ಅರಣ್ಯದಲ್ಲಿ ಗಿಡದ ಗುಂಪಿನಲ್ಲಿ ನುಗ್ಗಿಕೊಂಡು ಸ್ವಾಮಿಗಳ ಶಿವಾರ್ಚನೆಗೆ ಹಾಲು ಕರೆದು ಮನೆಗೆ ಬರುತ್ತಿತ್ತು. ಮನೆಯಲ್ಲಿ ಆಕಳು ಹಿಂಡದಾಗಲು ದನಕಾಯುವ ಹುಡುಗನನ್ನು ಸಿಟ್ಟುಮಾಡಿ ಕೇಳಲು ಅವನು ಈ ಸಂಗತಿಯು ತನಗೆ ಏನೂ ಗೊತ್ತಿಲ್ಲವೆಂದೂ ಇನ್ನು ಮೇಲೆ ಅದನ್ನು ಪರೀಕ್ಷಿಸುವನೆಂದೂ ಹೇಳಿ ಆ ಆಕಳ ಸಂಚಾರವನ್ನು ದಿನಾಲು ಪರೀಕ್ಷೆ ಮಾಡಹತ್ತಿದನು. ಆಗ ಆ ಹುಡುಗನು ಅರಣ್ಯದ ಗಿಡಗಳ ಗುಂಪಿನಲ್ಲಿ ಆ ಆಕಳು ನುಗ್ಗಿ ಬರುವದನ್ನು ಕಂಡು ಪುರಾಣದಪ್ಪಯ್ಯನಿಗೆ ಇದನ್ನು ತಿಳಿಸಲು ಅತನು ಮರುದಿವಸ ಆಕಳ ಬೆನ್ನ ಹಿಂದೆಯೇ ಹೋಗಿ ಅದು ಗಿಡಗಳ ಗುಂಪಿನಲ್ಲಿ ನುಗ್ಗಲಾಗಿ

ತಾನೂ ಇದರಲ್ಲಿ ಏನಿದೆ ಎಂದು ಆತುರದಿಂದ ಪರೀಕ್ಷಿಸಿ ನೋಡಲು ಅವನು ಪರಮ ಶಿವಯೋಗಿಯಾದ ತಪಸ್ವಿಯನ್ನು ಕಂಡು ಆನಂದವುಳ್ಳವನಾಗಿ ಅವರಿಗೆ ಸಾಷ್ಟಾಂಗಮಾಡಿ ಏಳದಿರಲು ಸ್ವಾಮಿಗಳು ತಾವು ಇಲ್ಲಿರುವ ಸುದ್ದಿಯನ್ನು ಯಾರಿಗೂ ತಿಳಿಸಬೇಡೆಂದು ಹೇಳಲಾಗಿ ಹಾಗೆ ಅಪ್ಪಣೆ ಕೊಡಿಸಬಾರದೆಂದು ಪುರಾಣದಪ್ಪನು ಬಹಳವಾಗಿ ಬೇಡಿಕೊಳ್ಳಲು ಅವರು ಯಾಕಾಗವಲ್ಲದೆಂದು ಅಪ್ಪಣೆಯನ್ನಿತ್ತು ಅಲ್ಲಿಯೇ ಲಿಂಗಾನಂದದಲ್ಲಿರುತ್ತಿದ್ದರು.

ಈ ವರ್ತಮಾನವನ್ನು ವೈಲಾರ ಬಸಪ್ಪನವರು ಕೇಳಿ ಆ ಮಹಿಮರ ದರ್ಶನಕ್ಕೆ ಆಗಿಂದಾಗ್ಗೆ ಬರಹತ್ತಿದರು. ಕೆಲವು ಕಾಲದ ಮೇಲೆ ಸ್ವಾಮಿಗಳ ಕಾರುಣ್ಯವು ಬಸಪ್ಪನವರ ಮೇಲೆ ಆಯಿತು. ಆನಂತರ ಬಸಪ್ಪನವರು ಬಸವಣ್ಣನವರ ಕಾಲದ ಶಿವಶರಣರಂತೆ ಕಾಯಕ ವೃತ್ತಿಯಿಂದ ವ್ಯಾಪಾರ ಮಾಡುತ್ತ ದಾಸೋಹಿಯಾಗಿ ಶಿವಾನುಭವದಲ್ಲಿಯೇ ಕಾಲ ಕಳೆಯಲಿಕ್ಕೆ ಹತ್ತಿದರು. ಇವರು ಕವಿಗಳಾಗಿದ್ದರು. ಮತ್ತು ತಮ್ಮ ಗುರುಗಳ ಹೆಸರನ್ನೇ ಮುದ್ರಿಕೆಯಾಗಿಟ್ಟುಕೊಂಡು ಅವರು ಅನೇಕ ಪದ್ಯಗಳನ್ನು ರಚಿಸಿರುವರು.

ಈ ಸ್ವಾಮಿಗಳು ಬಹಳ ಮಹಿಮಾ ಪುರುಷರಾಗಿದ್ದರು. ಅವರು ಒಂದಾನೊಂದು ದಿನ ತಮ್ಮ ಮರಿಯನ್ನು ಕರೆದುಕೊಂಡು ಆ ಘೋರಾರಣ್ಯದಲ್ಲಿ ಹೋಗುತ್ತಿದ್ದಾಗ್ಗೆ ಒಂದು ಹುಲಿಯು ಆರ್ಭಟಿಸುತ್ತ ಇವರ ಮರಿಯ ಮೇಲೆ ಜಿಗಿಯಲು ಆ ಮರಿಯು ಚಿಟ್ಟನೆ ಚೀರಲು ಸ್ವಾಮಿಗಳು ಹಿಂದಿರುಗಿ ನೋಡಿ ಹುಲಿಯನ್ನು ಕಂಡು ಅದಕ್ಕೆ ಬಿಟ್ಟು ಹೋಗೆಂದು ಆಜ್ಞಾಪಿಸಲು ಆ ಹುಲಿಯು ತತ್‌ಕ್ಷಣವೇ ಅವನನ್ನು ಬಿಟ್ಟು ಬಂದು ನಾಯಿಯಂತೆ ಬಾಲ ಅಲ್ಲಾಡಿಸುತ್ತ ಸ್ವಾಮಿಗಳ ಮುಂದೆ ಬಂದು ನಿಂತಿತು. ಮುಂದೆ ಈ ಮರಿಯ ವಿಷಯವಾಗಿ ಸ್ವಾಮಿಗಳಿಗೂ ಬಸಪ್ಪನವರಿಗೂ ವಾದವಿವಾದ ಉಂಟಾಗಿ ಎಷ್ಟು ಹೇಳಿದರೂ ಕೇಳದೆ ಬಸಪ್ಪನವರು ಹಟ ಹಿಡಿಯಲಾಗಿ ಸ್ವಾಮಿಗಳು ನೀನು ಬಸಪ್ಪನಲ್ಲ, ಮುಸಪ್ಪ ಎಂದು ಅನ್ನಲಾಗಿ ತತ್‌ಕ್ಷಣವೇ ಬಸಪ್ಪನವರ ಮುಖವು ಇದ್ದಲಿಯಂತೆ ಕಪ್ಪು ಆಗಿ ಸ್ವಲ್ಪ ಸೊಟ್ಟಾಯಿತು. ಆಗ ಬಸಪ್ಪನವರು ಬಹಳ ವ್ಯಾಕುಲಚಿತ್ತರಾಗಿ ತನ್ನದು ತಪ್ಪಾಯಿತೆಂದು ೩೬೦ ಪದ್ಯಗಳನ್ನು ದಯೆಯನ್ನು ತೋರಿಸೆಂದು ರಚಿಸಿ ಇವುಗಳನ್ನು ಒಂಟಿಗಾಲಿನ ಮೇಲೆ ನಿಂತು ಹಾಡಿ ತಮ್ಮ ಗುರುಗಳನ್ನು ಅನನ್ಯಭಾವದಿಂದ ಬೇಡಿಕೊಳ್ಳಲಾಗಿ ಸ್ವಾಮಿಗಳಿಗೆ ಪುನಃ ಕರುಣ ಹುಟ್ಟಿ

ನೀನು ಮುಸಪ್ಪನಲ್ಲ, ಬಸಪ್ಪ ಎಂದು ಅನ್ನಲಾಗಿ ಯಥಾವತ್ತಾಗಿ ಅವನ ಮೋರೆಯಾಯಿತು. ಸ್ವಾಮಿಗಳ ಯೋಗಸಮಾಧಿಯು ತುಂಗಭದ್ರಾನದೀ ತೀರದ ಮೇಲೆ ಹರಪನಹಳ್ಳಿ ತಾಲೂಕ ಲಿಂಗನಾಯಕನ ಹಳ್ಳಿಯಲ್ಲುಂಟು. ಸ್ವಾಮಿಗಳು ಅನೇಕ ಪವಾಡಗಳನ್ನೂ ಮಹಿಮೆಗಳನ್ನೂ ತೋರಿಸಿರುತ್ತಾರೆ. ಬಸಪ್ಪನವರ ಕಾಲವು ಸುಮಾರು ೧೨೦ ವರುಷಗಳ ಹಿಂದೆ ಇರಬಹುದು. ಯಾಕಂದರೆ ಕಲ್ಲುಮುಳುಗುಂದ ಮಹಾಂತಸ್ವಾಮಿಗಳಿಗೆ ಬಸಪ್ಪನವರು ವಿದ್ಯಾಗುರುಗಳಾಗಿ ಅಧ್ಯಾತ್ಮ ವಿದ್ಯೆಯನ್ನು ಬೋಧಿಸುತ್ತಿದ್ದರೆಂದು ಜನರು ಅನ್ನುತ್ತಾರೆ.

ಪದ್ಯಸಂಗ್ರಹಕ

**ಗುರುನಂಜಪ್ಪ ನೀಲಪ್ಪ ಕಟ್ಟೀಮನೆ,**

ಸ್ಕೂಲ ಮಾಸ್ತರ ರಾಣೆಬಿನ್ನೂರ.



ತಾನೂ ಇದರಲ್ಲಿ ಏನಿದೆ ಎಂದು ಆತುರದಿಂದ ಪರೀಕ್ಷಿಸಿ ನೋಡಲು ಅವನು ಪರಮ ಶಿವಯೋಗಿಯಾದ ತಪಸ್ವಿಯನ್ನು ಕಂಡು ಆನಂದವುಳ್ಳವನಾಗಿ ಅವರಿಗೆ ಸಾಷ್ಟಾಂಗಮಾಡಿ ಏಳದಿರಲು ಸ್ವಾಮಿಗಳು ತಾವು ಇಲ್ಲಿರುವ ಸುದ್ದಿಯನ್ನು ಯಾರಿಗೂ ತಿಳಿಸಬೇಡೆಂದು ಹೇಳಲಾಗಿ ಹಾಗೆ ಅಪ್ಪಣೆ ಕೊಡಿಸಬಾರದೆಂದು ಪುರಾಣದಪ್ಪನು ಬಹಳವಾಗಿ ಬೇಡಿಕೊಳ್ಳಲು ಅವರು ಯುಕ್ತವಾಗವಲ್ಲದೆಂದು ಅಪ್ಪಣೆಯನ್ನಿತ್ತು ಅಲ್ಲಿಯೇ ಲಿಂಗಾನಂದದಲ್ಲಿರುತ್ತಿದ್ದರು.

ಈ ವರ್ತಮಾನವನ್ನು ವೈಲಾರ ಬಸಪ್ಪನವರು ಕೇಳಿ ಆ ಮಹಿಮರ ದರ್ಶನಕ್ಕೆ ಆಗಿಂದಾಗ್ಗೆ ಬರಹತ್ತಿದರು. ಕೆಲವು ಕಾಲದ ಮೇಲೆ ಸ್ವಾಮಿಗಳ ಕಾರುಣ್ಯವು ಬಸಪ್ಪನವರ ಮೇಲೆ ಆಯಿತು. ಅನಂತರ ಬಸಪ್ಪನವರು ಬಸವಣ್ಣನವರ ಕಾಲದ ಶಿವಶರಣರಂತೆ ಕಾಯಕ ವೃತ್ತಿಯಿಂದ ವ್ಯಾಪಾರ ಮಾಡುತ್ತ ದಾಸೋಹಿಯಾಗಿ ಶಿವಾನುಭವದಲ್ಲಿಯೇ ಕಾಲ ಕಳೆಯಲಿಕ್ಕೆ ಹತ್ತಿದರು. ಇವರು ಕವಿಗಳಾಗಿದ್ದರು. ಮತ್ತು ತಮ್ಮ ಗುರುಗಳ ಹೆಸರನ್ನೇ ಮುದ್ರಿಕೆಯಾಗಿಟ್ಟುಕೊಂಡು ಅವರು ಅನೇಕ ಪದ್ಯಗಳನ್ನು ರಚಿಸಿರುವರು.

ಈ ಸ್ವಾಮಿಗಳು ಬಹಳ ಮಹಿಮಾ ಪುರುಷರಾಗಿದ್ದರು. ಅವರು ಒಂದಾನೊಂದು ದಿನ ತಮ್ಮ ಮರಿಯನ್ನು ಕರೆದುಕೊಂಡು ಆ ಘೋರಾರಣ್ಯದಲ್ಲಿ ಹೋಗುತ್ತಿದ್ದಾಗ್ಯೆ ಒಂದು ಹುಲಿಯು ಆರ್ಭಟಿಸುತ್ತ ಇವರ ಮರಿಯ ಮೇಲೆ ಜಿಗಿಯಲು ಆ ಮರಿಯು ಚಿಟ್ಟನೆ ಚೀರಲು ಸ್ವಾಮಿಗಳು ಹಿಂದಿರುಗಿ ನೋಡಿ ಹುಲಿಯನ್ನು ಕಂಡು ಅದಕ್ಕೆ ಬಿಟ್ಟು ಹೋಗೆಂದು ಆಜ್ಞಾಪಿಸಲು ಆ ಹುಲಿಯು ತತ್‌ಕ್ಷಣವೇ ಅವನನ್ನು ಬಿಟ್ಟು ಬಂದು ನಾಯಿಯಂತೆ ಬಾಲ ಅಲ್ಲಾಡಿಸುತ್ತ ಸ್ವಾಮಿಗಳ ಮುಂದೆ ಬಂದು ನಿಂತಿತು. ಮುಂದೆ ಈ ಮರಿಯ ವಿಷಯವಾಗಿ ಸ್ವಾಮಿಗಳಿಗೂ ಬಸಪ್ಪನವರಿಗೂ ವಾದವಿವಾದ ಉಂಟಾಗಿ ಎಷ್ಟು ಹೇಳಿದರೂ ಕೇಳದೆ ಬಸಪ್ಪನವರು ಹಟ ಹಿಡಿಯಲಾಗಿ ಸ್ವಾಮಿಗಳು ನೀನು ಬಸಪ್ಪನಲ್ಲ, ಮುಸಪ್ಪ ಎಂದು ಅನ್ನಲಾಗಿ ತತ್‌ಕ್ಷಣವೇ ಬಸಪ್ಪನವರ ಮುಖವು ಇದ್ದಲಿಯಂತೆ ಕಪ್ಪು ಆಗಿ ಸ್ವಲ್ಪ ಸೊಟ್ಟಾಯಿತು. ಆಗ ಬಸಪ್ಪನವರು ಬಹಳ ವ್ಯಾಕುಲಚಿತ್ತರಾಗಿ ತನ್ನದು ತಪ್ಪಾಯಿತೆಂದು ೩೬೦ ಪದ್ಯಗಳನ್ನು ದಯೆಯನ್ನು ತೋರಿಸೆಂದು ರಚಿಸಿ ಇವುಗಳನ್ನು ಒಂಟಿಗಾಲಿನ ಮೇಲೆ ನಿಂತು ಹಾಡಿ ತಮ್ಮ ಗುರುಗಳನ್ನು ಅನನ್ಯಭಾವದಿಂದ ಬೇಡಿಕೊಳ್ಳಲಾಗಿ ಸ್ವಾಮಿಗಳಿಗೆ ಪುನಃ ಕರುಣ ಹುಟ್ಟಿ

ನೀನು ಮುಸಪ್ಪನಲ್ಲ, ಬಸಪ್ಪ ಎಂದು ಅನ್ನಲಾಗಿ ಯಥಾವತ್ತಾಗಿ ಅವನ ಮೋರೆಯಾಯಿತು. ಸ್ವಾಮಿಗಳ ಯೋಗಸಮಾಧಿಯು ತುಂಗಭದ್ರಾನದೀ ತೀರದ ಮೇಲೆ ಹರಪನಹಳ್ಳಿ ತಾಲೂಕ ಲಿಂಗನಾಯಕನ ಹಳ್ಳಿಯಲ್ಲುಂಟು. ಸ್ವಾಮಿಗಳು ಅನೇಕ ಪವಾಢಗಳನ್ನೂ ಮಹಿಮೆಗಳನ್ನೂ ತೋರಿಸಿರುತ್ತಾರೆ. ಬಸಪ್ಪನವರ ಕಾಲವು ಸುಮಾರು ೧೨೦ ವರುಷಗಳ ಹಿಂದೆ ಇರಬಹುದು. ಯಾಕಂದರೆ ಕಲ್ಲುಮುಳುಗುಂದ ಮಹಾಂತಸ್ವಾಮಿಗಳಿಗೆ ಬಸಪ್ಪನವರು ವಿದ್ಯಾಗುರುಗಳಾಗಿ ಅಧ್ಯಾತ್ಮ ವಿದ್ಯೆಯನ್ನು ಬೋಧಿಸುತ್ತಿದ್ದರೆಂದು ಜನರು ಅನ್ನುತ್ತಾರೆ.

ಪದ್ಯಸಂಗ್ರಹಕ

**ಗುರುನಂಜಪ್ಪ ನೀಲಪ್ಪ ಕಟ್ಟೀಮನೆ,**

ಸ್ಕೂಲ ಮಾಸ್ತರ ರಾಣೆಬೆನ್ನೂರ.



(೬೦) ತಾನೆ ಬೆಳಗುತಿದೆ। ಸ್ವಯಂಜ್ಯೋತಿ ತಾನೆ ಬೆಳಗುತಿದೆ॥ ಮಾನಸಕಾಯಕವಾಚಕದೊಳು। ತನ್ನತಾನೆಬೆಳಗುತಿದೆ ॥ಪಲ್ಲ॥

ತನ್ನ ವಾಮಕರಪೀಠಪಾತ್ರೆಯೊಳು ನಿರ। ಭಿನ್ನಭಕ್ತಿಯುರಸತೈಲದಿ। ಸನ್ನುತ ನಡೆನುಡಿ ಬತ್ತಿಇಡಿದು ಸುಪ್ರ। ಸನ್ನ ಪ್ರಕಾಶಿಸಲ್ಕ್ರಿಯಾಜ್ಯೋತಿಯು ತನ್ನ ತಾನೆ ಬೆಳಗುತಿದೆ ॥೧॥

ಪರತರ ಹೃದಯ ಪ್ರಣತಿಯೊಳು ಷಣ್ಮಂತ್ರ। ದರುವೆಂಬ ಸೂರಸತೈಲವ ಹೀರುತ॥ ವರದೃಢಚಿತ್ತಬತ್ತಿಯ ಕೊನೆಯೊಳು ಲಿಂಗ। ಕಿರಣದೊಬ್ಬುಳಿಯ ಸುಜ್ಞಾನ ಜ್ಯೋತಿಯು ತನ್ನತಾನೆಬೆಳಗುತಿದೆ ॥೨॥

ಚಾರು ಸದ್ಭಾವ ಪ್ರಣತಿಯೊಳು ತತ್ವವಿ। ಚಾರ ಸಂಸಾರ ಘೃತವ ನೀಂಟುತ॥ ವೀರದಾಚರಣೆ ಬತ್ತಿಯ ಕೊನೆಯೊಳು ಚನ್ನ। ವೀರಮದ್ಗುರು ಮಹಾಜ್ಞಾನಜ್ಯೋತಿಯು ತನ್ನ ತಾನೆ ಬೆಗಳುತಿದೆ ॥೩॥

---

(೬೨) ಜಯ ಮಂಗಲಂ ಸದಾ ಶುಭಮಂಗಲಂ। ಜಯ ಜಯತು ಜಂಗಮದಂಘ್ರಿಗೆ ॥ಪಲ್ಲ॥

ನಿರುತನಿರಾಲಂಬ ನಿರ್ಗುಣ ನಿಜಾನಂದ ನಿರಘ ನಿರುಪಾಧಿಕ ನಿತ್ಯತೃಪ್ತ। ನಿರವಯ ನಿರಾವರಣ ಪರತರ ಪರಬ್ರಹ್ಮದಿರವೆ ನಿಜವೆನಿಪ ಜಂಗಮದಂಘ್ರಿಗೆ ॥೧॥

ಚಿರನಿರಂಜನ ಶೂನ್ಯ ಪರನಿಷ್ಕಳಂಕ ಮಹ ಪರಮಪ್ರಸಾದ ಚರಶಿವ ಗುರುಪ್ರಿಯ। ನಿರುತಸದ್ಭಾವ ಪ್ರಾಣೇಷ್ಟಲಿಂಗಾಂಗಳಂತರ ಸುಚೈತನ್ಯಜಂಗಮದಂಘ್ರಿಗೆ ॥೨॥

ಅಂಗಲಿಂಗಾಂಗನವು ಹಂಗೆ ಹಸ್ತವು ಶಕ್ತಿ ಮಾಂಗಲ್ಯ ಭಕ್ತಿಯು ಪದಾರ್ಥಶೇಷ। ಸಾಂಗವಾಗಿಯೆ ಸಕೀಲಂಗಳ ತಿಳಿದು ಮಹಲಿಂಗಾಂಗದೈಕ್ಯ ಜಂಗಮದಂಘ್ರಿಗೆ ॥೩॥

ಪರಮ ಪಾವನ ಚರಿತ ಪರಿಪೂರ್ಣ ಕಳೆಭರಿತ ಗುರುಲಿಂಗವೆರಡಕೆ ಕರಣವ ನಿರುತ। ಪರತತ್ವವನ್ನರಿತ ಚಾರು ರೂಪಿನಿಂ ಬರುತ ಪರಿಮಳಿಸುತಿರ್ಪ ಜಂಗಮದಂಘ್ರಿಗೆ ॥೪॥

ಮುನ್ನನಾದಿಯ ಶರಣ ತನ್ನಯ ಸ್ವರೂಪವನು ಭಿನ್ನವಿಲ್ಲದೆ ವಾಯು ಕರದಿ ಪಿಡಿದು । ಇನ್ನೊಂದು ಕಾಮಿಸದೆ ನನ್ನಿಯಿಂ ಪೂಜಿಸುವ ಚನ್ನ ಸತ್ಕ್ರಿಯ ಜಂಗಮದಂಘ್ರಿಗೆ ॥೫॥

ಬೋಳುದಲೆತಿಳಿಗಾವಿತೋಳಿಗಾಧಾರ ಜಪವಮಾಲೆಪಿಡಿದಡಿಗೆ ಪಾವು ಗೆಯ ಧರಿಸಿ । ಕಾಳುಮಾಯಾಕೋಲಾಹಲನಲ್ಲಮ ನಿರವ ತಾಳಿ ಚರಿ ಸುವ ಸುಜಂಗಮದಂಘ್ರಿಗೆ ॥೬॥

ಕರಪೀಠದೊಳು ಲಿಂಗ ವರ ಲಲಾಟದಿ ಭಸಿತ ಕೊರಳಲಿ ರುದ್ರಾ ಕ್ಷಿಗಳನು ಧರಿಸಿ । ಪರಮಪಂಚಾಕ್ಷರಿಯನನವರತ ಜಪಿಸುತಿಹ ಗುರು । ಚನ್ನವೀರ ಜಂಗಮದಂಘ್ರಿಗೆ ॥೭॥

**ಸಂಪೂರ್ಣ.**



# ಶಿವಾನುಭವ.

(ಮಾಸಪತ್ರಿಕೆ.)

ಸಂಪುಟ ೪.] [ಸಂಚಿಕೆ ೧೧



ವಿಜಾಪುರ.

ಫೆಬ್ರುವರಿ ೧೯೩೦] [ಮಾಘ ೧೮೫೧

ವಾ. ಚ. ೪ ರೂ. ೪ ಆ.

# ವಿಷಯಾನುಕ್ರಮಣಿಕೆ.



---

## ಶಿವಾನುಭವ.

ಇದು ವೀರಶೈವ ಧಾರ್ಮಿಕ ಉನ್ನತಿಯ ಬಗ್ಗೆ ಪ್ರಯತ್ನಿಸುವ ಮೇಲ್ತರದ ಮಾಸಪತ್ರಿಕೆಯು. ಇದು ೬೪ ಪುಟಗಳುಳ್ಳದ್ದಿದ್ದು ಚಂದಾ ಮಾತ್ರ ೪ರೂ. ೪೮ ಇದು ಪ್ರತಿತಿಂಗಳ ಮಧ್ಯಕ್ಕೆ ಹೊರಡುತ್ತದೆ. ಲೇಖಕರು ಚಿಕ್ಕ ಚಿಕ್ಕ ಲೇಖಗಳನ್ನು ಕಳಿಸಬೇಕು. ವೀರಶೈವರ ಉನ್ನತಿಯ ಪರವಾಗಿ ಯಾರು ಬೇಕಾದವರು ಬರೆದರೂ ಅವಕಾಶ ಸಿಗುವದು. ಕೆಲವರು ಇದರ ಹಿಂದಿನ ಸಂಚಿಕೆಗಳನ್ನು ಬೇಡುತ್ತಾರೆ. ಆದರೆ ೧-೨ ಸಂಚಿಕೆಗಳು ಸಿಗುವದೇ ಇಲ್ಲ. ೩ ರಿಂದ ೧೨ ವರೆಗೆ ಮಾತ್ರ ಸಿಗುತ್ತವೆ. ಬೇಕಾದವರು ಶೀವ್ರ ತರಿಸಿಕೊಳ್ಳಬಹುದು. ತಡವಾದರೆ ಪ್ರತಿಗಳು ಸಿಗ[illegible]ಕೆಂದರೆ ಪ್ರತಿಗಳು ಸ್ವಲ್ಪೇ ಉಳಿದಿವೆ. ಪ್ರತಿಯೊಂದು



ಶ್ರೀ. ಹಾನಗಲ್ಲ ಕುಮಾರಸ್ವಾಮಿಗಳು.

ಜನ್ಮ:— ೧೮೬೭ ಲಿಂಗೈಕ್ಯ:— ೧೯೩೦

# ಶಿವಾನುಭವ.

ವರ್ಷ ೪ ]  ಫೆಬ್ರುವರಿ ೧೯೨೯ ೧೯೩೦ [ ಸಂಚಿಕೆ ೧೧

## ಅಭಿನವ ಕಾಳಿದಾಸ
## ಬಸವಪ್ಪ ಶಾಸ್ತ್ರಿಗಳ ಜೀವನ ಚರಿತ್ರೆ.

(ಲೇಖಕರು— ಬಿ ಶಿವಮೂರ್ತಿಶಾಸ್ತ್ರಿ ಕೀರ್ತನಕೇಸರಿ, ಕವಿರತ್ನ
ಹುಲಿಕುಂಟೆಮಠ ತುಮಕೂರು.)



ಕಂದ॥ ಉಭಯ.ಕವಿತಾ ರಮಾ ವ ।
ಲ್ಲಭನಭಿನವಕಾಳಿದಾಸ ಬಿರುದಾಂಕನು ಮಾ ॥
ವಿಭುಪೂಜನ ಲೋಲಂ ವಾ ॥
ಗ್ವಿಭವಮನೆನಗೊಲಿದು ಕುಡುಗೆ ಬಸವಕವೀಂದ್ರಂ ॥೧॥

"ಕರ್ಣಾಟಕ ರಘುವಂಶ"

'ಶಿವಾನುಭವ' ವಾಚಕರಿಗೆ "ಮೈಸೂರು ಭಾಗದಲ್ಲಿ ಆಗಿಹೋದ ಮಹಾಪುರುಷರ ಚರಿತ್ರೆಗಳನ್ನು ಸಂಗ್ರಹಿಸಿ ಅನುಕ್ರಮವಾಗಿ ಬರೆಯುವೆವೆಂದು ನಾವು ಈ ಮೊದಲೇ ಮಾತು ಕೊಟ್ಟಿರುವೆವು ಹೀಗೆ ನಾವು ಉತ್ಸಾಹದಿಂದ ಕೊಟ್ಟ ಮಾತನ್ನು ಕಾರ್ಯಮುಖದಿಂದ ನಡೆಸುವುದು ನಮಗೆ ಕಷ್ಟಸಾಧ್ಯವಾಗಿದೆ.

ಈ ಭಾಗದಲ್ಲಿ (ಮೈಸೂರು ಪ್ರಾಂತದಲ್ಲಿ) ಆಗಿಹೋದ ವಿಭೂತಿ ಪುರುಷರ ಚರಿತ್ರೆಯನ್ನು ಬರೆಯುವಾಗ ನಮಗೆ ಮುಖ್ಯವಾಗಿ ಆ ಪುರುಷರ ಬಂಧುಗಳಿಂದಲೂ ಇಷ್ಟಮಿತ್ರರಿಂದಲೂ ಅವರ ಮಕ್ಕಳುಗಳಿಂದಲೂ ಹಲವು ಸಂಗತಿಗಳನ್ನು ಸಂಗ್ರಹಿಸುವ ಅವಶ್ಯಕತೆ ಇದೆ. ಹಾಗೆ ವಿಷಯಸಂಗ್ರಹಕ್ಕಾಗಿ ನಾವು ಆ ಮಹಾಪುರುಷರಿಗೆ ಸಂಬಂಧಪಟ್ಟವರಿಗೆ ಪತ್ರಗಳನ್ನು ಬರೆದರೆ ನಮಗೆ ಉತ್ತರವೇ ಸಿಗದಂತಾಗಿದೆ.

ಈ ವರೆಗೆ ನಾವು ಹಲವರಲ್ಲಿ ಪತ್ರವ್ಯವಹಾರಮಾಡಿ ಬೇಸತ್ತಿರುವೆವು. ನಮಗಿರುವ ಸಾಂಸಾರಿಕ ತೊಂದರೆಗಳನ್ನೆಲ್ಲಾ ಬದಿಗಿಟ್ಟು ಸಾಹಿತ್ಯಸೇವಾರೂಪವಾದ ಈ ಕಾರ್ಯಕ್ಕೆ ನಮ್ಮ ಆಯುಷ್ಯದಲ್ಲಿ ಕೆಲವು ಕಾಲವನ್ನು ಉಪಯೋಗಿಸಬೇಕೆಂದು ಸಂಕಲ್ಪಿಸಿದ್ದರೂ ಮೇಲೆ ಕಂಡ ತೊಂದರೆಗಳು ನಮ್ಮ ಉತ್ಸಾಹಭಂಗಕ್ಕೆ ಕಾರಣಗಳಾಗಿವೆ.

ಈ ಹಿಂದೆ ನಾವು ಶಿವಾನುಭವದಲ್ಲಿ ನಮ್ಮ ವಾಚಕ ಮಹಾಶಯರಿಗೆ

೧. ಮುತುಕೂರು ನಂಜುಂಡ ಶಿವಯೋಗಿ.

೨. ಆಸ್ಥಾನ ವಿದ್ವಾನ್ ಎನ್. ಆರ್. ಕರಿಬಸವಶಾಸ್ತ್ರಿ.

೩. ಆಸ್ಥಾನ ಮಹಾವಿದ್ವಾನ್ ಕರ್ಣಾಟಕ ಭಾಷಾರತ್ನ ಪಿ. ಆರ್. ಕರಿಬಸವಶಾಸ್ತ್ರಿ.

ಎಂಬ ಮೂರು ಮಂದಿ ಮಹಾಪುರುಷರ ಪರಿಚಯವನ್ನು ಯಥಾಮತಿ ಮಾಡಿಕೊಟ್ಟಿರುವೆವು.

ಈ ಸಾರಿಯಾದರೆ ಮೇಲೆ ಕಂಡವರಿಗಿಂತಲೂ ಕಡಿಮೆಯಲ್ಲದ ಕೀರ್ತಿಯನ್ನು ಸಂಪಾದಿಸಿದ ಮಹಾಕವಿಯೂ ಮಹಾನುಭಾವನೂ ಆದ ಅಭಿನವಕಾಳಿದಾಸ ಬಸವಪ್ಪ ಶಾಸ್ತ್ರಿಗಳ ಪರಿಚಯವನ್ನು ಮಾಡಿಕೊಡುವ ಸಲುವಾಗಿ ಈ ಬರಹವನ್ನು ಬರೆದಿರುವೆವು.

ಬಾಲ್ಯ:— ಬಸವಪ್ಪಶಾಸ್ತ್ರಿಗಳ ಬಾಲ್ಯವಿಷಯವಾಗಿ ನಮಗೆ ಬಹಳ ಸಂಗತಿಗಳು ತಿಳಿಯವು. ಇವರು ವೀರಶೈವ ಮಹೇಶ್ವರ ವರ್ಗಕ್ಕೆ ಸೇರಿದವರು. ಇಲ್ಲಿಗೆ ೮೭ ವರ್ಷಗಳ ಹಿಂದಿನ ಶುಭಕೃತ್ ಸಂವತ್ಸರದಲ್ಲಿ ಇವರ ಜನನ. ಇವರ ಮಾತಾಪಿತೃಗಳು ಮೈಸೂರಿನಲ್ಲಿಯೇ ವಾಸವಾಗಿದ್ದವರು.

ಶಾಸ್ತ್ರಿಗಳು ಬಾಲ್ಯದಲ್ಲಿ ಸಂಸ್ಕೃತ, ಕನ್ನಡ, ಸಾಹಿತ್ಯಗಳಲ್ಲಿಯೂ ಸಂಗೀತದಲ್ಲಿಯೂ ನೈಪುಣ್ಯವನ್ನು ಸಂಪಾದಿಸಿದರು. ಇವರು ಪುರೋಹಿತ ಮನೆತನದವರಾದ ಕಾರಣ ಕೆಲಮಟ್ಟಿಗೆ ವೇದಾಭ್ಯಾಸವನ್ನೂ ವೈದಿಕ ಪ್ರಕ್ರಿಯೆಗಳನ್ನೂ ಅಭ್ಯಾಸಮಾಡಬೇಕಾಯಿತು.

ಈಗಲೂ ಶಾಸ್ತ್ರಿಗಳ ಕುಮಾರರಾದ ಆಸ್ಥಾನ ವಿದ್ವಾನ್ ಬಿ. ಮಹದೇವ ಶಾಸ್ತ್ರಿಗಳೂ ಇವರ ಜ್ಞಾತಿಗಳಲ್ಲಿ ಕೆಲವರೂ ಪೌರೋಹಿತ್ಯದಿಂ

ದಲೇ ಕಾಲಕ್ಷೇಪ ಮಾಡುತ್ತಿರುವರು. ಈ ಮನೆತನಕ್ಕೆ ಅನೇಕ ಮಂದಿ ಭಕ್ತರೂ ಶಿಷ್ಯರೂ ಇರುವರು. ಕೈಲಾಸವಾಸಿ ಬಸವಪ್ಪ ಶಾಸ್ತ್ರಿಗಳು ವಿಕೃತಿಸಂವತ್ಸರದಲ್ಲಿ ಅಂದರೆ ಇಲ್ಲಿಗೆ ೩೯ ವರ್ಷಗಳ ಹಿಂದೆ ಭೌತಿಕ ಶರೀರವನ್ನು ತ್ಯಜಿಸಿದರೆಂದು ತಿಳಿದುಬಂದಿರುವುದರಿಂದ ಅವರ ಜೀವ ಮಾನವು ೪೮ ವರ್ಷಗಳು ಮಾತ್ರವೆಂದು ತಿಳಿದುಬರುತ್ತದೆ.

ಪೂರ್ವ ವಯಸ್ಸಿನಲ್ಲಿಯೇ ಪರಲೋಕವಾಸಿಗಳಾದರೂ ಅವರು ಅದೆಂತಹ ಅಪೂರ್ವ ಕೀರ್ತಿಯನ್ನು ಸಂಪಾದಿಸಿರುವರೆಂಬುವನ್ನು ನೋಡಿ ದರೆ ನಮಗೆ ಆಶ್ಚರ್ಯವಾಗುತ್ತದೆ.

ಶ್ರೀ ಬಸವಪ್ಪ ಶಾಸ್ತ್ರಿಗಳು ಮೈಸೂರಿನಲ್ಲಿ ಪ್ರಗಲ್ಭಸ್ಥಿತಿಯಲ್ಲಿದ್ದಾಗ ಮೈಸೂರು ಮಹಾರಾಜರಾದ ಶ್ರೀ ಚಾಮರಾಜೇಂದ್ರ ಒಡೆಯರ ಬಹಾದ್ದೂರರವರು ಬಾಲ್ಯಾವಸ್ಥೆಯಲ್ಲಿದ್ದರು. ರಾಜ್ಯಾಧಿಕಾರವನ್ನು ದಿವಾನ್ ರಂಗಾಚಾರ್ಯರು ನೋಡಿಕೊಳ್ಳುತ್ತಿದ್ದರು. ಅಲ್ಲದೆ ಆಗ ಮೈಸೂರಿನಲ್ಲಿ ವೀಣೆ ಸುಬ್ಬಣ್ಣನವರು ಸೋಸಲೆ ಗರಳಪುರಿ ಶಾಸ್ತ್ರಿಗಳು ನಂಜನಗೂಡು ಸುಬ್ಬಾಶಾಸ್ತ್ರಿಗಳು ಮೊದಲಾದ ವಿದ್ವಾಂಸರೂ ಮೈಸೂರು ಯಜಮಾನ್ ವೀರಸಂಗಪ್ಪನವರೂ ಬೆಂಗಳೂರು ರಾ. ಬ. ಎಲೆ ಮಲ್ಲಪ್ಪಶೆಟ್ಟರೂ ಜೀವಿಸಿದ್ದರು. ಇಂತಿಂತಹ ಮಹಾಪುರುಷರು ಜೀವಿಸಿದ್ದ ಕಾಲದಲ್ಲಿಯೇ ನಮ್ಮ ಈ ಮಹಾಕವಿಗಳೂ ಜೀವಿಸಿದ್ದರು.

ಪಾಂಡಿತ್ಯಬಲ:--ತಮಗೆ ಸಮಕಾಲೀನ ಪಂಡಿತರಲ್ಲಿ ಬಸವಪ್ಪ ಶಾಸ್ತ್ರಿಗಳು ಅಸಮ ಪಂಡಿತರಾಗಿದ್ದರು. ಕೈ॥ ಚಾಮರಾಜೇಂದ್ರ ಒಡೆಯರವರು ಬಾಲಕರಾಗಿದ್ದಾಗ ಅವರಿಗೆ ಕನ್ನಡ, ಸಂಸ್ಕೃತ. ಇಂಗ್ಲಿಷ ಮೊದಲಾದ ಭಾಷೆಗಳನ್ನು ಬೋಧಿಸಲು ಆಯಾ ಭಾಷೆಗಳಲ್ಲಿ ನಿಷ್ಣಾತರಾಗಿದ್ದ ಪಂಡಿತೋತ್ತಮರು ಬೇಕಾಗಿದ್ದಿತು. ಆಗ ಮಹಾರಾಜರ ಮೇಲ್ವಿಚಾರಕರಾಗಿದ್ದವರು ಮಹಾರಾಜರಿಗೆ ಪಾಠಬೋಧಕರಾದವರಲ್ಲಿ ಬಸವಪ್ಪ ಶಾಸ್ತ್ರಿಗಳನ್ನೊಬ್ಬರನ್ನು ಗೊತ್ತುಮಾಡಿದರು. ಹೀಗೆ ಶಾಸ್ತ್ರಿಗಳು ತಮ್ಮ ಪಾಂಡಿತ್ಯಬಲದಿಂದ ರಾಜಗುರುಗಳಾಗುವ ಭಾಗ್ಯವನ್ನು ಪಡೆದರು.

ಪುಸ್ತಕ ವಾಚನ ಸಾಮರ್ಥ್ಯ:--ಬಸವಪ್ಪ ಶಾಸ್ತ್ರಿಗಳನ್ನು ಅಭಿಸ್ಸಿದ್ಧಿಗೆ ತಂದು ಅವರ ಕೀರ್ತಿಯನ್ನು ಅಖಂಡ ಕರ್ನಾಟಕಕ್ಕೆ ಹಬ್ಬಿಸಿದ ಶಕ್ತಿಗಳೆಂದರೆ ಅವರಲ್ಲಿದ್ದ

೧ ಗ್ರಂಥವಾಚನಶಕ್ತಿ

೨ ಕವನಶಕ್ತಿ

ಎಂಬೆರಡೆಂದು ಹೇಳಬಹುದು. ಕನ್ನಡಭಾರತ ರಾಜಶೇಖರವಿಳಾಸ ಮುಂತಾದ ಕಾವ್ಯಗಳನ್ನು ಅವರಷ್ಟು ಸರಸವಾಗಿಯೂ ಹೃದಯಂಗಮವಾಗಿಯೂ ಓದತಕ್ಕವರು ಇದು ವರೆಗೂ ಯಾರೂ ಹುಟ್ಟಿಲ್ಲವೆಂದು ಅದನ್ನು ಕಿವಿಯಾರ ಕೇಳಿದವರು ಇಂದಿಗೂ ಹೇಳುತ್ತಿರುವರು.

ಇವರ ಗ್ರಂಥವಾಚನಸಾಮರ್ಥ್ಯವನ್ನು ಸೂಚಿಸುವ ಕಥೆಗಳನ್ನು ಅನೇಕರು ಅನೇಕ ಬಗೆಯಾಗಿ ವರ್ಣಿಸುತ್ತಿರುವರು. ವಾಚಕರ ಅವಗಾಹನೆಗಾಗಿ ಒಂದನ್ನು ಇಲ್ಲಿ ಬರೆದಿರುವೆವು.

"ಒಂದಾನೊಂದು ದಿನ ಶಾಸ್ತ್ರಿಗಳ ಗ್ರಂಥವಾಚನ ಸಾಮರ್ಥ್ಯವನ್ನು ಪರೀಕ್ಷಿಸಬೇಕೆಂದು ಚಾಮರಾಜೇಂದ್ರ ಪ್ರಭುಗಳು ತಾವು ಸಂತೋಷವಾಗಿದ್ದ ಒಂದು ಸಮಯದಲ್ಲಿ ಶಾಸ್ತ್ರಿಗಳನ್ನು ತಮ್ಮ ಅರಮನೆಗೆ ಬರಮಾಡಿಕೊಂಡು ಅರಮನೆಯ ಮಹಡಿಯಲ್ಲಿ ಕನ್ನಡಭಾರತವನ್ನು ಓದುವಂತೆ ಶಾಸ್ತ್ರಿಗಳಿಗೆ ಅಪ್ಪಣೆ ಮಾಡಿ ತಾವು ಕುಳಿತಿರುವ ಸ್ಥಳಕ್ಕೆ ಸಮೀಪವಾಗಿ ಒಂದು ಆಕಳನ್ನು ಕಟ್ಟಿಸಿ ಅದರ ಮುಂದಕ್ಕೆ ಹಸುರು ಹುಲ್ಲನ್ನು ಹಾಕಿಸಿದರಂತೆ. ಶಾಸ್ತ್ರಿಗಳು ಭಾರತವನ್ನು ತಮ್ಮ ಗಂಭೀರವೂ ಕರ್ಣಾನಂದಕರವೂ ಆದ ಸ್ವರದಿಂದ ಓದಲು ಪ್ರಾರಂಭಿಸಿದ ಕೂಡಲೇ ಹುಲ್ಲು ತಿನ್ನುತ್ತಿದ್ದ ಆಕಳು ಹುಲ್ಲು ತಿನ್ನುವದನ್ನು ಬಿಟ್ಟು ಶಾಸ್ತ್ರಿಗಳ ಪುರಾಣ ಶ್ರವಣವನ್ನು ಕೇಳುತ್ತ ನಿಂತುಕೊಂಡಿತಂತೆ. ಇದನ್ನು ನೋಡಿ ಮಹಾರಾಜರು ಪರಮಾನಂದಭರಿತರಾಗಿ ಶಾಸ್ತ್ರಿಗಳನ್ನು ಬಹಳವಾಗಿ ಗೌರವಿಸಿ ಕಳಿಸಿದರಂತೆ.

ಶಾಸ್ತ್ರಿಗಳ ಗ್ರಂಥಪಠನ ಪಾಂಡಿತ್ಯಕ್ಕೆ ಈ ತೆರದ ಹಲವು ಕಥೆಗಳನ್ನು ಮೈಸೂರು ಪ್ರಾಂತದಲ್ಲಿ ಜನರು ಈಗಲೂ ಹೇಳುತ್ತಿರುವರು.

ಕವಿತ್ವ ನೈಪುಣ್ಯ:— ಈ ಮಹಾಪುರುಷನಲ್ಲಿದ್ದ ಮತ್ತೊಂದು ಅಮೋಘವಾದ ಗುಣವೆಂದರೆ ಕವನಶಕ್ತಿ ಈತನು ಸುಕವಿಯೂ ಮಹಾಕವಿಯೂ ಆಶುಕವಿಯೂ ಆಗಿದ್ದನು. ಇದಕ್ಕೆ ಈ ಮಹಾಕವಿಯ ಗ್ರಂಥಗಳೇ ಇಂದಿಗೂ ಸಾಕ್ಷಿಯಾಗಿವೆ.

ಕರ್ಣಾಟಕಸಾಹಿತ್ಯದಲ್ಲಿ ನಿಷ್ಣಾತರಾದವರು ಈತನನ್ನು ಪಂಪ, ರನ್ನ, ಹರಿಹರ, ಷಡಕ್ಷರಿ, ಲಕ್ಷ್ಮೀಶ ಮೊದಲಾದ ಮಹಾಕವಿಗಳ ಪಂಕ್ತಿಗೆ ಸೇರಲರ್ಹನಾದವನೆಂದು ಅಭಿಪ್ರಾಯ ಪಡುವರು.

ದೇಶವಿಖ್ಯಾತರಾದ ಪ್ರಾಕ್ತನವಿಮರ್ಶನ ವಿಚಕ್ಷಣ ರಾವಬಹದ್ದೂರ್ ಆರ್. ನರಸಿಂಹಾಚಾರ್ಯ ಎಂ. ಎ. ಅವರು ಬರೆದಿರುವ ಕನ್ನಡ ಕವಿಚರಿತ್ರೆಯ ಮೂರನೆಯ ಭಾಗದಲ್ಲಿ ಆಧುನಿಕ ಕವಿಗಳ ವಿಷಯವನ್ನು ಹೇಳುವಾಗ ಈ ಕವಿಯ ಹೆಸರನ್ನು ಮೊಟ್ಟಮೊದಲು ಎತ್ತಿ ಈತನು ವೀರಶೈವ ಕವಿ. ಮೈಸೂರು ಅರಮನೆಯಲ್ಲಿ ಆಸ್ಥಾನಕವಿಯಾಗಿದ್ದನು. ಪುಸ್ತಕ ವಾಚನದಲ್ಲಿ ಈತನ ಪಾಂಡಿತ್ಯವು ಅದ್ವಿತೀಯವಾಗಿದ್ದಿತು. ಕವಿತೆಯೂ ಮಾನ್ಯವಾದುದು" ಎಂದು ಬರೆದಿರುವರು.

ಶ್ರೀ ನರಸಿಂಹಾಚಾರ್ಯರ ಪ್ರತಿಯೊಂದು ಮಾತೂ ಬಹ್ವರ್ಥ ಗರ್ಭಿತವಾದ ಸೂತ್ರದಂತಿದ್ದು ಅವುಗಳ ಮೇಲೆ ಭಾಷ್ಯವನ್ನು ಬರೆಯಲಿಕ್ಕೂ ಅವಕಾಶಕೊಟ್ಟಿರುವುವು.

ಕವಿಚರಿತ್ರೆಯಂತಹ ಪ್ರಮಾಣ ಗ್ರಂಥದಲ್ಲಿ ಈ ಮಹಾಕವಿಯ ವಿಷಯವು ಇಷ್ಟು ಸಂಗ್ರಹವಾಗಿರುವುದು ನಮಗೆ ಸಾಕೆನಿಸುವುದಿಲ್ಲವಾದರೂ ಪೂಜ್ಯರಾದ ನರಸಿಂಹಾಚಾರ್ಯರೂ ಕೂಡ ಈ ಕವಿಯ ವಿಷಯವಾಗಿ ತಮ್ಮ ಮೆಚ್ಚುಗೆಯನ್ನು ಪ್ರದರ್ಶಿಸಿರುವರೆಂದು ಅವರ ಬರವಣಿಗೆಯೇ ನಮಗೆ ಸಮಾಧಾನ ಹೇಳುತ್ತಿರುವುದು.

ಮೈಸೂರುಕರ್ಣಾಟಕದಲ್ಲಿ ಪ್ರಸಿದ್ಧರಾಗಿ ಹೋದ ಮ॥ ಲೂಯಿ ರೈಸ್ ಸಾಹೇಬರೆಂಬ ಆಂಗ್ಲೇಯ ಕನ್ನಡ ಪಂಡಿತರು "ಕನ್ನಡ ಸಾಹಿತ್ಯದಲ್ಲಿ ಬಸವಪ್ಪ ಶಾಸ್ತ್ರಿಗಳು ಸ್ಮರಣೀಯರಾದ ಮಹಾಕವಿಗಳೆಂದೂ ಇವರ ಶಾಕುಂತಲ ನಾಟಕವು ರಾಜಶೇಖರವಿಳಾಸ, ಜೈಮಿನಿಭಾರತಗಳಂತೆ ಕನ್ನಡದಲ್ಲಿ ಶ್ರೇಷ್ಠತಮ ಗ್ರಂಥವೆಂದೂ" ಕೊಂಡಾಡಿರುವರು.

## ಈ ಮಹಾಕವಿಯ ಗ್ರಂಥಗಳು.

(ಮುದ್ರಣವಾಗಿರತಕ್ಕವುಗಳು.)

೧. ಕರ್ನಾಟಕ ಶಾಕುಂತಲ ನಾಟಕಃ-- ಬಸವಪ್ಪ ಶಾಸ್ತ್ರಿಗಳು ಬರೆದ ಗ್ರಂಥಗಳಲ್ಲಿ ಇದು ಅತ್ಯಂತ ಶ್ರೇಷ್ಠವಾದುದು. ಸಂಸ್ಕೃತ ಸಾಹಿತ್ಯದಲ್ಲಿ ಮಹಾಕವಿಕಾಳಿದಾಸನಿಂದ ಬರೆಯಲ್ಪಟ್ಟ ಈ ಗ್ರಂಥವನ್ನು ಇವರು ಕನ್ನಡಿಸಿದರು. ಇದು ವರೆಗೆ ಎಷ್ಟೋ ಜನರು ಶಾಕುಂತಲವನ್ನು ಕನ್ನಡಿಸಿದ್ದರೂ ಬಸವಪ್ಪ ಶಾಸ್ತ್ರಿಗಳ ಭಾಷಾಂತರವು ಅಸದೃಶವಾದುದೆಂದು ಇದು ವರೆಗಿನ ಎಲ್ಲ ಪಂಡಿತರೂ ಏಕಕಂಠದಿಂದ ಹೇಳುತ್ತಿರುವರಲ್ಲದೆ

ವಿದ್ಯಾಇಲಾಖೆಯವರು ಈ ಗ್ರಂಥವನ್ನು ಪಂಡಿತ ಪರೀಕ್ಷೆಗೂ ಬಿ. ಎ. ಎಂ ಎ. ಪರೀಕ್ಷೆಗಳಿಗೂ ಪಠ್ಯಗ್ರಂಥವನ್ನಾಗಿ ನಿಯಮಿಸುತ್ತಿರುವರು. ಕ್ರಿ. ೧೯೨೨ ರಲ್ಲಿ ಇದು ಮೈಸೂರು ವಿಶ್ವವಿದ್ಯಾಲಯದವರ ಉದಾರಾಶ್ರಯದಿಂದ ನಾಲ್ಕನೆಯ ಸಲ ಮುದ್ರಣವಾಗಿರುವುದು. ಈ ಗ್ರಂಥವನ್ನು ಬರೆದು ಮೈಸೂರಿನಲ್ಲಿ ದಿವಾನ್ ರಂಗಾಚಾರ್ಯರ ಅಧ್ಯಕ್ಷತೆಯಲ್ಲಿ ವಿದ್ವತ್ಸಭೆಯಲ್ಲಿ ಓದಿ ಹೇಳಲು ವಿದ್ಯಾಭಿಮಾನಿಗಳಾದ ದಿವಾನ್‌ರವರು ಇವರಿಗೆ "ಅಭಿನವ ಕಾಳಿದಾಸ" ಎಂಬ ಬಿರುದನ್ನು ಕೊಟ್ಟು ಗೌರವಿಸಿದರು. ಈ ಪರಿಯಲ್ಲಿ ಈ ಮಹಾಕವಿಯ ಶಾಕುಂತಲವು ಕನ್ನಡ ಸಾಹಿತ್ಯಕ್ಕೆ ಶಿರೋಮಣಿ ಪ್ರಾಯವಾಗಿದೆ. ಮಹಾಕವಿ ಕಾಳಿದಾಸನ ಅಭಿಪ್ರಾಯಗಳು ಅಚ್ಚಳಿಯದಂತೆ ಈ ಕನ್ನಡ ಶಾಕುಂತಲದಲ್ಲಿರುವುದನ್ನು ನೋಡಿ ಸಾಹಿತ್ಯ ಪಂಡಿತರು ಈ ಕನ್ನಡ ಕಾಳಿದಾಸನ ಭಾಷಾಂತರ ನೈಪುಣ್ಯವನ್ನು ಬಹು ಬಗೆಯಿಂದ ಶ್ಲಾಘಿಸುತ್ತಿರುವರು. ಶಾಸ್ತ್ರಿಗಳು ಸಂಗೀತದಲ್ಲಿಯೂ ಹೆಸರಾದ ಪಂಡಿತರಾದುದರಿಂದ ರಂಗಭೂಮಿಯಲ್ಲಿ ಅಭಿನಯಿಸಲಿಕ್ಕೆ ಅನುಕೂಲವಾಗುವ ಹಾಗೆ ಹಾಡುಗಳನ್ನು ಸಹ ಬರೆದು ಸೇರಿಸಿರುವರು.

೨. ಉತ್ತರರಾಮಚರಿತ್ರೆ:—ಇದು ಸಂಸ್ಕೃತದಲ್ಲಿ ಮಹಾಕವಿ ಭವಭೂತಿಯು ಬರೆದ ನಾಟಕ. ಸಂಸ್ಕೃತ ಸಾಹಿತ್ಯದಲ್ಲಿ ಭವಭೂತಿಯು ಕಾಳಿದಾಸನಿಗೆ ಸಮಾನಯೋಗ್ಯತೆಯುಳ್ಳವನೆಂದೂ ಉತ್ತರರಾಮಚರಿತ್ರೆಯು ಶಾಕುಂತಲ ನಾಟಕಕ್ಕೆ ಸರಿಸಮನೆಂದೂ ಕೆಲವು ಸಂದರ್ಭದಲ್ಲಿ ಅದಕ್ಕೂ ಮಿಗಿಲೆಂದೂ ಕೆಲವು ಪಂಡಿತರುಗಳು ಅಭಿಪ್ರಾಯಪಡುತ್ತಿರುವರು. ಇದರಿಂದ ಉತ್ತರರಾಮಚರಿತ್ರೆಯು ಸಂಸ್ಕೃತಸಾಹಿತ್ಯದಲ್ಲಿ ಉದ್ದಾಮ ನಾಟಕವೆಂಬುದು ವ್ಯಕ್ತವಾಗುವುದು. ಬಸವಪ್ಪ ಶಾಸ್ತ್ರಿಗಳು ಶಾಕುಂತಲದಂತೆ ಇದನ್ನು ಅಕ್ಷರಶಃ ಭಾಷಾಂತರಿಸದೆ ಮೂಲಗ್ರಂಥದ ಸಾರವನ್ನು ಮಾತ್ರ ಕನ್ನಡಿಸಿರುವರು. ಇದೂ ಸಹ ರಂಗಭೂಮಿಯಲ್ಲಿ ಐದು ಘಂಟೆಗಳ ಕಾಲ ಅಭಿನಯಿಸಲು ಅನುಕೂಲವಾಗುವಂತೆ ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಮಂಡಲಿಗೆ ಬರೆದು ಕೊಟ್ಟದ್ದು.

ಈ ಗ್ರಂಥನಿರ್ಮಾಣಕ್ಕೆ ಶ್ರೀ ಚಾಮರಾಜೇಂದ್ರ ಪ್ರಭುಗಳ ಪ್ರೋತ್ಸಾಹವೇ ಕಾರಣವೆಂದು ಈ ಗ್ರಂಥದ ಪೀಠಿಕೆಯಿಂದ ತಿಳಿದು ಬರುತ್ತದೆ. ಉತ್ತರರಾಮಚರಿತ್ರೆಯ ಪೀಠಿಕೆಯಲ್ಲಿ ಗ್ರಂಥಕರ್ತರ

ಪುತ್ರರೂ, ಗ್ರಂಥಪ್ರಚಾರಕರೂ ಆದ ಆಸ್ಥಾನ ವಿದ್ವಾನ ಬಿ. ಮಹದೇವ ಶಾಸ್ತ್ರಿಗಳು ಈ ಮುಂದೆ ಹೇಳುವಂತೆ ಬರೆದಿರುವರು. "ಶ್ರೀ ಬಸವಪ್ಪ ಶಾಸ್ತ್ರಿಗಳು ಶ್ರೀಮತ್ಕರ್ನಾಟಕ ಭಾಷಾಭಿವೃದ್ಧಿ ಬದ್ಧಾದರರಾದ ಶ್ರೀ ಮಹೀಸೂರ ಸಂಸ್ಥಾನದ ಶ್ರೀಮನ್ಮಹಾರಾಜ ಶ್ರೀ ಚಾಮರಾಜ ಒಡೆಯರ್ ಜಿ. ಸಿ. ಎಸ್. ಐ. ಯವರಿಂದ ಆಜ್ಞಪ್ತರಾಗಿ ನಾಟಕಗಳಲ್ಲಿ ಉತ್ತಮವಾಗಿಯೂ, ನೀತಿಬೋಧಕವಾಗಿಯೂ, ಇರುವ ಭವಭೂತಿ ಮಹಾಕವಿ ಪ್ರಣೀತವಾದ "ಉತ್ತರರಾಮ ಚರಿತ್ರೆ" ಎಂಬ ನಾಟಕವನ್ನು ೫ ಗಂಟೆಗಳ ಕಾಲದಲ್ಲಿ ಆಡಲಿಕ್ಕೆ ಅನುಕೂಲವಾಗುವಂತೆ ಕೆಲವು ವರ್ಣನಾಂಶಗಳನ್ನು ಬಿಟ್ಟು ಸಂದರ್ಭಾನು ಗುಣವಾದ ಹಾಡುಗಳಿಂದ ಪಂಡಿತ ಪಾಮರ ರಂಜಕವಾಗುವಂತೆ ಕರ್ನಾಟಕ ಭಾಷೆಯಲ್ಲಿ ಸಂಕ್ಷೇಪವಾಗಿ ರಚಿಸಿದರು. ಇದು ೧೮೧೧ ರಲ್ಲಿ ಅಚ್ಚಾಗಿದೆ.

ಚಂಡಕೌಶಿಕ ನಾಟಕಃ— ಆರ್ಯಕ್ಷೇಮಾಶ್ವರನೆಂಬ ಮಹಾಕವಿಯು ಬರೆದ ಈ ನಾಟಕವನ್ನು ಶಾಸ್ತ್ರಿಗಳು ಸಂಸ್ಕೃತದಿಂದ ಪರಿವರ್ತಿಸಿ ಕನ್ನಡದಲ್ಲಿ ಬರೆದಿರುವರು. ಈ ಗ್ರಂಥರಚನೆಗೆ ಶಾಸ್ತ್ರಿಗಳ ಪರಮಮಿತ್ರರೂ ಸಾಹಿತ್ಯಭಕ್ತರೂ ಆದ ಪರಲೋಕವಾಸಿ ಸಿ. ಸುಬ್ಬರಾವ್ ಬಿ. ಎ. ಇವರು ಕಾರಣರಾಗಿರುವರು.

ಈ ನಾಟಕವನ್ನು ನಾಲ್ಕು ಅಂಕುಗಳನ್ನು ಬರೆಯುವಷ್ಟರಲ್ಲಿಯೇ ಶಾಸ್ತ್ರಿಗಳು ಕೈಲಾಸವಾಸಿಯಾದರು. ಆದುದರಿಂದ ಈ ಗ್ರಂಥಾಧಿಕಾರವನ್ನು ಶಾಸ್ತ್ರಿಗಳಿಂದ ಮೊದಲೇ ಪಡೆದುಕೊಂಡಿದ್ದ ಶ್ರೀ. ಸಿ. ರಾಮಚಂದ್ರರಾವ ಎಂಬುವರು ಮೇಲುಕೋಟೆ, ದೇವಶಿಖಾಮಣಿ ಅಳಸಿಂಗರಾಚಾರ್ಯರಿಂದ ಐದನೆಯ ಅಂಕವನ್ನು ಬರೆಸಿ ಬಸವಪ್ಪ ಶಾಸ್ತ್ರಿಗಳ ಹೆಸರಿನಿಂದಲೇ ಇದನ್ನು ಪ್ರಕಟಿಸಿರುವರು. ಈ ಗ್ರಂಥದ ಆದಿಯಲ್ಲಿ

ಕಂದ. ಸ್ವೀಕರಿಪುದು ಬಸವಪ್ಪ ಮ।
ಹಾಕವಿ ರಚಿಸಿರ್ದಚಂಡಕೌಶಿಕ ಕೃತಿಯಿಂ॥
ಶ್ರೀಕೃಷ್ಣೇಂದ್ರಭವತ್ಕರು।
ಣೈಕಾಶ್ರಯರಾಮಚಂದ್ರ ರಾಯಾರ್ಪಿತಮಂ ॥೧॥

ಎಂಬ ಪದ್ಯವಿದೆ.

ಮೈಸೂರು ವಿದ್ಯಾ ಇಲಾಖೆಯವರು ದೊಡ್ಡ ದೊಡ್ಡ ಪರೀಕ್ಷೆಗಳಿಗೆ ಈ ನಾಟಕವನ್ನು ಪಠ್ಯಗ್ರಂಥವನ್ನಾಗಿ ನಿಯಮಿಸುತ್ತಿರುವರು. ಇದರಲ್ಲಿ

ಹಾಡುಗಳಿಲ್ಲವಾದ್ದರಿಂದ ಶಾಕುಂತಲ ಉತ್ತರ ರಾಮಚರಿತ್ರೆಗಳಂತೆ ಇದು ಸಂಗೀತ ನಾಟಕವಾಗಿರದೆ ಸಾಹಿತ್ಯದಿಂದ ಮಾತ್ರ ಕೂಡಿರುವದು. ಇದು ಕ್ರಿ. ಶ ೧೮೯೭ ರಲ್ಲಿ ಮೊದಲನೆಯ ಸಾರಿಯೂ ೧೯೧೫ ರಲ್ಲಿ ಎರಡನೆಯ ಸಾರಿಯೂ ಅಚ್ಚಾಗಿದೆ.

೪. ಶೂರಸೇನ ಚರಿತ್ರೆ: — ಇದು ಆಂಗ್ಲ ಮಹಾಕವಿಯಾದ ಷೇಕ್ಸ್ಪಿಯರನಿಂದ ಇಂಗ್ಲಿಷಿನಲ್ಲಿ 'ಒಥೆಲೋ' ಎಂಬ ಹೆಸರಿನಿಂದ ರಚಿತವಾದುದು. ಇದನ್ನು ಶಾಸ್ತ್ರಿಗಳು ಕನ್ನಡದಲ್ಲಿ 'ಶೂರಸೇನ ಚರಿತ್ರೆ' ಎಂಬ ಹೆಸರಿನಿಂದ ಬರೆದಿರುವರು. ಸಂಸ್ಕೃತದಲ್ಲಿ ಕಾಳಿದಾಸ ನಾಟಕಗಳು ಪ್ರಸಿದ್ಧವಾಗಿರುವಂತೆ ಇಂಗ್ಲಿಷಿನಲ್ಲಿ ಷೆಕ್ಸ್‌ಫಿಯರನ ನಾಟಕಗಳು ಹೆಸರಾಗಿವೆ. ಸಂಸ್ಕೃತ ನಾಟಕಗಳ ಭಾಷಾಂತರದಲ್ಲಿಯೇ ತೃಪ್ತಿಹೊಂದದೆ, ಶಾಸ್ತ್ರಿಗಳು ಇಂಗ್ಲಿಷ ನಾಟಕಗಳನ್ನೂ ಪರಿವರ್ತಿಸಲು ಹೊರಟುದನ್ನು ನೋಡಿದರೆ ಇವರ ಕನ್ನಡ ಭಾಷಾಪ್ರೇಮವು ಎಷ್ಟು ವಿಶಾಲವಾದುದೆಂಬುದು ವ್ಯಕ್ತವಾಗುವದು.

ಬಸವಪ್ಪ ಶಾಸ್ತ್ರಿಗಳಿಗೆ ಇಂಗ್ಲಿಷ ಗಂಧವೇ ಇರಲಿಲ್ಲ. ಇವರ ಮಿತ್ರರಾದ ಸಿ. ಸುಬ್ಬರಾವ್ ಬಿ. ಎ. ಅವರು ಇಂಗ್ಲಿಷ್‌ನಿಂದ ಕನ್ನಡಕ್ಕೆ ಪರಿವರ್ತಿಸಿ ಹೇಳುತ್ತಿದ್ದರು. ಅದನ್ನು ಶಾಸ್ತ್ರಿಗಳು ನಾಟಕ ರೂಪವಾಗಿ ಬರೆಯುತ್ತಿದ್ದರು. ಇಂಗ್ಲೀಷ ಮೂಲವನ್ನೂ ಈ ಕನ್ನಡವನ್ನೂ ಹೋಲಿಸಿ ನೋಡಿದರೆ ಷೆಕ್ಸ್‌ಪಿಯರನೇ ಏನಾದರೂ ಕನ್ನಡಿಸಿರುವನೋ ಎಂಬಂತಿರುವನೆಂಬುವದನ್ನು ಆಂಗ್ಲ ಕನ್ನಡ ಭಾಷಾ ಪಂಡಿತರೆಲ್ಲರೂ ಹೇಳುವರು. ಈ ಬಗೆಯ ಶಕ್ತಿಯು ಅವರಲ್ಲಿದ್ದ ಮಹಾಕವಿತ್ವವನ್ನು ವ್ಯಕ್ತಪಡಿಸುವದು. ಈ ಗ್ರಂಥ ರಚನೆಗೆ ದಿವಾನ್ ರಂಗಾಚಾರ್ಯರೂ ರಾಜ ಕಾರ್ಯಪ್ರಸಕ್ತ ರಾಯ ಬಹದ್ದೂರ ಅಂಬಿಗಲ್ ನರಸಿಂಹಯ್ಯಂಗಾರ್ಯರೂ ಪ್ರೋತ್ಸಾಹಕರಾಗಿಯೂ ಸಿ. ಸುಬ್ಬರಾವ್ ಬಿ. ಎ. ಅವರು ಸಹಾಯಕರಾಗಿಯೂ ಇದ್ದಂತೆ ತಿಳಿದು ಬರುತ್ತದೆ.

೫. ದಮಯಂತಿ ಸ್ವಯಂವರ: — ಇದು ಚಂಪೂ ಗ್ರಂಥವು. ಕನ್ನಡದಲ್ಲಿ ಶ್ರೇಷ್ಠತಮಗಳಾದ ಪಂಪಭಾರತ ಗದಾಯುದ್ಧ ಗಿರಿಜಾಕಲ್ಯಾಣ, ರಾಜಶೇಖರ ವಿಳಾಸ ಮೊದಲಾದ ಉದ್ದಾಮ ಚಂಪೂ ಗ್ರಂಥಗಳಂತೆ ಇದಾದರೂ ಉತ್ತಮ ಕಾವ್ಯವಾಗಿದೆ. ಈ ಗ್ರಂಥವನ್ನು ಮೈಸೂರು ಸರಕಾರದವರು ದೊಡ್ಡ ದೊಡ್ಡ ಪರೀಕ್ಷೆಗಳಿಗೆ ನಿಯಮಿಸುವರು.

ಈ ಗ್ರಂಥದಲ್ಲಿ ಕವಿಯು ಸ್ವತಂತ್ರ ಗ್ರಂಥವನ್ನು ಹೇಗೆ ಬರೆಯ ಬಲ್ಲನೆಂಬುದನ್ನು ತಿಳಿಯಬಹುದು. ಇದು ನವೀನ ಕವಿಯಿಂದ ಬರೆಯಲ್ಪಟ್ಟಿದ್ದರೂ ಶೈಲಿಯು ಪುರಾಣ ಕವಿಯನ್ನು ಹೋಲುವುದು. ಇವರಲ್ಲಿ ಮಹಾಕಾವ್ಯದ ಲಕ್ಷಣಗಳೆಲ್ಲವೂ ಇರುವುವು. ಕವಿಯು ಕೆಲವುಟ್ಟಿಗೆ ಸಂಸ್ಕೃತ ನೈಷಧ ಕಾವ್ಯವನ್ನು ಅನುಸರಿಸಿದ ಹಾಗೆ ಕಾಣುತ್ತದೆ.

ಇದನ್ನು ಕೀರ್ತಿಶೇಷರಾದ ಅಂಬಿಗಲ್ ನರಸಿಂಹಯ್ಯಂಗಾರ್ಯರ ಪ್ರೋತ್ಸಾಹದ ಮೇರೆಗೆ ಮೈಸೂರಿನಲ್ಲಿರುವ ಮಹಾರಾಣಿಯವರ ಕಾಲೇಜಿನ ವಿದ್ಯಾರ್ಥಿನಿಯರಿಗಾಗಿ ಬರೆದಂತೆ ಕವಿಯು ತನ್ನ ಪದ್ಯ ರೂಪದ ಪೀಠಿಕೆಯಲ್ಲಿ ಹೇಳಿರುವನು. ಈ ಮಹಾಕಾವ್ಯವು ೧೯೦೯ ರಲ್ಲಿ ಬೆಂಗಳೂರು ಗೌರ್ನಮೆಂಟ್ ಮುದ್ರಣಾಲಯದಲ್ಲಿ ಪ್ರಕಟವಾಗಿರುವದು. ಈ ಕವಿಯು ಬರೆದ ಪುಸ್ತಕ ಗ್ರಂಥಗಳಲ್ಲಿ ಇದು ಅತ್ಯಂತ ಶ್ರೇಷ್ಠವಾದುದೆಂದೂ ಸರಸವಾದುದೆಂದೂ ಸಾಹಿತ್ಯವಿದರು ಹೇಳುವರು. ಈ ಗ್ರಂಥದ ಚತುರ್ಥಾಶ್ವಾಸದಲ್ಲಿರುವ ಸರಸ್ವತೀ ದಂಡಕವನ್ನು ನೋಡಿದರೆ ಕವಿಗೆ ಸಂಸ್ಕೃತ ಭಾಷೆಯು ಹೇಗೆ ವಿಧೇಯವಾಗಿತ್ತೆಂದೂ ಸರಸ್ವತೀ ಕೃಪೆಯು ಈತನ ಮೇಲೆ ಎಷ್ಟು ಅಪಾರವಾಗಿತ್ತೆಂದೂ ತಿಳಿದು ಬರುವುದು. ಕಾಳಿದಾಸನ ಕಾಳಿಕಾದಂಡಕದ ಜೊತೆಗೆ ಅಭಿನವ ಕಾಳಿದಾಸನ ಸರಸ್ವತೀ ದಂಡಕವು ಪಡಿಯಾಗಿನಿಲ್ಲತಕ್ಕುದೆಂದು ವಿದ್ವಾಂಸರು ಅಭಿಪ್ರಾಯಪಡುವರು.

೬. ಸಾವಿತ್ರೀಚರಿತ್ರೆ:— ಇದನ್ನು ಅಂಬಿಗಲ್ ನರಸಿಂಹಯ್ಯಂಗಾರ್ಯರ ಪ್ರೋತ್ಸಾಹದ ಮೇರೆಗೆ ಮಹಾರಾಣಿಯವರ ಕಾಲೇಜಿಗಾಗಿ ಕವಿಯು ಬರೆದಿರುವನು. ಇದು ಭಾಮಿನೀ ಷಟ್ಪದೀ ರೂಪವಾಗಿದೆ. ಇದನ್ನು ಕವಿಯು ಮೂರು ದಿನಗಳಲ್ಲಿ ಬರೆದಂತೆ ತಿಳಿದು ಬಂದಿರುವುದು. ದಮಯಂತಿ ಸ್ವಯಂವರವು ಎಷ್ಟು ಪ್ರೌಢವೋ ಇದು ಅಷ್ಟು ಸರಳವಾಗಿದೆ. ಕವಿಯು ಮನಸ್ಸು ಮಾಡಿದರೆ ಎಷ್ಟು ಸುಲಭವಾಗಿ ಬೇಕಾದರೂ ಬರಿಯಬಲ್ಲನೆಂಬುದಕ್ಕೆ ಈ ಗ್ರಂಥವು ಸಾಕ್ಷಿಯಾಗಿದೆ. ಸ್ತ್ರೀಬಾಲಕರಿಗಾದಿಯಾಗಿ ಈ ಗ್ರಂಥವು ಬಹಳ ಪ್ರೇಮಾಸ್ಪದವಾಗಿದೆ. ಇದನ್ನು ಹೆಣ್ಣುಮಕ್ಕಳ ಪಾಠಶಾಲೆಯಲ್ಲಿ ಪಠ್ಯಗ್ರಂಥವನ್ನಾಗಿ ನಿಯಮಿಸಿರುವರು.

೭. ಕನ್ನಡ ಭರ್ತೃಹರಿ ಶತಕತ್ರಯ:— ಸಂಸ್ಕೃತ ಸಾಹಿತ್ಯದಲ್ಲಿ ಭರ್ತೃಹರಿಯ ಹೆಸರನ್ನು ಕೇಳದವರೇ ಇಲ್ಲ. ಅವನ ಮೂರು ಶತಕಗಳೂ

ಮೂರು ಲೋಕಕ್ಕೆ ಸಾಟಿಯಾಗಿವೆ. ಕನ್ನಡದಲ್ಲಿ ಸೋಮೇಶ್ವರ ಶತಕವು ಬಳಿಕೆಯಲ್ಲಿರುವಂತೆ ಸಂಸ್ಕೃತದಲ್ಲಿ ಭತೃಹರಿಶತಕಗಳು ಪ್ರಸಿದ್ಧವಾಗಿವೆ.

ಬಸವಪ್ಪ ಶಾಸ್ತ್ರಿಗಳು ಕನ್ನಡದಲ್ಲಿ ಈ ಮೂರು ಶತಕಗಳನ್ನೂ ಕಂದವೃತ್ತ ರೂಪವಾಗಿ ಪರಿವರ್ತಿಸಿರುವರು. ಇದರಲ್ಲಿ ಶಾಕುಂತಲದ ಹಾಗೆಯೇ ಇವರ ಪರಿವರ್ತನನೈಪುಣ್ಯವು ವ್ಯಕ್ತವಾಗುವುದು. ಇದೂ ಸಹ ಪದ್ಯಗ್ರಂಥವಾಗುತ್ತದೆ. ೧೮೭೪ರಲ್ಲಿ ಬೆಂಗಳೂರು ಸರಕಾರದ ಮುದ್ರಣಾಲಯದಲ್ಲಿ ಅಚ್ಚಾಗಿದೆ.

೮. ನೀತಿಸಾರಸಂಗ್ರಹಃ--- ಇದನ್ನು ಕವಿಯು ನರಸಿಂಹಾರ್ಯನ ಪ್ರೋತ್ಸಾಹ ಮೇರೆಗೆ ಬರೆದಿರುವನು. ಇದೊಂದು ನೀತಿಶತಕ. ೧೮೧೧ ರಲ್ಲಿ ಅಚ್ಚಾಗಿದೆ. ಪೀಠಿಕೆಯಲ್ಲಿ

ವೃತ್ತ॥ ಶ್ರೀ ವಾಮಾಂಕವ ಸನ್ಮಹೀಧ್ರವರ ಕನ್ಯಾಲಿಪ್ತ ಕಸ್ತೂರಿವೊಲ್ ।
ಗ್ರೀವೋ ಪಾಂತದೊಲೊಪ್ಪಿತಾಳ್ದ ಗರಮಂತರ್ಬಾಹ್ಯ ಲೋಕಾವನ ॥
ಪ್ರಾವೀಣಂ ಮೆರೆದಾನತಾಮರಶಿರೋಂಚತ್ಪಾದನಾಂದಾಮಹಾ ।
ದೇವಂ ರಕ್ಷಿಕೆ ಚಾಮಭೂಮ ಪತಿಯಂ ಶ್ರೀಶೈಲಜಾವಲ್ಲಭಂ ॥೧॥

ಕಂದ ॥ ನುತಗುಣಚಾಮ ಮಹೀಪತಿ !
ಮತಿಸಚಿವನೃಸಿಂಹನರ್ಯನುತ್ಸಾಹಿಸೆಸ ॥
ನ್ನುತ ನೀತಿಸಾರ ಸಂಗ್ರಹ ।
ಕೃತಿಯಂ ಬಸವಪ್ಪಶಾಸ್ತ್ರಿತಾಂ ವಿರಚಿಸಿದಂ ॥೨॥

ಎಂಬೆರಡು ಪದ್ಯಗಳಿವೆ. ಇದು ಕನ್ನಡದಲ್ಲಿ ಉತ್ತಮವಾದ ನೀತಿಶತಕವಾಗಿ ಗಣಿಸಲ್ಪಟ್ಟಿದೆ.

ಮೇಲೆ ತಿಳಿಸಿದವುಗಳೇ ಅಲ್ಲದೆ ಮತ್ತೆ ಕೆಲವು ಈ ಮಹಾಕವಿಯು ಬರೆದ ಗ್ರಂಥಗಳು ಇನ್ನೂ ಮುದ್ರಣವಾಗದೆ ಉಳಿದಿರುವದು ಕನ್ನಡಿಗರ ದುರದೃಷ್ಟವಲ್ಲದೆ ಮತ್ತೇನು? ಮುದ್ರಣವಾಗದೇ ಇರುವುವುಗಳನ್ನು ಮುಂದೆ ಅನುಕ್ರಮವಾಗಿ ತಿಳಿಸಿದೆ.

೯. ಕೃಷ್ಣರಾಜಾಭ್ಯುದಯಂ
೧೦. ಬಿಲ್ವವೃಕ್ಷ ಪೂಜಾವಿಧಿ (ಸಂಸ್ಕೃತ)
೧೧. ರತ್ನಾವಳಿ ನಾಟಕ
೧೨. ವಿಕ್ರಮೋರ್ವಶೀ ನಾಟಕ

೧೩. ಮಾಲತೀ ಮಾಧವ ನಾಟಕ
೧೪. ದಕ್ಷಿಣಾ ಮೂರ್ತ್ಯಷ್ಟಕ
೧೫. ಶಂಕರ ಶತಕ
೧೬. ತ್ರಿಷಷ್ಠಿಗಣನುತಿ (ಸಂಸ್ಕೃತ)
೧೭. ಶಂಕರೀ ನಕ್ಷತ್ರಮಾಲಾ (ಸಂಸ್ಕೃತ)
೧೮. ಆರ್ಯಾಶತಕ (ಸಂಸ್ಕೃತ)
೧೯. ಅಷ್ಟಮೂರ್ತಿ ತನಯಾಷ್ಟಕ (ಸಂಸ್ಕೃತ)
೨೦. ಅಂಬಾಷೋಡಶಮಂಜರಿ. (ಸಂಸ್ಕೃತ)
೨೧. ಬಸವೇಶಾಷ್ಟಕ (ಸಂಸ್ಕೃತ)
೨೨. ಸದಾಶಿವಾಷ್ಟಕ (ಸಂಸ್ಕೃತ)
೨೩. ರೇಣುಕಚರಿತ್ರೆ (ಇದು ಕನ್ನಡಚಂಪು ಎರಡು ಆಶ್ವಾಸಗಳು ಮಾತ್ರವಾಗಿವೆ.)
೨೪. ಹರ್ಷಚರಿತ್ರೆ (ಕನ್ನಡಕಾವ್ಯ) ಅಪೂರ್ಣವಾಗಿದೆ.

ಈ ಪರಿಯಲ್ಲಿ ಬಸವಪ್ಪಶಾಸ್ತ್ರಿಗಳು ಕನ್ನಡ ಸಂಸ್ಕೃತ ಸಾಹಿತ್ಯದಲ್ಲಿ ೨೪ ಗ್ರಂಥಗಳನ್ನು ಬರೆದಿರುವರು. ಅವುಗಳಲ್ಲಿ ರೇಣುಕಚರಿತ್ರೆಯನ್ನೂ ಹರ್ಷಚರಿತ್ರೆಯನ್ನೂ ಮರಣಕಾಲದಲ್ಲಿ ಪ್ರಾರಂಭಿಸಿದ್ದರು. ಅನಿರೀಕ್ಷಿತವಾದ ಅವರ ಮರಣದಿಂದ ಆ ಗ್ರಂಥಗಳು ಪೂರ್ಣವಾಗದಂತಾಯಿತು.

ಇದುವರೆಗೆ ನಾವು ಉದಾಹರಿಸಿರುವ ಅವರ ಗ್ರಂಥಗಳ ಪಟ್ಟಿಯಿಂದ ಅವರ ಗ್ರಂಥಗಳಲ್ಲಿ ಮೂರರಲ್ಲಿ ಒಂದುಭಾಗ ಮಾತ್ರ ಮುದ್ರಣವಾಗಿ ಉಳಿದ ೧೬ ಗ್ರಂಥಗಳು ಹಾಗೆಯೇ ಉಳಿದಿರುವುದನ್ನು ನೋಡಿದರೆ ಕನ್ನಡಿಗರ ಆಲಸ್ಯವೂ ದುರ್ದೈವವೂ ಎದ್ದುಕಾಣುವದಿಲ್ಲವೇ?

ಆಸ್ಥಾನಕವಿ:— ಈ ಪರಿಯಲ್ಲಿ ಶಾಸ್ತ್ರಿಗಳು ಶ್ರೇಷ್ಠತಮ ಗ್ರಂಥಗಳನ್ನೂ ಬರೆಯುತ್ತಿದ್ದುದನ್ನು ನೋಡಿ ಚಾಮರಾಜ ಪ್ರಭುಗಳು ಇವರನ್ನು ಅರಮನೆಯ ಆಸ್ಥಾನಕವಿಗಳನ್ನಾಗಿ ಸ್ವೀಕರಿಸಿ ಗೌರವಿಸಿದರು. ಮಹಾರಾಜರಿಗೆ ಇವರು ವಿದ್ಯಾಗುರುಗಳೂ ಆಸ್ಥಾನಕವಿಗಳೂ ಆಗಿ ಸಂಪೂರ್ಣವಾಗಿ ರಾಜಾನುಗ್ರಹಕ್ಕೆ ಪಾತ್ರರಾದರು.

ಅಭಿನವ ಕಾಳಿದಾಸ:— ಬಸವಪ್ಪ ಶಾಸ್ತ್ರಿಗಳು ಸಂಸ್ಕಾರ ಕವಿಗಳು. ಕವಿತೆಯು ಇವರಿಗೆ ಹುಟ್ಟುಗುಣ. ಮಹಾಕವಿ ಷಡಕ್ಷರದೇವನು

ತನ್ನ ೧೧ ನೇ ವರ್ಷದಲ್ಲಿಯೇ ಕವಿತೆಯನ್ನು ಬರೆದು ಹೆಸರಾದನೆಂದು ಶಬರಶಂಕರವಿಳಾಸದಲ್ಲಿ ಹೇಳಿರುವಂತೆ ಬಸವಪ್ಪ ಶಾಸ್ತ್ರಿಗಳು ತಮ್ಮ ೧೮ ನೇ ವಯಸ್ಸಿನಲ್ಲಿಯೇ ಗ್ರಂಥವನ್ನು ಬರೆದು ಹೆಸರಾಗಿರುವರು. ಈ ವಿಷಯವನ್ನು ಈ ಮಹಾಕವಿಯ ಶಿಷ್ಯರೂ, ಮಹಾಪಂಡಿತರೂ ಆದ ಕರ್ನಾಟಕಭಾಷಾರತ್ನ ಪಿ. ಆರ್. ಕರಿಬಸವ ಶಾಸ್ತ್ರಿಗಳು.

ಕಂದ ॥ ಪದಿನೆಂಟು ವಯಸ್ಸಿನೊದ ।
ವಿದ ಕವಿತಾಶಕ್ತಿಯಿಂದೆ ಬುಧನಿವಹಕ್ಕಂ ||
ಮುದವೊಗೆಯ ಕೃಷ್ಣರಾಜಾ ।
ಭ್ಯುದಯಮೆನಿಪ್ಪೊಂದು ಕೃತಿಯನಿರದಾಗಿಸಿದಂ ॥೧॥

ಎಂಬ ಪದ್ಯದಲ್ಲಿ ಹೇಳಿರುವರು.

ಆಸ್ಥಾನಕವಿ ಬಸವಪ್ಪ ಶಾಸ್ತ್ರಿಗಳು ಶಾಕುಂತಲವನ್ನು ಬರೆದು ದಿವಾನ ರಂಗಾಚಾರ್ಯರವರ ಅಧ್ಯಕ್ಷತೆಯಲ್ಲಿ ಅದನ್ನು ಓದಿ ಹೇಳಲು ದೇಶಾಭಿಮಾನಿಗಳಾದ ರಂಗಾಚಾರ್ಯರು ಈ ಮಹಾಕವಿಯ ಉಭಯ ಭಾಷಾ ನೈಪುಣ್ಯವನ್ನೂ, ಕವಿತಾಪ್ರೌಢಿಮೆಯನ್ನೂ ನೋಡಿ 'ಅಭಿನವ ಕಾಳಿದಾಸ' ಎಂಬ ಬಿರುದನ್ನು ಕೊಟ್ಟು ಸನ್ಮಾನಿಸಿದರೆಂದು ತಿಳಿದು ಬರುತ್ತದೆ. ಈ ವಿಷಯವನ್ನೇ ಮುಂದಿನ ಪದ್ಯಗಳಲ್ಲಿ ಪಿ. ಆರ್. ಶಾಸ್ತ್ರಿಗಳು ಹೇಳಿರುವರು.

ವೃ॥ ಶೃಂಗಾರಕ್ಕಾಗರಂತಾನೆನಿಸಿಮೆರೆವ ಶಾಕುಂತಳಾಭಿಖ್ಯಮಾಮ ।
ತ್ತುಂಗಾಲಂಕಾರಮಂ ನಾಟಕ ಮನೆಲಸದುದ್ದಾಮ ಸಾಹಿತ್ಯಮಂ ಮೇಣ್॥
ಸಂಗೀತಪ್ರೌಢಿಯುಂ ಸಂಗಳಿಸೆ ರಚಿಸಿ ಕರ್ನಾಟವಾಗ್ಧಾಟಿಯಿಂದ।
ರಂಗಾಚಾರ್ಯಾಖ್ಯ ಮಂತ್ರಿಪ್ರವರ ಸಭೆಯೊಳೋಲ್ದೋದಿದಂಜಾಣ್ಮೆಯಿಂದಂ ॥೧॥

ಕಂದ॥ ಕರ್ಣಾನಂದಮದಾಗಲ್।
ಕರ್ಣಾಟಕ ಕಾಳಿದಾಸನೆಂಬೀ ಬಿರುದಂ॥
ಪೂರ್ಣದಿ ನಿತ್ತಂ ವಿದ್ವ।
ತ್ಪೂರ್ಣಸಭಾಮಂಡಲಿಯೊಳಗಾಮಂತ್ರೀಶಂ॥೨॥

ಈ ಪರಿಯಲ್ಲಿ ಶಾಸ್ತ್ರಿಗಳು ರಾಜಗುರುಗಳೂ, ಆಸ್ಥಾನ ಕವಿಗಳೂ ಪರಮಪೌರಾಣಿಕಶಿರೋಮಣಿಗಳೂ ಆಗಿದ್ದುದರ ಜೊತೆಗೆ ಅಭಿನವ ಕಾಳಿದಾಸರೂ ಆದರು.

ಭಾಷಾಂತರಶಕ್ತಿಃ—ಬಸವಪ್ಪ ಶಾಸ್ತ್ರಿಗಳು ಮಹಾಪಂಡಿತರೂ ಮಹಾ ಕವಿಗಳೂ ಪುರೋಹಿತರೂ ಪೌರಾಣಿಕರೂ ಆಗಿದುದಲ್ಲದೆ ಉತ್ತಮ ಭಾಷಾಂತರಕಾರರೂ ಆಗಿದ್ದರು. ಇದಕ್ಕೆ ಅವರ ಕರ್ನಾಟಕ ಶಾಕುಂತಲ ನಾಟಕವೂ ಕನ್ನಡ ಭರ್ತೃಹರಿಶತಕತ್ರಯವೂ ಸಾಕ್ಷಿಯಾಗಿವೆ.

ಭಾಷಾಂತರ ಮಾಡಬೇಕಾದರೆ ಉಭಯ ಭಾಷೆಗಳಲ್ಲಿಯೂ ಉತ್ತಮ ಜ್ಞಾನವಿರಬೇಕಾಗುವುದು. ಗ್ರಂಥ ಪರಿವರ್ತನದಲ್ಲಿ ಕವಿಯು ಮೂಲ ಗ್ರಂಥಕಾರನಿಗೆ ವಿಧೇಯನೂ ಸಹೃದಯನೂ ಚಾಣಾಕ್ಷಣನೂ ಆಗಿರಬೇ ಕಾಗುವದು. ಭಾಷಾಂತರವು ಪರಕಾಯ ಪ್ರವೇಶದಂತೆ ಕಷ್ಟಸಾಧ್ಯವಾ ದುದು.

ಬಸವಪ್ಪ ಶಾಸ್ತ್ರಿಗಳು ಮೇಲೆ ಹೇಳಿದ ಎರಡು ಗ್ರಂಥಗಳನ್ನೂ ಭಾಷಾಂ ತರ ಮಾಡುವಾಗ ತಮ್ಮ ಪರಿವರ್ತನಶಕ್ತಿಯನ್ನು ಬಹು ಚನ್ನಾಗಿ ವ್ಯಕ್ತಮಾಡಿರುವರು. ಅವರ ಶೂರಸೇನಚರಿತ್ರೆಯು ಅವರು ಷೇಕ್ಸ್‌ಪಿ ಯುವರ ಮಹಾಕವಿಯ ಹೃದಯವನ್ನು ಹೇಗೆ ಅರಿತಿರುವರೆಂಬುದಕ್ಕೆ ನಿದ ರ್ಶನವಾಗಿದೆ.

ಶಾಸ್ತ್ರಿಗಳೂ ರಂಗಭೂಮಿಯೂಃ—ಈ ಕವಿಯು ಪರಿಸ್ಥಿತಿಯನ್ನು ಬಲ್ಲ ವನು. ಪರಿಸ್ಥಿತಿಯ ತಿಳಿವಿಲ್ಲದವನು ಲೋಕಪ್ರಿಯ ಕವಿಯೆನಿಸಲಾರನು.

ಜನಜೀವನದ ಪ್ರಗತಿಗೆ ನಾಟಕಗಳು ಅತ್ಯಂತ ಅವಶ್ಯಕಗಳೆಂದೂ ಆದುದರಿಂದಲೇ ಸಂಸ್ಕೃತಸಾಹಿತ್ಯದಲ್ಲಿ ಅವಕ್ಕೆ ಪ್ರಾಶಸ್ತ್ಯವಿತ್ತಿರುವರೆಂದೂ ಇವರು ಭಾವಿಸಿದ್ದರು. ಆದುದರಿಂದ ಅವರು ಸಂಸ್ಕೃತದಿಂದ ಆರು, ಇಂಗ್ಲಿಷಿನಿಂದ ಒಂದು ಹೀಗೆ ಒಟ್ಟು ಏಳು ನಾಟಕಗಳನ್ನು ಬರೆದು ಕನ್ನಡ ರಂಗಭೂಮಿಗೆ ಮಹೋಪಕಾರ ಮಾಡಿರುವರು. ಪ್ರಾಯೇಣ ಅವರಾ ಸಪ್ತ ನಾಟಕಗಳೂ ಕನ್ನಡನಾಡಿನಲ್ಲಿ 'ಸಪ್ತರ್ಷಿಗಳಂ' ತಿರುವುವು.

ಮಹಾರಾಜ ಚಾಮರಾಜೇಂದ್ರ ಪ್ರಭುಗಳು ಸಂಗೀತಸಾಹಿತ್ಯ ಪ್ರೇಮಿಗಳೂ ರಂಗಭೂಮಿಯಲ್ಲಿ ಅಭಿಮಾನವುಳ್ಳವರೂ ಆಗಿದ್ದರು. ಆ ಮಹಾಪ್ರಭುಗಳ ಉದಾರಾಶ್ರಯದಲ್ಲಿಯೇ ಮೈಸೂರಿನಲ್ಲಿ "ಶ್ರೀ ಚಾಮ ರಾಜೇಂದ್ರ ಕರ್ನಾಟಕನಾಟಕಸಭಾ" ಎಂಬ ಹೆಸರಿನ ನಾಟಕ ಸಮಿತಿ ಯೊಂದು ಏರ್ಪಟ್ಟಿತು. ಆ ಸಭೆಯವರಿಗೆ ಮೊಟ್ಟಮೊದಲು ನಾಟಕಗ ಳನ್ನು ಕನ್ನಡದಲ್ಲಿ ಬರೆದು ಆಡಲು ಅನುಕೂಲ ಮಾಡಿಕೊಟ್ಟವರು

ಮಹಾಕವಿ ಬಸವಪ್ಪ ಶಾಸ್ತ್ರಿಗಳೇ ಆಗಿರುವರು. ಈ ಪರಿಯಲ್ಲಿ ಶಾಸ್ತ್ರಿಗಳು ಸಾಹಿತ್ಯಕ್ಕೇ ಅಲ್ಲದೆ ರಂಗಭೂಮಿಗೂ ಸೇವೆಯನ್ನು ಸಲ್ಲಿಸಿ ಕೃತಾರ್ಥರಾಗಿರುವರು.

ಪ್ರೋತ್ಸಾಹಃ— "ನಿರಾಶ್ರಯಾ ನಶೋಭಂತೆ ಪಂಡಿತಾವನಿತಾಲತಾಃ' ಎಂಬ ಆರ್ಯೋಕ್ತಿಯಂತೆ ಪಂಡಿತನಿಗಾಗಲಿ ಕವಿಗಾಗಲಿ ಕಲಾವಿದನಿಗೇ ಆಗಲಿ ತಕ್ಕ ಆಶ್ರಯವಿಲ್ಲದಿದ್ದರೆ ಅವನು ಪರಿಶೋಭಿಸಲಾರನು.

ಕೈ. ಬಸವಪ್ಪ ಶಾಸ್ತ್ರಿಗಳು ಒಳ್ಳೆಯ ವಿದ್ವಾಂಸರಾಗಿದ್ದಂತೆಯೇ ಚಲೋ ಭಾಗ್ಯವಂತರಾಗಿಯೂ ಇದ್ದರು. ಆದುದರಿಂದಲೇ ಇವರಿಗೆ ಮಹಾರಾಜ ಚಾಮರಾಜೇಂದ್ರ ಒಡೆಯರವರ ಉದಾರಾಶ್ರಯವೂ ದಿವಾನ್ ರಂಗಾಚಾರ್ಯರು ರಾಜಕಾರ್ಯಪ್ರಸಕ್ತ ರಾವಬಹಾದ್ದೂರ್ ಅಂಬಿಗಲ್ ನರಸಿಂಹಯ್ಯಂಗಾರ್ಯರು ಸಿ. ಸುಬ್ಬರಾವ್ ಬಿ. ಎ. ಅವರು ಕೈ. ಯಜಮಾನ್ ವೀರಸಂಗಪ್ಪನವರು ಸುಪ್ರಸಿದ್ಧರಾದ ರಾವ್‌ಬಹಾದ್ದೂರ್ ಎಲೆ ಮಲ್ಲಪ್ಪಶೆಟ್ಟರು ಮೊದಲಾದ ಮಹಾಶಯರ ಪ್ರೋತ್ಸಾಹವೂ ವಿದ್ವಾನ್ ಗರಳಪುರೀ ಶಾಸ್ತ್ರಿಗಳು ವಿದ್ವಾನ್ ನಂ. ಸುಬ್ಬಾ ಶಾಸ್ತ್ರಿಗಳು ವಿದ್ವಾನ್ ವೀಣೆ ಸುಬ್ಬಣ್ಣನವರು ಮೊದಲಾದ ಪಂಡಿತರ ಸಹವಾಸವೂ ಲಭಿಸಿದುದು.

ಸಮಾಜಪ್ರೇಮಿಗಳೂ ಧರ್ಮಾತ್ಮರೂ ಆದ ಎಲೆ ಮಲ್ಲಪ್ಪ ಶೆಟ್ಟರು ಬಸವಪ್ಪ ಶಾಸ್ತ್ರಿಗಳನ್ನು ಬೆಂಗಳೂರಿಗೆ ಒಮ್ಮೆ ಕರೆಸಿ ತಮ್ಮ ಮನೆಯಲ್ಲಿ ಒಂದೆರಡು ಗಂಟೆಯಕಾಲ ಶಾಸ್ತ್ರಿಗಳಿಂದ ಪುರಾಣ ಹೇಳಿಸಿ ಇವರಿಗೆ ೭೦೦ ರೂಪಾಯಿಗಳನ್ನೂ ಪಟ್ಟೆಪೀತಾಂಬರಗಳನ್ನೂ ಕೊಟ್ಟು ಗೌರವಿಸಿದರಂತೆ.

ಈ ರೀತಿಯಲ್ಲಿ ಈ ಶಾಸ್ತ್ರಿಗಳು ಮಹಾರಾಜರಿಗೂ ಮಹಾಜನರಿಗೂ ಪ್ರೇಮಾಸ್ಪದರಾಗಿ ವಿಖ್ಯಾತರಾದರು.

ಈ ಕವಿಯ ವೈಶೇಷ್ಯಃ— ಬಸವಪ್ಪ ಶಾಸ್ತ್ರಿಗಳು ವೀರಶೈವ ಕವಿಗಳಾದರೂ ಇತರ ವೀರಶೈವ ಕವಿಗಳಿಗೂ ಇವರಿಗೂ ಅನೇಕ ವೈಲಕ್ಷಣ್ಯಗಳಿಗೆ. ಸಾಮಾನ್ಯವಾಗಿ ವೀರಶೈವ ಕವಿಗಳು ಶಿವಶರಣರ ಕಥೆಗಳನ್ನೂ ಪಂಚವಿಂಶತಿ ಲೀಲೆಗಳನ್ನೂ ಕುರಿತ ಗ್ರಂಥಗಳನ್ನು ಬರೆವರು.

ಸಾಮಾನ್ಯವಾಗಿ ವೀರಶೈವೇತರರು ಉತ್ತಮೋತ್ತಮವಾದ ಕೆಲವು ವೀರಶೈವ ಗ್ರಂಥಗಳನ್ನು ಪ್ರೀತಿಸದಿರುವುದಕ್ಕೆ ವೀರಶೈವ ಕವಿಗಳ ವೈಶಿಷ್ಟ್ಯವೇ ಕಾರಣವೆನ್ನಬಹುದು. ವೃಷಭೇಂದ್ರವಿಜಯ, ತ್ರಿಷಷ್ಠಿಪುರಾತನಚರಿತ್ರೆ, ಚನ್ನಬಸವಪುರಾಣ ಮೊದಲಾದ ಗ್ರಂಥಗಳು ಮೇಲಿನ ಅಪವಾದಕ್ಕೆ ಬಾಹ್ಯವಾಗಿಲ್ಲ.

ಈ ರಹಸ್ಯವನ್ನು ಬಸವಪ್ಪ ಶಾಸ್ತ್ರಿಗಳು ಚನ್ನಾಗಿ ವಿಚಾರಿಸಿದಂತೆ ತೋರುತ್ತದೆ. ಆದುದರಿಂದಲೇ ಇವರು ಪಂಪ ರನ್ನರಂತೆ ಬಹುಜನ ಪ್ರೇಮಾಸ್ಪದವಾದ ಗ್ರಂಥಗಳನ್ನೇ ಬರೆದಿರುವರು. ಆದುದರಿಂದಲೇ ಅವರು ನವೀನ ಕವಿಗಳಾದರೂ ಯಾವ ಪ್ರಾಚೀನ ವೀರಶೈವ ಕವಿಯೂ ಪಡೆಯದಿರುವಷ್ಟು ಕೀರ್ತಿಯನ್ನೂ ಪಡೆದಿರುವರು. ಅವರ ಗ್ರಂಥಗಳು ಸರ್ವರಿಂದಲೂ ಸಮಾದರಣೀಯವಾಗಿವೆ. ಆದುದರಿಂದ ಬಸವಪ್ಪ ಶಾಸ್ತ್ರಿಗಳು ವೀರಶೈವ ಕವಿಗಳಲ್ಲಿ ವೈಲಕ್ಷಣ್ಯವುಳ್ಳವರೆಂದು ಹೇಳಬಹುದು.

ಕೆಲವು ಸಂಗತಿ:— ಬಸಪ್ಪ ಶಾಸ್ತ್ರಿಗಳಿಗೆ ಆಸ್ಥಾನ ವಿದ್ವಾನ್ ಬಿ. ಮಹದೇವ ಶಾಸ್ತ್ರಿಗಳೆಂಬ ಕುಮಾರರೊಬ್ಬರಿರುವರು. ಇವರು ತಂದೆಯಂತೆ ಪ್ರಬಲ ಕವಿಗಳಲ್ಲದಿದ್ದರೂ ಕವಿಗಳೆಂದು ಹೇಳುವುದರಲ್ಲಿ ಅಭ್ಯಾಂತರವಿಲ್ಲ. ಮಹಾದೇವ ಶಾಸ್ತ್ರಿಗಳು ಕರ್ನಾಟಕರಘುವಂಶವೆಂಬ ಗ್ರಂಥವನ್ನು ಬರೆದಿರುವರು. ಇದುವರೆಗೆ ರಘುವಂಶದ ಒಂದು ಸರ್ಗವನ್ನು ಮಾತ್ರ ಪರಿವರ್ತಿಸಿರುವರು. ಇವರ ಕವಿತೆಯು ಚಂಪೂರೂಪವಾಗಿದೆ. ನಾವು ಈ ಲೇಖನ ಪ್ರಾರಂಭದಲ್ಲಿ ಉದಾಹರಿಸಿರುವ ಕಂದಪದ್ಯವು ಕರ್ನಾಟಕರಘುವಂಶದಿಂದ ಉದ್ಧರಿಸಿ ಬರೆದುದೇ ಆಗಿದೆ.

ಪಿ. ಆರ್. ಕರಿಬಸವಶಾಸ್ತ್ರಿಗಳಿಗಿದ್ದಂತೆ ಬಸವಪ್ಪ ಶಾಸ್ತ್ರಿಗಳಿಗೆ ಶಿಷ್ಯವೃಂದವು ಬಹಳವಾಗಿದ್ದಂತೆ ಕಾಣುವುದಿಲ್ಲ. ಆದರೂ ಆಸ್ಥಾನ ಮಹಾವಿದ್ವಾನ್ ಕರ್ನಾಟಕಭಾಷಾರತ್ನ ಪಿ. ಆರ್. ಕರಿಬಸವಶಾಸ್ತ್ರಿಗಳವರೇ ಬಸವಪ್ಪ ಶಾಸ್ತ್ರಿಗಳ ಶಿಷ್ಯರಾಗಿರುವದರಿಂದ ಅವರ ಶಿಷ್ಯರೆಲ್ಲರೂ ಇವರಿಗೆ ಪ್ರಶಿಷ್ಯರಾಗಬೇಕು ತಾನೇ ?

ಮೇಲಾಗಿ ಕರ್ಣಾಟಕಸಿಂಹಾಸನಾಧೀಶ್ವರರಾದ ಚಾಮರಾಜೇಂದ್ರ ಒಡೆಯರವರು ಬಸವಪ್ಪ ಶಾಸ್ತ್ರಿಗಳ ಶಿಷ್ಯಕೋಟಿಯಲ್ಲಿ ಮುಖ್ಯರೂ ಆಶಯದಾತರೂ ಆಗಿದ್ದರು.

ಕರ್ಣಾಟಕದ ಕೀರ್ತನಕಾರರಲ್ಲಿ ಅತ್ಯಂತ ಪ್ರಸಿದ್ಧರಾದ ಶಿವಕಥಾ ಪಂಡಿತ ಮೈಸೂರು ಶಿವಪ್ಪ ಶಾಸ್ತ್ರಿಗಳು ಮಹಾಕವಿ ಬಸವಪ್ಪ ಶಾಸ್ತ್ರಿಗಳ ಶಿಷ್ಯರಾಗಿರುವರು. ಶಿವಪ್ಪಶಾಸ್ತ್ರಿಗಳನ್ನು ಕೀರ್ತನಕಾರರಾಗುವಂತೆ ಪ್ರೋತ್ಸಾಹಿಸಿ ಅವರಿಗೆ ಕೆಲವು ಕೀರ್ತನಗಳನ್ನು ಸಹ ಮೊದಲು ಬರೆದು ಕಲಿಸಿದವರು ಬಸವಪ್ಪಶಾಸ್ತ್ರಿಗಳೇ ಎಂದು ತಿಳಿಯುತ್ತದೆ.

ಬಸವಪ್ಪ ಶಾಸ್ತ್ರಿಗಳು ವೀರಶೈವ ಮಹೇಶ್ವರ ವಂಶೋದ್ಭವರೂ, ಮಹಾಕವಿಗಳೂ, ಅದುದಲ್ಲದೆ ಪುರೋಹಿತರೂ ಆಗಿದ್ದರು. ಇವರನ್ನು ರಾಜರಾದಿಯಾಗಿ ಎಲ್ಲರೂ ಗೌರವಬುದ್ಧಿಯಿಂದ 'ಸ್ವಾಮಿ' ಎಂದು ಸಂಬೋಧಿಸುತ್ತಿದ್ದರೆಂದೂ, ಬ್ರಾಹ್ಮಣಾದಿ ಎಲ್ಲ ವರ್ಣದವರೂ ಇವರ ವಿಷಯದಲ್ಲಿ ಬಹಳ ಗೌರವ ಬುದ್ಧಿಯುಳ್ಳವರಾಗಿದ್ದರೆಂದೂ ತಿಳಿದು ಬರುತ್ತದೆ.

ರೂಪಗುಣಶೀಲಗಳು:— ಈ ಲೇಖಕನ ಜನ್ಮಕಾಲಕ್ಕಿಂತ ೧೧ವರ್ಷ ಪೂರ್ವದಲ್ಲಿಯೇ ಈ ಕವಿಯು ತೀರಿಹೋದುದರಿಂದ ಲೇಖಕನು ಈ ಕವಿಯ ಗುಣರೂಪಗಳನ್ನು ಕಣ್ಣಾರೆ ಕಾಣದವನಾಗಿರುವನು. ಬಸವಪ್ಪ ಶಾಸ್ತ್ರಿಗಳ ಪಟ್ಟಶಿಷ್ಯರಾದ ಪಿ. ಆರ್. ಕರಿಬಸವಶಾಸ್ತ್ರಿಗಳಿಂದ ಕೇಳಿ ತಿಳಿದ ಸಂಗತಿಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಿದೆ.

ಬಸವಪ್ಪ ಸಾಸ್ತ್ರಿಗಳು ಸ್ಥೂಲಕಾಯರೂ ಕಪ್ಪು ದೇಹವುಳ್ಳವರೂ ಕಲಿಯಾದ ಮುಖವುಳ್ಳವರೂ ಆಗಿದ್ದರು. ಇವರ ಮಾತುಗಳಾವಾಗಲೂ ಸರಸವಾಗಿಯೂ ನಿರ್ವರಿಚಕವಾಗಿಯೂ ಇರುತ್ತಿದ್ದವು. ಕಂಠಧ್ವನಿಯು ಅತ್ಯಂತ ಮಧುರವಾದುದು. ಶಾಸ್ತ್ರಿಗಳು ರಸಿಕಶಿರೋಮಣಿಗಳು. ವಿಷಯ ಸುಖದ ಕಡೆಗೆ ಮನವಲಿದುದು ಬಹಳ. ಧೈರ್ಯ ಸ್ಥೈರ್ಯ ಗುಣಗಳುಳ್ಳವರು. ಸ್ನೇಹಾಭಿಮಾನಿಗಳು ದಾಕ್ಷಿಣ್ಯಾಪರರು. ಉದಾರಿಗಳು. ಕಲಾಪ್ರೇಮಿಗಳೂ ಆಗಿರುತ್ತಿದ್ದರು.

ಸಮಯಬಂದರೆ ರಾಜಾಜ್ಞೆಯನ್ನೂ ಉಲ್ಲಂಘಿಸುತ್ತಿದ್ದರೆಂದೂ ಎಂತಹ ಪ್ರಚಂಡ ಪಂಡಿತನನ್ನಾದರೂ ಲಕ್ಷಿಸುತ್ತಿರಲಿಲ್ಲವೆಂದೂ ಇವರ ಪರಿಚಯವುಳ್ಳವರು ಹೇಳುತ್ತಿರುವರು. ಈ ತೆರದ ನಿರ್ದಾಕ್ಷಿಣ್ಯಾಭಾವವು ಅವರ ಉದಾತ್ತಪಾಂಡಿತ್ಯಜನ್ಯವಾದುದಾಗಿರಬಹುದು. ಕೆಲವು ಸಮಯದಲ್ಲಿ ಈ ಬಗೆಯ ಮನೋವೃತ್ತಿಯೇ ವ್ಯಕ್ತಿಯನ್ನು ಮಹಾ ಕಾರ್ಯಗಳಲ್ಲಿ ಪ್ರವೃತ್ತನಾಗುವಂತೆ ಮಾಡುವುದು.

ಉಪಸಂಹಾರ:-- ಇದುವರೆಗಿನ ಸಂಗತಿಗಳನ್ನು ಪರಿಶೀಲಿಸಿದವರ್ಗೆ ಮಹಾಕವಿ ಬಸವಪ್ಪಶಾಸ್ತ್ರಿಗಳು ಕರ್ಣಾಟಕದ ವಿಭೂತಿಪುರುಷರೆಂದೂ, ಕರ್ಣಾಟಕಸಾಹಿತ್ಯಸೇವಾವಿಶಾರದರೆಂದೂ ಸ್ಪಷ್ಟವಾಗಿ ತಿಳಿದುಬರುವುದು. ಇಂತಹ ಮಹಾಕವಿಯ ಗ್ರಂಥಗಳು ಇನ್ನೂ ಮೂರರಲ್ಲಿ ಎರಡುಭಾಗ ಮುದ್ರಣವಾಗದೆ ಉಳಿದಿದ್ದರೂ ಕನ್ನಡಿಗರು ಅದರಲ್ಲಿಯೂ ವೀರಶೈವ ಬಂಧುಗಳು ಕಣ್ಣುಮುಚ್ಚಿ ಕುಳಿತಿರುವುದನ್ನು ನೋಡಿ ಯಾವ ಸಾಹಿತ್ಯ ಭಕ್ತನಿಗೆ ತಾನೇ ದುಃಖವಾಗಲಿಕ್ಕಿಲ್ಲ?

ಇಂತಹ ಮಹಾಕವಿಯ ಪುಣ್ಯದಿನವನ್ನು ಆಚರಿಸುವುವರ ಮುಖ ದಿಂದಲೂ ಈತನ ಗ್ರಂಥಗಳನ್ನು ಪ್ರಚುರಪಡಿಸುವುದರ ಮುಖದಿಂದಲೂ ಈ ಕವಿಯ ಚರಿತ್ರೆಯನ್ನೂ ಗ್ರಂಥವಿಮರ್ಶೆಗಳನ್ನೂ ಒಳಗೊಂಡ ಕೃತಿ ಯೊಂದನ್ನು ಸಿದ್ಧಪಡಿಸುವುದರ ಮುಖದಿಂದಲೂ ನಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸುವುದು ನಮ್ಮಗಳೆಲ್ಲರ ಕರ್ತವ್ಯಕರ್ಮವಾಗಿದೆ. ಧೀಮಂತರೂ ಶ್ರೀಮಂತರೂ ಬೆಂಬಲವಾದರೆ ಬಸವಪ್ಪಶಾಸ್ತ್ರಿಗಳ ಕುಮಾರರಾದ ಮಹ ದೇವ ಶಾಸ್ತ್ರಿಗಳು ಉಳಿದ ಗ್ರಂಥಗಳನ್ನೂ ಪ್ರಕಟಿಸಲು ಸಿದ್ಧರಾಗಿರುವರು. ಕನ್ನಡಿಗರು ಈ ಮಹಾಕಾವ್ಯಕ್ಕೆ ನೆರವಾಗಿ ಆ ಗ್ರಂಥರತ್ನಗಳ ಪ್ರಕಟ ನೆಗೆ ಸಹಾಯಕರಾಗಿ ಯಶಸ್ವಿಗಳಾಗಲಿ.

ಬಸವಪ್ಪಶಾಸ್ತ್ರಿಗಳ ಜೀವನಚರಿತ್ರೆಯು ವಿಷಾದಾಂತವಾದುದು ಅವರು. ಬೆಂಗಳೂರಿನಲ್ಲಿ ಒಂದಾನೊಂದು ದಿನ ತಮ್ಮ ಮಿತ್ರರೊಂದಿಗೆ ಕುದುರೆಯ ಗಾಡಿಯಲ್ಲಿ ಕುಳಿತು ಹೋಗುತ್ತಿದ್ದಾಗ ಗ್ರಹಚಾರದೋಷದಿಂದ ಕುದು ರೆಯು ಬೆದರಿ ಗಾಡಿಯು ಬಿದ್ದು ಅದರೊಳಗಿದ್ದ ಸ್ಥೂಲಕಾಯರಾದ ಶಾಸ್ತ್ರಿಗಳಿಗೆ ಬಲವಾದ ಪೆಟ್ಟು ತಗಲಿತು. ಅಲ್ಲಿಂದ ಮೈಸೂರಿಗೆ ಹೋಗಿ ಶಾಸ್ತ್ರಿಗಳು ಆ ನೋವಿನಿಂದಲೇ ಕೊರಗಿ ಕಡೆಗೆ ತಮ್ಮ ೪೮ನೇ ವಯ ಸ್ಸಿನಲ್ಲಿ ಅಂದರೆ ವಿಕೃತಿಸಂವತ್ಸರದಲ್ಲಿ ಶಿವಸನ್ನಿಧಿಯನ್ನೈದಿದರು.

ಇವರ ಮರಣಕಾಲದಲ್ಲಿ ಚಾಮರಾಜ ಪ್ರಭುಗಳು ಬೊಂಬಾಯಿ ನಗರದಲ್ಲಿದ್ದರಂತೆ. ಇವರ ಆಕಸ್ಮಿಕ ಮರಣವಾರ್ತೆಯನ್ನು ಕೇಳಿ ಮಹಾ ಪ್ರಭುಗಳಿಗೂ ಮಹಾಜನರಿಗೂ ಬಹಳ ದುಃಖವಾಯಿತೆಂಬುದು ವಿದಿತ ವಾಗಿಯೇ ಇದೆ.

ಇವರೀ ಅಪಮೃತ್ಯುವಿನಿಂದ ರೇಣುಕಚರಿತ್ರೆ, ಹರ್ಷಚರಿತ್ರೆ, ಚಂಡ ಕೌಶಿಕನಾಟಕಗಳು ಅಪೂರ್ಣವಾದುವಲ್ಲದೆ ಇವರು ಬರೆಯಬೇಕೆಂದು

ಸಂಕಲ್ಪಿಸಿದ್ದ ಹಲವು ಉತ್ತಮಕಾವ್ಯಗಳು ಕನ್ನಡಿಗರಿಗೆ ಲಭಿಸದಂತಾದವು.

ರಸಿಕಕವಿಯೂ ಗಮಕಿಯೂ ಆದೀತನ ಪುತ್ರಮಿತ್ರಕಳತ್ರಾದಿಗಳಿಗೂ, ಶಿಷ್ಯಪ್ರಶಿಷ್ಯರಿಗೂ, ವಿಶ್ವಕರ್ನಾಟಕದವರಿಗೂ ಎಲ್ಲ ವೀರಶೈವರಿಗೂ ಅತೀವ ದುಃಖವಾಯಿತು.

ಇವರ ಚರಮಶ್ಲೋಕವನ್ನು ಇವರ ಪರಮಮಿತ್ರರಾದ ನಂಜನಗೂಡು ವಿದ್ವಾನ್ ಸುಬ್ಬಾಶಾಸ್ತ್ರಿಗಳೂ ಇವರ ಮುಖ್ಯ ಶಿಷ್ಯರಾದ ಮಹಾವಿದ್ವಾನ್ ಸಿ. ಆರ್. ಕರಿಬಸವಶಾಸ್ತ್ರಿಗಳೂ ಬರೆದು ಪ್ರಕಟಿಸಿರುವರು. ಆ ಉಭಯಪಂಡಿತರ ಪದ್ಯಗಳೂ ವಾಚಕರ ಅವಗಾಹನೆಗೆ ಬರಲೆಂದು ಅವನ್ನು ಮುಂದೆ ಸಂಗ್ರಹಿಸಿ ಬರೆದಿರುವೆವು. ಅವನ್ನು ವಾಚಕರು ಮನಸಿಟ್ಟು ಓದಿದರೆ ಬಸವಪ್ಪಶಾಸ್ತ್ರಿಗಳ ವಿಷಯವಾಗಿ ನಾವು ಬರೆದಿರುವುದರಲ್ಲಿ ಎಳ್ಳಷ್ಟೂ ಉತ್ಪ್ರೇಕ್ಷೆಯಿಲ್ಲವೆಂಬುದನ್ನು ಮನಗಾಣಬಹುದು.

## ಆಸ್ಥಾನ ಕವಿ ಬಸವಪ್ಪಶಾಸ್ತ್ರಿಗಳ ಚರಮಪದ್ಯಗಳು.

ಭಾ॥ ಷ॥ ರಸಕವಿತ್ವದೊಳಸಮನೆನಿಸುವ ।
ಜಸವುಪಸರಿಸುತಿರಲು ಜಗದೊಳು ।
ಮಸಣದೊಡೆಯನ ಸೇರ್ದನಾ ಬಸವಪ್ಪಶಾಸ್ತ್ರಿಯೆನೆ ॥
ವಸುಧೆಮಾಡಿದ ದುಷ್ಕೃತವೊ ಮೇಣ್ ।
ರಸಿಕಲೋಕದ ದುರ್ದಶೆಯೋ ಪೊಂ ।
ಬಸಿರನೀಪರಿ ಬರೆದನೇತಕೆ ಹಾ ಮಹಾದೇವಾ ॥೧॥

ಕಂದ॥ ನವಕಾಳಿದಾಸನೆಂದಾ ।
ಕವಿಸಭೆಯೊಳ್ ಪೆಸರನಾಂತ ಜಸಮುಜ್ವಳಿಸಲ್ ॥
ಶಿವನ ಮಹಾಪಾದಸರೋ ।
ಜವಸೇರ್ದುಂ ಬಸವಪ್ಪಶಾಸ್ತ್ರಿ ಜೀವಿಸನಲ್ತೇ ॥೨॥

ಶೋಕಿಪುದೇನಿದ ತೆಗೆ ಪರ ।
ಲೋಕಕೆ ಬಸವಪ್ಪಶಾಸ್ತ್ರಿ ಪೋದುದಕೀಗಳ್ ॥
ಲೋಕೋತ್ತರ ಕವಿಯೆಂದು ವಿ ।
ವೇಕಿಗಳಿಂ ಶ್ಲಾಘ್ಯನಾದನಾತನೆ ಧನ್ಯಂ ॥೩॥

ಬಸವಪ್ಪಶಾಸ್ತ್ರಿಯಳಿಯಲ್ ।
ವ್ಯಸನಮದೆಳ್ಳಿನಿತು ಮೆನ್ನ ಮನದೊಳಗಿಲ್ಲಂ ॥
ರಸಕವಿತಾಂಗನೆ ಹಿಮದೊಳ್ ।
ಬಸವಳಿದಜ್ಜಿನಿಪೊಲಾದಳೆಂಬುದೆ ದುಗುಡಂ ॥೪॥

ಕನ್ನಡದ ಕಬ್ಬಮದೂಹಿಸ ।
ಲಿನ್ನೇಂ ಪುಟ್ಟುಗುವೆ ರಸಿಕರಂಜನ ಚತುರಂ ॥
ಮುನ್ನೆ ಬಸವಪ್ಪಶಾಸ್ತ್ರಿಯ ।
ಚೆನ್ನನೆ ಪೇಳಿರ್ಪ ಕೃತಿಯನುಳಿದೀ ಜಗದೊಳ್ ॥೫॥

ಇಂತು ಆಸ್ಥಾನಕವಿ

**ನಂಜನಗೂಡು ಸುಬ್ಬಾಶಾಸ್ತ್ರಿಗಳು.**

## ಮಹಾಕವಿ ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಗಳ ಸಂಕ್ಷಿಪ್ತ ಜೀವನಗಾನ ಚರಿತ್ರೆ ಪದ್ಯಗಳು.

ಕಂದ॥ ನೆರೆಮೆರೆವ ವಿಕೃತಿಸಂವ ।
ತ್ಸರಗತ ಮಾಘಾಖ್ಯಮಾಸಸಿತ ಪಕ್ಷಪರಿ॥
ಸ್ಫುರಿತ ತ್ರಯೋದಶೀ ತಿಥಿ ।
ವರ ಘೋಷಿತ ಕಮಲಮಿತ್ರ ಸುತವಾಸರದೊಳ್ ॥೧॥

ಅರಮನೆಯಾಸ್ಥಾನಕವೀ ।
ಶ್ವರನೆಂಬ ನೆಗಳ್ತೆವಡೆದು ರಂಜಿಸುತಿರ್ದಾ ॥
ವರ ಬಸವಪ್ಪಶಾಸ್ತ್ರಿ ಪಿರಿದ ।
ಚ್ಚರಿಯಂ ಪರಲೋಕಕಹಹ ಪಯಣಂಗೊಂಡಂ ॥೨॥

ಈ ವಸುಧಾ ಬುಧಜನ ಕ ।
ರ್ಣಾವನಿಯೊಳ್ ಸೂಕ್ತಿರಸಮನುರೆ ಸುರಿಯುತ್ತುಂ ॥
ತೀವಿರ್ದು ಜೀವನಂ ಕಿಡ ।
ಲೇವೇಳ್ವೆಂ ಮುಗಿಲತೆರದೆ ಮರೆಯಾದನಿವಂ ॥೩॥

(ವಚನಃ— ಆತನ ಚರಿತ್ರಮಂ ಸಂಕ್ಷೇಪದಿಂ ಪೇಳ್ವೆನದೆಂತೆನೆ.)

ಶುಭಕೃದ್ವತ್ಸರದೊಳ್ಸ ।
ದ್ವಿಭವದೆ ಜನಿಸುತ್ತೆ ಬಾಲ್ಯದೊಳೆ ನಲವಿಂದಂ ॥

ಸಂಕಲ್ಪಿಸಿದ್ದ ಹಲವು ಉತ್ತಮಕಾವ್ಯಗಳು ಕನ್ನಡಿಗರಿಗೆ ಲಭಿಸದಂತಾದವು.

ರಸಿಕಕವಿಯೂ ಗಮಕಿಯೂ ಆದೀತನ ಪುತ್ರಮಿತ್ರಕಳತ್ರಾದಿಗಳಿಗೂ, ಶಿಷ್ಯಪ್ರಶಿಷ್ಯರಿಗೂ, ವಿಶ್ವಕರ್ನಾಟಕದವರಿಗೂ ಎಲ್ಲ ವೀರಶೈವರಿಗೂ ಅತೀವ ದುಃಖವಾಯಿತು.

ಇವರ ಚರಮಶ್ಲೋಕವನ್ನು ಇವರ ಪರಮಮಿತ್ರರಾದ ನಂಜನಗೂಡು ವಿದ್ವಾನ್ ಸುಬ್ಬಾಶಾಸ್ತ್ರಿಗಳೂ ಇವರ ಮುಖ್ಯ ಶಿಷ್ಯರಾದ ಮಹಾವಿದ್ವಾನ್ ಪಿ. ಆರ್. ಕರಿಬಸವಶಾಸ್ತ್ರಿಗಳೂ ಬರೆದು ಪ್ರಕಟಿಸಿರುವರು. ಆ ಉಭಯಪಂಡಿತರ ಪದ್ಯಗಳೂ ವಾಚಕರ ಅವಗಾಹನೆಗೆ ಬರಲೆಂದು ಅವನ್ನು ಮುಂದೆ ಸಂಗ್ರಹಿಸಿ ಬರೆದಿರುವೆವು. ಅವನ್ನು ವಾಚಕರು ಮನವಿಟ್ಟು ಓದಿದರೆ ಬಸವಪ್ಪಶಾಸ್ತ್ರಿಗಳ ವಿಷಯವಾಗಿ ನಾವು ಬರೆದಿರುವುದರಲ್ಲಿ ಎಳ್ಳಷ್ಟೂ ಉತ್ಪ್ರೇಕ್ಷೆಯಿಲ್ಲವೆಂಬುದನ್ನು ಮನಗಾಣಬಹುದು.

## ಆಸ್ಥಾನ ಕವಿ ಬಸವಪ್ಪಶಾಸ್ತ್ರಿಗಳ ಚರಮಪದ್ಯಗಳು.

ಭಾ॥ ಷ॥ ರಸಕವಿತ್ವದೊಳಸಮನೆನಿಸುವ ।
ಜಸವುಪಸರಿಸುತಿರಲು ಜಗದೊಳು ।
ಮುಸಣದೊಡೆಯನ ಸೇರ್ದನಾ ಬಸವಪ್ಪಶಾಸ್ತ್ರಿಯೆನೆ ॥
ವಸುಧೆಮಾಡದ ದುಷ್ಕೃತವೊ ಮೇಣ್ ।
ರಸಿಕಲೋಕದ ದುರ್ದಶೆಯೋ ಪೊಂ ।
ಬಸಿರನೀಪರಿ ಬರೆದನೇತಕೆ ಹಾ ಮಹಾದೇವಾ ॥೧॥

ಕಂದ॥ ನವಕಾಳಿದಾಸನೆಂದಾ ।
ಕವಿಸಭೆಯೊಳ್ ಪೆಸರನಾಂತ ಜಸಮುಜ್ವಳಿಸಲ್ ॥
ಶಿವನ ಮಹಾಪಾದಸರೋ ।
ಜವಸೇರ್ದುಂ ಬಸವಪ್ಪಶಾಸ್ತ್ರಿ ಜೀವಿಪನಲ್ತೇ ॥೨॥

ಶೋಕಿಪುದೇನಿದ ತೆಗೆ ಪರ ।
ಲೋಕಕೆ ಬಸವಪ್ಪಶಾಸ್ತ್ರಿ ಪೋದುದಕೀಗಳ್ ॥
ಲೋಕೋತ್ತರ ಕವಿಯೆಂದು ವಿ ।
ವೇಕಿಗಳಿಂ ಶ್ಲಾಘ್ಯನಾದನಾತನೆ ಧನ್ಯಂ ॥೩॥

ಬಸವಪ್ಪಶಾಸ್ತ್ರಿಯಳಿಯಲ್ ।
ವ್ಯಸನಮುದೆಳ್ಳೆನಿತು ಮೆನ್ನ ಮನದೊಳಗಿಲ್ಲಂ ॥
ರಸಕವಿತಾಂಗನೆ ಹಿಮುದೊಳ್ ।
ಬಸವಳಿದಜ್ಜಿ ಸಿಪೊಲಾದಳೆಂಬುದೆ ದುಗುಡಂ ॥೪॥

ಕನ್ನಡದ ಕಬ್ಬಮುದೂಹಿಸ ।
ಲಿನ್ನೇಂ ಪುಟ್ಟುಗುಮೆ ರಸಿಕರಂಜನ ಚತುರಂ ॥
ಮುನ್ನೆ ಬಸವಪ್ಪಶಾಸ್ತ್ರಿಯ ।
ಚೆನ್ನೆನೆ ಪೇಳಿರ್ಪ ಕೃತಿಯನುಳಿದೀ ಜಗದೊಳ್ ॥೫॥

ಇಂತು ಆಸ್ಥಾನಕವಿ
**ನಂಜನಗೂಡು ಸುಬ್ಬಾಶಾಸ್ತ್ರಿಗಳು.**

## ಮಹಾಕವಿ ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಗಳ ಸಂಕ್ಷಿಪ್ತ ಜೀವಮಾನ ಚರಿತ್ರೆ ಪದ್ಯಗಳು.

ಕಂದ॥ ನೆರೆಮೆರೆವ ವಿಕೃತಿಸಂವ ।
ತ್ಸರಗತ ಮಾಘಾಖ್ಯಮಾಸಸಿತ ಪಕ್ಷಪರಿ॥
ಸ್ಫುರಿತ ತ್ರಯೋದಶೀ ತಿಥಿ ।
ವರ ಪ್ರೋಷಿತ ಕಮಲಮಿತ್ರ ಸುತವಾಸರದೊಳ್ ॥೧॥

ಅರಮನೆಯಾಸ್ಥಾನಕವೀ ।
ಶ್ವರನೆಂಬ ನೆಗಳ್ತೆವಡೆದು ರಂಜಿಸುತಿರ್ದಾ ॥
ವರ ಬಸವಪ್ಪಶಾಸ್ತ್ರಿ ಪಿರಿದ ।
ಚ್ಚರಿಯಂ ಪರಲೋಕಕಹಹ ಪಯಣಂಗೊಂಡಂ ॥೨॥

ಈ ವಸುಧಾ ಬುಧಜನ ಕ ।
ರ್ಣಾವನಿಯೊಳ್ ಸೂಕ್ತಿರಸಮನುರೆ ಸುರಿಯುತ್ತುಂ ॥
ತೀವಿರ್ದು ಜೀವನಂ ಕಿಡ ।
ಲೇವೇಳ್ವೆಂ ಮುಗಿಲತೆರದೆ ಮರೆಯಾದಸಿವಂ ॥೩॥

(ವಚನಃ— ಆತನ ಚರಿತ್ರಮಂ ಸಂಕ್ಷೇಪದಿಂ ಪೇಳ್ವೆನದೆಂತೆನೆ.)

ಶುಭುಕೃದ್ವತ್ಸರದೊಳ್ಸ ।
ದ್ವಿಭವದೆ ಜನಿಸುತ್ತೆ ಬಾಲ್ಯದೊಳೆ ನಲವಿಂದಂ ॥

ಉಭಯ ಸುಭಾಷೆಗಳೊಳ್ ದು ।
ರ್ಲಭವಪ್ಪ ವಿಚಕ್ಷಣತೆಯನುರೆ ಕೈಗೊಂಡಂ ॥೪॥
ಪದಿನೆಂಟು ವಯಸ್ಸಿನೊಳೊವ ।
ಪಿವ ಕವಿತಾಶಕ್ತಿಯಿಂದೆ ಬುಧನಿವಹಕ್ಕಂ ॥
ಮುದವೊಗೆಯೆ ಕೃಷ್ಣರಾಜಾ ।
ಭ್ಯುದಯ ಮೆನಿಪ್ಪೊಂದು ಕೃತಿಯ ನಿರದಾಗಿಸಿದಂ ॥೫॥
ನರಕೃಷ್ಣಭೂಮಿಪಾಲಂ ।
ಸಿರವಿಸೆ ತಾಂ ಬಿಲ್ವವೃಕ್ಷ ಪೂಜಾವಿಧಿಯಂ ॥
ಸುರುಚಿರ ಸಂಸ್ಕೃತ ಭಾಷೆಯೊ ।
ಳಿರಿದೆನೆ ವಿರಚಿಸಿದನಾತ್ಮ ಕೌಶಲದಿಂದಂ ॥೬॥
ಕನ್ನಡಭಾರತ ಮೊದಲಾ ।
ದುನ್ನತ ಮೆನಿಸಖಿಲ ಕಾವ್ಯನಿಕರವನೆಲ್ಲರ್ ॥
ಮನ್ನಿಸೆ ಕೆರೆದಿಂ ರಾಗದೆ ।
ಚೆನ್ನೆಸವಿನವೋದಿ ಮೋದದೊಳಗಾಗಿಸಿದಂ ॥೭॥

ವೃತ್ತ॥ ಶೃಂಗಾರಕ್ಕಾಗರಂ ತಾನೆನಿಸಿ ಮೆರೆವ ಶಾಕುಂತಳಾಭಿಖ್ಯಮಾದು
ತ್ತುಂಗಾಲಂಕಾರಮಂ ನಾಟಕಮನೆಲಸದುದ್ದಾಮ ಸಾಹಿತ್ಯಮುಂ
ಮೋದ್
ಸಂಗೀತಪ್ರೌಢಿಯುಂ ಸಂಗಳಿಸೆ ರಚಿಸಿ ಕರ್ಣಾಟಕವಾಗ್ಧಾಟಿ
ಯಿಂದಂ
ರಂಗಾಚಾರ್ಯಾಖ್ಯಮಂತ್ರಿ ಪ್ರವರಸಭೆಯೊಳೊಲ್ದೋದಿದಂ ಜಾಣ್ಮೆ
ಯಿಂದಂ ॥೮॥

ಕರ್ಣಾನಂದಮದಾಗಲ್ ।
ಕರ್ಣಾಟಕಕಾಳಿದಾಸನೆಂಬೀ ಬಿರುದಂ ॥
ತೂರ್ಣದೊಳಿತ್ತಂ ವಿದ್ವತ್ ।
ಪೂರ್ಣ ಸಭಾಮಂಡಲಿಯೊಳಗಾಮಂತ್ರೀಶಂ ॥೯॥
ಉತ್ತರರಾಮಚರಿತ್ರಮ ।
ನುತ್ತಮ ಮಾಗೊಪ್ಪುತಿರ್ಪ ರತ್ನಾವಳಿಯುಂ ॥
ಬಿತ್ತರಿಸಿ ಕನ್ನಡದೆ ತಾ ।
ನಿತ್ತಂ ಶ್ರೀ ಚಾಮರಾಜನಾಟಕಸಭೆಗಂ ॥೧೦॥

ನಳಭೂಪಚಂಪುವಂ ಮಂ ।
ಗಳಕರ ಸಂದರ್ಭ ಚಂಡಕೌಶಿಕಮುಂ ಕ್ರೋ ।
ಮಲ ವಿಕ್ರಮೋರ್ವಶೀಯ ಮು ।
ನೊಲಿದೆಸಗಿದನಲ್ತೆ ಚಿತ್ರಮೆನೆ ಕನ್ನಡದೊಳ್ ॥೧೧॥

ವರಶೂರಸೇನಚರಿತವ ।
ಸುರುಚಿರವಹ ಸರಸ ಮಾಲತೀಮಾಧವಮಂ ।
ವಿರಚಿಸಿದಂ ಕವಿಕಲಭಂ ।
ನಿರುಪಮ ಮಹಸಕ್ಷಿಣಾಸುಮೂರ್ತ್ಯಷ್ಟಕಮಂ ॥೧೨॥

ಸಾವಿತ್ರೀ ಸುಚರಿತ್ರ ಮು ।
ನಾವಿಬುಧ ವಿನುತ್ಯ ಭರ್ತೃಹರಿ ವಿರಚಿತಮ ।
ಪ್ಪಾವಿತತ ಸುಭಾಷಿತಮಂ ।
ಕೋವಿದರುರೆ ಮೆಚ್ಚೆಮಾಡಿದಂ ಕನ್ನಡದೊಳ್ ॥೧೩॥

ಶಂಕರಶತಕಮನುರೆಯ ಕ ।
ಳಂಕಲಸನ್ನೀತಿ ಸಾರಸಂಗ್ರಹಮಂ ಮೇಣ್ ॥
ಶಂಕಾವಿಹೀನ ಧೀರ ನಿ ।
ರಂಕುಶ ಮತಿ ರಚಿಸಿದಂ ನಲವಿಂದಂ ॥೧೪॥

ಪೊಸತೆನೆಗೀರ್ವಾಣೋಕ್ತಿಯಿ ।
ನುಸುರ್ದಂ ಮುದದಿಂ ತ್ರಿಷಷ್ಟಿಗಣನುತಿಶಿವಭ ॥
ಕ್ತಿಸುಧಾತರಂಗಿಣಿಗಳಂ ।
ರಸಿಕಂ ನಕ್ಷತ್ರಮಾಲೆಯಂ ಸರಶಿವೆಯಾ ॥೧೫॥

ಆರ್ಯಾಶತಕಮನತಿಮಾ ।
ಧುರ್ಯಸಮೇತಾಷ್ಟಮೂರ್ತಿತನಯಾಷ್ಟಕಮಂ ॥
ಚರ್ಯಾಧಿಕಾರ್ಯನತ್ಯಾ ।
ಶ್ಚರ್ಯಾಮರವಾಣಿಯಿಂದ ಮೆಸಗಿದ ನ್ನೊಲ್ದಿಂ ॥೧೬॥

ಅಂಬಾಶೋಡಶಮಂಜರಿ ।
ಯೆಂಬಾ ಮೋದಪ್ರದಾಯಕಸ್ತವಮಣಿಯಂ ॥
ಇಂಬಾಗಿರೆ ಸಂಸ್ಕೃತದಿಂ ।
ಕುಂಭಿಣಿಯ ಬುಧರ್ಕಳೊಲಿವ ತೆರದಿಂ ನೆಗಳ್ದಂ ॥೧೭॥

ಬಸವೇಶಾಷ್ಟಕಮುಂ ಸಂ ।
ತಸದಿಂದೆ ಸದಾಶಿವಾಷ್ಟಕ ಮನತಿಮುದದಿಂ ॥
ವಸುಧೆಯ ಜನದೊಳ್ ಭಕ್ತಿ ।
ಪ್ರಸರಣಮುಪ್ಪಂತೆ ಮಾಡಿದಂ ಸದ್ರುಚಿಯಿಂ ॥೧೮॥
ರೇಣುಕಚರಿತ್ರೆಯಂ ನೆರೆ ।
ಜಾಣಿಂ ಸಮೆಯುತ್ತುಮಿರ್ಪ ಸಮಯದೊಳಕಟಾ ॥
ಪ್ರಾಣವಿಯೋಗಂ ಸಮನಿಸಿ ।
ತಾಣಂ ಕವಿಪುಂಗವಂಗೆ ವಿಧಿವಶದಿಂದಂ ॥೧೯॥
ಕನ್ನಡಗಬ್ಬದ ಹಬ್ಬಮು ।
ದಿನ್ನೆಲ್ಲಿ ಮನೋಜ್ಞಮೆನಿಪ ಪುಸ್ತಕಪಠನಂ ॥
ಇನ್ನೆಲ್ಲಿ ಸುಕವಿತಾಂಗನೆ ।
ಯುನ್ನತ ಮಾದುತ್ತಮಾಂಗಮಾದುದು ಮನಂ ॥೨೦॥
ಹರ್ಷಚರಿತ್ರಮನಿದನೀ ।
ವರ್ಷಂ ಪೂರೈಸವೇಳ್ಕುಮೆಂದಿರೆ ಮೃತಿಯಾ ॥
ಕರ್ಷಿಸಿತವನಂ ಬಲುಹಿಂ ।
ಘರ್ಷಿಸಲೇಯೀಶ್ವರಾರದೃಷ್ಟಮದಿಳೆಯೊಳ್ ॥೨೧॥
ರಸಿಕಶಿರೋಮಣಿಯಾತಂ ।
ರಸೆಯೊಳ್ ಪಲಕಾಲಮಿನ್ನುಮಿರದೀಗಳೆ ತಾ ॥
ನಸುವಂ ಬಿಟ್ಟುದರಿಂಬೇ ।
ವಸವಡೆಯುದರಾರ್ ಗುಣಜ್ಞರಾಗಿಹ ವಿಬುಧರ್ ॥೨೨॥

ತಾ॥ ೨೬-೨-೧೯೫೧ **ಪಿ. ಆರ್. ಕರಿಬಸವಶಾಸ್ತ್ರಿ**

**ಮೈಸೂರು.** ಮಹಾರಾಜಾಕಾಲೇಜ ಕರ್ಣಾಟಕ ಪ್ರಥಮಪಂಡಿತ.

ಹೀಗೆ ಮಹಾಮಹಾವಿದ್ವಾಂಸರಿಂದ ಸಂಸ್ತುತ್ಯಮಾನರಾದ ಬಸವಪ್ಪ ಶಾಸ್ತ್ರಿಗಳು ಕನ್ನಡನಾಡಿಗೂ ನುಡಿಗೂ ಮಹೋಪಕಾರ ಮಾಡಿ ತಮ್ಮ ಜೀವಿತವನ್ನು ಸಫಲಮಾಡಿಕೊಂಡು ಕೀರ್ತಿಶೇಷರಾದರು.

ಅವರ ಉಪಕಾರಸ್ಮರಣೆಯನ್ನು ಮಾಡತಕ್ಕುದು ಇಂದಿನ ಹಾಗೂ ಮುಂದಿನ ಕನ್ನಡಿಗರ ಮೇಲೆ ಬಿದ್ದ ಭಾರವಾಗಿದೆ.

# ಬಸವೇಶ್ವರನ ಸಮಾಜಸುಧಾರಣೆ.

(ಲೇಖಕ:—ವ್ಹಿ. ಸಿ. ಯಗಟಿ ಬಿ. ಏ. ಎಲ್. ಎಲ್. ಬಿ. ಹಾವೇರಿ.)

ಸಮಾನತ್ವ:— ಬಸವೇಶ್ವರನು ಧರ್ಮಸುಧಾರಕನಲ್ಲ, ಸಮಾಜ ಸುಧಾರಕನು. ವೀರಶೈವ ಧರ್ಮದಲ್ಲಿ ಜಾತಿಭೇದವಿಲ್ಲ. ಆದರೆ ಉದ್ಯೋಗಗಳ ಮೂಲಕ ಜನರಲ್ಲಿ ಆಚರಣೆಗಳು ವ್ಯತ್ಯಾಸವಾದ್ದರಿಂದ ನಾವು ಹೆಚ್ಚು, ತಾವು ಹೆಚ್ಚು ಎಂಬ ಅವಾಂತರ ಭೇದಗಳು ಮಧ್ಯದಲ್ಲಿ ಹುಟ್ಟಿ ವೈಷಮ್ಯವು ಜನರಲ್ಲಿ ಬೆಳೆಯಿತು. ಬಸವೇಶ್ವರನು ಅವತರಿಸಿದ ವೇಳೆಯ ಸುಮಾರಕ್ಕೆ ಸಮಾಜದಲ್ಲಿ ಈ ವೈಷಮ್ಯದಿಂದ ಐಕ್ಯಮತ್ಯವೂ ಸಹನಶೀಲತೆಯೂ ತಪ್ಪಿಹೋಗಿದ್ದವು. ಬಸವೇಶ್ವರನು ಈ ಒಳಭೇದಗಳನ್ನು ಕಿತ್ತುಹಾಕಿ ಶಿವಭಕ್ತರೆಲ್ಲರೂ ಸಮಾನರೆಂಬದನ್ನು ಸ್ಥಿರಗೊಳಿಸಿದನು. ಆತನು ತನ್ನ ವಚನದಲ್ಲಿ "ಆವಕುಲವಾದರೇನು ಶಿವಲಿಂಗವಿದ್ದವನೆ ಕುಲಜ. ಕುಲವನರಸುವರೆ ಶರಣರಲ್ಲಿ?" ಎಂದು ಹೇಳಿದ್ದಾನೆ. ಆದರೆ ಲಿಂಗವಿಲ್ಲದವರನ್ನು ಭವಿಗಳೆಂದು ಹೇಳಿ ಅವರೊಡನೆ ಊಟಉಪಚಾರಗಳನ್ನು ಮಾಡಬಾರದೆಂತಲೂ ಅವರು ಲಿಂಗಾಂಗಿಗಳೊಡನೆ ಸಮಾನರಲ್ಲವೆಂದೂ ಹೀಗೆ ಹೇಳಿದ್ದಾನೆ.

"ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೆಯೆಂಬೆ। ಹಾರುವ ಮೊದಲು ಶ್ವಪಚ ಕಡೆಯಾಗಿ ಭವಿಯಾದವರನೆಲ್ಲರನೊಂದೆ ಯೆಂಬೆ। ಹೀಗೆಂದು ನಂಬುವದೆನ್ನ ಮನವು. ಈ ನುಡಿದ ನುಡಿಯೊಳಗೆ ಎಳ್ಳುಮೊನೆಯಷ್ಟು ಸಂದೇಹವುಳ್ಳರೆ ಹಲ್ಲುದೋರಿ ಮೂಗ ಕೊಯ್ಯ ಕೂಡಲಸಂಗಮದೇವಾ ॥

ಬಸವನು ಅನೇಕ ಜಾತಿಯವರನ್ನು ಲಿಂಗಾಯತಮತಕ್ಕೆ ಸೇರಿಸಿದನು. ಆದರೆ ಅವರು ಎಂಥವರೆಂದರೆ ಮಹಾಜ್ಞಾನಿಗಳೂ, ಮಹಾಸುಶೀಲರೂ, ಘನವಾದ ಆಚಾರವುಳ್ಳವರೂ, ಕೇವಲ ಸಾತ್ವಿಕಆಹಾರಿಗಳೂ ಆಗಿದ್ದರು. ಅಂಥವರಲ್ಲಿ ಮಾದರ ಚನ್ನಯ್ಯ, ಡೋಹರ ಕಕ್ಕಯ್ಯ ಮೊದಲಾದವರು ಅಂತ್ಯಜರಿದ್ದರು. ಮಡಿವಳ ಮಾಚಿದೇವ, ಹಡಪದಪ್ಪಣ್ಣ ಮೊದಲಾದವರು ಅನೇಕ ಕಾರ್ಯಗಳನ್ನು ಮಾಡುತ್ತಿದ್ದರು. ಹರಳಯ್ಯನು ಮೊಚ್ಚಿ

ಗನು, ಮಧುವರಸನು ಬ್ರಾಹ್ಮಣನು. ಆದರೆ ಇವರು ಲಿಂಗಾಯತರಾದ ಮೇಲೆ ಮಹಾಶರಣರಾದರು. ಬಸವನು ಗುಣಕ್ಕೆ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟನು. ಸಮಾಜದಲ್ಲಿ ಬಲವಾದ ಐಕ್ಯವನ್ನುಂಟುಮಾಡುವ ದೃಷ್ಟಿಯಿಂದಲೇ ಬಸವನು ಒಳಭೇದಗಳನ್ನು ಮುರಿದನು. ಬಸವನ ಉದಾಹರಣೆಯನ್ನೇ ದಯಾನಂದಸರಸ್ವತಿ, ರಾಮಮೋಹನರಾಯ ಮೊದಲಾದ ಆರ್ಯಸಮಾಜ ಮತ್ತು ಬ್ರಹ್ಮಸಮಾಜದ ಸ್ಥಾಪಕರು ಅನುಸರಿಸಿದರು. ಇವರೀರ್ವರು ವರ್ಣಾಶ್ರಮ ಧರ್ಮದಲ್ಲಿರುವ ಹೆಚ್ಚುಕಡಿಮೆಯ ಭಾವವನ್ನು ಬಲವಾಗಿ ಖಂಡಿಸಿ ಜಾತಿಭೇದವೇ ಇಲ್ಲವೆಂತಲೂ ಎಲ್ಲರೂ ಸಮಾನರೆಂತಲೂ ಹೇಳಿದರು. ಬಸವನು ವರ್ಣಾಶ್ರಮ ಧರ್ಮವನ್ನು ಕಿತ್ತುಹಾಕಲಿಲ್ಲ. ಆದರೆ ಸದಾಚಾರಯುಕ್ತರಾದವರು ಯಾವ ಜಾತಿಯವರೇ ಇರಲಿ, ಅವರು ಲಿಂಗಾಯತಧರ್ಮ ಸ್ವೀಕರಿಸಲು ಧರ್ಮದ ಬಾಗಿಲನ್ನು ತೆರೆದಿಟ್ಟನು. ಈತನು ಮಾಂಸಾಹಾರಿಗಳನ್ನೂ ಮದ್ಯಪಾನಿಗಳನ್ನೂ ನಿಷೇಧಿಸಿದ್ದಾನೆ. "ಹೋಮನೇಮದಲ್ಲಿ ಹೋತನ ಕೊಂದು ತಿಂಬ ಅನಾಮಿಕರೊಡನಾಡಿ ಗೆಲುವದೇನೋ" ಎಂಬ ವಚನದಿಂದ ಪ್ರಾಣಿಗಳ ವಧೆಯನ್ನು ನಿಂದಿಸಿದ್ದಾನೆ. ಅನಾಚಾರಿಗಳನ್ನು ಕಂಡರೆ ಅವನಿಗೆ ಬಹು ಕೋಪವು, ಆದನ್ನು ಅವನು ಹೀಗೆ ಪ್ರಕಟಿಸಿದ್ದಾನೆ—"ಕೊಲ್ಲುವವನೆ ಮಾದಿಗ, ಹೊಲಸು ತಿಂಬುವವನೆ ಹೊಲೆಯ, ಕುಲವೇನೋ ಆವಂಧಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ ಕೂಡಲಸಂಗಮದೇವಾ ಶರಣರೆಲ್ಲಾ ಕುಲಜರು.

ಸ್ತ್ರೀಸುಧಾರಣೆಃ—ಬಸವೇಶ್ವರನು ಸ್ತ್ರೀಯರಿಗೆ ಪುರುಷರೊಡನೆ ಸಮಾನತೆಯನ್ನು ಕಲ್ಪಿಸಿದನು. ಅನುಭವ ಮಂಟಪದಲ್ಲಿಯೂ ಅವರನ್ನು ಸದಸ್ಯರನ್ನಾಗಿ ಸೇರಿಸಿಕೊಂಡನು. ಈ ಸೌಕರ್ಯವನ್ನು ಅವನು ಕಲ್ಪಿಸಿದ್ದರಿಂದಲೇ ಮುಕ್ತಾಯಿ, ಮಹದೇವಿಯಕ್ಕ, ರೇವವ್ವೆ, ರೇಚವ್ವೆ, ವೀರಮ್ಮ ಮೊದಲಾದ ಸ್ತ್ರೀರತ್ನಗಳುಂಟಾದರು. ಸ್ತ್ರೀ ವಿದ್ಯಾಭ್ಯಾಸಕ್ಕೆ ಆತನು ಗೌರವವನ್ನು ಕೊಟ್ಟನು. ಬಾಲ್ಯವಿವಾಹವನ್ನು ನಿಲ್ಲಿಸಿದನು. ಬುದ್ಧನಂತೆ ಸ್ತ್ರೀಯರು ಯೋಗಿನಿಯರಾಗಲಿಕ್ಕೆ ಸ್ವಾತಂತ್ರ್ಯವನ್ನು ಕೊಟ್ಟನು. ವೀರಶೈವರಲ್ಲಿ ಆದಿಯಿಂದಲೂ ಸ್ತ್ರೀಯರಿಗೆ ಪುರುಷರಂತೆಯೇ ಎಲ್ಲ ಸಂಸ್ಕಾರಗಳುಂಟು. ಧರ್ಮವಿಧಿಗಳಲ್ಲಿ ಪುರುಷರಿಗಿರುವಂತೆಯೇ ಅವರಿಗೂ ಸಮ

ವಾದ ಅಂಗವುಂಟು. ಸ್ತ್ರೀಯರ ವಿಷಯದಲ್ಲಿದ್ದ ಅನಾದರವನ್ನು ಕಳೆದು ಬಸವನು ಅದರ ಪರ್ಚಸ್ಸು ಯೋಗ್ಯತೆಗಳನ್ನು ಬೆಳಿಸಿದನು.

ಉದ್ಯೋಗ ಮರ್ಯಾದೆ—"ಕಾಯಕವೇ ಕೈಲಾಸ" ವೆಂದು ಬಸವನು ಎಲ್ಲ ಜನರು ಯಾವಾಗಲೂ ಉದ್ಯೋಗಿಗಳಾಗಿರುವಂತೆ ಹೇಳುತ್ತಿದ್ದನು. ಯಾವ ಸಣ್ಣ ಉದ್ಯೋಗವೇ ಇರಲಿ ಅದನ್ನು ಹೀನವಾದದ್ದೆಂದು ತಿಳಿಯಬಾರದೆಂದು ಅವನ ಮತವು. ಇದನ್ನು ತನ್ನ ವಚನದಲ್ಲಿ ಹೀಗೆ ಹೇಳಿದ್ದಾನೆ—"ಭವಿಯ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನೆಂದು ನುಡಿವರೈಯ ಪ್ರಮಥರು. ಕೊಡುವೆನೆ ಉತ್ತರವನವರಿಗೆ? ಕೂಡಲನ್ನೈನು। ಹೊಲೆ ಹೊಲೆಯರ ಮನೆಯ ಹೊಕ್ಕಾದರೆಯು ಸಲೆಕೈಕೂಲಿಯ ಮಾಡಿಯಾದರೆಯು। ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕೆ ಕುದಿವೆನಾದರೆ ತಲೆದಂಡ ತಲೆದಂಡವಯ್ಯ ಕೂಡಲಸಂಗಮದೇವಾ॥ ಅನೇಕ ಶರಣರೂ ಸಣ್ಣ ಸಣ್ಣ ಕಾಯಕ ಮಾಡುತ್ತಿದ್ದರು. ಅವನ್ನು ಅವರು ಪವಿತ್ರ ಕರ್ತವ್ಯವೆಂದು ತಿಳಿದಿದ್ದರು. ಮಡಿವಳ ಮಾಚಯ್ಯನವರು ಬಟ್ಟೆಗಳನ್ನು ತೊಳೆದು ಜೀವಿಸುತ್ತಿದ್ದರು. ಮೋಳಿಗೆಯ ಮಾರಯ್ಯನವರು ಕಟ್ಟಿಗೆ ಹೊರೆಯನ್ನು ಮಾರಿ ಅದರಲ್ಲಿಯೇ ಕುಟುಂಬವನ್ನೂ ಜಂಗಮರನ್ನೂ ತೃಪ್ತಿಪಡಿಸುತ್ತಿದ್ದನು. ಇವನ್ನು ತಿಳಿದ ಬಸವೇಶ್ವರನು ಆತನ ಬಡತನವನ್ನು ಹಿಂಗಿಸಬೇಕೆಂದು ಮಾರಯ್ಯನು ಮನೆಯಲ್ಲಿ ಇಲ್ಲದಾಗ ಅವನ ಮನೆಗೆ ಹೋದನು. ಜಂಗಮಪ್ರೇಮಿಯಾದ ಮಾರಯ್ಯನ ಹೆಂಡತಿಯು ಬಸವನಿಗೆ ಊಟಮಾಡಿಸಿದಳು. ಊಟವಾದಮೇಲೆ ಬಸವನು ನೀರಿನ ಹರಿವೆಯ ಮನೆಯಲ್ಲಿ ೨ ಸಾವಿರ ವರಹದ ಚೀಲವನ್ನಿಟ್ಟುಹೋದನು. ಮಾರಯ್ಯನು ಮಧ್ಯಾಹ್ನಕ್ಕೆ ಮನೆಗೆ ಬರಲು ಹಣದ ಚೀಲವು ಅವನ ದೃಷ್ಟಿಗೆ ಬಿತ್ತು. ಅವನು ಮನೆಗೆ ಯಾರುಬಂದಿದ್ದರೆಂದು ಹೆಂಡತಿಯನ್ನು ಕೇಳಿದನು. 'ಯಾರೋ ಒಬ್ಬ ಭಕ್ತ ಬಂದಿದ್ದನು. ಅವನ ನೆನಪು' ನನಗಿಲ್ಲವೆಂದಳು. ಮಾರಯ್ಯನು ಜ್ಞಾನದೃಷ್ಟಿಯಿಂದ ಭಕ್ತರಮನೆಗೆ ಬರಬೇಕಾದರೆ ಬಸವನೇ ಇರಬೇಕೆಂದು ತಿಳಿದುಕೊಂಡು ಹಣದ ಚೀಲವನ್ನು ಜಂಗಮರಿಗೆ ಹಂಚಿದನು. "ಪರಧನವು ನನಗೇಕೆ? ನನ್ನ ಕಾಯಕವು ನನಗಿಲ್ಲವೇ" ಎಂದನು. ಇದರಂತೆಯೇ ಶಂಕರದಾಸಿಮಯ್ಯನು ಶಿಂಪಿಗ ಕಾಯಕ(ಹೊಲಿಯುವದು) ಮಾಡುತ್ತಿದ್ದನು. ಜೇಡರ ದಾಸಿಮಯ್ಯನು ನೆಯ್ಯುವ ಕಾಯಕ ಮಾಡುತ್ತಿದ್ದನು.

ನುಲಿಯ ಚಂದಯ್ಯನು ಹಗ್ಗ ಮಾಡುತ್ತಿದ್ದನು. ಲಿಂಗಾಯತರಲ್ಲಿ ಈಗಲೂ ಎಲ್ಲ ಉದ್ಯೋಗಗಳನ್ನು ಮಾಡುವವರು ಸಿಗುತ್ತಾರೆ. ಲಿಂಗಾಯತರು ಮಾಡಿದ ಸಾಮಾನುಗಳನ್ನೇ ಲಿಂಗಾಯತರು ಉಪಯೋಗಿಸುತ್ತಿದ್ದರು. ಸಮಾಜದ ಸಾಂಪತ್ತಿಕ ಸ್ಥಿತಿಯನ್ನು ಬೆಳೆಸಬೇಕೆಂಬುದೇ ಬಸವನ ಉದ್ದೇಶವಾಗಿತ್ತು.

ಬೋಧಕರ ಸಂಘಃ--- ಬಸವೇಶ್ವರನು ಲಕ್ಷದ ಮೇಲೆ ತೊಂಭತ್ತಾರುಸಾವಿರ ಜಂಗಮರಿಗೆ ಆಶ್ರಯ ಕೊಟ್ಟಿದ್ದನು. ಇವನು ಕೇವಲ ಕೂಳುಬಕ್ಕರಾಗಿರಲಿಲ್ಲ. ಧರ್ಮಬೋಧೆ ಮಾಡುವ ಪಾದ್ರಿಗಳಾಗಿದ್ದರು. ಇವರು ಭಕ್ತರಲ್ಲಿಯ ಆಚಾರ ವಿಚಾರಗಳನ್ನು ತಿಳಿದುಕೊಂಡು ಂದು ಬಸವನಿಗೆ ವರದಿ ಕೊಡುತ್ತಿದ್ದರು. ಇವರಲ್ಲಿ ಕೆಲವರು ಗುಪ್ತಶೋಧಕರಂತೆ ಕಾರ್ಯಮಾಡುತ್ತಿದ್ದರು. ಇವರು ವೇಷವನ್ನು ಬದಲುಮಾಡಿಕೊಂಡು ಯಾವದಾದರೊಂದು ಊರಿಗೆ ಹೋಗಿ ಅಲ್ಲಿಯ ಚಾವಡಿಯಲ್ಲಾಗಲೀ ಗುಡಿಗಳಲ್ಲಾಗಲೀ ದಾರಿಕಾರರಂತೆ ವಿಶ್ರಮಿಸಿ ಜನರ ಮುಖಾಂತರವಾಗಿ ಯಾರ ಆಚರಣೆಯು ಹೇಗಿರುವದೆಂತಲೂ ಲಿಂಗಾಯತರಾಗಲು ಯಾರು ಅರ್ಹರಾಗಿರುತ್ತಾರೆಂತಲೂ ತಿಳಿದುಕೊಂಡು ಬಂದು ಬಸವನಿಗೆ ಹೇಳುತ್ತಿದ್ದರು. ಆ ಮೇಲೆ ಬಸವನು ಅಲ್ಲಿಗೆ ಬೋಧಕರನ್ನು ಕಳುಹಿಸಿ ಜನರ ಆಚಾರವನ್ನು ತಿದ್ದಿಸುತ್ತಿದ್ದುದಲ್ಲದೆ ಯೋಗ್ಯರಾದವರನ್ನು ಲಿಂಗಾಯತರನ್ನಾಗಿ ಮಾಡಿಕೊಳ್ಳುತ್ತಿದ್ದನು. ಆ ಜಂಗಮರು ಭಕ್ತರಿಂದ ಭಿಕ್ಷೆ ತೆಗೆದುಕೊಳ್ಳುತ್ತಿದ್ದಿಲ್ಲ. ಕೇವಲ ಬೋಧಾಗುರುಗಳಾಗಿದ್ದರು. ಅದರಲ್ಲಿ ಕಾಡುವ ಬೇಡುವ ಕಾಯಕವಿರಲಿಲ್ಲ. ಯಾಕೆಂದರೆ “ಕಾಡುವ ಬೇಡುವ ಜಂಗಮನು ಮನೆಗೆ ಬರಲು ನೀಡಬಾರದು” ಎಂದು ಬಸವನು ಹೇಳಿರುವನು. ಆಗಿನ ಜಂಗಮರು ದುಷ್ಟನಾದ ಭಕ್ತನ ಅನಾಚಾರವನ್ನು ನಿಲ್ಲಿಸುವ ವರೆಗೆ ಕಂಬಕ್ಕೆ ಕುಳಿತು ಉಪವಾಸವಿರುತ್ತಿದ್ದರು. ಇದೊಂದು ತರದ ಸತ್ಯಾಗ್ರಹವಾಗಿತ್ತು. ಆದರೆ ಈಗಿನ ಜಂಗಮರು ದುಡ್ಡು ಕೊಡುವ ವರೆಗೆ ಹೋಗಲೊಲ್ಲೆವೆಂದು ತಿಕ್ಕೆಯ ಕಾಯಕ, ಆವಿಗೆಯ ಕಾಯಕ, ಗಂಟಿ ಕಾಯಕ ಮೊದಲಾದ ಹೆಸರಿನಿಂದ ಭಕ್ತರನ್ನು ಕಾಡುತ್ತಾರೆ. ಇದೊಂದು ತರದ ದುರಾಗ್ರಹವು. ಈಗ ಜಂಗಮರು ಆಲಸ್ಯದಲ್ಲಿಯೂ, ಬಡತನದಲ್ಲಿಯೂ, ಅವಿದ್ಯೆಯಲ್ಲಿಯೂ ಮುಳುಗಿ ಹೀನಸ್ಥಿತಿಯಲ್ಲಿದ್ದಾರೆ. ಸಮಾಜಕ್ಕೆ ಭಾರವಾಗಿರುವ ಇವರನ್ನು ಸಮಾಜವೇ ಎತ್ತಬೇಕಾಗಿದೆ. ಇದಕೆ

ಬಲ್ಲಂಥ ಬೋಧಕರು ಬೇಕು. ಬಸವನು ಏರ್ಪಡಿಸಿದಂತೆ ಸಮಾಜವೇ ಬೋಧಕರ ಸಂಘಗಳನ್ನು ಸ್ಥಾಪಿಸಬೇಕು. ಸಭೆಗಳಲ್ಲಿ ಹತ್ತು ಹರಟುವದಕ್ಕಿಂತ ಕೈಯಿಂದ ಒಂದು ಮಾಡುವದು ಒಳಿತು. ಈಗ ಸಮಾಜಸಂಘಟನೆಗೂ ಜನರಲ್ಲಿಯೂ ಒಡಕು ಮುರಿದು ಒಂದುಮಾಡುವದಕ್ಕೂ ಬಸವನಂಥ ಬಲಾಢ್ಯರು ಬೇಕು. ಸಂಸ್ಕೃತ ಬಸವಪುರಾಣದಲ್ಲಿ(ವ್ಯಾಸೋಕ್ತ) ಹೇಳಿದ ಮೇರೆಗೆ ಶ್ರೀಶೈಲ ಬೆಟ್ಟದಲ್ಲಿ ಇಂಥ ಮಹಾ ಪುರುಷನು ಭವಿಷ್ಯಕ್ಕನುಗುಣವಾಗಿ ಹುಟ್ಟಿದರೆ ವೀರಶೈವರ ಭಾಗ್ಯದೇವತೆಯು ಕಣ್ಣು ತೆರೆದಂತಾಗುವದು.

## ಮಲೆಯ ಮಹದೇಶ್ವರ.

(ಲೇಖಕ:—ಎಚ್ ಜಿ. ಶಿವಶಂಕರ ಶರ್ಮ ಮಧುವನಹಳ್ಳಿ)

ಪವಿತ್ರವಾದೀ ಭಾರತ ಭೂಮಿಯಲ್ಲಿ ಆದಿಯಿಂದಲೂ ಸಾಕ್ಷಾತ್ ಶಿವಸ್ವರೂಪರಾದ ಅನೇಕಾನೇಕ ಮಹಾಮಹಿಮರು ಅವತರಿಸಿ ತಮ್ಮ ಅಸದೃಶಮಹಿಮೆಗಳಿಂದ ಅಗಣಿತ ಕಾರ್ಯಗಳನ್ನು ಮಾಡಿ ಧರ್ಮಸ್ಥಾಪನೆ ಮಾಡುತ್ತಾ ಬಂದಿರುವರು. ಅವರಲ್ಲಿ ಮಹದೇಶ್ವರನೆಂಬವನು ಒಬ್ಬನಾಗಿರುವನು. ಈ ಶ್ರೀಮದ್ವಿಭೂತಿಯು ರೇಣುಕಾದಿಗಳಂತೆ ಆ ಸೇತು ಹಿಮಾಚಲಪರ್ಯಂತ ಸಂಚರಿಸದಿದ್ದರೂ ಈ ಮಹಾತ್ಮನ ನಾಮಾಮೃತ ಪಾನಮಾಡದ ಮಾನವರು ಅತಿವಿರಳವೆಂದೆನ್ನಬಹುದು. ಆದರೂ ಇವನ ಮಹಿಮೆಗಳು ಇದುವರವಿಗೂ ಯಾವುದೊಂದು ಗ್ರಂಥದಲ್ಲಿಯೂ ಹೇಳಲ್ಪಟ್ಟಿಲ್ಲವಾದುದರಿಂದ ಈ ಪೂಜ್ಯ ಪಾದನ ಮಹಿಮಾಮೃತ ಪಾನಮಾಡಲು ಇಚ್ಛಿಸುವವರ ಹಾಗೂ ಈ ವಿಚಾರವನ್ನು ತಿಳಿಸುವಂತೆ ನನ್ನನ್ನು ಆಗಾಗ್ಗೆ ಪೀಡಿಸುತ್ತಿದ್ದ ಉತ್ತರ ದೇಶೀಯ ನನ್ನ ವೀರಶೈವ ಸಹೋದರರ ಸಲುವಾಗಿ ಇಲ್ಲಿ ಆದಷ್ಟು ಮಟ್ಟಿಗೆ ವಿವರಿಸುವೆವು. ಮತ್ತು ಕಳೆದವರ್ಷ ನಮ್ಮ ಶ್ರೀಮನ್ ಮಹಾರಾಜ ಕೃಷ್ಣರಾಜ ಒಡೆಯರವರು ಯಾತ್ರಾರ್ಥವಾಗಿ ಈ ಮಹೇಶ್ವರನ ಸನ್ನಿಧಿಗೆ ಚಿತ್ತೈಸಿದ್ದಾಗ್ಗೆ ಯಾರೋ ಕೆಲವು ಪರಮತೀಯ ಅಜ್ಞಶಿಖಾಮಣಿಗಳು ಇದೊಂದು ಕೇವಲ ಮನುಷ್ಯಮಾತ್ರನ ಸಮಾಧಿ

ಯೆಂದೂ ಅದ್ದರಿಂದ ರಾಜರಾದವರು ದರ್ಶನ ಮಾಡಲು ಯೋಗ್ಯವಾದು ದಲ್ಲವೆಂದೂ ಅವರಿಗೆ ತಿಳಿಸಲೆತ್ನಿಸಿದರೆಂಬ ಕಿಂವದಂತಿಯು ನಿಜವಾಗಿದ್ದ ಪಕ್ಷದಲ್ಲಿ ಆ ನಾಸ್ತಿಕ ಪುಂಗವರು ಇದನ್ನೋದಿಯಾದರೂ ತಮ್ಮ ಅಜ್ಞಾನವನ್ನು ಹೋಗಲಾಡಿಸಿಕೊಂಡು ಧನ್ಯರಾಗಲು ಸಾಧಕವಾಗುವುದೆಂದು ಭಾವಿಸುತ್ತೇನೆ.

ಈ ಚರಿತ್ರೆಯನ್ನು ಪ್ರಾರಂಭಿಸುವುದಕ್ಕೆ ಮೊದಲು ಇದಕ್ಕೆ ಸಂಬಂಧಪಟ್ಟ ಶ್ರೀ ಪ್ರಭುಸ್ವಾಮಿಯ ಕ್ಷೇತ್ರಪರಿಚಯವನ್ನು ಮಾಡಿಕೊಡುವೆವು.

ಶ್ರೀ ಪ್ರಭುಸ್ವಾಮಿಕ್ಷೇತ್ರಃ-- ಈ ಪವಿತ್ರಕ್ಷೇತ್ರವು ಮೈಸೂರಿಗೆ ಹತ್ತಿರದಲ್ಲಿರುವ ಕೊಳ್ಳೇಗಾಲಕ್ಕೆ ೮ ಮೈಲ ದೂರದಲ್ಲಿರುವದು. ಇದರ ಮಧ್ಯದಲ್ಲಿರುವ ಶ್ರೀ ಪ್ರಭುಸ್ವಾಮಿಯ ಬೆಟ್ಟ; ಅದಕ್ಕೆ ೩ ಮೈಲಿ ದೂರದಲ್ಲಿರುವ ಶಂಭುಲಿಂಗನಬೆಟ್ಟ. ಇವು ಬಹಳ ಕಾಲದಿಂದ ಪ್ರಖ್ಯಾತಿಗೊಂಡಿರುವುವು. ಅಲ್ಲದೆ ಈ ಪ್ರಭು ಸ್ವಾಮಿಯ ಬೆಟ್ಟದಲ್ಲಿಯೇ ಶ್ರೀ ನಿಜಗುಣ ಶಿವಯೋಗಿಗಳು ಬಹಳ ಕಾಲ ತಪಸ್ಸು ಮಾಡಿರುವರು. ಈ ಬೆಟ್ಟಗಳ ತಪ್ಪಲುಗಳಲ್ಲಿ ಕುಂತೂರು ಮತ್ತು ಚಿಲಕವಾಡಿ ಎಂಬೆರಡು ಗ್ರಾಮಗಳಿರುವುವು. ಈ ಕ್ಷೇತ್ರದಲ್ಲಿ ಅನೇಕ ತಪೋ ಯೋಗ್ಯವಾದ ಗುಹೆಗಳೂ ಕೆಲವು ತೀರ್ಥಗಳೂ ಇರುವುವು. ಇವಲ್ಲದೆ ಇನ್ನೊಂದು ವಿಶೇಷವೇನಂದರೆ ಈ ಬೆಟ್ಟಗಳು ಒಂದಕ್ಕೊಂದು ೩ ಮೈಲುಗಳ ದೂರದಲ್ಲಿದ್ದರೂ ಪ್ರಭುಸ್ವಾಮಿಯ ಬೆಟ್ಟದಿಂದ ಶಂಭುಲಿಂಗ ಸ್ವಾಮಿಯ ದೇವಸ್ಥಾನಕ್ಕೆ ಒಂದು ಗುಪ್ತದ್ವಾರ (ಸುರಂಗ ಮಾರ್ಗ) ವಿರುವುದು. ಈ ಮಾರ್ಗವಾಗಿ ಪ್ರಭುಸ್ವಾಮಿಯು ಹೋಗಿಬರುತ್ತಿದ್ದರೆಂದು ಹಿರಿಯರು ಹೇಳುತ್ತಾರೆ. ಇದಕ್ಕೆ ನಿದರ್ಶನವಾಗಿ ಈಗಲೂ ಇಕ್ಕೆಡೆಗಳಲ್ಲಿಯೂ ದ್ವಾರಗಳು ಕಂಡು ಬರುವುದಾದರೂ ಆ ಮಾರ್ಗವು ಅತಿಕರ್ಕಶವಾಗಿರುವುದರಿಂದ ಒಳಹೊಕ್ಕು ನಿಜಾಂಶವನ್ನು ತಿಳಿಯಲು ಅಸಾಧ್ಯವಾಗಿದೆ.

ಕಾಲಃ--ಈ 'ಪ್ರಭುಸ್ವಾಮಿ' ಅಥವಾ 'ಪ್ರಭುದೇವರು' ಎಂಬ ಜಂಗಮಪುಂಗವರು ಶಿಷ್ಯಸಮೇತರಾಗಿ ಉತ್ತರ ದೇಶದಿಂದ ಬಂದು ಇಲ್ಲಿ ನೆಲೆಸಿದರೆಂದು ಸ್ಥಳಪುರಾಣವನ್ನು ಹೇಳುವರು. ಈ ಕಾರಣದಿಂದ ಇವರೇ ಶ್ರೀ ಮನ್ನಿರಂಜನ ಪ್ರಭುದೇವರೆಂದೂ, ಈ ಕ್ಷೇತ್ರವು ಹೆಸರುಗೊಂಡು ೮೦೦ ವರ್ಷಗಳ (ಬಸವೇಶ್ವರಕಾಲ) ಮೇಲ್ಪಟ್ಟಿರಬೇಕೆಂದೂ ಊಹಿಸಬಹುದು.

ಕಥಾರಂಭ:-- ಶ್ರೀ ಪ್ರಭು ದೇವರು ಶಂಭುಲಿಂಗಾದಿ ಶಿಷ್ಯರಿಂದ ಸೇವಿಸಿಗೊಳ್ಳುತ್ತಾ ಈ ಕ್ಷೇತ್ರದಲ್ಲಿ ನೆಲಸಿರುವಾಗ್ಗೆ, ನಮ್ಮೀಪ್ರಕೃತ ಕಥಾ ನಾಯಕನಾದ ಮಹದೇಶ್ವರನು ಶಿಷ್ಯವೃತ್ತಿಯಿಂದ ಕಾಲಕಳೆಯುವದಕ್ಕಾಗಿ ಇವರ ಬಳಿಗೆ ಬಂದನು. ಇವನ ಜನ್ಮಸ್ಥಳ ಮಾತಾ ಪಿತೃಗಳು, ಮೊದ ಲಾದ ವಿಚಾರಗಳು ಸರಿಯಾಗಿ ಗೊತ್ತಿಲ್ಲವಾದರೂ ಇವನು ಚಾಮುಂ ಡೇಶ್ವರಿಯ ಸಹೋದರನೆಂದೂ, ಮೈಸೂರಿನ ಪಕ್ಕದಲ್ಲಿ ವಾಸವಾಗಿದ್ದ ನೆಂದೂ, ಒಮ್ಮೆ ಚಾಮುಂಡಿಯ ಒಂದು ಅತ್ಯಾಚಾರಕ್ಕಾಗಿ ಕೋಪ ಗೊಂಡು ವೈರಾಗ್ಯದಿಂದ ಇಲ್ಲಿಗೆ ಬಂದನೆಂದೂ ಹೇಳಲು ತಕ್ಕ ಕಾರಣವಿರುವುದು. ಇವನ ಹೆಸರು ಮೊದಲು 'ಮಾದಪ್ಪ' ಅಥವಾ 'ಮಾದಯ್ಯ' ಎಂದಿದ್ದು ತನ್ನ ಮಹಿಮೆಗಳಿಂದ ಮಹದೇಶ್ವರನೆನ್ನಿಸಿಕೊಂ ಡಂತೆ ತೋರುತ್ತದೆ. ಈ ವಿಚಾರಗಳು ಹೇಗಿದ್ದರೂ ಇವನ ಮಹಿಮೆಗ ಳಿಂದ ಇವನೂ ರೇಣುಕ, ಬಸವಾದಿ ಶ್ರೀ ಮದ್ವಿಭೂತಿಗಳಂತೆ ಈಶ್ವ ರಾಂಶಸಂಭೂತನೆಂದು ವೇದ್ಯವಾಗುತ್ತದೆ.

ಗುರು ಸೇವೆ ಮತ್ತು ಮಹಿಮಾ ಪ್ರದರ್ಶನ:— ಶ್ರೀಮತ್ ಪ್ರಭು ದೇವರು ಆ ಕ್ಷೇತ್ರದಲ್ಲಿರುವಾಗ್ಗೆ ಅವರ ಭಕ್ತರಲ್ಲಿನೇಕರು ಗುರುವಿನ ಪೂಜೆಗೋಸುಗ ಪತ್ರೆ ಪುಷ್ಪಗಳನ್ನು ತರಲು ಆ ಕ್ಷೇತ್ರದಲ್ಲೆಲ್ಲಾ ಅಲೆ ಯುತ್ತಿದ್ದರು. ಆದರೆ ಮಹದೇಶ್ವರನು ಮಾತ್ರ ಅವರ ಗುಂಪಿಗೆ ಸೇರದೆ ಯಾವಾಗಲೂ ಗೋಲಿ ಗೆಜ್ಜುಗೆಗಳ ಆಟಗಳಲ್ಲಿಯೇ ನಿರತನಾಗಿದ್ದು ವೇಳೆಯಾಯಿತೆಂದರೆ ದಾರಿಯಲ್ಲಿ ಸಿಕ್ಕಿದ ಕೆಲವು ಹಾವು--ಹಲ್ಲಿಗಳನ್ನೂ ಗೊದ್ದ ಗೋಸಿಂಬಗಳನ್ನೂ ಹಿಡಿದು ಜೋಳಿಗೆಯಲ್ಲಿ ತುಂಬಿ ಮನೆಗೆ ಹಿಂತಿ ರುಗುತ್ತಿದ್ದನು. ಹಾಗೂ ಇವನ ಮಹಿಮೆಯಿಂದ ಅವನ್ನು ನೀರಲ್ಲಿ ಎದ್ದಿದೊಡನೆಯೇ ಅವೆಲ್ಲಾ ಸುವಾಸನೆಯನ್ನು ಬೀರುವ ನಾನಾವಿಧ ಪುಷ್ಪ ಗಳಾಗುತ್ತಿದ್ದವು. ಇವನ ಈ ಮಹಿಮೆಯು ಬಹಳ ಕಾಲದವರೆಗೆ ಬೂದಿ ಮುಚ್ಚಿದ ಕೆಂಡದಂತೆ ಗುಪ್ತವಾಗಿತ್ತು. ಇವನ್ನರಿಯದೆ ಅನೇಕರು ಇವನು ಹೋಗುವ ಸ್ಥಳವನ್ನು ಗೊತ್ತುಹಚ್ಚಬೇಕೆಂದು ಅನೇಕ ವೇಳೆ ಇವನನ್ನೇ ಹಿಂಬಾಲಿಸಿದರು. ಆದರೆ ಇವನ ಆಟಪಾಟಗಳು ಗೊತ್ತಾದುವೇ ಹೊರತು ಈ ಗೂಢ ವಿಚಾರವು ಮಾತ್ರ ಗೊತ್ತಾಗಲಿಲ್ಲ. ಪ್ರಭುದೇವರು ಮಾತ್ರ ಇವ ನಂತೆ ಉತ್ತಮವಾದ ಪುಷ್ಪಗಳನ್ನು ತಾರರೆಂದು ಉಳಿದವರನ್ನು ದಿನ ದಿನವೂ ಆಕ್ಷೇಪಿಸುತ್ತಿದ್ದರು.

ಹೀಗಿರಲಾಗಿ ಒಂದು ದಿನ ಉಳಿದ ಶಿಷ್ಯರೆಲ್ಲರೂ ಒಟ್ಟಾಗಿ ಸೇರಿ ಮಹದೇಶ್ವರನು ಯಾವಾಗಲೂ ಆಟವಾಡುವದರಲ್ಲಿಯೇ ಕಾಲಕಳೆಯುವನೆಂದೂ ಇಡೀ ಕ್ಷೇತ್ರದಲ್ಲೆಲ್ಲಾ ಇಂಥ ಹೂದೋಟಗಳ ಸುಳಿವೇ ಇಲ್ಲವೆಂದೂ ಗುರುಗಳಿಗೆ ಬಿನ್ನವಿಸಿಕೊಂಡರು. ಇದರಿಂದ ಅನುಮಾನಾಶ್ಚರ್ಯಗಳಿಂದ ಕೂಡಿದ ಪ್ರಭುದೇವರು ಇದರ ನಿಜಾಂಶವನ್ನು ಪರೀಕ್ಷಿಸಬೇಕೆಂದು ಮುಂಜಾನೆ ಮಹದೇಶ್ವರನಿಗೆ ತಿಳಿಯದಂತೆ ಅವನನ್ನು ಹಿಂಬಾಲಿಸಿದರು. ಮಹದೇಶ್ವರನು ಎಂದಿನಂತೆ ಜತೆ ಬಾಲಕರೊಡನೆ ಆಟವಾಡುವದರಲ್ಲಿಯೇ ದೀರ್ಘ ಕಾಲವನ್ನು ಕಳೆದು ಕೊನೆಗೆ ಆತುರದಿಂದ ಬಳಿಯಲ್ಲಿ ಸಿಕ್ಕಿದ ನಾಲ್ಕಾರು ಸಣ್ಣ ಪ್ರಾಣಿಗಳನ್ನು ಹಿಡಿದು ಬುಟ್ಟಿಯಲ್ಲಿ ತುಂಬಿಕೊಂಡು ಮನೆಗೆ ಹಿಂತಿರುಗಿದನು. ಅದನ್ನೆಲ್ಲಾ ಗುಪ್ತವಾಗಿ ತಿಳಿದ ಅಲ್ಲಮರು ಅವನಿಗೆ ಮುಂದಾಗಿಯೇ ಮನೆಯನ್ನು ಸೇರಿ ಶಿವಾರ್ಚನೆಗೆ ಹೋದರು. ಇತ್ತ ಮಹದೇಶ್ವರನು ಎಂದಿನಂತೆ ಅವನ್ನು ನೀರಲ್ಲಿ ಎದ್ದಿ ಸುವಾಸನೆಯ ಪುಷ್ಪಗಳನ್ನಾಗಿ ಮಾಡಿ ಶ್ರೀ ಗುರುವಿನ ಮುಂದಿರಿಸಿ ನಮಸ್ಕಾರ ಮಾಡಿದನು. ಪ್ರಾಣಿಗಳನ್ನು ಪುಷ್ಪಗಳನ್ನಾಗಿ ಮಾಡಿದ ಇವನ ಅಮಾನುಷ ಶಕ್ತಿಗೆ ಮೆಚ್ಚಿದ ಅಲ್ಲಮಪ್ರಭುವು ಇವನು ಸಾಧಾರಣ ಮಾನವನಾಗಿರದೆ ಯಾರೋ ಮಹಿಮನಾಗಿರಬೇಕೆಂದರಿತು ಅವನಲ್ಲಿ ಇದು ವರಿವಿಗೂ ಇಟ್ಟಿದ್ದ ಶಿಷ್ಯಭಾವವನ್ನು ತೊರೆದು ಪೂಜ್ಯಭಾವದಿಂದ 'ಒಂದಕ್ಕೆರಡು' ಎಂಬದಾಗಿ ಹೇಳಿದರು. ಇದರಿಂದ ಮಹದೇಶ್ವರನು ತನ್ನ ಶಿಷ್ಯವೃತ್ತಿಗೆ ಭಂಗ ಬಂತೆಂದು ಬಹಳ ಅಸಮಾಧಾನವನ್ನು ಹೊಂದಿ ಇನ್ನು ಅಲ್ಲಿರಬಾರದೆಂದೆಣಿಸಿ ಹಾಗೆಯೇ ಪೂರ್ವಾಭಿಮುಖವಾಗಿ ಹೊರಟನು.

ಅನಂತರ ಮಹದೇಶ್ವರನು ಕೊಳ್ಳೇಗಾಲಕ್ಕೆ ಸುಮಾರು ೫ ಮೈಲು ದೂರದಲ್ಲಿರುವ ಸರಗೂರೆಂಬಲ್ಲಿ ಕೆಲವು ಕಾಲ ವಾಸವಾಗಿದ್ದನು. ಆವಾಗ್ಗೆ ಅವನಿಗೆ ಅಲ್ಲಿ ಕೆಲವರು ಶಿಷ್ಯರಾದಂತೆ ತೋರುತ್ತದೆ. ಏಕೆಂದರೆ ಆ ಊರಲ್ಲಿ ಒಂದು ಮನೆತನದವರು ಬಹಳ ಕಾಲದಿಂದ ಶ್ರೀ ಮಹದೇಶ್ವರ ಸ್ವಾಮಿಯ ಅಭಿಷೇಕಕ್ಕೆ ಮೊಳಕೈಯಿಂದಲೇ ಎಳ್ಳಿನಿಂದ ಎಣ್ಣೆಯನ್ನು ತೆಗೆದು ನಿಯಮಿತ ಕಾಲಗಳಲ್ಲಿ ಅಲ್ಲಿಗೆ ಕಳುಹಿಸುತ್ತಾ ಬಂದಿರುವರು.

* ಕೆಲವರು ಮಹದೇಶ್ವರನ ಅಸಾಮಾನ್ಯ ಮಹಿಮೆಯನ್ನು ನೋಡಿದ ಪ್ರಭುದೇವರು ತಾವೇ ಮುಂದಾಗಿ ಅವನಿಗೆ ಪ್ರಣಾಮ ಮಾಡಿದರೆಂದು ಹೇಳುವರು.

ಆ ಮನೆತನದವರಿಗೆ ಇಂದಿಗೂ ಜಾತ್ರೆಯ ಕಾಲದಲ್ಲಿ ಬಹಳ ಮನ್ನಣೆ ದೊರೆಯುತ್ತಿರುವುದು. ಮಹದೇಶ್ವರನು ಅಲ್ಲಿ ನೆಲೆಸಿದ್ದುದಕ್ಕೆ ನಿದರ್ಶನ ವಾಗಿ ಅಲ್ಲಿ ಒಂದು ಮಹದೇಶ್ವರನ ದೇವಾಲಯವಿರುವುದು. ಅಲ್ಲದೆ ವರ್ಷಕ್ಕೆರಡುಸಾರಿ ಸಾಧಾರಣವಾದ ಜಾತ್ರೆನಡೆಯುವುದು.

ಮತ್ತೆ ಎಂದಿನಂತೆ ಮಹದೇಶ್ವರನು ಮುಂದಕ್ಕೆ ಪ್ರಯಾಣಮಾ ಡಲು ಕೊಳ್ಳೇಗಾಲಕ್ಕೆ ಪೂರ್ವದಿಕ್ಕಿನಲ್ಲಿ ೭ ಮೈಲ ದೂರದಲ್ಲಿರುವ ಸಿಂಗಾ ನಲ್ಲೂರು ಎಂಬ ಗ್ರಾಮದ ಬಳಿಯಲ್ಲಿ ಬಸವಣ್ಣನು ಅವನನ್ನು ತಡೆ ದನು. ಮಹದೇಶ್ವರನು ಚಾಮುಂಡಿಯು ಇನ್ನೂ ತನ್ನ ದೃಷ್ಟಿಗೆ ಬೀಳು ತ್ತಿರುವಳಾದುದರಿಂದ ತಾನಲ್ಲಿ ನಿಲ್ಲಲಾಗದೆಂದೂ, ಆದರೆ ಅಷ್ಟು ಪ್ರೀತಿ ಯಿಂದ ಆದರಿಸಿದುದಕ್ಕಾಗಿ ತನಗಿಂತಲೂ ಮುಂದಿನ ಸತ್ಕಾರವು ಅವ ನಿಗೆ ದೊರೆಯಲೆಂತಲೂ ಹೇಳಿ ಹಾಗೆಯೇ ಮುಂದೆ ಪ್ರಯಾಣವಾಡಿ ದನು. ಆ ಸ್ಥಳದಲ್ಲಿ ಈಗಲೂ ಒಂದು ಬಸವೇಶ್ವರ (ವೃಷಭ) ದೇವಾ ಲಯವಿರುವುದು. ಮತ್ತು ಮಹದೇಶ್ವರನ ಯಾತ್ರೆಗೆ ಹೋಗುವವರೆಲ್ಲಾ ಮೊದಲು ಆ ಬಸವೇಶ್ವರನಿಗೆ ಹಣ್ಣುಕಾಯಿಗಳನ್ನು ಮಾಡಿಸಿಕೊಂಡು ಹೋಗುವರು. ಆ ದೇವಾಲಯದ ಆವರಣದಲ್ಲಿ ಎರಡು ದೊಡ್ಡ ಶಿಲಾ ಲೇಖಗಳಿರುವವು. ಆದರೆ ಆ ಲಿಪಿಯು ಅವ್ಯಕ್ತವಾಗಿರುವುದರಿಂದ ಅದನ್ನು ಓದಿ ತಿಳಿಯಲು ನಮ್ಮ ಪ್ರಾಂತಿಕರಿಂದ ಅಸಾಧ್ಯವಾಗಿದೆ.

ಅನಂತರ ಮಹದೇಶ್ವರನು ಕಾಡುಮಾರ್ಗವನ್ನಿಡಿದು ಒಂದೊಂದಾಗಿ ಅನೇಕ ಬೆಟ್ಟಗಳನ್ನು ಹತ್ತಿಇಳಿಯುತ್ತ ಬಹಳ ದೂರಹೋದನು. ಈ ರೀತಿಯಾಗಿ ಒಟ್ಟಿಗೆ ೭೭ ಬೆಟ್ಟ ಗುಡ್ಡಗಳನ್ನು ಏರಿ ಇಳಿದರೂ ಇನ್ನೂ ಚಾಮುಂಡಿಯ ಬೆಟ್ಟವು ತನ್ನ ಕಣ್ಣಿಗೆ ಬೀಳಲು ಕಡುಕೋಪದಿಂದ ಅಲ್ಲಿಂದ ಕೆಳಗೆ ದುಮುಕಿ ತನ್ನ ಮನಸ್ಸಿಗೆ ಸಮಾಧಾನವಾದ ಒಂದು ಹಳ್ಳ ಪ್ರದೇಶವನ್ನು ಮುಟ್ಟಿದನು. ಆ ಕಾಲದಲ್ಲಿ ಈ ಪ್ರದೇಶವು ದಟ್ಟ ವಾಗಿ ಬೆಳೆದಿರುವ ಮರ-ಗಿಡಗಳಿಂದಲೂ ವ್ಯಾಘ್ರಾದಿ ಕ್ರೂರ ಮೃಗಜಂತು ಗಳಿಂದಲೂ ಕೂಡಿ ಅತಿ ಭಯಾನಕವನ್ನುಂಟುಮಾಡುತ್ತಿತ್ತು. ಹತ್ತೆಂಟು ಮೈಲಗಳ ದೂರದಲ್ಲಿ ಒಂದೆರಡು ಸಣ್ಣ ಗ್ರಾಮಗಳಿರುತ್ತಿದ್ದರೂ ಅಮಾ ನುಷವಾಗಿದ್ದ ಆ ಅಡವಿಯಲ್ಲಿ 'ಮಹದೇಶ್ವರನು ನಿರಾತಂಕವಾಗಿ ವಾಸ ಮಾಡಿಕೊಂಡಿರುತ್ತಿದ್ದನು.

ಈ ಕ್ಷೇತ್ರಕ್ಕೆ ಎಲ್ಲಿಯಾಗಿ ಆಲಂಬೋಡಿ ಎಂಬೊಂದು ಸಣ್ಣ ಗ್ರಾಮವಿರುವುದು. ಅಲ್ಲಿ ಈ ಪುಣ್ಯಪುರುಷನ ಕಾಲದಲ್ಲಿ ಜುಂಜೇಗೌಡನೆಂಬ ಬೇಸಾಯಗಾರನೊಬ್ಬನು ಬಹಳ ಶ್ರೀಮಂತನಾಗಿದ್ದರೂ ಅತ್ಯಂತ ಕೃಪಣತನದಿಂದ ಜೀವಿಸುತ್ತಿದ್ದನು. ಇದನ್ನರಿತ ಮಹದೇಶ್ವರನು ಅವನ ಜಿಪುಣತನವನ್ನು ಬಿಡಿಸಬೇಕೆಂದು ಕಾವಿ ಕಮಂಡಲುಧಾರಿಯಾಗಿ ಜಂಗಮ ವೇಷದಿಂದ ಅವನಲ್ಲಿಗೆ ಭಿಕ್ಷಕ್ಕೆ ಹೋಗುತ್ತಿದ್ದನು. ಆದರೆ ಆ ಕೃಪಣನು ದಿನದಿನವೂ ರಿಕ್ತಹಸ್ತದಿಂದ ಹೋಗಗೊಡುತ್ತಿದ್ದನೇ ಹೊರತು ಎಂದಾದರೂ ಕೈಎತ್ತಿ ಭಿಕ್ಷೆ ನೀಡುತ್ತಿರಲಿಲ್ಲ. ಈ ರೀತಿಯಾಗಿ ಬಹಳ ದಿವಸಗಳು ಕಳೆಯಲು ಒಮ್ಮೆ ಮಹದೇಶ್ವರನು ತನ್ನ ಅಮಾನುಷ ಶಕ್ತಿಯಿಂದ ಅವನ ಮನೆಯಲ್ಲಿದ್ದ ಧಾನ್ಯದ ರಾಶಿಯನ್ನೆಲ್ಲಾ ಮಾಯಮಾಡಿದನು. ಇದನ್ನರಿತ ಆ ಬೇಸಾಯಗಾರನು ಬಗೆಬಗೆಯಾಗಿ ಯೋಚಿಸಿ ಕೊನೆಗೆ, ತನ್ನ ಮನೆಗೆ ಭಿಕ್ಷಾರ್ಥಿಯಾಗಿ ಪ್ರತಿದಿವಸವೂ ಬಂದು ರಿಕ್ತಹಸ್ತದಿಂದ ಹೋಗುತ್ತಿದ್ದ ಜಂಗಮನೇ ಇದಕ್ಕೆ ಕಾರಣನಿರಬಹುದೆಂದು ಭಾವಿಸಿ ಅವನ ಕೃಪಾಪಾತ್ರನಾಗಿ ಧನ್ಯನಾಗಬೇಕೆಂದು ಈ ಮಹಾತ್ಮನನ್ನೇ ಹುಡುಕುತ್ತಾ ಅರಣ್ಯವನ್ನು ಹೊಕ್ಕನು. ಮತ್ತು ಅತ್ಯಂತ ಶ್ರಮದಿಂದ ಮಹದೇಶ್ವರನನ್ನು ಸಂಧಿಸಿ ದೀರ್ಘದಂಡ ಪ್ರಣಾಮವನ್ನು ಮಾಡಿ ತನ್ನ ಶತಾಪರಾಧಗಳನ್ನೂ ಮನ್ನಿಸಿ ಅನ್ನದಾನ ಮಾಡಬೇಕೆಂದು ಪ್ರಾರ್ಥಿಸಿಕೊಂಡನು. ಆಗ ದಯಾಮಯನಾದ ಮಹದೇಶ್ವರನು ಇನ್ನು ಮೇಲಾದರೂ ಹಿಂದಿನಂತೆ ಕೃಪಣತನದಿಂದ ಜೀವಿಸದೆ ದಾನಧರ್ಮಗಳನ್ನು ಮಾಡುತ್ತಾ ಮೋಕ್ಷಸಾಧನೆಯಲ್ಲಿರೆಂದು ಹೇಳಿ ಅದೃಶ್ಯವಾಗಿದ್ದ ಧಾನ್ಯದ ರಾಶಿಯು ಮತ್ತೆ ಬರುವಂತೆ ಅನುಗ್ರಹಿಸಿದನು. ಗೌಡನು ಪರಮಾನಂದ ತುಂದಿಲನಾಗಿ ಮನೆಗೆ ಬಂದು ಮೊದಲಿಗಿಂತಲೂ ಹೆಚ್ಚಿದ್ದ ತನ್ನ ಧಾನ್ಯದ ರಾಶಿಯನ್ನು ನೋಡಿ ತನ್ನ ಕೃಪಣತೆಯನ್ನು ಬಿಡಿಸುವುದಕ್ಕಾಗಿ ಪರಶಿವನೇ ಜಂಗಮ ವೇಷದಿಂದ ಬಂದಿರುವನೆಂದು ಭಾವಿಸಿ ಅನುದಿನವೂ ಈ ಜಂಗಮ ಮೂರ್ತಿಯ ಸೇವೆಯಲ್ಲೇ ನಿರತನಾಗಿರುತ್ತಿದ್ದನು.

ಹೀಗೆಯೇ ಮತ್ತೊಮ್ಮೆ ಮಹದೇಶ್ವರನು ಬೇವಿನ ಕಾಳಿಯೆಂಬ ಮತ್ತೊಬ್ಬ ಶ್ರೀಮಂತಳ ಕೃಪಣತನವನ್ನು ಬಿಡಿಸಬೇಕೆಂದು ಯತ್ನಿಸಿ ಎಳ್ಳಿನ ರಾಶಿ ಹಾಕಿಸುತ್ತಿದ್ದ ಅವಳಲ್ಲಿಗೆ ಭಿಕ್ಷಾರ್ಥಿಯಾಗಿ ಹೋದನು. ಆದರೆ ಆಕೆಯು ತನ್ನ ಕೃಪಣತನವನ್ನು ಬಿಡದೆ ಇವನನ್ನು ಮನದಣಿಯ

ನಿಂದಿಸತೊಡಗಿದುದಲ್ಲದೆ ಕೊನೆಗೆ ಕೈಯಲ್ಲಿದ್ದ ಮರೆಕೋಲಿನಿಂದ ಹೊಡೆಯಹತ್ತಿದಳು. ಆದರೂ ಶಾಂತಾತ್ಮನಾದ ಮಹದೇಶ್ವರನು ಕೋಪಗೊಳ್ಳದೆ ಬೇರೊಂದು ರೀತಿಯಿಂದಲಾದರೂ ಆವಳಿಗೆ ಜ್ಞಾನೋದಯವನ್ನುಂಟುಮಾಡಬೇಕೆಂದೆಣಿಸಿ ಪ್ರಾಣಹೋದವನಂತೆ ನಟಿಸಿದನು. ಆದರೂ ಕಟುಕರಂತೆ ಕಾಠಿಣ್ಯಹೃದಯಳಾದ ಬೇವಿನ ಕಾಳಿಯು ಯಾವುದನ್ನೂ ನೋಡದೆ ಕೈ ಸೋಲುವ ವರೆಗೆ ಹೊಡೆದು ಕೊನೆಗೆ ಸತ್ತನೆಂದು ಭಾವಿಸಿ ಹತ್ತಿರದಲ್ಲಿದ್ದ ಎಳ್ಳಿನಿಂದ ಅವನ ಶರೀರವನ್ನು ಮರೆಮಾಚತೊಡಗಿದಳು. ಆಗ ಮಹದೇಶ್ವರನು ತನ್ನ ಮಹಿಮೆಯಿಂದ ಕಾಲನ್ನು ನಿಮಿಷನಿಮಿಷಕ್ಕೆ ಹೆಚ್ಚು ಹೆಚ್ಚಾಗಿ ಬೆಳಿಸತೊಡಗಿದನು. ಅದೃಷ್ಟಹೀನನ ಕಣ್ಣಿಗೆ ಹೊನ್ನು ಮಣ್ಣಾಗಿ ಕಾಣುವಂತೆ ಆ ಕಾಳಿಯ ಕಣ್ಣಿಗೆ ಇದೊಂದೂ ತೋರಲೇ ಇಲ್ಲ. ಅವಳು ಇನ್ನು ಶವವನ್ನು ಬಹಳ ಕಾಲ ಆ ಸ್ಥಳದಲ್ಲೇ ಇರಗೊಟ್ಟರೆ ಇತರರು ತನ್ನ ಕೃತ್ಯವನ್ನರಿತುಕೊಳ್ಳುವರೆಂದು ಅದನ್ನು ದೂರವಾದೊಂದೆಡೆಗೆ ಸಾಗಿಸಿ ಬರುವಂತೆ ತನ್ನ ಏಳ್ವರು ಸೊಸೆಯರಿಗೂ ಆಜ್ಞಾಪಿಸಿದಳು. ಆ ಮಹಾ ಸಾಧ್ವೀಮಣಿಯರು ಬೇವಿನಕಾಳಿಯ ದುಷ್ಕೃತ್ಯಕ್ಕಾಗಿ ದುಃಖಪಡುತ್ತಿರಲು ದಯಾಮಯನಾದ ಮಾದೇಶ್ವರನು ಕನಿಕರಪಟ್ಟು ಕೂಡಲೆ ಅಲ್ಲಿಂದೆದ್ದು ಅವರಿಗೆ ಆಶೀರ್ವದಿಸಿ ಅದೃಶ್ಯನಾದನು.

ಆದರೂ ಮಹದೇಶ್ವರನು ತೃಪ್ತನಾಗದೆ ಮತ್ತೊಮ್ಮೆ ಆಕೆಯನ್ನು ಪರೀಕ್ಷಿಸಬೇಕೆಂದು ಮರುದಿನ ಎಂದಿನಂತೆ ಅವಳಲ್ಲಿಗೆ ಭಿಕ್ಷಾರ್ಥಿಯಾಗಿ ಹೋದನು. ಇನ್ನೂ ಅಜ್ಞಾನಾಂಧಳಾಗಿದ್ದ ಕಾಳಿಯು ಆಗಲೂ ತನ್ನ ಛಟವನ್ನು ಸಾಧಿಸತೊಡಗಲು ಕೊನೆಗೆ ಮಹದೇಶ್ವರನು ಇಂಥ ಕೃಪಣರ ಕೈಯಲ್ಲಿ ಐಶ್ವರ್ಯವಿರುವದು ಮಂಗನ ಕೈಯಲ್ಲಿ ಮಾಣಿಕ್ಯವಿದ್ದಂತೆ ನಿಷ್ಪ್ರಯೋಜನವೆಂದು ಭಾವಿಸಿ ಅವಳ ಐಶ್ವರ್ಯವೆಲ್ಲ ಹಾಳಾಗಲೆಂದು ಶಪಿಸಿ ಅದೃಶ್ಯನಾದನು.

ಈ ರೀತಿಯಾಗಿ ಮಹದೇಶ್ವರನು ಇನ್ನೆಷ್ಟು ಅದ್ಭುತಕಾರ್ಯಗಳನ್ನು ಮಾಡಿ ತೋರಿದನೋ ತಿಳಿಯದು. ಅಂತೂ ಅವನ ಮಹಿಮಾಪ್ರಭಾವದಿಂದ ಆ ಕಾಡಿನ ಕ್ರೂರ ಮೃಗಗಳಲ್ಲೆಲ್ಲಾ ಶಾಂತತೆಯು ನೆಲೆಸಲು ಅವೆಲ್ಲ ಇವನ ಸೇವೆ ಮಾಡತೊಡಗಿದವು. ಕ್ರೂರವೆನ್ನುವ ಹುಲಿಗಳೇ ಇವನ ವಾಹನಗಳಾದವು. ಆನೆಗಳು ಇವನ ಪೂಜಾದಿಗಳಿಗೆ ನಿರ್ಮಲೋದಕವನ್ನು ತಂದು ಕೊಡುತ್ತಾ ಸೇವಿಸತೊಡಗಿದವು. ಈ ರೀತಿ

ಯಾಗಿ ಮಹದೇಶ್ವರನು ಬಹಳ ಕಾಲ ಮನುಷ್ಯರೂಪಿನಿಂದಿದ್ದು ಕೊನೆಗೆ ಇದರಲ್ಲಿ ಬೇಸರ ಹೊಂದಿ ಗುಪ್ತವಾದೊಂದೆಡೆಯಲ್ಲಿ ಯೋಗಮಗ್ನನಾಗಿ ಹಾಗೆಯೇ ಲಿಂಗಾಕಾರವನ್ನು ತಾಳಿದನು. ಅದ್ಭುತ ಮಹಿಮಾಶಾಲಿಗಳಿಗೆ ಯಾವುದು ತಾನೇ ಅಸಾಧ್ಯ?

ಇದಾದ ಕೆಲವು ದಿವಸಗಳ ಮೇಲೆ ಒಂದಾನೊಂದು ರಾತ್ರಿ ಜುಂಜೇಗೌಡನ ಕನಸಿನಲ್ಲಿ ಮಹದೇಶ್ವರನು ಜಂಗಮವೇಷದಿಂದ ಪ್ರಸನ್ನನಾಗಿ ಅವನನ್ನು ಕುರಿತು ನಿನ್ನ ತೋಟದಲ್ಲಿ ಏಳು ಉಪ್ಪರಿಕೆ ನಿಕ್ಷೇಪವಿರುವದು. ಅದನ್ನು ತೆಗೆಸಿ ನೀನರ್ಧವನ್ನಿಟ್ಟುಕೊಂಡು ಉಳಿದರ್ಧದಲ್ಲಿ ನನಗೆ ಒಂದು ಆಲಯವನ್ನು ಕಟ್ಟಿಸು. ನಿನ್ನ ಮನೆಯಲ್ಲಿರುವ ಕೆಂದ ಹಸುವನ್ನು ಹಿಂಬಾಲಿಸಿದರೆ ನಾನಿರುವ ಎಡೆಯು ತಿಳಿಯುವದು. ಎಂದು ಹೇಳಿ ಅದೃಶ್ಯವಾದನು. ಗೌಡನು ಎಚ್ಚತ್ತು ತನ್ನ ಕನಸಿನ ವೃತ್ತಾಂತವನ್ನು ನೆನೆದು ಆಶ್ಚರ್ಯಪಟ್ಟು ಮರುದಿನ ಬೆಳಿಗ್ಗೆ ತನ್ನ ತೋಟವನು ಅಗೆಯಿಸಲು ಅಲ್ಲಿ ಜಂಗಮಮೂರ್ತಿಯ ಹೇಳಿಕೆಯಂತೆ ಏಳು ಕೊಪ್ಪರಿಕೆ ನಿಧಿಯು ಸಿಕ್ಕಿತು. ಆಗ ಅವನು ಭಕ್ತಿಯುಕ್ತನಾಗಿ ತನ್ನ ಕನಸಿನಲ್ಲಿ ಜಂಗಮಮೂರ್ತಿಯು ಹೇಳಿದ್ದಂತೆ ಗೋವನ್ನು ಮುಂದೆ ಬಿಟ್ಟು ತಾನದನ್ನು ಹಿಂಬಾಲಿಸಿದನು. ಅದು ಅರಣ್ಯಮಾರ್ಗವನ್ನು ಹಿಡಿದು ಬಹಳ ದೂರ ಸಾಗಿ ಒಂದು ಬಿದುರುಮೊದೆಯ ಬಳಿಯನ್ನು ಸೇರಿತು. ತಕ್ಷಣವೇ ಅದರ ಕೆಚ್ಚಲಿನಿಂದ ಹಾಲು ಧಾರೆಯಾಗಿ ಸುರಿಯತೊಡಗಲು ಗೌಡನು ಅಚ್ಚರಿಗೊಂಡು ಆ ಲೀಲಾಮೂರ್ತಿಯ ಗಣಕಥನ ಮಾಡುತ್ತ ಅಲ್ಲಿ ಬೆಳೆದಿದ್ದ ಗಿಡಮರಗಳನ್ನೆಲ್ಲ ಕತ್ತರಿಸತೊಡಗಿದನು. ಆಗ ಆ ಹಸುವು ಹಾಲು ಸುರಿಸುತ್ತಿದ್ದೆಡೆಯಲ್ಲಿ ಒಂದು ದಿವ್ಯ ಲಿಂಗವು ರಂಜಿಸತೊಡಗಿತು. ಆದರೆ ಅವನು ಗಿಡಬಳ್ಳಿಗಳನ್ನು ಕತ್ತರಿಸುತ್ತಿದ್ದಾಗ್ಗೆ ಅವನ ಆಯುಧವು ಲಿಂಗಮೂರ್ತಿಗೆ ತಗಲಿ ತಲೆಯ ಮೇಲೆ ಗಾಯವಾಗಿ ರಕ್ತ ಸುರಿಯತೊಡಗಿತೆಂದೂ, ಅನಂತರ ಗೌಡನ ಪಶ್ಚಾತ್ತಾಪಕ್ಕೆ ಮನನೊಂದು ಮಹದೇಶ್ವರನು ಅದರಲ್ಲಿ ರಕ್ತ ಬಾರದಂತೆ ಮಾಡಿಕೊಂಡು ಅವನಿಗೆ ದರ್ಶನವಿತ್ತನೆಂದೂ ಪ್ರಾಜ್ಞರು ಹೇಳುವರು. ಇದನ್ನು ಸಮರ್ಥಿಸಲು ಈಗಲೂ ಆ ಲಿಂಗಮೂರ್ತಿಯು ಮೇಲ್ಭಾಗದ ಒಂದೆಡೆಯಲ್ಲಿ ಸ್ವಲ್ಪ ಛಿನ್ನವಾದಂತೆ ತೋರುವುದು.

ಅನಂತರ ಆ ಗೌಡನು ಅನೇಕ ಕೆಲಸಗಾರರನ್ನು ಕರೆಸಿ ಆ ಲಿಂಗ ಮೂರ್ತಿಗೆ ಒಂದು ಆಲಯವನ್ನು ಕಟ್ಟಿಸಿ ಪ್ರಾಕಾರದ ಮೇಲ್ಭಾಗದ ಲ್ಲೊಂದೆಡೆಯಲ್ಲಿ ಒಂದು ದೊಡ್ಡ ಬಸವೇಶ್ವರ(ವೃಷಭ)ನನ್ನು ಲಿಂಗಾಭಿಮುಖವಾಗಿರುವಂತೆ ಮಾಡಿಸಿದನು. ಆದರೆ ಅವನ ಹೆಸರನ್ನು ಆ ಚಂದ್ರಾರ್ಕಪರ್ಯಂತರ ಜಗತ್ತಿಗೆ ತಿಳಿಸಿಕೊಡುವ ಭಾವನೆಯಿಂದ ಮಹದೇಶ್ವರನು ಆ ವೃಷಭನು ಆಲಂಬೋಡಿಗಭಿಮುಖವಾಗುವಂತೆ ಮಾಡಿದನು. ಗೌಡನು ಅವನ್ನು ಲಿಂಗಾಭಿಮುಖವಾಗಿರಿಸಲು ಎಷ್ಟೆಷ್ಟು ಶ್ರಮಪಟ್ಟರೂ ಸಾಧ್ಯವಾಗದಿರಲು ಒಮ್ಮೆ ಶುಚಿರ್ಭೂತನಾಗಿ ಆ ಶಿವಾಲಯವನ್ನು ಹೊಕ್ಕು ಸಾವಧಾನದಿಂದ ಲಿಂಗಮೂರ್ತಿಯನ್ನರ್ಚಿಸಿ ಸ್ತೋತ್ರ ಮಾಡಲು ಆಗ ಜಗತ್ಪಿತನಾದ ಮಹದೇಶ್ವರನು ಆ ಲಿಂಗದಿಂದಲೇ ಜಂಗಮರೂಪಿನಿಂದ ಅವನಿಗೆ ಪ್ರತ್ಯಕ್ಷನಾಗಿ ಆ ವೃಷಭನನ್ನು ತಿರುಗಿಸಲು ವ್ಯರ್ಥವಾದ ಶ್ರಮಪಡಬೇಡವೆಂದು ಹೇಳಿ ಸಮಾಧಾನ ಪಡಿಸಿ ದಿವ್ಯಾನುಗ್ರಹಮಾಡಿ ಅಲ್ಲೇ ಐಕ್ಯನಾದನು. ಆ ಸಮಯದಲ್ಲಿ ಅವನು ಪ್ರಾರ್ಥಿಸಿಕೊಂಡ ಮೇರೆಗೆ ಅಂದಿನಿಂದಲೂ ಆ ಲಿಂಗಮೂರ್ತಿಯ ಅಭಿಷೇಕಾದಿಗಳಿಗೆ ಮುಖ್ಯ ದಿನಗಳಲ್ಲಿ ಆ ಜುಂಜೇಗೌಡನ ಮನೆಯಿಂದಲೇ ಕ್ಷೀರವು ಬರುತ್ತಿರುವುದು. ಅಲ್ಲದೆ ಅವನ ಮನೆಯಲ್ಲಿ ಹುಟ್ಟುವ ಕರುಗಳೆಲ್ಲಾ ಇಂದಿಗೂ ಆ ವೃಷಭ ಮೂರ್ತಿಯನ್ನೇ ಹೋಲುತ್ತಿರುವುವು.

ಇದಾದ ಬಹಳ ಕಾಲದ ಮೇಲೆ ಒಮ್ಮೆ ಕಣ್ಣಪ್ಪನೆಂಬ ಬೇಡನೊಬ್ಬನು ಆ ಕಾಡಿನಲ್ಲಿ ಬೇಟೆಯನ್ನಾಡಲು ಹೋಗುತ್ತಿರುವಾಗ್ಗೆ ಈ ದೇವಾಲಯವು ಅವನ ಕಣ್ಣಿಗೆ ಬಿದ್ದಿತು. ಕೂಡಲೇ ಆ ಮುಗ್ಧನ ಮನಸ್ಸಿನಲ್ಲಿ ಭಕ್ತಿಯುತ್ಪನ್ನವಾಗಿ ಆ ಲಿಂಗ ಮೂರ್ತಿಯನ್ನು ಪೂಜೆಮಾಡಿ ಮುಂದೆ ಹೋಗಬೇಕೆಂಬ ಬಯಕೆಯುಂಟಾಯಿತು. ಆದರೆ ಅವನಲ್ಲಿ ಪೂಜಾ ಸಾಮಗ್ರಿಗಳೊಂದೂ ಇಲ್ಲದಿದ್ದರೂ ಬೇಡನು ಅದೊಂದನ್ನು ಲೆಕ್ಕಿಸದೆ ತನ್ನ ಬೇಟೆಯ ಸಲಕರಣೆಗಳನ್ನೆಲ್ಲಾ ಕೆಳಗಿರಿಸಿ ಹತ್ತಿರದಲ್ಲಿ ಪ್ರವಹಿಸುತ್ತಿದ್ದ ನದಿಗೆ ಹೋಗಿ ತನ್ನ ಬಾಯಿತುಂಬಾ ನೀರನ್ನು ತುಂಬಿಕೊಂಡು ಬಳಿಯಲ್ಲಿಯೇ ಇದ್ದ ಕೆಲವು ಪತ್ರಿಪುಷ್ಪಗಳೊಡನೆ ದೇವಾಲಯವನ್ನು ಹೊಕ್ಕನು. ಮತ್ತು ತನ್ನ ಬಾಯ್ನೀರಿನಿಂದಲೇ ಆ ಲಿಂಗಮೂರ್ತಿಗೆ ಅಭಿಷೇಕ ಮಾಡಿ ಕೈಯಲ್ಲಿದ್ದ ಪತ್ರಿಪುಷ್ಪಗಳಿಂದ ಲಿಂಗಮೂರ್ತಿಯನ್ನಲಂಕರಿಸಿ ತನ್ನಲ್ಲಿದ್ದ ಮೃಗ ಪಕ್ಷಿಗಳ ಮಾಂಸವನ್ನೇ ನೈವೇದ್ಯಮಾಡಿ, ಮನ

ದಣಿಯ ಸ್ತೋತ್ರ ಮಾಡಿ ಅನಂತರ ತನ್ನ ಮಾರ್ಗವನ್ನಿಡಿದನು. ಜಾತಿಯಲ್ಲಿ ಕೀಳಾಗಿದ್ದರೂ ಭಕ್ತಿಯಲ್ಲಿ ಮೇಲಾಗಿದ್ದ ಅವನ ಈ ತೆರನಾದ ಪೂಜೆಯೇ ಆ ಜಗತ್ಪಿತನಿಗೆ ಪರಮಾನಂದವನ್ನುಂಟುಮಾಡಿತು. ಈ ರೀತಿಯಾಗಿ ಅಂದಿನಿಂದ ಆ ಮುಗ್ಧನು ಪ್ರತಿದಿನವೂ ಪೂಜೆಮಾಡಿ ಹೋಗುತ್ತಿದ್ದನು. ಆವರೆ ಇವನ ನಂತರ ಪೂಜೆಗಾಗಿ ಬರುತ್ತಿದ್ದ -ಭಕ್ತಿಶೂನ್ಯನಾದರೂ ಬಹಿಲಾಡಂಭರದಿಂದ ಕೂಡಿದ್ದ- ಅರ್ಚಕನು ಈ ಮಾಂಸಾದಿಗಳನ್ನು ನೋಡಿ ಅಸಹ್ಯಪಟ್ಟು ದಿನದಿನವೂ ಅವನ್ನೆಲ್ಲಾ ತೆಗೆದುಹಾಕಿ ದೇವಸ್ಥಾನವನ್ನು ಶುಚಿ ಮಾಡುತ್ತಿದ್ದನು.

ಈ ರೀತಿಯಾಗಿ ಕೆಲವು ದಿವಸಗಳು ಕಳೆಯಲು ದೇವಸ್ಥಾನವನ್ನು ಶುದ್ಧಿ ಮಾಡುವುದರಲ್ಲಿ ಬೇಸರ ಹೊಂದಿದ ಆ ಅರ್ಚಕನು ದಿನದಿನವೂ ಲಿಂಗ ಮೂರ್ತಿಯನ್ನು ಅಪರಿಶುದ್ಧಿಗೊಳಿಸುತ್ತಿರುವ ಆ ನೀಚನನ್ನು ಕೊಂದು ಹಾಕಬೇಕೆಂದೆಣಿಸಿ, ಮರುದಿನ ಮುಂಜಾನೆಯೇ ಖಡ್ಗಧಾರಿಯಾಗಿ ದೇವಸ್ಥಾನವನ್ನು ಹೊಕ್ಕನು. ಆದರೆ ಅವನ ಮನೋಭಿಪ್ರಾಯವನ್ನರಿತ ಸರ್ವಜ್ಞನಾದ ಮಹದೇಶ್ವರನು ಅವರೀರ್ವರ ಭಕ್ತಿಯನ್ನೂ ಲೋಕಕ್ಕೆ ತೋರ್ಪಡಿಸಬೇಕೆಂದು ಆ ದಿವಸ ತನ್ನ ಕಣ್ಣೊಂದರಲ್ಲಿ ಧಾರೆ ಧಾರೆಯಾಗಿ ನೀರು ಸುರಿಸತೊಡಗಿದನು. ಅರ್ಚಕನು ಇದನ್ನು ನೋಡಿದರೂ ಲೆಕ್ಕಿಸದೆ ಆ ಲಿಂಗಕ್ಕೆ ರಾಟಾಚಾರದ ಪೂಜೆಯನ್ನು ಮಾಡಿ ಗುಪ್ತವಾದೊಂದೆಡೆಯಲ್ಲಿ ಅಡಗಿ ಕಣ್ಣಪ್ಪನನ್ನೇ ಹೊಂಚು ಹಾಕುತ್ತಾ ಕುಳಿತನು.

ಸ್ವಲ್ಪ ಹೊತ್ತಿನಲ್ಲಿಯೇ ಮುಗ್ಧ ಭಕ್ತನಾದ ಕಣ್ಣಪ್ಪನು ದಿನಚರಿಯಂತೆ ದೇವಾಲಯವನ್ನು ಹೊಕ್ಕು ಆ ಲಿಂಗಮೂರ್ತಿಗೆ ದೀರ್ಘದಂಡ ಪ್ರಣಾಮವನ್ನು ಮಾಡಿ ತನ್ನ ಬಾಯಲ್ಲಿ ತುಂಬಿಕೊಂಡು ಬಂದಿದ್ದ ನೀರಿನಿಂದ ಅಭಿಷೇಕ ಮಾಡತೊಡಗಿದನು. ಆವಾಗ ಆ ಲಿಂಗರೂಪಿ ಮಹದೇಶ್ವರನ ಕಣ್ಣೊಂದರಲ್ಲಿ ಧಾರೆಯಾಗಿ ನೀರು ಸುರಿಯುತ್ತಿದ್ದುದು ಅವನಿಗೆ ಗೋಚರವಾಯಿತು. ಭಕ್ತೋತ್ತಮನಾದ ಆ ಬೇಡನು ಭಯಕಂಪನಗಳಿಂದ ಕೂಡಿದವನಾಗಿ ಓಹೋ ನನ್ನ ಲಿಂಗಮೂರ್ತಿಯ ಒಂದು ಕಣ್ಣಿಗೆ ಏನೋ ಅಪಾಯ ಸಂಭವಿಸಿರುವದು, ಆದುದರಿಂದಲೇ ಇಷ್ಟು ನೀರು ಸುರಿಯುತ್ತಿರುವದು. ಅಯ್ಯೋ! ಈ ವ್ಯಥೆಯು ಎಷ್ಟು ಹೊತ್ತಿನಿಂದ ಈ ಸರ್ವೇಶನನ್ನು ಬಾಧಿಸುತ್ತಿರುವುದೋ? ತನ್ನ ಕಷ್ಟವನ್ನು ಇತರರಿಗೆ ಹೇಳಿಕೊಳ್ಳದೆ ಒಳಗೊಳಗೆ ಎಷ್ಟೆಷ್ಟು ವ್ಯಥೆ ಪಡುತ್ತಿರುವನೋ?

ಪಾಪ. ಇವನ ಕಷ್ಟಸುಖಗಳನ್ನು ವಿಚಾರಿಸುವವರಾದರೂ ಯಾರಿರ ವರು? ನಮಗಿರುವಂತೆ ತಂದೆತಾಯಿಗಳಾಗಲಿ ಪತ್ನೀಪುತ್ರರಾಗಲೀ ಇರುತ್ತಿದ್ದರೆ ಇದನ್ನು ನೋಡಿ ಸೈರಿಸುತ್ತಿದ್ದರೇ? ಆದ್ದರಿಂದ ಅನಾಥನಾಗಿ ಈ ಅರಣ್ಯವಾಸಿಯಾಗಿರುವ ಇವನ ರಕ್ಷಣ ಭಾರವನ್ನು ನಾನಾದರೂ ವಹಿಸುವೆನು. ಹೇ ದೇವಾ! ಇನ್ನು ದುಃಖವನ್ನು ಸಾಕು ಮಾಡು. ನನಗಾದರೋ ಎರಡು ಕಣ್ಣುಗಳೂ ಚನ್ನಾಗಿರುವವು. ಇವುಗಳಲ್ಲೊಂದನ್ನು ನಿನ್ನ ಕಣ್ಣಿಗೆ ಬದಲಾಗಿ ಕೊಡುವೆನು. ನನ್ನನ್ನು ನಿನ್ನ ಆಪ್ತಬಂಧುವೆಂದು ತಿಳಿ. ಎಂದು ಹೇಳಿ ತಕ್ಷಣವೇ ತನ್ನ ಕೈಯಲ್ಲಿದ್ದ ಅಂಬಿನ ಕೊನೆಯಿಂದ ತನ್ನ ಕಣ್ಣೊಂದನ್ನು ಕಿತ್ತು ಆ ನೀರು ಸುರಿಯುತ್ತಿದ್ದ ಕಣ್ಣಿನ ಸ್ಥಳದಲ್ಲಿ ಸೇರಿಸಿದನು. ಇದರಿಂದ ಆ ಕಣ್ಣಿನ ಬಾಧೆಯು ನಿವಾರಣೆಯಾಯಿತಾದರೂ ಆ ದೇವೇಶನ ಪ್ರೇರಣೆಯಂತೆ ಉಳಿದ ಕಣ್ಣಿನಿಂದ ನೀರು ಸುರಿಯಲಾರಂಭಿಸಿತು. ಆಗಲಾ ಮುಗ್ಧನು ಅಯ್ಯೋ! ಈ ಅಂಟು ರೋಗವು ಉಳಿದೊಂದು ಕಣ್ಣನ್ನೂ ಆವರಿಸಿತು. ಇದನ್ನು ಹೀಗೆಯೇ ಬಿಟ್ಟಲ್ಲಿ ನನ್ನ ದೇವನ ಬಾಧೆಯನ್ನು ನಾನೇನು ಕಡಿಮೆ ಮಾಡಿದಂತಾಯಿತು? ಆದ್ದರಿಂದ ನನ್ನ ಉಳಿದ ಕಣ್ಣೊಂದನ್ನೂ ಕೊಟ್ಟು ಈ ಅನಾಥನನ್ನು ನೇತ್ರರೋಗದಿಂದ ಬಿಡುಗಡೆ ಮಾಡುವೆನು. ನಾನು ಕುರುಡನಾದರೂ ನನ್ನ ಪತ್ನೀಪುತ್ರರ ಸಹಾಯದಿಂದ ಕಾಲಯಾಪನೆ ಮಾಡಬಹುದು. ಎಂದು ನಿರ್ಧರಿಸಿದನು. ಆದರೆ ತಾನು ಕಣ್ಣನ್ನು ಕಳೆದುಕೊಂಡ ಮೇಲೆ ಅವನ ನೀರಾಡುವ ಕಣ್ಣಿನ ಭಾಗವು ಗೊತ್ತಾಗಲಾರದೆಂಬ ಶಂಕೆಯುಂಟಾಗಲು ತನ್ನ ಕಣ್ಣನ್ನು ತಗೆದು ಆ ಲಿಂಗಮೂರ್ತಿಯ ಕಣ್ಣಿನ ಭಾಗಕ್ಕೆ ಸೇರಿಸಲು ಬಳಿಯಲ್ಲಿ ಯಾರೂ ಇಲ್ಲದ್ದರಿಂದ ತನ್ನ ಕಾಲನ ಬೆರಳನ್ನೇ ಅವನ ಕಣ್ಣಿನ ಬಳಿಯಲ್ಲಿಟ್ಟು ಬಾಣದ ತುದಿಯಿಂದ ತನ್ನ ಉಳಿದೊಂದು ಕಣ್ಣನ್ನೂ ಕೀಳಲನುವಾದನು.

ಈ ತೆರನಾದ ಇವನ ಅಸಾಮಾನ್ಯದಯಾಭಕ್ತಿಗಳಿಗೆ ಮೆಚ್ಚಿದ ಮಹದೇಶ್ವರನು ತಕ್ಷಣವೇ ಆ ಲಿಂಗದಿಂದುದ್ಭವಿಸಿ ಭಕ್ತನು ಕಾರ್ಯವನ್ನು ಸಾಗಿಸದಂತೆ ಅವನ ಕೈಹಿಡಿದು ತಡೆದನು. ತನ್ನ ಕಾರ್ಯವನ್ನು ತಡೆಯುತ್ತಿರುವವರಾರೆಂದು ನೋಡುವುದಕ್ಕಾಗಿ ತಲೆಯೆತ್ತಿದ ಆ ಶಬರ ವೀರನು ತನ್ನೆದುರಿನಲ್ಲಿ ಕೋಟಿಸೂರ್ಯಪ್ರಕಾಶಮಾನವಾದ ಮಹದೇಶ್ವರನ ದಿವ್ಯ ಮಂಗಳಮೂರ್ತಿಯನ್ನು ಕಂಡು ಆನಂದ ಬಾಷ್ಪಗಳನ್ನು ಸುರಿಸುತ್ತಾ, ಆ

ಮೂರ್ತಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಮನದಣಿಯ ಸ್ತೋತ್ರ ಮಾಡತೊಡಗಿದನು. ಇವನ್ನೆಲ್ಲಾ ಮರೆಯಲ್ಲಿ ನಿಂತು ನೋಡುತ್ತಿದ್ದ ಅರ್ಚಕನು ಭಯಕಂಪನಗಳಿಂದ ಕೂಡಿದವನಾಗಿ ಮುಂದೆ ಬಂದು ಆ ಸೌಮ್ಯಮೂರ್ತಿಯ ಪಾದತಳದಲ್ಲಿ ಬಿದ್ದನು. ಮಹದೇಶ್ವರನು ಭಯ ಪಡದಿರೆಂದು ಅವನಿಗೆ ಅಭಯ ದಾನಮಾಡಿ ಆ ಶಬರ ವೀರನನ್ನು ತಬ್ಬಿ ಆಲಿಂಗಿಸಿ, ವತ್ಸಾ! ನಿನ್ನ ಅಸದೃಶಭಕ್ತಿಗೆ ಮೆಚ್ಚಿದೆನು. ಇದೆಲ್ಲಾ ನಿನ್ನ ಪೂಜಾವಿಧಾನಕ್ಕಾಗಿ ಕೋಪಗೊಂಡು ನಿನ್ನನ್ನು ನಿರ್ನಾಮಗೊಳಿಸಬೇ ಕೆಂದೆಣಿಸಿದ್ದ ಇವನಿಗೆ ನಿನ್ನ ಭಕ್ತಿಯಂತಹುದೆಂಬುದನ್ನು ತೋರ್ಪಡಿಸಿ ಕೊಡುವುದಕ್ಕಾಗಿ ಮಾಡಿದ ವಿನೋದ ಕಾರ್ಯವೇ ಹೊರತು ಬೇರೆಯಲ್ಲ. ವಾಸ್ತವ್ಯವಾಗಿ ನನಗಾವ ಭಾಧೆಯೂ ಇಲ್ಲ. ಆದುದರಿಂದ ನೀನೀಯೋಚ ನೆಯನ್ನು ಬಿಡು. ನಿನ್ನ ಹೋದ ಕಣ್ಣನ್ನು ಮತ್ತೆ ಅನುಗ್ರಹಿಸಿರುವೆನು. ಇನ್ನು ನಿನಗೆ ಬೇಕಾದ ವರಗಳನ್ನು ಬೇಡು ಎಂದು ಹೇಳಲು ಆಗ ಪುಳಿಂ ದನು ಪರಮಾತ್ಮನ ದರ್ಶನ ಸ್ಪರ್ಶನಗಳಿಂದ ದಿವ್ಯಜ್ಞಾನವನ್ನು ಹೊಂದಿ ದವನಾಗಿ ಅವನನ್ನು ಕುರಿತು, 'ಹೇ ದೇವಾ! ಜಗತ್ಪಿತಾ! ಚತುರ್ದಶ ಲೋಕಗಳೂ ನಿನ್ನಧೀನವು. ನಾವೆಲ್ಲರೂ ನಿನ್ನ ಕೈಯೊಳಗಿನ ಬೊಂಬೆ ಗಳು. ಸೂತ್ರಧಾರನಾದ ನೀನು ಕುಣಿಸಿದಂತೆ ಕುಣಿಯುವೆವು. ಹೀಗಿರು ವಲ್ಲಿ ನಿನ್ನ ಪ್ರೇರಣೆಯಂತೆ ನಡೆದ ಈ ಕಾರ್ಯದಲ್ಲಿನ ಅತಿಶಯವೇನು? ಆದರೂ ನನ್ನಲ್ಲಿ ಅತಿಶಯವಾದ ಪ್ರೀತಿಯಿಟ್ಟು ಬೇಕಾದ ವರಗಳನ್ನು ಕೇಳುವಂತೆ ಹೇಳಿರುವೆ. ದೇವಾ! ಜನನ ಮರಣಬದ್ಧರಾದ ಮಾನವ ರಿಗೆ ಭವರೋಗ ವೈದ್ಯನಾದ ನಿನ್ನ ಪಾದಪೂಜೆಗಿಂತಲೂ ಮಿಗಿಲಾದು ದಾವುದಿರುವುದು? ಆದುದರಿಂದ ಭಕ್ತಜನೋದ್ಧಾರಕನಾದ ನಿನ್ನಪಾದ ಪೂಜೆಯು ತಪ್ಪದಂತೆ ನನಗೆ ವರವನ್ನು ಅನುಗ್ರಹಿಸು' ಎಂದನು.

ಮಹದೇಶ್ವರನು ಆವನಿಷ್ಟದಂತೆ ಅನುಗ್ರಹಿಸಿ ಅರ್ಚಕನ ಕಡೆ ತಿರುಗಿ 'ಕುವರಾ! ನನ್ನನ್ನು ತೃಪ್ತಿಪಡಿಸಲು ಅನನ್ಯ ಭಕ್ತಿಯೇ ಮುಖ್ಯ ವಲ್ಲದೆ ಈ ಬಹಿರಾಡಂಭರದ ಪೂಜೋಪಚಾರಗಳೊಂದೂ ಮುಖ್ಯವಲ್ಲ. ಭಕ್ತಿ ಪೂರ್ವಕದಿಂದ ಮಾಡಿದ ಇವನ ಬಾಯಿನೀರೇ ನನಗೆ ಗಂಗೋದ ಕವು, ಇವನು ಮುಡಿದು ತಂದ ಪತ್ರಿಪುಷ್ಪಗಳೇ ಮಂದಾರಪಾರಿಜಾತ ಗಳು. ಇವನು ನೈವೇದ್ಯ ಮಾಡಿದುದೇ ದಿವ್ಯ ಭಕ್ಷ್ಯಗಳು. ಆದರೆ ಭಕ್ತಿ ಹೀನನಾದ ನೀನು ಅರ್ಪಿಸಿದ ಈ ಪುಷ್ಪಗಳೇ ನನಗೆ ಕಲ್ಲುಗಳು. ಈ

ಕ್ಷೀರಾದಿಗಳೆಲ್ಲಾ ವಿಷಪ್ರಾಯವಾದುವುಗಳು. ಭಕ್ತಿಯಿಲ್ಲದಿದ್ದರೆ ನೀನಾವು ದನ್ನು ಅರ್ಪಿಸಿದರೂ ನಾನು ಸಂತುಷ್ಟನಾಗೆನು. ಆದುದರಿಂದ ಮುಂದಾದರೂ ಭಕ್ತಿಯುಕ್ತನಾಗಿರು' ಎಂದು ಹೇಳಿ ಹಾಗೆಯೇ ಲಿಂಗದಲ್ಲಿ ಮಾಯವಾದನು.

ಇದಕ್ಕೆ ನಿದರ್ಶನವಾಗಿ ಈಗಲೂ ಆ ದೇವಾಲಯದ ಒಂದೆಡೆಯಲ್ಲಿ ಬೇಡರ ಕಣ್ಣಪ್ಪನಿಗೆ ಮಹದೇಶ್ವರನು ಪ್ರತ್ಯಕ್ಷವಾದ ವಿಗ್ರಹವಿರುವುದು. ಮತ್ತು ಅಲ್ಲಿನ ಅರ್ಚಕರು ತಾವು ಆ ಭಕ್ತಶಿಖಾಮಣಿಯಾದ ಕಣ್ಣಪ್ಪನ ಸಂತತಿಯವರೆಂದು ಹೇಳಿಕೊಳ್ಳುತ್ತಾ ಒಂದು ತೆರನಾದ ಮುಗ್ಧಭಕ್ತಿಯಿಂದ ಇಂದಿಗೂ ಆ ಲಿಂಗಮೂರ್ತಿಯನ್ನು ಪೂಜೆಮಾಡುತ್ತಿರುವರು. ಇವರ ಆಚಾರ ವ್ಯವಹಾರಗಳೂ ಇವರು ಇತ್ತೀಚೆಗೆ ಲಿಂಗಧಾರಿಗಳಾದವರೆಂದು ಸಮರ್ಥಿಸಲು ಸಾಧಕವಾಗಿರುವುವು.

ಈ ರೀತಿಯಾಗಿ ಅನೇಕ ಮಹತ್ವಗಳಿಂದ ಮಹದೇಶ್ವರನ ಕೀರ್ತಿಯು ದಿಕ್ಕುದಿಕ್ಕಿಗೂ ವ್ಯಾಪಿಸಲು ಜನರೆಲ್ಲರೂ ತಂಡತಂಡವಾಗಿ ಯಾತ್ರೆಗಾಗಿ ಇವನಲ್ಲಿಗೆ ಬರತೊಡಗಿದರು. ಇವನ ದರ್ಶನ ಅರ್ಚನೆಗಳಿಂದ ಭಕ್ತರಿಗೆಲ್ಲಾ ಮನದಿಷ್ಟಗಳು ನೆರವೇರಲು ಯಾವ ರಾಜರಲ್ಲಿಯೂ ಇರದಂಥಾ ಅಮೌಲ್ಯವಾದ ಮುತ್ತುರತ್ನಗಳೂ, ದಿವ್ಯಾಭರಣಗಳೂ ಕಾಣಿಕೆಯಾಗಿ ಬರತೊಡಗಿದವು. ಈಗಿನ ಶ್ರೀಮನ್ ಮಹಾರಾಜರವರ ತಾತಂದರಾದ ಶ್ರೀಕೃಷ್ಣರಾಜ ಒಡೆಯರವರೂ ಈ ಮಹದೇಶ್ವರನಲ್ಲಿ ಭಕ್ತಿಯನ್ನಿಟ್ಟು ಒಂದು ಸುವರ್ಣ ಕಿರೀಟವನ್ನು ಮಾಡಿಸಿಕೊಟ್ಟಿದ್ದರು. ಅದನ್ನೇ ಈಗ್ಗೆ ೧ ತಿಂಗಳ ಹಿಂದೆ ಈಗಿನ ಶ್ರೀಮನ್ ಮಹಾರಾಜರವರು ಹತ್ತು ಸಹಸ್ರ ರೂಪಾಯಿಗಳ ಖರ್ಚಿನಿಂದ ಅತ್ಯಂತ ಸುಂದರವಾಗಿ ನವರತ್ನಗಳಿಂದ ನೂತನವಾಗಿ ತಯಾರಿಸಿ ಸನ್ನಿಧಿಗೆ ಕಳುಹಿಸಿಕೊಟ್ಟರು. ಮಹಿಮಾಶಾಲಿಯಾದ ಈ ಮಹದೇಶ್ವರನಲ್ಲಿ ಇವರಿಗಿರುವ ಭಕ್ತಿಯು ಹೀಗೆಯೇ ಶುಕ್ಲಪಕ್ಷದ ಚಂದ್ರನಂತೆ ಅಭಿವೃದ್ಧಿಹೊಂದಲೆಂದೂ ಇವರಿಂದ ವಿದ್ಯುದ್ದೀಪಗಳೇ ಮೊದಲಾದ ಅನೇಕ ಸೌಕರ್ಯಗಳು ಆ ಕ್ಷೇತ್ರಕ್ಕೆ ಲಭಿಸಲೆಂದೂ ಹಾರೈಸುತ್ತೇನೆ.

ಶ್ರೀಮದ್ವಿಭೂತಿ ಮಹದೇಶ್ವರನ ಮಹಿಮೆಯು ಅಷ್ಟಕ್ಕೇ ಕೊನೆಗಾಣದೆ ಆಗಾಗ್ಗೆ ತೋರುತ್ತಾ ಇರುವುದು. ಉದಾಹರಣೆಗಾಗಿ ಈಗ್ಗೆ ಕೆಲವು ವರ್ಷಗಳಹಿಂದೆ ಕೆಲವು ಮಂದಿ ಕಳ್ಳರು ದೇವಸ್ಥಾನದಲ್ಲಿ ಬಹಳ ಹಣ

ವಿರುವುದೆಂದು ನಂಬಿ ಅದನ್ನು ಅಪಹರಿಸುವುದಕ್ಕಾಗಿ ಹೋದವರು ಆ ದೇವೇಶನ ಮಹತ್ವದಿಂದ ಬೆಳಗ್ಗೆ ಜನರ ಕಣ್ಣಿಗೆ ಬೀಳುವ ವರುವಿಗೂ ಹಾಗೆಯೇ ಸ್ಥಂಭೀ ಭೂತರಾಗಿ ನಿಂತಿದ್ದರಂತೆ.

ಇಷ್ಟೇ ಅಲ್ಲದೆ ಇನ್ನೊಂದು ಮಹತ್ವದ ಸಂಗತಿಯೂ ಇಂದಿಗೂ ಈ ಕ್ಷೇತ್ರದಲ್ಲಿ ನಡೆಯುತ್ತಿರುವುದು. ಈ ಮಹಾತ್ಮನ ಯಾತ್ರಾರ್ಥವಾಗಿ ಪ್ರತಿಅಮಾವಾಸೆಯೂ ಸಹಸ್ರಾರು ಜನರು ಆ ಸೇತು ಹಿಮಾಲಯ ಪರ್ಯಂತದಿಂದ ಬರುತ್ತಿರುವರು. ಯಾತ್ರೆಗಾಗಿ ಸ್ತ್ರೀಯರೂ ಬರುವರಾದರೂ ಈ ಮೂರ್ತಿಯು ಅಖಂಡ ವೈರಾಗ್ಯ ಮೂರ್ತಿಯಾದ್ದರಿಂದ ಇಲ್ಲಿ ಯಾರೂ ಸ್ತ್ರೀಸಂಪರ್ಕಮಾಡಲಾಗದು. ಹಾಗೂ ಯಾರಾದರೂ ನಿರ್ಲಕ್ಷ್ಯದಿಂದಲೋ ಅಥವಾ ಪರೀಕ್ಷಾರ್ಥವಾಗಿಯೋ ಸಂಭೋಗಮಾಡಿದುದಾದರೆ ಕೂಡಲೇ ಒಂದು ಬಿರುಗಾಳಿ ಎದ್ದು ಎಲ್ಲರೂ ಕಣ್ಣುಮುಚ್ಚುವಂತೆ ಮಾಡಿಬಿಡುವುದು. ಈ ಮಧ್ಯೆಒಂದು ವ್ಯಾಘ್ರನು ಆ ಮಿಥುನಗಳನ್ನು ಕೊಂದು ಬೀಸಾಕುವುದು. ಇದು ಪ್ರತ್ಯಕ್ಷ ಪ್ರಮಾಣಗಳಿಂದ ನಿಜವಾಗಿ ಕಂಡುಬಂದಿರುವುದಾದರೂ ಹತ್ತಾರುವರ್ಷಗಳಿಗೊಮ್ಮೆ ಮತ್ತೆ ಮತ್ತೆ ನಡೆಯುತ್ತಿರುವುದನ್ನು ನೋಡಿದರೆ ಕಾಮಾಂಧರಾದ ಅಜ್ಞಮಾನವರ ನೀಚವರ್ತನೆಗಾಗಿ ವ್ಯಸನವುಂಟಾಗುತ್ತದೆ.

ಪ್ರಿಯವಾಚಕ ಮಹಾಶಯ!

ಈ ಮಹಾಮಹಿಮರ ಅದ್ಭುತ ಕಾರ್ಯಗಳನ್ನೆಲ್ಲಾ ಸಮೂಲವಾಗಿ ತಿಳಿಸಲು ಯಾವುದೊಂದು ಸಂಪೂರ್ಣ ಗ್ರಂಥವೂ ಇನ್ನೂ ದೊರೆತಿಲ್ಲವಾದರೂ ದೊರಕಿದ ಆಧಾರಗಳಿಂದ ಇಷ್ಟರಮಟ್ಟಿಗೆ ತಿಳಿಸಿರುವೆನು. ಭಗವತ್ಕೃಪೆಯಿಂದ ನನ್ನ ಪ್ರಯತ್ನವು ಸಫಲಗೊಂಡಲ್ಲಿ ಎಂದಾದರೊಮ್ಮೆ ಈ ಮಹಾತ್ಮನ ಚರಿತ್ರೆಯನ್ನೇ ಒಂದು ಗ್ರಂಥವಾಗಿ ರಚಿಸಿ ವಾಚಕರಿಗೆ ಸಮರ್ಪಿಸುವೆನು.



# ವೀರಶೈವಾಚಾರವೂ, ಆರೋಗ್ಯಶಾಸ್ತ್ರವೂ.

(ಶ್ರೀಯುತ ಎಚ್. ಜಿ. ಸಿದ್ಧಲಿಂಗಯ್ಯ ಹಾರೋಹಳ್ಳಿ ಡಿ. ಬೆಂಗಳೂರ.)

ಶ್ಲೋ॥ ಆಚಾರ ಹೀನಃ ಪುರುಷೋ ಲೋಕೇಭವತಿನಿಂದಿತಃ॥

ಎಂಬ ರೀತಿಯಾಗಿ ನಮ್ಮ ಹಿರಿಯರು ಹೇಳಿರುವ ವಾಕ್ಯವನ್ನು ಚನ್ನಾಗಿ ವಿಚಾರಮಾಡಿ ನೋಡಿದರೆ ಮೇಲ್ಕಂಡ ವಾಕ್ಯವು ಮನುಷ್ಯನ ಆರೋಗ್ಯಕ್ಕೂ, ಮೋಕ್ಷಕ್ಕೂ ಸಂಬಂಧಿಸಿರುವುದು ಚನ್ನಾಗಿ ವ್ಯಕ್ತವಾಗುವುದು. ನಮ್ಮ ವೀರಶೈವ ಮತದ ಪ್ರತಿಯೊಂದು ಸೂತ್ರಗಳೂ ಆರೋಗ್ಯಶಾಸ್ತ್ರಕ್ಕೆ ಅನುಸಾರವಾಗಿವೆ. ಆದರೆ ಅವುಗಳನ್ನು ಬಹಿರಂಗವಾಗಿಡದೆ ಆಚಾರವೆಂಬ ನೆವದಿಂದ ಆ ಸೂತ್ರಗಳನ್ನು ಪ್ರತಿಯೊಬ್ಬರೂ ಅನುಸರಿಸಿ ಧೃಢಕಾಯರಾಗಲೆಂಬ ಅಭಿಪ್ರಾಯದಿಂದ, ಅವುಗಳನ್ನು ಪ್ರತಿಯೊಬ್ಬರೂ ಅನುಸರಿಸಲೇಬೇಕೆಂದೂ ತಪ್ಪಿದರೆ ಮಹಾಪಾಪವು ಸಂಘಟಿಸುವದೆಂದೂ ಕಟ್ಟಾಜ್ಞೆಯನ್ನು ಮಾಡಿರುತ್ತಾರೆ. ಎಲ್ಲಿಯ ವರೆವಿಗೆ ಜನರು ಆಚಾರವನ್ನು ಬಿಡದೆ ಅನುಸರಿಸುತ್ತಿದ್ದರೋ ಅಲ್ಲಿಯುವರೆಗೆ ಶಕ್ತರೂ ತೇಜಸ್ವಿಗಳೂ ಆಗಿದ್ದರು. ಈಗಿನ ನವನಾಗರೀಕತೆಯ ಪ್ರಭಾವದಿಂದ ಆಚಾರವು ಕಾಡನ್ನು ಸೇರಿ ಜನರು ನಿಃಶಕ್ತರಾಗುತ್ತಿರುವದು ನಮಗೆ ಚನ್ನಾಗಿ ಕಾಣುತ್ತಿದೆ ಪೂರ್ವದ ಜನರದೇಹ ಶಕ್ತಿಯನ್ನೂ ಈಗಿನವರ ಶಕ್ತಿಯನ್ನೂ ನೋಡಿದರೆ ಒಂದಕ್ಕೊಂದು ಸಂಬಂಧವೇ ಇಲ್ಲ. ಇದಕ್ಕೆಲ್ಲಾ ನಮ್ಮ ಪೂರ್ವಾಚಾರವನ್ನು ಬಿಟ್ಟದ್ದೇ ಕಾರಣವೆಂದು ಊಹಿಸಬಹುದಾಗಿದೆ. ಹಿಂದಿನವರು ಕಂಬಳಿಯನ್ನು ಹೊದ್ದುಕೊಂಡೇ ತಿರುಗಾಡುತ್ತಿದ್ದರು. ಈಗಿನ ನಾಗರೀಕತೆಯಲ್ಲೂ ಹಾಗೆ ಮಾಡಲಾದೀತೆ ಎಂದು ಅಕ್ಷೇಪಿಸಬಹುದು. ಬೇಕಾದವರು ಬೇಕಾದ ಕರಹೆಯ ಬಟ್ಟೆಯನ್ನು ಹೊದೆಯಲಿ, ಬೇಕಾದ ಮನೆಯಲ್ಲಿ ವಾಸಿಸಲಿ, ಬೇಕಾದ ಭಾಷೆಯನ್ನು ಕಲಿಯಲಿ, ಬೇಕಾದ ಯಾನಗಳಲ್ಲಿ ತಿರುಗಲಿ, ಬೇಡವೆನ್ನುವರಾರು? ಇದಕ್ಕಾಗಿ ನಮ್ಮ ಆಚಾರವನ್ನು ತ್ಯಜಿಸಬೇಕೇ? ನಮ್ಮ ಹಿರಿಯರು ತಮ್ಮ ಮತಾಚಾರಕ್ಕೆ ಸ್ವಲ್ಪವೂ ಲೋಪಬರದಂತೆ ನಡೆಯುತ್ತಿದ್ದುದರಿಂದಲಲ್ಲವೇ ಅಷ್ಟು ಶಕ್ತರಾಗಿದ್ದುದು? ಉದಾಹರಣೆಗಾಗಿ ಶ್ರೀ ಬಸವೇಶ್ವರ ವಿಜಯದಲ್ಲಿ ನೋಡಿರಿ. ಶ್ರೀ ಮಡಿವಾಳ ಮಾಚಿದೇವನೇ ಮೊದಲಾದವರು ಆನೆಯನ್ನು ಸಹ ಲೆಕ್ಕಿಸುತ್ತಿರಲಿಲ್ಲವೆಂದು

ತಿಳಿಯುತ್ತದೆ. ಮತ್ತು ಶ್ರೀ ಬಸವೇಶ್ವರನ ಕಾಲದಲ್ಲಿ ಬಿಜ್ಜಳನ ರಾಜ್ಯದಮೇಲೆ ಯಾರೂ ದಂಡೆತ್ತಿ ಬಂದಿಲ್ಲ. ಯಾಕಂದರೆ ಅಲ್ಲಿಯವರು ಅಷ್ಟು ಶಕ್ತರಾಗಿದ್ದರು. ಅಲ್ಲಿಯ ಸೈನಿಕರು ಯಾರು? ಶ್ರೀಬಸವೇಶನ ಆಥಿತ್ಯದಲ್ಲಿದ್ದ ಲಕ್ಷದ ಮೇಲೆ ತೊಂಭತ್ತಾರುಸಾವಿರ ಜನ ಜಂಗಮರು. ಇವರೆಲ್ಲರೂ ವೀರಶೈವರು. ಅತ್ಯಂತ ನಿಷ್ಠರು. ಸದಾಚಾರಿಗಳು. ಪ್ರಾಣ ಹೋಗುವ ಪ್ರಸಂಗ ಬಂದರೂ ತಮ್ಮ ಆಚಾರವನ್ನು ಬಿಡುತ್ತಿರಲಿಲ್ಲ. ಅವರ ಆಚಾರವೇ ಅವರನ್ನು ಅಷ್ಟು ಶಕ್ತರನ್ನಾಗಿ ಮಾಡಿತು.

ಅಂತಹ ಆಚಾರಗಳಲ್ಲಿ ಮುಖ್ಯವಾದವುಗಳು ಮತ್ತು ಅವುಗಳ ಉಪಯೋಗಃ—

೧. ಸ್ನಾನ, ಮಡಿಃ— ಇವುಗಳಿಂದ ಶರೀರದ ಮೇಲ್ಭಾಗದ ಪರಿಶುದ್ಧತೆಯುಂಟಾಗಿ, ನೋಡಲು ಅಲಂಕಾರವಾಗಿರುವದು. ತನ್ಮೂಲಕ ಮನಸ್ಸು ಸಂತೋಷವನ್ನು ಹೊಂದುವುದು.

೨. ಲಿಂಗಪೂಜೆಃ— ಲಿಂಗಪೂಜೆಯನ್ನು ಮಾಡುವುದರಿಂದ ಮನಸ್ಸು ಲಿಂಗದಲ್ಲಿ ನೆಟ್ಟು ಭಕ್ತಿಯುಂಟಾಗುವದು. ಭಕ್ತಿಯಿಂದ ಬೇರೆ ಕಡೆ ಚಲಿಸುವುದಿಲ್ಲ. ಇದರಿಂದ ಮುಕ್ತಿಯೂ, ಲೌಕಿಕ ವ್ಯವಹಾರಗಳಲ್ಲಿ ಹಿಡಿದ ಕೆಲಸಗಳನ್ನು ಒಂದೇ ಮನಸ್ಸಿನಿಂದ ಪೂರೈಸಲು ಧೃಡತೆಯೂ ಉಂಟಾಗುವದು.

ಲಿಂಗಪೂಜೆಗಾಗಿ ಉಪಯೋಗಿಸಲ್ಪಡುವ ಗಂಧ, ಪುಷ್ಪ, ಧೂಪ ಮೊದಲಾದವುಗಳಿಂದ ಮನಸ್ಸು ವಿಕಸಿತವಾಗಿ ಹಿಂದಿನ ಮನಸ್ಸಿನ ದುಭಾ೯ವನೆಗಳೂ, ಚಿಂತೆಯೂ ತೊಲಗಿ, ಸಂತೋಷವು ಉದಯಿಸಿ, ಮನುಷ್ಯನನ್ನು ತನ್ನ ಮುಂದಿನ ಕೆಲಸಗಳಲ್ಲಿ ಉದ್ಯುಕ್ತನಾಗುವಂತೆ ಪ್ರೇರೇಪಿಸಿ ನವಚೇತನವನ್ನುಂಟುಮಾಡುವುದು.

೩. ವಿಭೂತಿಧಾರಣೆಃ— ಇದರಿಂದ ಶರೀರದಲ್ಲಿ ಶಾಖವುಂಟಾಗುವದು. ಮತ್ತು ಅಜೀರ್ಣ ಮೊದಲಾದ ವ್ಯಾಧಿಗಳನ್ನು ನಿವಾರಿಸಲು ಸಹಕಾರಿ.

೪. ರುದ್ರಾಕ್ಷಿಧಾರಣೆಃ— ಇದರಿಂದ ಶರೀರದ ಶಾಖವು ಹೆಚ್ಚು ಕಡಿಮೆಯಾಗದಂತೆ ಸಮಸ್ಥಿತಿಯಲ್ಲಿಡುವ ಶಕ್ತಿಯಿದೆ. ಮತ್ತು ಅನೇಕ ರೋಗಗಳನ್ನು ನಾಶ ಪಡಿಸಬಲ್ಲುದು

೫- ಪ್ರಾಣಾಯಾಮಃ-- ಇದು ಶ್ವಾಸಕೋಶಗಳ ಸ್ಥಿತಿಯನ್ನು ಕ್ರಮಗೊಳಿಸುವುದು. ಶರೀರಕ್ಕೆ ಶಕ್ತಿಯನ್ನೂ ಆಯುಸ್ಸನ್ನೂ ಕೊಡುವುದು.

## ಪೂರ್ವಾಚಾರಕ್ಕೂ ನವೀನವ್ಯಾಯಾಮಕ್ರಮಕ್ಕೂ ಇರುವ ಸಂಬಂಧ. *(Physical culture)*

### ಪೂರ್ವಾಚಾರ.

(ಅ) ಪ್ರತಿದಿನವೂ ಉಷಃಕಾಲಕ್ಕೆ ಎದ್ದು ಬಹಿಃಪ್ರದೇಶಕ್ಕೆ ಹೋಗಿ ಜಲಮಲಬಾಧೆಗಳನ್ನು ತೀರಿಸಿ ನದಿಗೋ ಕೊಳಕ್ಕೋ ಹೋಗಿ ಬಟ್ಟೆಗಳನ್ನು ಚನ್ನಾಗಿ ಒಗೆದು ಮಡಿಮಾಡಿ ಪತ್ರೆಪುಷ್ಪಗಳನ್ನು ಸಂಗ್ರಹಿಸಿಕೊಂಡು ಬಂದು, ಸ್ನಾನಮಾಡಿ, ಭಕ್ತಿಯಿಂದ ಏಕಚಿತ್ತನಾಗಿ ಶಿವಾರ್ಚನೆಯನ್ನು ಸೂರ್ಯೋದಯದೊಳಗಾಗಿ ತೀರಿಸಿ, ಲಿಂಗತೀರ್ಥವನ್ನು ಸೇವಿಸಿ, ನಂತರ ಲಿಂಗ ನೈವೇದ್ಯ ಮಾಡಿದ ಹಾಲು ಹಣ್ಣುಗಳನ್ನು ಸೇವಿಸಬೇಕು.

(ಬ) ಮಧ್ಯಾನ್ಹ ಹನ್ನೆರಡು ಘಂಟೆಗೆ ಪುನಃ ಸ್ನಾನಮಾಡಿ ಶಿವಾರ್ಚನೆಯನ್ನು ತೀರಿಸಿ ಸಂತೋಷವಾಗಿ ಮಾತನಾಡುತ್ತ ಊಟ ಮಾಡಬೇಕು.

(ಕ) ಸಾಯಂಕಾಲ ಐದುಘಂಟೆಗೆ ಪುನಃ ಮಡಿ ವಗೈರೆ ಮಾಡಿ ಪತ್ರೆ ಪುಷ್ಪಗಳನ್ನು ಸಂಗ್ರಹಿಸಿ ಎಂಟು ಘಂಟೆಯೊಳಗಾಗಿ ಶಿವಾರ್ಚನೆಯನ್ನು ತೀರಿಸಿ ಊಟ ಮಾಡಿ ಎಡಮಗ್ಗಲಾಗಿ ಮಲಗಬೇಕು.

### ಅನುಕ್ರಮವಾಗಿ ನವೀನ ಕ್ರಮ

(ಅ) ಬೆಳಿಗ್ಗೆ ನಾಲ್ಕು ಘಂಟೆಗೆ ಎದ್ದು ದೇವರನ್ನು ಧ್ಯಾನಿಸಿ ಜಲಮಲವಿಸರ್ಜನೆಯಾದ ನಂತರ ಹೊರಗಿನ ಗಾಳಿಯಲ್ಲಿ ಒಂದು ಘಂಟೆಯ ಕಾಲ ವ್ಯಾಯಾಮವನ್ನು ಮಾಡಿ ಸ್ನಾನ ಮಾಡಿ ಒಂದು ಲೋಟಾ ತಣ್ಣೀರನ್ನು ಕುಡಿದು ಹಣ್ಣು ಹಾಲು ಅಥವಾ ಬೇರೆಯಾವುದಾದರೂ ಸರಿಯಾದ ಆಹಾರವನ್ನು ಎಂಟು ಘಂಟೆಯೊಳಗಾಗಿ ಮಿತವಾಗಿ ಸೇವಿಸಬೇಕು.

(ಬ) ಮಧ್ಯಾನ್ಹ ಒಂದು ಘಂಟೆಗೆ ಸಂತೋಷವಾಗಿ ಮಾತನಾಡುತ್ತಾ ಊಟ ಮಾಡಬೇಕು.

(ಕ) ಸಾಯಂಕಾಲ ಐದು ಘಂಟೆಗೆ ಬಯಲಿನಲ್ಲಿ ಆಟವಾಡಿ, ಬಿಸಿನೀರಿನಲ್ಲಿ ಸ್ನಾನಮಾಡಿ, ಊಟಮಾಡಿ, ದೇವರನ್ನು ಧ್ಯಾನಿಸಿ, ಎಡ ಮಗ್ಗಲಾಗಿ ಮಲಗಬೇಕು.

ವಾಚಕ ಮಹಾಶಯರೇ, ನಮ್ಮ ವೀರಶೈವ ಮತಸೂತ್ರಗಳು ಎಷ್ಟು ಬಂಧುರವಾದವುಗಳು ಎಂಬುದನ್ನು ಯೋಚಿಸಿರಿ. ನವೀನವಾಗಿ ಕೈಗೊಳ್ಳುತ್ತಿರುವ ವ್ಯಾಯಾಮಗಳು ಇದರಲ್ಲಡಗಿಲ್ಲವೆ? ಇದನ್ನೆಲ್ಲಾ ನಾವು ಯೋಚಿಸದೆ ಪೂರ್ವದವರು ಮೂಢರೆಂದು ಅವರ ಆಜ್ಞೆಗಳನ್ನು ನಡೆಸದಿರುವುದು ನ್ಯಾಯವೇ? ಅವರು ಹೇಳಿರುವುದು ನಮಗೆ ಒಳ್ಳೆಯದಾಗುವುದಕ್ಕಲ್ಲವೇ?

ಈ ಮಧ್ಯ ಒಂದು ವಿಚಾರಃ—ತ್ರಿಕಾಲದಲ್ಲಿಯೂ ಶಿವಪೂಜೆಯನ್ನು ಮಾಡಬೇಕೆಂದು ವಿಧಿಯಿದೆ. ಆದರೆ ಅದನ್ನನುಸರಿಸುವವರು ಮಾತ್ರ ಪೂಜಿ. ಅಥವಾ ಅಲ್ಪಸಂಖ್ಯಾಕರು. ಯಾಕೆ? ತಿಳುವಳಿಕೆ ಹೇಳುವವರು ಕಡಿಮೆ. ಶಿಷ್ಯವರ್ಗಕ್ಕೆ ತಿಳುವಳಿಕೆಯನ್ನು ಬೋಧಿಸಿ ಸರಿಯಾದ ದಾರಿಗೆ ತರಬೇಕಾದದ್ದು ಗುರುಗಳ ಕರ್ತವ್ಯ. ಆದರೆ ಅವರಲ್ಲೇ ಅನೇಕರು ಅನುಸರಿಸುವದಿಲ್ಲ. ಇನ್ನು ಶಿಷ್ಯರಿಗೆ ಹೇಳುವುದೇನು? ಸರಿ. ಇನ್ನು ಕೇಳಬೇಕೆ? ಗುರುಗಳು ಸ್ವಲ್ಪ ಬಿಟ್ಟರೆ ಶಿಷ್ಯರು ಪೂರ್ತಿಯಾಗಿ ಬಿಡುತ್ತಾರೆ. ಇವರು ಶಿಷ್ಯರನ್ನುದ್ಧರಿಸುವುದು ಹಾಗಿರಲಿ. ತಮ್ಮನ್ನು ತಾವೇ ಉದ್ಧರಿಸಿಕೊಳ್ಳಲು ಸಹ ಶಕ್ತರಾಗದಿರುವುದು ದೊಡ್ಡ ಕೊರತೆಯಾಗಿದೆ. ನಾವು ಹೆಚ್ಚು, ನೀವು ಹೆಚ್ಚು ಎಂಬ ದೊಡ್ಡಭೂತವು ಅವರನ್ನಾವರಿಸಿಕೊಂಡಿದೆ. ನಮ್ಮ ಪಂಡಿತರಾದರೋ ತಮ್ಮ ಪಾಂಡಿತ್ಯವೆಲ್ಲವನ್ನೂ ಮತಗ್ರಂಥಗಳನ್ನು ವಿಶದವಾಗಿಯೂ ಸುಲಭವಾಗಿಯೂ ಬರೆದು ಪಾಮರರೂ ಸಹ ಮತವಿಷಯಗಳನ್ನು ತಿಳಿದುಕೊಳ್ಳುವಂತೆ ಮಾಡುವುದನ್ನು ಬಿಟ್ಟು ಅನೇಕರು ಹಿಂದಿನ ನಮ್ಮ ಶರಣರು, ಮತಾಚಾರ್ಯರು ಇವರುಗಳನ್ನು ದೂಷಿಸುತ್ತಾ ತಮ್ಮದೇ ಸಿದ್ಧಾಂತವೆಂದು ಪ್ರತಿಪಾದಿಸಲು ಹೊರಟಿರುತ್ತಾರೆ. ಭಕ್ತರಲ್ಲಿ ಕೆಲವರು ಒಂದು ಪಕ್ಷಕ್ಕೆ ಸೇರಿ ಇದೇ ಸರಿ ಯೆಂದೂ, ಕೆಲವರು ಮತ್ತೊಂದು ಪಕ್ಷಕ್ಕೆ ಸೇರಿ ಅದೇ ಸರಿಯೆಂದೂ ಜಗಳವಾಡಲು ಸುರು ಮಾಡಿದ್ದಾರೆ. ಗುರುಗಳ ಗುದ್ದಾಟ, ಪಂಡಿತರ ಬಡಿದಾಟ, ಶಿಷ್ಯರ ಕಚ್ಚಾಟ ಇದನ್ನೆಲ್ಲಾ ಸರ್ವ ವೀರಶೈವ ಮಹನೀಯರೂ ಚನ್ನಾಗಿ

ಯೋಚಿಸಿ ಅಂತಃಕಲಹಗಳನ್ನು ಬಿಟ್ಟು ಒಮ್ಮನಸಿನಿಂದ ಕೆಲಸ ಮಾಡಿ ದಾರಿ ತಪ್ಪಿ ಸ್ವೇಚ್ಛೆಯಾಗಿ ಹೋಗುವವರನ್ನು ಸದುಪದೇಶದಿಂದ ಸನ್ಮಾರ್ಗಕ್ಕೆ ತಂದು ಮತಾಚಾರವನ್ನು ಪುನರಭಿವೃದ್ಧಿಯನ್ನೈದುವಂತೆ ಮಾಡಲು ಪ್ರಯತ್ನ ಪಟ್ಟರೆ ಇದೇನೂ ಅತಿಶಯವಾದ ಕಾರ್ಯವಲ್ಲ. ಪ್ರಥಮತಃ ಗುರುವರ್ಗದವರೂ ಪಂಡಿತರೂ ತಾವು ಅನುಷ್ಠಾನದಲ್ಲಿ ತಂದು ಮಾರ್ಗದರ್ಶಕರಾಗಿ ಶಿಷ್ಯಮಂಡಲಿಗೆ ಬೋಧಿಸಿ ಮತೋದ್ಧಾರ ಮಾಡಿ ಜಗಜ್ಜನಕನ ಕೃಪೆಗೆ ಪಾತ್ರರಾಗಬೇಕೆಂದು ನನ್ನ ಸವಿನಯ ಪ್ರಾರ್ಥನೆ.

---

## ಸುಡುಗಾಡು ಸಿದ್ಧರ ವಚನ.

(ಇದು ಒಂದು ಓಲೆಗರಿಯ ಪುಸ್ತಕದಲ್ಲಿ ಟೀಕು ಸಹಿತವಾಗಿದ್ದುದು ಒಂದೇ ವಚನವಾಗಿದೆ. ಈ ಸಿದ್ಧರು ಇನ್ನೂ ಹೆಚ್ಚಾಗಿ ವಚನಗಳನ್ನು ಬರೆದಿರುವರೆ ಎಂಬುದು ಗೊತ್ತಿಲ್ಲ. --ಸಂಗ್ರಾಹಕ)

**ಶ್ರೀ ಎಚ್ ಜಿ ಸಿದ್ಧಲಿಂಗಯ್ಯಾ ಮು. ಹಾರೋಹಳ್ಳಿ**

---

ಅತ್ತತ್ತತ್ತ। ಮಹೀಂದ್ರಜಾಲಿ। ಜಾಜಾಜಿ। ಮಲನಾಡುಚೌಡಿ। ಚಿಂ। ಕುರುಬರ ಪಿಂಡಿ। ಚಿಂ। ಹಲ್ಲು ಗುಸುಗುನಾಗಿ। ಗುಲು ಗುಲು ಮತ್ತೆ ಬಾ। ಆಹಾ, ಆಹಾ ಉಫ್ ಮಂತ್ರಗಾಳಿ। ಚೀಲದಾಗೆ ಬಾ। ಕಿವಿಯೊಳಗೆ ಹೋಗು। ಬಾಯಾಗಿಂದ ಬಾ। ಮೈಯೊಳಗೆ ಹೋಗು। ಬೆನ್ನಾಗಿಂದ ಬಾ। ಮೂಗಿನೊಳಗೆ ಹೋಗು। ಕಂಣಾಗಿಂದ ಬಾ। ತಲೆವಳಗೆ ಹೋಗು। ಗಾಳಿ, ಗಾಳಿ, ಧೂಳಿಗೆ ಧೂಳಿ। ಬಯಲಿಗೆ ಬಯಲು। ನಿರ್ಬಯಲು। ಗಾಳಿ ಪೂಜೆ ಸುಡುಗಾಡಿಂದೆ ಬಂದೆವಯ್ಯ। ಶಂಕರಪ್ರಿಯ ಚನ್ನಕದಂಬಲಿಂಗ॥ ॥--

**ಟೀಕು:--**

ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವರೆಂಬ ಪಂಚ ಮೂರ್ತಿಗಳ ಸಂದಣಿ ಇಲ್ಲದಂದು ಪರಶಿವನು ನಿರವಯನೆಂಬುದೀಗ ॥ಅತ್ತತ್ತತ್ತ॥ ಎಂಬ ಶಬ್ದಕ್ಕೆ ಅರ್ಥ.

ಅಂಥ ಪರಶಿವಂಗೆ ತನ್ನ ಲೀಲಾ ವಿನೋದಕ್ಕೆ ಜಗತ್ಸೃಷ್ಟ್ಯರ್ಥವಾನೆನಹುದೋರಿತೆಂಬುದೀಗ ॥ಮಹೀಂದ್ರ ಜಾಲಿ॥ ಎಂಬ ಶಬ್ದಕ್ಕೆ ಅರ್ಥ.

ಆ ಪರಶಿವನ ನೆನಹುಮಾತ್ರದಲ್ಲಿ ಚಿತ್ತು ಉದಯಿಸಿ, ಆ ಚಿತ್ತುವಿನಿಂದ ಚಿಂನಾದ-ಚಿದ್ಬಿಂದು-ಚಿಕ್ಕಲೆ, ಆ ಮೂಲ ಚಿತ್ತು ಘಟ್ಟಿಗೊಂಡು ಮಹಾಲಿಂಗವಾಯಿತು. ಆ ಮಹಾಲಿಂಗದಿಂದ ಕರ್ಮಸಾದಾಖ್ಯ ಕರ್ತೃಸಾದಾಖ್ಯ - ಮೂರ್ತಿಸಾದಾಖ್ಯ - ಅಮೂರ್ತಿ ಸಾದಾಖ್ಯ - ಶಿವಸಾದಾಖ್ಯವೆಂಬ ಪಂಚ ಸಾದಾಖ್ಯ ಮೂರ್ತಿಗಳು. ಆ ಸಾದಾಖ್ಯ ಮೂರ್ತಿಗಳಿಂದ-ಆಚಾರಾದಿ ಪಂಚಲಿಂಗಗಳು. ಆ ಲಿಂಗಗಳಿಂದ ಸದ್ಯೋಜಾತಾದಿ ಪಂಚ ಮುಖಗಳು. ಆ ಪಂಚ ಮುಖಗಳಿಂದ ನಕಾರಾದಿ ಪಂಚಾಕ್ಷರ ಆ ಪಂಚಾಕ್ಷರದಿಂದ ನಿವೃತ್ತ್ಯಾದಿ ಪಂಚಕಲೆ. ಆ ಕಲೆಯಿಂದ ಕ್ರಿಯಾದಿ ಪಂಚ ಶಕ್ತಿಗಳು. ಆ ಶಕ್ತಿಗಳಿಂದ ಮನ, ಬುದ್ಧಿ, ಚಿತ್ತ, ಅಹಂಕಾರಂಗಳ ಜನನ. ಆ ಮನ, ಬುದ್ಧಿ, ಚಿತ್ತ, ಅಹಂಕಾರಗಳಿಂದ ಪಂಚತನ್ಮಾತ್ರೆಯಂಗಳು. ಆ ಪಂಚತನ್ಮಾತ್ರೆಯಂಗಳಿಂದ ಪಂಚ ಭೂತಂಗಳ ಉತ್ಪತ್ತಿ. ಆ ಪಂಚ ಭೂತಂಗಳಿಂದ ಪಂಚೀಕರಣವನೈದಿ ಇಪ್ಪತ್ತೈದು ತತ್ವಗಳಾಗಿ ಸಕಲಾತ್ಮರು ಸಚರಾಚರಪ್ರಾಣಿಗಳ ಉದಯವೆಂಬುದೀಗ ॥ ಜಾಜಾಜಿ ॥ ಎಂಬ ಶಬ್ದಕ್ಕೆ ಅರ್ಥ.

ಅದರೊಳಗೆ ಶಿವಾಂಶಿಕರ ಆತ್ಮಲಿಂಗದಲ್ಲಿ ಅವಿದ್ಯಾಮಲ ಆಣವಮಲ ಕಾರ್ಮಿಕಮಲವೆಂಬ ಮಲತ್ರಯಂಗಳಿಗೆ ತಾನೆ ಕರ್ತೃವಾಗಿದ್ದಾಳೆಂಬುದೀಗ ॥ ಮಲನಾಡುಚೌಡಿ ॥ ಎಂಬ ಶಬ್ದಕ್ಕೆ ಅರ್ಥ.

ಆ ಮಾಯೆ ಆತ್ಮನ ಚಿತ್ತಕ್ಕೆ ಕರಣೇಂದ್ರಿಯ ವಿಷಯಂಗಳ ಕುರುಹಿಟ್ಟು ಬರೆಸಿದಳೆಂಬುದೀಗ ॥ಚಿಂ ಕುರುಬರ ಪಿಂಡಿ॥ ಎಂಬ ಶಬ್ದಕ್ಕೆ ಅರ್ಥ

ಆ ಮಾಯೆ ಚಿತ್ತವ ವೇಧಿಸಿ ಷೋಡಶ ದಂತಂಗಳೆಂಬ ಅಂತರಂಗದ ಅಷ್ಟಮದ ಬಹಿರಂಗದ ಅಷ್ಟ ಮದಂಗಳಂ ಪ್ರಜ್ವಲಿಸಿದಳೆಂಬುದೀಗ ॥ಚಿಂ ಹಲ್ಲು ಗುಸುಗು ನಾಗಿ॥ ಎಂಬ ಶಬ್ದಕ್ಕೆ ಅರ್ಥ.

ಆ ಮಾಯೆ ಆತ್ಮನಂ ತನ್ನ ವಶಮಾಡಿಕೊಂಡು ಘ್ರಾಣೇಂದ್ರಿಯದಲ್ಲಿ ಗಂಧವಿಷಯದೊಡನೆ ಜಿಹ್ವೇಂದ್ರಿಯದಲ್ಲಿ ರಸ ವಿಷಯದೊಡನೆ, ನೇತ್ರೇಂದ್ರಿಯದಲ್ಲಿ ರೂಪುವಿಷಯದೊಡನೆ ಶ್ರೋತ್ರೇಂದ್ರಿಯದಲ್ಲಿ ಶಬ್ದವಿಷಯದೊಡನೆ ತ್ವಗಿಂದ್ರಿಯದಲ್ಲಿ ಆನಂದಿಸುವುದರೊಡನೆ, ಇಂತೀಪ್ರಕಾರದಿಂದ ಪಂಚೇಂದ್ರಿಯಂಗಳ ಉಲುಹಿನೊಳಡಗಿಸಿದಳೆಂಬುದೀಗ ॥ಗುಲು ಗುಲು॥ ಎಂಬ ಶಬ್ದಕ್ಕೆ ಅರ್ಥ.

ಅಂತಪ್ಪ ಮಾಯಾ ವಶದಲ್ಲಿ ಬಿದ್ದ ಆತ್ಮಂಗೆ ಎತ್ತಲಾನುಕಾಲಕ್ಕೆ ಕಾಕತಾಳನ್ಯಾಯ, ಗಣಾಕ್ಷರ ನ್ಯಾಯದಂತೆ। ಶಿವಕೃಪೆಯಾಗಲು ಸೌಮ್ಯ

ಜ್ಞಾನೋದಯವಾಗಿ ಪೂರ್ವದನಿಗೆ ಗುರುವನರಸಿ ಕೊಂಡು ಗುರೂಪಾವಸ್ತೆಯಂ ಮಾಡಿದನೆಂಬುದೀಗ ॥ ಮತ್ತೆ ಬಾ ಮತ್ತೆ ಬಾ ॥ ಎಂಬ ಶಬ್ದಕ್ಕೆ ಅರ್ಥ.

ಆ ಗುರು ಶಿಷ್ಯನಂ ನೋಡಿ ಆಹಾ ಎಂನ ಚಿದಂಶಿಕನೆಂತು ಹಸ್ತವ ಮಸ್ತಕದಲ್ಲಿಟ್ಟು ಕರ್ಮಜಾತ ಜಿತೇಂದ್ರಿಯಂಗಳ ಪೂರ್ವಾಶ್ರಯ ದೋಷಂಗಳಂ ಪರಿಹರಿಸಿ ಬ್ರಹ್ಮನಿಂ ಬರೆಯಲ್ಪಟ್ಟ ಆ ಕವಿನಿ ಎಂಬ ಪಂಚಲಿಖಿತಂಗಳಂ ಕೊಡದು. ಲಿಂಗ ಜಂಗಮ ಸುಜ್ಞಾನ ಶಿವಮಂತ್ರ ದಾಸೋಹವೆಂದಳವಡಿಸಿ ಸ್ಥೂಲ ಸೂಕ್ಷ್ಮ ಕಾರಣವೆಂಬ ತ್ರಿವಿಧ ತನುವಿಗೆ ವೇಧಾ ಮಂತ್ರ ಕ್ರಿಯಾ ಎಂಬ ತ್ರಿವಿಧ ದೀಕ್ಷೆಯನ್ನಿತ್ತು ಇಷ್ಟ, ಪ್ರಾಣ, ಭಾವ ಲಿಂಗ ಸಂಬಂಧವಂ ಮಾಡಿ ಅಂಗಜ್ಞಾನವಂ ದಹಿಸಿ ಚಿದಂಗ ಸ್ವರೂಪನಂ ಮಾಡಿದನೆಂಬುದೀಗ॥ಆಹಾ ಆಹಾ ಉಫ್ ಮಂತ್ರಗಾಳಿ॥ ಎಂಬ ಶಬ್ದಕ್ಕೆ ಅರ್ಥ.

ತತ್ ಶಿಷ್ಯನ ಅಂತರಂಗವ ಅರುಹಿನೊಳಗಿರ್ದ ಶಿವಕಳೆಯಂ ಆಹ್ವಾನಿಸಿ ಆತನ ಕರ್ಣದ್ವಾರದಲ್ಲಿ ಬೋಧಿಸಿದನೆಂಬುದೀಗ॥ ಚೀಲದಾಗಿಂದ ಬಾ। ಕಿವಿಯೊಳಗೆ ಹೋಗು ॥ ಎಂಬ ಶಬ್ದಕ್ಕೆ ಅರ್ಥ.

ಆ ಗುರು ಶಿಷ್ಯನ ಕರ್ಣದ್ವಾರದಲ್ಲಿ ಉಪದೇಶಂಗೈದ ಲಿಂಗಪ್ರಕಾಶವೆ ಜಿಹ್ವೆಯಲ್ಲಿ ನಿರಂತರ ನೆಲೆಗೊಂಡು ಶಿಷ್ಯನ ಸರ್ವಾಂಗವೂ ಪ್ರಣವಸ್ವರೂಪವಾಯಿತೆಂಬುದೀಗ ॥ ಬಾಯಾಗಿಂದ ಬಾ ವೈಯೊಳಗೆ ಹೋಗು ॥ ಎಂಬ ಶಬ್ದಕ್ಕೆ ಅರ್ಥ.

ಆ ಶಿಷ್ಯನ ಆಸನ ಬಂಧಂಗಳಿಂದ ಅಧೋಮುಖವಾಗಿರ್ದ ಕುಂಡಲಿಸರ್ಪನ ಊರ್ಧ್ವ ಮುಖವನೈದಿಸಿ ರೇಚಕ ಪೂರಕಂಗಳಂ ನಿಲಿಸಿ ಕುಂಭಕ ಮಾಡೆಂದರುಹಿದನೆಂಬುದೀಗ || ಬೆಂನಾಗಿಂದೆಬಾ ಮೂಗಿನೊಳಗೆ ಹೋಗು ಎಂಬ ಶಬ್ದಕ್ಕೆ ಅರ್ಥ.

ಆ ಶಿಷ್ಯನ ಅಂತರಂಗದ ಮಹದರಿವು ನೇತ್ರದಿಂದ ಭಾವಕ್ಕೆ ಭಾವದಿಂದ ಮನಕ್ಕೆ ಮನದಿಂದ ಕರಸ್ಥಲದಲ್ಲಿರ್ದ ಇಷ್ಟ ಬ್ರಹ್ಮನಲ್ಲಿ ಅನಿಮಿಷನಾಗಲು ಆ ಲಿಂಗದ ಚಿತ್ಕಳೆಯೆ ಬ್ರಹ್ಮರಂಧ್ರದಲ್ಲಿ ಚತುರ್ದಳದಲ್ಲಿ ಚತುರ್ವಿಧ ಬಿಂದು ಲಿಂಗವಾಗಿ ಷಡುದಳದಲ್ಲಿ ಷಡ್ವಿಧ ಧಾತು ಲಿಂಗವಾಗಿ ದಶದಳದಲ್ಲಿ ದಶವಿಧ ಕ್ಷೇತ್ರ ಲಿಂಗವಾಗಿ ದ್ವಾದಳದಲ್ಲಿ ದ್ವಾದಶ ವಿಕೃತಿ ಲಿಂಗವಾಗಿ ಷೋಡಶದಳದಲ್ಲಿ ಷೋಡಶಕಲಾಲಿಂಗವಾಗಿ ದ್ವಿದಳದಲ್ಲಿ ಆತ್ಮವಿದ್ಯಾ ಲಿಂಗವಾಗಿ ಸಹಸ್ರ ದಳದಲ್ಲಿ ಸಹಸ್ರ ಕಳಾಲಿಂಗವಾಗಿ ತ್ರಿದಳದಲ್ಲಿ ಕ್ಷಕಾರಬೀಜ ವಿವೇಕ ಲಿಂಗವಾಗಿ ಏಕದಳದಲ್ಲಿ ಆಕಾರ ಪ್ರಣ

ವಸ್ವರೂಪವಾದ ಮಹಾಲಿಂಗವಾಗಿ ಪರಿಪೂರ್ಣವಾಯಿತ್ತೆಂಬುದೀಗ ॥ ಕಂಣಾಗಿಂದ ಬಾ ತಲೆ ಒಳಗೆ ಹೋಗು। ಎಂಬ ಶಬ್ದಕ್ಕೆ ಅರ್ಥ.

ಶ್ರೀಗುರು ಶಿಷ್ಯನ ಸಚ್ಚರಣವೆಂಬ ಸತ್ಕ್ರಿಯ ಸದಾಚಾರಂಗಳು ಮಹದರಿವೆಂಬ ಹಸ್ತದಲ್ಲಿ ಗತವಾಯಿತ್ತೆಂಬುದೀಗ ॥ ಅಂಗಾಲಾಗೆ ಬಾ ಅಂಗೈ ಒಳಗೆ ಹೋಗು ॥ ಎಂಬ ಶಬ್ದಕ್ಕ ಅರ್ಥ.

ಪ್ರಾಣಕ್ಕೆ ಮನ, ಮನಕ್ಕೆ ಮಹಾನುಭಾವ, ದೇಹಕ್ಕೆ ನಿರ್ದೇಹ, ನಿರ್ವಾಣ ಸಮಾಧಿ ಎಂಬುದೀಗ ॥ ಗಾಳಿಗೆ ಗಾಳಿ ಧೂಳಿಗೆ ಧೂಳಿ ॥ ಎಂಬ ಶಬ್ದಕ್ಕೆ ಅರ್ಥ.

ಶಿವನಿಂದ ಬಂದು ಶಿವನೊಳಗಾದ ಕುರುಹು ಆವುದೆಂದೊಡೆ, ಸುನಾದಮಯ ಸೂತ್ರ ಬ್ರಹ್ಮರಂಧ್ರವೆಂಬ ಚಿದ್ಭಸಿತ ಸ್ಥಾನಮಂಡಲ ದಿಂದ ಬಂದೆವೆಂಬುದೀಗ ॥ ಗಾಳಿ ಪೂಜೆ ಸುಡುಗಾಡಿಂದ ಬಂದವಯ್ಯಾ। ಎಂಬ ಶಬ್ದಕ್ಕೆ ಅರ್ಥ....

ಶಂಭು ಶಿವನು ಕರ ಮಾಡುವಲ್ಲಿ ಪ್ರಿಯ ಪ್ರೀತಿಯನುಳ್ಳಂ ಎಂಬುದೀಗ ॥ ಚನ್ನಕದಂಬಲಿಂಗ, ಪರಶಿವಲಿಂಗ ॥ ಎಂಬ ಶಬ್ದಕ್ಕೆ ಅರ್ಥ.

# ವೀರಶೈವ ವರ್ಣಾಶ್ರಮ ವಿಚಾರವು.

ಲೇಖಕರು—ವೇ. ಪಂಚಾಕ್ಷರ ಶಾಸ್ತ್ರಿಗಳು ಹಿರೇಮಠ ಶಿರೋಳ.

ವೀರಶೈವ ಮತವು ಪರಮ ವೈದಿಕಮತವು. ಉಳಿದ ಪ್ರಾಕೃತ ಮತದಲ್ಲಿರುವ ಚತುರ್ವರ್ಣಾಶ್ರಮಗಳಂತೆ ಈ ಮತದಲ್ಲಿಯೂ ಚತುರ್ವರ್ಣಾಶ್ರಮಗಳಿರುವವು. ಇವೆರಡರಲ್ಲಿ ವಿಶೇಷವೆಂದರೆ ಪ್ರಾಕೃತ ಸೃಷ್ಟಿ, ಅಪ್ರಾಕೃತಸೃಷ್ಟಿಯೆಂಬ ಸೃಷ್ಟಿಭೇದದಿಂದ ಉಭಯ ಸೃಷ್ಟಿಗಳಲ್ಲಿ ಅಪ್ರಾಕೃತ ಸೃಷ್ಟಿಗೆ ಪರಶಿವನು ಮುಕ್ತಿಸಾಧಕಗಳಾದ ವಿಶೇಷ ಧರ್ಮಗಳನ್ನೂ ಸಾಮಾನ್ಯಧರ್ಮಗಳನ್ನೂ ಹೇಗೆ ಸುಲಭವಾಗಿ ವೇದಾಗಮಾದಿಗಳಲ್ಲಿ ತೋರಿಸಿರುವದನ್ನು ನೋಡಿದರೆ ಅಪ್ರಾಕೃತ ವರ್ಣಾಶ್ರಮದ ಹೆಚ್ಚುಗಾರಿಕೆಯು ತಿಳಿಯುತ್ತದೆ. ಬ್ರಾಹ್ಮಣಾದಿ ವರ್ಣಗಳ ಬಗ್ಗೆ ವೇದದ ಪುರುಷಸೂಕ್ತದಲ್ಲಿ

"ಬ್ರಾಹ್ಮಣೋಽಸ್ಯ ಮುಖಮಾಸೀದ್ಬಾಹೂರಾಜನ್ಯಃ ಕೃತಃ ।
ಊರೂತದ್ವೈಶ್ಯಃ ಪದ್ಭ್ಯಾಂ ಶೂದ್ರೋಽಜಾಯತ"

ಇದರಿಂದ ವರ್ಣವಿಭಾಗವು ವೇದಸಮ್ಮತವಾದುದೆಂದು ಸಿದ್ಧವಾಯಿತು. ಆಗಮಾದಿಗಳಲ್ಲಿಯೂ ಕೂಡಾ "ಉಕ್ತವರ್ಣಾಶ್ರಮಾಚಾರಾಃ ಪ್ರಾಕೃತಾಃ ಶ್ರುತಿಸಮ್ಮತಾಃ ।" ಇತ್ಯಾದ್ಯಾಗಮಪ್ರಮಾಣ ವಚನಗಳಿಂದ ಚತುರ್ವರ್ಣ ವ್ಯವಸ್ಥೆಯಿರುವದು. ಅಪ್ರಾಕೃತ ಚತುರ್ವರ್ಣದ ಬಗ್ಗೆ ಶ್ರೀ ಜಗದ್ಗುರು ರೇಣುಕಾಚಾರ್ಯರು ಮುನಿಚಕ್ರವರ್ತಿಯಾದ ಅಗಸ್ತ್ಯ ಮಹರ್ಷಿಗಳನ್ನುದ್ದೇಶಿಸಿ, "ವರ್ಣಾಶ್ರಮಾದಿ ಧರ್ಮಾಣಾಂ ವ್ಯವಸ್ಥಾ ಹಿ ದ್ವಿಧಾಮತಾ । ಏಕಾ ಶಿವೇನ ನಿರ್ದಿಷ್ಟಾ ಬ್ರಹ್ಮಣಾ ಕಥಿತಾ ಪರಾ ॥" ಬೋಧಿಸಿದ ಪ್ರಮಾಣಗಳು ಶಿವನಿಂದ ಹೇಳಲ್ಪಟ್ಟ ವರ್ಣಾಶ್ರಮವೇ ಅಪ್ರಾಕೃತ ಚತುರ್ವರ್ಣಾಶ್ರಮವೆಂದು ಹೇಳಿಸಿಕೊಂಡಿತು. ಈಗಿನ ಕಾಲದಲ್ಲಿ ಅಪ್ರಾಕೃತ ಚತುರ್ವರ್ಣಾಶ್ರಮಕ್ಕೆ ಅತಿವರ್ಣಾಶ್ರಮವೆಂಬ ಹಂಬಲದಿಂದ ವೀರಶೈವ ಮತದಲ್ಲಿ ಬ್ರಾಹ್ಮಣಾದಿ ವರ್ಣಾಶ್ರಮಗಳೇ ಇಲ್ಲವೆಂದು ಸಾಧಿಸುವರು. "ಅತಿವರ್ಣಾಶ್ರಮ" ಶಬ್ದವು "ಸಿಹ್ಮೋಮಾಣವಕಃ ಅಗ್ನಿರ್ಮಾಣವಕಃ" ಎಂಬ ಸಿಹ್ಮಾಗ್ನಿ ಶಬ್ದಗಳಂತೆ ಗೌಣವೇ ಹೊರತು ಮುಖ್ಯವಾದುದಲ್ಲ. ಅಥವಾ "ಅತಿವರ್ಣಾಶ್ರಮಿ" ಶಬ್ದೋತ್ಪತ್ತಿಯಿಂದ "ಅತಿಶಯಿತಾಃ ವರ್ಣಾಶ್ರಮಾಃ

ಅಸ್ಯಂತೀತಿ ಅತಿವರ್ಣಾಶ್ರಮಿ” ಇತರ ಮತದವರಿಗಿಂತಲೂ ವೀರಶೈವರಲ್ಲಿ ವರ್ಣಾಶ್ರಮಗಳು ಉತ್ಕೃಷ್ಟತೆಯಿಂದ ವರ್ತಿಸುತ್ತಿರುವವುಗಳಾದ ಪ್ರಯುಕ್ತ ವೀರಶೈವರು ಅತಿವರ್ಣಾಶ್ರಮಿಗಳೆಂದು ಹೇಳಿಸಿಕೊಳ್ಳುವರು. ವಿಶೇಷತ್ವದ ವರ್ಣವ್ಯವಸ್ಥೆಯನ್ನು ಇದರಲ್ಲಿ ತೋರುವದರಿಂದ ವೀರಶೈವ ಮತವು ವರ್ಣಾಶ್ರಮ ವ್ಯವಹಾರಕ್ಕೆ ಸಂಬಂಧಿಸಿರುವದೆಂದೇ ಸಿದ್ಧವಾಗುವದು.

ಈ ವರ್ಣಾಶ್ರಮ ಧರ್ಮವನ್ನು ಮೀರಿ ನಡೆಯಬಾರದೆಂದು ಶಂಕರ ಸಂಹಿತೆ” ಯಲ್ಲಿ “ವರ್ಣಾಶ್ರಮ ಸದಾಚಾರಾಃ ಶಿವೇನ ಕಥಿತಾಃ ಪುರಾ। ಯೇತಾನುಲ್ಲಂಘ್ಯ ವರ್ತಂತೇ ಶಿವಸ್ಯಾಜ್ಞಾಪಲಾಪಿನಃ। ರಾಜಾಜ್ಞಾ ಭಂಗ ಕೃನ್ನೃಣಾಂ ಯಥಾ ದಂಡೋ ಭವಿಷ್ಯತಿ। ಶಿವಾಜ್ಞಾ ಭಂಗಕೃನ್ನೃಣಾಂ ದಂಡೋ ಹಿ ನರಕಸ್ತಥಾ॥” ಸಾರಾಂಶ ಶಿವನಿರ್ದಿಷ್ಟವಾದ ಚತುರ್ವರ್ಣಾಶ್ರಮ ನಿಯಮಗಳನ್ನು ಪಾಲಿಸುವದರಿಂದ ಶಿವನು ತೃಪ್ತನಾಗುವನು. “ಶಿವೋಕ್ತಗಳಾದ ವರ್ಣಾಶ್ರಮಗಳನ್ನು ಯಾವನು ಮೀರಿ ನಡೆಯುವನೋ ಅವನಿಗೆ ನರಕವಾಗುವದು” ಯೆಂಬ ಶಂಕರಸಂಹಿತೆಯ ಪ್ರಮಾಣದಂತೆ ವರ್ಣಾಶ್ರಮದ ಮಹತ್ವವು ಚನ್ನಾಗಿ ವ್ಯಕ್ತವಾಗುವದು. ಈ ಆಶ್ರಮ ವಿಭಾಗಗಳು ಕೇವಲ ಮತಧರ್ಮಾಚರಣೆಗಾಗಿ ಇರದೆ ರಾಷ್ಟ್ರದೇಳ್ಗೆ ಸಮಾಜಸುಧಾರಣೆಗಾಗಿಯೂ ಮಾರ್ಪಟ್ಟಂತೆ ತೋರುವದು. ಜಗನ್ನಿಯಾಮಕನಾದ ಪರಮಾತ್ಮನು ಜಗತ್ಕುಟುಂಬದ ದೃಷ್ಟಿಯಿಂದ ಈ ವರ್ಣಾಶ್ರಮದ ವ್ಯವಸ್ಥೆಯನ್ನು ಜನ್ಮವನ್ನನುಸರಿಸುವಂತೆಯೂ ಆಯಾ ವರ್ಣಜನ್ಮತ್ವದ ಆಯಾ ವರ್ಣದ ಕರ್ಮಸಂಸ್ಕಾರಗಳಿಂದ ಬ್ರಾಹ್ಮಣಾದಿ ನಾಲ್ಕು ವರ್ಣಗಳಿರುವಂತೆ ಅವರವರಿಗೆ ಉಕ್ತವಾದ ಉದ್ಯೋಗಗಳಿಂದ ನಿಯಮಿಸಿದನು. ಈಗ ವ್ಯವಹಾರದಲ್ಲಿಯಾದರೂ ಜನ್ಮದಿಂದಲೇ ಜಾತಿಯನ್ನು ನಿರ್ಣಯಿಸುವರು. ಚಾತುರ್ವರ್ಣ್ಯದ ಸೃಷ್ಟಿಯನ್ನು ಜಗತ್ತಿನ ಸೃಷ್ಟಿಯೊಡನೆಯೇ ಉದಯವಾಯಿತೆಂದು ನಮ್ಮ ಮಹರ್ಷಿಗಳ ಅಭಿಪ್ರಾಯವು ಅಕ್ಷರಶಃ ನಿಜವಿರುವದು. ಪಾಶ್ಚಿಮಾತ್ಯ ಸಂಸ್ಕೃತಿಯ ಗಾಳಿಯು ಬೀಸತೊಡಗಿದಂದಿನಿಂದ ಈ ಚಾತುರ್ವರ್ಣಾಶ್ರಮದ ಬಗ್ಗೆ ಸುಧಾರಕರನೇಕರು ಟೀಕೆಮಾಡತೊಡಗಿದ್ದಾರೆ. ಈಗಿನ ವಾತಾವರಣದಿಂದ ಗುಣಕರ್ಮಗಳಿಂದ ಒಬ್ಬನ ಜಾತಿಯನ್ನು ನಿರ್ಣಯಿಸುವವರು ಆರ್ಯಧರ್ಮದ ತಿರುಳನ್ನರಿಯದ ಮರುಳರೇ ಸರಿ.

ಏನೇ ಇರಲಿ, ಪ್ರಸ್ತುತವಿಷಯವಾದ ನಮ್ಮ ಅಪ್ರಾಕೃತ ಸೃಷ್ಟಿಗೊಳಪಟ್ಟ ವೀರಶೈವ ಮತದಲ್ಲಿರುವ ಜಾತಿಭೇದ ವಿವರಣೆಯನ್ನೂ ಬ್ರಾಹ್ಮಣಾದಿ ಚತುರ್ವರ್ಣಗಳ ವಿಷಯವನ್ನವಲೋಕಿಸುವಾ. “ಹೇ ಪರಮಾತ್ಮಾ ಲೋಕೋಪಕಾರಕ್ಕಾಗಿ ವೀರಶೈವ ಮತದ ವಿಶೇಷವನ್ನು ಹೇಳುವನಾಗು ಎಂದು ಪಾರ್ವತಿಯು ಪ್ರಶ್ನಮಾಡಿದ್ದಕ್ಕೆ ಪರಮಾತ್ಮನು “ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾ ಯಜ್ಞೋಪವೀತಿನಃ। ಲಿಂಗ ರುದ್ರಾಕ್ಷ ಭಸ್ಮಾಂಕಾ ಬ್ರಹ್ಮ ಕರ್ಮ ಸಮಾಶ್ರಿತಾಃ”॥ ಎಂಬದರ ಅಭಿಪ್ರಾಯವು ವೀರಶೈವಾಂತರ್ಗತ ಶುದ್ಧ ಶೈವರೇ ಲಿಂಗಧಾರಿ ಬ್ರಾಹ್ಮಣರೆಂತಲೂ “ಮಿಶ್ರಶೈವಾ ಮಹಾದೇವಿ ಕ್ಷತ್ರಿಯಾ ವೈಶ್ಯ ಶೂದ್ರಜಾಃ। ಸುಶೀಲಾಚಾರ ಸಂಪನ್ನಾಃ ಶಿವಂತಶ್ಚಲಿಂಗಿನಃ ॥” ಎಂಬುವದರಿಂದ ವೀರಶೈವಾಂತರ್ಗತ ಮಿಶ್ರಶೈವರು ಲಿಂಗಧಾರಿ ಕ್ಷತ್ರಿಯ ಶೂದ್ರರೆಂತಲೂ” “ದ್ವಿ ಧೈವಾರಧನಪರಾ ರಾಜಾನೋ ಲಿಂಗಿನಃಪರೇ। ರಾಜ್ಞಾಂ ಶಿವಾಗಮಸ್ಥಾನಾ ಮೇಷಧರ್ಮಃ ಸನಾತನಃ॥ ಬಹವೋ ಮಾರ್ಗ ಶೈವಾಶ್ಚ ವೀರಶೈವಾನುವರ್ತಿನಃ”॥ ಈ ಪ್ರಮಾಣಗಳಿಂದ ವೀರಶೈವಾಂತರ್ಗತ ಮಾರ್ಗಶೈವರೇ ಲಿಂಗಧಾರಿ ರಾಜರೆಂತಲೂ “ನಾಪಿತಾ ರಜಕಾ ವೇಶ್ಯಾಃ ಕುಲಾಲಾಸ್ತಿಲಘಾತಕಾಃ। ವೈಶ್ಯಾದ್ಯಾಶ್ಚಾಂತ್ಯ ಜಾತ್ಯಂತಾಸ್ತೇ ಚೈವಾಂತರ ಶೈವಿನಃ”॥ ಎಂಬೀ ಪ್ರಮಾಣಗಳಿಂದ ವೀರಶೈವಾಂತರ್ಗತ ಲಿಂಗಧಾರಿ ನಾಪಿತ ರಜಕಾದಿಗಳೇ ಅವಾಂತರ ಶೈವರೆಂತಲೂ ಸ್ಪಷ್ಟವಾಗಿ ಉದಾಹರಿಸಿರುವ ಪಾರಮೇಶ್ವರಾಗಮದ ಅಭಿಪ್ರಾಯದಂತೆ ಪ್ರಾಚೀನಕಾಲದಿಂದಲೂ ಇಂದಿಗೂ ಕುಲಭೇದಗಳು ಇದ್ದೇ ಇರುತ್ತವೆ. ಹಾಗಾದರೆ ಸರ್ವರೂ ಲಿಂಗಧಾರಿಗಳೂ ಆದ ಮೇಲೆ ವರ್ಣಭೇದ ಮತ್ತು ಜಾತಿಭೇದವೆಲ್ಲಿಂದ ಬಂತು? ಎಂದರೆ ವೀರಶೈವ ಶುದ್ಧ ಸಾಂಪ್ರದಾಯತ್ವದ ಮರ್ಮವನ್ನು ತಿಳಿದವರಿಗೆ ಮಾತ್ರ ಇದು ಹೊಳೆಯದಿರದು. “ಶೂದ್ರಾಣಾಮನ್ಯಜಾತೀನಾಂ ಪತಿತಾನಾಂ ವಿಶೇಷತಃ। ತಥಾ ಸಂಕರಜಾತೀನಾಂ ನಾಧ್ವಶುದ್ಧಿರ್ವಿಧೀಯತೇ” ॥ ಎಂದು ಕ್ರಿಯಾಸಾರವು ಶುದ್ಧವಂಶದ ವೀರಶೈವರನ್ನು ಬಿಟ್ಟು ಉಳಿದ ಜಾತಿಯವರಿಗೂ ಶೂದ್ರಾದಿಗಳಿಗೂ ಷಡಧ್ವಶೋಧನ ರಹಿತವಾದ ಲಿಂಗಧಾರಣವನ್ನು ಮಾಡಬೇಕೆಂಬ “ಕ್ರಿಯಾಸಾರದ” ಅಭಿಪ್ರಾಯದ ಕಡೆಗೆ ನಾವು ಲಕ್ಷ್ಯ ಹಾಕಿದರೆ ಸಾಕು. ಅದರಂತೆ ಸದ್ಯಕ್ಕೆ ನಡೆಯುತ್ತಿರುವ ಸಾಂಪ್ರದಾಯ ಪದ್ಧತಿಯೂ ಸರಿಯಾಗಿರುವದೆಂದು ಸಿದ್ಧವಾಗುವದು. ಪರಂಪರೆಯಿಂದಲೂ ವೇದಾಗಮಾದಿ ಶೃತಿಸ್ಮೃತಿ ಪುರಾ

ಣೇತಿಹಾಸಾದಿಗಳು ಒಪ್ಪುವಂತೆ ಬಂದಿರುವ ವರ್ಣಾಶ್ರಮ ಜಾತಿ ತಾರ ತಮ್ಯಗಳ ಕಟ್ಟಗೆ ಕಲಿಕಾಲ ಪ್ರಭಾವದಿಂದ ಆಯಾಯ ಕಟ್ಟುಗಳೆಲ್ಲಾ ಸಡಿಲಾಗತೊಡಗಿವೆ. ಅಸ್ತು. ಜಾತಿಭೇದವಿಲ್ಲವೆಂಬ ಮಹಾಶಯರು ಇತ್ತ ಕಡೆಗೆ ನೋಡಬೇಕು. "ಶಿವೋಕ್ತಾಂ ಜಾತಿಮರ್ಯಾದಾಂ ಯೋತೀತ್ಯಭುವಿ ವರ್ತತೇ। ಸಚಂಡಾಲ ಇತಿಜ್ಞೇಯಃ ಸರ್ವಕರ್ಮ ಬಹಿಷ್ಕೃತಃ" ಮತ್ತು "ವೀರಶೈವ ಸದಾಚಾರ ಸಂಗ್ರಹ" ದಲ್ಲಿ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರ ಪ್ರಮುಖಾನಷ್ಟಾದಶ ಜಾತೀನೇಕೋತ್ತರ ಶತಕುಲ ಜಾನ್ಮನುಷ್ಯಾನ್ ಶಿಲಾ ಮಯಲಿಂಗಂ ಧಾರಯಿತ್ವಾ ಪಂಚಾಕ್ಷರ ಮುಪದಿಶ್ಯ ಮೋಕ್ಷಮಾರ್ಗಂ ಪ್ರದರ್ಶಯೇತಿ ಸಾಕ್ಷಾತ್ಪರಂಜ್ಯೋತಿಃ ಪರಶಿವಃ ಕಾರ್ಯರುದ್ರಮುಪಾದಿ ಶತ್" ಈ ಪ್ರಕಾರ ನಾಲ್ಕು ವರ್ಣ ಹದಿನೆಂಟು ಜಾತಿ ನೂರೊಂದು ಕುಲಗಳನ್ನು ಮೀರ ಬಾರದೆಂದು ಶಿವಶಾಸನವು. ಮೀರಿದ್ದಾದರೆ ಶಿವೋ ಕ್ತಾಗಮಗಳಿಗೆ ವಿರೋಧವಾಗಿ ಶಿವದ್ರೋಹಕ್ಕೆ ಸಿದ್ಧವಾಗಬೇಕಾಗುವದು. ವೀರಶೈವ ಗ್ರಂಥಭಾಂಡಾಗರದಲ್ಲಿ ಈ ಮತವು ವರ್ಣಾಶ್ರಮಬದ್ಧವಾಗಿಯೂ (ಜಾತಿತಾರತಮ್ಯವನ್ನೇ ಮೀರದೆ) ಅತ್ಯಂತ ಉದಾತ್ತ ತತ್ವಗಳಿಂದ ಭೂಷಿ ತವಾದ ಅನೇಕಾನೇಕ ಪ್ರಮಾಣಗಳು ದೊರೆಯುವವು.

ಈಗಿನ ವೀರಶೈವ ಮತದಲ್ಲಿ ಜಾತಿಭೇದಗಳು ಅನೇಕವಾಗಿವೆ. ಈ ಮತದಲ್ಲಿ ಮತಧರ್ಮವನ್ನು ಮುಖ್ಯವಾಗಿಯೂ ಜಾತಿ ಧರ್ಮವನ್ನು ಗೌಣ ವಾಗಿಯೂ ಇಟ್ಟುಕೊಂಡಿದ್ದಾರೆ. ಆದರೆ ಉಳಿದ ಮತದವರು ಜಾತಿಧ ರ್ಮವನ್ನೇ ಮುಖ್ಯವಾಗಿಟ್ಟುಕೊಂಡಿದ್ದರಿಂದ ಅವರಲ್ಲಿ ಜಾತಿಭೇದವು ಒಡೆ ದುಕಾಣುವದು. ವೀರಶೈವರು ಮತಧರ್ಮಗಳನ್ನೇ ವ್ಯವಹಾರದಲ್ಲಿಟ್ಟುಕೊಂಡಿ ರುವದರಿಂದ ಬ್ರಾಹ್ಮಣಾದಿ ಸಕಲವರ್ಣದವರಿಗೂ "ವೀರಶೈವ" ಎಂಬ ಮತ ಅಭಿಧಾನವು ಬಂದಿರುವದು. ಮತಧರ್ಮಗಳನ್ನೇ ವಿಶೇಷ ನಡೆಸುತ್ತಿರುವದ ರಿಂದ ಜಾತಿಧರ್ಮಗಳೇ ಇಲ್ಲವೆಂದು ಹೇಳಲಿಕ್ಕಾಗದು. ಜಾತಿ-ಧರ್ಮ ಗಳು ಆಯಾಯ ಜಾತಿಗೆ ಸೇರಿರುತ್ತವೆ. ಮತ ಧರ್ಮಗಳು, ಸಾಮಾನ್ಯ ಧರ್ಮಗಳು.ಜಾತಿಧರ್ಮಗಳು, ವಿಶೇಷಧರ್ಮಗಳು. ವಿಶೇಷಧರ್ಮ ಗಳು ಆಯಾಯ ಜಾತಿಗಳಲ್ಲಿ ಮಾತ್ರ ವ್ಯಾಪಿಸಿರುವವು. ಸಾಮಾನ್ಯ ಧರ್ಮವು ಎಲ್ಲರಲ್ಲಿಯೂ ವ್ಯಾಪಿಸಿರುವದು. ಹೇಗಂದರೆ, ಮನುಷ್ಯತ್ವ ವೆಂಬ ಸಾಮಾನ್ಯ ಧರ್ಮವು ಬ್ರಾಹ್ಮಣಾದಿ ಸಮಸ್ತ ಮಾನವರಲ್ಲಿಯೂ ಅನುಗತವಾಗಿರುವದು. ಬ್ರಾಹ್ಮಣತ್ವಾದಿ ವಿಶೇಷ ಧರ್ಮಗಳು ಬ್ರಾಹ

ಣಾದಿಗಳಲ್ಲಿ ಮಾತ್ರ ಅನುಗತವಾಗುವದು. ಕ್ಷತ್ರಿಯತ್ವರೂಪ ವಿಶೇಷ ಧರ್ಮವು ಕ್ಷತ್ರಿಯರಲ್ಲಿ ಮಾತ್ರ ಅನುಗತವಾಗುವದು. ಇದರಂತೆ ವೀರ ಶೈವತ್ವ ನಾಮದ ಸಾಮಾನ್ಯ ಧರ್ಮವನ್ನು ಯಾವತ್ತರೂ ಆಚರಿಸುತ್ತಿರು ವದರಿಂದ "ವೀರಶೈವ" ಯೆಂಬ ನಾವು ನಿರ್ದಿಷ್ಟವಾಗಿದೆ. ಇದಲ್ಲದೆ ಇವ ರಲ್ಲಿ ವಿಶೇಷ ಧರ್ಮಗಳಾದ ಅಷ್ಟಾವರಣ ಪಂಚಾಚಾರ ಲಿಂಗಾಂಗ ಸಾಮ ರಸ್ಯ, ಷಟ್ಸ್ಥಲ ಮೊದಲಾದ ಮುಕ್ತಿಸಾಧಕಗಳಾದ ಧರ್ಮಾಚರಣೆಗಳೂ ಮತ್ತು ಅಧ್ಯಯನ ಅಧ್ಯಾಪನ, ದಾನ ಪ್ರತಿಗ್ರಹ, ಯಜನ ಯಾಜನ ಮೊದ ಲಾದ ವಿಶೇಷ ಧರ್ಮಗಳಲ್ಲಿ ಆಶ್ರಮ ಭೇದದಿಂದ ಅನುಷ್ಠಿಸಲ್ಪಡುತ್ತಿರುವರು. ವೇದಮಾರ್ಗಾವಲಂಬಿಗಳಾದ ಸರ್ವರೂ ಬ್ರಾಹ್ಮಣಾದಿ ವರ್ಣಾಶ್ರಮವನ್ನು ಮನ್ನಿಸುವಂತೆ ವೇದಾಗಮೋಪನಿಷತ್ಪ್ರತಿಪಾದಿತವಾದ ಈ ವೀರಶೈವ ಮತಾ ವಲಂಬಿಗಳು ಅಪ್ರಾಕೃತ ಚತುರ್ವರ್ಣಾಶ್ರಮವನ್ನು ಪ್ರಾಚೀನ ಕಾಲ ದಿಂದಲೂ ಆಚರಿಸುತ್ತಲಿರುವರು. ಉದಾಹರಣೆಗಾಗಿ ನಮ್ಮ ಮತೀಯ ರಾದ ಪಂಚಮಸಾಲಿ ಬಣಜಿಗಪಟ್ಟಸಾಲಿ ಕುರುಹಿನಸೆಟ್ಟಿ ಮೊದಲಾ ದವರು ತಮ್ಮ ತಮ್ಮ ಜಾತಿಗಳಲ್ಲಿಯೇ ಶರೀರ ಸಂಬಂಧಾದಿಗಳನ್ನೂ ತಮ್ಮ ತಮ್ಮ ಜಾತಿ ವಿಶೇಷ ಧರ್ಮಗಳನ್ನೂ ಬಳಿಕೆಯಲ್ಲಿಟ್ಟುಕೊಂಡಿರುವದು ಶಾಸ್ತ್ರಸಮ್ಮತವಾದುದು. "ಕುಲಕ್ರಮಾಗತಾಚಾರ" ಮೊದಲಾದ ವಾಕ ಗಳಿಂದ ವಂಶಪರಂಪರೆಯು ಪವಿತ್ರವಿರಬೇಕಾಗಿ ಉದ್ಘೋಷಿಸುತ್ತಿರುವದು. ಇದರಿಂದ ನಮ್ಮ ಅಭಿಪ್ರಾಯವು ವೀರಶೈವರಲ್ಲಿರುವ ಜಾತಿ ಸಮಾವೇಶ ದಲ್ಲಿ ಮೇಲು ಕೀಳೆಂಬ ಭಾವನೆಯಿಲ್ಲಾ. ಯಾವತ್ತರೂ ವೀರಶೈವ ಮತೀ ಯರೇ. ಆದರೆ ಶಿವೋಕ್ತಾಗಮಗಳಭಿಪ್ರಾಯದಂತೆ "ವರ್ಣವ್ಯವಸ್ಥೆ" "ಜಾತಿ ತಾರತಮ್ಯ" ಗಳು ಶಾಸ್ತ್ರೋಕ್ತ ಧರ್ಮಾಚರಣೆಗಳು ಅವರವರ ಯೋಗ್ಯ ತೆಯಂತೆ ಇರಬೇಕು. ಅಂದರೆ ಮತೋನ್ನತಿಯಾಗುವದು. ಜಾತಿಸಂ ಕರ ವರ್ಣಸಂಕರಗಳಿಂದ ಮತಾವನತಿಯಲ್ಲದೆ ಬೇರಲ್ಲ. ಹೀಗೆ ಸಾಂಕರ್ಯ ದೋಷದಿಂದ ಮತಗ್ಲಾನಿಯಾಗುವದನ್ನು ತಪ್ಪಿಸುವದು ಲೇಖಮೂಲಕ ವಾಗಿಯಾಗಲೀ ಭಾಷಣ ಶಾಸ್ತ್ರಶ್ರವಣದಿಂದಾಗಲಿ ಆಗದು. ಈಗ ಕಲಿ ಕಾಲ ವೈಚಿತ್ರ್ಯದಿಂದ ಕಲ್ಮಷ ಹೃದಯದ ಮಹಾಪಂಡಿತರ ನಿಷೇಧ ವಾಕ್ಯ ಗಳೇ ಪ್ರಮಾಣ ಶಾಸ್ತ್ರವಾಗಿ ಪರಿಣಮಿಸುವದು. ಆದಾಗ್ಯೂ ಪರಮಾ ತ್ಮನು "ಧರ್ಮಗ್ಲಾನಿಯ ಕಾಲದಲ್ಲಿ ನಾನೇ ಅವತಾರ ಹೊಂದಿ ಧರ್ಮ ಸೂತ್ರವನ್ನು ಸರಿಪಡಿಸುವೆನ." ಯೆಂಬ ಅಭಯ ವಚನದಲ್ಲಿ ನಮ್ಮಶ್ರದ್ಧೆ.

ಹೇಗೆಂದರೆ ಗಡಿಯಾರವು ತಪ್ಪಾಗಿ ನಡೆಯುವದೆಂದು ತೋರಿದಾಗಲೆಲ್ಲಾ ಗಡಿಯಾರದವನು ಅವನ್ನು ತಿದ್ದಿ ಕೀಲವನ್ನು ತಿರುಗಿಸುವಂತೆ ಧರ್ಮವು ಅಡ್ಡದಾರಿಯನ್ನು ಹಿಡಿದಿರುವದೆಂದು ತೋರಿದೊಡನೆ ಧರ್ಮಕರ್ತೃವಾದ ಪರಮಾತ್ಮನು ದುಷ್ಟ ಶಿಕ್ಷೆ ಮತ್ತು ಶಿಷ್ಟ ರಕ್ಷೆಗಳಿಂದ ಧರ್ಮಸಂಸ್ಥಾಪನೆಯನ್ನು ಮಾಡುವನು. ಇದೀಗ ನಮ್ಮ ಸಮಾಜದಲ್ಲಿ ಅನೇಕಾಭಿಪ್ರಾಯಗಿಂದ ದೂಷಿತವಾಗಿರುವ ವರ್ಣಾಶ್ರಮಾದಿ ಧರ್ಮಗಳಿಗೆ ಬಂದಿರುವ ನ್ಯೂನತೆಯನ್ನು ಹೋಗಲಾಡಿಸಿ "ನ ವೀರಶೈವ ಸದೃಶಂತಸ್ತಿಮ ಜಗತ್ರಯು" ಯೆಂಬದನ್ನು ಸಿದ್ಧಾಂತ ಗೊಳಿಸಬೇಕಾಗಿ ಪರಶಿವನನ್ನು ಅನನ್ಯ ಭಾವನೆಯಿಂದ ಪ್ರಾರ್ಥಿಸುತ್ತೇನೆ.

[ಈ ಲೇಖದಲ್ಲಿರುವ ವಿಚಾರಗಳಿಗೆ ಆಕ್ಷೇಪಣೆಗಳು ಇದ್ದವರು ಲೇಖ ಮೂಲಕ ಬರೆದು ನಮಗೆ ತಿಳಿಸಿದಲ್ಲಿ ಅದನ್ನು ನಾವು ಶಿವಾನುಭವದಲ್ಲಿ ಪ್ರಕಟಿಸುವೆವು. —ಸಂಪಾದಕ]

---

# ಸಂಸ್ಕೃತದ ಮಹತ್ವವು.

(ಲೇಖಕ:— ಶ್ರೀ ಆರ್. ಬಿ. ಆಲಬಾಳ ಬಿ. ಎ. ಸಿದ್ಧೇಶ್ವರ ಹೈಸ್ಕೂಲ ವಿಜಾಪುರ.)

"ಶಿಕ್ಷಕಾ ವಿಪರೀತಾಶ್ಚೇತ್ ರಕ್ಷಕಾ ಏವ ಕೇವಲಂ"

ಮೊದಲು ಸಂಸ್ಕೃತ ಕಲಿತವರು ಪಂಡಿತರೆಂದು ಆಖ್ಯಾಯಿಕೆಯಿತ್ತು. ಅದರಂತೆ ಯುರೋಪಖಂಡದಲ್ಲಿ ಸಹ ಈ ಸ್ಥಿತಿಯು ಕಂಡು ಬರುತ್ತಿತ್ತು. ಯಾಕಂದರೆ ಗ್ರೀಕ, ಲಾಟಿನ ಭಾಷೆಗಳಲ್ಲಿ ನಿಷ್ಣಾತರು ಸಮಾಜದಲ್ಲಿ ಬಲ್ಲವರೆಂದು ಅನಿಸಿಕೊಳ್ಳುತ್ತಿದ್ದರು. ಆರ್ಯರು ತಂಡತಂಡಾಗಿ ಭರತಖಂಡದಲ್ಲಿ ಬಂದು ನಿಂತಂದಿನಿಂದ, ಕಾಡು ಸ್ಥಿತಿಯು ಕಳೆದು ಹೋಗಿ, ಅಖಂಡವಾದ ಸಂಸ್ಕೃತಿಗೆ ಆರಂಭವಾಯಿತೆಂದು ಖಂಡಿತವಾಗಿ ಹೇಳಬಹುದು. ಇದರಿಂದ ಸಂಸ್ಕೃತ ಭಾಷೆಯು ಪ್ರಾಶಸ್ತ್ಯವು ಕಂಡುಬರುತ್ತದೆ; ಇಷ್ಟೇ ಅಲ್ಲ, ನಾವು ಸ್ವಲ್ಪ ಸಂಶೋಧಕರ ಸಂಗಡ ಹಾಗೇ ಹೋದರೆ ಮೊದಲು ಒಂದು ಭಾಷೆ, ಆಮೇಲೆ ಅದರಿಂದ ಅನೇಕ ಭಾಷೆಗಳು ಎಂಬ ತತ್ವದಲ್ಲಿ ಸಂಸ್ಕೃತವೇ ತೇಲಿ ಬರುತ್ತದೆ.

"ರಾಜಾ ಕಾಲಸ್ಯ ಕಾರಣಂ" ಎಂಬಂತೆ ಬ್ರಿಟಿಶ ರಾಜ್ಯದಾಡಳಿತ ದಿಂದ ಇಂಗ್ಲಿಷಕ್ಕೆ ಮಹತ್ವ ಬಂದಿರುವದು. ಇಂಗ್ಲಿಷರ ರಾಜ್ಯದಂತೆ ಇಂಗ್ಲಿಷ ಭಾಷೆಯು ವ್ಯಾಪ್ತಿಯಾದರೂ ಬಹಳವಾಗಿರುವದು ಸರ್ವಭಾಷೆ ಗಳ ಸಾರ ಹೀರುತ್ತ ಸರಸವಾಗಿ ಬೆಳೆಯುತ್ತಿರುವದು. ಶಾಲೆಕಾಲೇಜಗಳ ಅಭ್ಯಾಸಕ್ರಮವನ್ನು ನೋಡುತ್ತ ಬಂದರೆ, ವಿವಿಧ ವಿಷಯುಗಳಲ್ಲಿ ಮೊದಲು ಇಂಗ್ಲೀಷು, ಆ ಮೇಲೆ ಎರಡನೇ ವಿಷಯುವೆಂದರೆ ಸಂಸ್ಕೃತವೆಂದು ಸಾಮಾ ನ್ಯವಾಗಿ ಹೇಳಬಹುದು. ಆದ್ದರಿಂದ ಇಂಗ್ಲಿಷವನ್ನು ಕಲಿತಂತೆ ವಿದ್ಯಾ ರ್ಥಿಗಳು ಸಂಸ್ಕೃತವನ್ನಾದರೂ ಭಕ್ತಿಯಿಂದ ಕಲಿಯುತ್ತಿದ್ದರು; ಮತ್ತು ವಿಶೇಷವಾಗಿ ಬ್ರಾಹ್ಮಣೇತರ ವಿದ್ಯಾರ್ಥಿಗಳು ಒಳ್ಳೇ ಆಸಕ್ತಿಯಿಂದ ಕಲಿ ಯುತ್ತಿದ್ದರು.

ಆದರೆ ಕೆಲವು ವರ್ಷಗಳ ಹಿಂದೆ ನಮ್ಮ ಮುಂಬಯಿ ಪ್ರಾಂತದಲ್ಲಿ ಶಾಲೆ ಕಾಲೇಜಗಳ ಅಭ್ಯಾಸ ಕ್ರಮದಲ್ಲಿ ಹೆಚ್ಚುಕಡಿಮೆಯಾಗಿ ಹೊಸ ರೀತಿಯು ಹೊರಟಿರುವದು. ಇದು ಅನೇಕ ರೀತಿಯಿಂದ ಸಮಾಧಾನಕಾರಕವಿದ್ದರೂ ಏಕರೀತಿಯಿಂದ ಮಾತ್ರ ವಿಪರೀತವೆಂದು ಭಾಸವಾಗುತ್ತದೆ. ಉಳಿದ ಪ್ರಾಂತಗಳಕಿಂತ ನಮ್ಮ ಪ್ರಾಂತದಲ್ಲಿ ಭಾಷಾ ವೈಚಿತ್ರವು ಬಹಳ ಉಂಟು. ಇಲ್ಲಿ ಸಾಮಾನ್ಯವಾಗಿ ನಾಲ್ಕು ಭಾಷೆಗಳು ಪ್ರಚಲಿತವಿರುವವು. ಅದರಂತೆ ವಿದ್ಯಾರ್ಥಿಗಳಿಗೆ ಇಂಗ್ಲಿಷ, ಸಂಸ್ಕೃತ, ಸ್ವಭಾಷೆಗಳೆಂಬುದಾಗಿ ಮೂರು ಭಾಷೆಗಳನ್ನು ಕಲಿಯಬೇಕಾಗುತ್ತಿತ್ತು. ಮೇಲಾಗಿ ಮುಂಬಯಿ ಯುನಿವ್ಹರ್ಸಿ ಟಿಯಲ್ಲಿ ಸಂಸ್ಕೃತಕ್ಕೆ ಯಾವಾಗಲೂ ಅಗ್ರಸ್ಥಾನವಿತ್ತು. ಆದರೆ ಹೊಸ ಏರ್ಪಾಟಿ ದಲ್ಲಿ ನಮ್ಮ ಯುನಿವ್ಹರ್ಸಿಟಿಯ ಮೆಂಬರುಗಳಿಗೆ ಹೀಗೆ ಕಂಡುಬಂದಂತೆ ಕಾಣುತ್ತದೆ, ಏನೆಂದರೆ ಶಾಲೆಯ ವಿದ್ಯಾರ್ಥಿಗಳು ಮೂರು ಭಾಷೆ ಗಳನ್ನು ಕಲಿಯುವದೆಂದರೆ ಪ್ರಯಾಸದ ಕೆಲಸವು. ಮತ್ತು ಸಂಸ್ಕೃತವಂಥ ಕಠಿಣ ವಿಷಯದಲ್ಲಿ ಆ ರೂಪು ಹೀಗೆ, ಈ ರೂಪು ಹಾಗೆ ಎಂದು ನಿಯ ಮಗಳನ್ನು ಹೇಳುತ್ತ, ನಿಯಮಕ್ಕೆ ಅಪವಾದ, ಮತ್ತೆ ಅದಕ್ಕೆ ಪ್ರತ್ಯಪ ವಾದ ಕೊಡುತ್ತ, ಈ ತೊಡಿಕಿನಲ್ಲಿ ಬೀಳುವದು ಸರಿಯಲ್ಲೆಂದು "ಆವ ಜಾವ ಘರತುಹ್ಮಾರಾ" ಎಂಬಂತೆ ನೇಮಬದ್ಧ ಸಂಸ್ಕೃತಕ್ಕೆ ನೇಮವನ್ನೇ ಇಟ್ಟಂತೆ ತೋರುವದಿಲ್ಲ. ವಿವಿಧ ವಿಷಯುಗಳ ವಿಸ್ತಾರದಲ್ಲಿ ವೇದ ವಾಣಿಗಷ್ಟೇ ವ್ಯತ್ಯಾಸವೇಕೆ? ಸಾಧಾರಣವಾಗಿ ಇಂಗ್ಲಿಷ ೪ ನೇ ಇಯ

ತ್ರೆಯಿಂದ ಬಿ. ಎ. ವರೆಗೆ ವಿದ್ಯಾರ್ಥಿಗಳು ಸಂಸ್ಕೃತವನ್ನು ಕಲಿಯಬೇಕಾಗುತ್ತದೆ; ಆದರೆ ಹೊಸ ನಿಯಮಗಳ ಪ್ರಕಾರ ನಡುವೆ ಪಾರಾಗಲಿಕ್ಕೂ ಬರುತ್ತದೆ. ಹೇಗಂದರೆಃ—

೪ ನೇ ೫ ನೇ ಇಯತ್ತೆಗಳಲ್ಲಿ ಆವಶ್ಯವಾಗಿ ಸಂಸ್ಕೃತಾಧ್ಯಯನ ಮಾಡತಕ್ಕದ್ದು; ಆದರೆ ೬ ನೇ ೭ ನೇ ಇಯತ್ತೆಗಳಲ್ಲಿ ಬೇಡಾದರೆ ಸಂಸ್ಕೃತವನ್ನು ಬಿಡತಕ್ಕದ್ದು; ಆದರೆ ಪುನಃ ಕಾಲೇಜುಗಳಲ್ಲಿ ಮಾತ್ರ ೧ ನೇ ೨ ನೇ ವರ್ಷಗಳಲ್ಲಿ ಅಂದರೆ ಪ್ರೀವ್ಹಿಯಸ್ಸು ಇಂಟರ್ಮೀಜಿಯೇಟು ಕ್ಲಾಸುಗಳಲ್ಲಿ ಆವಶ್ಯವಾಗಿ ಕಲಿಯತಕ್ಕದ್ದು, ಬಿಡಲಿಕ್ಕೆ ಬಾರದು.

ಇದೇನು ಕ್ರಮವೋ ಅಥವಾ ಕ್ರಮಭಂಗವೋ ತಿಳಿಯದಾಗಿದೆ. ಇದರಿಂದ ವಿಷಯಪಾರಂಪರ್ಯವು (*Continuity*) ಉಳಿಯುವದಿಲ್ಲ. ಹಿಡಿದೂ ಬಿಟ್ಟೂ ಮಾಡಿ ಹುಡುಗರು ಹ್ಯಾಗಾದರೂ ಪಾರಾಗುವ ಹಂಚಿಕೆ ಹಾಕುತ್ತಾರೆ. ಇದಲ್ಲದೆ ಸ್ವಭಾಷೆಗಿಂತ ಸರಲವಾದ ಭಾಷೆಯು ಇನ್ನೊಂದು ಭೂಮಿಯ ಮೇಲೆ ಸಿಗಲಾರದು. ಹೀಗಾಗಿ ಶಾಲೆಗಳಲ್ಲಿ ಸಂಸ್ಕೃತ ಭಾಷೆಯ ಅವಹೇಲನವು ನಡೆದಿರುವದು. ಸಂಸ್ಕೃತ ಶತ್ರುಗಳಂತೂ ಕಾಲೇಜವನ್ನು ಕಾಣುವದು ದುರಾಪಾಸ್ತವಾಗಿದೆ. (*Open Sesame*) ಎಂಬ ಸಂಸ್ಕೃತ ಮಂತ್ರವನ್ನು ಉಚ್ಚರಿಸಿದ ವಿನಾ ಕಾಲೇಜದ್ವಾರವು ಅವರಿಗೆ ತೆರೆಯುವದಿಲ್ಲ. ಶಾಲೆಗಳಲ್ಲಿ ನೋಡಿದರೆ, ಒಂದು ರೀತಿಯಿಂದ ಸಂಸ್ಕೃತ ಸಂಹಾರವೇ ನಡೆದಿರುವದೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಇಂಥ ಅನಾಹುತಕ್ಕಿಂತಲೂ ಸಂಸ್ಕೃತವನ್ನು ಸರ್ವತ್ರ ಐಚ್ಛಿಕ ಮಾಡಿದರೆ, ಇಲ್ಲವೆ ಒಂದು ವೇಳೆ ಸಂಪೂರ್ಣ ತೆಗೆದುಹಾಕಿದರೆ ಒಂದು ರೀತಿಯಿಂದ ವಿದ್ಯಾರ್ಥಿಗಳ ಕಲ್ಯಾಣವಾಗುವದು. ಆದರೆ ವಿಚಾರಮಾಡಿ ನೋಡಿದರೆ, ಶಾಲೆಗಳಲ್ಲಿ ಸಂಸ್ಕೃತವನ್ನು ಅವಶ್ಯವಾಗಿಟ್ಟು, ಕಾಲೇಜುಗಳಲ್ಲಿ ಐಚ್ಛಿಕ ವಿಷಯಗಳಲ್ಲಿ ಸೇರಿಸುವದು ಶ್ರೇಯಸ್ಕರವೆಂದು ತೋರುತ್ತದೆ. ವಿದ್ಯಾರ್ಥಿಗಳಲ್ಲಿ ಉತ್ಪತ್ತಿಜ್ಞಾನವಾಗಿ, ಸಂಸ್ಕೃತದಿಂದ ಅವರವರ ಸ್ವಭಾಷೆಗಳಿಗೆ ಪೋಷಣವಾಗುವದಲ್ಲದೆ ಭೂಷಣವೂ ಆಗುವದು.

ಈಗಿನ ಕಾಲದಲ್ಲಿ ಕೇವಲ ದೃಷ್ಟಿಯು (*Absolute*) ಕೇವಲವೆನಿಸುತ್ತದೆ; ಆದರೆ ತಾರತಮ್ಯ ದೃಷ್ಟಿಯೇ ಸರ್ವತ್ರ ತಲೆದೋರುವದು. ಪೌರ್ವಾತ್ಯ ಪಾಶ್ಚಿಮಾತ್ಯ ಸಂಸ್ಕೃತಿಗಳ ಸಾರವೆಂದರೆ ಸಂಸ್ಕೃತ ಇಂಗ್ಲಿಷಗ

ಳೆಂದು ಧಾರಾಳವಾಗಿ ಹೇಳಬಹುದು. ಭಾಷಾ ದೃಷ್ಟಿಯಿಂದ ನೋಡಿದರೂ ಇದೇ ಹೊರಡುತ್ತದೆ. ಸಂಸ್ಕೃತಕ್ಕೆ ಬದಲಾಗಿ ಸ್ವಭಾಷೆಯನ್ನು ಸೇರಿಸಿದರೆ ಆಗಲಾರದೇ? ಆಗಲಾರದು. ಸಂಸ್ಕೃತಕ್ಕೂ ದೇಶಭಾಷೆಗಳಿಗೂ ಒಂದು ಪ್ರಕಾರದ ಸಮವಾಯ ಸಂಬಂಧವಿದೆಯೆಂದು ತಿಳಿಯುತ್ತದೆ. ಸಂಸ್ಕೃತವೂ ಕನ್ನಡವೂ ಭಿನ್ನಭಾಷೆಗಳಾದರೂ ಆ ಸಂಬಂಧವು ಅವುಗಳಲ್ಲಿ ಉಂಟೆಂದರೂ ಅಡ್ಡಿಯಿಲ್ಲ. ಯಾಕಂದರೆ ಸಂಸ್ಕೃತ ದ್ರಾವಿಡ ಭಾಷೆಗಳಲ್ಲಿ ಸೇವ್ಯಸೇವಕ ಭಾವವು ಪರಿಪೂರ್ಣ ಕಂಡು ಬರುತ್ತದೆ. ಕನ್ನಡದಲ್ಲಿದ್ದ ಸಂಸ್ಕೃತ ಭಾಗವನ್ನು ತೆಗೆದೆವೆಂದು ತಪ್ಪಿಸಿದರೆ, ಅಲ್ಲೇ ನುಳಿಯುವದು? ''ಸಂಲಕ್ಷ್ಯಂತೇ ಸಲಿಲ ನಿಧಯಸ್ತೋಯ ಮಾತ್ರಾವಶೇಷಾಃ" "ಅಲ್ಲೇನಿರ್ಪುದುಪ್ಪುನೀರೊಂದು ಮಾತ್ರಂ" ಎಂದು ಕಾಲಿದಾಸೋಕ್ತಿಯಲ್ಲಿ ಹೇಳಬಹುದು. ಕವಿ ಅಂಡಯ್ಯನು ಕೇವಲ ಕನ್ನಡದಲ್ಲಿಯೇ ಕಾವ್ಯವನ್ನು ಬರೆಯುತ್ತೇನೆಂದು ಪ್ರತಿಜ್ಞೆ ಮಾಡಿ ತತ್ಸಮ ಶಬ್ದಗಳನ್ನೆಲ್ಲ ಬಿಟ್ಟನು. ಆದರೆ ತದ್ಭವಗಳೆಲ್ಲ ಬಂದೇ ಬಂದವು. ತತ್ ಇಲ್ಲದೆ ತದ್ಭವವು ಹ್ಯಾಗೆ ಬರುವದು? ಕನ್ನಡ ಸಂಸ್ಕೃತ ವಾಕ್ಯಸರಣಿಯು ಬಹುಶಃ ಸಮಾನವಿರುವದು; ಕನ್ನಡದಲ್ಲಿ ಅರ್ಧಮರ್ಧ ಶಬ್ದಗಳು ಸಂಸ್ಕೃತ ಶಬ್ದಗಳು; ಮತ್ತು ಸಂಧಿ ಸಮಾಸ, ಕೃದಂತ ತದ್ಧಿತ, ಅವ್ಯಯೋಪಸರ್ಗಾದಿಗಳು ಸಂಸ್ಕೃತದಿಂದ ಇದ್ದಕ್ಕಿದ್ದ ಹಾಗೇ ಕನ್ನಡದಲ್ಲಿ ಅವತರಿಸಿರುವವು. ಇವುಗಳನ್ನೆಲ್ಲ ಸಂಸ್ಕೃತದಲ್ಲಿ ನೋಡದೆ ಕನ್ನಡದಲ್ಲಿ ಕಲಿಸುವದೂ ಕಲಿಯುವದೂ ಎಂದರೆ ಸಕ್ಕರೆಯು ಸವಿಯಿದೆಯೆಂದು ರುಚಿ ನೋಡದೆ ಚರ್ಚಿಸಿದಂತೆಯೇ ಸರಿ. ಸಂಸ್ಕೃತವನ್ನರಿಯದೆ ಇದನ್ನೆಲ್ಲ ಯಾವ ಶಿಕ್ಷಕನು ಕಲಿಸುತ್ತಾನೋ ಮತ್ತು ಯಾವ ಶಿಷ್ಯನು ಕಲಿಯುತ್ತಾನೋ ದೇವರೇ ಬಲ್ಲ.

ಯುರೋಪ ಅಮೇರಿಕೆಗಳಲ್ಲಿ ಸಹ ಸಂಸ್ಕೃತಾಭ್ಯಾಸವು ಹೆಚ್ಚಾಗುತ್ತ ನಡೆದದೆ. ಕೆಲವು ಪಂಡಿತರು ಅನೇಕ ರೀತಿಯಿಂದ ಸಂಸ್ಕೃತ ಸೇವೆಯನ್ನು ಮಾಡುತ್ತಲಿದ್ದಾರೆ. ಮತ್ತು ಅದರಿಂದ ಅನೇಕ ಹೊಸ ಹೊಸ ಶೋಧಗಳನ್ನು ಹೊರಗೆಡವಹತ್ತಿದ್ದಾರೆ. ಈ ಮೃತಭಾಷೆಯ ತಿರುಳನ್ನು ಅಮೃತದಂತೆ ಅವರು ಸವಿಯುತ್ತಲಿದ್ದಾರೆ. ಮೇಲಾಗಿ ನಮ್ಮ ಬಿ. ಎ. ಎಂ. ಎ. ವಿದ್ಯಾರ್ಥಿಗಳು ಇಂಗ್ಲಂಡ, ಜರ್ಮನಿಗಳಿಗೆ ಹೋಗಿ, ೩-೪ ವರ್ಷ ಸಂಸ್ಕೃತದಲ್ಲಿ ಅಭ್ಯಾಸಮಾಡಿ, ಪಂಡಿತಪರೀಕ್ಷೆಗೊಟ್ಟು, ಪಂಡಿತರಾಗಿ(*Doctars*) ಮರಳಿ ಇಲ್ಲಿಗೆ ಆಗಮಿಸುತ್ತಾರೆ. ಇಂಗ್ಲಂಡವೆತ್ತ, ಇಂಡಿಯಾವೆತ್ತ

ಮತ್ತು ಈ ಸಂಸ್ಕೃತ ದೇವಿಯ ಸಂಚಾರವೆತ್ತ! ಇದನ್ನೆಲ್ಲ ನೋಡಿದರೆ, "ಮಾಯೆಯೆನ್ನ ಕಾಯ ಸುತ್ತಿ ಬಾಯ ಹೊಯ್ವುದು" ಎಂದು ಸರ್ಪ ಭೂಷಣ ಕವಿಯ ಪಲ್ಲವಿಯು ನೆನಪಿಗೆ ಬರುತ್ತದೆ. ವೈದಿಕವನ್ನಾ ದರೂ ವಿದೇಶಗಳಿಗೆ ಹೋಗಿ ಕಲಿತು ಬರುವ ಪ್ರಸಂಗ ಬರುತ್ತಿತ್ತು; ಆದರೆ ಶಾಸ್ತ್ರಿಗಳು ಕಾಶಿಗೆ ಹೋಗಿಯಾಗಲಿ, ಹಾಗೇ ಆಗಲಿ ಶಾ[illegible] ಚಿಂತನ ಮಾಡುವದರಿಂದ ಈ ಚಿಂತೆ ದೂರಾಗಿದೆ.

ಭಾಷಾವಾರ ಪ್ರಾಂತರಚನೆಯ ಕಾಲವು ಸಮೀಪಿಸಿರುವದ [illegible]ಂದೆ ಹಿಂದುಸ್ತಾನದಲ್ಲಿ ಸರ್ವಸಾಮಾನ್ಯ ಭಾಷೆಯು (*Lingua T* ಇಂಗ್ಲೀಷವಾಗಲಿ ಹಿಂದಿಯಾಗಲಿ ಆಗುವದೆಂದು [illegible] ಸಂಸ್ಕೃ ತವು ಸಾಯುವದಿಲ್ಲ. ಸರ್ವವಿಷಯಗಳಲ್ಲಿ ಸೇರಿದ ಸಂಸ್ಕೃತವು ದೂರಾ ಗಿರುವಂತೆ ಸರ್ವವಿಷಯಗಳಲ್ಲಿ ಸೇರಿದ ಇಂಗ್ಲಿಷವಾದರೂ ದೂರಾಗು ವದು. ಅನಂತರ ಇಂಗ್ಲಿಷ ವ್ಯತಿರಿಕ್ತ ಉಳಿದ ವಿಷಯಗಳನ್ನು ದೇಶ ಭಾಷೆಗಳಲ್ಲಿಯೇ ಕಲಿಸ ಬೇಕಾಗುವದು.

ಆಗ್ಗೆ ಪಾರಿಭಾಷಿಕ ಶಬ್ದಗಳಿಂದಾದರೂ ಸಂಸ್ಕೃತಶಬ್ದಗಳು ಆಯಾ ವಿಷಯಗಳಲ್ಲಿದ್ದದ್ದು ಕಾಣೀ ಕಾಣುವದು. ಈ ಪ್ರಕಾರ ದೇವ ದೇಶ ಭಾಷೆಗಳಲ್ಲಿದ್ದ ಸಮವಾಯ ಸಂಬಂಧವು ಸ್ಪಷ್ಟವಾಗುತ್ತದೆ. ಸದ್ಯದ ಶಾಲೆಗಳೆಂದರೆ ಸರ್ವ ವಿಷಯಗಳ ಸಂಗ್ರಹಾಲಯಗಳು. ಅವುಗಳಲ್ಲಿಯ ಶಿಕ್ಷಣವೆಂದರೆ ಒಂದು ದೊಡ್ಡ ಮನೋಮೇಜವಾನಿಯೆಂದು ತಿಳಿದರೆ ತಪ್ಪಾಗದು. ಎಂಥ ಪ್ರಯೋಜನಕಾಲದಲ್ಲಿ ಎಲ್ಲ ಪದಾರ್ಥಗಳ ಯೋಜನೆ ಮಾಡುವರು. "ಗೃಹಣಾನಾಂ ಹಿಯಥಾ ಯಥಾರ್ಥತಾ" ಎಂದು ನೀಡಿದ ಪದಾರ್ಥಗಳಲ್ಲಿ ಬೇಕಾದವುಗಳಿಗೆ ನೆರವಾಗಬಹುದು; ಅಥವಾ ಬೇಡಾ ದವುಗಳಿಗೆ ಎರವಾಗಬಹುದು; ಆದರೆ ನೀಡುವ ಪದಾರ್ಥಗಳಲ್ಲಿ ಸಂಸ್ಕೃ ತವು ಒಮ್ಮೆ ಸಾಗಿಬರುತ್ತದೆ, ಒಮ್ಮೆ ನೀಗಿಬಿಡುತ್ತದೆ. ನೋಡಿದ ಪದಾ ರ್ಥವನ್ನು ನೀಡದಿದ್ದರೂ ಕೇಡು, ನೀಡಿದ ಪದಾರ್ಥವನ್ನು ನೋಡದಿದ್ದರೂ ಕೇಡು; ಹೀಗಾಗಿ ವಿಷಯಪಾರಂಪರ್ಯವು ಉಳಿದಿಲ್ಲ. ಇದರಿಂದ ಹಾನಿಯೇ ಹೊರ್ತು ಲಾಭವೇನೂ ಇಲ್ಲ. ಆದ್ದರಿಂದ ಶಾಲೆಗಳಲ್ಲಿ ಸಂಸ್ಕೃತವನ್ನು ಅವಶ್ಯವಾಗಿ ಇಟ್ಟುಕೊಂಡರೆ ಅದರಿಂದ ಸರ್ವತ್ರ ಪೋಷಣೆಯಾಗುವದ ಲ್ಲದೆ ಉಪೋಷಣೆಯು ಆಗಲಾರದು.

# ಶ್ರೀ ಹಾನಗಲ್ಲು ಕುಮಾರ ಸ್ವಾಮಿಗಳ ಲಿಂಗೈಕ್ಯ.

ಶ್ರೀ ಹಾನಗಲ್ಲು ಕುಮಾರ ಸ್ವಾಮಿಗಳವರು ೧೯-೨-೩೦ ನೇ ದಿವಸ ಸಂಜೆಯ ೬ ವರೆ ಗಂಟೆಗೆ ಶಿವಯೋಗಮಂದಿರದಲ್ಲಿ ಲಿಂಗೈಕ್ಯರಾದದ್ದಕ್ಕೆ ನಾವು ಅತ್ಯಂತ ವಿಷಾದಪಡುತ್ತೇವೆ. ಕರ್ನಾಟಕದಲ್ಲಿ ಆಗಿಹೋದ ಮಹಾ ಪುರುಷರಲ್ಲಿ ಇವರನ್ನು ನಾವು ಅವಶ್ಯವಾಗಿ ಗಣಿಸಬಹುದಾಗಿದೆ. ಇವರು ಜೀವಿತಕಾಲದಲ್ಲಿ ಸಾರ್ವಜನಿಕ ಹಿತಕ್ಕಾಗಿ ಎಡೆಬಿಡದೆ ದುಡಿದರು. ಅವರು ಅನೇಕ ಮಹತ್ವದ ಕಾರ್ಯಗಳನ್ನು ಮಾಡುತ್ತ ಬಂದರು. ಕ್ಯೇಸ್ಕರ ಇಡೀ ಕರ್ನಾಟಕವು ಅದರಲ್ಲಿ ವಿಶೇಷವಾಗಿ ವೀರಶೈವ ಸಮಾಜವು ಇವರಿಗೆ ಅತ್ಯಂತ ಋಣಿಯಾಗಿರುವದು.

ಸಮಾಜವು ಹಿಂದೆ ಬಿದ್ದ ಕಾಲಕ್ಕೆ ಅದನ್ನು ಮುಂದಕ್ಕೆ ದೂಡಲು ಒಬ್ಬಾನೊಬ್ಬನು ಮೊದಲು ಪ್ರವೃತ್ತನಾಗುತ್ತಾನೆ. ಅವನು ಈ ಪ್ರಕಾರ ಉದ್ಭವಿಸಿ ಅದಕ್ಕೆ ಯೋಗ್ಯ ದಾರಿಯನ್ನು ತೋರಿಸಿಕೊಡುತ್ತಾನೆ. ಆ ಮೇಲೆ ಅವನ ತರುವಾಯ ಅವನು ಹಾಕಿಕೊಟ್ಟ ಹಾದಿಯಂತೆ ಸಮಾಜವು ಕೆಲದಿವಸ ಹೋದ ಬಳಿಕ ಅದು ಪುನಃ ಸ್ತಬ್ಧವಾಗುವ ಪ್ರಸಂಗವು ಬರಲು ಮತ್ತೊಬ್ಬರು ಉತ್ಪನ್ನರಾಗಿ ಅದರಲ್ಲಿ ಹೊಸ ಚೈತನ್ಯವನ್ನು ಹುಟ್ಟಿಸುತ್ತಾರೆ. ಇಂಥವರೆಲ್ಲರೂ ಮಹಾವಿಭೂತಿಗಳೇಸರಿ. ಇಂಥವರ ವರ್ಗದಲ್ಲಿ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಇರುತ್ತಾರೆ. ಹೋದ ಶತಮಾನದ ಮಧ್ಯದಲ್ಲಿ ಬರೇ ಲಿಂಗಾಯತರಿಗಷ್ಟೇ ಅಲ್ಲ, ಇಡೀ ಕರ್ನಾಟಕಕ್ಕೆ ಯೋಗ್ಯ ಹಾದಿಯನ್ನು ತೋರಿಸಿ ಕೊಟ್ಟವರು ಕೈ ವಾ. ಚನಬಸಪ್ಪ ಧಾರವಾಡ ಇರುತ್ತಾರೆ. ಕರ್ನಾಟಕತ್ವದ ಬೀಜಾರೋಪಣವನ್ನು ಕನ್ನಡ ನಾಡಿನಲ್ಲಿ ಮೊದಲು ಊರಿದವರು ಇವರೇ ಇದ್ದಾರೆ. ಇವರ ಕಾಲಕ್ಕೆ ಅನೇಕ ವಿದ್ವಾಂಸರು ಹುಟ್ಟಿ ಕನ್ನಡವನ್ನು ಬೆಳಕಿಗೆ ತಂದರು. ಆ ಮೇಲೆ ಕೈ. ವಾ. ಗುರುಸಿದ್ಧಪ್ಪ ಗಿಲಗಂಚಿ ಮತ್ತು ರಾ॥ ಬ॥ ರುದ್ರಗೌಡ ಅರಟಾಳ ಇವರು ವೀರಶೈವ ಸಮಾಜದಲ್ಲಿ ಉತ್ಪನ್ನರಾಗಿ ಆಧುನಿಕ ಸಂಸ್ಕೃತಿಯ ಜ್ಞಾನವನ್ನು ಹಬ್ಬಿಸಲಿಕ್ಕೆ ಪ್ರಯತ್ನಿಸಿದರು. ಈ ಮಹನೀಯರು ತಮ್ಮ ಪ್ರಯತ್ನಗಳನ್ನು ೧೫-೨೦ ವರ್ಷ ನಡಿಸುವಷ್ಟರಲ್ಲಿಯೇ ಶ್ರೀ. ಹಾನಗಲ್ಲ ಕುಮಾರ ಸ್ವಾಮಿಗಳು ಮುಂದಕ್ಕೆ ಬಂದು ವೀರಶೈವ ಸಮಾಜದಲ್ಲಿ ಧರ್ಮದ ನಿಜವಾದ ಸಂಸ್ಕೃತಿಯನ್ನು ಹಬ್ಬಿಸಲಿಕ್ಕೆ ಕಾರಣ

ವಾದರು. ಧರ್ಮ ಸಂಸ್ಕೃತಿಯೇ ಸಮಾಜದ ತಳಹದಿಯಾಗಿರುತ್ತದೆಂದು ಭಾವಿಸಿ ಅದಕ್ಕೋಸ್ಕರವೇ ಅವರು ತಮ್ಮ ಇಡೀ ಆಯುಷ್ಯವನ್ನೇ ಅರ್ಪಿಸಿದರು.

ವೀರಶೈವ ಮಹಾಸಭೆಯು ಇರುವ ವರೆಗೆ ವೀರಶೈವ ಜನ ಸಮುದಾಯದಲ್ಲಿ ಅದು ವಿಶೇಷ ಚಳವಳಿಯನ್ನು ಹಬ್ಬಿಸಲಿಕ್ಕೆ ಸಾಧನೀ ಭೂತವಾಯಿತು. ಅದರ ಮೂಲಕ ಸಾರ್ವಜನಿಕ ಕಾರ್ಯ ಮಾಡಲಿಚ್ಛಿಸುವವರಿಗೆ ತಮ್ಮ ಚಳವಳಿಗಳನ್ನು ಸಾಗಿಸಲಿಕ್ಕೆ ಬಹಳ ಉಪಯೋಗವಾಯಿತು. ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಈ ಮಹಾಸಭೆಯನ್ನು ಆರಂಭಿಸಿ, ಅದರ ೭-೮ ಅಧಿನಿವೇಶನಗಳಲ್ಲಿ ಪ್ರತ್ಯಕ್ಷ ಕಾರ್ಯ ಮಾಡಿ. ಜನರಲ್ಲಿ ಜಾಗ್ರತೆಯನ್ನು ಹುಟ್ಟಿಸಿದರು. ಇದು ಅವರು ಮಾಡಿದ ಮಹತ್ವದ ಕಾರ್ಯವಾಗಿದೆ. ಶ್ರೀ ಸ್ವಾಮಿಗಳು ಧಾರ್ಮಿಕ ಕಾರ್ಯಗಳಲ್ಲಿ ಅತ್ಯಂತ ಉತ್ಸುಕರಾದ್ದರಿಂದ ಮಹಾಸಭೆಯ ಜಾಗ್ರತೆಯ ಮೂಲಕ ಅವರು ಬದಾಮಿ ಮಹಾಕೂಟದಲ್ಲಿ ಶಿವಯೋಗಮಂದಿರವೆಂಬ ಮಹತ್ವದ ಸಂಸ್ಥೆಯನ್ನು ಸ್ಥಾಪಿಸಿದರು. ಇದು ಅವರು ಮಾಡಿದ ಎರಡನೇ ಮಹತ್ವದ ಕಾರ್ಯವಾಗಿದೆ.

ಶಿವಯೋಗವು ವೀರಶೈವ ಧರ್ಮದಲ್ಲಿ ಒಂದು ವಿಶಿಷ್ಟ ಯೋಗ ಪದ್ಧತಿಯಾಗಿರುತ್ತದೆ. ಇದನ್ನು ಪ್ರಸಾರಗೊಳಿಸಬೇಕೆಂಬುದೇ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳ ಮುಖ್ಯಧ್ಯೇಯವಾಗಿತ್ತು. ಇದಕ್ಕೋಸ್ಕರವಾಗಿಯೇ ಅವರು ಶಿವಯೋಗ ಮಂದಿರವನ್ನು ಸ್ಥಾಪಿಸಿದರು. ಹೀಗೆ ಶಿವಯೋಗ ಮಂದಿರದಲ್ಲಿ ಶಿಕ್ಷಣಹೊಂದಿ ಮಠಾಧಿಕಾರಿಗಳು ಮಠಗಳಲ್ಲಿ ಪಟ್ಟಾಧ್ಯಕ್ಷರಾಗುವದರಿಂದ ಸಮಾಜದ ಪ್ರಗತಿಯು ಬಹು ಬೇಗನೆ ಆಗುವದೆಂದು ಅವರ ಪೂರ್ಣ ತಿಳುವಳಿಕೆಯಾಗಿತ್ತು. ಈ ದೃಷ್ಟಿಯಿಂದಲೇ ಅವರು ಈ ೨೨ ವರ್ಷಗಳ ವರೆಗೆ ಈ ಸಂಸ್ಥೆಯನ್ನು ನಡಿಸುತ್ತ ಬಂದರು. ಈ ಶಿವಯೋಗ ಸಾಧನೆಗೋಸ್ಕರ, ಅತ್ಯಂತ ಬಿಗಿತರವಾದ ವರ್ತನೆಯು ಅವಶ್ಯವೆಂದು ಅವರ ಭರವಸೆ ಇದ್ದದರಿಂದ ಅವರು ಅಲ್ಲಿ ಶಿಕ್ಷಣ ಹೊಂದುವವರಿಗೆ ಬಹು ಕಟ್ಟಾಚರಣೆಗಳನ್ನು ಕಲ್ಪಿಸಿದರು ಆ ಪ್ರಕಾರ ಈ ಆಚರಣೆಗೆ ಒಳಗಾಗಿ ಈ ಸಂಸ್ಥೆಯಿಂದ ಅನೇಕರು ಹೊರಬಿದ್ದು ಬಹುಕಡೆಗೆ ಮಠಾಧಿಕಾರಿಗಳಾಗಿದ್ದದ್ದೂ ಅವರು ಅನೇಕ ಬಗೆಯ ಸಮಾಜ ಕಾರ್ಯಗಳಲ್ಲಿ ತೊಡಗಿದ್ದೂ ತೋರಿಬರುತ್ತಿದೆ. ಶ್ರೀ ಹಾನಗಲ್ಲು ಕುಮಾರ ಸ್ವಾಮಿಗಳು ಮಾಡಿದ ಈ ಕಾರ್ಯವು ಸಾಮಾನ್ಯವಾದುದಲ್ಲ.

ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಈ ಪ್ರಕಾರ ಕೇವಲ ಧಾರ್ಮಿಕ ಭಾವನೆಯುಳ್ಳವರಾಗಿದ್ದರೂ ಅವರು ವ್ಯವಹಾರವನ್ನು ತಿರಸ್ಕರಿಸಿ ಬಿಡಲಿಲ್ಲ. ಅವರು ಆಧುನಿಕ ಸುಧಾರಣೆಗಳನ್ನು ಕೈಕೊಳ್ಳಲು ಯಾವಾಗಲೂ ಉತ್ಸುಕರಾಗಿರುತ್ತಿದ್ದರು. ಅವರು ಅಸಂಖ್ಯ ವಿದ್ಯಾರ್ಥಿಗಳಿಗೆ ಆಧುನಿಕ ಶಿಕ್ಷಣವನ್ನು ದೊರಕಿಸಲು ಬಹಳ ಸಹಾಯ ಮಾಡಿದರು. ಮತ್ತು ತಮ್ಮ ಶಿವಯೋಗಮಂದಿರದಲ್ಲಿಯೇ ಒಂದು ಇಂಗ್ಲಿಷ ಶಿಕ್ಷಣ ಸಂಸ್ಥೆಯನ್ನೂ ಸ್ಥಾಪಿಸಿದರು. ಅವರು ಶಿವಯೋಗಮಂದಿರದ ಹಣದಿಂದಲೇ ಗಿರಣಿಯನ್ನು ಸ್ಥಾಪಿಸಿದ್ದು ಅದು ಯಾವಾಗಲೂ ಊರ್ಜಿತ ಸ್ಥಿತಿಯಲ್ಲಿಯೇ ಇದೆ. ಅವರು ಶಿವಯೋಗಮಂದಿರದ ಜಮೀನಗಳಲ್ಲಿ ಹೊಸ ತರದ ಒಕ್ಕಲುತನ ಸುಧಾರಣೆಗಳನ್ನು ಕೈಕೊಳ್ಳಲು ಬಹಳ ಆತುರ ಪಡುತ್ತಿದ್ದರು. ಮತ್ತು ಈ ದೃಷ್ಟಿಯಿಂದಲೇ ಅವರು ಅನೇಕ ಕಡೆಗೆ ಶಿವಯೋಗಮಂದಿರಕ್ಕೋಸ್ಕರ ಜಮೀನುಗಳನ್ನು ಸಂಪಾದಿಸಿರುವರು. ಅವರ ಮನಸ್ಸಿನಲ್ಲಿ ಶಿವಯೋಗಮಂದಿರದ ಮುಖಾಂತರ ಇಡೀ ದೇಶದಲ್ಲಿ ಧಾರ್ಮಿಕ ಪ್ರಚಾರ ಕಾರ್ಯಮಾಡಬೇಕೆಂದು ಬಹಳ ಇಷ್ಟದರಿಂದ ಅವರು ಅನೇಕ ಕಡೆಗೆ ಕೀರ್ತನಕಾರರೂ ಉಪನ್ಯಾಸಕರೂ ಹೋಗಿ ಉಪದೇಶ ಮಾಡಲು ಬಹಳ ಪ್ರೋತ್ಸಾಹಿಸುತ್ತಿದ್ದರು. ಹಾಗೆಯೇ ಅವರು ಗವಾಯಿಗಳಿಗೂ ಉತ್ತೇಜನ ಕೊಡುತ್ತಿದ್ದರು. ಎಲ್ಲಿಯಾದರೂ ಸಭೆಗಳಾಗುತ್ತಿದ್ದರೆ, ಅವರಿಗೆ ಆಮಂತ್ರಣ ಬರುವದೇ ತಡ, ಅವರು ಅವುಗಳಿಗೆ ತಪ್ಪದೇ ಹೋಗುತ್ತಿದ್ದರು. ಮತ್ತು ಅವರು ಹೋದಲ್ಲಿ ಬಂದ ಜನರಿಗೆ ಉಚ್ಚತರದ ಸಮಾಜ ಸುಧಾರಣೆಯ ವಿಚಾರಗಳನ್ನೇ ಹೇಳುವರು. ಅವರ ಈ ಶ್ರೇಷ್ಠ ವರ್ತನೆಗೆ ಜನರು ಅತ್ಯಂತ ಪೂಜ್ಯಭಾವವನ್ನು ತಾಳಿದವರಾಗಿ ಅವರ ನುಡಿಗಳನ್ನು ಅತ್ಯಾದರದಿಂದ ಆದರಿಸುವರು. ಅವರ ಸಾನ್ನಿಧ್ಯದಲ್ಲಿ ಯಾವಾಗಲೂ ಉಚ್ಚ ವಿಚಾರತರಂಗಗಳೇ ಹೊರಡುತ್ತಿದ್ದವು. ಕೆಡಕಿಗೆ ಅದರಲ್ಲಿ ಆಸ್ಪದವಿರಲಿಲ್ಲ. ಈ ಪ್ರಕಾರ ಶ್ರೀ ಹಾನಗಲ್ಲು ಕುಮಾರ ಸ್ವಾಮಿಗಳವರು ಈಗಿನ ಕಾಲಕ್ಕೆ ಒಬ್ಬ ಶ್ರೇಷ್ಠ ಸಮಾಜ ಸುಧಾರಕರಂತೆ ವರ್ತಿಸಿ ಹೋದರು.

(ಶ್ರೀ ಹಾನಗಲ್ಲು ಕುಮಾರ ಸ್ವಾಮಿಗಳು ಈಗಿನ ಕಾಲದಲ್ಲಿ ಷಟ್ಸ್ಥಲ ಶಾಸ್ತ್ರದಲ್ಲಿ ಬಹಳ ಪ್ರಾವೀಣ್ಯತೆಯನ್ನು ಹೊಂದಿದವರಾಗಿದ್ದರು. ಅವರ ಮರ್ಮಗಳು ಅವರಿಗೆ ಗೊತ್ತಿದ್ದಷ್ಟು ಬೇರೆ ಯಾರಿಗೂ ಬಹುಶಃ ಗೊತ್ತಿರಲಿಕ್ಕಿಲ್ಲ. ವಚನ ಶಾಸ್ತ್ರದಲ್ಲಿ ಅವರು ಪಾರಂಗತರಾದ್ದರಿಂದಲೇ

ಈ ಸಂಗತಿಗಳು ಅವರಿಗೆ ಪೂರ್ಣ ಮನವರಿಕೆಯಾಗಿದ್ದವು. ಅವರ ಬಗ್ಗೆ ಈ ಸಂಗತಿಯನ್ನು ನಾವು ಸ್ವತಃ ಬಲ್ಲೆವು. ನಾನು ವಚನಶಾಸ್ತ್ರಸಾರ ೧ ನೇ ಭಾಗವನ್ನು ರಚಿಸಿದ ಕಾಲಕ್ಕೆ ಈ ಸಂಗತಿಯನ್ನು ಅವರು ಕೇಳಿದ ಕೂಡಲೆ ಅವರು ಕೆಲವು ಶಾಸ್ತ್ರಿಗಳನ್ನು ಕರೆದುಕೊಂಡು ವಿಜಾಪುರಕ್ಕೆ ಸಮಕ್ಷಮ ಬಂದು ಆ ಗ್ರಂಥದ ಬಹು ಭಾಗವನ್ನು ನನ್ನಿಂದ ಓದಿಸಿದರು. ಆಗ ನಾನು ವಿಷಮಜ್ವರದಿಂದ ಅಶಕ್ತನಾಗಿದ್ದ ಕಾರಣ ಅವರು ತಾವೇ ವಿಜಾಪುರಕ್ಕೆ ಹೀಗೆ ಕೇಳಲಿಕ್ಕೆ ಬಂದಿದ್ದರ ಮೇಲಿಂದ ಅವರು ಈ ವಿಷಯದ ಬಗ್ಗೆ ಎಷ್ಟು ಮಹತ್ತರ ಪ್ರೀತಿಯುಳ್ಳವರಾಗಿದ್ದರೆಂಬುದು ಯಾರಾದರೂ ಊಹಿಸಬಹುದಾಗಿದೆ. ಮತ್ತು ಅವರೇ ಈ ಗ್ರಂಥವನ್ನು ಅಚ್ಚು ಹಾಕಲು ನನಗೆ ಉತ್ತೇಜನ ಕೊಟ್ಟರು. ಅವರು ಶಿವಯೋಗಮಂದಿರದಲ್ಲಿ ಅಸಂಖ್ಯ ಪುರಾತನ ತಾಡವಾಲೆ ಗ್ರಂಥಗಳನ್ನು ಸಂಗ್ರಹಿಸಿರುವರು. ಅವುಗಳಲ್ಲಿ ಅನೇಕವುಗಳು ಬಹಳ ಬೆಲೆಯುಳ್ಳ ಗ್ರಂಥಗಳಾಗಿವೆ. ನನಗೆ ಬೇಕಾಗುವ ಗ್ರಂಥಗಳ ಬಗ್ಗೆ ಶಿವಯೋಗಮಂದಿರಕ್ಕೆ ನಾನು ಬರೆದ ಕೂಡಲೇ ಅವರು ಅವುಗಳನ್ನು ನನ್ನ ಕಡೆಗೆ ತಪ್ಪದೆ ಕಳಿಸಿ ಕೊಡುವ ವ್ಯವಸ್ಥೆ ಮಾಡಿದ್ದರು. ಇವರ ಮೇಲಿಂದ ಧಾರ್ಮಿಕ ಶೋಧ ಮಾಡುವವರಿಗೆ ಅವರು ಎಷ್ಟು ಪ್ರೋತ್ಸಾಹಿಸುತ್ತಿದ್ದರೆಂಬದು ತಿಳಿದು ಬರುತ್ತದೆ.

ಶ್ರೀ ಸ್ವಾಮಿಗಳು ಸಮಾಜದಲ್ಲಿ ರೂಢವಾಗಿರುವ ಭೇದಗಳನ್ನು ಮುರಿಯಲಿಕ್ಕೆ ಯಾವಾಗಲೂ ಬಹಳ ಪ್ರಯತ್ನಿಸುತ್ತಿದ್ದರು. ಇದಕ್ಕೋಸ್ಕರ ಅವರು ಕರ್ನಾಟಕದಲ್ಲೆಲ್ಲ ಬಹಳ ಸಂಚಾರಮಾಡುತ್ತ ಬಂದರು. ಯಾವ ಊರಲ್ಲಾದರೂ ಏನಾದರೂ ತಂಟೆಗಳು ಉತ್ಪನ್ನವಾದರೆ ಸಾಕು, ಅವರನ್ನು ಕರೆಯಲಿಕ್ಕೆ ಯಾರಾದರೂ ಬಂದರೆ ಅವರು ತಟ್ಟನೇ ಅಲ್ಲಿಗೆ ಹೋಗಿ ಎಲ್ಲ ಜನರಿಗೂ ಸಮಾಧಾನ ಹೇಳಲು ಸಿದ್ಧರಾಗಿರುತ್ತಿದ್ದರು. ಈ ವಿಷಯದಲ್ಲಿ ಅವರು ತೋರಿಸುತ್ತಿದ್ದ ಚಟುವಟಿಕೆಗಳು ಅವರ್ಣನೀಯವಾಗಿರುತ್ತವೆ. ಇದರಲ್ಲಿ ಅವರು ಜನರು ಸರಿಯಾಗಿ ನಡೆಯಬೇಕೆಂದು ಅಭಿಲಾಷೆಯೇ ಹೊರ್ತು ಬೇರೆ ಯಾವ ಉದ್ದೇಶವೂ ಇರಲಿಲ್ಲ. ಇದರಿಂದ ಅವರು ಎಲ್ಲರಿಗೂ ಬೇಕಾಗಿದ್ದರು. ಅವರು ಮಾಡಿದ ಮತ್ತೊಂದು ಮಹತ್ವದ ಕಾರ್ಯವೆಂದರೆ, ಸಮಯ ಭೇದಗಳನ್ನು ಮುರಿದದ್ದು. ವಿರಕ್ತ ವರ್ಗದವರಲ್ಲಿರುವ ಈ ಭೇದಗಳ ಮೂಲಕ ದೇಶದಲ್ಲಿ ಅನೇಕ ಮನಸ್ತಾಪಗಳು ಬಹು ದಿವಸಗಳಿಂದಲೂ ನಡೆದಿದ್ದವು. ಆದರೆ ಶ್ರೀ ಸ್ವಾಮಿಗಳವರು

ಈ ಸಮಯಗಳನ್ನು ಸಂಪೂರ್ಣ ಮುರಿದುಹಾಕಿದರು. ಇದರ ಶ್ರೇಯಸ್ಸು ಇವರಿಗೇ ಇರುತ್ತದೆ. ಇವರಿಂದ ಈಗ ಮುರಿಗೀ, ಕುಮಾರ, ಕೆಂಪಿನ, ಚಿಲ್ಲಾಳ ಎಂಬ ಸಮಯ ಭೇದಗಳು ಬಹಳ ಕಡಿಮೆಯಾಗಿವೆ. ಶ್ರೀ ಹಾನಗಲ್ಲ ಕುಮಾರಸ್ವಾಮಿಗಳು ಈ ಪ್ರಕಾರ ಒಂದು ಮಹತ್ತರವಾದ ಕಾರ್ಯವನ್ನು ಸಮಾಜಕ್ಕೆ ಮಾಡಿರುವರು.

ಶ್ರೀ ಸ್ವಾಮಿಗಳು ದೀರ್ಘೋದ್ಯೋಗಿಗಳು. ಸ್ವಲ್ಪ ತೊಂದರೆ ಬಂದ ಕೂಡಲೇ ಅವರು ಎಂದೂ ಹಿಂದೆಗೆಯುವವರಲ್ಲ. ಮಹಾಕೂಟಸ್ಥಾನದಲ್ಲಿ ಮಂದಿರವನ್ನು ಸ್ಥಾಪಿಸಿದ ವರುಷ ಅವರಿಗೆ ಅನೇಕ ತೊಂದರೆಗಳು ಉತ್ಪನ್ನವಾದವು. ಈ ಪ್ರದೇಶವು ವನ್ಯಮೃಗಗಳಿಂದ ತುಂಬಿದ ಅರಣ್ಯಭಾಗವು. ಆಗ ಅಲ್ಲಿ ಇರಲಿಕ್ಕೆ ಸ್ಥಳವಿಲ್ಲ. ಅಲ್ಲಿ ಇದ್ದವರಿಗೆ ಭಯಂಕರ ಮಲೇರಿಯ ಜ್ವರವು ವ್ಯಾಪಿಸಿತು. ಆಗ ಅನೇಕರು ಶ್ರೀ ಸ್ವಾಮಿಗಳಿಗೆ ಈ ಕಾರ್ಯವನ್ನು ಬಿಟ್ಟು ಕೊಡಲು ಉಪದೇಶಿಸಿದರು. ಆದರೆ ಶ್ರೀ ಸ್ವಾಮಿಗಳು ಅಚಲವಾದ ಧೈರ್ಯದಿಂದ ಆ ಸ್ಥಳದಲ್ಲಿಯೇ ಇದ್ದುಕೊಂಡು ಸುತ್ತಲಿನ ಗ್ರಾಮಗಳಲ್ಲಿ ಸಂಚರಿಸಿ ಹಣವನ್ನು ಶೇಖರಿಸಿ ಇರಲಿಕ್ಕೆ ಕಟ್ಟಡಗಳನ್ನೂ ಯೋಗ್ಯ ಜಲಾಶಯವನ್ನೂ ಬೇಕಾದ ವ್ಯವಸ್ಥೆಗಾರರನ್ನೂ ಏರ್ಪಡಿಸಿಕೊಂಡು ಆ ನಿರ್ಜನ ಪ್ರದೇಶವನ್ನು ಊರ್ಜಿತಸ್ಥಿತಿಗೆ ತಂದರು. ಒಂದು ಸಂಸ್ಥೆಯನ್ನು ಸ್ಥಾಪಿಸುವದು ದುಸ್ತರವು. ಆದರೆ ಅದನ್ನು ಕೈಕೊಂಡು ಶಾಶ್ವತ ತಳಹದಿಯ ಮೇಲೆ ಹಾಕುವದು ಎಲ್ಲಕ್ಕೂ ದುಸ್ತರವಾದ ಕೆಲಸವು. ಈ ಕಾರ್ಯವು ಒಬ್ಬ ಯೋಜಕನ ಹೊರತು ಯಾರಿಗೂ ಆಗಲಾರದು. ಇಂಥ ಯೋಜನಾ ಸಾಮರ್ಥ್ಯವನ್ನು ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ಪಡೆದದ್ದರಿಂದಲೇ ಅವರಿಂದ ಈ ಮಹತ್ಕಾರ್ಯವು ಸಿದ್ಧಿಸಿತು.)

ಶ್ರೀ ಸ್ವಾಮಿಗಳು ಧರ್ಮದ ಮತ್ತು ಸಮಾಜದ ಯೋಗ್ಯತೆಗೆ ಕುಂದು ಬರುವ ಪ್ರಸಂಗಗಳು ಬಂದ ಕೂಡಲೇ ಅವರಲ್ಲಿ ಒಂದು ವಿಲಕ್ಷಣ ಶಕ್ತಿಯೇ ಉತ್ಪನ್ನವಾಗುತ್ತಿತ್ತು. ಅವರ ಆಯುಷ್ಯದಲ್ಲಿ ಈ ಬಗೆಯ ಅನೇಕ ಪ್ರಸಂಗಗಳು ಒದಗಿದವು. ೧೯೦೨ ರಲ್ಲಿ ಹುಬ್ಬಳ್ಳಿಯಲ್ಲಿ ಶ್ರೀ ಜಗದ್ಗುರು ಗುರುಸಿದ್ಧ ಮಹಾಸ್ವಾಮಿಗಳವರ ಆಂದೋಲನೋತ್ಸವಕೆ ಆತಂಕ ಬರಲು ಆದರಲ್ಲಿ ಅವರು ಬಹಳ ಸಾಹಸಮಾಡಿದರು. ೧೯೦೯ ನೇ ಇಸ್ವಿಯಲ್ಲಿ ಮಹಾಸಭೆಯನ್ನು ಮಾಡುವ ಕಾಲಕ್ಕೆ ಶ್ರೀ ಉಜ್ಜನಿ ಮಹಾ

ಪೀಠದಲ್ಲಿದ್ದ ವ್ಯಾಜ್ಯಗಳು ಅಡ್ಡಬರುವವೆಂದು ತಿಳಿದ ಕೂಡಲೆ ಅವರು ಅನೇಕ ಮಹನೀಯರನ್ನು ಕರೆದುಕೊಂಡು ಹೋಗಿ ಅವುಗಳನ್ನು ಪರಿಹರಿಸಲು ಪ್ರಯತ್ನಿಸಿದರು. ಪರಳೀವ್ಯಾಜ್ಯದಲ್ಲಿ ಅವರು ಮಾಡಿದ ದೀರ್ಘೋದ್ಯೋಗಗಳು ಎಲ್ಲರಿಗೂ ಗೊತ್ತೇ ಇವೆ. ಆ ಕಾಲಕ್ಕೆ ಅವರು ಅನೇಕ ಶಾಸ್ತ್ರಿಗಳನ್ನು ಬರಮಾಡಿಕೊಂಡು ವ್ಯಾಜ್ಯಕ್ಕೆ ಬೇಕಾಗುವ ಎಲ್ಲ ಸಲಹೆಗಳನ್ನು ಒದಗಿಸಿ ಕೊಟ್ಟರು. ಇಷ್ಟೇ ಅಲ್ಲ, ಅದಕ್ಕೆ ಹಣದ ಅಡಚಣಿಯಾಗಲು ದೇಶ ಮಧ್ಯದಲ್ಲಿ ಹೋಗಿ ಬಹಳಶ್ರಮಪಟ್ಟು ಹಣವನ್ನು ಕೂಡಿಸಿ ಕಾರ್ಯಕ್ಕೆ ವಿಶೇಷ ಸಹಾಯವಾದರು. ಈ ಬಗೆಯ ಉದಾಹರಣೆಗಳು ಅವರ ಆಯುಷ್ಯದಲ್ಲಿ ಅಸಂಖ್ಯಾತವಾಗಿರುತ್ತವೆ.

ಈ ಪ್ರಕಾರ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳು ತಮ್ಮ ಆಯುಷ್ಯವನ್ನೆಲ್ಲ ಧರ್ಮ ಜಾಗ್ರತಿ, ಸಮಾಜ ಸುಧಾರಣೆಗೋಸ್ಕರ ವೆಚ್ಚ ಮಾಡಿದರು. ಅವರು ೧೮೬೭ ನೇ ಇಸ್ವಿಯಲ್ಲಿ ಜನಿಸಿ ತಮ್ಮ ಆಯುಷ್ಯದ ೬೩ ನೇ ವರ್ಷದಲ್ಲಿ ಲಿಂಗೈಕ್ಯರಾದರು. ಅವರು ಸಮಾಜ ಕಾರ್ಯಗಳನ್ನು ತಮ್ಮ ವಯಸ್ಸಿನ ೨೨ ನೇ ವರ್ಷದಲ್ಲಿ ಆರಂಭಿಸಿ ಅವುಗಳಲ್ಲಿಯೇ ತಮ್ಮ ದೇಹವನ್ನು ಸವಿಸಿದರು. ಇಂಥ ಮಹಾನುಭಾವರಿಗೋಸ್ಕರ ಸಮಾಜವೆಲ್ಲವು ಚಿರಋಣಿಯಾಗಿರುತ್ತದೆ.

ಈಗಿನ ಕಾಲಕ್ಕೆ ಶಿವಯೋಗಮಂದಿರದಲ್ಲಿಯೇ ಶ್ರೀ ಸ್ವಾಮಿಗಳವರು ಲಿಂಗೈಕ್ಯರಾಗಿದ್ದು ಈ ಸಂಸ್ಥೆಯನ್ನು ಅತ್ಯುತ್ಕೃಷ್ಟರೀತಿಯಿಂದ ನಡಿಸುವದರಲ್ಲಿಯೇ ಅವರ ನಿಜವಾದ ಸ್ಮಾರಕವಿರುತ್ತದೆ. ಇದು ಉಚ್ಚ ತಮಸ್ಥಿತಿಗೆ ಬರಲಿಕ್ಕೆ ಅವಶ್ಯವಾಗಿರುವ ಎಲ್ಲ ಸಾಮಗ್ರಿಗಳನ್ನು ಅವರು ಏರ್ಪಡಿಸಿರುವರು. ಈ ಸಾಮಗ್ರಿಗಳನ್ನು ಸರಿಯಾಗಿ ಉಪಯೋಗಿಸುವದರಲ್ಲಿಯೇ ಸಮಾಜದ ಉತ್ಕೃಷ್ಟತೆ ಮತ್ತು ಯೋಗ್ಯತೆಯು ಇರುತ್ತದೆ. ಈ ಬಗ್ಗೆ ಅದರ ಟ್ರಸ್ಟಿಗಳು ಜಾಗರೂಕರಾಗಿರಬೇಕೆಂದು ಅವರಿಗೆ ನಮ್ಮ ಸವಿನಯ ಸೂಚನೆಯಿದೆ. ಶ್ರೀ ಹಾನಗಲ್ಲ ಕುಮಾರಸ್ವಾಮಿಗಳು ಸ್ಥಾಪಿಸಿದ ಈ ಮಂದಿರವನ್ನು ಈ ಪ್ರಕಾರ ಅತ್ಯುನ್ನತಸ್ಥಿತಿಗೆ ಒಯ್ದು ಅವರ ಕೀರ್ತಿಯನ್ನು ಇನ್ನು ಹೆಚ್ಚಾಗಿ ಬೆಳೆಯುವಂತೆ ಇವರು ಮಾಡಲೆಂದು ಹಾರೈಸಿ ನಾವು ನಮ್ಮ ಲೆಕ್ಕಣಿಕೆಯನ್ನು ಇಲ್ಲಿಯೇ ನಿಲ್ಲಿಸುತ್ತೇವೆ.

# ಶಿವಾನುಭವ.

ಸಂಪುಟ ೪.] (ಮಾಸಪತ್ರಿಕೆ.) ಸಂಚಿಕೆ ೧೨.]



ಮಾರ್ಚ ೧೯೩೦] ವಿಜಾಪುರ. [ಫಾಲ್ಗುಣ ೧೮೫೧.

ವಾ. ಚ. ೪ ರೂ. ೪ ಆ:

# ವಿಷಯಾನುಕ್ರಮಣಿಕೆ.



## ಶಿವಾನುಭವ.

ಇದು ವೀರಶೈವ ಧಾರ್ಮಿಕ ಉನ್ನತಿಯ ಬಗ್ಗೆ ಪ್ರಯತ್ನಿಸುವ ಮೋತ್ತರದ ಮಾಸಪತ್ರಿಕೆಯು. ಇದು ೬೪ ಪುಟಗಳುಳ್ಳದ್ದಿದ್ದು ಚಂದಾ ಮಾತ್ರ ೪ರೂ. ೪ಆ. ಇದು ಪ್ರತಿತಿಂಗಳ ಮಧ್ಯಕ್ಕೆ ಹೊರಡುತ್ತದೆ. ಲೇಖಕರು ಚಿಕ್ಕ ಚಿಕ್ಕ ಲೇಖಗಳನ್ನು ಕಳಿಸಬೇಕು. ವೀರಶೈವರ ಉನ್ನತಿಯ ಪರವಾಗಿ ಯಾರು ಬೇಕಾದವರು ಲೇಖಗಳನ್ನು ಬರೆದರೂ ಅವಕಾಶ ಸಿಗುವದು. ಕೆಲವರು ಇದರ ಹಿಂದಿನ ಸಂಚಿಕೆಗಳನ್ನು ಬೇಡುತ್ತಾರೆ. ಅದರೆ ೧.೨ ಸಂಚಿಕೆಗಳು ಸಿಗುವದೇ ಇಲ್ಲ. ೩ ರಿಂದ ೧೨ ವರೆಗೆ ಮಾತ್ರ ಸಿಗುತ್ತವೆ. ಬೇಕಾದವರು ಶೀಘ್ರ ತರಿಸಿಕೊಳ್ಳಬಹುದು. ತಡವಾದರೆ ಪ್ರತಿಗಳು ಸಿಗಲಾರವು. ಯಾಕಂದರೆ ಪ್ರತಿಗಳು ಸ್ವಲ್ಪೇ ಉಳಿದಿವೆ. ಪ್ರತಿಯೊಂದು ಕೆ... [illegible]

ಮ್ಯಾನೇಜರ.

# ಶಿವಾನುಭವ.

ವರ್ಷ ೪ ]    ಮಾರ್ಚ ೧೯೩೦    [ ಸಂಚಿಕೆ ೧೨

## ಶಿವಾನುಭವ ಪತ್ರಿಕೆಯು ಮಾಡಿದ ಕಾರ್ಯಗಳು.

ವಾಚಕರಿಗೆ ಹಸ್ತಗತವಾಗಿರುವ ಈ ಸಂಚಿಕೆಯು ಶಿವಾನುಭವದ ೪ ನೇ ವರ್ಷದ ಕಡೆಯದಾಗಿದೆ. ಮುಂದಿನ ಸಂಚಿಕೆಯಿಂದ ಈ ಪತ್ರಿ ಯು ೫ ನೇ ವರ್ಷವು ಪ್ರಾರಂಭವಾಗುತ್ತದೆ. ಶಿವಾನುಭವವು ಈ ವರ್ಷಗಳ ವರೆಗೆ ಮಾಡುತ್ತಬಂದ ವಾಙ್ಮಯ ಸೇವೆಯು ವೀರಶೈವರಿಗೆಲ್ಲ ವಿದಿತವೇ ಇರುತ್ತದೆ. ಇದನ್ನು ನಾವು ಆದರ ಓದುಗರಿಗೆ ವಿಶದಪಡಿಸುವ ಅವಶ್ಯವಿಲ್ಲ. ವೀರಶೈವ ಪುರಾತನ ವಾಙ್ಮಯ ಪ್ರಸಾರ ಅದರ ರಾಜಕೀಯ ಮತ್ತು ಧಾರ್ಮಿಕ ಇತಿಹಾಸ ಸಂಶೋಧನ ಮತ್ತು ಧಾರ್ಮಿಕ ತತ್ವಗಳ ವಿವೇಚನೆ ಇವುಗಳೇ ಶಿವಾನುಭವ ಪತ್ರಿಕೆಯ ಮುಖ್ಯೋದ್ದೇಶಗಳಾಗಿವೆ. ಈ ಉದ್ದೇಶಗಳಿಗನುಸರಿಸಿ ಅದು ಈ ವರೆಗೂ ಕಾರ್ಯ ಮಾಡುತ್ತ ಬಂದಿರುತ್ತದೆ. ಈ ಅವಧಿಯಲ್ಲಿ ಅದು ಅನೇಕ ಗ್ರಂಥಗಳನ್ನೂ ಕಾವ್ಯಗಳನ್ನೂ ಸಂಶೋಧನಾತ್ಮಕ ಅನೇಕ ಸ್ವತಂತ್ರ ಲೇಖಗಳನ್ನೂ ಪ್ರಸಿದ್ಧಿಸುತ್ತ ಬಂದಿದೆ.

ವೀರಶೈವ ಧರ್ಮದ ಇತಿಹಾಸದಲ್ಲಿ ಬಸವೇಶ್ವರನ ಕಾಲವು ಅತ್ಯಂತ ಮಹತ್ವದ್ದಾಗಿದೆ. ಈ ಕಾಲಕ್ಕೆ ಅದು ಅತ್ಯುನ್ನತ ಸ್ಥಾನವನ್ನು ಹೊಂದಿತು. ಆಗ ಕನ್ನಡ ವಾಙ್ಮಯದಲ್ಲಿ ಅಸಂಖ್ಯ ಗ್ರಂಥಕಾರರು ಉದಯವಾಗಿ ಅದರ ಔನ್ನತ್ಯಕ್ಕೆ ಕಾರಣರಾದರು. ಈ ಕಾಲದಲ್ಲಿ ವೀರಶೈವ ಸಂಸ್ಕೃತಿಯು ಯಾವ ಸ್ವರೂಪದ್ದಿತ್ತೆಂಬದನ್ನು ತಿಳಿಯುವದು ಅತ್ಯಂತ ಮಹತ್ವದ್ದಿದ್ದು, ಇದಕ್ಕೋಸ್ಕರ ವಚನ ವಾಙ್ಮಯವು ಬಹಳ ಸಹಾಯಕಾರಿಯಾಗಿದೆ. ಈ

ವಾಙ್ಮಯವನ್ನು ಶಿವಾನುಭವವು ವಿಶೇಷ ರೀತಿಯಿಂದ ಪ್ರಸಾರಪಡಿಸುತ್ತ ಬಂದಿದೆ. ಇದರ ಮಹತ್ವವೂ ವಿಸ್ತಾರವೂ ಎಷ್ಟಿದೆಂಬದು ವಚನಶಾಸ್ತ್ರಸಾರ ೧ ನೇ ಭಾಗದ ಮೂಲಕ ಕರ್ನಾಟಕಸ್ತರ ಮುಂದೆ ಮೊದಲು ಇಡಲ್ಪಟ್ಟಿತು. ಈ ಗ್ರಂಥದ ಮೂಲಕ ವೀರಶೈವ ಧರ್ಮ ತತ್ವಗಳ ಉದಾರ ಸ್ವರೂಪವನ್ನೂ ಶಿವಶರಣರ ಹೃದಯವನ್ನೂ ಕನ್ನಡಿಗರು ಅರಿಯಲಿಕ್ಕೆ ಅನುಕೂಲವಾಯಿತು. ಆದರೆ ಪ್ರತಿಯೊಬ್ಬ ವಚನಕಾರನ ಉಕ್ತಿಗಳನ್ನು ಒತ್ತಟ್ಟಿಗೆ ಸಂಗ್ರಹಿಸಿ ಅವುಗಳನ್ನು ಪ್ರಸಿದ್ಧಗೊಳಿಸುವದು ಅತ್ಯಂತ ಅವಶ್ಯವೆಂದು ನಮಗೆ ತೋರಿದ್ದರಿಂದ ಅವುಗಳನ್ನು ನಾವು ನಮಗೆ ಶಕ್ಯವಿದ್ದಷ್ಟರ ಮಟ್ಟಿಗೆ ಸಂಗ್ರಹಿಸಿ ಅವುಗಳನ್ನು ಈ ವರೆಗೆ ಶಿವಾನುಭವ ಪತ್ರಿಕೆಯ ದ್ವಾರಾ ಈ ವರೆಗೆ ಪ್ರಕಟಿಸುತ್ತ ಬಂದಿರುವೆವು. ಈ ಪ್ರಕಾರ ನಾವು ಈ ವರೆಗೆ ೧೦—೧೨ ಮಹತ್ವದ ವಚನ ಗ್ರಂಥಗಳನ್ನು ಪ್ರಸಿದ್ಧಿಸಿದ್ದು ಇವುಗಳಲ್ಲಿ ಕೆಲವು ಮೈಸೂರು ಮತ್ತು ಮುಂಬಯಿ ವಿಶ್ವವಿದ್ಯಾಲಯಗಳಲ್ಲಿ ಪಠ್ಯಪುಸ್ತಕಗಳಾಗಿ ಉಪಯೋಗಿಸಲ್ಪಡುತ್ತಲಿವೆ. ಮತ್ತು ಅನೇಕರು ಇವುಗಳನ್ನು ಬಹು ಲಕ್ಷಪೂರ್ವಕವಾಗಿ ಅಭ್ಯಾಸಮಾಡುತ್ತಲೂ ಇರುವರು.

ನಾವು ಶಿವಾನುಭವದಲ್ಲಿ ಈ ವರೆಗೆ ಅಚ್ಚು ಹಾಕಿರುವ ಗ್ರಂಥಗಳು ಚಿಕ್ಕವಾಗಿರುತ್ತವೆ. ಇಂಥ ಪತ್ರಿಕೆಯಲ್ಲಿ ದೊಡ್ಡ ದೊಡ್ಡ ಗ್ರಂಥಗಳನ್ನು ಪ್ರಸಿದ್ಧಿಸುವದು ಶಕ್ಯವಾಗಲಾರದು. ಆದ್ದರಿಂದ ಇನ್ನು ಮೇಲೆ ಇಂಥ ದೊಡ್ಡ ಗ್ರಂಥಗಳನ್ನು ಸ್ವತಂತ್ರವಾಗಿಯೇ ಮುದ್ರಣಗೊಳಿಸಬೇಕೆಂದು ನಾವು ಯೋಚಿಸಿರುವೆವು. ಇಂಥ ಗ್ರಂಥಗಳು ವೀರಶೈವ ವಾಙ್ಮಯದಲ್ಲಿ ಅನೇಕವಿದ್ದು ಅವುಗಳನ್ನು ಪ್ರಸಿದ್ಧಿಸಿದಾಗಲೇ ಅದರ ನಿಜವಾದ ಮಹತ್ವವು ಹೊರಬೀಳಲು ಸಾಧ್ಯವಾಗುತ್ತದೆ. ಆದರೆ ಈ ಪ್ರಕಾರ ದೊಡ್ಡಗ್ರಂಥಗಳನ್ನು ಅಚ್ಚು ಹಾಕುವದು ಬಹಳ ಖರ್ಚಿನದಿದ್ದು ಅಚ್ಚಾದ ಗ್ರಂಥಗಳು ಗ್ರಹಿಸಲ್ಪಡದೆ ಹೋದರೆ ಈ ಪ್ರಯತ್ನದಲ್ಲಿ ಬಿದ್ದವರಿಗೆ ಬಹಳ ಹಾನಿಯಾಗುವದು ನಿಶ್ಚಯವು. ಆದ್ದರಿಂದ ಈ ಬಗೆಯ ಕಾರ್ಯಗಳನ್ನು ನೆರವೇರಿಸಲಿಕ್ಕೆ ಉದಾರ ಗೃಹಸ್ಥರ ಸಹಾಯವು ಅತ್ಯವಶ್ಯವಾಗಿ ಬೇಕಾಗಿರುತ್ತದೆ. ಈ ಪ್ರಕಾರ ನಮಗೆ ಸಹಾಯ ಮಾಡಲು ಕೆಲ ಮಹನೀಯರು ಈಗ ಮುಂದಾದದ್ದಕ್ಕೆ ಅವರ ಉಪಕಾರವನ್ನು ವೀರಶೈವ ಸಮಾಜವು ಎಷ್ಟು ಎಣಿಸಿದರೂ ಅಲ್ಪವೇ ಸರಿ. ಇಂಥವರಲ್ಲಿ ಶ್ರೀಯುತ ವೀರಭದ್ರಪ್ಪ ಬಸಪ್ಪ ಹಾಲಭಾವಿ ಸಬಜಜ್ಜ ಧಾರವಾಡ ಇವರು ಇರುತ್ತಾರೆ. ಇವರು

ಶೂನ್ಯಸಂಪಾದನೆ ಎಂಬ ಉದ್ಗ್ರಂಥವನ್ನು ಅಚ್ಚುಹಾಕುವದಕ್ಕೋಸ್ಕರ ನಮಗೆ ೫೦೦ ರೂಪಾಯಿಗಳನ್ನು ಕೊಟ್ಟಿದ್ದು ಇದನ್ನು ಅಚ್ಚುಹಾಕುವ ಕಾರ್ಯವು ಈಗ ಬಹು ಮಟ್ಟಿಗೆ ಪೂರ್ತಿಯಾಗಲಿಕ್ಕೆ ಬಂದಿರುತ್ತದೆ. ಅದೇ ಪ್ರಕಾರ ಪ್ರಭುದೇವರ ವಚನಗಳನ್ನು ಅಚ್ಚು ಹಾಕಲಿಕ್ಕೆ ಹುಬ್ಬಳ್ಳಿಯ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಮೂರು ಸಾವಿರ ಮಠದ ಮಹಾಸ್ವಾಮಿಗಳವರು ೫೦೦ ರೂಪಾಯಿಗಳನ್ನು ದಯಪಾಲಿಸಿರುವರು. ಈ ಗ್ರಂಥವಾದರೂ ಬೇಗನೆ ಪ್ರಕಟಿಸಲ್ಪಡುವದು. ಇದೇ ಮೇರೆಗೆ ಹರಿಹರಾಚಾರ್ಯರು ರಚಿಸಿದ "ಶಿವಗಣರಗಳೆ" ಎಂಬ ರಗಳೆಯ ಕಾವ್ಯವು ಬಹು ವಿಸ್ತಾರವಾದದ್ದಿದ್ದು ಅತ್ಯಂತ ಮಹತ್ವದ್ದೂ ಇರುತ್ತದೆ. ಇದನ್ನು ಸಂಶೋಧಿಸುವ ಕಾರ್ಯವನ್ನು ನಾವು ಈಗ ಆರಂಭಿಸಿದ್ದು ಇದನ್ನಾದರೂ ನಾವು ಆದಷ್ಟು ಬೇಗನೇ ಅಚ್ಚು ಹಾಕುವೆವು. ವಚನ ಶಾಸ್ತ್ರಸಾರ ೧ ನೇ ಭಾಗದ ಪ್ರತಿಗಳು ಈಗ ತೀರಿ ಬಹಳದಿವಸಗಳಾದವು. ಅದರ ೨ ನೇ ಆವೃತ್ತಿಯನ್ನು ಅಚ್ಚು ಹಾಕುವ ಕಾರ್ಯವನ್ನು ನಾವು ಪ್ರಾರಂಭಿಸಿದ್ದೇವೆ. ಈ ಎರಡನೇ ಆವೃತ್ತಿಯಲ್ಲಿ ನಾವು ಅನೇಕ ಮಹತ್ವದ ಸುಧಾರಣೆಗಳನ್ನು ಮಾಡಿರುವೆವು. ಇದಲ್ಲದೆ ವಚನಶಾಸ್ತ್ರಸಾರದ ೨ ನೇ ಮತ್ತು ೩ ನೇ ಭಾಗಗಳನ್ನು ಸಹ ಸಿದ್ಧಗೊಳಿಸುವ ಕಾರ್ಯವನ್ನು ಈಗ ಕೈಕೊಂಡಿದ್ದೇವೆ. ಈ ಭಾಗಗಳಾದರೂ ೧ ನೇ ಭಾಗದಂತೆಯೇ ಬಹಳ ಮಹತ್ವದ ಗ್ರಂಥಗಳಿದ್ದು ಇವುಗಳಲ್ಲಿ ವೀರಶೈವ ಷಟ್‌ಸ್ಥಲ, ಏಕೋತ್ತರ, ಅಷ್ಟಾವರಣ ಮೊದಲಾದ ಸಿದ್ಧಾಂತ ವಿಷಯಗಳು ಆಯಾ ವಚನಕಾರರ ಉಕ್ತಿಗಳಿಂದಲೇ ವಿವರಿಸಲ್ಪಡುವವು. ಈ ಪ್ರಕಾರ ನಾವು ಈ ನಡೆಯುವ ವರ್ಷಕಾರ್ಯಗಳನ್ನು ಪೂರ್ತಿಗೊಳಿಸಬೇಕೆಂದು ಇಚ್ಛಿಸಿದ್ದೇವೆ. ಇವುಗಳನ್ನು ಸಂಪೂರ್ಣಗೊಳಿಸಲು ಪರಮಾತ್ಮನು ನಮ್ಮಗೆ ಸಹಾಯ ಮಾಡಲೆಂದು ನಾವು ಅವನನ್ನು ಬೇಡಿಕೊಳ್ಳುತ್ತೇವೆ.

ಶಿವಾನುಭವವು ಈ ವರೆಗೆ ಮಾಡುತ್ತ ಬಂದ ಮತ್ತೊಂದು ಮಹತ್ವದ ಕಾರ್ಯವೆಂದರೆ ವೀರಶೈವ ಸಮಾಜದಲ್ಲಿ ಆಗಿಹೋದ ಮಹಾಪುರುಷರ ಚರಿತ್ರೆಗಳನ್ನೂ ಅದರ ಧಾರ್ಮಿಕ ಇತಿಹಾಸವನ್ನೂ ಸಂಶೋಧಿಸುವದೂ ವೀರಶೈವರ ಮಹತ್ವದ ಸ್ಥಾನಗಳನ್ನು ಗೊತ್ತುಹಚ್ಚಿ ಅವುಗಳ ವೃತ್ತಾಂತಗಳನ್ನು ಕಂಡುಹಿಡಿಯುವದೂ ವೀರಶೈವ ಸಮಾಜಕ್ಕೆ ಸಂಬಂಧಪಟ್ಟ ಶಿಲ್ಲಾಶಾಸನಗಳನ್ನು ಪ್ರಸಿದ್ಧಿಸುವದೂ ಇವೇ ಮುಖ್ಯವಾಗಿವೆ.

ಈ ಬಗೆಯ ಕಾರ್ಯಗಳನ್ನು ಶಿವಾನುಭವವು ಎಷ್ಟು ಅತ್ಯುತ್ತಮ ರೀತಿಯಿಂದ ಮಾಡುತ್ತ ಬಂದಿದೆಂಬುದು ಶಿವಾನುಭವದ ವಾಚಕರಿಗೆ ಗೊತ್ತೇ ಇದೆ. ಈ ವರೆಗೆ ಅಪರಿಚಿತವಾದ ಅನೇಕ ಮಾಹಾತ್ಮಿಕ ಪುರುಷರ ಚರಿತ್ರೆಗಳನ್ನು ಪ್ರಕಾಶಕ್ಕೆ ತರಲು ಶಿವಾನುಭವವು ಕಾರಣವಾಗಿದೆ. ಶ್ರೀ ರೇವಣಸಿದ್ಧೇಶ್ವರರ ಅನೇಕ ಮಹತ್ವದ ಸ್ಥಾನಗಳ ವಿವರಣೆಗಳು ಶಿವಾನುಭವದಲ್ಲಿ ಪ್ರಕಟವಾಗಿವೆ. ಹಾಗೆಯೇ ಚೌಡದಾನಪುರದ ಶಿಲಾಶಾಸನಗಳ ಪೂರ್ಣ ವಿವರಣೆಗಳು ಈ ವರ್ಷ ಶಿವಾನುಭವದ ಸಂಚಿಕೆಗಳಲ್ಲಿ ಬಹು ವಿಸ್ತೃತ ವಾಗಿ ಬಂದಿವೆ. ಅವುಗಳಲ್ಲಿ ಅನೇಕ ಮಹತ್ವದ ಐತಿಹಾಸಿಕ ಸಂಗತಿ ಗಳು ಅಡಕವಾಗಿವೆ. ಅದೇಮೇರೆಗೆ ನಯನಸ್ವಾಮಿಗಳು, ಬಸವಪ್ರಭು ಸ್ವಾಮಿಗಳು, ಮರಿಸ್ವಾಮಿಗಳು, ಮಲೆಯ ಮಹದೇಶ್ವರ ಇವರ ಚರಿತ್ರೆ ಗಳು ಇದರಲ್ಲಿ ಕೊಡಲ್ಪಟ್ಟಿವೆ. ಕೆಳದಿಯ ಪ್ರಸಿದ್ಧ ರಾಜನಾದ ವೆಂಕ ಟಪ್ಪನಾಯಕನ ಸಂಪೂರ್ಣ ಚರಿತ್ರೆಯು ಇದರಲ್ಲಿ ಬಂದಿದೆ. ಇದಲ್ಲದೆ ಪಿ. ಆರ್. ಕರಿಬಸವಶಾಸ್ತ್ರಿಗಳು, ಎನ್. ಆರ್. ಕರಿಬಸವಶಾಸ್ತ್ರಿಗಳು, ಬಸ ವಪ್ಪಶಾಸ್ತ್ರಿಗಳು, ಚನಬಸಪ್ಪ ಧಾರವಾಡ ಇವರಂಥ ಕನ್ನಡ ವಾಙ್ಮಯ ಸೇವಾನಿರತರ ಚರಿತ್ರೆಗಳು ಇದರ ಸಂಚಿಕೆಗಳಲ್ಲಿ ಕೊಡಲ್ಪಟ್ಟಿವೆ. ಇವೆಲ್ಲ ಚರಿತ್ರೆಗಳು ಎಷ್ಟು ಮಹತ್ವದವಾಗಿರುತ್ತವೆಂಬುದು ಶಿವಾನುಭವದ ವಾಚ ಕರಿಗೆ ತಿಳಿಯದೆ ಇರಲಾರದು. ಈ ಪ್ರಕಾರ ಅತ್ಯಂತ ಶ್ರಮವಹಿಸಿ, ಸಂಶೋಧನ ಕಾರ್ಯ ಮಾಡಿದಂಥ ಶ್ರೀಯುತ ವೀರಭದ್ರಪ್ಪ ಹಾಲಭಾವಿ ಸಬಜಜ್ಜ, ಶಿ. ಮೂ. ಶಿವಮೂರ್ತಿಶಾಸ್ತ್ರಿಗಳು ಹುಲಕುಂಟೀಮಠ ಕೀರ್ತ ನಕೇಸರಿ, ಶಿ. ಮೂ. ನಾಗೇಶಶಾಸ್ತ್ರಿಗಳು ಬಳ್ಳಾರಿ, ಶ್ರೀ ಎಸ್. ಸಿ. ನಂದಿ ಮಠ, ರಾ॥ ರಾ॥ ಪಿ. ಸಿ. ಯುಗಟಿ, ರಾ॥ ರಾ॥ ಎಚ್. ಜಿ. ಶಿವಶಂಕರ ಶರ್ಮಾ, ರಾ॥ ರಾ॥ ವೀರಭದ್ರಪ್ಪ ಕೊಪ್ಪಳ ಇವರೇ ಮೊದಲಾದ ಮಹ ನೀಯರಿಗೆ ನಾವು ಬಹಳ ಆಭಾರಿಯಾಗಿದ್ದೇವೆ.

ಇದೇ ಮೇರೆಗೆ ವೀರಶೈವ ಧರ್ಮತತ್ವಗಳ ಬಗ್ಗೆ ಅನೇಕ ಮಹ ನೀಯರು ಸಂಶೋಧನಾತ್ಮಕ ಎಷ್ಟೋ ಲೇಖಗಳನ್ನು ಶಿವಾನುಭವದಲ್ಲಿ ಪ್ರಕಟಿಸಿದ್ದಾರೆ. ಈ ಪ್ರಕಾರ ಲೇಖಗಳಲ್ಲಿ ಬರೆದಿರುವವರಲ್ಲಿ ಮುಖ್ಯ ರೆಂದರೆ ಮಿ. ಸಿದ್ಧರಾಮಪ್ಪ ಪಾವಟೆ, ಮಿ. ವೀರಪ್ಪ ಬಿಳೇಅಂಗಡಿ, ಶಿ. ಮೂ ಚಿದಿರೆಮಠದ ವೀರಭದ್ರ ಶರ್ಮಾ, ರಾ॥ ರಾ॥ ಚನಮಲ್ಲಪ್ಪ ಹಲ ಸಂಗಿ, ಶಿ. ಮೂ. ಚಂದ್ರಶೇಖರಶಾಸ್ತ್ರಿಗಳು ಹೊಳಲು, ಶ್ರೀ ಶಂಭುಲಿಂಗ

ಶಿವಾಚಾರ್ಯರು, ರಾ. ರಾ. ಜೀರಗೆ ಬಸವಲಿಂಗಪ್ಪನವರು, ರಾ. ರಾ. ಗುರುನಂಜಪ್ಪ ಕಟ್ಟೀಮನೆ, ಶ್ರೀ ಮೂ ಎಚ್. ಜಿ. ಶಿದ್ಧಲಿಂಗಯ್ಯನವರು ಎಸ್. ಜಿ. ಕಾಡದೇವರಮಠ ಇವರೇ ಮುಖ್ಯರಾಗಿದ್ದಾರೆ. ಇವರೆಲ್ಲರಿಗೂ ನಾವು ನಮ್ಮ ವಂದನೆಗಳನ್ನು ಸಮರ್ಪಿಸುತ್ತೇವೆ.

ಈ ನಾಲ್ಕುವರ್ಷಗಳ ವರೆಗೆ ಶಿವಾನುಭವದ ಮೂಲಕ ಸುಮಾರು ಎರಡುವರೆ ಸಾವಿರ ಪುಟದ ವೀರಶೈವ ಸಂಸ್ಕೃತಿಯ ಮಹತ್ವದ ವಾಙ್ಮಯವು ಪ್ರಕಟವಾಗಿರುತ್ತದೆ. ಇನ್ನುಮೇಲೆ ಇದರಲ್ಲಿ ಅತ್ಯುತ್ತಮವಾದ ಐತಿಹಾಸಿಕ ಮತ್ತು ವಾಙ್ಮಯಾತ್ಮಕ ವಿಷಯಗಳನ್ನು ಬೇರೆಯಾಗಿ ತೆಗೆದು ಅವುಗಳದೊಂದು ಪುಸ್ತಕಮಾಲೆಯನ್ನು ಸಿದ್ಧಗೊಳಿಸುವ ಕಾರ್ಯವನ್ನು ನಾವು ಈಗ ಕೈಕೊಳ್ಳಲು ಯೋಚಿಸಿದ್ದೇವೆ. ಈ ಬಗೆಯಾಗಿ ನಾವು ಸ್ವಲ್ಪ ದಿನಸಗಳಲ್ಲಿಯೇ ಅನೇಕ ಮಹತ್ವದ ಗ್ರಂಥಗಳನ್ನು ಪ್ರಸಿದ್ಧಪಡಿಸುವೆವು.

ಈ ಪ್ರಕಾರ ವೀರಶೈವ ಧರ್ಮದ ಒಂದು ವಾಙ್ಮಯವು ಸಿದ್ಧವಾದ ಬಳಿಕ ಅದನ್ನು ಓದುಗರು ನೋಡಿ ಅಭ್ಯಾಸಿಸಿ ಸ್ವತಃ ವಿಚಾರ ಮಾಡಿ ತಮ್ಮ ಅಭಿಪ್ರಾಯಗಳನ್ನು ಪ್ರಕಟಪಡಿಸಲು ಅನುಕೂಲವಾಗುವದೆಂದು ನಾವು ಭಾವಿಸಿದ್ದೇವೆ. ಈ ವರೆಗೆ ಕೈ. ವಾ. ವೀರಸಂಗಪ್ಪನವರು ಕೈ. ವಾ ಅಪ್ಪಾಸಾಹೇಬ ವಾರದ ಇವರು ವೀರಶೈವ ಪುರಾತನ ಸಂಸ್ಕೃತ ವಾಙ್ಮಯವನ್ನು ಪರಿಶೋಧಿಸಿ ಅನೇಕ ಗ್ರಂಥಗಳನ್ನು ಪ್ರಚುರಪಡಿಸಿದರು. ಇದಕ್ಕೋಸ್ಕರ ವೀರಶೈವ ಸಮಾಜವು ಅವರಿಗೆ ನಿರಂತರ ಋಣಿಯಾಗಿದೆ. ಆವರ ಕನ್ನಡ ವಾಙ್ಮಯವು ಅಷ್ಟೇ ಮಹತ್ವದ್ದೆಂದು ನಮ್ಮ ತಿಳುವಳಿಕೆ ಇದೆ. ಇದನ್ನು ಪ್ರಕಾಶಿಸಿದಾಗಳೇ ವೀರಶೈವ ಧರ್ಮದ ಔನ್ನತ್ಯವು ದೇಶದಲ್ಲಿ ಹೊರಬೀಳಲು ಕಾರಣವಾಗುತ್ತದೆ. ಈ ಪ್ರಕಾರ ವೀರಶೈವ ಧರ್ಮದ ಮೂಲತತ್ವಗಳನ್ನು ಕಂಡು ಹಿಡಿದಿದ್ದಾದರೆ, ಅದರ ಸಹಾಯದಿಂದ ಈಗಿನ ವೀರಶೈವ ಧರ್ಮವು ಎಷ್ಟರ ಮಟ್ಟಿಗೆ ತನ್ನ ಮೊದಲಿನ ಉಜ್ವಲ ಸ್ವರೂಪವನ್ನು ಬಿಟ್ಟುಕೊಟ್ಟಿದೆಂಬವನ್ನು ತಿಳಿಯಲಿಕ್ಕೆ ಸಹಾಯವಾಗುತ್ತದೆ. ಈ ದೃಷ್ಟಿಯಿಂದ ಇನ್ನು ಮೇಲೆ ಲೇಖಗಳನ್ನು ಬರೆದು ಶಿವಾನುಭವದಲ್ಲಿ ಪ್ರಚುರಗೊಳಿಸಬೇಕೆಂದು ನಾವು ಇಚ್ಛಿಸಿದ್ದೇವೆ. ಆದ್ದರಿಂದ ಮುಂದಿನ ಪರ್ವದ ಶಿವಾನುಭವದ ಸಂಚಿಕೆಗಳು ಹೊಸ ಮಾದರಿಯವುಗಳಾಗಿ ವಾಚಕರಿಗೆ ತೋರಬಹುದು. ಈ ಪ್ರಕಾರ

ಬರೆಯುವದರಿಂದ ಈಗಿನ ಪ್ರಚಲಿತ ಪದ್ಧತಿಗಳನ್ನು ಆಕ್ಷೇಪಿಸುವ ಪ್ರಸಂಗಗಳು ನಮಗೆ ಬರಬಹುದು. ಆದರೆ ಧಾರ್ಮಿಕ ನಿಜಸ್ವರೂಪವನ್ನು ನಾವು ವಾಚಕರ ಇದಿರಿಗೆ ಇಡುವದು ನಮ್ಮ ಕರ್ತವ್ಯವಾದ್ದರಿಂದ ಜನರಿಗೆ ಅವು ಒಂದು ವೇಳೆ ಅಪ್ರಿಯವಾದಲ್ಲಿ ಅದರ ದೋಷವು ನಮ್ಮ ಮೇಲೆ ಬರಲಾರದೆಂದು ನಾವು ಭಾವಿಸಿದ್ದೇವೆ.

ಶಿವಾನುಭವವು ಯಾವ ಉದ್ದೇಶಗಳನ್ನು ಹಿಡಿದುಕೊಂಡು ಈ ವರೆಗೆ ಕಾರ್ಯ ಮಾಡುತ್ತ ಬಂದಿದೆಯೋ ಅದನ್ನು ನಾವು ಈ ವರೆಗೆ ವಿವರಿಸಿದೆವು. ಇವುಗಳ ಮೇಲಿಂದ ಈ ಪತ್ರಿಕೆಯ ಮಹತ್ವವನ್ನು ವೀರಶೈವ ಸಮಾಜದವರು ಕಂಡು ಅದಕ್ಕೆ ಸಹಾಯ ಮಾಡಬೇಕೆಂದು ಅವರಿಗೆ ನಮ್ಮ ನಮ್ರ ಪ್ರಾರ್ಥನೆ ಇದೆ. ಈ ಪತ್ರಿಕೆಯು ಕೇವಲ ಜನಸಮುದಾಯದ ಸಹಾನುಭೂತಿಯನ್ನು ಅವಲಂಬಿಸಿ ಈ ವರೆಗೆ ಕಾರ್ಯ ಮಾಡುತ್ತ ಬಂದಿದೆ. ಅದು ವೀರಶೈವ ಸಮಾಜದ ಯಾವದೇ ಒಂದು ವಿಶಿಷ್ಟ ವರ್ಗ ಅಥವಾ ಪಂಗಡದ ಪ್ರೀತಿಯನ್ನು ಸಂಪಾದಿಸುವ ಉದ್ದಿಶ್ಯವುಳ್ಳದಾಗಿರುವದಿಲ್ಲ. ಅದು ಸ್ವತಂತ್ರವಿರುತ್ತದೆ. ಯಾವದು ಸತ್ಯವೋ ಅದನ್ನೇ ಅದು ಸಂಶೋಧಿಸಿ ಪ್ರಕಟಿಸುವ ಧ್ಯೇಯವುಳ್ಳದಾಗಿದೆ. ಈಗಿನ ಸಮಾಜದ ವಾತಾವರಣದಲ್ಲಿ ಹೀಗೆ ಧ್ಯೇಯವನ್ನಿಟ್ಟು ಕಾರ್ಯ ಮಾಡುವದು ಬಹಳ ದುಸ್ತರವೆಂದು ನಮಗೆ ಮೇಲಿಂದ ಮೇಲೆ ತೋರುತ್ತ ಬಂದಿರುತ್ತದೆ. ಆದರೂ ನಾವು ನಿಶ್ಚಯಿಸಿದ ಧ್ಯೇಯದಿಂದ ನಾವು ಚ್ಯುತಿಯನ್ನು ಹೊಂದಿಲ್ಲೆಂದು ನಮ್ಮ ಸದಸದ್ವಿಚಾರವು ಹೇಳುತ್ತದೆ. ಮುಂದಾದರೂ ನಾವು ಇದೇ ಧ್ಯೇಯವನ್ನಿಟ್ಟುಕೊಂಡೇ ಈ ಪತ್ರಿಕೆಯನ್ನು ಸಾಗಿಸುವೆವು. ಆದ್ದರಿಂದ ನಮ್ಮ ವಾಚಕ ವರ್ಗವು ಹಿಂದಿನಂತೆಯೇ ಈ ಪತ್ರಿಕೆಯ ಬಗ್ಗೆ ಉದಾರ ಮನಸ್ಕರಾಗಿ ಸ್ವೀಕರಿಸಿ ಆದರಂತೆಯೇ ಇತರರೂ ಅದಕ್ಕೆ ಸಹಾಯವಾಗುವಂತೆ ಅವರಿಗೆ ಉತ್ತೇಜನ ಕೊಟ್ಟರೆ ನಾವು ಅತ್ಯಂತ ಋಣಿಯಾಗುವೆವು.

# ಭಕ್ತಸ್ಥಲವು.

(ಲೇಖಕ— ಚಂದ್ರಶೇಖರಶಾಸ್ತ್ರೀ ಹಿರೇಮಠ ಹೊಳಲು ವ್ಯಾಕರಣತೀರ್ಥ
ಪ್ರಿನ್ಸಿಪಾಲ ಶಂಕರಕಾಲೇಜು ಯಾದಗಿರಿ.)



ಲಿಂಗಾಂಗಿಯಾದ ಪ್ರತಿಯೊಬ್ಬ ಮನುಷ್ಯನು ಗುರು, ಲಿಂಗ, ಜಂಗಮ ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ, ಗಳೆಂಬ ಅಷ್ಟಾವರಣಗಳಲ್ಲಿ ನಿಷ್ಠನಾಗಿಯೂ ಲಿಂಗಾಚಾರ, ಸದಾಚಾರ, ಭೃತ್ಯಾಚಾರ ಶಿವಾಚಾರ, ಗಣಾಚಾರಗಳೆಂಬ ಪಂಚಾಚಾರಗಳಲ್ಲಿ ಪರಾಯಣನಾಗಿಯೂ, ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಸ್ಥಲಗಳೆಂಬ ಷಟ್ ಸ್ಥಲಗಳಲ್ಲಿ ಜ್ಞಾನಿಯಾಗಿಯೂ ಇರಬೇಕೆಂಬುವದೇ ವೀರಶೈವ ಮತದ ಹೆಗ್ಗುರುತು. ಆದ್ದರಿಂದಲೇ ವೀರಶೈವ ಮತದ ಅನೇಕ ಆಚಾರ್ಯಪುಂಗವರು ನಮ್ಮ ಮತದ ಧರ್ಮಗ್ರಂಥಗಳಲ್ಲಿ ಅಷ್ಟಾವರಣಗಳ ವಿಷಯವಾಗಿಯೂ, ಷಟ್‌ಸ್ಥಲಗಳ ವಿಷಯವಾಗಿಯೂ, ವಿಶದವಾಗಿ ವರ್ಣಿಸಿರುತ್ತಾರೆ. ಮತ್ತು ವೀರಶೈವ ವಚನಕಾರರಂತೂ, ಷಟ್‌ಸ್ಥಲಗಳಿಗೆ ಬಹಳ ಮಹತ್ವವನ್ನು ಕೊಟ್ಟು ಅನೇಕ ಗ್ರಂಥಗಳನ್ನು ಬರೆದಿರುತ್ತಾರೆ. ಷಟ್‌ಸ್ಥಲಗಳ ವರ್ಣನಾತ್ಮಕಗ್ರಂಥಗಳೆಂದರೆ ವೀರಶೈವರ ಧಾರ್ಮಿಕ ಸಾಹಿತ್ಯವೆಂದೆನ್ನಬಹುದಾಗಿದೆ. ಹಿಂದೂಧರ್ಮಾವಲಂಬಿಗಳಾದ ಅನೇಕ ಮತದ ಜನರ ಸದ್ಗತಿಗೆ ಒಂದೊಂದು ಮುಖ್ಯಾಚರಣೆಯು ಇರುತ್ತದೆ. ಒಬ್ಬರು ಯಜ್ಞಯಾಗಾದಿಗಳಿಂದ ಸದ್ಗತಿಯೆಂದು ತಿಳಿದರೆ, ಮತ್ತೇ ಕೆಲವರು ಊರ್ಧ್ವಪುಂಡ್ರ, ತಪ್ತಧಾರಣಾದಿಗಳಿಂದ ಉತ್ತಮಗತಿಯೆಂದು ತಿಳಿಯುವರು. ಇನ್ನೊಬ್ಬರು ಅಹಿಂಸಾ, ಸತ್ಯ, ಅಸ್ತೇಯ, ಮೊದಲಾದವುಗಳಿಂದಲೇ ಮೋಕ್ಷವೆಂತಲೂ, ಬೇರೆ ಬೇರೆ ಮಾರ್ಗಗಳನ್ನು ಮಾಡಿಕೊಂಡಿರುತ್ತಾರೆ. ಪ್ರತಿಯೊಂದು ಮತದವರಿಗೆ ಒಂದೊಂದು ಮುಖ್ಯಾಚರಣೆಯು ಇರುವಂತೆ, ವೀರಶೈವರಿಗಾದರೋ ಅಷ್ಟಾವರಣ, ಷಟ್‌ಸ್ಥಲಗಳೇ ಅತ್ಯಂತ ಪ್ರಾಮುಖ್ಯಗಳಾಗಿರುತ್ತವೆ. ಷಟ್‌ಸ್ಥಲಗಳಲ್ಲಿ ಮೊದಲನೆಯ ಪಾವಟಿಗೆಯಾದ ಭಕ್ತಸ್ಥಲದ ವಿಷಯವನ್ನು ವಿವೇಚನೆಮಾಡುವದೇ ಈ ಲೇಖದ ಮುಖ್ಯಾಭಿಪ್ರಾಯವ

ಗಿರುತ್ತದೆ. ಮುಂದೆ ಕ್ರಮವಾಗಿ ಎಲ್ಲ ಸ್ಥಲಗಳ ವಿಷಯಕ್ಕೆ ಶಿವಾನುಭವ ದಲ್ಲಿ ಬರೆದು ವಾಚಕರ ಎದುರಿಗೆ ಇಡಬೇಕೆಂಬುವ ಉದ್ದೇಶವದೆ. ಇರಲಿ. ನಮ್ಮಸಮಾಜದಲ್ಲಿ ಷಟ್‌ಸ್ಥಲಗಳ ಜ್ಞಾನವು ಬಹಳ ಜನರಿಗಿರುವದಿಲ್ಲವಷ್ಟೆ ಅಲ್ಲವು, ಹೆಸರುಗಳೂ ಕೂಡ ಎಷ್ಟೋ ಜನರಿಗೆ ಗೊತ್ತಿಲ್ಲವೆಂಬುದು ನಮ್ಮ ಸಮಾಜದ ಶೋಚನೀಯ ಸ್ಥಿತಿಯ ಗುರುತಾಗಿರುತ್ತದೆ. ಇತ್ತಿತ್ತಲಾಗಿ ಶಿವಾ ನುಭವದಂತಹ ಮಾಸಿಕ ಪತ್ರವು ಉದಯವಾಗಿ ಜನರ ಪ್ರವೃತ್ತಿಯನ್ನು ಅತ್ತ ಕಡೆಗೆ ಹೊರಳಿಸುತ್ತಿರುವದು ಅತ್ಯಂತ ಸಂತೋಷದಾಯಕವಾಗಿದೆ. ಭಕ್ತಸ್ಥಲದ ವಿಷಯವನ್ನು ತಿಳಿಯಬೇಕಾದರೆ ಸ್ಥಲವೆಂದರೇನು, ಅವುಗಳಲ್ಲಿ ಶತಕ್ಕ ಬೇದಗಳೆಷ್ಟು ಎಂಬುದನ್ನು ಮೊದಲು ತಿಳಿದುಕೊಳ್ಳತಕ್ಕದ್ದು ಅತ್ಯಾ ವಶ್ಯಕವಾಗಿರುವದರಿಂದ ಸ್ಥಲವೆಂದರೇನೆಂಬುದನ್ನು ವಿಚಾರಿಸೋಣ.

## ಸ್ಥಲವೆಂದರೇನು.

ಏಕಮೇವ ಪರಬ್ರಹ್ಮ। ಸಚ್ಚಿದಾನಂದಲಕ್ಷಣಂ॥ ಶಿವತತ್ವಂ ಶಿವಾ ಚಾರ್ಯಾಃ। ಸ್ಥಲಮಿತ್ಯಾಹುರಾದರಾತ್॥

ಸರ್ವೇಷಾಂ ಸ್ಥಾನಭೂತತ್ವಾ। ಲ್ಲಯಭೂತತ್ವ ತಸ್ತಥಃ। ತತ್ವಾನಾಂ ಮಹದಾದೀನಾಂ। ಸ್ಥಲಮಿತ್ಯಭಿಧೀಯತೇ॥

ಎಂದರೆ ಸಚ್ಚಿದಾನಂದ ಸ್ವರೂಪವಾಗಿಯೂ ಅದ್ವಿತೀಯವಾಗಿಯೂ ಇರುವ ಶಿವತತ್ವಕ್ಕೆ ಶಿವಾಚಾರ್ಯರು ಸ್ಥಲವೆಂದು ಹೇಳುತ್ತಾರೆ. ಮತ್ತು ಮಹದಾದಿ ತತ್ವಗಳಿಗೆ ಸ್ಥಾನ ಭೂತವಾಗಿ ಲಯಕ್ಕೆ ಕಾರಣವಾಗಿರು ವದರಿಂದ ಇದಕ್ಕೆ ಸ್ಥಲವೆಂದು ಹೇಳುತ್ತಾರೆ.

ಮತ್ತು ಗ್ರಂಥಾಂತರದಲ್ಲಿ —

೧. ಯತ್ರಾದೌಸ್ಥೀಯತೇ ವಿಶ್ವಂ। ಪ್ರಾಕೃತಂ ಪೌರುಷಂಯಥಾ ಲೀಯತೇ ಪುನರಂತೇಚ। ಸ್ಥಲಂ ತತ್ರೋಚ್ಯತೇತತಃ॥

೨. ಸ್ಥಕಾರಃ ಸ್ಥಾನವಾಚೀಸ್ಯಾಲ್ಲ ಕಾರೋಲಯವಾಚಕಃ। ತಯೋಃ ಕಾರಣ ಭೂತಂ ಯತ್ತದ್ದೇವಸ್ಥಲ ಮುಚ್ಯತೇ॥

ಅಂದರೆ—ಆದಿಯಲ್ಲಿ ಪ್ರಕೃತಿಯೂ ಪುರುಷನೂ, ಮತ್ತು ಇದ ರಿಂದ ಹುಟ್ಟಿದ ಜಗತ್ತೂ ಶಿವತತ್ವದಲ್ಲಿದ್ದು ಪುನಃ ಅಂತ್ಯದಲ್ಲಿ ಇದರ ಲ್ಲಿಯೇ ಲಯವನ್ನು ಹೊಂದಿರುವ ಕಾರಣ ಇದಕ್ಕೆ ಸ್ಥಲವೆಂದು ಹೆಸರು.

ಮತ್ತು ಸ್ಥಕಾರವೇ ಸ್ಥಾನವಾಚಕವು, ಲಕಾರವೇ ಲಯವಾಚಕವು, ಇವುಗಳಿಗೆ ಕಾರಣ ಭೂತವಾದಂಥಾದ್ದಕ್ಕೆ ಸ್ಥಲವೆಂದು ಹೆಸರು.

ಮತ್ತು—೧. ಅಧಿಷ್ಠಾನಂ ಸಮಸ್ತಸ್ಯ। ಸ್ಥಾವರಸ್ಯ ಚರಸ್ಯಚ। ಜಗತೋ ಯದ್ಭವೇ ತ್ತತ್ವಂ। ತದ್ಧಿ ವೈ ಸ್ಥಲಮುಚ್ಯತೆ।

೨. ಆಧಾರಂ ಸರ್ವಶಕ್ತೀನಾಂ। ಜೋತಿಷಾಮಪಿ ಲಾತ್ಮನಾಂ। ಯತ್ತತ್ವಂ ಭವತಿ ಪ್ರಾಜ್ಞೈಃ। ಸ್ಥಲಂತತ್ಪರಿಗೀಯತೇ॥

೩. ಆಲಯಃ ಸರ್ವಭೂತಾನಾಂ। ಲೋಕಾನಾಂ ಸರ್ವಸಂಪದಾಂ। ಯದ್ಭವೇತ್ಪರಮಂ ಬ್ರಹ್ಮ। ಸ್ಥಲಂ ತತ್ಪ್ರಾಹುರಕ್ಷರಂ॥

೪. ಪರನಿರ್ವಾಣನಿಷ್ಠಾನಾಂ। ಯದ್ಭವೇತ್ಪರಮಂಪದಂ। ತದಾಹುಃ ಸ್ಥಲಮೆದ್ವೈತಂ। ಶಿವಜ್ಞಾನೈಕತತ್ಪರಾಃ॥

ಅಂದರೆ—ಸ್ಥಾವರ ಜಂಗಮಾತ್ಮಕ ವಾದಂಥ ಸಕಲ ಜಗತ್ತಿಗೆ ಆಧಾರ ಭೂತವಾಗಿಯೂ, ಸರ್ವಶಕ್ತಿಗಳಿಗೂ, ಸರ್ವಜ್ಯೋತಿಗಳಿಗೂ, ಆಧಾರವಾದ ಶಿವತತ್ವಕ್ಕೆ ಸ್ಥಲವೆಂದು ಹೆಸರು ಮತ್ತು ಪರಬ್ರಹ್ಮಾತ್ಮವಾದ ಶಿವತತ್ವವು ಸರ್ವಪ್ರಾಣಿಗಳಿಗೂ ಸರ್ವಸಂಪತ್ತುಗಳಿಗೂ, ಸರ್ವಲೋಕಗಳಿಗೂ, ಆಧಾರವಾಗಿ ನಾಶವಾಗದೆ ಇರುತ್ತದೆ. ಆದಕಾರಣ ಸ್ಥಲವೆನ್ನುವರು. ಉತ್ತಮವಾದ ಮೋಕ್ಷದಲ್ಲಿ ಆಶೆಯನ್ನಿಡುವಂಥವರಿಗೆ ಯಾವದು ಶ್ರೇಷ್ಠವಾಗಿದೆಯೋ, ಅದಕ್ಕೇನೇ ಶಿವತತ್ವವನ್ನು ಬಲ್ಲಂಥವರು ಸ್ಥಲವೆಂದು ಹೇಳುವರು. ಹೀಗೆಯೇ ವೀರಶೈವ ಧರ್ಮಗ್ರಂಥಗಳಲ್ಲಿ ಸ್ಥಲಶಬ್ಧದ ಅರ್ಥವನ್ನು ಮಾಡಿರುತ್ತಾರೆ. ಅರ್ಥಾತ್ ಸ್ಥಲವೆಂಬುವದು ಕೇವಲ ಬ್ರಹ್ಮಸ್ವರೂಪವು. ಇದರ ಜ್ಞಾನವನ್ನು ವೀರಶೈವನಾದ ಪ್ರತಿಯೊಬ್ಬನು ಮಾಡಿಕೊಳ್ಳುವದು ಅತ್ಯಾವಶ್ಯವಿರುತ್ತದೆ. ಸ್ಥಲಗಳ ಅರ್ಥವನ್ನು ತಿಳಿದುಕೊಳ್ಳದೆ ಇದ್ದರೆ ನಾವು ವೀರಶೈವರೆಂದು ಹೇಳಿಸಿಕೊಳ್ಳಲಿಕ್ಕೆ ಹೇಗೆ ಯೋಗ್ಯರಾಗುತ್ತೇವೆ? ನಮ್ಮ ಧರ್ಮದ ತತ್ವಗಳು ಕೇವಲ ಧರ್ಮಗ್ರಂಥಗಳಲ್ಲಿ ಉಳಿಯದೆ, ಆಚರಣೆಯಲ್ಲಿ ಬಂದರೇನೆ ವೀರಶೈವ ಸಮಾಜದ ಮಹತ್ವವು ಉಳಿದ ಸಮಾಜದವರಿಗೆ ತಿಳಿಯುವದು.

## ಸ್ಥಲಭೇದಗಳು.

ಪರಬ್ರಹ್ಮಾತ್ಮಕವಾದಂಥ ಶಿವತತ್ವದ ಸ್ಥಲದಲ್ಲಿರತಕ್ಕ ಮಾಯಾ ಶಕ್ತಿಯ ಚಲನವಲನೆಯಾದಕಾರಣ ಸ್ಥಲಗಳು ಎರಡು ಪ್ರಕಾರಗಳಾ

ಗಿರುತ್ತವೆ. ಆಕಾಶವು ಹೇಗೆ ಆಯಾಯ ಉಪಾಧಿಯ ವಶದಿಂದ ಘಟಾಕಾಶ, ಮಹಾಕಾಶ ಎಂಬುವ ಭೇಧಗಳನ್ನು ಹೊಂದುವದೋ ಹಾಗೆಯೇ ಶಿವತತ್ವಾತ್ಮಕವಾದಂಥ ಸ್ಥಲವು ಲಿಂಗವೆಂತಲೂ, ಅಂಗವೆಂತಲೂ, ಎರಡು ಭೇದವಾಯಿತು. ಇವೆರಡರಲ್ಲಿ ಲಿಂಗಸ್ಥಲವೇ ಉಪಾಸ್ಯವು, ಅಂಗಸ್ಥಲವೇ ಉಪಾಸಕವು. ಅಂದರೆ ಲಿಂಗಸ್ಥಲವೇ ಈಶನು. ಅಂಗಸ್ಥಲವೇ ಜೀವನು. ಇವರಲ್ಲಿ ಲಿಂಗಸ್ಥಲವು ಇಷ್ಟ ಪ್ರಾಣ ಭಾವ ವೆಂಬುವ ಭೇದದಿಂದ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಚರಲಿಂಗ, ಪ್ರಸಾದಲಿಂಗ, ಮಹಾಲಿಂಗ ಎಂದು ಆರುಪ್ರಕಾರ ಇರುತ್ತವೆ. ಇನ್ನು ಅಂಗಸ್ಥಲವಾದರೋ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬುವ ಆರು ಸ್ಥಲಭೇದಗಳಾಗಿರುತ್ತವೆ. ಇವುಗಳಲ್ಲಿ ಮೊದಲು ಈ ಲೇಖದಲ್ಲಿ ಭಕ್ತಸ್ಥಲದ ವಿಷಯವನ್ನು ವಿವೇಚಿಸುವದೇ ಮುಖ್ಯ ಉದ್ದೇಶವಿರುತ್ತದೆ. ಆದರೆ ಸ್ಥಲಗಳ ವಿಷಯವನ್ನು ತಿಳಿಯುವದು ಮೊದಲು ಅತ್ಯಾವಶ್ಯಕವಿದ್ದಕಾರಣ ಅದರ ವಿಷಯಕವಾಗಿ ಸ್ವಲ್ಪ ಹೇಳಿದ್ದಾಗಿದೆ.

## ಭಕ್ತಸ್ಥಲದ ಲಕ್ಷಣವು.

ಪೂಜ್ಯರಲ್ಲಿ ಪ್ರೇಮವನ್ನಿಡುವದೇ ಭಕ್ತಿಯು. ಅಂತಹ ಭಕ್ತಿಯಿಂದ ಕೂಡಿದವನೇ ಭಕ್ತನು. ಯಾಕಂದರೆ ಭಕ್ತಿಯೇ ಸರ್ವಕ್ಕೂ ಮೂಲಕಾರಣವು. ಆದ್ದರಿಂದಲೇ ಬ್ರಹ್ಮಗೀತೆಯಲ್ಲಿ ಶಂಕರನು ಪಾರ್ವತಿಗೆ ಹೇಳುತ್ತಾನೆ.

ನ ಕರ್ಮಣಾ ನ ತಪಸಾ। ನ ಜಪ್ಯೈರ್ನಸಮಾಧಿಭಿಃ
ನ ಜ್ಞಾನೇನ ನ ದಾನೇನ ವಶ್ಯೋಽಹಂ ಶ್ರದ್ಧಯಾ ವಿನಾ॥

ಅಂದರೆ ಭಕ್ತಿಯು ಇಲ್ಲದ ಜಪವು ಕರ್ಮವು, ತಪಸ್ಸು ಸಮಾಧಿಯು, ಜ್ಞಾನವು, ದಾನವು ಇವುಗಳಿಂದ ನಾನು ಸಂತುಷ್ಟನಾಗಲಾರೆನು. ಅಲ್ಪ ಭಕ್ತಿಯು ಇದ್ದರಾಯಿತು. ನಾನು ಸಂತುಷ್ಟನಾಗುತ್ತೇನೆ.––

ಮತ್ತು— ವೇದಾಂತ ಸಾರವೀರಶೈವ ಚಿಂತಾಮಣಿಯಲ್ಲಿ
ಮಿಥ್ಯೈವ ಸತ್ಯಮಿವ ಭಾತಮಿದಂಶರೀರಂ।
ಪ್ರಾಣಾರ್ಥ ಜಾಲಮಿತಿ ತತ್ರ ನಿವೃತ್ತ ಚಿತ್ತಂ॥
ಭಕ್ತಿಕ್ರಿಯಾ ಚರಣಯೈವ ತತೋವಿಭಕ್ತಂ।
ಭಕ್ತಸ್ಥಲಂಭವವಿಕಾರವಿದೂರ ಮಾಹುಃ॥

ಅಂದರೆ ಶರೀರವು, ಪ್ರಾಣವು, ದ್ರವ್ಯವೇ ಮೊದಲಾದವುಗಳು ಮಿಥ್ಯಾಸ್ವರೂಪವಿರುವ ಕಾರಣ ಅವುಗಳಿಂದ ಮನಸ್ಸನ್ನು ಹಿಂದಿರುಗಿಸಿ ಪರಮೇಶ್ವರನಲ್ಲಿ ಭಕ್ತಿರೂಪ ಕ್ರಿಯಾಚರಣೆಯಿಂದ ಆಚರಿಸತಕ್ಕದ್ದು. ಈ ಸ್ಥಲವು ಸಂಸಾರದಲ್ಲಿರತಕ್ಕ ವಿಕಾರಗಳನ್ನು ದೂರಮಾಡತಕ್ಕಂಥಾದ್ದಾಗಿರುತ್ತದೆ. ಆದ್ದರಿಂದಲೇ ಇದಕ್ಕೆ ಭಕ್ತಸ್ಥಲವೆಂದು ಹೆಸರು.

## ಸಿದ್ಧಾಂತ ಶಿಖಾಮಣಿಯಲ್ಲಿ.

ಶೈವೀಭಕ್ತಿಃ ಸಮುತ್ಪನ್ನಾ । ಯಸ್ಯಾಸೌಭಕ್ತ ಉಚ್ಯತೇ ॥
ತಸ್ಯಾನುಷ್ಠೇಯಧರ್ಮಾಣಾಂ । ಮುಕ್ತಿರ್ಭಕ್ತಸ್ಥಲಂಮತಂ॥

ಯಾವಾತನಿಗೆ ಶಿವನಲ್ಲಿ ಭಕ್ತಿಯು ಉತ್ಪನ್ನವಾಗುತ್ತದೆಯೋ ಅವನೇ ಭಕ್ತನು. ಅವನು ತನ್ನ ಕರ್ತವ್ಯ ಕರ್ಮದಿಂದ ಯಾವ ಕೆಲಸವನ್ನು ಮಾಡುತ್ತಾನೆಯೋ ಅದಕ್ಕೆ ಭಕ್ತಸ್ಥಲವೆಂದು ಹೆಸರು.

ಆದ್ದರಿಂದಲೇ—

ಸದಾಚಾರ: ಶಿವೇಭಕ್ತಿರ್ಲಿಂಗೇ
ಜಂಗಮಏಕಧೀಃ। ಲಾಂಛನೇ
ಶರಣೇಭಕ್ತಿರ್ಭಕ್ತಸ್ಥಲ ಮುದಾಹೃತಂ||

ಸದಾಚಾರದಿಂದಿದ್ದು ಶಿವನಲ್ಲಿ ಭಕ್ತಿಯನ್ನಿಟ್ಟು ಲಿಂಗ, ಜಂಗಮರಲ್ಲಿ ಒಂದೇ ತರಹದ ಬುದ್ಧಿಯುಳ್ಳವನಾಗಿ, ಲಾಂಛನಧಾರಿಯಾದ ಶರಣನಲ್ಲಿ ಭಕ್ತಿಯನ್ನಿಡುವದೇ ಭಕ್ತಸ್ಥಲದ ಲಕ್ಷಣವು. ಹೀಗೆಯೇ ಭಕ್ತಸ್ಥಲದ ಲಕ್ಷಣದವಿಷಯಕ್ಕೆ ಇನ್ನೂ ಬೇಕಾದಷ್ಟು ಪ್ರಮಾಣಗಳಿರುತ್ತವೆ.

## ಭಕ್ತನು ಜಂಗಮಪೂಜೆಯನ್ನು ಮಾಡಬೇಕು.

ಭಕ್ತಸ್ಥಲದ ಭಕ್ತನು ಪ್ರತಿದಿನದಲ್ಲಿಯೂ, ಸದಾಚಾರಿಯಾಗಿಯೂ, ಸದ್ಗುಣಗಳುಳ್ಳವನಾಗಿಯೂ, ಇರತಕ್ಕ ಜಂಗಮನನ್ನು ಪೂಜಿಸಬೇಕು. ಸೂಕ್ಷ್ಮಾಗಮದಲ್ಲಿ

ಮತ್ಪೂಜಾಕೋಟಿಗುಣಿತಂ। ಮದ್ಭಕ್ತಾನಾಂಚವಂದನಮ್ ॥
ಮನ್ಮುಖಂಜಂಗಮಂದೇವಿ। ಭೋಗಭಾಗ್ಯಸಮಂಮಮ ॥
ವಿಶ್ವಪ್ರಾಣಮಯಂಲಿಂಗಂ। ಲಿಂಗಪ್ರಾಣೋಗುರುರ್ಭವೇತ್ ॥
ಗುರುಪ್ರಾಣಶ್ಚರೋಲಿಂಗಂ। ತಸ್ಮಾಜ್ಜಂಗಮಮರ್ಚಯೇತ್ ॥

ಮಾತಾಗುರುಃ ಪಿತಾಲಿಂಗಂ। ಸ್ವದೇವೋಜಂಗಮಃ ಪ್ರಭುಃ॥
ತಸ್ಮಾತ್ಸರ್ವಪ್ರಯತ್ನೇನ। ತಥೈವಾರಾಧನಂಕುರು॥

ಅಂದರೆ— ಶಂಕರನು ಪಾರ್ವತಿಯಮುಂದೆ ಹೇಳುವದೇನಂದರೆ ಎತಾ ಪಾರ್ವತಿಯೇ, ನನ್ನಪೂಜೆಯಗಿಂತಲೂ, ನನ್ನಭಕ್ತರಿಗೆ ವಂದನೆಯನ್ನು ಮಾಡುವದು ಕೋಟಿಪಾಲು ಹೆಚ್ಚಿನದು. ಜಂಗಮರೆಂದರೆ ನನ್ನಮುಖವು. ಆಜಂಗಮವು ನನ್ನಭೋಗಭಾಗ್ಯವು, ಲಿಂಗವು ವಿಶ್ವಕ್ಕೆ ಪ್ರಾಣಸ್ವರೂಪವು, ಲಿಂಗಕ್ಕೆ ಗುರುವು ಪ್ರಾಣಸ್ವರೂಪವು, ಗುರುವಿಗಾದರೊ ಜಂಗಮನೇ ಪ್ರಾಣಸ್ವರೂಪನು. ಆದ್ದರಿಂದ ಜಂಗಮನನ್ನೇ ಪೂಜಿಸಬೇಕು. ಮತ್ತು ಗುರುವೇ ತಾಯಿಯು. ಲಿಂಗವೇ ತಂದೆಯು. ಜಂಗಮನೇ ಸ್ವಕೀಯ ನಾದ ದೇವನು. ಆದ್ದರಿಂದ ಎಲ್ಲ ಪ್ರಯತ್ನಗಳಿಂದ ಜಂಗಮನನ್ನೆ ಪೂಜಿಸಬೇಕು.

ಶೈವರತ್ನಾಕರದಲ್ಲಿ.—

ಕನಿಷ್ಠಾ ಮತ್ಪ್ರಿಯಾಪೂಜಾ। ಮಧ್ಯಮಂ ಗುರುಪೂಜನಂ॥
ಉತ್ತಮಂ ಜಂಗಮಸ್ಯಾರ್ಚಾ। ತದಾರಾಧಯಜಂಗಮಂ॥

ಅಂದರೆ— ನನ್ನ ಪೂಜೆಯು ಕನಿಷ್ಠವು. ಗುರುವಿನ ಪೂಜೆಯು ಮಧ್ಯಮವು. ಜಂಗಮ ಪೂಜೆಯೇ ಉತ್ತಮವಾದ ಕಾರಣ ಜಂಗಮ ನನ್ನು ಪೂಜಿಸು.

## ಭಕ್ತನು ಸದಾಚಾರಿಯಾಗಿರತಕ್ಕದ್ದು.

ಆಚಾರವಿಲ್ಲದ ಗುರು ಭೂತಪ್ರಾಣಿ।ಆಚಾರವಿಲ್ಲದ ಲಿಂಗ ಶಿಲೆ।
ಆಚಾರವಿಲ್ಲದ ಜಂಗಮ ಮಾನವ।ಆಚಾರವಿಲ್ಲದ ಪಾದೋದಕ ನೀರು।
ಆಚಾರವಿಲ್ಲದ ಪ್ರಸಾದ ಎಂಜಲು। ಆಚಾರವಿಲ್ಲದ ಭಕ್ತ ದುಷ್ಕರ್ಮಿ।
ಇದು ಕಾರಣ ಅಟ್ಟವನೇರುವದಕ್ಕೆ। ನಿಚ್ಚಣಿಕೆಯೇ ಸೋಪಾನವಯ್ಯ।
ಹರಪದವನೇರುವದಕ್ಕೆ ಶ್ರೀ ಗುರುವು ಹೇಳಿದ ಸದಾಚಾರವೇ ಸೋಪಾನವಯ್ಯ।
ಗುರು ಉಪದೇಶವ ಮೀರಿ ಮನಕ್ಕೆ ಬಂದಂತೆ ವರ್ತಿಸುವ

ಪಾಪಿಗಳ| ಎನಗೊಮ್ಮೆ ತೋರದಿರಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರಪ್ರಭುವೇ||

ಅಂದರೆ.— ಅಟ್ಟವನ್ನು ಏರುವದಕ್ಕೆ ಹೇಗೆ ನಿಚ್ಚಣಿಕೆಯ ಅವಶ್ಯಕತೆಯುಂಟೋ ಹಾಗೆಯೇ ಶಿವಸ್ಥಾನವನ್ನು ಹೊಂದಲಿಕ್ಕೆ ಗುರುವು ಹೇಳಿದ ಸದಾಚಾರವೇ ಸೋಪಾನವಾಗಿರುವದರಿಂದ ಭಕ್ತನಾದವನು ಸದಾಚಾರಿಯಾಗಿರತಕ್ಕದ್ದು. ಅನಾಚಾರಿಯಾದರೆ ಅವನು ದುಷ್ಕರ್ಮಿ ಎಂದೆನ್ನಿಸಿಕೊಳ್ಳುವನು. ವಾಚಕರೇ ವೀರಶೈವ ಸಮಾಜದಲ್ಲಿ ಸದಾಚಾರಕ್ಕೆ ಬಹಳೇ ಮಹತ್ವವನ್ನು ಕೊಟ್ಟಿರುತ್ತಾರೆ. ಆದ್ದರಿಂದಲೇ ಎಷ್ಟೋ ಜನ ಭಕ್ತಶ್ರೇಷ್ಠರು ತಮ್ಮ ನಿತ್ಯಾಚರಣೆಯ ಬಲದಿಂದ ಮಹಾತ್ಮರಾಗಿ ಹೋಗಿರುತ್ತಾರೆ. ಈ ವಿಷಯದಲ್ಲಿ ಒಬ್ಬಿಬ್ಬರ ಉದಾಹರಣೆಯನ್ನು ತೆಗೆದುಕೊಳ್ಳೋಣ. ಬಳ್ಳಾರಿ ಜಿಲ್ಹೆಯೊಳಗೆ ಹೂವಿನಹಡಗಲಿ ತಾಲೂಕ ಹೊಳಲು ಗ್ರಾಮದೊಳಗೆ ಜ್ಯೋತಿಲಿಂಗಪ್ಪನವರೆಂಬುವ ಶರಣರು ನಿತ್ಯಾಚರಣೆಯಲ್ಲಿ ಎಲ್ಲರಿಗಿಂತಲೂ ಹೆಚ್ಚಿನವರಾಗಿ ಹತ್ತು ವರ್ಷಗಳ ಕೆಳಗೆ ಲಿಂಗೈಕ್ಯರಾಗಿರುತ್ತಾರೆ. ಇವರಷ್ಟು ಕಟ್ಟಿನ ನಿತ್ಯಾಚರಣೆಯು ವೀರಶೈವ ಸಮಾಜದಲ್ಲಿ ಬೇರೆ ಯಾರೂ ಇರಲಿಲ್ಲವೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಯಾಕಂದರೆ ಇವರು ಬೆಲ್ಲವನ್ನು ಮಾಡಿಸಬೇಕಾದರೆ ವೀರಶೈವರಿಂದಲೇ ಮಾಡಿಸುತ್ತಿದ್ದರು. ಭತ್ತವನ್ನು ಬೆಳೆಯಿಸಬೇಕಾದರೆ ತೊಗಲಿನ ಕಪ್ಪಲಿಯಿಂದ ನೀರನ್ನು ಹಾಯಿಸುತ್ತಿರಲಿಲ್ಲ. ವೀರಶೈವರಿಂದ ನೇಯಿದ ಬಟ್ಟೆಯನ್ನು ತೊಡುತ್ತಿದ್ದರು. ತಾವು ಉಪಯೋಗಿಸುತ್ತಿದ್ದ ಬಾವಿಯಲ್ಲಿಯ ನೀರನ್ನು ತಮ್ಮ ಕುಟುಂಬದ ಜನರನ್ನು ಮುಟ್ಟಿಸುತ್ತಿರಲಿಲ್ಲ. ವೀರಶೈವರಿಗೆ ಸ್ವಂತ ಖರ್ಚಿನಿಂದ ದಾಸೋಹವನ್ನಿಟ್ಟಿದ್ದರು. ಇವರ ನಿತ್ಯಾಚರಣೆಯನ್ನು ನೋಡಲಿಕ್ಕೆ ವೀರಶೈವ ಸಮಾಜದ ಎಲ್ಲ ಸ್ವಾಮಿಗಳವರೂ ಬರುತ್ತಿದ್ದರು. ಶ್ರೀ ಲಿಂಗಪ್ಪನವರು ದೊಡ್ಡ ಜಮೀನದಾರರೂ, ಜಂಗಮ ಭಕ್ತರೂ ಆಗಿದ್ದರು. ಇವರು ತಮ್ಮ ಮೂವತ್ತಾರನೆಯ ವರ್ಷದಲ್ಲಿ ಹಿಡಿದ ನಿತ್ಯಾಚರಣೆಯನ್ನು ೧೦೨ ವರ್ಷಗಳ ವರೆಗೆ ಚ್ಯುತಿಯಿಲ್ಲದೆ ನಡೆಯಿಸಿ ತಾವು ಲಿಂಗೈಕ್ಯರಾಗುವವನ್ನು ಎಂಟು ದಿವಸ ಮೊದಲೇ ಹೇಳಿ ಲಿಂಗೈಕ್ಯರಾದರು. ಇವರ ಮನೆತನದಲ್ಲಿ ಲಿಂಗೈಕ್ಯರಾದರೆ ಅಳುತ್ತಿರಲಿಲ್ಲ. ಸಂತೋಷದಿಂದಲೇ ಅಂತ್ಯಕ್ರಿಯೆಗಳನ್ನು ಮಾಡುತ್ತಿದ್ದರು. ಹೀಗೆಯೇ ಇವರ ನಿತ್ಯಾಚರಣೆಯು ಅತಿಶಯವಾಗಿತ್ತು. ಇವರ ಜೋಡಿಯವರಾದ

ವೈಲಾರದ ಬಸಪ್ಪನವರು ಹಾಗೇಯೇ ಇದ್ದರು. ಹೇಳಲಿಕ್ಕೆ ಕಾರಣವೇನಂದರೆ ನಿತ್ಯಾಚರಣೆಯಿಂದಲೇ ಇವರು ವೀರಶೈವ ಸಮಾಜದಲ್ಲಿ ಶರಣರೆಂದೆನಿಸಿಕೊಂಡು ಹೋದರು. ಅಂತೂ ವೀರಶೈವ ಸಮಾಜವು ನಿತ್ಯಾಚರಣೆಯು ಶರಣರ ಆಗರವಾಗಿತ್ತೆಂದು ಹೇಳಲಿಕ್ಕೆ ಅಡ್ಡಿಯು ಇರುವದಿಲ್ಲ ಒಟ್ಟಿನ ಮೇಲೆ ಸದಾಚರಣೆಯಿಂದಿದ್ದ ಭಕ್ತನೆ ಶ್ರೇಷ್ಠನಾಗುವನು. ಸದಾಚಾರವೇ ಮನುಷ್ಯನನ್ನು ಸನ್ಮಾರ್ಗಕ್ಕೆ ಹಚ್ಚುವದು, ಸದಾಚಾರವೇ ಮನುಷ್ಯನನ್ನು ಸದ್ಗತಿಗೆ ಹೊಂದಿಸುವದು. ಸದಾಚಾರವೇ ಪರಮಧರ್ಮವಾಗಿರುವದು, ಸದಾಚಾರವೇ ಪರಮ ತಪಸ್ಸಾಗಿರುವದು, ಸದಾಚಾರವೇ ಪರಮ ಜ್ಞಾನವಾಗಿರುವದು, ಸದಾಚಾರವನ್ನು ಬಿಟ್ಟರೆ ಮನುಷ್ಯನು ಲೋಕದಲ್ಲಿ ದುರಾಚಾರಿಯಾಗಿ ನಿಂದಿತನಾಗುವನು. ಆದ್ದರಿಂದಲೇ ಎಷ್ಟೋ ಜನ ವೀರಶೈವ ಶರಣರು ಆಚಾರವೇ ಸ್ವರ್ಗ, ಅನಾಚಾರವೇ ನರಕವೆಂದು ಉಚ್ಚರಿಸಿ ಈ ನುಡಿಯಂತೆ ನಡೆದು ಕಡೆಗೆ ಬಯಲಾಗಿ ಹೋಗಿರುವರು. ಅದ ಕಾರಣ — "ಸದಾಚಾರ ಸದ್ಭಕ್ತಿ ಇಲ್ಲದವರ ನಾನೊಲ್ಲೆನಯ್ಯ. ಅವರಾರಾಧನೆ ದಂಡ ನಿಚ್ಚ ನಿಚ್ಚ" ಎಂದು ಹೇಳಿರುವರು. ಸದಾಚಾರವೆಂದೊಡೆ ಗುರುಲಿಂಗಜಂಗಮದರ್ಶನೆ ಪಾದೋದಕ ಪ್ರಸಾದ ಸೇವನೆ ಪಂಚಾಕ್ಷರ ಷಡಕ್ಷರ ಸ್ತೋತ್ರ ಚಿಂತನ ಮಹಾಲಿಂಗಧ್ಯಾನ ಪರದ್ರವ್ಯ ನಿರಸನ ಇತ್ಯಾದಿಗಳೇ ಎಂಬುದನ್ನು ಸದ್ಗುರು ಮುಖದಿಂದ ತಿಳಿದು ಆಚರಿಸುವದೇ ಸದಾಚಾರವು. ಇದರಂತೆ ನಡೆಯುವವನೇ ಸದ್ಭಕ್ತನು.

## ಭಕ್ತನ ವರ್ತನವು.

ಭಕ್ತನಾದವನು ಎಡೆಬಿಡದೆ ಲಿಂಗವನ್ನು ಧರಿಸಿದವನಾಗಿ ಯಾವಾಗಲೂ ಈಶ್ವರನಲ್ಲಿ ನಿಷ್ಠೆಯುಳ್ಳವನಾಗಿರಬೇಕು. ಭಕ್ತಿಯು ಇಲ್ಲದಿದ್ದರೆ ಭಕ್ತಸ್ಥಲದವನಾಗಲಾರನು. ನಿಷ್ಠೆಯುಳ್ಳ ಭಕ್ತ ನಟ್ಟಡವಿಯಲ್ಲಿರ್ದಡೇನು ಅದು ಪಟ್ಟಣವೆಂದೆನಿಸುವದು ನಿಷ್ಠೆ ಇಲ್ಲದಭಕ್ತ ಪಟ್ಟಣದಲ್ಲಿದ್ದರೂ ಅದು ನಟ್ಟಡವಿ ಕಾಣಾ ರಾಮನಾಥಾ॥ ನಿಷ್ಠೆಯುಳ್ಳಂಥ ಭಕ್ತರು ಎಲ್ಲಿ ವಾಸಮಾಡಿದರೂ ಅದೇ ಶ್ರೇಷ್ಠಸ್ಥಾನವಾಗುತ್ತದೆ. ಭಕ್ತಿಯ ಪ್ರಭಾವದಿಂದ ಭಕ್ತನಾದವನು ಅತ್ಯಗಾಧಗಳಾದ ಕಾರ್ಯಗಳನ್ನು ಮಾಡಲಿಕ್ಕೆ ಸಮರ್ಥನಾಗುವನು. ಮತ್ತು ಭಕ್ತನಾದವನು ಯಾವಾಗಲೂ ಸತ್ಯವನ್ನೇ ನುಡಿಯತಕ್ಕದ್ದು. "ಸತ್ಯವನ್ನು ನುಡಿಯುವದೇ ದೇವಲೋಕವು. ಮಿಥ್ಯೆಯನ್ನು

ನುಡಿಯುವದೇ ಮರ್ತ್ಯಲೋಕವು" ಭಕ್ತನು ಅಹಿಂಸೆಯನ್ನು ಯಾವಾಗಲೂ ಪಾಲಿಸಬೇಕು. ದಯಯೇ ಧರ್ಮಕ್ಕೆ ಮೂಲಕಾರಣವಾಗಿರುತ್ತದೆ. ದಯವಿಲ್ಲದ ಧರ್ಮವೇ ಇರುವದಿಲ್ಲವೆಂದಮೇಲೆ ಹಿಂಸೆಯನ್ನು ಮಾಡುವನು ಹೇಗೆ ಭಕ್ತಸ್ಥಲಕ್ಕೆ ಯೋಗ್ಯವಾಗುವನು? ಮತ್ತು ಸರ್ವರನ್ನು ಸಮಾನವಾದ ಬುದ್ಧಿಯಿಂದ ಕಾಣುತ್ತಿರಬೇಕು. ಯಾವಾಗಲೂ ಸಮಾಧಾನವುಳ್ಳವನಾಗಿರತಕ್ಕದ್ದು. ಸ್ಥೈರಣೆಯಿಂದ ಇರುವದೇ ಭಕ್ತಸ್ಥಲದ ಹೆಗ್ಗುರುತು. ನಿರಂತರದಲ್ಲಿಯೂ ದುರಾಶೆಯನ್ನು ಬಿಟ್ಟಿರತಕ್ಕದ್ದು. ಆದ್ದರಿಂದಲೇ "ಆಶೆಯೆಂಬುವದು ಅರಸಿಂಗಲ್ಲದೆ ಶಿವಭಕ್ತರಿಗುಂಟೇ" ಶಿವಭಕ್ತರಿಗೆ ಶಿವನ ಮೇಲೆ ಮಾತ್ರ ಹೆಚ್ಚಿಗೆ ಆಶೆಯು ಇರತಕ್ಕದ್ದು.

ಶಿವಭಕ್ತನು ಬ್ರಹ್ಮಚಾರಿಯಾಗಿ ಅಂದರೆ ಏಕಪತ್ನೀವ್ರತಸ್ಥನಾಗಿರಬೇಕು.

ಶಿವಪೂಜೆ ಎತ್ತ. ವಿಷಯದ ಸವಿ ಎತ್ತ
ಆ ವಿಷಯದ ಸವಿ ತಲೆಗೇರಿ ಶಿವಪೂಜೆ
ಯ ಬಿಟ್ಟು ವೇಶಿಯರ ಎಂಜಲ ಹೇಸದೆ
ತಿಂಬ ದೋಷಿಗಳನೇನೆಂಬೆನೈ ರಾಮನಾಥಾ.

ಅಂದರೆ ವಿಷಯದಕಡೆಗೆ ತಲೆದೂಗದೆ ಶಿವಪೂಜಾಕರ್ಮದಲ್ಲಿ ನಿರತನಾಗಿರುವದೇ ಶಿವಭಕ್ತಿಗೆ ಯೋಗ್ಯವಾದದ್ದು. ಭಕ್ತನಾದವನು ತನ್ನಯೋಗ್ಯತೆಗೆ ಸರಿಯಾಗಿ ದಾನವನ್ನು ಮಾಡಲೇಬೇಕು.

ಕಾಗೆ ಒಂದಗುಳುಕಂಡರೆ ಕರೆಯದೇ ತನ್ನಬಳಗವನೆಲ್ಲವನು?
ಕೋಳಿ ಒಂದು ಗುಟುಕು ಕಂಡರೆ ಕರೆಯದೇ ತನ್ನಕುಲವನೆಲ್ಲವನು?
ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ ಕಾಗಿ ಕೋಳಿಗಳಿಗಿಂತಕರಕಷ್ಟ ಕೂಡಲಸಂಗಮ ದೇವಾ ॥

ಅಂದರೆ— ಕಾಗೆಗೆ ಒಂದಗುಳು ಅನ್ನವು ಸಿಕ್ಕರೆ ತನ್ನ ಬಳಗವನ್ನೆಲ್ಲ ಕರೆದು ತಿನ್ನುತ್ತದೆ. ಹಾಗೆಯೇ ಕೋಳಿಗೆ ಸ್ವಲ್ಪ ಕಾಳು ಸಿಕ್ಕರಾಯಿತು. ತನ್ನ ಕುಲವನ್ನೆಲ್ಲ ಕೂಡಹಾಕಿಕೊಂಡು ತಿನ್ನುತ್ತದೆ ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲವೆ ಇದ್ದು ತನ್ನ ಯೋಗ್ಯತೆಗೆ ಸರಿಯಾಗಿ ದಾನವನ್ನು ಮಾಡದೇ ಇದ್ದರೆ ಮೇಲೆ ಹೇಳಿದ ಕಾಗೆಯು ಮತ್ತು ಕೋಳಿಯು ಇವುಗಳಿಗಿಂತಲೂ ಕನಿಷ್ಠನೆಂದು ತಿಳಿಯತಕ್ಕದ್ದು. ಅಜ್ಞಾನಿಗಳಾದ ಆ ಕ್ಷುದ್ರ ಪ್ರಾಣಿಗಳಲ್ಲಿಯೂ ದಾನವನ್ನು ಮಾಡಬೇಕೆಂಬುವ ಬುದ್ಧಿಯು ಇದ್ದ ಮೇಲೆ ಜ್ಞಾನಿಗಳಾಗಿ ಶಿವ

ಭಕ್ತರೆಂದು ಹೇಳಿಕೊಳ್ಳುವವರು ದಾನವನ್ನು ಮಾಡದೇ ಇದ್ದರೆ ಅವರು ಹೇಗೆ ಭಕ್ತಸ್ಥಲದವರಾಗುವರು? ಮತ್ತು ಭಕ್ತನಾದವನು ಲೋಭಿಯಾಗಿ ಐಶ್ವರ್ಯದ ಆನಂದದಲ್ಲಿ ಮುಳುಗಿರಬಾರದು.

ಸಿರಿ ಬಂದೊದಗಿತ್ತೆಂದು ಹಿರಿದಾಗಿ ಹಿಗ್ಗಬೇಡ।
ಸಿರಿ ಎಂಬುದು ಕನಸಿನ ಪರಿಯಂತೆ ನೋಡಾ।
ಎಲೆ ಮರುಳ ಮಾನವ ಇದನರಿತು ಶ್ರೀ ಮಹಾದೇವನ
ಪೂಜಿಸಿದೊಡೆ ಸ್ಥಿರವಾದ ಪದವಿಯನೀವ ನಮ್ಮ ಅಖಂಡೇಶ್ವರಾ॥

ಭಕ್ತಸ್ಥಲದವನು ನಿಷ್ಕಪಟಿಯಾಗಿಯೂ, ಅಹಂಕಾರ ಇಲ್ಲದವನಾಗಿಯೂ ಇರತಕ್ಕದ್ದು. ಅಹಂಕಾರವಿದ್ದರೆ ಇವನ ಭಕ್ತಿಯೇ ವ್ಯರ್ಥವಾಗಿ ಹೋಗುವದು. ರಾವಣನು ಈಶ್ವರನಲ್ಲಿ ಅತ್ಯಂತ ಭಕ್ತಿಯುಳ್ಳವನಾಗಿ ತನ್ನ ಒಂಬತ್ತೂ ಶಿರಸ್ಸನ್ನು ಕಡಿದು ಈಶ್ವರನಿಗೆ ಅರ್ಪಿಸಿದನು. ಆದರೂ ಅವನು ತನ್ನ ಅಹಂಕಾರವನ್ನು ಬಿಡದೆ ಇದ್ದ ಕಾರಣ ಅವನ ಸರ್ವಸ್ವ ನಾಶಕ್ಕೆ ಅವನ ಅಹಂಕಾರವೇ ಕಾರಣವಾಯಿತಲ್ಲವೇ? ಉಪಮಾಶೂನ್ಯವಾದ ಅವನ ಭಕ್ತಿಯು ವ್ಯರ್ಥವಾಯಿತು. ದಾನದಲ್ಲಿ ಶೂರನಾದ ಬಲಿಚಕ್ರವರ್ತಿಯು ಅಹಂಕಾರದಿಂದ ಕೆಟ್ಟನಲ್ಲದೆ ಅಹಂಕಾರವಿರದಿದ್ದರೆ ಕೌರವನ ರಾಜ್ಯವೇ ಹಾಳಾಗುತ್ತಿರಲಿಲ್ಲವು. ಆದ್ದರಿಂದ "ಮಾಡುವ ಭಕ್ತಂಗೆ ಮನವೇ ಸಾಕ್ಷಿ" ಎಂದು ಹಮ್ಮಿಲ್ಲದೆ ಕಾರ್ಯವನ್ನು ಮಾಡಿದರೆ ಆ ಭಕ್ತನ ಭಕ್ತಿಯು ಸಾರ್ಥಕವಾಗುವದು. "ನನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ" ವೆಂಬುವದನ್ನು ಸದಾ ಸ್ಮರಿಸುತ್ತ ಹೆಮ್ಮೆಯನ್ನು ಬಿಟ್ಟು ವೀರಶೈವ ಶರಣರನ್ನು ಮನ್ನಿಸುತ್ತ ಸಜ್ಜನರ ಸಹವಾಸದಿಂದಿರತಕ್ಕದ್ದು. ಯಾಕಂದರೆ

ಅದ್ವೈತವನು ನುಡಿದು ಅಹಂಕಾರಿಯಾದೆನಯ್ಯಾ।
ಬ್ರಹ್ಮವ ನುಡಿದು ನಾನು ಭ್ರಮಿತನಾದೆನಯ್ಯಾ।
ಶೂನ್ಯವ ನುಡಿದು ನಾನು ಸುಖದುಃಖಕ್ಕೆ ಗುರಿಯಾದೆನಯ್ಯಾ ಗುಹೇಶ್ವರಾ।
ನಿಮ್ಮ ಶರಣ ಸಂಗನಬಸವಣ್ಣನ ಸಾನ್ನಿಧ್ಯದಿಂದಾನು ಸದ್ಭಕ್ತನಾದೆನಯ್ಯಾ॥

ಇದರ ತಾತ್ಪರ್ಯವೇನೆಂದರೆ ಸದ್ಭಕ್ತನಾಗಬೇಕಾದರೆ ಸತ್ಪುರುಷರ

ಸಹವಾಸದಿಂದಲೇ ಆಗಬೇಕಾಗುತ್ತದೆ. ಮತ್ತು ತನು, ಮನು, ಭಾವ ಇವುಗಳಲ್ಲಿ ಶುದ್ಧನಾಗಿರಬೇಕು. ಆದಕಾರಣ ಸ್ವತಂತ್ರ ಸಿದ್ಧಲಿಂಗೇಶ್ವರ ದೇವರು.—

ಶಿವಭಕ್ತರ ನಡೆಶುದ್ಧ, ನುಡಿಶುದ್ಧ, ಶಿವಭಕ್ತರ ನೋಟಶುದ್ಧ।
ಮಾಟಶುದ್ಧ। ಶಿವಭಕ್ತರ ನೆನಹುಶುದ್ಧ ಅನುಭಾವಶುದ್ಧ।
ಶಿವಭಕ್ತರ ಕಾಯಶುದ್ಧ। ಪ್ರಾಣಶುದ್ಧ। ಇದು ಕಾರಣಶಿ
ವಭಕ್ತರನೇ ಶಿವನೆಂದು ನಂಬುವುದು ನಂಬಿದವರು ಶಿವ
ನಪ್ಪುದು। ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ।

ಈ ಮೇಲಿನ ವಚನವನ್ನು ಪರಿಶೀಲಿಸಿ ನೋಡಿದರೆ ಮೊದಲಿನ ವರು ಶಿವಭಕ್ತರಿಗೆ ಎಷ್ಟು ಮಹತ್ವವನ್ನು ಕೊಟ್ಟಿದ್ದರೆಂಬುವದು ಸ್ಪಷ್ಟ ವಾಗಿ ತಿಳಿದು ಬರುತ್ತದೆ. ಶುದ್ಧವಾದ ಆಚರಣೆಯುಳ್ಳ ಸದ್ಭಕ್ತರೇ ಶಿವನ ಸ್ವರೂಪರೆಂದ ಮೇಲೆ ಇವರ ಆಚರಣೆಯು ಹೇಗೆ ಇರಬೇಕೆಂಬುವದು ಸ್ಪಷ್ಟವಾಗಿ ತಿಳಿಯುತ್ತದೆ. ಮುಖ್ಯವಾಗಿ ಭಕ್ತನ ಆಚರಣೆಯು ನಿರ್ದು ಷ್ಟವಾಗಿಯೂ ಮೇಲೆ ಬರೆದ ಸರ್ವ ಗುಣಗಳಿಂದಲೂ ಪರಿಪೂರ್ಣವಾ ಗಿದ್ದರೇನೇ ಅವನಿಗೆ ಮಹತ್ವವು ಬರುವದು. ಮತ್ತು ಭಕ್ತಸ್ಥಲದವನು ದ್ವೇಷವನ್ನಳಿದಿರಬೇಕು.

ದ್ವೇಷ ಇಲ್ಲದ ಭಕ್ತ, ಆಶೆ ಇಲ್ಲದ ವಿರಕ್ತ,
ಸಂಸಾರ ಪಾಶವಿಲ್ಲದಗುರು ಇಂತೀ ಮೂವರು
ಈಶ್ವರರೂಪ ಸದಾಶಿವ ಮೂರ್ತಿಗಿಂದತ್ತತ್ತ"

ವೆಂದು ಹೇಳಿರುವರು. ಮುಖ್ಯವಾಗಿ ಭಕ್ತಿಯ ಮಾರ್ಗವನ್ನವಲಂಬಿಸಿ ಗುರು, ಲಿಂಗ, ಜಂಗಮರಲ್ಲಿ ಸಮಾನಭಾವದಿಂದ ನಡೆದುಕೊಂಡು ಹೋಗು ವದೇ ಭಕ್ತಸ್ಥಲದ ಮುಖ್ಯವಾದ ವರ್ತನೆಯು.

## ಭಕ್ತಸ್ಥಲದ ಮಹತ್ವವು.

ಮೇಲೆ ಹೇಳಿದ ಶ್ರೇಷ್ಠಗುಣಗಳನ್ನು ದೊರಕಿಸಿ ಅದರಂತೆ ಆಚರಿ ಸಿವರೆ ಕೇವಲ ಅವನು ಮಾನವನಾಗದೆ ಈಶ್ವರ ಸ್ವರೂಪನಾಗುತ್ತಾನೆಂದ ಮೇಲೆ ಇದಕ್ಕಿಂತಲೂ ಹೆಚ್ಚಿನ ವಿಷಯವು ಯಾವದಿರುವದು?



೫೦೮

# ಪರಳಿವ್ಯಾಜ್ಯದ ಕೊನೆಯ ನಿರ್ಣಯ.

(ಪರಳೀ ಪ್ರಕರಣದ ವಿಷಯದಲ್ಲಿ ಶ್ರೀ ನಿಜಾಂಸಾಹೇಬರಿಂದ ಆಜ್ಞಾಪಿಸಲ್ಪಟ್ಟ ಉಮೂರು ಮಜಹಬೀ ಅಧ್ಯಕ್ಷರಿಂದ ವಿವರಣದೊಂದಿಗೆ ಪ್ರಕಟಿಸಲ್ಪಟ್ಟ ಹುಕುಮನ್ನು ಸಾಧ್ಯವಿದ್ದಮಟ್ಟಿಗೆ ಯಥಾವತ್ತಾಗಿ ಕನ್ನಡಿಸಿದ್ದೇನೆ. — ಚಿ. ಮ. ವೀರಭದ್ರ ಶರ್ಮ-ಕಾಶಿ )

## ಸಕಲು ಮುರಾಸಿಲಾ ಮೋತೆಮದೀ ಸರ್ಕಾರೆ ಆಲೀ ಸಗೆ ಉಮೂರು ಮಜಹಬೀ ಚರ್ಮ ಮೋಹರ್ ಸನ ೧೩೪೪ ವ ಘಸಲೀ

| | | |
|---|---|---|
| ಕ್ರಮಿಕ | ಮುದ್ರೆ | ರಿಕಾರ್ಡಿನ ಗುರುತು ೨೦೦ |
| ಗುರುತು | ಶ್ರೀ ಸರ್ಕಾರವರ | ಮೋತೆಮದೀಸನ |
| ೫೭೬೮ | ಧಾರ್ಮಿಕಸಂಸ್ಥೆ | ೧೩೩೩ ಫಸಲೀ |

"ಹಸ್ಬುಲ್ ಹುಕುಂ ಆಲೀಜನಾಬ್ ಸರ್ ಮಹರಾಜಾ ಬಹದ್ದೂರ್ ಸದರೆ ಆಜಮ ಸರ್ಕಾರೆಆಲಿ (ಈ ಬಿರುದುಗಳುಳ್ಳ) ಮಿಂಜಾನಿಬ್ ನವಾಬ್ ಅಖ್ತರಾಯಾರ್ ಜಂಗ್ ಬಹದ್ದುರ್ ಮೀನಾಯೀ ಮೊತೆಮದ್ ಸರ್ಕಾರೆ ಆಲಿ ಉಮೂರು ಮಜಹಬೀ, ಇವರ ಕಡೆಯಿಂದಃ—

"ಬಖಿದ್ಮತ್ ಫರೀಫ್ ಫಸ್ಟ್ ಮಾಮಲೇದಾರ ಸಾಹೆಬ್ ಜಿಲ್ಲಾ ಬೀಡ್ ಇವರಿಗೆ"—

ಕೇಸು

ರುದ್ರಾಭಿಷೇಕದ ವಿಷಯದಲ್ಲಿ ಪರಳೀ ಬ್ರಾಹ್ಮಣರ ಅರ್ಜಿ

ಬಸಿಲ್ ಸಿಲೇ ಮುರಾಸಿಲಾ, ದಫ್ತರೇಹಾಜಾನಿಷಾನ್ (೪೭೯೪) ತಾರೀಖು ೧೦ ಷಹರೇವರ್ ಸನ್ ೧೩೩ ವ ಫಸಲಿಯಲ್ಲಿ (೧೫ ಜುಲೈ ೧೯೨೯) ಬರೆಯುವದೇನಂದರೆ, ಸರ್ಕಾರದವರಿಂದ ನಿಯಮಿಸಲ್ಪಟ್ಟ ಧಾರ್ಮಿಕ ಕಲಹವಿಮರ್ಶನ ಸಂಘದವರ ರಿಪೋರ್ಟು ಬಾಬೆಹುಕುಮತ್ ಅಂದರೆ ಕೌನ್ಸಿಲ್ ದವರಿಂದ ಅನುಮೋದಿಸಲ್ಪಟ್ಟು ಶ್ರೀ ಶ್ರೀ ಶ್ರೀ ನಿಜಾಂ ಪ್ರಭುಗಳ ಸನ್ನಿಧಿಗೆ ಕಳುಹಿಸಲ್ಪಟ್ಟಿತು. ಅದರ ತರುವಾಯ ಮಂಗಳಪ್ರದವಾದ ಆಪ್ಪಣೆಯು ಹೊರಟ ೭ ನೆಯ ರಬ್ಬೀರವ್ವಲ್ ಸನ ೧೩೪ ವ ಫಸಲಿ (೧೩ ಆಗಸ್ಟು ೧೯೨೯) ಯಲ್ಲಿ ಪ್ರಸಾದಿಸಲ್ಪಟ್ಟದ್ದೇನಂದರೆ:—

"ಮತಕಲಹಸಂಘದ ಕಮೀಷನ ಮತ್ತು ಕೌನ್ಸಿಲ್‌ಗಳ ಅಭಿಪ್ರಾಯವು ಯೋಗ್ಯವಾಗಿದೆ. ಅದರಂತೆಯೇ ಈ ವಿಷಯದಲ್ಲಿ, ಲಿಂಗಾಯತರಿಗೆ ಅಧಿಕಾರಸ್ವಾತಂತ್ರ್ಯವು ಸ್ವೀಕರಿಸಲ್ಪಡುವದೇನಂದರೆ, ಅವರು ಪರಳೀ ವೈದ್ಯನಾಥ ದೇವಾಲಯದಲ್ಲಿ ಸಮಸ್ತವಿಧಾಭಿಷೇಕಗಳನ್ನು ಸ್ವಂತವಾಗಿ ಮಾಡಿಕೊಳ್ಳಲು ಸಮರ್ಥರಿರುತ್ತಾರೆ. ಆದುದರಿಂದ ಬ್ರಹಮನರಿಗೆ ಇದರಲ್ಲಿ ಯಾವ ಆತಂಕಾಧಿಕಾರವೂ ಇಲ್ಲ!"

(೧) ಇದು ನಡೆಯುವಂತೆ ಆಜ್ಞಾಪಿಸಿ ಪರಿಣಾಮವನ್ನು ಸೂಚಿಸಬೇಕು.

(೨) ಇದರ ವಿವರಣೆಯು ಬಖಿದ್ಮತ್ ಜಿನಾಬ್ ಗೌರ್ನರ್ ಸಾಹೇಬ ಔರಂಗಾಬಾದ ಡಿವ್ಹಿಜನ್ ಇವರಿಗೆ ಕಳುಹಿಸಲ್ಪಟ್ಟಿದೆ.

(೩) ಮುಸಲ್ಲಸ್‌ಹಾಜಾ" ಬಖಿದ್ಮತ್ ಜನಾಬ ಸದರ್ ನಾಜಂ ಸಾಹೇಬ ಕೋತ್ವಾಲೀ ಆಜ್ಲಾ ಸರ್ಕಾರೆ ಆಲಿ" ಇವರಿಗೆ ಕಳಿಸಲ್ಪಟ್ಟಿದೆ.

ಷರಹ, ದಸ್ತಖತ್

**ನವಾಬ್ ಅಖ್ತರ್ ಯಾರ್ ಜಂಗ್ ಬಹದ್ದೂರ್.**

ಅಧ್ಯಕ್ಷ.

## ನಕಲ್ ಮುರಾಸಿಲಾ ಮಹಕಮಾ, ಮಾತಮದ್ ಸರ್ಕಾರ್ ಆಲೀಸೀಗಯೇ ಆಮ್ ಉಮೂರುಮ ಜಹಬೀ. ವಾಕಾ, ೯, ಮಿಹರ್‌ಸನ್ ೧೩೩೬—

ಮಿಸ್ಲ. (೨೦೦) ಯಾಅಪಮದ ಸನ್ ೧೩೩೩ ಫಸಲೀ—ನಿಷಾನ್‌ಮಿಜಾರಿಯಾ. (೫೭೬೭)

ಮುಹರ್

ಸರ್ಕಾರ್ ಆಲೀ

ಉಮೂರ್ ಮುಜಹಬೀ

ಹಸ್ಬುಲ್ ಹುಕ್ಮ್ ಆಲೀಜಸಾಬು. ಸರ್ ಮಹಾರಾಜಾ. ಸದರ್ ಆಜಮ್ ಬಹಾದರ್ ಸರ್ಕಾರ್ ಆಲೀ— ಮುಕದ್ದಮಾ

ಮಿಂಜಾನಿಬ್ ನವಾಬ್ ಎಖ್ತಿಯಾರ್ ಜಂಗ್ ಬಹಾದರ್ ಮೀನಾಯಿಮ ಅತಮದ್ ಸರ್‌ಕಾರ್ ಆಲೀ. ಸೀನಾ ಉಮೂರ್ ಮಜಹಬೀ— ಬಖಿದ್‌ಮತ್ ಷರೀಫ್ ಅವ್ವಲ್ ತಾಲೂಕ ದಾರ್ ಸಾಹಬ್‌ಜಿಲೇ ಬೀಡ್.

ದರ್‌ಖ್ವಾಸ್ತ ಬ್ರಾಹ್ಮನಾನೆ ಪರಲೀ ನಿಸ್ಬತ್ ರುದ್ರಾಭಿಷೇಕ್—

ಬಸಿಲ್‌ಸಿಲೇ ಮುರಾಸಿಲಾ ದಫ್ತರ್‌ಹಾಜಾ ನಿಷಾನ್ ನಂಬರ್ (೪೭೯೪) ಮುಬಾರಿಕ್. ೧೦ ಷಹರೇವರ್, ಸನ್. ೧೩೩ ವ ಫಸ್ಲೀ ನಿಗಾರಿಷ್‌ಹೈ ಕಿ, ಕಮೀಷನ್. ತಕಾರೀಬ್‌ಮಜಹಬೀಕಿ ರಿಪೋರ್ಟ್, ಬಾದ್ ಹಸೂಲೇರಾಯ, ಬಾಬ್ ಹುಕೂಮತ್, ಪೇಷ್ಗಾಹ ಖುಸರವೀಮೇ, ಗುಜ್ರಾನೀ ಗಯೀಥೀ, ಜಿಸ್‌ಪರ್ ಜರಿಯಾಫರ್ಮಾನೇ ಮುಬಾರಕ್ ಮಸ್‌ದರಿಯೇ, ೭, ರಬೀ ಉಲ್ಲಾ ಉಲಲ್ ಮುಬಾರಕ್ ಸನ್ ೧೩೩ ವ ಹಿಜ್ರೀ ಬಹುಕೂಂ, ಮಹಕೂಂ ಸರಫ್ ಸದರ್ ಲಾಯಾಹೈ ಕೆ, ಕಮೀಷನ್ ತಕಾರೀಬ್ ಮಜಹಬೀ ಔರ್ ಕೌನಸಿಲ್ ಕೀ ರಾಯಮುನಾಸಿಬ್‌ಹೈ, ಹಸ್ಬ ಫಿರ್ಕಾ ಲಿಂಗಾಯತ್‌ಕೂ ಇಸ್ ಅಮರ್‌ಕಾ, ಮಜಾಜ್‌ಗರ್ ದಾನಾಜಾಯ್‌ಕೆ ವಹ ಜುಮಲ್ ಅಕಸಾಮ್‌ಕೆ ಅಭಿಷೇಕ್ ದೇವಲ್ ವೈಜನಾಥ ವಾಕ್‌ಯಾ ಪರಲೀಮೇ, ಬತೌರ್‌ಖುದ್ ಅದಾಕರೇ, ಔರ್ ಬ್ರಾಹ್ಮನೋಂಕೋ, ಉನ್‌ಮೇ ಮದಾಖಿಲಿತ್‌ಕಾ ಕೋಯೀಹಕ್ ನಹೋಗಾ—

(೧) ಹಸಬ್‌ವಾಮೀಲ್‌ಕಾ ಇಂತೆಜಾಂಫರಮಾಕರ್ ನತೀಜಾಸೇ ಇತಿಲ್ಲಾ ಫರಮಾಯೀಜಾಯ್.

(೨) ಮುಸನ್ನಾ ಇತಿಲ್ಲಾನ್ ಖಿದ್‌ಮತ್, ಜನಾಬ ಸ್ವಾದರ್‌ಸಾಹಬಸೂಬಾ ಔರಂಗಾಬಾದ್ ಮುರಸ್ಸಿಲ್ ಹೈ,—

(೩) ಮುಸಲ್ಲತ್ ಇತಿಲ್ಲಾನ್ ಖಿದ್‌ಮತ್ ಜನಾಬ ಸದರ್ ನಾಜಂ ಸಾಹಬ ಕೋತವಾಲೀ ಇಜ್‌ಲಾ. ಸರ್ಕಾರೆ ಆಲೀ ಮುರಸ್ಸಿಲ್ ಹೈ, ಪಖ್ತ—

ಷರಹ ದಸ್ತಖತ್.

**ಜನಾಬನವಾಬ್ ಎಖ್ತಯಾರ್ ಜಂಗ್‌ಬಾಹದ್ದೂರ್ ಮಿನಾಯೀ.**

ಮಹೆತೆಮದ್

(ಪರಳೀ ವೀರಶೈವ, ವಿಪ್ರರ ರುದ್ರಾಭಿಷೇಕದ ವ್ಯಾಜ್ಯ ವಿಷಯದಲ್ಲಿ ನಿಜಾಂ ಗೌರ್ಮೆಂಟಿನವರು ಪ್ರಕಟಿಸಿದ ಉರ್ದು ಭಾಷೆಯ ತೀರ್ಮಾನ ಪತ್ರಿಕೆಯೊಳಗಿರುವ ಅಕ್ಷರಗಳಿಗೆ ಇದು ಅವಿಕಲ ಪ್ರತಿಲಿಪಿಯಾಗಿದೆ. **ಚಿ**॥ ಮ॥ ವೀಸಭದ್ರಶರ್ಮ [ಹೈದ್ರಾಬಾದ್] ಕಾಶೀ.)

# ವೀರಶೈವ ವರ್ಣಭೇದ ವಿದಾರಿಕಾ.

(ಲೇ.— ಶ್ರೀಯುತ ಪಾವಟೆ ದು. ಸಿದ್ಧರಾಮಪ್ಪ ಬಿ.ಏ. ಎಲ್ ಎಲ್. ಬಿ ಹುಬ್ಬಳ್ಳಿ)



ಹೃದ್ಗತ ಜಾಡ್ಯಮಂ ಜಡಿದು ಮಂಗಲಲಿಂಗಮನಂಗದೊಳ್ಕರಂ।
ಚಿದ್ಗಗನಾಂಧಕಾರ ಮಿಹಿರಂ ಬೊಲಮುರ್ಚಿತ ಮೋಹನಿದ್ರೆಯಾ॥
ಪದ್ಗಮ ಜಾತಿಕರ್ಮಕುಲಮಂ ಕಳೆದೆನ್ನ ಶಿವತ್ವದರ್ಶಕಂ।
ಸದ್ಗುರು ರುದ್ರಪೂರ್ವಪಶುಪಂ ಮಿಗೆ ಮಾಳ್ಕೆಮಹೋದಯಂಗಳಂ॥

ಬ್ರಾಹ್ಮಣೋಸ್ಯ ಮುಖಮಾಸೀದ್ಬಾಹೂರಾಜನ್ಯಃ ಕೃತಃ। ಊರೂ ಯದಸ್ಯ ತದ್ವೈಶ್ಯಃ ಪದ್ಭ್ಯಂಶೂದ್ರೋ ಅಜಾಯತ ಎಂಬ ಪುರುಷಸೂಕ್ತ ಋಚೆಯನ್ನು ವೇದಕ್ಕೆ ಚತುರ್ವರ್ಣ ವ್ಯವಸ್ಥೆಯು ಸಮ್ಮತವೆಂದೂ ಆದ ರಿಂದ ವೈದಿಕವಾದ ಈ ವೀರಶೈವದಲ್ಲಿ ವರ್ಣವಿಭಾಗ ಉಂಟೆಂದೂ ಪಂಚಾಕ್ಷರ ಶರ್ಮರೂ ಉಳಿದ ಶರ್ಮರೂ ಸಾಧಿಸುವರು. ಇದು ಆಗದು. ಈ ಋಕ್ಕಿನಲ್ಲಿ ಬ್ರಾಹ್ಮಣಾದಿ ಚತುರ್ವರ್ಣವು ಜನ್ಮಪ್ರಧಾನವೆಂದಾಗಲಿ ಅದು ಸರ್ವ ವೈದಿಕರಲ್ಲಿ ಉಂಟೆಂದಾಗಲಿ ಹೇಳಿಲ್ಲ. ವೀರಶೈವರಲ್ಲಿ ಇದು ವರ್ಣಭೇದವನ್ನು ಕಲ್ಪಿಸಬಹುದೋ ಹೇಗೆಂಬುದನ್ನು ಮುಂದೆ ವಿವರಿಸು ವೆನು. ಸದ್ಯಃ ವರ್ಣಭೇದವು ಗುಣಕೃತವೊ ಜಾತಿಕೃತವೊ ಎಂಬಲ್ಲಿ ಈ ಋಕ್ಕು ಏನು ಹೇಳುತ್ತದೆಂಬುದನ್ನು ನೋಡುವಾ.

ಇದು ಪುರುಷಸೂಕ್ತದ ೧೩ನೆಯ ಋಕ್ಕು. ಆ ಸೂಕ್ತದ ೯-೧೦-೧೧ ನೆ ಋಚೆಗಳಲ್ಲಿ ಪ್ರಾಣಿಗಳ ಸೃಷ್ಟಿಯು ವಿವರವದೆ. ಆ ಋಕ್ಕುಗಳು

ತಸ್ಮಾದ್ಯಜ್ಞಾತ್ಸರ್ವಹುತಃ ಸಂಭೃತಂ ಪೃಷ್ದಾಜ್ಯಂ।
ಪಶೂಂಸ್ತಾಂಶ್ಚಕ್ರೇವಾಯವ್ಯಾನ್ ಆರಣ್ಯಾನ್ ಗ್ರಾಮ್ಯಾಂಶ್ಚಯೇ ॥೯॥
ತಸ್ಮಾದ್ಯಜ್ಞಾತ್ಸರ್ವಹುತಃ ಋಚಃ ಸಾಮಾನಿ ಜಜ್ಞಿರೇ।
ಛಂದಾಂಸಿ ಜಜ್ಞಿರೇ ತಸ್ಮಾದ್ಯಜುಸ್ತಸ್ಮಾದಜಾಯತ ॥೧೦॥
ತಸ್ಮಾದಶ್ವಾ ಅಜಾಯಂತ ಯೇಕೇಚೋಭಯಾದತಃ।
ಗಾವೋಹ ಜಜ್ಞಿರೇ ತಸ್ಮಾತ್ತಸ್ಮಾಜ್ಜಾತಾ ಅಜಾವಯಃ ॥೧೧॥

ಈ ಋಕ್ಕುಗಳಲ್ಲಿ ಆಯಾ ಶರೀರ ಸಂಪತ್ತಿಗೆ ಪುಣ್ಯಾಪುಣ್ಯ ಕರ್ಮವು ಆ ಕರ್ಮಪರಿಪಾಕದಿಂದ ಒದಗಿದ ಅನ್ನಪರಿಣಾಮವಾದ ರೇತಸ್ಸು ಕಾರ

ಣವೆಂದು ಹೇಳಿದೆ. ಋಗ್ಯಜುಸ್ಸಾಮಗಳ ಉತ್ಪತ್ತಿಯು ಆ ವೇದಮೂಲಕವಾದ ಕರ್ಮಗಳನ್ನು ತತ್ತ್ಯಾಗಮೂಲಕವಾದ ಪಾಪವನ್ನು ತೋರಿಸುತ್ತ ಕರ್ಮಗಳ ಶರೀರ ಹೇತುತ್ವವನ್ನು ಸೂಚಿಸುತ್ತದೆ. (ಪ್ರಾಕೃತ ಸೃಷ್ಟಿಯಲ್ಲಿ) ಹೇಗೆಂದರೆ— ಆ ರುದ್ರನಾಮಕ ಅಗ್ನಿಯಲ್ಲಿ ಸರ್ವ ಶರೀರವನ್ನು ಸಮರ್ಪಿಸಿದರು. ಆ ಮೇಲೆ ಆ ಯಜ್ಞದಿಂದ (ಪೃಷದಾಜ್ಯಂ) ಮೊಸರಿನಲ್ಲಿ ಬೆರೆತ ತುಪ್ಪ ಅಂದರೆ ಪೃಷದಾಜ್ಯದಂಥ ಸ್ತ್ರೀಪುರುಷ ಜನಕವೀರ್ಯವು (ಸಂಭೃತಂ) ಹುಟ್ಟಿತು. ಅದರಿಂದ (ವಾಯವ್ಯಾಂ) ವಾಯುವಿನಂತೆ ವೇಗವುಳ್ಳಂಥ (ಆರಣ್ಯಾನ್) ಅರಣ್ಯದಲ್ಲಿ ಹುಟ್ಟುವ ಚಿಗರೆ ಮೊದಲಾದ (ಗ್ರಾಮ್ಯಾನ್) ಊರಲ್ಲಿ ಹುಟ್ಟುವ ಮಾರ್ಜಾರಾದಿ (ಬೆಕ್ಕು ಮೊದಲಾದ) (ಪಶೂನ್) ಪಶುಗಳನ್ನು (ಚಕ್ರೇ) ಹುಟ್ಟಿಸಿದನು. ಇಲ್ಲಿ ಚಕಾರದಿಂದ ಉಳಿದ ಎಲ್ಲವನ್ನು ಹುಟ್ಟಿಸಿದನೆಂದರ್ಥವಾಗುತ್ತದೆ. (ತಸ್ಮಾದ್ಯ ಜ್ಞಾತ್) ಆ ಪರಶಿವನಿಂದ (ಋಚಃ) ಋಗ್ವೇದಶಾಖೆಗಳು (ಸಾಮಾನಿ) ಸಾಮಶಾಖೆಗಳು(ಛಂದಾಂಸಿ) ಗಾಯತ್ರ್ಯಾದಿ ಛಂದಸ್ಸುಗಳು ಷಡಂಗಗಳು (ಜಜ್ಞಿರೆ) ಹುಟ್ಟಿದವು. (ತಸ್ಮಾತ್) ಶಿವನಿಂದ (ಯಜುಃ) ಯಜುರ್ವೇದವು (ಅಜಾಯತ) ಹುಟ್ಟಿತು. [ತಸ್ಮಾತ್] ಆ ಪರಶಿವನಿಂದ [ಅಶ್ವಾಃ] ಕುದುರೆಗಳು (ಯೇಕೇಚ) ಸಮಸ್ತವಾದ (ಉಭಯಾದತಃ) ಕೆಳಗೂ ಮೇಲೂ ಹಲ್ಲುಗಳ ಪಙ್ಕ್ತಿಗಳುಳ್ಳ ಪ್ರಾಣಿಗಳು (ಗಾವಃ) ಯಜ್ಞಕ್ಕೆ ಬೇಕಾದ ಆಜ್ಯಾದಿಗಳನ್ನು ಒದಗಿಸುವ ಆಕಳುಗಳು (ಜಜ್ಞಿರೆ) ಹುಟ್ಟಿದವು. (ತಸ್ಮಾತ್) ಶಿವನಿಂದ (ಅಜಾಃ) ಮೇಕೆಗಳು (ವಯಃ) ಪಕ್ಷಿಗಳು ಅಥವಾ (ಅಜಾವಯಃ) ಕುರಿಆಡುಗಳು (ಜಾತಾ) ಹುಟ್ಟಿದವು.

(ಈ ಅರ್ಥವನ್ನು ಪಂಡಿತಾರಾಧ್ಯ ಭಾಷ್ಯದಿಂದ ಎತ್ತಿರುತ್ತೇವೆ.)

ಮನುಷ್ಯನು ಕೆಳಗೂ ಮೇಲೂ ದಂತಪಂಙ್ಕ್ತಿಗಳುಳ್ಳ ಪ್ರಾಣಿಗಳಲ್ಲಿ ಸಮಾವೇಶವಾಗಿರುವದರಿಂದ ಅವನ ಶರೀರೋತ್ಪತ್ತಿಯು ಕರ್ಮಾನುಗುಣದಿಂದ ರೇತೋದ್ವಾರದಿಂದ ಈ ಋಕ್ಕುಗಳಲ್ಲಿ ಹೇಳಲ್ಪಟ್ಟಿತು.

ಮುಂದೆ ೧೩ ನೆಯ ಋಕ್ಕಿನಲ್ಲಿ ಹೇಳಿದ ಬ್ರಾಹ್ಮಣಾದಿ ಉತ್ಪತ್ತಿಯು ಗೌಣವಿರಲಿಕ್ಕೇಬೇಕು. ಈ ಅರ್ಥದಿಂದಲೇ ಭಗವದುಕ್ತಿಯು "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ" ಎಂದು ಇರುವದು. ಇಲ್ಲಿ ಶರೀರೋತ್ಪತ್ತಿಗೆ ಕರ್ಮವೂ ಕಾರಣವಾಗುತ್ತಿರುವುದೆಂದು ಮೇಲೆ ಹೇಳಿದ್ದರಿಂದ ಬ್ರಾಹ್ಮಣಾದಿ ಜಾತಿಗಳು ಹುಟ್ಟಿನಿಂ

ದಲೇ ಆದುದಕ್ಕೆ ಈ ಭಗವದುಕ್ತಿಯು ಪ್ರಮಾಣವೆಂದೆನಲಾಗದು. ಆಯಾ ಮನುಷ್ಯನ ಸಾತ್ವಿಕಾದಿ ಗುಣಗಳಿಂದಲೂ ಆ ಗುಣಾನುರೂಪವಾದ ದಯಾದಿ ಮನೋವೃತ್ತಿಗಳಿಂದಲೂ ಆ ಮನೋವೃತ್ತಿಗನುಕೂಲವಾದ ಕರ್ಮದಿಂದಲೂ ಅವರವರ ಜಾತಿಯನ್ನು ಕಂಡುಹಿಡಿಯುವದು ಯಾವ ವಿಸಂಗತಿಯನ್ನು ಉಂಟುಮಾಡುವದಿಲ್ಲ. ಹೀಗಿರದೆ ಹುಟ್ಟಿನಿಂದಲೇ ಜಾತಿಯನ್ನು ಕಲ್ಪಿಸಿದರೆ ತಾಮಸ ಗುಣದಿಂದ ಕಾಠಿನ್ಯಾದಿ ಮನೋವೃತ್ತಿಗಳಿಂದ ಹಿಂಸಾದಿಕರ್ಮನಿರತನು ಬ್ರಾಹ್ಮಣನೆಂತಲೂ, ತದ್ವಿಪರೀತವಾದ ಸಾತ್ವಿಕಾದಿ ಗುಣದಿಂದಲೂ ದಯಾದಿವೃತ್ತಿಯಿಂದಲೂ ಅಹಿಂಸಾದಿ ಕರ್ಮದಿಂದಲೂ ಕೂಡಿದವನನ್ನು ಜನ್ಮಮಾತ್ರದಿಂದ ಚಂಡಾಲನೆಂತಲೂ ತಿಳಿಯುವದು ಪರಮೇಶ್ವರನ ಸೃಷ್ಟಿಯಲ್ಲಿ ವಿಸಂಗತಿಯನ್ನೊಪ್ಪುವದಾಗಿದೆ. ಭಗವದ್ಗೀತೆಯಲ್ಲಿ ಗುಣಕರ್ಮವಿಭಾಗದಿಂದ ವರ್ಣಸೃಷ್ಟಿಯನ್ನು ಹೇಳಿ.

ಶಮೋದಮಸ್ತಪಶೌಚಂ ಕ್ಷಾಂತಿಂರಾರ್ಜವಮೇವಚ ।
ಜ್ಞಾನಂವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮಸ್ವಭಾವಜಂ ॥
ಶೌರ್ಯಂತೇಜೋಧೃತಿರ್ದಾಕ್ಷ್ಯಂ ಯುದ್ಧೇಚಾಪ್ಯ ಪಲಾಯನಮ್
ದಾನಮೀಶ್ವರಭಾವಶ್ಚ ಕ್ಷತ್ರಕರ್ಮ ಸ್ವಭಾವಜಮ್ ॥
ಕೃಷಿಗೌರಕ್ಷವಾಣಿಜ್ಯಂ ವೈಶ್ಯಕರ್ಮಸ್ವಭಾವಜಮ್ ।
ಪರಿಚರ್ಯಾತ್ಮಕಂ ಕರ್ಮಶೂದ್ರಸ್ಯಾಪಿಸ್ವಭಾವಜಮ್ ॥

ಎಂಬ ಶ್ಲೋಕಗಳಿಂದ ಆಯಾ ವರ್ಣದ ಗುರುತುಗಳನ್ನು ಹೇಳಿರುವನು. ಆದುದರಿಂದ ಪ್ರತ್ಯಕ್ಷ ಗುಣಕರ್ಮಗಳಿಂದಲೇ ಮನುಷ್ಯನ ವರ್ಣನಿರ್ಣಯವಾಗಬೇಕಲ್ಲದೆ, ಆಯಾ ಲಕ್ಷಣವಿರುದ್ಧವಾದ ಗುಣಕರ್ಮಗಳುಳ್ಳವರನ್ನು ಬ್ರಾಹ್ಮಣಾದಿಗಳೆಂದು ಹೇಳಲಿಕ್ಕೆ ಬರಲಾರದು.

ಶ್ವೇತಾಶ್ವತರದಲ್ಲಿ

"ಯೋ ಬ್ರಹ್ಮಾಣಂ ವಿಧಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ತಂಹ ದೇವಮಾತ್ಮ ಭುದ್ಧಿಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೆ"

ಎಂಬ ಮಂತ್ರವು ಪರಮಾತ್ಮನು ಬ್ರಹ್ಮನನ್ನು ಹುಟ್ಟಿಸಿ ಆತ್ಮಜ್ಞಾನಕ್ಕಾಗಿಯೂ ಸೃಷ್ಟಿಸಾಮರ್ಥ್ಯಕ್ಕಾಗಿಯೂ ಅವನಿಗೆ ವೇದಗಳನ್ನುಪದೇಶಿಸಿದನೆಂದು ಹೇಳಿಯುದೆ. ಪರಮಾತ್ಮನು ಸತ್ಯಸಂಕಲ್ಪನು. ಸತ್ಯಕಾಮಃ

ಸತ್ಯಸಂಕಲ್ಪಃ ಎಂದು ಶ್ರುತಿಯುಂಟು. ಶಮಾದಿಗುಣಯುತನು ಬ್ರಾಹ್ಮಣನೆಂದು ಶಿವಸಂಕಲ್ಪವಿರಲು, ಅದಕ್ಕೆ ವಿಪರೀತ ಗುಣವುಳ್ಳವನು ಬ್ರಾಹ್ಮಣನೆನಿಸಲಾರನು.

ಪ್ರಾಣಿಗಳು ಕಲ್ಪಕಲ್ಪಗಳಲ್ಲಿಯೂ ತಮ್ಮ ತಮ್ಮ ಕರ್ಮಗಳನ್ನನುಸರಿಸಿ ಆ ಕರ್ಮಜನ್ಯ ಸುಖದುಃಖಾನುಭವದಿಂದ ಮಲಪರಿಪಾಕವನ್ನು ಹೊಂದಿ ಮುಕ್ತಿಯನ್ನು ಹೊಂದಬೇಕೆನ್ನುವದೇ ಈ ವಿಶ್ವರಚನೆಯ ಉದ್ದೇಶವು.

“ಮುಕ್ತ್ಯರ್ಥಂ ಸಪಶುರ್ಬದ್ಧೊ ನಾನ್ಯಥಾ ನಾಸ್ಯ ಜಾಯತೆ। ಯಾವಚ್ಛರೀರ ಸಂಬಂಧೊ ನ ಜಾತೊನಹಿಕರ್ಮಭುಕ್” ಎಂದು ಮೃಗೇಂದ್ರಾಗಮವುಂಟು. ಅದರಿಂದಲೇ ಕಲ್ಪಕಲ್ಪಗಳಲ್ಲಿಯೂ ಯಥಾಕ್ರಮವಾದ ಉನ್ನತಿಯನ್ನು ಹೊಂದಲಿಕ್ಕಾಗಿ ಜೀವರುಗಳು ತಮ್ಮ ತಮ್ಮ ಸ್ವಭಾವವನ್ನು ಅಕಸ್ಮಾತ್ತಾಗಿ ಬಿಡದೆ ಕ್ರಮೇಣಶುದ್ಧಿಯನ್ನು ಹೊಂದುತ್ತ ಬರುವವು. ಅದರಿಂದಲೇ ಪೂರ್ವಕಲ್ಪದಂತೆಯೇ ಎತ್ತರಕಲ್ಪದ ಸೃಷ್ಟಿಯು ತೇಷಾಂಯೆಯಾನಿ ಕರ್ಮಾಣಿಪ್ರಾಕ್ ಸೃಷ್ಟ್ಯಾಂಪ್ರತಿಪೇದಿರೆ। ತಾನ್ಯೇವತೆ ಪ್ರಪದ್ಯಂತೆ ಸೃಜ್ಯಮಾನಾಃ ಪುನಃ ಪುನಃ॥

ಹಿಂಸ್ರಾ ಹಿಂಸ್ರೆ ಮೃದುಕ್ರೂರೆ ಧರ್ಮಾಧರ್ಮಾವೃತಾನೃತೆ। ತದ್ಭಾವಿತಾ ಪ್ರಪದ್ಯಂತೆ ತಸ್ಮಾತ್ತತ್ತಸ್ಯರೋಚತೆ॥ ಎಂದು ಶಾಂಕರಭಾಷೋದಾಹೃತವಾದ ಒಂದು ಸ್ಮೃತಿಯು ಇಲ್ಲಿ ನೆನಪಿಗೆ ಬರುತ್ತದೆ. ಹಿಂದಿನಕಲ್ಪದಲ್ಲಿ ಯಾವ ಯಾವ ಜೀವನು (ಯಾವ ಯಾವ ಗುಣದಿಂದ) ಯಾವ ಯಾವ ಕರ್ಮಗಳನ್ನು ಮಾಡಿದನೊ ಅವೇ (ಗುಣ) ಕರ್ಮಗಳನ್ನು ಪುನಃ ಪುನಃ ಕಲ್ಪಕಲ್ಪಗಳಲ್ಲಿ ಹುಟ್ಟುತ್ತ ಹೊಂದುವನು. ಹಿಂಸಕತ್ವವನ್ನಾಗಲಿ ಅಹಿಂಸಕತ್ವವನ್ನಾಗಲಿ ಮೃದುತ್ವವನ್ನಾಗಲಿ ಕ್ರೂರತ್ವವನ್ನಾಗಲಿ ಧರ್ಮವನ್ನಾಗಲಿ ಅಧರ್ಮವನ್ನಾಗಲಿ ಸತ್ಯವನ್ನಾಗಲಿ ಅಸತ್ಯವನ್ನಾಗಲಿ ಅದರಲ್ಲಿಯೇ ಸಂತತವಾದ ಭಾವನೆಯುಳ್ಳದರಿಂದ ಅಂಗೀಕರಿಸುವನು. ಅದರಿಂದಲೇ ಈ ಹಿಂಸೆ ಅಹಿಂಸೆ ಮುಂತಾದವುಗಳು ಆಯಾ ಜೀವರುಗಳಿಗೆ ಭಿನ್ನ ಭಿನ್ನವಾಗಿ ರುಚಿಸುತ್ತವೆ.

ಸೃಷ್ಟಿಯನ್ನು ನಿರೀಕ್ಷಿಸಿದರೆ, ನಮಗೆ ಈ ಸ್ಮೃತಿಯು ಅನುಭವಕ್ಕೆ ಬರುತ್ತದೆ. ಜೀವರುಗಳ ಸೃಷ್ಟಿಯು ದೇಹ ಸಂಬಂಧವು ಅಲ್ಲದೆ ಬೇರೆ

ಸೃಷ್ಟಿಯು ಅಲ್ಲ. 'ಅಜೋ ನಿತ್ಯಃ ಶಾಶ್ವತೋ ಯಂ ಪುರಾಣಃ' ಎಂದು ಕಾಠಕ ಶ್ರುತಿಯುಂಟು. 'ನಜೀವೊ ಮ್ರಿಯತೆ' ಎಂದು ಛಾಂದೋಗ್ಯವದೆ. ಅದರಿಂದ ಜೀವರುಗಳು ಸ್ವತಃ ಹುಟ್ಟುವದಿಲ್ಲ. ಶರೀರ ಸಂಬಂಧ ವಿಯೋಗಗಳೆ ಅವರ ಹುಟ್ಟುಸಾವುಗಳು. ಈ ಶರೀರಗಳು ಭೌತಿಕವಾಗಿವೆ. ಈ ಶರೀರಗಳ ಒಳಗೆ ಅವಕ್ಕೂ ಸೂಕ್ಷ್ಮವಾಗಿ ಅವುಗಳನ್ನು ಚಲಿಸುವ ಅಂತಃಕರಣವಾದರೂ ಭೌತಿಕವೆ. ಆದರೆ ಕೆಲವು ಜೀವರುಗಳಲ್ಲಿ ಶರೀರವೆ ಪ್ರಧಾನವಾಗಿದ್ದು ಅಂತಃಕರಣವು ಅದಕ್ಕೆ ಅನುಸರಿಸಿಯೇ ಇರುವದು. ಅಂದರೆ ಅಂತಃಕರಣದ ಸಾರಾಸಾರ ವಿಚಾರದಿಂದ ಶರೀರ ಪ್ರವೃತ್ತಿಗಳು ನಿಯಂತ್ರಿತವಾಗುವದಿಲ್ಲ. ಇಂಥ ಸೃಷ್ಟಿಯು ಅಂತಃಕರಣವು ಅತ್ಯಂತ ಅಜಾಗೃತವಾದ ತೃಣಗುಲ್ಮಾದಿಗಳಿಂದ ಆಹಾರಭಯಾದಿಗಳಿಗೆ ಮಾತ್ರ ಜಾಗ್ರತವಾಗಿರುವ ಪಶ್ವಾದಿಪರ್ಯಂತವೂ ಜೀವರು ಈ ಕೋಟಿಯಲ್ಲಿ ಸಮಾವೇಶವಾಗುವರು. ಮನುಷ್ಯನು ಹಾಗಲ್ಲ. ಅವನಲ್ಲಿ ಅಂತಃಕರಣವು ಅತ್ಯಂತ ಜಾಗ್ರತವು. ವ್ಯಾಘ್ರಾದಿಗಳು ತಮ್ಮ ಶರೀರ ರಚನೆಯಿಂದಲೇ ಹಿಂಸ್ರವಾಗಿಯೂ ಕುರಂಗಾದಿಗಳು ತಮ ಶರೀರ ರಚನೆಯಿಂದಲೇ ಮೃದುವಾಗಿಯೂ ಇರುತ್ತವೆ. ಮನುಷ್ಯನು ತನ್ನ ಶರೀರ ರಚನೆಯಿಂದಲೆ ಮತ್ತೊಬ್ಬ ಮನುಷ್ಯನಿಗಿಂತ ಹಿಂಸಾಹಿಂಸೆಗಳಲ್ಲಿ ಭಿನ್ನನಾಗಿರುವದಿಲ್ಲ. ಪಾರಿವಾಳದ ದುಃಖವನ್ನು ಸಹಿಸದೆ ಶ್ಯೇನಕ್ಕೆ ತನ್ನ ಶರೀರವನ್ನು ಬಲಿಗೊಟ್ಟ ಶಿಬಿಚಕ್ರವರ್ತಿಯ ಶರೀರವು ನಿತ್ಯವಲ್ಲೂ ಬೇಟೆಯಿಂದ ಅನಂತ ಪಶುಗಳನ್ನೂ ಮೃಗಗಳನ್ನೂ ಕೊಲ್ಲುವ ವ್ಯಾಧನ ಶರೀರಕ್ಕಿಂತ ಯಾವ ವಿಧದಲ್ಲಿಯೂ ವಿಂಗಡಿಸುವಂತಿಲ್ಲ. ವ್ಯಾಘ್ರದ ಕಠೋರತ್ವವನ್ನೂ ಕುರಂಗದ ಮೃದುತ್ವವನ್ನೂ ಶರೀರ ರಚನೆಯಿಂದ ಗುರುತಿಸಿ ವರ್ಗೀಕರಿಸುವಂತೆ ಮನುಷ್ಯನ ಮೃದುತ್ವ ಕಠೋರತ್ವವನ್ನು ಅಂತಃಕರಣ ಪ್ರವೃತ್ತಿಯಿಂದ ಗುರುತಿಸಿ ವಿಂಗಡಿಸಬೇಕಾಗಿದೆ. ಅದರಿಂದ ಆಯಾ ಜೀವನ ಪೂರ್ವ ಕರ್ಮವನ್ನು ಅದರಿಂದುಂಟಾಗಿರುವ ಈಗಿನ ಶಮಾದಿಗುಣ ಸಂಪನ್ನಜಾತಿಯನ್ನೂ ಅಂತಃಕರಣ ವೃತ್ತಿಯಿಂದಲೇ ಗುರುತಿಸಬೇಕು. ಇದಕ್ಕೆ ದ್ವಿತೀಯ ಶಂಭುಬಸವನ ವೇದಸಾರ ವಚನವೂವುಂಟು.

(ಮುಂದೆ ಸಾಗುವದು.)

---

# ಅರಿಷಡ್ವರ್ಗಗಳು.

(ಲೇಖಕರುಃ— ವಾಗೀಶಶಿವಾಚಾರ್ಯರು ಬೃಹನ್ಮಠ ಮುಡೇನೂರು
ಶ್ರೀ ವಿಶ್ವಾರಾಧ್ಯ ಗುರುಕುಲ ಜಂಗಮವಾಡೀಮಠ ಕಾಶಿ.)

ಕಂದ|| ಈ ಮಹಿಯೊಳಗತಿಸುಖವಂ|
ಕಾಮಿಪ ನರರುಂಟು ಕಾಮವಾಸನೆಯಿಂದಂ||
ತಾಮಸವಸು ಬಿಟ್ಟುರುತರ|
ಸೀಮೆಯನನುಸರಿಪ ಸುಜನರಿಲ್ಲವು. ಸಟೆಯೋಂ ||೧||
ಸದಮಲಬೊಧೆಯ ಪಡೆಯದೆ|
ಕುದಿಯುತ ಪರಗುಣವ ಪಳಿವ ಕ್ರೋಧಿಗಳುಂಟೈ||
ಮುದದಿಂ ತನ್ಮಯತೆರದಿಂ|
ಸದುಗುಣಿಗಳೆಲ್ಲರೆಂಬ ಮನುಜರುಮಿಲ್ಲಂ ||೨||
ತೋರಲು ವಸ್ತುವದೊಂದುಮ|
ದಾರದು ತಾನಾದೊಡೇನು ಲೋಭಿಪರುಂಟೈ||
ಧೀರತೆಯಿಂದದನೊಲ್ಲದ|
ಶೂರರು ತಾವ್ ಪೋವರಕ್ಕಟ ಪುಸಿಯೋಂ ||೩||
ಮಹಿಯೊಳು ಮನುವಿನ ವಚನವು|
ಮಹಿಳೆಯರಿಂಗಲ್ಲ ಮದುವೆ ನುಹಿಗಿಹುದೆನುತಂ||
ಬಹು ವಿಧದೊಳು ಭ್ರಮೆಗೊಳಿಸುವ|
ಅಹಿಗಳು ಬಹಳುಂಟು ಮೋಹಜಿತಜನರಿಲ್ಲಂ ||೪||
ಮತಮತವೆಂಬುವ ಮತಿತಾ|
ಕ್ಷಿತಿಯೊಳಗತಿಹತವನಾಂತುದಾಸ್ಥಾನದೊಳುಂ||
ಚ್ಯುತವಹಮದ ಶಬ್ದವು ತಾ|
ನತಿಬಲದಿಂ ಬಂದು ಸೇರಲಂಜುವದಿಲ್ಲಂ ||೫||
ಜ್ಞಾನಾವಸ್ಥೆಯೊಳಿರ್ದಡು|
ಹೀನಾವಸ್ಥೆಯೊಳಿರ್ದೊಡವನ ಪಳಿವವರುಂಟೈ||
ಜ್ಞಾನಿಗಳವರತಿಪೂಜ್ಯರ್|
ಮಾನಿಗಳೆಂದೆಂಬ ವಿಗತಮತ್ಸರರಿಲ್ಲಂ ||೬||

# ವೀರಶೈವ ವರ್ಣಾಶ್ರಮ ವಿಚಾರವು.

ಲೇಖಕ:—"ಶಿವಸುತ"

—:0:—

ಕಳೆದ 'ಶಿವಾನುಭವ' ದ ಸಂಚಿಕೆಯಲ್ಲಿ ವೇ. ಪಂಚಾಕ್ಷರ ಶಾಸ್ತ್ರಿಗಳು ಹಿರೇಮಠ ಶಿರೋಳ ಇವರು ಮೇಲ್ಕಂಡ ಶೀರ್ಷಿಕೆಯಿಂದ ಒಂದು ಲೇಖನವನ್ನು ಪ್ರಕಟಿಸಿರುತ್ತಾರೆ. ಚಾತುರ್ವರ್ಣದ ಸೃಷ್ಟಿಯು ಜಗತ್ತಿನ ಸೃಷ್ಟಿಯೊಡನೆಯೇ ಉದಯವಾಯಿತೆಂದೂ ವರ್ಣಾಶ್ರಮದ ವ್ಯವಸ್ಥೆಯನ್ನು ಪರಮಾತ್ಮನೇ ಜನ್ಮವನ್ನನುಸರಿಸುವಂತೆಯೂ ಆಯಾ ವರ್ಣ ಜನ್ಮತ್ವದ ಆಯಾ ವರ್ಣದ ಕರ್ಮ ಸಂಸ್ಕಾರಗಳಿಂದ ಬ್ರಾಹ್ಮಣಾದಿ ನಾಲ್ಕು ವರ್ಣಗಳಿರುವಂತೆ ಅವರವರಿಗೆ ಉಕ್ತವಾದ ಉದ್ಯೋಗಗಳಿಂದ ನಿಯಮಿಸಿದನೆಂತಲೂ, ಗುಣಕರ್ಮಗಳಿಂದ ಒಬ್ಬನ ಜಾತಿಯನ್ನು ನಿರ್ಣಯಿಸುವವರು ಆರ್ಯ ಧರ್ಮದ ತಿರುಳನ್ನರಿಯದ ಮರುಳರೆಂತಲೂ ವೀರಶೈವದಲ್ಲಿ ಸಹಾ ಬ್ರಾಹ್ಮಣಾದಿ ಚಾತುರ್ವರ್ಣಗಳಿರುವವೆಂತಲೂ ಆ ಲೇಖನದಲ್ಲಿ ಶಾಸ್ತ್ರಿಗಳು ಅಭಿಪ್ರಾಯಪಟ್ಟಿರುತ್ತಾರೆ. ಈ ವಿಚಾರಗಳು ಚರ್ಚಾತ್ಮಕವಿದ್ದು ಆ ಬಗ್ಗೆ ಆಕ್ಷೇಪಣೆಗಳಿದ್ದವರು ಲೇಖ ಮೂಲಕ ಬರೆದು ತಿಳಿಸಿದಲ್ಲಿ 'ಶಿವಾನುಭವ' ದಲ್ಲಿ ಪ್ರಕಟಿಸುವುದಾಗಿ ಒಂದು ಟಿಪ್ಪಣೆಯನ್ನು ಸೇರಿಸಿ ಸಂಪಾದಕರು ತಮ್ಮ ನಿಷ್ಪಕ್ಷಪಾತಬುದ್ಧಿಯನ್ನು ಸತ್ಯಾನ್ವೇಷಕ ಧ್ಯೇಯವನ್ನು ವ್ಯಕ್ತಗೊಳಿಸಿರುತ್ತಾರೆ. ಸಮಾಜದ ವ್ಯವಸ್ಥೆಯ ದೃಷ್ಟಿಯಿಂದಲೂ ಮತ್ತು ಕಾನೂನಿನ ದೃಷ್ಟಿಯಿಂದಲೂ ಮೇಲ್ಕಂಡ ವಿಚಾರಗಳು ಅತ್ಯಂತ ಮಹತ್ವವುಳ್ಳದ್ದಾಗಿರುವದರಿಂದ ನಮ್ಮ ಸಮಾಜದ ಮುಖಂಡರುಗಳು ಇವುಗಳ ನಿರ್ಣಯದ ಬಗ್ಗೆ ವ್ಯವಸ್ಥೆ ಮಾಡುವದು ಅತ್ಯಾವಶ್ಯಕವೆಂದು ನನಗೆ ತೋರುತ್ತದೆ. ಏತಕ್ಕೆಂದರೆ ಈಗ ಸಿವಿಲ್‌ಕೋರ್ಟುಗಳಲ್ಲಿ ಜಾರಿಯಲ್ಲಿರುವ 'ಹಿಂದೂಲಾ' ವು ಯಾಜ್ಞವಲ್ಕ್ಯ ಪರಾಶರ ಮನು ಇತ್ಯಾದಿ ಸ್ಮೃತಿಗಳು ಮತ್ತು ಸ್ಮೃತಿಗಳಿಗೆ ವ್ಯಾಖ್ಯಾನರೂಪವಾಗಿರುವ ಮಿತಾಕ್ಷರ ದಾಯಭಾಗ ವ್ಯವಹಾರಮಯೂಖ ಇತ್ಯಾದಿಗಳನ್ನು ಅವಲಂಬಿಸಿರುತ್ತದೆ. ಸ್ಮೃತಿಗಳ ರೀತ್ಯಾ ಬ್ರಾಹ್ಮಣಾದಿ ದ್ವಿಜರಿಗೊಂದು ಕಾನೂನು ಶೂದ್ರರಿಗೊಂದು ಕಾನೂನು ಹೇಗೆ ಇರುತ್ತದೆಂಬುದು ಎಲ್ಲರಿಗೂ ತಿಳಿದ

ವಿಷಯುವೇ ಆಗಿರುತ್ತದೆ. ಧರ್ಮಶಾಸ್ತ್ರದ ಈ ಸಂಕುಚಿತವಾದ ಭೇದ ದೃಷ್ಟಿಯಿಂದ ಈ ೨೦ ನೆಯ ಶತಮಾನದಲ್ಲಿ ಸಹ "ಶೂದ್ರ" ರೆಂದೆನಿಸಿ ಕೊಳ್ಳುವವರಿಗೆ ಎಂಥಾ ಅನ್ಯಾಯಗಳು ಜರುಗುತ್ತಿರುವವೆಂಬುದನ್ನು ಒಡೆದು ಹೇಳಬೇಕಾಗಿಲ್ಲ. ಅದಾವ ಕಾರಣದಿಂದಲೋ "ನ ವೀರಶೈವ ಸದೃಶಂ ಮತಮಸ್ತಿಜಗತ್ರಯೆ" ಎಂದು ವಿಜಯ ಘೋಷವನ್ನು ಮಾಡುತ್ತಿರುವ ನಾವು ಧರ್ಮದೇವತೆಯ ದೃಷ್ಟಿಯಲ್ಲಿ ಶೂದ್ರರಾಗಿ ಪರಿಗಣಿಸಲ್ಪಟ್ಟು, ದತ್ತಪುತ್ರ ಸ್ವೀಕಾರ, ದಾಯವಿಭಾಗ, ದಾಸೀಪುತ್ರರಿಗೆ ಆಸ್ತಿಯನ್ನು ಹಂಚಿ ಕೊಡುವಿಕೆ ಈ ವಿಷಯಗಳಲ್ಲಿ ನಮಗೆ 'ಶೂದ್ರ' ಕಾನೂನು ವಿಧಿಸಲ್ಪಟ್ಟಿರುತ್ತದೆ.

ಈ ಸ್ಥಿತಿಯನ್ನು ಸುಧಾರಿಸುವುದಕ್ಕೆ ನಾವು ಸರಕಾರದವರೊಡನೆ ಹೋರಾಡಲಿಕ್ಕೆ ಬೇಕಾಗುತ್ತದೆ. ಆಗ ವೀರಶೈವರಿಗೆ ಯಾವ ಕಾನೂನನ್ನು ಹಚ್ಚಬೇಕೆಂಬ ಮಹತ್ವ ಪ್ರಶ್ನೆಯು ಹೊರಡುತ್ತದೆ. ಆ ಪ್ರಶ್ನೆಗೆ ನಾವು ಏಕ ಕಂಠವಾಗಿ ಉತ್ತರವನ್ನು ಕೊಡಲೂ ಸಿದ್ಧರಿರಬೇಕು. ದ್ವಿಜರಿಗೆಂದು ಉಪಯೋಗಿಸಲ್ಪಡುತ್ತಿರುವ ಕಾನೂನನ್ನು ಹಚ್ಚಬೇಕೋ ಅಥವಾ ನಮ್ಮಲ್ಲಿ ಸಹ ವರ್ಣಾಶ್ರಮ ವಿಭಾಗಗಳಿರುವವೆಂದು ಯಂಕ ನೊಣಶೀನ" ಎಂದು ಇರುವ ಮೂವರಲ್ಲಿ ಒಬ್ಬನಿಗೆ ಬ್ರಾಹ್ಮಣ ಕಾನೂನು ಒಬ್ಬನಿಗೆ ಕ್ಷತ್ರಿಯ ಕಾನೂನು ಬೇರೊಬ್ಬನಿಗೆ ಶೂದ್ರ ಕಾನೂನು ಹಚ್ಚಬೇಕೋ ? ಇದಲ್ಲದೆ ಸಾಮಾಜಿಕ ದೃಷ್ಟಿಯಿಂದ ನಾವು ವರ್ಣ ವಿಭಾಗವನ್ನು ಒಪ್ಪಿಕೊಂಡಿದ್ದೇ ಆದರೆ ಸಮಾಜದ ಈಗಿರುವ ಸುವ್ಯವಸ್ಥಿತವಾದ ಸಂಘಟನೆಯನ್ನೇ ಬದಲಾಯಿಸಬೇಕಾಗುತ್ತದೆ. ನಮ್ಮ ನಿತ್ಯ ನೈಮಿತ್ತಿಕ ಕರ್ಮಗಳಲ್ಲಿ ಮಾರ್ಪುಗಳನ್ನು ಮಾಡಬೇಕಾಗುತ್ತದೆ. ಒಟ್ಟಿನಲ್ಲಿ ನಮ್ಮ ಧರ್ಮದ ಸಿದ್ಧಾಂತವನ್ನೇ ರೂಪಾಂತರಗೊಳಿಸಬೇಕಾಗುತ್ತದೆ. ಇದು ಹೇಗೆಂಬುದನ್ನು ಮುಂದೆ ತಿಳಿಸುತ್ತೇನೆ.

ಧರ್ಮದ ಅಥವಾ ಸಮಾಜದ ಸಂಬಂಧ ಯಾವುದಾದರೊಂದು ವಿಷಯವನ್ನು ನಾವು ಚರ್ಚಿಸಬೇಕಾದರೆ (೧) ಸದರಿ ವಿಷಯಕ್ಕೆ ಶಾಸ್ತ್ರದ (ಅಂದರೆ ನಾವು ಯಾವಗ್ರಂಥಗಳನ್ನು ಸತ್ಯದ ಭಾಂಡಾರವೆಂದು ನಂಬುತ್ತೇವೋ ಅವುಗಳ) ಸಮ್ಮತಿಯಿರುವದೇ? (೨) ಅದು ಅನೂಚಿನವಾಗಿ ಬಂದಿದ್ದು ಈಗ ಹಾಲಿ ಪ್ರಚಲಿತವಾಗಿದೆಯೋ ಹೇಗೆ? (೩) ಸಮಾಜ ಮತ್ತು ದೇಶಹಿತದೃಷ್ಟಿಯಿಂದ ಅದನ್ನು ಪ್ರಚಾರಮಾಡಗೊಡುವುದು ಒಳಿತೇ ಹೇಗೆ? ಇತ್ಯಾದಿ

ಸಮಸ್ಯೆಗಳನ್ನು ನಾವು ಪೂರ್ಣಗೊಳಿಸಬೇಕಾಗುತ್ತದೆ. ಇವುಗಳನ್ನು ಚರ್ಚಿಸುವುದಕ್ಕೆ ಮುಂಚೆ ವರ್ಣಾಶ್ರಮ ಧರ್ಮವೆಂದರೇನು? ಅದು ಹಿಂದೂ ಧರ್ಮದಲ್ಲಿ ಯಾವಾಗ ಮತ್ತು ಯಾಕೆ ಪ್ರಚಾರದಲ್ಲಿ ಬಂದಿತೆಂಬುದು ಸ್ವಲ್ಪ ತಿಳಿದುಕೊಳ್ಳುವಾ.

"ವರ್ಣ" ಎಂಬುವದು ಸಂಸ್ಕೃತ ಶಬ್ದವಿದ್ದು ಕನ್ನಡದಲ್ಲಿ "ಬಣ್ಣವೆಂದು ಅರ್ಥವಾಗುತ್ತದೆ. ಶೀತೋಷ್ಣಸ್ಥಿತಿಗಳ ಭೇದದಿಂದ ಪ್ರಪಂಚದ ಜನರು ಒಂದು ವಲಯದಲ್ಲಿ ಕಪ್ಪು ಬಣ್ಣವುಳ್ಳವರಾಗಿರುವುದೂ, ಬೇರೊಂದು ವಲಯದಲ್ಲಿ ಬಿಳೀ ಬಣ್ಣವುಳ್ಳವರಾಗಿರುವುದೂ, ಸ್ವಾಭಾವಿಕವು. ಮತ್ತು ಆಯಾ ವಲಯದಲ್ಲಿ ಭೂಮಿಯ ಗುಣ, ಹವೆಯ ಗುಣ, ಆಹಾರ ಇತ್ಯಾದಿಗಳನ್ನವಲಂಬಿಸಿ ಒಂದೊಂದು ದೇಶದಲ್ಲಿ ಒಂದೊಂದು ವಿಧವಾದ ಪದ್ಧತಿಗಳೂ, ಆಚಾರನಿಯಮಗಳೂ, ದೇಶಭಾಷೆಗಳೂ ರೂಢಿಯಲ್ಲಿ ಬಂದಿರುತ್ತವಾಗಲಿ ಸ್ವತಸ್ಸಿದ್ಧವಾದ ಮನುಷ್ಯತ್ವವು ಮಾತ್ರ ಎಲ್ಲಾಕಡೆಗೂ ಒಂದೇರೀತಿಯಲ್ಲಿರುತ್ತದೆ. ಇನ್ನು ಆಶ್ರಮಗಳೆಂದರೆ ಮನುಷ್ಯನ ಜೀವಮಾನ ಸಾರ್ಥಕದಲ್ಲಿ ಒಂದೊಂದು ಅಂಕವನ್ನು ಸೂಚಿಸುತ್ತವೆ. ಹಿಂದೂಗಳು ಜೀವಿತದ ನಾಟಕವನ್ನು ನಾಲ್ಕು ಅಂಕಗಳಾಗಿ ವಿಭಾಗಿಸಿರುತ್ತಾರೆ. ಷೇಕ್ಸಪಿಯರ್ ಕವಿಯು ಏಳು ಅಂಕಗಳಾಗಿ ವರ್ಣಿಸಿರುತ್ತಾನೆ. ಈ ದೃಷ್ಟಿಯಿಂದ ನೋಡಿದರೆ ವರ್ಣಾಶ್ರಮ ವಿಭಾಗವು ಸ್ತ್ರಿ ಪುರುಷ ವಿಭಾಗದಂತೆ ಸೃಷ್ಟ್ಯಾದಿಯಿಂದ ಬಂದಿರುತ್ತದೆಂದು ಹೇಳುವುದಕ್ಕೆ ಯಾವ ಆಕ್ಷೇಪವು ಇರಲಾರದು. ಪ್ರಕೃತಿಯನ್ನನುಸರಿಸಿರುವ ಈ ವಿಭಾಗವು ಕೇವಲ ಮನುಷ್ಯರಲ್ಲೇ ಏಕೆ? ಪಶುಪಕ್ಷಿ ಕ್ರಿಮಿಕೀಟಾದಿಗಳಲ್ಲಿ ಸಹ ಇರುವುದು.

ಆದರೆ ನಾವು ಈಗ ಚರ್ಚಿಸುತ್ತಿರುವ ವರ್ಣವಿಭಾಗವು ಮನುಷ್ಯನು ತನ್ನ ಅನುಕೂಲತೆಗಾಗಿ ಕಲ್ಪಿಸಿದ್ದು ಮತ್ತು ಪ್ರಕೃತಿಯ ನಿಯಮಕ್ಕೆ ವಿರೋಧವಾದದ್ದು. ಮಾನವ ನಿರ್ಮಿತ ಈ ಸಂಘಟನೆಯಲ್ಲಿ ವರ್ಣ ಎಂಬೀ ಶಬ್ದವು ಅರ್ಥವಿಲ್ಲದ್ದಾಗಿರುತ್ತದೆ. ಇದರ ಪ್ರಕಾರ ಮನುಷ್ಯರಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬುವರು ನಾಲ್ಕು ತರಗತಿಯ ಜನರಿರುವರು. ಇವರು ಅನುಕ್ರಮವಾಗಿ ಬ್ರಹ್ಮನ ಮುಖ ಬಾಹು ತೊಡೆಗಳು ಪಾದಗಳು ಇವುಗಳಲ್ಲಿ ಉದ್ಭವವಾದವರು. ಈ ನಾಲ್ಕು ತರಗತಿಗಳನ್ನು ಜನ್ಮಾಂತರದಲ್ಲಿ ಕ್ರಮವಾಗಿ ದಾಟಿ ಮೋಕ್ಷಮಂದಿರದ ಹಾದಿಯನ್ನು ಹಿಡಿಯಬೇಕು. ಒಂದೊಂದು ವರ್ಣದವರಿಗೆ ವಿಧಿನಿಯಮಗಳೂ, ಹಕ್ಕುಗಳೂ, ಮೋಕ್ಷ

ಸಂಪಾದನೆಯು ಮಾರ್ಗಗಳೂ ಕಾಲವೂ ಬೇರೆಬೇರೆಯಾಗಿ ಏರ್ಪಡಿಸಲ್ಪಟ್ಟಿವೆ. ಇದರಲ್ಲಿ ಮೊದಲನೇ ವರ್ಗದವರೇ ಜ್ಞಾನಕೋಶದ ಕೀಲಿಯು ಮಾಲಕರಾಗಿರುತ್ತಾರೆ. ಮತ್ತು ಪರಮಾತ್ಮನಿಗೆ ಮನುಷ್ಯರನ್ನು ಭೆಟ್ಟಿ ಮಾಡಿಸುವ ಏಜಂಟರಾಗಿರುತ್ತಾರೆ. ದೇವರ ಸಾನ್ನಿಧ್ಯವು ದೊರೆಯಬೇಕೆಂದರೆ ಇವರ ಮೂಲಕವೇ. ಅರ್ಥಾತ್ ಭೂಲೋಕದಲ್ಲಿ ದೇವರ ಪ್ರತಿನಿಧಿಗಳೇ ಇವರಾಗಿದ್ದು ದೇವರಿಗೆ ಸಲ್ಲುವ ಸೇವೆಗಳು ಮೊದಲು ಇವರಿಗೆ ಸಲ್ಲದೇ ವಿನಃ ಗತ್ಯಂತರವೇ ಇಲ್ಲ. ಇತರ ಜನರಿಗೆ ಅನ್ವಯಿಸುವ ವಿಧಿನಿಯಮಗಳು ಇವರಿಗೆ ಅನ್ವಯಿಸುವದಿಲ್ಲ. ಇವರು ಕಳುವನ್ನು ಮಾಡಿದರೆ ಅದು ಕಳ್ಳತನವೆನ್ನಿಸುವದಿಲ್ಲ. ಕಳೆದುಕೊಂಡವನು ಕೃತಾರ್ಥನಾದನೆಂದು ತಿಳಿದುಕೊಳ್ಳಬೇಕು. ಇವರು ಆಡಿದ್ದೇ ವೇದವಾಕ್ಯವು. ವೇದಾದಿಗಳನ್ನು ಓದಿ ಅರ್ಥ ಮಾಡುವದಕ್ಕೆ ಇವರೇ ಶಕ್ತರು. ಬಾಕಿಯವರು ವೇದಾದಿಗಳನ್ನು ಓದಲಿಕ್ಕೆ ಹತ್ತಿದರೆ ಸೃಷ್ಟಿನಿಯಮವೇ ತಪ್ಪಿ ಹೋಗಿ ಪ್ರಪಂಚವೆಲ್ಲವೂ ದೇವರ ಆಗ್ರಹಕ್ಕೆ ಪಾತ್ರವಾಗಿ ಅಕಾಲ ಮರಣಾದಿಗಳು ತಲೆದೋರುವವು. ಅದಕ್ಕೆ ಪ್ರತೀಕಾರವೆಂದರೆ ಓದಿದವನ ನಾಲಿಗೆಯನ್ನು ಕೀಳಿಸುವದೇ. ಇನ್ನು ನಾಲ್ಕನೇ ವರ್ಗದವರು ತಮ್ಮ ತನುಮನಧನಗಳಿಂದ ಮೇಲಿನ ಮೂರು ವರ್ಗದವರನ್ನು ಸೇವಿಸುವದನ್ನು ಬಿಟ್ಟು ಬೇರೇ ಹವ್ಯಾಸಕ್ಕೆ ಎಂದಿಗೂ ಹೋಗಬಾರದು. ತನ್ನ ಸ್ಥಾನವನ್ನತಿಕ್ರಮಿಸಿ ಚಲಿಸಿದರೆ ರೌರವಾದಿ ನರಕಗಳೇ ಗತಿ. ಸ್ವತಂತ್ರ ಜ್ಞಾನ ಸಂಪಾದನೆಯನ್ನು ಕನಸಿನಲ್ಲಾದರೂ ಚಿಂತಿಸಲಾಗದು.

ಮೇಲ್ಕಂಡ ಇಂಥ ಸ್ಥಿತಿಯು ದೇವರಿಂದ ನಿರ್ಮಿತವಾದುದೆಂದು ಹೇಳುವವರು ಜಗಜ್ಜನಕನಾದ ಪರಮಾತ್ಮನ ಮೇಲೆ ಎಂಥ ದೋಷಾರೋಪಣೆಯನ್ನು ಮಾಡಿದಂತಾಗುವದೆಂಬದನ್ನು ಅರಿಯರು. ಇಂಥಾ ಪಕ್ಷಪಾತಿಯಾದ ದೇವರಲ್ಲಿ ನಂಬಿಕೆಯನ್ನಿಡುವದಕ್ಕಿಂತಲೂ ನಾಸ್ತಿಕರಾಗಿರುವದೇ ಲೇಸೆಂದು ತೋರುತ್ತದೆ. ಮತ್ತು ಈ ಸಂಘಟನೆಯು ಜಗದಾದಿಯಿಂದ ಬಂದುದೆಂದು ಹೇಳುವರು. ಬಹುಶಃ "ಪಶುಬಲವೇ ಸರ್ವವಾಗಿದ್ದ ಕಾಲದಲ್ಲಿ ಮನುಷ್ಯರು ಮೃಗತುಲ್ಯರಾಗಿ ಪಾಶವೀವೃತ್ತಿಯಲ್ಲಿ ಚರಿಸುತ್ತಲಿದ್ದ ಪ್ಲಿಯಪ್ಟೊಸೀನ್ ಎಂಬ ಯುಗದಲ್ಲಿ ಮೇಲ್ಕಂಡ ಸ್ಥಿತಿಯು ಇದ್ದಿರಬಹುದು. ಆದರೆ ಆ ಯುಗವು *Prehistoric* ಚರಿತ್ರೆಗೆ ಅತೀತವಾಗಿರುವದರಿಂದ ನಮಗೆ ಅದರ ಗೋಷ್ಟಿಯೇ ಬೇಡ. ಆದರೆ—

ವೇದಕಾಲದಲ್ಲಿ ವರ್ಣಾಶ್ರಮ ಧರ್ಮವು ಇದ್ದಿತೇನೋ ವಿಚಾರಿಸುವ. ಇದ್ದಿತೆಂಬುದಕ್ಕೆ "ಬ್ರಾಹ್ಮಣೋಽಸ್ಯ ಮುಖಮಾಸೀತ್" ಎಂಬ ಶ್ಲೋಕವೊಂದನ್ನು ಪುರುಷಸೂಕ್ತದೊಳಗಿನದೆಂದು ತೋರಿಸುವರು. ಪುರುಷಸೂಕ್ತವು ವಿರಾಟಪುರುಷನಾದ ಶಿವನ ವರ್ಣನೆಯೂ ಸಂಸ್ತವನವೂ ಆಗಿದ್ದು ಅದರಲ್ಲಿ ಸಮಾಜದ ವಿಭಾಗವು ಏತಕ್ಕೆ ಬಂದಿತೆಂಬುವ ಶಂಕೆಯು ಬಾಧಿಸುವದು ಸಹಜವು. ಅದಕ್ಕೋಸ್ಕರವೇ ಅನೇಕ ಪಂಡಿತರು ಈ ಶ್ಲೋಕವು ಬ್ರಾಹ್ಮಣರ ಯುಗದಲ್ಲಿ ಸೇರಿಸಲ್ಪಟ್ಟಿತೆಂದು ಅಭಿಪ್ರಾಯಪಡುವರು. ಬೇರೆ ಕೆಲವರು ಸದರಿ ಮಂತ್ರಕ್ಕೆ ಪುರುಷ ವರ್ಣನೆಯ ಸಂಬಂಧವಾಗಿ ಬೇರೆ ಅರ್ಥವನ್ನು ಕೊಡುವರು. ವೇದಕಾಲದಲ್ಲಿ ನಿಜವಾಗಿಯೂ ಸಮಾಜವು ನಾಲ್ಕು ವರ್ಣಗಳಾಗಿ ವಿಭಾಗಿಸಲ್ಪಟ್ಟಿದ್ದರೆ ಆಗಿನ ಕಾಲದ ಪರಿಸ್ಥಿತಿಯನ್ನು ಅತ್ಯಂತ ವಿರಳವಾಗಿ ಚಿತ್ರಿಸಿರುವ ವೇದಗಳು ವರ್ಣಭೇದದ ವಿಷಯವಾಗಿ ಇಷ್ಟೇ ವರ್ಣಿಸಿಬಿಡುತ್ತಿದ್ದಿಲ್ಲ.

ಒಂದೊಂದು ಯುಗದ ಸಮಾಜದ ಪರಿಸ್ಥಿತಿಯನ್ನು ತಿಳಿದುಕೊಳ್ಳಬೇಕಾದರೆ ಆಯಾ ಯುಗದ ವಾಙ್ಮಯವು ಚರಿತ್ರಕಾರನಿಗೆ ಎಷ್ಟೊಂದು ಉಪಯೋಗವಾಗುತ್ತದೆಂಬುದಕ್ಕೆ ವೇದವಾಙ್ಮಯವೇ ಸಾಕ್ಷಿ. ವೇದಗಳ ಸಹಾಯದಿಂದ ಆಗಿನ ಆರ್ಯಾವರ್ತದ ಸ್ಥಿತಿಯನ್ನು ಬಹು ಚನ್ನಾಗಿ ಚಿತ್ರಿಸಬಹುದು. ವೇದಗಳನ್ನು ವಿಮರ್ಶಾತ್ಮಕ ದೃಷ್ಟಿಯಿಂದ ಓದಿದಲ್ಲಿ ಆರ್ಯರು ಮೊಟ್ಟಮೊದಲು ಉತ್ತರವಲಯದಿಂದ ಬಂದು ಸಿಂಧುನದಿಯನ್ನು ದಾಟಿ ಪಂಜಾಬಪ್ರಾಂತ್ಯದಲ್ಲಿ ನೆಲೆಸಿದರೆಂದೂ, ಅಲ್ಲಿಂದ ಅನಾರ್ಯರಾದ ದಸ್ಯುಗಳೊಡನೆ ಹೋರಾಡುತ್ತಾ ಮೆಲ್ಲಮೆಲ್ಲನೇ ಇಡೀ ಉತ್ತರಹಿಂದುಸ್ಥಾನವನ್ನೇ ಆಕ್ರಮಿಸಿಕೊಂಡರೆಂತಲೂ ತಿಳಿದುಬರುತ್ತದೆ. ಅವರು ಪಂಜಾಬಪ್ರಾಂತವನ್ನು ದಾಟಿಬರುವುದಕ್ಕೆ ಮುಂಚೆ ಕೃಷಿ ಮತ್ತು ಪಶುಪಾಲನೆಯೇ ಅವರ ಮುಖ್ಯ ಜೀವನೋಪಾಯಗಳಾಗಿದ್ದವು. ಶಬ್ದಶಾಸ್ತ್ರದ ರೀತ್ಯಾ "ಆರ್ಯ" ಶಬ್ದದ ಮೂಲವು ಕೃಷಿಕರ್ಮವನ್ನು ಸೂಚಿಸುತ್ತದೆ. ಋಗ್ವೇದದಲ್ಲಿ ಸಕಾಲ ಮಳೆಯನ್ನು ಕೊಡುವಂತೆ ಇಂದ್ರವರುಣಾದಿಗಳನ್ನು ಪ್ರಾರ್ಥಿಸುವುದು ಪಶುಗಳನ್ನು ಬಾಧಿಸದಂತೆ ಮತ್ತು ಪೈರು ಚನ್ನಾಗಿ ಬೆಳೆಯುವಂತೆ ಬೇಡಿಕೊಳ್ಳುವದು ಇವುಗಳೆಲ್ಲವೂ ಆಗಿನ ಆರ್ಯರ ಕಾಯಕವನ್ನು ತೋರಿಸುತ್ತವೆ. ಆಗ ಪಶುಗಳೇ ಅವರಿಗೆ ಆಸ್ತಿಯಾಗಿದ್ದು ಪಶು ಶಬ್ದದ ಈ ಅರ್ಥವು ಲ್ಯಾಟಿನ ಭಾಷೆಯ ರೂಪಾಂತರವಾದ (*Pecuniary*) ಎಂಬ ಆಂಗ್ಲ

ಶಬ್ದದಲ್ಲಿ ತೋರುವುದು. ಮತ್ತು ದನ (ಪಶು) ಈ ಶಬ್ದವು 'ಧನ' ಶಬ್ದದರೂಪಾಂತರವೆಂದು ಬೇರೆ ಹೇಳಬೇಕಾಗಿಲ್ಲ. ಹೀಗೆ ಬೇಕಾದಷ್ಟು ಉದಾಹರಣೆಗಳನ್ನು ಕೊಡಬಹುದು. ನಾವು ಆ ಗೋತ್ರದವರು ಈ ಗೋತ್ರದವರೆಂದು ಹೇಳಿಕೊಳ್ಳುತ್ತೇವಷ್ಟೆ. ಗೋತ್ರವೆಂದರೆ (ಆಕಳುಗಳ) ಹಟ್ಟಿಯೆಂದರ್ಥವಾಗುತ್ತದೆ. ಒಂದು ಹಟ್ಟಿಯಲ್ಲಿದ್ದವರು ಒಂದೇ ರಕ್ತಸಂಬಂಧದವರೆಂದು ತಿಳಿದುಕೊಂಡಿದ್ದರಾದ ಕಾರಣ ಅವರಲ್ಲಿ ಪರಸ್ಪರ ವಿವಾಹ ಸಂಬಂಧಗಳು ಜರುಗುತ್ತಿರಲಿಲ್ಲವಾದಕಾರಣ ಬೇರೊಂದು ಹಟ್ಟಿ (ಗೋತ್ರ) ಯಲ್ಲಿ ಹೆಣ್ಣುಗಂಡುಗಳನ್ನು ನೋಡಬೇಕಾಗುತ್ತಿದ್ದಿತು. ಈಗಲೂ ಅದೇ ರೂಢಿಯು ಬೇರೆ ಅರ್ಥದಲ್ಲಿ ಬಂದಿರುತ್ತದೆ.

ಋಗ್ವೇದಕಾಲದ ಆ ಕೃಷಿಕ (ಆರ್ಯ) ಸಮಾಜದಲ್ಲಿ ದೇವರ ಮತ್ತು ಮನುಷ್ಯರ ನಡುವೆ ದಲ್ಲಾಳಿಯನ್ನು ನಡಿಸುವ ಜನಾಂಗದವರು ಇರುತ್ತಿದ್ದಿಲ್ಲ. ಮನೆಯ ಹಿರಿಯನೇ ಧಾರ್ಮಿಕ ವಿಷಯದಲ್ಲಿ ಯಜಮಾನನು (ಅಗ್ನಿಹೋತ್ರವನ್ನು ಪಾಲಿಸುವವನು) ಆಗಿದ್ದನು. ಬಾಕಿಯುವರು ಕೃಷಿಕಾರ್ಯದಲ್ಲಿ ಮಗ್ನರಾಗಿದ್ದರು. ಮದುವೆಯಾಗದೇ ಇರುವ ಚಿಕ್ಕವನು ಮಾತ್ರ ಪಶುಗಳನ್ನು ಕಾಯಬೇಕಾಗಿದ್ದಿತು. *Bachelor* ಎಂದರೆ ಪಶುಗಳನ್ನು ಕಾಯುವವನು ಎಂದು ಅರ್ಥವಾಗುತ್ತಿದ್ದು ಈಗ ಅವಿವಾಹಿತನೆಂದು ಅರ್ಥವಾಗುತ್ತದೆ. ಆದರೆ ಆರ್ಯರ ಸಂಖ್ಯೆಯು ಹೆಚ್ಚಾದಂತೆ ಮತ್ತು ಅವರು ಹೆಚ್ಚು ಪ್ರದೇಶವನ್ನು ಆಕ್ರಮಿಸಲಾರಂಭಿಸಿದಂತೆ ಕರ್ಮವಿಭಾಗತತ್ವವನ್ನು (*Division of labour*) ಅನುಸರಿಸಿ ಆ ಕೃಷಿಕ ಸಮಾಜದಲ್ಲಿ ಬೇರೆ ಬೇರೆ ಪಂಗಡಗಳು ಏರ್ಪಡಲೂ ಅವಕಾಶವಾಯಿತು.

(ಮುಂದೆ ಸಾಗುವದು.)

# ಕೈ. ವಾ. ಚನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆಯು.

ದೊಡ್ಡ ಮನುಷ್ಯರ ಚರಿತ್ರೆಗಳು ಯಾವಾಗಲೂ ಬೋಧಪ್ರದವಾದವುಗಳು. ಇಂಥ ಜನರು ಕಾಲಕಾಲಕ್ಕೆ ಹುಟ್ಟುವದರಿಂದಲೇ ಜನಾಂಗವು ಮುಂದರಿಸುವದು. ಇವರು ತಮ್ಮ ಕೃತಿಗಳಿಂದಲೂ ಬೋಧದಿಂದಲೂ ಉದಾತ್ತ ವಿಚಾರಗಳನ್ನು ಸಮಾಜದಲ್ಲಿ ಹುಟ್ಟಿಸಿ, ಅವನ್ನು ತಕ್ಕ ಕಾರ್ಯಗಳನ್ನು ಮಾಡಲಿಕ್ಕೆ ಹಚ್ಚುವರು. ಇವುಗಳ ಸುಪರಿಣಾಮಗಳು ಅವರಿದ್ದ ಕಾಲದಲ್ಲಷ್ಟೇ ಅಲ್ಲ, ಅವರ ಮುಂದಿನ ಕಾಲದಲ್ಲಿಯೂ ಜನರಲ್ಲಿ ಶಾಶ್ವತವಾಗಿ ಉಳಿಯುವವು. ಆದ್ದರಿಂದ ಇಂಥ ಜನರ ಚರಿತ್ರೆಗಳನ್ನು ಲಕ್ಷಗೊಟ್ಟು ಅಭ್ಯಾಸಿಸುವದು ಬಹು ಮಹತ್ವವಾದದ್ದು. ಇದರಿಂದ ಮನಸ್ಸು ಸುಸಂಸ್ಕೃತವಾಗುವದಲ್ಲದೆ, ಪ್ರತಿಯೊಬ್ಬನಲ್ಲಿ ಶ್ರೇಷ್ಠಕಾರ್ಯಗಳನ್ನು ಮಾಡುವ ಸ್ಫೂರ್ತಿಯೂ ಉತ್ಸಾಹವೂ ಉಂಟಾಗುವವು.

ಹೋದ ಶತಮಾನದ ಪ್ರಾರಂಭದಲ್ಲಿ ನಮ್ಮ ಇಲಾಖೆಯು ಅತ್ಯಂತ ಖೇದಜನಕವಾದ ಸ್ಥಿತಿಯಲ್ಲಿತ್ತು. ಆಗ ಈ ಇಲಾಖೆಯ ದೊಡ್ಡ ಭಾಗವು ಪೇಶ್ವೆಯರ ಆಳಿಕೆಗೆ ಒಳಪಟ್ಟಿತ್ತು. ಆಗ ಎಲ್ಲಿ ನೋಡಿದರೂ, ಪುಂಡಾಟಿಕೆಗಳೂ ಅಂತಸ್ಥ ಕಲಹಗಳೂ ಕೊಳೆ ಸುಲಿಗೆಗಳೂ ನಿರಾತಂಕವಾಗಿ ನಡೆಯುತ್ತಿದ್ದವು. ಇಂಥ ಕಷ್ಟತಮವಾದ ಸ್ಥಿತಿಯೊಳಗಿಂದ ನಮ್ಮೀ ದೇಶವು ಪಾರಾಗಿ, ಸನ್ ೧೮೧೮ ರಲ್ಲಿ ಬ್ರಿಟಿಷ್ ರಾಜರ ಆಳಿಕೆಗೆ ಸೇರಿಕೊಂಡಿತು. ಅಂದಿನಿಂದ ಈ ಸೀಮೆಯಲ್ಲಿ ಶಾಂತತೆಯೂ ಸುವ್ಯವಸ್ಥೆಯೂ ತಲೆದೋರಹತ್ತಿದವು. ಬ್ರಿಟಿಶ್ ರಾಜರು ಅಲ್ಲಲ್ಲಿ ಶಾಲೆಗಳನ್ನು ಏರ್ಪಡಿಸಿ ಪ್ರಜೆಗಳಿಗೆ ವಿದ್ಯಾದಾನ ಮಾಡಹತ್ತಿದರು. ಆ ಕಾಲಕ್ಕೆ ದೇಶದಲ್ಲಿ ಅನೇಕ ಮಹನೀಯರು ಉತ್ಪನ್ನರಾಗಿ ಸಾಮಾಜಿಕ, ಶೈಕ್ಷಣಿಕ ಕಾರ್ಯಗಳನ್ನು ಮಾಡಹತ್ತಿದರು. ಈ ಬಗೆಯ ಶ್ರೇಷ್ಠಕಾರ್ಯಗಳಲ್ಲಿ ಕರ್ನಾಟಕದಲ್ಲಿ ಮೊದಲು ತೊಡಗಿದವರಲ್ಲಿ ನಮ್ಮ ಚರಿತ್ರ ನಾಯಕರಾದ ಚನ್ನಬಸಪ್ಪ ಬಸಲಿಂಗಪ್ಪ ಧಾರವಾಡ ಇವರೇ ಮುಖ್ಯರಾಗಿರುತ್ತಾರೆ. ಇವರು ಪಾಶ್ಚಿಮಾತ್ಯ ಶಿಕ್ಷಣ

ವನ್ನು ಪಡೆದು, ವಿದ್ಯಾಖಾತೆಯನ್ನು ಸೇರಿ, ಡಿಪ್ಯೂಟಿ ಎಜ್ಯುಕೇಶನಲ್ ಇನಸ್ಪೆಕ್ಟರರ ಉದ್ಯೋಗವನ್ನು ಕೈಕೊಂಡು, ನಮ್ಮ ಕರ್ನಾಟಕ ಸೀಮೆಯಲ್ಲಿ ವಿದ್ಯಾಪ್ರಸಾರ ಮಾಡುವ ಶ್ರೇಷ್ಠ ಕಾರ್ಯವನ್ನು ಮಾಡಹತ್ತಿದರು. ಇವರೇ ನಮ್ಮ ಕರ್ನಾಟಕ ಭಾವೀ ಸುಧಾರಣೆಯ ಬೀಜಾರೋಪಣೆಗೆ ಕಾರಣವಾಗಿದ್ದಾರೆ. ಇವರು ತೀರಿಕೊಂಡು ಇಂದಿಗೆ ೪೯ ವರ್ಷಗಳಾದವು. ಆದರೂ ಇವರು ಮಹಾಗಣಿತಜ್ಞರೂ ಕನ್ನಡ ಭಾಷೆಯ ಉತ್ಕಟಾಭಿಮಾನಿಗಳೂ ಕರ್ನಾಟಕ ದೇಶದ ಹಿತಚಿಂತಕರೂ ಅತ್ಯಂತ ಸಾಹಸಿಗರೂ ತೇಜಃಪುಂಜರೂ ಎಂಬ ಭಾವನೆಯು ಪ್ರತಿಯೊಬ್ಬ ಕನ್ನಡಿಗನ ಮನಸ್ಸಿನಲ್ಲಿ ಇನ್ನೂ ಬಾರದೆ ಇರುವದಿಲ್ಲ. ಇಂಥ ಮಹಾನುಭಾವರ ಗುಣಗಳ ವರ್ಣನೆಯು ಈ ಪುಸ್ತಕದಲ್ಲಿ ಎಷ್ಟು ಸಂಕ್ಷಿಪ್ತ ಮತ್ತು ಅಪೂರ್ಣವಾಗಿದ್ದರೂ ಅದು ವಾಚಕರಿಗೆ ಹೃದಯಂಗಮವಾಗದಿರಲಾರದೆಂದು ನಾನು ಭಾವಿಸುತ್ತೇನೆ.

## ಬಾಲ್ಯ.

ಚನ್ನಬಸಪ್ಪನವರ ಪೂರ್ವಜರ ಊರು ಬೆಳಗಾವಿ ಜಿಲ್ಲೆಯಲ್ಲಿರುವ ಗೋಕಾವಿಯು. ಇವರ ಅಜ್ಜಂದಿರ ಹೆಸರು ಅಪ್ಪಯ್ಯಪ್ಪನವರು. ಇವರು ಅದೇ ಊರಲ್ಲಿ ವ್ಯಾಪಾರ ಮಾಡುತ್ತಿದ್ದರು. ಮನೆಯಿಂದ ತಕ್ಕಮಟ್ಟಿಗೆ ಸ್ಥಿತಿವಂತರೂ ಇದ್ದರು. ಇವರಿಗೆ ಅಪ್ಪಣ್ಣಪ್ಪ ಮತ್ತು ಬಸಲಿಂಗಪ್ಪ ಎಂಬ ಇಬ್ಬರು ಮಕ್ಕಳು. ಇವರಲ್ಲಿ ಬಸಲಿಂಗಪ್ಪನವರೇ ಚನ್ನಬಸಪ್ಪನವರ ತಂದೆಯವರು. ಮನೆಯಲ್ಲಿ ಕೆಲವು ಕಾರಣಗಳ ಸಲುವಾಗಿ ಕೂಡಿ ಬಾರದ್ದರಿಂದ, ಬಸಲಿಂಗಪ್ಪನವರು ಗೋಕಾವಿಯನ್ನು ಬಿಟ್ಟು, ಧಾರವಾಡಕ್ಕೆ ಬಂದು ವ್ಯಾಪಾರದಿಂದ ತಮ್ಮ ಉಪಜೀವನವನ್ನು ಸಾಗಿಸಹತ್ತಿದರು.

ಬಸಲಿಂಗಪ್ಪನವರ ಹೆಂಡತಿಯವರ ಹೆಸರು ತಿಪ್ಪವ್ವನವರು. ಇವರ ಹೊಟ್ಟೆಯಿಂದ ದೊಡ್ಡ ಚನ್ನಬಸಪ್ಪನವರೂ ಸಣ್ಣ ಚನ್ನಬಸಪ್ಪನವರೂ ಎಂಬ ಇಬ್ಬರು ಮಕ್ಕಳು ಹುಟ್ಟಿದರು. ಇವರಲ್ಲಿ ದೊಡ್ಡ ಚನಬಸಪ್ಪನವರೇ ನಮ್ಮ ಚರಿತ್ರನಾಯಕರು. ಇವರು ಸನ್ ೧೮೩೩ ನೇ ಇಸ್ವಿಯಲ್ಲಿ ಧಾರವಾಡ ಪಟ್ಟಣದಲ್ಲಿ ಹುಟ್ಟಿದರು. ಇವರು ಹುಟ್ಟಿದ ಬಳಿಕ ಇವರ ತಂದೆಯವರು ಬಹಳ ದಿವಸ ಬಾಳಲಿಲ್ಲ. ಚನ್ನಬಸಪ್ಪನವರು ೬ ವರ್ಷದವರಿರುವಾಗಲೇ ಬಸಲಿಂಗಪ್ಪನವರು ತೀರಿಕೊಂಡರು. ಆದ್ದರಿಂದ ಮನೆತನವನ್ನು ಸಾಗಿಸುವ ಮತ್ತು ಮಕ್ಕಳನ್ನು ಜೋಪಾನ ಮಾಡುವ ಭಾರವೆಲ್ಲ ತಿಪ್ಪವ್ವನವರ ಮೇಲೆಯೇ ಬಿತ್ತು.

ತಿಪ್ಪವ್ವನವರು ಒಳ್ಳೆ ಎದೆಗಾರರಾಗಿದ್ದರು. ಅವರು ತಮ್ಮ ಗಂಡಂದಿರು ದೊರಕಿಸಿಟ್ಟ ಅಲ್ಪ ಸ್ವಲ್ಪ ದ್ರವ್ಯದ ಸಹಾಯದಿಂದ ಸಂಸಾರವನ್ನು ಸುಸೂತ್ರವಾಗಿ ಸಾಗಿಸಿದರು. ತಮ್ಮ ಮಕ್ಕಳು ವಿದ್ಯವನ್ನು ಕಲಿತು ಬುದ್ಧಿವಂತರಾಗಬೇಕೆಂಬ ಇಚ್ಛೆಯು ಅವರಲ್ಲಿ ಸಂಪೂರ್ಣವಾಗಿತ್ತು. ಇದೇ ಕಾರಣದಿಂದ ಚನ್ನಬಸಪ್ಪನವರು ಚನ್ನಾಗಿ ಅಭ್ಯಾಸಮಾಡಿ ದೊಡ್ಡ ಪದವಿಗೆ ಏರಲು ಶಕ್ತರಾದರು. ಮೊದಲು ಅವರ ತಾಯಿಯವರು ಅವರನ್ನು ಧಾರವಾಡದಲ್ಲಿದ್ದದ್ದೊಂದು ಹಳೇ ಪದ್ಧತಿಯ ಅಯ್ಯನವರ ಶಾಲೆಗೆ ಕಳಿಸಿದರು.

## ಪ್ರಾಥಮಿಕ ಶಿಕ್ಷಣ

ಚನ್ನಬಸವಪ್ಪನವರ ಗುರುಗಳ ಹೆಸರು ಶಿವರುದ್ರಯ್ಯನವರು. ಅವರ ಕೈಕೆಳಗೆ ಚನ್ನಬಸವಪ್ಪನವರ ಶಿಕ್ಷಣವು ಪ್ರಾರಂಭವಾಯಿತು. ಆದರೆ ಚನ್ನಬಸವಪ್ಪನವರು ಬಹಳೇ ಕಿಡಿಗೇಡಿ ಸ್ವಭಾವದವರಾಗಿದ್ದರು. ಉಡಾಳತನದಲ್ಲಿ ಅವರನ್ನು ಸರಿಗಟ್ಟುವವರು ಯಾರೂ ಇರಲಿಲ್ಲ. ಶಾಲೆಗೆ ಹೋಗುವದನ್ನು ತಪ್ಪಿಸಿ ತುಂಟ ಹುಡುಗರನ್ನು ಕೂಡಿಕೊಂಡು ಜಗಳ ತೆಗೆಯುವದೂ ಹುಡುಗರ ಬಹು ದಪ್ಪವಾದ ಪಾಟಿಗಳನ್ನು ಹುಡುಕಿ ಅವುಗಳನ್ನು ಗುದ್ದಿ ಒಡೆಯುವದೂ ಸಿಟ್ಟು ಬಂದರೆ ಮನೆಯೊಳಗಿನ ಸಾಮಾನುಗಳನ್ನು ಬೀದಿಯ ಮೇಲೆ ಬೀಸಾಡುವದೂ, ಇವೇ ಮೊದಲಾದ ದುರ್ಗುಣಗಳು ಇವರಲ್ಲಿ ಸಂಪೂರ್ಣವಾಗಿದ್ದವು. ಆದ್ದರಿಂದ ಅವರ ಅಭ್ಯಾಸವು ಪ್ರಾರಂಭದಲ್ಲಿ ಚನ್ನಾಗಿ ನಡೆಯಲಿಲ್ಲ. ಆದರೆ ಅವರಲ್ಲಿದ್ದ ಚುರುಕುಬುದ್ಧಿಯನ್ನೂ, ಜ್ಞಾಪಕಶಕ್ತಿಯನ್ನೂ, ಅವರ ಗುರುಗಳೂ ತಾಯಿಯವರೂ ಕಂಡು ಅವರಿಗೆ ಚನ್ನಾಗಿ ವಿದ್ಯೆ ಕಲಿಸಬೇಕೆಂದು ಅಪೇಕ್ಷಿಸಿದರು. ತಾಯಿಯವರು ಅವರ ತುಂಟತನಕ್ಕಾಗಿ ಅವರನ್ನು ಮೇಲಿಂದ ಮೇಲೆ ದಂಡಿಸುತ್ತಿದ್ದರು. ಶಿವರುದ್ರಯ್ಯನವರಾದರೂ ಅವರನ್ನು ಹಾದಿಗೆ ತರಲು ತಮ್ಮಿಂದಾದಷ್ಟು ಯತ್ನಿಸುತ್ತಿದ್ದರು. ಆದರೆ ಅವೆಲ್ಲವೂ ಮೊದಲಿಗೆ ನಿಷ್ಫಲವಾದವು. ಕಟ್ಟಕಡೆಗೆ ಒಂದು ದಿವಸ ಗುರುಗಳು ಚನ್ನಬಸವಪ್ಪನವರಿಗೆ ಚನ್ನಾಗಿ ಸಿಟ್ಟು ಮಾಡಿ ಒಳಿತಾಗಿ ಹೊಡೆದರು. ಅಂದಿನಿಂದ ಮಾತ್ರ ಅವರು ತಮ್ಮ ಕಿಡಿಗೇಡಿತನವನ್ನು ಅಲ್ಪಸ್ವಲ್ಪ ಬಿಟ್ಟುಕೊಟ್ಟರೆಂದು ಹೇಳುತ್ತಾರೆ. ಇದು ಹ್ಯಾಗೇ **ಇರಲಿ.**

ಚನ್ನಬಸವಪ್ಪನವರು ಮುಂದೆ ಉಡಾಳತನವನ್ನು ಬಿಟ್ಟು ತಮ್ಮ ಅಭ್ಯಾಸಕ್ಕೆ ಮನಸ್ಸು ಹಾಕಹತ್ತಿದರು. ಅಂದಿನಿಂದ ಅವರ ಅಭ್ಯಾಸವು ನಿರಾತಂಕವಾಗಿ ಸಾಗಹತ್ತಿತು. ಅವರು ತಮ್ಮ ಗುರುಗಳ ಕೈಕೆಳಗೆ ಕನ್ನಡ, ಮರಾಠೀ ಓದುಬರಹವನ್ನೂ ಹಳೇ ಪದ್ಧತಿಗೆ ಸರಿಯಾಗಿ ಗಣಿತ ಮತ್ತು ಬಾಯಿಲೆಖ್ಖವನ್ನೂ ಕಲಿತುಕೊಂಡರು.

ಆ ಕಾಲದಲ್ಲಿ ಇಂಗ್ಲಿಷ್ ಕಲಿತವರು ಬಹಳ ಸ್ವಲ್ಪ ಜನರಿದ್ದರು. ಯಾಕೆಂದರೆ ಇಂಗ್ಲಿಷ್ ಕಲಿಯಲಪೇಕ್ಷಿಸುವವರು ಆಗ ಪುಣೆ ಮತ್ತು ಮುಂಬಯಿ ಪಟ್ಟಣಗಳಿಗೆ ಹೋಗಬೇಕಾಗುತ್ತಿತ್ತು. ಆದರೆ ಕೋರ್ಟು ಕಚೇರಿಗಳಲ್ಲಿ ಇಂಗ್ಲಿಷ್ ಭಾಷೆಯು ನಡೆಯುತ್ತಿದ್ದದರಿಂದ ಇಂಗ್ಲಿಷ್ ಕಲಿತವರಿಗೆ ಯೋಗ್ಯತೆಯ ಸ್ಥಳಗಳು ಆಗ ತೀವ್ರವಾಗಿ ದೊರೆಯುತ್ತಿದ್ದವು. ಆದ್ದರಿಂದ ಚನ್ನಬಸವಪ್ಪನವರಲ್ಲಿ ಇಂಗ್ಲಿಷ್ ಕಲಿಯಬೇಕೆಂಬ ಅಪೇಕ್ಷೆಯು ಹುಟ್ಟಹತ್ತಿತು. ಮತ್ತು ಅವರು ಅಭ್ಯಾಸಮಾಡಿದ ಹಾಗೆ ವಿದ್ಯೆಯ ಅಭಿರುಚಿಯೂ ಅವರಲ್ಲಿ ಹೆಚ್ಚಾಗುತ್ತಲೇ ನಡೆಯಿತು. ಮತ್ತು ಅವರಲ್ಲಿ ಮಹತ್ವಾಕಾಂಕ್ಷೆಯೂ ಬೆಳೆಯಹತ್ತಿತು. ಕಟ್ಟಕಡೆಗೆ ಕೆಳಗೆ ಕಾಣಿಸಿದ ಸಂಗತಿಯು ವರ್ತಿಸಿತು.

ಒಂದುದಿನ ಚನ್ನಬಸವಪ್ಪನವರು ಸಂಜೆಯ ಹೊತ್ತಿನಲ್ಲಿ ರೊಟ್ಟೀ ತಿನ್ನುತ್ತ ಹಿತ್ತಿಲಲ್ಲಿ ಕುಳಿತಿದ್ದರು. ತಾಯಿಯವರು ಅವರ ಹತ್ತರವೇ ಕೆಲಸಮಾಡುತ್ತ ಕುಳಿತುಕೊಂಡಿದ್ದರು. ಅಗ ಚನ್ನಬಸವಪ್ಪನವರ ಮನಸ್ಸಿನಲ್ಲಿ ಯಾವದೋ ಒಂದು ದೀರ್ಘವಿಚಾರವು ಹುಟ್ಟಿದಂತೆ ಕಂಡುಬಂತು. ಆ ಮೇಲೆ ಅವರು ಒಮ್ಮಿಂದೊಮ್ಮೆಲೇ— "ಅವ್ವಾ ನಾನು ಪುಣೆಗೆ ಕಲಿಯಲಿಕ್ಕೆ ಹೋಗುತ್ತೇನೆ. ನನಗೆ ಖರ್ಚಿಗೆ ರೂಪಾಯಿ ಕೊಡು" ಎಂದು ತಾಯಿಯವರನ್ನು ಕೇಳಿದರು. ಆದಕ್ಕೆ ತಾಯಿಯವರು ಇವನು ಹುಡುಗಾಟಿಕೆ ಮಾಡುತ್ತಿರಬಹುದೆಂದೆಣಿಸಿ ಏನೂ ಉತ್ತರಕೊಡಲಿಲ್ಲ. ಪುಣೆಯು ಧಾರವಾಡದಿಂದ ಬಹುದೂರದ ಸ್ಥಳವು; ಅಲ್ಲಿಯ ಭಾಷೆಯು ಬೇರೆ, ಜಾತಿ ಬಾಂಧವರಾರೂ ಇಲ್ಲ; ಆದ್ದರಿಂದ ತನ್ನಂಥ ಚಿಕ್ಕ ವಯಸ್ಸಿನವರನ್ನು ಅಲ್ಲಿಗೆ ಕಳಿಸಲಿಕ್ಕೆ ತಾಯಿಯವರು ಒಪ್ಪಲಾರರೆಂದು ಚನ್ನಬಸವಪ್ಪನವರು ಹಾಗೆಯೇ ಸುಮ್ಮನಾದರು. ಆ ಮೇಲೆ ದಿನದಂತೆ ರಾತ್ರೀ ತಾಯಿಮಕ್ಕಳು ಊಟಮಾಡಿ ಮಲಗಿಕೊಂಡರು. ಚನ್ನಬಸವಪ್ಪನವರಿಗೆ ಆ ರಾತ್ರೀ ನಿದ್ರೆ ಬರಲಿಲ್ಲ. ಅವರ ಮನಸ್ಸಿನಲ್ಲಿ ನಾನಾತರದ ಕಲ್ಪನೆಗಳು

ಒಂದೆರೆ ತರುವಾಯ ಮತ್ತೊಂದು ಬರಹತ್ತಿದವು. ಕಟ್ಟಕಡೆಗೆ ತಾಯಿ ಯವರಿಗೆ ಗಾಢನಿದ್ರೆಯು ಹತ್ತಿತೆಂತು ತಿಳಿದ ಕೂಡಲೇ, ಅವರು ಮೆಲ್ಲಗೆ ಹಾಸಿಗೆಯಿಂದೆದ್ದು ತಾಯಿಯವರು ರೂಪಾಯಿಗಳನ್ನು ಇಡುತ್ತಿದ್ದ ಪೆಟ್ಟಿಗೆಯ ಬಳಿಗೆ ಹೋಗಿ, ಅದನ್ನು ತೆಗೆದುನೋಡಿದರು. ಅದರಲ್ಲಿ ೩ ರೂಪಾಯಿ ೧೦ ಆಣೆಗಳು ಮಾತ್ರ ಇದ್ದವು. ಅವುಗಳನ್ನು ತಮ್ಮ ಕಿಸೆ ಯಲ್ಲಿ ಹಾಕಿಕೊಂಡು ಮೆಲ್ಲನೆ ಮನೆಯಿಂದ ಹೊರಗೆ ಬಿದ್ದರು. ಮತ್ತು ರಾತ್ರೀ ಕಾಲದಲ್ಲಿಯೇ ಪುಣೇಪಟ್ಟಣದ ಹಾದಿಯನ್ನು ಹಿಡಿದರು.

ಚನ್ನಬಸವಪ್ಪನವರು ಇನ್ನೂ ಚಿಕ್ಕವರಿರುವಾಗಲೇ ಈ ಬಗೆಯ ಧೈರ್ಯದ ಕೆಲಸವನ್ನು ಕೈಕೊಂಡದ್ದಕ್ಕೆ ವಾಚಕರು ಆಶ್ಚರ್ಯಪಡಬ ಹುದು. ಆದರೆ ಅವರು ಆಶ್ಚರ್ಯಪಡುವ ಕಾರಣವಿಲ್ಲ. ಯಾಕಂದರೆ ಇಂಥ ಧೈರ್ಯದ ಮತ್ತು ಸಾಹಸದ ಮನೋವೃತ್ತಿಯು ಚನ್ನಬಸವ ಪ್ಪನವರಲ್ಲಿ ಸ್ವಾಭಾವಿಕವಾಗಿಯೇ ಇತ್ತು. ಆ ಮೇಲೆ ಅವರು ಪಾದ ಚಾರಿಗಳಾಗಿ ಪುಣೇಪಟ್ಟಣದ ಹಾದೀ ಹಿಡಿದರು. ಅವರ ಹತ್ತರವಿದ್ದ ಅಲ್ಪ ಹಣವು ೨—೩ ದಿವಸಗಳಲ್ಲಿಯೇ ತೀರಿಹೋಯಿತು. ಪುಣೇಪಟ್ಟ ಣವು ಇನ್ನೂ ಬಹು ದೂರವಿದ್ದದರಿಂದಲೂ, ಅವರ ಅಜ್ಜಂದಿರ ಮನೆ ಯಿರುವ ಗೋಕಾವಿಯು ತಮ್ಮ ಹಾದಿಯ ಬಳಿಯಲ್ಲಿಯೇ ಇದ್ದದ ರಿಂದಲೂ, ಅಲ್ಲಿಗೆ ಹೋಗಬೇಕೆಂದು ಅವರ ಮನಸ್ಸಿನಲ್ಲಿ ಬಂದಿತು. ಅಲ್ಲಿ ಅವರ ಕಕ್ಕಂದಿರ ಮಕ್ಕಳಾದ ಅಮರಪ್ಪನವರು ಇರುತ್ತಿದ್ದರು. ಆಗ ಚನ್ನಬಸವಪ್ಪನವರು ಅವರ ಕಡೆಗೆ ಹೋಗಿ ತಾವು ಪುಣೆಗೆ ವಿದ್ಯೆ ಕಲಿ ಯಲಿಕ್ಕೆ ಹೋಗುವೆವೆಂದು ಅವರಿಗೆ ಹೇಳಿದರು. ಆದರೆ ಅಮರಪ್ಪನ ವರು ಚನ್ನಬಸಪ್ಪನವರಿಗೆ ಏನೂ ಉತ್ತೇಜನ ಕೊಡಲಿಲ್ಲ. ಅಲ್ಲಿ ನಾಗಪ್ಪ ಗಿರಾಮರ ಎಂಬವರೊಬ್ಬರು ಚನ್ನಬಸವಪ್ಪನವರ ತಂದೆಗಳ ಚಿಕ್ಕಂದಿನ ಗೆಳೆಯರಾಗಿದ್ದರು. ಅವರು ಚನ್ನಬಸವಪ್ಪನವರ ಸಾಹಸ ಮತ್ತು ವಿದ್ಯೆ ಕಲಿಯಬೇಕೆಂಬ ಉತ್ಕಟೇಚ್ಛೆ ಇವುಗಳನ್ನು ನೋಡಿ ಬಹು ಸಂತೋಷ ಪಟ್ಟು ಅವರಿಗೆ ೫೦ ರೂಪಾಯಿಗಳನ್ನು ಕೊಟ್ಟರು. ಈ ಹಣವನ್ನು ಚನ್ನಬಸವಪ್ಪನವರು ತೆಗೆದುಕೊಂಡು ಪುಣೇಪಟ್ಟಣಕ್ಕೆ ಹೋಗಿ ಮುಟ್ಟಿ ದರು. ಪುಣೇ ಪಟ್ಟಣದಲ್ಲಿ ಚನ್ನಬಸವಪ್ಪನವರ ಮಿತ್ರರಾಗಲಿ ಗುರುತಿ ನವರಾಗಲಿ ಯಾರೂ ಇದ್ದಿದ್ದಿಲ್ಲ. ಹೀಗಿದ್ದರೂ ಅವರು ಎದೆಗುಂದಲಿಲ್ಲ. ಪುಣೇ ಪಟ್ಟಣವು ಬಹುಕಾಲದಿಂದ ವಿದ್ಯಾಪ್ರೋತ್ಸಾಹನದಲ್ಲಿ ಹೆಸರಾದ

ಪಟ್ಟಣವು. ಅಲ್ಲಿ ವಿದ್ಯಾಪ್ರಿಯರಾದ ಉದಾರ ಸದ್ಗೃಹಸ್ಥರು ಅನೇಕ ರಿದ್ದರು. ಅವರು ಬಡ ವಿದ್ಯಾರ್ಥಿಗಳಿಗೆ ತಮ್ಮಿಂದಾದಷ್ಟು ಸಹಾಯ ಮಾಡುತ್ತಿದ್ದರು. ಚನ್ನಬಸವಪ್ಪನವರು ತುಸು ದಿವಸಗಳಲ್ಲಿಯೇ ಗೋ ವಿಂದರಾವ ಮಹೇಂದಳೀಕರ ಎಂಬ ಒಬ್ಬ ಶ್ರೀಮಂತರೂ ಉದಾರರೂ ಆದ ಗೃಹಸ್ಥರ ಪರಿಚಯ ಮಾಡಿಕೊಂಡರು. ಇವರು ಚನ್ನಬಸವಪ್ಪ ನವರ ಸಾಹಸಕ್ಕೆ ಮೆಚ್ಚಿ ಅವರು ಪುಣೆಯಲ್ಲಿರುವವರೆಗೆ ಅನೇಕ ರೀತಿ ಯಿಂದ ಅವರಿಗೆ ಸಹಾಯ ಮಾಡಿದರು.

## ಮಾಧ್ಯಮಿಕ ಮತ್ತು ಉಚ್ಚಶಿಕ್ಷಣ.

ಚನ್ನಬಸವಪ್ಪನವರು ಪುಣೆಯಲ್ಲಿಯ ಒಂದು ಇಂಗ್ಲಿಷ್ ಶಾಲೆಗೆ ಹೋಗಹತ್ತಿದರು. ತಮ್ಮ ಊಟದ ಮತ್ತು ಇರುವ ಸ್ಥಳದ ವ್ಯವಸ್ಥೆ ಯಾದ ಬಳಿಕ ಅವರು ತಮ್ಮ ತಾಯಿಯವರಿಗೆ ತಾವು ಪುಣೆಗೆ ಬಂದ ವೃತ್ತಾಂತವನ್ನು ತಿಳಿಸಿ ಅವರನ್ನು ಅಲ್ಲಿಗೆ ಕರಿಸಿಕೊಂಡರು. ತಿಪ್ಪವ್ವ ನವರಾದರೂ ಚನ್ನಬಸವಪ್ಪನವರ ಸಾಹಸಕ್ಕೆ ಸಂತೋಷಬಟ್ಟು ಕೂಡಲೇ ಪುಣೆಗೆ ಹೋಗಿ ಅವರ ಹತ್ತರವೇ ಇರಹತ್ತಿದರು. ಅವರು ಚನ್ನಬಸ ವಪ್ಪನವರ ವಿದ್ಯಾಭ್ಯಾಸವು ಮುಗಿಯುವ ವರೆಗೆ ಪುಣೆಯಲ್ಲಿಯೇ ಇದ್ದರು.

ಸುತ್ತಲಿನ ಕಠಿಣ ಪರಿಸ್ಥಿತಿಯು ಮನುಷ್ಯನ ದುರ್ಗುಣಗಳನ್ನು ಬಿಡಿಸಿ ಸುಮಾರ್ಗಕ್ಕೆ ಹಚ್ಚುತ್ತದೆಂಬ ಮಾತು ಸುಳ್ಳಲ್ಲ. ಯಾಕೆಂದರೆ ಚನ್ನಬಸವಪ್ಪನವರು ತಮ್ಮ ಮುಂಚಿನ ತುಂಟುತನವನ್ನು ಬಿಟ್ಟು ಪುಣೆ ಯಲ್ಲಿ ತಪ್ಪದೆ ಶಾಲೆಗೆ ಹೋಗಹತ್ತಿದರು. ಮತ್ತು ಮನಮುಟ್ಟಿ ಅಭ್ಯಾ ಸ ಮಾಡಲಾರಂಭಿಸಿದರು. ಆ ಮೇಲೆ ಅವರು ಇಂಗ್ಲಿಷ್ ಶಾಲೆಯೊಳ ಗಿನ ಅಭ್ಯಾಸವನ್ನು ಮುಗಿಸಿಕೊಂಡು ಇಂಜನೀಯರಿಂಗ್ ಕಾಲೇಜಕ್ಕೆ ಸೇರ್ಪಡೆಯಾದರು. ಅವರು ಗಣಿತದಲ್ಲಿ ಬಹು ಮೇಲುಬುದ್ಧಿಯುಳ್ಳ ವರೂ ಆಧುನಿಕ ಶಾಸ್ತ್ರೀಯ ವಿಷಯಗಳಲ್ಲಿ ಬಹಳೇ ಆಸಕ್ತಿಯುಳ್ಳವರೂ ಇದ್ದದರಿಂದ ಈ ಕಾಲೇಜಿನಲ್ಲಿ ೧೦ ರೂಪಾಯಿಗಳ ಸ್ಕಾಲರಶಿಪ್ಪನ್ನು ಬೇಗನೇ ಸಂಪಾದಿಸಿದರು. ಇದರ ಸಹಾಯದಿಂದಲೂ ತಿಪ್ಪವ್ವನವರ ಹತ್ತರವಿದ್ದ ಅಲ್ಪ ಸ್ವಲ್ಪ ಹಣದಿಂದಲೂ ತಮ್ಮ ಖರ್ಚುವೆಚ್ಚಗಳನ್ನು ಸಾಗಿಸಿಕೊಂಡು ಚನ್ನಾಗಿ ವಿದ್ಯಾಭ್ಯಾಸ ಮಾಡಹತ್ತಿದರು. ಇವರ ತೀಕ್ಷ್ಣ ಬುದ್ಧಿಯನ್ನೂ ಗಣಿತಜ್ಞತೆಯನ್ನೂ ನೋಡಿ ಯಾವತ್ತು ಪ್ರೊಫೆಸರರು

ಅವರಲ್ಲಿ ಮುಖ್ಯವಾಗಿ ಮಹಾರಾಷ್ಟ್ರದಲ್ಲಿ ಆಗ ಪ್ರಸಿದ್ಧ ಗಣಿತಜ್ಞರೆಂದು ಅತ್ಯಂತ ಹೆಸರುವಾಸಿಗಳಾದ ಕೇರೋಪಂತ ನಾನಾ ಛತ್ರೆ ಎಂಬವರು ಚನ್ನಬಸವಪ್ಪನವರನ್ನು ಬಹು ಪ್ರೀತಿಸಲಾರಂಭಿಸಿದರು. ಕಾಲೇಜದಲ್ಲಿ ಚನ್ನಬಸವಪ್ಪನವರಿಗೆ ದಾಜೀ ನೀಲಕಂಠ ಎಂಬ ಇನ್ನೊಬ್ಬ ಸ್ನೇಹಿತರಿದ್ದರು. ಇವರಾದರೂ ಗಣಿತದಲ್ಲಿ ಬಹು ವಿಚಕ್ಷಣರಾಗಿದ್ದರು. ಇವರೆಲ್ಲರೂ ಕೂಡಿಕೊಂಡು ಗಣಿತದ ಪ್ರಶ್ನಗಳನ್ನು ಬಿಡಿಸುವದರಲ್ಲಿ ಆನಂದದಿಂದ ಕಾಲಕಳೆಯುತ್ತಿದ್ದರು. ಚನ್ನಬಸವಪ್ಪನವರು ತಮ್ಮ ಉಳಿದ ವೇಳೆಯನ್ನು ವ್ಯರ್ಥವಾಗಿ ಕಳೆಯದೆ ಗ್ರಂಥಾವಲೋಕನದಲ್ಲಿಯೇ ಹಾಕುತ್ತಿದ್ದರು. ಆದರೆ ಅವರು ಬಹಳ ವಿಚಾರಶಾಲಿಗಳಾಗಿದ್ದದರಿಂದ ಕಟ್ಟುಕಥೆಗಳನ್ನೂ ನಾಟಕಗಳನ್ನೂ ಓದದೆ ಶಾಸ್ತ್ರೀಯ ಗ್ರಂಥಗಳನ್ನು ಅಂದರೆ ತತ್ವಜ್ಞಾನ ಮಾನಸ ಮತ್ತು ನೈತಿಕಶಾಸ್ತ್ರ ಇಂಥ ಮೇಲ್ತರದ ಗ್ರಂಥಗಳನ್ನೇ ಓದುತ್ತಿದ್ದರು. ಕಾಲೇಜದಲ್ಲಿದ್ದಾಗ ಗಣಿತ ಮತ್ತು ತತ್ವಜ್ಞಾನ ಇವೆರಡು ವಿಷಯಗಳ ಮೇಲೆ ಅವರಲ್ಲಿ ಹುಟ್ಟಿದ ಪ್ರೀತಿಯು ಸ್ಥಿರವಾಗಿ ಉಳಿದು ಅವುಗಳ ವ್ಯಾಸಂಗವನ್ನು ಅವರು ಆ ಮರಣಾಂತ ಮಾಡುತ್ತಿದ್ದರು.

ಜಗತ್ತಿನಲ್ಲಿ ಮನುಷ್ಯನು ಬರೇ ತನ್ನ ಬುದ್ಧಿವಂತಿಕೆಯಿಂದ ಮುಂದಕ್ಕೆ ಬರಲಾರನು. ಅವನ ಬುದ್ಧಿವಂತಿಕೆಯೊಂದಿಗೆ ನೈತಿಕಧೈರ್ಯ ನಿಷ್ಕಪಟತನ, ಸಾಹಸ ಮೊದಲಾದ ಸದ್ಗುಣಗಳು ಅವಶ್ಯವಾಗಿ ಇರಬೇಕಾಗುತ್ತವೆ. ಒಂದುವೇಳೆ ಆತನಲ್ಲಿ ಕುಶಾಗ್ರಬುದ್ಧಿಯು ಕಡಿಮೆ ಇದ್ದರೂ ಮೇಲ್ಕಂಡ ಸದ್ಗುಣಗಳು ಸಂಪೂರ್ಣವಾಗಿದ್ದರೆ, ಅವನು ಸಮಾಜಕ್ಕೆ ಹೆಚ್ಚು ಉಪಯೋಗವುಳ್ಳವನಾಗುವನು. ಆದರೆ ಸದ್ಗುಣಗಳು ಚಿಕ್ಕಂದಿನಲ್ಲಿ ದೊರೆತ ಶಿಕ್ಷಣ, ವಿದ್ಯಾಭ್ಯಾಸಪದ್ಧತಿ, ಸಂಗತಿ ಇವೇ ಮೊದಲಾದ ಪರಿಸ್ಥಿತಿಯ ಮೇಲೆ ಬಹಳ ಅವಲಂಬಿಸಿರುತ್ತವೆ. ಆದ್ದರಿಂದ ಶಿಕ್ಷಣವು ಪ್ರಾರಂಭವಾದಂದಿನಿಂದ ಅದು ಮುಗಿಯುವ ವರೆಗೆ ವಿದ್ಯಾರ್ಥಿಗೆ ಯೋಗ್ಯ ಸಂಸ್ಕಾರಗಳು ಉಂಟಾಗಲಿಕ್ಕೆ ಎಲ್ಲ ಅನುಕೂಲತೆಗಳಿರುವದು ಬಹು ಮಹತ್ವವಾದದ್ದು. ಆದರೆ ಚನ್ನಬಸವಪ್ಪನವರ ಸುದೈವದಿಂದ ಅವರಿಗೆ ಈ ಎಲ್ಲ ಅನುಕೂಲತೆಗಳು ಪುಣೆಪಟ್ಟಣದಲ್ಲಿ ಉಂಟಾಗಿದ್ದವು. ಅವರ ಬುದ್ಧಿವಂತಿಕೆಯು ಅಪ್ರತಿಮವಾಗಿತ್ತು. ಅದರಂತೆ ಅವರಿಗೆ ತಕ್ಕ ಗುರುಗಳೂ ದೊರೆದಿದ್ದರು. ಪ್ರಗತಿಪರವಾದ ಪುಣೆಯ ಸಾನಿಧ್ಯವೂ ಒದಗಿತ್ತು. ಪುಣೆಯು ಮುಖ್ಯ ವಿದ್ಯಾಪೀಠವಾಗಿದ್ದು ಅಲ್ಲಿ ಸಾಮಾಜಿಕ ವಿ

ದ್ಯಾವಿಷಯಕ ಮತ್ತು ಔದ್ಯೋಗಿಕ ಪ್ರಯತ್ನಗಳ ವಿಷಯವಾಗಿ ಆಗಿಂದಾಗ್ಗೆ ಸಭೆಗಳಾಗುತ್ತಿದ್ದವು. ಅವುಗಳಿಗೆ ಚನ್ನಬಸವಪ್ಪನವರು ತಪ್ಪದೆ ಹೋಗುತ್ತಿದ್ದರು. ಆದರೆ ಅವರು ಈ ಸಭೆಗಳಿಗೆ ಬರೇ ಪ್ರೇಕ್ಷಕರಾಗಿ ಹೋಗದೆ ಸ್ವಾಭಾವಿಕವಾಗಿ ಧೈರ್ಯಸ್ಥರೂ ವಾಕ್ಪಟುಗಳೂ ಇದ್ದದರಿಂದ ಈ ಸಭೆಗಳಲ್ಲಿ ಮಾತಾಡಲಿಕ್ಕೆ ಅವರು ಎಂದೂ ಹಿಂಜರಿಯುತ್ತಿದ್ದಿಲ್ಲ. ಈ ರೀತಿಯಿಂದ ಸಾರ್ವಜನಿಕ ಕಾರ್ಯಗಳನ್ನು ಮಾಡುವ ಪ್ರೀತಿಯು ಚಿಕ್ಕ ವಯಸ್ಸಿನವರಿರುವಾಗಲೇ ಅವರಲ್ಲಿ ಹುಟ್ಟಹತ್ತಿತು.

ಈ ಮೇರೆಗೆ ಚನ್ನಬಸವಪ್ಪನವರು ಉತ್ತಮ ರೀತಿಯಿಂದ ತಮ್ಮ ಅಭ್ಯಾಸವನ್ನು ಮುಗಿಸಿ, ಕಾಲೇಜದ ಕಡೇ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಆಮೇಲೆ ಅವರು ಕೆಲವು ದಿವಸ ಅದೇ ಎಂಜನೀಯರಿಂಗ ಕಾಲೇಜದಲ್ಲಿ ಪ್ರೊಫೆಸರರಾಗಿ ನೇಮಿಸಲ್ಪಟ್ಟರು. ಈ ಅವಧಿಯು ತೀರಿದಬಳಿಕ, ಅವರು ಧಾರವಾಡಕ್ಕೆ ಬಂದರು. ಇದೇ ಕಾಲಕ್ಕೆ ಇಂಗ್ಲಂಡಿನಲ್ಲಿ ಕೂಪರ್ಸಹಿಲ್ಲ ಎಂಜನೀಯರಿಂಗ ಕಾಲೇಜವು ಸ್ಥಾಪಿಸಲ್ಪಟ್ಟಿತ್ತು. ಆ ಕಾಲೇಜಕ್ಕೆ ಹಿಂದೀ ವಿದ್ಯಾರ್ಥಿಗಳನ್ನು ಕಳಿಸುವ ವಿಷಯದಲ್ಲಿಯೂ ಮೇಲ್ತರದ ಉದ್ಯೋಗಗಳನ್ನು ಹಿಂದೀ ಜನರಿಗೆ ಕೊಡುವ ವಿಷಯದಲ್ಲಿಯೂ ದಾದಾಭಾಯಿ ನವರೋಜಿಯವರು ಪ್ರಯತ್ನ ನಡಿಸಿದ್ದರು. ಅವರು ಕೂಪರ್ಸಹಿಲ್ಲ ಕಾಲೇಜಕ್ಕೆ ಕಳಿಸಿಕೊಡಲು ಯೋಗ್ಯರಾದ ೫ ಜನ ಹಿಂದುಸ್ಥಾನದ ವಿದ್ಯಾರ್ಥಿಗಳನ್ನು ಆರಿಸಿ, ಅವರ ಬಗ್ಗೆ ಸೆಕ್ರೆಟರಿ ಆಫ್ ಸ್ಟೇಟ ಧೊರೆಗಳವರ ಕೂಡ ಪತ್ರವ್ಯವಹಾರ ನಡಿಸಿದ್ದರು. ಈಪ್ರಕಾರ ಅವರು ಆರಿಸಿದವರಲ್ಲಿ ಚನ್ನಬಸವಪ್ಪನವರು ಒಬ್ಬರಾಗಿದ್ದರು*. ಆದರೆ ದಾದಾಭಾಯಿಯವರ ಪ್ರಯತ್ನಗಳು ಸಫಲವಾಗದ್ದರಿಂದ, ಚನ್ನಬಸವಪ್ಪನವರು ಇಂಗ್ಲಂಡಕ್ಕೆ ಹೋಗುವದು ನಿಂತು ಹೋಯಿತು.

## ಸರಕಾರೀ ಉದ್ಯೋಗ.

ಚನ್ನಬಸವಪ್ಪನವರು ಈ ಮೇರೆಗೆ ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ೧೮೫೫ ನೇ ಇಸವಿಯಲ್ಲಿ ಧಾರವಾಡಕ್ಕೆ ಬಂದಬಳಿಕ ಮೊದಲು ಅವರು ಪೋಸ್ಟಖಾತೆಯಲ್ಲಿ ನೌಕರೀ ಹಿಡಿದರು. ಆದರೆ ಅವರು ಆ ಖಾತೆ

---

* ಪಾವ್ಹರ್ಟಿ ಅ್ಯಂಡ ಅನ್ ಬ್ರಿಟಿಶ್ ರೂಲ ಇನ್ ಇಂಡಿಯಾ - ದಾದಾಭಾಯಿ ನವರೋಜಿ. ಪುಟ ೧೦೫

" ಯದೇವ ಜ್ಞಾನಫಲಂ ತದೇವ ಕರ್ಮಫಲಂ " ಎಂಬ ವಚನದಿಂದ ಯಾವುದು ಜ್ಞಾನಫಲವೋ ಅದೇ ಕರ್ಮದ ಫಲವೆಂದು ತಿಳಿದು ಬರುವು ದರಿಂದ ಶಿವಾರ್ಪಣ ಬುದ್ಧಿಯಿಂದ ಆಚರಿಸಿದ ಜ್ಞಾನ ಯುಕ್ತವಾದ ಪತಿಕರ್ಮಗಳಿಗೆ ಮುಕ್ತಿ ಫಲವನ್ನೇ ಹೇಳಬೇಕು. ಈ ರೀತಿಯಾದ ವಿಚಾರ ಸರಣಿಯಿಂದ ವೀರಶೈವರು ಜ್ಞಾನ ಕ್ರಿಯೆಗಳೆರಡೂ ಕೂಡಿ ಮುಕ್ತಿಗೆ ಸಾಧನವೆಂದು ಹೇಳುವರು. ಇವರ ಷಟ್‌ಸ್ಥಲಾಚರಣವಾ ದರೂ ಜ್ಞಾನ ಕ್ರಿಯೋಭಯಾತ್ಮಕವಾಗಿರುವುದಲ್ಲದೆ ಒಂದನ್ನು ಬಿಟ್ಟು ಒಂದರಿಂದ ಆಚರಿಸುವಂತಿಲ್ಲವು. ಹಾಗಾದರೆ ಮೂರು ಸ್ಥಲಗಳು ಜ್ಞಾನಾ ತ್ಮಕವಾಗಿಯೂ ಉಳಿದ ಮೂರು ಕ್ರಿಯಾತ್ಮಕವಾಗಿಯೂ ಇರುವವೆಂದು ಹೇಳಿದುವರ ತಾತ್ಪರ್ಯವೇನೆಂದು ಕೇಳಬಹುದು. ಇಲ್ಲಿ ಗೌಣ ಮುಖ್ಯ ನ್ಯಾಯದಿಂದ ಭಕ್ತಾದಿಯಾದ ಮೂರು ಸ್ಥಲಗಳಲ್ಲಿ ಕ್ರಿಯಾ ಪ್ರಧಾನ ವಿದ್ದು, ಜ್ಞಾನವು ಕ್ರಿಯಾಂಗವಾಗಿರುವುದು. ಪ್ರಾಣಲಿಂಗಿ ಮೊದಲಾದ ಮೂರುಸ್ಥಲಗಳಲ್ಲಿ ಜ್ಞಾನವು ಪ್ರಧಾನವಾಗಿದ್ದು, ಕ್ರಿಯೆಯು ಜ್ಞಾನಾಂಗ ವಾಗಿರುವುದು. ಆದುದರಿಂದ ಭಕ್ತಾದಿ ಮೂರು ಸ್ಥಲಗಳು ಕ್ರಿಯಾತ್ಮ ಕವೆಂದೂ ಮುಂದಿನ ಮೂರು ಸ್ಥಲಗಳೂ ಜ್ಞಾನಾತ್ಮಕವೆಂದೂ ಹೇಳ ಲ್ಪಟ್ಟಿದೆ. ಹೀಗೆ ಹೇಳುವದರಿಂದ ಷಟ್‌ಸ್ಥಲಗಳಲ್ಲಿಯೂ ಜ್ಞಾನಕ್ರಿಯೆಗಳ ಸಮಾವೇಶವಾಗುವುದರಿಂದ ಸಮ ಸಮುಚ್ಚಯ ವಾದಕ್ಕೆ ಬಾಧೆಯಿಲ್ಲವು.

## ಷಟ್‌ಸಲಗಳ ಪ್ರವೃತ್ತಿಮಾರ್ಗ

ಸೂ. ೪೪. ೪೫. ಐಕ್ಯ, ಶರಣ, ಪ್ರಾಣಲಿಂಗಿ, ಪ್ರಸಾದಿ, ಮಹೇಶ, ಭಕ್ತಎಂದು ಐಕ್ಯಾದಿಯಾಗಿ ಷಡಂಗಗಳ ಪ್ರವೃತ್ತಿಮಾರ್ಗವು ಹೇಳಲ್ಪ ಟ್ಟಿದು. ಹೀಗೆ ಗ್ರಂಥವಿಸ್ತಾರಭಯದಿಂದ ಸಂಕ್ಷೇಪವಾಗಿ ಷಟ್‌ಸ್ಥಲಸ್ವರೂ ಪವು ನಿರೂಪಿಸಲ್ಪಟ್ಟಿರುವುದು.

## ಅಧಿಕರಣ ಸಮಾಪ್ತಿ.

ಶಿವಪದಪ್ರಾಪ್ತಿಯನ್ನುಂಟುಮಾಡುವ ಶಿವಾದ್ವೈತನಾಮಕವಾದ ಈ ಶಿವಸಿದ್ಧಾಂತ ತಂತ್ರವನ್ನು ತಿಳಿದ ಭಕ್ತನು ಅಜ್ಞಾನಗ್ರಂಥಿಯನ್ನು ಭೇದಿ ಸುವನು.

## ಸಮಾಪ್ತಿ.



# ಪಂಚಮಾಧಿಕರಣಂ.

## ಲಿಂಗಾಂಗ ಸಂಯೋಗವಿಧಿಯು.

ಹಿಂದಣ ಅಧಿಕರಣಗಳಲ್ಲಿ ಲಿಂಗಾಂಗಗಳ ಸ್ವರೂಪವನ್ನು, ಭೇದವನ್ನೂ ವಿವರಿಸಿ ಈ ಅಧಿಕರಣದಲ್ಲಿ ಲಿಂಗಾಂಗಗಳ ಸಂಯೋಗ (ಐಕ್ಯ) ದ ವಿಧಿಯನ್ನು ಪ್ರತಿಪಾದಿಸುವೆನೆಂದು ಪ್ರಥಮ ಸೂತ್ರದಿಂದ ಸೂಚಿಸಿ ಅಧಿಕರಣವನ್ನು ಪ್ರಾರಂಭಿಸುವನು:—

ಸೂ. ೧. ಪೂರ್ವೋಕ್ತ ವಿಷಯಾನಂತರದಲ್ಲಿ ದೇವಿಯು ಮಾಡಿದ ಪ್ರಶ್ನೆಗೆ ಈಶ್ವರನಿಂದ ಹೇಳಲ್ಪಟ್ಟ ಉತ್ತರರೂಪವಾದ ಅತ್ಯಂತ ನಿಶ್ಚಿತಾರ್ಥವುಳ್ಳ ಅತೀವ ಗುಪ್ತವೂ, ಆದುದರಿಂದಲೇ ಗುರೂಪದೇಶ ಮೂಲಕವಾಗಿ ಅನುಭವಪ್ರಸಿದ್ಧವೂ ಆದ ಲಿಂಗಾಂಗ ಸಂಯೋಗವಿಧಿಯನ್ನು ಹೇಳುವೆನು.

## ಲಿಂಗಾಂಗ ಸಂಯೋಗ.

ಸೂ. ೨ ಶಿವನೇ ತಾನು ಲಿಂಗರೂಪಿಯಾಗಿರುವನು. ಶುದ್ಧನಾದ ಜೀವಾತ್ಮನೇ ಅಂಗನಾಗಿರುವನು. ಲಿಂಗಾಂಗ ರೂಪರಾದ ಶಿವಾತ್ಮರುಗಳ ಸಮ್ಯಕ್ಕಾದ ಯೋಗವೇ ಅಂದರೆ ತಾದಾತ್ಮ್ಯರೂಪದಿಂದ ಹಾಲು ನೀರು ಕೂಡಿದಂತೆ ಕೂಡುವದೇನದೆ ಅದೇ ಸಂಯೋಗವು.

## ಜೀವಾತ್ಮನು.

ಸೂ. ೩. ಈ ಜೀವಾತ್ಮನು ಕೇವಲ ಶುದ್ಧನೂ, (ಉಪಾಧಿವಶದಿಂದ ಮಲಿನನಾದರೂ ಸ್ವಭಾವತಃ ಶುದ್ಧನಿರುವನು.) ತ್ರಿಮಲರಹಿತನೂ, ನಿತ್ಯನೂ, ನಿರಂಜನನೂ, ಶಾಂತನೂ, ಶಿವನ ಅಂಶಸ್ವರೂಪನೂ ಆಗಿರುವನು. ಆದುದರಿಂದಲೇ ಈತನು ಶಿವನೇ ಆಗಿರುವನು.

## ವಿಚಾರ.

ಶಿವನು ಸ್ವಶಕ್ತಿಯ ಸಂಕೋಚರೂಪವಾದ ಮಲತ್ರಯ ಸಂಬಂಧದಿಂದ ಶರೀರತ್ರಯಾವಚ್ಛಿನ್ನವಾಗಿ ಸ್ವಸ್ವರೂಪಗೋಪನದಿಂದ ಜೀವಭಾವ

ವನ್ನು ಹೊಂದುವನು; ಪುನಃ (ಜೀವಗತ ಶಕ್ತಿಯು ಭಕ್ತಿಯಾಗಿ ಪರಿಣಮಿಸಲು) ಸ್ವಶಕ್ತಿಯ ವಿಕಾಸದಿಂದ ಮಲತ್ರಯವು ದೂರವಾಗಲು ಶರೀರತ್ರಯ ರಹಿತನಾಗಿ ಸ್ವಸ್ವರೂಪಾನಂದರಸ ನಿರ್ಭರನಾದ ಶಿವನೇ ಆಗಿಬಿಡುವನು. ಆದುದರಿಂದ ಜೀವಾತ್ಮನೆಂದರೆ ಶಿವನಲ್ಲ ದನ್ಯವಲ್ಲವು. ಈ ವಿಷಯವನ್ನೇ "ಚೈತನ್ಯ ಮಾತ್ಮನೋ ರೂಪಂ ಸಚ್ಚಿದಾನಂದ ಲಕ್ಷಣಂ। ತಸ್ಯಾನಾವೃತರೂಪತ್ವಾತ್ ಶಿವತ್ವಂ ಕೇನ ವಾರ್ಯತೇ" ಎಂಬ ಪ್ರಮಾಣೋಕ್ತಿಯು ಜೀವಾತ್ಮನ ಶಿವತ್ವವು ಯಾವನಿಂದಲೂ ನಿವಾರಿಸಲ್ಪಡ ಲಾಗದೆಂದು ಸಾರುತ್ತಿರುವುದು.

## ಜೀವಾತ್ಮನು ಶಿವನ ಅಂಗವು.

ಸೂ. ೪. ೬. ಆತ್ಮನು ಶಿವನಿಂದ ಅಂಗೀಕೃತನಾಗಿರುವುದರಿಂದ ಶಿವನ ಅಂಗವಾಗಿರುವನು. ಮತ್ತು ಈ ಅಂಗವು ಸರ್ವಜ್ಞತ್ವಾದಿಭೇದದಿಂದಲೂ ಶಿವಾಂಗವೆಂದು ಹೇಳಲ್ಪಡುತ್ತದೆ. ಸರ್ವಜ್ಞತ್ವ, ತೃಪ್ತಿ, ಅನಾದಿಬೋಧ, ಸ್ವತಂತ್ರತ್ವ, ಅಲುಪ್ತ ಶಕ್ತಿಮತ್ವ, ಅನಂತ ಶಕ್ತಿಮತ್ವಗಳೆಂಬ ಶಿವನ ಅಸಾಧಾರಣವಾದ ಷಡ್ವಿಧ ಶಕ್ತಿಗಳಿಂದ ಶಿವನ ಅಂಗವು ಉಪಲಕ್ಷಿಸಲ್ಪಡುವುದರಿಂದ ಆತ್ಮನೇ ಶಿವನ ಅಂಗವೆಂಬುದರಲ್ಲಿ ಸಂಶಯವಿಲ್ಲವು.

## ವಿಚಾರ

ಅಂಗಪದವು ರೂಢಿಶಕ್ತಿಯಿಂದ ಶರೀರವಾಚಕವಾಗಿದ್ದರೂ "ಯಸ್ಯ ಚಾತ್ಮಾ ಶರೀರಂ" "ಯಸ್ಯ ಚಾವ್ಯಕ್ತಂ ಶರೀರಂ,, ಇತ್ಯಾದಿಯಾದ ಅಂತರ್ಯಾಮಿ ಬ್ರಾಹ್ಮಣ ವಾಕ್ಯದಿಂದ ಪೃಥುವ್ಯಾದಿ ಜೀವಾತ್ಮಪರ್ಯಂತವಾದ ಸಮಸ್ತ ವಸ್ತುಜಾತವು ಶಿವನ ಶರೀರವೆಂದು ಹೇಳಲ್ಪಡುವದರಿಂದ ಜೀವಾತ್ಮನು ಶಿವಾಂಗವೆಂದು ಹೇಳುವುದರಲ್ಲಿ ಯಾವ ಸಂಶಯುವಿಲ್ಲವು. ಮತ್ತು "ಸರ್ವಜ್ಞತಾ ತೃಪ್ತಿರನಾದಿಬೋಧಃ ಸ್ವತಂತ್ರತಾ ನಿತ್ಯಮಲುಪ್ತಶಕ್ತಿಃ। ಅನಂತಶಕ್ತಿಶ್ಚ ವಿಭೋರ್ವಿಧಿಜ್ಞಾಃ ಷಡಾಹುರಂಗಾನಿ ಮಹೇಶ್ವರಸ್ಯ,, ಎಂಬ ಪ್ರಮಾಣದಿಂದ ಸಿದ್ಧವಾದ ಶಿವನ ಷಡಂಗಗಳೇ ಭಕ್ತಾದಿ ಷಡಂಗಸ್ಥಲಗಳಾಗುವವೆಂದು ಆಗಮಗಳು ಪ್ರತಿಪಾದಿಸುವದರಿಂದ ಜೀವನು ಅಂಗಪದವಾಚ್ಯನಾಗಲು (ಶಕ್ತಿಪಾತದಿಂದ ಶುದ್ಧನಾಗಲು) ತನ್ನಲ್ಲಿರುವ

ಕಿಂಚಿಜ್ಞತ್ವಾದಿ ಶಕ್ತಿಗಳೇ ಸರ್ವಜ್ಞತ್ವಾದಿ ಶಕ್ತಿಗಳಾಗಿ ಪರಿಣಮಿಸಿ ಶಿವನ ಷಡಂಗಗಳಾಗುವವು. ಅಂತಹ ಶಕ್ತಿವಿಶಿಷ್ಟರಾದ ಜೀವನು ಶಿವನ ಅಂಗವಾಗಿರುವನೆಂಬುದು ನಿರ್ವಿವಾದವು.

## ಲಿಂಗಾಂಗ ಸ್ಥಲಗಳು.

ಸೂ. ೭ ರಿಂದ ೧೪. ಸಾಕ್ಷಾತ್ಪರಶಿವನೇ ಲಿಂಗಸ್ಥಲವು ಇದು ತನ್ನ ಶಕ್ತಿಭೇದದಿಂದ ಬಹುಪ್ರಕಾರವಾದರೂ, ಆ ಲಿಂಗಸ್ಥಲಗಳೆಲ್ಲವೂ ಶಕ್ತನಾದ ಶಿವನೇ ಆಗಿರುವವು. ಇದರಂತೆ ಅಂಗಸ್ಥಲವು ಬಹುಪ್ರಕಾರವಾಗಿದ್ದರೂ ಅವೆಲ್ಲವೂ ಭಕ್ತಿವಿಶಿಷ್ಟನಾದ ಆತ್ಮನೇ ಆಗಿರುವವು. ಶಿವನು ಶಕ್ತಿಯುಕ್ತನಾಗಿ ಉಪಾಸ್ಯತ್ವದ ದೆಶೆಯಿಂದ ಯಾವ ಯಾವ ರೂಪವನ್ನು ಹೊಂದುವನೋ; ಆತ್ಮನು ಭಕ್ತಿ ಯುಕ್ತನಾಗಿ ಉಪಾಸಕತ್ವದ ಸಿದ್ಧಿಗೆ ಆ ಉಪಾಸ್ಯರೂಪಕ್ಕನುಗುಣವಾದ ರೂಪಗಳನ್ನೇ ಧರಿಸುತ್ತಿರುವನು. ಇದರಂತೆಯೇ ಶಿವನು ಸಾಧ್ಯತ್ವದ ಮತ್ತು ಗುರುತ್ವದ ಸಲುವಾಗಿ ಯಾವ ರೂಪವನ್ನು ಅಂಗೀಕರಿಸುವನೋ; ಆತ್ಮನಾದರೂ ಸಾಧಕತ್ವದ ಮತ್ತು ಶಿಷ್ಯತ್ವದ ಸಲುವಾಗಿ ತದನುಗುಣವಾದ ರೂಪವನ್ನೇ ಸ್ವೀಕರಿಸುವನು. ಆದುದರಿಂದಲೇ ಲಿಂಗಾಂಗ ಸ್ಥಲಗಳೆರಡು ಉಪಾಸ್ಯೋಪಾಸಕ, ಪೂಜ್ಯ ಪೂಜಕ, ಸಾಧ್ಯ ಸಾಧಕ, ಗುರುಶಿಷ್ಯ, ಶಿವಾತ್ಮರೂಪದಿಂದಿರುವವೆಂದು ಮಹಾತ್ಮರಿಂದ ಹೇಳಲ್ಪಡುತ್ತವೆ.

## ಸಂಯೋಗ ಸದ್ಭಾವ.

ಸೂ. ೧೪. ೧೬. ಲಿಂಗಾಂಗಗಳ ಸಂಯೋಗ ಸದ್ಭಾವವು ನನ್ನಿಂದ ಹೇಳಲ್ಪಡುತ್ತದೆ. ಲಿಂಗಾಂಗಗಳಿಗೆ ಯಾವಾಗಲೂ ಅವ್ಯಕ್ತವಾದ (ತಾದಾತ್ಮ್ಯರೂಪವಾದ) ಯೋಗವೇ ಸಂಯೋಗವು. ಆ ಸಂಯೋಗವೇ ಶಿವಸಾಯುಜ್ಯರೂಪವಾದ ಮುಕ್ತಿಯಲ್ಲದೆ ಬೇರಲ್ಲವು.

## ವಿಚಾರ.

" ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್। ಶ್ರದ್ಧಾಭಕ್ತಿ ಧ್ಯಾನಯೋಗಾದವೇಹಿ" ಇತ್ಯಾದಿ ಪ್ರಮಾಣಗಳಿಂದ ಭ್ರಮರಕೀಟ ನ್ಯಾಯದಂತೆ (ಭ್ರಮರದ ಚಿಂತನದಿಂದ ಕೀಟವು

ಭ್ರಮರವಾಗುವಂತೆ) ಶ್ರದ್ಧಾ ಭಕ್ತಿ ಯುಕ್ತನಾದ ಅಂಗನು ವೀರಶೈವ ಶಾಸ್ತ್ರೋಕ್ತವಾದ ಲಿಂಗಧ್ಯಾನಯೋಗದಿಂದ ಲಿಂಗ ರೂಪನಾಗುವನು. ಅಂಗನು ಲಿಂಗರೂಪನಾಗುವುದೇ ಮುಕ್ತಿಯು. ಇದೇ ಲಿಂಗಾಂಗ ಸಂಯೋಗವೆಂದು ಹೇಳಲ್ಪಡುವುವೆಂಬುದೇ ಸೂತ್ರಕಾರನಾಶಯವು. ಈ ಸಂಯೋಗದ ಸ್ವರೂಪವು ಮುಂದಿನ ಸೂತ್ರಗಳಲ್ಲಿ ವಿಶದವಾಗಿ ಪ್ರತಿಪಾದಿಸಲ್ಪಟ್ಟಿದೆ.

## ಭಕ್ತಿಯ ಪ್ರಾಶಸ್ತ್ಯ.

ಸೂ. ೧೬. ೧೭. ಮೇಲೆ ಹೇಳಿದ ಮುಕ್ತಿಗಿಂತಲೂ ಭಕ್ತಿಯು ಅತ್ಯಂತ ಶ್ರೇಷ್ಠವಾದುದೆಂದು ಸತ್ಯಾರ್ಥವನ್ನು ಬೋಧಿಸುವ ಶೃತಿಯು ಮತವಿರುವುದು. ಬಹೂಕ್ತಿಯಿಂದ ಫಲವೇನು? ಭಕ್ತಿಯ ಶ್ರೇಷ್ಠತೆಯು ಮುಂದೆ ಹೇಳತಕ್ಕುದು ಮತ್ತಾವುದಿಲ್ಲವು.

## ವಿಚಾರ.

ಷಟ್ಸ್ಥಲ ಸಿದ್ಧಾಂತದಲ್ಲಿ ಭಕ್ತಿಗೆ ಯಾವ ಸ್ಥಾನವು ಕೊಡಲ್ಪಟ್ಟಿರುವುದೋ, ಅದು ಮತ್ತಾವ ಸಿದ್ಧಾಂತದಲ್ಲಿಯೂ ಕಾಣಬರುವುದಿಲ್ಲ. ಇತರ ಸಿದ್ಧಾಂತಗಳಲ್ಲಿ ಭಕ್ತಿಯ ಪೂರ್ಣ ಸ್ವರೂಪದ ವಿವೇಚನೆಯಾಗದೇ ಇರುವುದೇ ಇದಕ್ಕೆ ಕಾರಣವು. ಬಂಧ ಮೋಕ್ಷಗಳೆಂಬುವು ಶಿವಶಕ್ತಿಯ ಸಂಕೋಚ ವಿಕಾಸಭಾವಗಳು. ಅಂತಹ ಸಂಕೋಚ ವಿಕಾಸಭಾವಗಳ ಪರವೆಯಿಲ್ಲದೆ ಸರ್ವತೋಮುಖವಾಗಿ ಬೆಳಗುವ ಶಿವಮಯ ಪ್ರಕಾಶವೇ ಭಕ್ತಿಯು. ವೀರಶೈವ ಶರಣರು ಇಂತಹ ಭಕ್ತಿಯನ್ನಪೇಕ್ಷಿಸಿರುವರಲ್ಲದೆ ಮುಕ್ತಿಯನ್ನು ಬಯಸಿಲ್ಲವು. ಈ ಭಕ್ತಿಯನ್ನು ಸೂತ್ರಕಾರನು ಮುಂದೆ ಪಂಚಮಪುರುಷಾರ್ಥವೆಂದು ಪ್ರತಿಪಾದಿಸಿರುವುದು ವೀರಶೈವ ಸಿದ್ಧಾಂತದ ಗುಟ್ಟನ್ನು ತಿಳಿಯದವರಿಗೆ ಆಶ್ಚರ್ಯಕರವಾಗಿರುವುದು. ಪಂಚಮಪುರುಷಾರ್ಥವಾದ ಭಕ್ತಿಯ ಪೂರ್ಣಾನುಭವವು ಬಸವೇಶ್ವರಂಗಳ ಪಟ್ಟಿನಿಂದಲೇ ಅತನನ್ನು ವೀರಶೈವ ಗುರು ಜಂಗಮರು ಆನಂದಪರವಶರಾಗಿ ಗುರುಲಿಂಗ ಜಂಗಮ ರೂಪನೆಂದು ಕೊಂಡಾಡಿರುವರು. ವೀರಶೈವರ ಪರಮಪುರುಷಾರ್ಥವಾದ ಈ ಭಕ್ತಿಯ ವಿಶೇಷ ವಿಚಾರವು ಮುಂದೆ ಸೂತ್ರಕಾರನಿಂದಲೇ ನಿರೂಪಿಸಲ್ಪಟ್ಟಿದೆ.

## ಲಿಂಗಾಂಗ ಸಂಯೋಗವಿಧಿ.

ಸೂ. ೧೭-೧೮ ಲಿಂಗಾಂಗಸಂಯೋಗದ ಸ್ವರೂಪ ಪ್ರತಿಪಾದನಾ ನಂತರದಲ್ಲಿ ಲಿಂಗಾಂಗಸಂಯೋಗವಿಧಿಯು ಹೇಳಲ್ಪಡುತ್ತದೆ. ವಿಧಿಯೆಂದರೆ ಕರ್ತವ್ಯರೂಪವಾದ ಉಪದೇಶವೇ ಎಂಬುದಾಗಿ ನಿಶ್ಚಿತವಾಗಿದೆ.

## ಉಪದೇಶಗುರು.

ಸೂ. ೧೮-೨೦ ಕರ್ತವ್ಯರೂಪವಾದ ಉಪದೇಶದ ಪ್ರಾಪ್ತಿಯಿಂದ ತನ್ನ ಅವಿದ್ಯಾನಿವೃತ್ತಿಮಾಡಿಕೊಳ್ಳುವದಕ್ಕಾಗಿ ಶರೀರತ್ರಯಾವಚ್ಛಿನ್ನವಾದ ಜೀವನು, ಭವ ತಾರಕನೂ, ಶಿವ ವಿದ್ಯಾಬೋಧಕನೂ, ಅವಿದ್ಯಾ ಗ್ರಂಥಿಯ ಭೇದಕನೂ, ಶಿವಸಿದ್ಧಾಂತದ ಮುಖ್ಯ ಕರ್ತೃವೂ, ಶಿವಸ್ವರೂಪನೂ, ಸರ್ವದಾ ಲಿಂಗಾಂಗಸಂಯೋಗಪರಾಯಣನೂ ಆದ ಆಚಾರ್ಯನನ್ನು ಸಮೀಪಿಸುವನು.

## ವಿಚಾರ

ಪುಣ್ಯಪಾಪದ ಫಲವನ್ನುಂಡು, ಆದರಿಂದ ಬೇಸತ್ತ ಜೀವನು ಕರ್ಮದ ತೊಡಕನ್ನು ಕಡಿಮೆಟ್ಟಲು ಹವಣಿಸಿ ಸದ್ಗುರುವನ್ನು ಹೊಂದಿ ನಿಜಸುಖದ ಮಾರ್ಗವನ್ನು ಕೈಕೊಳ್ಳುವನು. ಈ ವಿಷಯದಲ್ಲಿ "ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದ ಮಾಯಾನ್ನಾಸ್ತ್ಯಕೃತಃ ಕೃತೇನ। ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ" ಎಂಬ ಮುಂಡಕಶೃತಿಯು ಪ್ರಮಾಣವಾಗಿರುವುದು.

## ಶಿಷ್ಯ ಪ್ರಶ್ನೆ.

ವಸ್ತುತಃ ಜೀವನು ಶಿವಾಂಶ ಸಂಭೂತನಾದುದರಿಂದ ಶಿವನೇ ಇರುವನು. ಅವನಿಗೆ ಸಂಸಾರವೂ ಆದರಿಂದ ದುಃಖವೂ ಹೇಗೆ ಉಂಟಾದುವೆಂಬುದನ್ನೂ, ಅಂತ್ಯದಲ್ಲಿ ಶಿಷ್ಯತ್ವವನ್ನು ಹೊಂದಿ ಗುರುವಿನ ಮುಂದೆ ಪ್ರಶ್ನೆ ಮಾಡುವ ಬಗೆಯನ್ನೂ ವಿವರಿಸುವೆವು:—

ಸೂ. ೨೭. ೨೮. ಈ ಜೀವಾತ್ಮನು ತಾನು ನಿಜವಾಗಿಯೂ ಸಾಕ್ಷಾತ್ತಾದ ಶಿವನ ಅಂಶ ರೂಪನಾದರೂ ವ್ಯವಹಾರ ದಶೆಯಲ್ಲಿ ಸಂಸಾರಿಯಂತೆ ತೋರುವನು. ಇವನಿಗೆ ಸಂಸಾರವೇ ನನ್ನ ನಿಜವಾದ ಸ್ವಾಸ್ಥ್ಯವೆಂಬ ಭಾವನೆಯು ಅವಿದ್ಯೆಯಿಂದುಂಟಾದುದು. ಆದುದರಿಂದ ದೇಹೇಂದ್ರಿಯಾದಿ ಸಮೂಹದಲ್ಲಿ ನಾನು ನನ್ನದೆಂಬ ಭ್ರಾಂತಿಯುಂಟಾಗಿರುವುದು. ಈ ರೀತಿಯಾಗಿ ತನ್ನಲ್ಲಿರುವ ಅವಿದ್ಯೆಯಿಂದ ಮೋಹಿತನಾದ ಪುರುಷನು ತನ್ನ ಶಿವಾಂಶತ್ವವನ್ನೂ ಶಕ್ತಿಯನ್ನೂ ಮರೆತು, ಕರ್ಮದಿಂದ ಬಳಲಿ, ಕಡೆಗೆ ತಾನು ಹೊಂದಿದ ಕರುಣ ಮೂರ್ತಿಯಾದ ಗುರುವನ್ನು ಕುರಿತು, 'ನಾನು ಯಾರು' ಎಂದು ಪ್ರಶ್ನೆ ಮಾಡುವನು.

## ಗುರುವಿನ ಉತ್ತರ.

ಸೂ. ೨೮ ರಿಂದ ೩೩ ಕರುಣಾನಿಧಿಯಾದ ಗುರುವು "ತತ್ತ್ವಂ ಅಸಿ" ಅಂದರೆ—'ತತ್' ಆ ಪರಶಿವಸ್ವರೂಪನೇ 'ತ್ವಂ' ನೀನು 'ಅಸಿ' ಇರುವೆಯೆಂದು ಶ್ರುತಿವಾಕ್ಯದಿಂದಲೇ ಉತ್ತರವನ್ನಿತ್ತನು. ಮತ್ತು ಹೇ ಶಿಷ್ಯನೇ! ಅವಿದ್ಯೆಯಿಂದುಂಟಾದ ಈ ದೇಹೇಂದ್ರಿಯಾದಿಕವು ಯಥಾರ್ಥವಲ್ಲವು. (ಈ ಅವಿದ್ಯೆಯೂ ಅವಿದ್ಯಾಕಾರ್ಯವೂ ತನಗೆ ತಾನು ಯಥಾರ್ಥವೇ; ಆದರೆ ಜೀವನ ವಿಷಯದಲ್ಲಿ ಯಥಾರ್ಥವಲ್ಲವೆಂಬ ಭಾವವು) ಭ್ರಾಂತಿಸಿದ್ಧವು ಯಥಾರ್ಥದಂತೆ ನಿನ್ನನ್ನು ಸುತ್ತುಗಟ್ಟಿರುವದು. ಆದುದರಿಂದ ನಿನ್ನ ವಿಷಯಕವಾದ ಈ ಅವಿದ್ಯಾಜನ್ಯ ಭ್ರಾಂತಿವಿನಾಶಾರ್ಥವಾಗಿ ನೀನು ನಿತ್ಯವಾದ ಲಿಂಗಾಂಗ ಸಂಯೋಗ ಜ್ಞಾನನಿಷ್ಠೆಯನ್ನು ಹೊಂದು.

## ಲಿಂಗಾಂಗ ಸಂಯೋಗ ಸ್ವರೂಪ

'ತತ್ತ್ವಮಸಿ' ಎಂಬ ವಾಕ್ಯದ ತತ್ ಪದದಿಂದ ಲಿಂಗವೂ, ತ್ವಂ ಪದದಿಂದ ಅಂಗವೂ, ಅಸಿಯೆಂಬುದರಿಂದ ಲಿಂಗಾಂಗಗಳ ಸಂಯೋಗವೂ ಹೇಳಲ್ಪಡುವುದು. ಮತ್ತು ಸತ್, ಚಿತ್, ಆನಂದಗಳೂ, ನಾದ, ಬಿಂದು, ಕಳೆಗಳೂ ಕ್ರಮವಾಗಿ ಲಿಂಗ, ಅಂಗ, ಸಂಯೋಗದ ಸ್ವರೂಪಗಳೆಂದು ಉಕ್ತವಾಗಿವೆ. ಮಂತ್ರವು ಲಿಂಗಸ್ವರೂಪವೂ ಕ್ರಿಯೆಯು (ಶಿವಾರ್ಚನಾದಿರೂಪವಾದುದು. ಯಾಗಾದಿ ಕ್ರಿಯೆಯಲ್ಲ.) ಅಂಗಸ್ವರೂ

ಪವೂ ಮಂತ್ರಕ್ರಿಯೆಗಳ ಅನುಷ್ಠಾನವೇ ಸಂಯೋಗವೆಂದು ಪ್ರತಿಪಾದಿತವಾಗಿದೆ. ಅಂಗಲಿಂಗಗಳು ಪ್ರಕೃತಿಪುರುಷಂಗಳಾಗಿ ಅವೆರಡರ ಪ್ರೇರಕನಾದ ಈಶ್ವರನೇ ಸಂಯೋಗವೆಂದು ಹೇಳಲ್ಪಡುವುದು. ಅಕಾರ ಉಕಾರ ಮಕಾರಂಗಳೆಂಬ ಓಂಕಾರದ ತ್ರಿವಿಧವಾದ ಅಂಶಸ್ವರೂಪಗಳೇ ಕ್ರಮವಾಗಿ ಲಿಂಗ, ಅಂಗ, ಸಂಯೋಗಂಗಳಾಗಿರುವವು. ಮತ್ತು ಆ ಓಂಕಾರದ ಹ್ರಸ್ವ, ದೀರ್ಘ, ಪ್ಲುತಂಗಳೇ ಲಿಂಗಾಂಗ ಸಂಯೋಗಂಗಳು. ಶಬ್ದವು ಲಿಂಗರೂಪವೂ, ಅರ್ಥವು ಅಂಗರೂಪವೂ ಶಬ್ದಾರ್ಥಜ್ಞಾನವೇ ಸಂಯೋಗರೂಪವಾಗಿರುವುದೆಂದು ಲಿಂಗಾಂಗ ಸಂಯೋಗ ತತ್ವಜ್ಞರಿಂದ ಹೇಳಲ್ಪಡುವುದು.

## ಲಿಂಗಾಂಗಗಳು

ಲಿಂಗಾಂಗಸ್ವರೂಪರಾದ ಶಿವಜೀವರುಗಳು ಗುರುಶಿಷ್ಯರಾಗಿ ಬಿಳಲು ನೆರಳುಗಳಂತೆ ಎಡೆಬಿಡದೆ ಕೂಡಿಕೊಂಡಿರುವರು. ಮತ್ತು ಲಿಂಗವೇ ಹೃದಯಾಕಾಶವು ತದ್ವ್ಯಾಪಿಯಾದ ಪ್ರಾಣಮಾರುತನೇ ಅಂಗನು. ಈ ಲಿಂಗಾಂಗಗಳ ಮರ್ಮವನ್ನು ತಿಳಿಸುವ ಶಿವಸೂತ್ರವೆಂದರೆ ಶಿವಸಿದ್ಧಾಂತ ತಂತ್ರರೂಪವಾದ ಈ ಶಿವಾನುಭವದ ಸೂತ್ರವೇ ಎಂಬುದಾಗಿಯೂ ಇದು ಪರ್ಯಂತವೂ ವಿವರಿಸಿದ ಲಿಂಗವೇ ಷಟ್‌ಸ್ಥಲ ಪರಬ್ರಹ್ಮವೆಂಬುದಾಗಿಯೂ ನಿರಂತರದಲ್ಲಿಯೂ ನಿಶ್ಚಯಿಸತಕ್ಕದ್ದು.

## ವಿಚಾರ

ಲಿಂಗಾಂಗಸಂಯೋಗವು 'ತತ್‌ತ್ವಮಸಿ' ಎಂಬ ಶ್ರುತಿಯ ಪದತ್ರಯದಿಂದ ಪ್ರತಿಪಾದಿತವಾದಂತೆ "ಅಹಂ ಬ್ರಹ್ಮಾಸ್ಮಿ" ಎಂಬ ಶ್ರುತಿವಾಕ್ಯದ ಅಹಂ ಪದದಿಂದ ಅಂಗವೂ 'ಬ್ರಹ್ಮ' ಪದದಿಂದ ಲಿಂಗವೂ 'ಅಸ್ಮಿ' ಎಂಬುದರಿಂದ ಸಂಯೋಗವೂ ಉಕ್ತವಾಗುವುದು. ಆದರೆ, 'ತತ್‌ತ್ವಮಸಿ' ಎಂಬುದರಿಂದ ಲಿಂಗಾಂಗಸಂಯೋಗದ ಪರೋಕ್ಷಜ್ಞಾನವಾಗಿ 'ಅಹಂ ಬ್ರಹ್ಮಾಸ್ಮಿ' ಎಂಬುದರಿಂದ ಲಿಂಗಾಂಗಸಂಯೋಗದ ಅಪರೋಕ್ಷಾನುಭವವಾಗುವುದೆಂದು ಕೆಲವರು ಹೇಳುವರು. "ಅಂಗಂ ಶಕ್ತಿರಿತಿ ಪ್ರೋಕ್ತಂ ಶಕ್ತಿಮಾನ್ ಲಿಂಗಮುಚ್ಯತೇ" (ಶಕ್ತಿಯೇ ಅಂಗನು ಶಕ್ತಿವಿಶಿಷ್ಟನಾದ ಶಿವನೇ ಲಿಂಗವು) ಇತ್ಯಾದಿಯಾದ ಆಗಮ ಪ್ರಮಾಣಗ

ಯಿಂದ ಲಿಂಗಾಂಗಗಳು ಕ್ರಮವಾಗಿ ಶಿವಶಕ್ತಿಗಳೆಂತಲೂ, ಶಿವಜಗತ್ತುಗಳೆಂತಲೂ, ಶಿವಭಕ್ತಿಗಳೆಂತಲೂ, ಇನ್ನೂ ಅನೇಕರೀತಿಯಿಂದ ಪ್ರತಿಪಾದಿತವಾಗಿರುವುದರಿಂದ ಸೂತ್ರಕಾರನಾದರೂ ಆಗಮಪ್ರಮಾಣಕ್ಕನುಸರಿಸಿ ಲಿಂಗಾಂಗಗಳ ಮತ್ತು ಅವುಗಳ ಸಂಯೋಗವನ್ನು ಸಚ್ಚಿದಾನಂದಾದಿ ರೂಪದಿಂದ ಪ್ರತಿಪಾದಿಸಿರುವನು.

## ದೀಕ್ಷೆ.

ಲಿಂಗಾಂಗಸಂಯೋಗಜ್ಞಾನಬೋಧೆಯೊಂದರಿಂದಲೇ ಶಿಷ್ಯನ ಜೀವತ್ವವು ನೀಗದು. ಜೀವತ್ವವಳಿದು ಶಿವತ್ವ ಪ್ರಾಪ್ತಿಯಾಗುವುದಕ್ಕೆ ದೀಕ್ಷಾಕ್ರಿಯೆಯೇ ಮುಖ್ಯವಾದುದು. ವೀರಶೈವಸಿದ್ಧಾಂತಜ್ಞನಾದ ಗುರುವರನು ಬೋಧೆಯನ್ನಷ್ಟೇ ಮಾಡಿಬಿಡುವದಿಲ್ಲವು. ಬೋಧೆಯೆಂಬುದು ದೀಕ್ಷೆಯ ಒಂದು ಭಾಗವು. ಶಿವದೀಕ್ಷೆಯೇ ಗುರುವಿನ ಮುಖ್ಯಕರ್ತವ್ಯವಾದುದರಿಂದ ಆ ದೀಕ್ಷಾಕ್ರಮವು ೩೭ರಿಂದ ೬೩ ಸೂತ್ರಗಳವರಿವಿಗೂ ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿದೆ.

ಸೂ. ೩೭ ಗುರುವು ಮೇಲೆ ಹೇಳಿದಂತೆ ಜ್ಞಾನಬೋಧೆಯನ್ನು ಮಾಡಿ ದಯೆಯಿಂದ ಶಿಷ್ಯನಿಗೆ ಅವಿದ್ಯಾಪಾಶವನ್ನು ಛೇದಿಸುವ ಮಹಾ ಶಿವದೀಕ್ಷೆಯನ್ನು ಮಾಡುವನು.

## ದೀಕ್ಷಾ ಶಬ್ದಾರ್ಥವು.

ಸೂ. ೩೮ ಯಾವುದರಿಂದ ಶಿಷ್ಯನಿಗೆ ಲಿಂಗಸಂಬಂಧವು ಪ್ರಾಪ್ತವಾಗುವುದೋ, (ದೀಯತೇ ಲಿಂಗಸಂಬಂಧಃ) ಮತ್ತು ಅವನ ಮಲತ್ರಯವು ನಿವರ್ತಿಸಲ್ಪಡುವುದೋ (ಕ್ಷೀಯತೇ ಚ ಮಲತ್ರಯಂ) ಅದು ದೀಕ್ಷೆ [ದೀ ದೀಯತೆ, ಕ್ಷಾ ಕ್ಷೀಯತೆ,] ಯೆಂದು ಹೇಳಲ್ಪಡುವುದು.

## ದೀಕ್ಷಾ ಭೇದವು.

ಸೂ. ೩೯-೪೦ ಆ ದೀಕ್ಷೆಯು ವೇಧಾದೀಕ್ಷೆಯೆಂದೂ, ಮಂತ್ರದೀಕ್ಷೆಯೆಂದೂ, ಕ್ರಿಯಾದೀಕ್ಷೆಯೆಂದೂ ಮೂರು ಪ್ರಕಾರವಾಗಿರುವುದು.

## ತ್ರಿವಿಧ ದೀಕ್ಷೆಯ ಸ್ವರೂಪವು

ಸೂ. ೪೦-೪೧ ಗುರುವಿನ ಹಸ್ತವು, ಶಿಷ್ಯನ ಮಸ್ತಕವು, ಇವುಗಳ ಹಸ್ತಮಸ್ತಕಗಳ] ಸಂಯೋಗರೂಪವಾದುದೇ ವೇಧಾದೀಕ್ಷೆಯು. ಗುರುವಿನಿಂದ ಶಿಷ್ಯನ ಕಿವಿಯಲ್ಲಿ ಉಪದೇಶಿಸಲ್ಪಡುವ ಮಂತ್ರವೇ ಮಂತ್ರದೀಕ್ಷೆಯು. ಶಿಷ್ಯನ ಹಸ್ತದಲ್ಲಿ [ವಿಧ್ಯುಕ್ತ ಸಂಸ್ಕಾರದಿಂದ ಕೂಡಿದ] ಶಿವಲಿಂಗವು ಗುರುವಿನಿಂದ ಪ್ರಾಪ್ತವಾಗುವುದೇ ಕ್ರಿಯಾದೀಕ್ಷೆಯು.

## ದೀಕ್ಷೆಯು ಕರ್ತರಿಯು

ಸೂ. ೪೨ ಸರ್ವ ಮಲಪಾಶಗಳನ್ನು ದೀಕ್ಷಾ ರೂಪಕರ್ತರಿಯಿಂದ ಕತ್ತರಿಸಿ, ಲಿಂಗಪ್ರಧಾನಮಾಡತಕ್ಕದ್ದು. ಶಿವದೀಕ್ಷೆಯು ಸರ್ವಪಾಶಗಳನ್ನು ಕತ್ತರಿಸುವುದರಿಂದ ಕರ್ತರಿಯೆಂದು ಕರೆಯಿಸಿಕೊಳ್ಳುವುದು.

## ಶಿವಲಿಂಗದಲ್ಲಿ ಶಿವಕಲೆಯನ್ನಿರಿಸುವುದು

ಸೂ. ೪೩ - ೪೫. ಶ್ರೇಷ್ಠವಾದ ಶಿವದೀಕ್ಷೆಯನ್ನು ಮಾಡಿ, ಶಿವಾತ್ಮಕವಾದ ವಿದ್ಯೆಯನ್ನು ಬೋಧಿಸಿ, ಅವಿದ್ಯಾ ಸಂಬಂಧವಾದ ಪಾಶಂಗಳನ್ನು ಛೇದಿಸಿ, (ಗುರುವು) ಶಿವಕಳೆಯನ್ನು (ಶಿಷ್ಯನ ಮಸ್ತಕದಲ್ಲಿರುವುದನ್ನು) ಚಿಂತಿಸತಕ್ಕದ್ದು. ಹೇಗೆ ಶಿವಕಳೆಯೋ ಹಾಗೇ ಭಾವವೂ, ಭಾವದಂತೆ ಮನವೂ, ಮನದಂತೆ ದೃಷ್ಟಿಯೂ, ದೃಷ್ಟಿಯಂತೆ ಸ್ಥಲವೂ (ಇರುವವು.) (ಶಿವಕಳಾನುಗುಣವಾಗಿ ಭಾವ, ಮನಸ್ಸು, ದೃಷ್ಟಿಗಳು ಬಲಿತು ಸ್ಥಲಸಿದ್ಧಿಯನ್ನುಂಟುಮಾಡುವವು. ಆದುದರಿಂದ ಭಾವ ಮನೋದೃಷ್ಟಿಗಳ ದ್ವಾರಾ ಶಿವಕಳೆಯನ್ನು ಚನ್ನಾಗಿ ಸ್ವರೂಪಗೊಳಿಸತಕ್ಕದ್ದೆಂದು ತಾತ್ಪರ್ಯವು.)

ಸಮಸ್ತತತ್ವಗಳನ್ನು ತಿಳಿಯಪಡಿಸುವ ಪರಮ ಸೂಕ್ಷ್ಮವಾದ ಯಾವ ಶಿವಕಳೆಯುಂಟೋ ಅದನ್ನು ಯಥಾವಿಧಿಯಿಂದ (ಗುರುವು) ಆಕರ್ಷಿಸಿ, ಲಿಂಗದಲ್ಲಿರಿಸತಕ್ಕದ್ದು.

## ಲಿಂಗದರ್ಶನ

ಸೂ. ೪೬. ೫೦. ಎಳ್ಳಿನಲ್ಲಿರುವ ಎಣ್ಣೆಯಂತೆಯೂ, ಕಟ್ಟಿಗೆಯಲ್ಲಿರುವ ಅಗ್ನಿಯಂತೆಯೂ, ಕ್ಷೀರದಲ್ಲಿರುವ ತುಪ್ಪದಂತೆಯೂ, ಪ್ರವಾಹ

ಗತವಾದ ಜಲದಂತೆಯೂ (ಶಿಷ್ಯನ) ಆತ್ಮನಲ್ಲಿಯೇ ಇದ್ದು, (ಆತ್ಮನ) ಒಳಹೊರಗೆಲ್ಲಾ ತುಂಬಿದ ಜೋತಿರ್ಮಯನಾದ ಪರಶಿವಲಿಂಗ ಮೂರ್ತಿಯನ್ನೂ, ಪರಮಸೂಕ್ಷ್ಮವಾದ ತಲ್ಲಿಂಗಭಾವನಾತ್ಮಕ ಲಕ್ಷಣದಿಂದ ಕೂಡಿದ ಲಿಂಗಭಕ್ತಿಯನ್ನೂ ಶಿಷ್ಯನಿಗೆ ಶಿವಸ್ವರೂಪನಾದ ಗುರುವು ತೋರಿಸಿಕೊಟ್ಟನು. ನಿಷ್ಕಳವೂ ನಿರುಪಾಧಿಕವೂ ಆದ ಆ ಲಿಂಗದರ್ಶನದಿಂದ ಶಿಷ್ಯನಾದ ಜೀವಾತ್ಮನ ಸರ್ವಕರ್ಮಗಳೂ ಕ್ಷೀಣವಾದವು. ಅವಿದ್ಯಾಹೃದಯ ಗ್ರಂಥಿಯು ನೂರುಭಾಗವಾಗಿ ಭೇದಿಸಲ್ಪಟ್ಟದು. ಅನೇಕ ವಿಧವಾದ ಸಂಶಯಗಳೂ ಸಂಕಲ್ಪಗಳೂ ಸಾವಿರಾರು ಪಾಲಾಗಿ ಭೇದಿಸಲ್ಪಟ್ಟವು.

## ಅಂಗದಲ್ಲಿ ಲಿಂಗಸಂಯೋಜನ

ಸೂ. ೫೦. ಆತ್ಮವೇತ್ತರು ಯಾವುದನ್ನು ಸುವರ್ಣಮಯವಾದ ಪರಕೋಶದಲ್ಲಿ (ಬ್ರಹ್ಮರಂಧ್ರಾದಿಸ್ಥಾನದ ಕಮಲಕೋಶದಲ್ಲಿ) ಇರುವ ಶುದ್ಧವೂ ನಿಷ್ಕಳವೂ ಜ್ಯೋತಿಸ್ಸ್ವರೂಪವೂ ಆದ ಬ್ರಹ್ಮವೆಂದು ತಿಳಿಯುವರೋ ಆ ಲಿಂಗವನ್ನು (ದೀಕ್ಷೆಯಿಂದ) ಅಮಿತತೇಜಸ್ವಿಯೂ ಶಿವಸ್ವರೂಪನೂ ಆದ ಶಿಷ್ಯನ ಅಂಗದಲ್ಲಿ ಗುರುವು ಪೂರ್ವೋಕ್ತವಾದ ದೀಕ್ಷಾಮಾರ್ಗದಿಂದ ಸಂಯೋಜನ ಮಾಡುವನು.

## ಸಂಯೋಜನ ಕ್ರಮ.

ಸೂ. ೫೧. ೬೦. ಗುರುವು ಶಿಷ್ಯನ ಶರೀರತ್ರಯದಲ್ಲಿರುವ ಮಲತ್ರಯಗಳನ್ನು ದೀಕ್ಷಾತ್ರಯದಿಂದ ಸುಟ್ಟು ಲಿಂಗತ್ರಯದ ಯೋಗವನ್ನುಂಟು ಮಾಡುವನು. ಹೇಗೆ ಪುರವೈರಿಯಾದ ಶಂಕರನು ತ್ರಿಪುರಗಳನ್ನು ಏಕಕಾಲದಲ್ಲಿಯೇ ಸುಟ್ಟು ಬಿಟ್ಟನೋ, ಹಾಗೆಯೇ ಗುರುವು ಶಿಷ್ಯನ ಮಲತ್ರಯಗಳನ್ನು ಏಕಕಾಲದಲ್ಲಿಯೇ ಸುಟ್ಟುಬಿಟ್ಟನು. ಮತ್ತು ವೇಧಾ ಮನು ಕ್ರಿಯೆಗಳೆಂಬ ತ್ರಿವಿಧದೀಕ್ಷೆಯೇ ಜ್ವಾಲೆಯು ಅಂತಹ ಜ್ವಾಲಾ ಸ್ವರೂಪವೇ ಲಿಂಗವು. ಕಾರ್ಮಿಕಮಲ, ಮಾಯಾಮಲ, ಆಣವಮಲಗಳೆಂಬ ತ್ರಿಮಲಗಳ ವಾಸನೆಯೇ ಕರ್ಪುರವು. ಆ ಕರ್ಪೂರದ ಗಂಧವೇ ಅಂಗವು. ಈ ಲಿಂಗಾಂಗಗಳ ಸಂಯೋಗವು ಅಗ್ನಿ ಕರ್ಪೂರದ ಸಂಯೋಗದಂತಿರುವುದು. (ಅಗ್ನಿ ಸಂಬಂಧದಿಂದ ಕರ್ಪೂರವು ಅಗ್ನಿಯಲ್ಲಿ ಕೂಡುವಂತೆ ಲಿಂಗಸಂಬಂಧದಿಂದ ಅಂಗವು ಲಿಂಗದಲ್ಲಿ ಕೂಡಿ ಹೋಗುವುದೆಂದು

ಭಾವವು) ಗುರುವು ಅಂಗತ್ರಯದಲ್ಲಿ ಲಿಂಗತ್ರಯವನ್ನು ದೀಕ್ಷಾಬಲ ದಿಂದಲೇ ಸಂಯೋಜನವಾಡುವನು. ಅಂದರೆ— ಯೋಗಾಂಗದಲ್ಲಿ ವೇಧಾ ದೀಕ್ಷೆಯ ಬಲದಿಂದ ಭಾವಲಿಂಗವನ್ನೂ, ಭೋಗಾಂಗದಲ್ಲಿ ಮಂತ್ರದೀ ಕ್ಷಾಬಲದಿಂದ ಪ್ರಾಣಲಿಂಗವನ್ನೂ, ತ್ಯಾಗಾಂಗದಲ್ಲಿ ಕ್ರಿಯಾದೀಕ್ಷಾಬಲ ದಿಂದ ಇಷ್ಟಲಿಂಗವನ್ನೂ ಸಂಯೋಜನವಾಡುವನು. ಯೋಗಾಂಗವು ಆತ್ಮಾಂಗವಾದುದರಿಂದ ಕಾರಣಾಂಗವೆಂದೂ, ಭೋಗಾಂಗವು ಅಂತರಂ ಗವಾದುದರಿಂದ ಸೂಕ್ಷ್ಮಾಂಗವೆಂದೂ, ತ್ಯಾಗಾಂಗವು ಬಹಿರಂಗವಾದು ದರಿಂದ ಸ್ಥೂಲಾಂಗವೆಂದೂ ಹೇಳಲ್ಪಡುವುದು.

## ಲಿಂಗೋಪಾಸಕರಾದ ತ್ರಿವಿಧ ಜೀವರು.

ಸೂ. ೬೦೬೩ ಸ್ಥೂಲ ಸೂಕ್ಷ್ಮಕಾರಣ ಶರೀರಗಳಲ್ಲಿರುವ ಜೀವನು ಕ್ರಮವಾಗಿ ವಿಶ್ವ, ತೈಜಸ, ಪ್ರಾಜ್ಞನೆಂಬ ಹೆಸರಿನಿಂದ ಕರೆಯಿಸಿಕೊ ಳ್ಳುವನು. ಆ ವಿಶ್ವ ತೈಜಸ ಪ್ರಾಜ್ಞರೆಂಬ ಜೀವರೇ ಕ್ರಮವಾಗಿ ಜೀವಾತ್ಮ ಅಂತರಾತ್ಮ ಪರಮಾತ್ಮರೆಂದು ಹೇಳಲ್ಪಡುವರು. ಒಬ್ಬನಾದ ಜೀವನೇ ವಿಶ್ವ, ತೈಜಸ ಪ್ರಾಜ್ಞನೆಂಬ ಹೆಸರಿನಿಂದ ಕ್ರಮವಾಗಿ, ಸ್ಥೂಲ ಸೂಕ್ಷ್ಮ ಕಾರಣ ಶರೀರಗಳಲ್ಲಿ, ಪರಿಪಿಡಿಯಿಂದ ಇಷ್ಟ, ಪ್ರಾಣ, ಭಾವಲಿಂಗಗ ಳನ್ನು, ಜಾಗ್ರತ್ತು, ಸ್ವಪ್ನ, ಸುಷುಪ್ತಿಯೆಂಬ ಅವಸ್ಥಾತ್ರಯಗಳಲ್ಲಿ ಉಪಾ ಸಿಸುತ್ತಿರುವನು.

## ವಿಚಾರ.

ಸಂಸಾರಕ್ಕೆ ಅನಾದಿಯಾದ ಮಲವು ಹೇತುವಾಗಿವೆ. ಅದು ಆತ್ಮನ ಜ್ಞಾನಶಕ್ತಿಯನ್ನು ಮುಸುಕಿ ಅಜ್ಞಾನವನ್ನುಂಟುಮಾಡುತ್ತದೆ. ಈ ಅಜ್ಞಾನದಿಂದ ಆತ್ಮನು ಅನಾತ್ಮವಸ್ತುಗಳನ್ನು ಕಂಡು, ಕೇಳಿ, ಮೂಸಿ, ಮುಟ್ಟಿ, ಸವಿದು, ಅವುಗಳ ಪ್ರಾಪ್ತಿಗಾಗಿ ಅನೇಕ ಕರ್ಮಗಳನ್ನು ಮಾಡಿ ಸುಖದುಃಖಕ್ಕೀಡಾಗುವನು. ಸುಕೃತ ವಿಶೇಷದಿಂದ ಈಶಾನುಗ್ರಹವು ಸಂಭವಿಸಿ, ಮಲವು ಪರಿಪಕ್ವವಾಗುತ್ತಲೇ “ಅಸ್ಮಾತ್ ಪ್ರವಿಶತಾತ್ ಬಂಧಾತ್ ಪರಸಂಸ್ಥಾ ನಿರೋಧಕಾತ್। ದೀಕ್ಷೈವ ಮೋಚಯತ್ಯೂರ್ಧ್ವಂ ಶೈವಂ ಧಾಮ ನಯತ್ಯಪಿ” ಎಂಬೀ ಪ್ರಮಾಣದಿಂದ ಗುರುರೂಪದಿಂದವ ತರಿಸಿದ ಶಿವನ ಅನುಗ್ರಹ ರೂಪವಾದ ದೀಕ್ಷೆಯೇ ಆತ್ಮನಿಗೆ ಸಂಬದ್ಧ ಸಿದ್ಧ ಈ ಬಂಧವನ್ನು ದೂರಮಾಡಿ ಬಂಧಕ್ಕೆ ಕಾರಣವಾದ ಮಲವಾ

ಯಾಗಕರ್ಮಗಳಿಗಿಂತಲೂ ಅನ್ಯಗಳ ಕಾರ್ಯಜಾತಕ್ಕಿಂತಲೂ ಮೇಲಿನದಾದ ಶಿವತೇಜಸ್ಸನ್ನು ಪ್ರಾಪ್ತಗೊಳಿಸುತ್ತದೆ. ಅಂದರೆ ಬಂಧವು ಜೀವನಶಿವತ್ವವನ್ನು ಕಡೆದಿರುತ್ತದೆ. ಅದನ್ನು ಪರಿಹರಿಸಲು ಶಿವದೀಕ್ಷೆಯಲ್ಲದೆ ಉಪಾಯಾಂತರಗಳು ಸಮರ್ಥವಾಗಲಾರವು.

ಮಲತ್ರಯಗಳಿಂದ ಆವರಿಸಲ್ಪಟ್ಟ ಜೀವನಿಗೆ ಸಂಸಾರಿ ಜೀವನೆನ್ನುವರು. ಆಣವಮಲ, ಮಾಯಾಮಲ, ಕಾರ್ಮಿಕ ಮಲಂಗಳೇ ಮಲತ್ರಯಗಳು. ಶಿವನಲ್ಲಿರುವ ಇಚ್ಛಾ, ಜ್ಞಾನ, ಕ್ರಿಯಾ ಶಕ್ತಿಗಳು ಸಂಕೋಚ ಹೊಂದುತ್ತಾ ತ್ರಿಮಲಗಳ ಸ್ವರೂಪವಾಗುವವೆಂದು ಹೇಳಲ್ಪಟ್ಟಿವೆ. ಇವುಗಳಿಂದಾವರಿಸಲ್ಪಟ್ಟ ಶಿವನೇ ಜೀವನೆನಿಸುವನು.

ಆಣವ ಮಲ — ನಾನು ಸರ್ವಾತ್ಮಕನು ಸರ್ವತ್ರಪರಿಪೂರ್ಣನು ಎಂಬ ವೃತ್ತಿಗೆ ಕಾರಣವಾದ ಪರಶಿವನ ಸಂಕಲ್ಪರೂಪವಾದ ಯಾವ ಇಚ್ಛಾ ಶಕ್ತಿಯುಂಟೋ, ಅದು ಸಂಕೋಚವನ್ನು ಹೊಂದಿ, ಆತ್ಮನ ಸಂಸಾರಕ್ಕೆ ಕಾರಣವಾಗಿ, ಅಜ್ಞಾನ ಗ್ರಂಥಿಯೆಂದೂ ಅವಿದ್ಯೆಯೆಂದೂ ಕರೆಯಿಸಿಕೊಂಡಿತು. ಇದು ಜೀವನಿಗೆ ಕಾರಣ ಶರೀರರೂಪದಿಂದ ಮೊದಲನೆಯ ಆವರಣವಾಗಿರುವದು. ಇದು ಆತ್ಮನಿಗೆ ನಾನು ಶಿವನಲ್ಲವೆಂಬ ಬುದ್ಧಿಯನ್ನೂ, ತಾನಲ್ಲದ ಅಣುರೂಪವಾದ ದೇಹಾದಿಗಳಲ್ಲಿ ತಾನೆಂಬ ಬುದ್ಧಿಯನ್ನು ಹುಟ್ಟಿಸಿ ಆತ್ಮನನ್ನು ಅಣುರೂಪನನ್ನಾಗಿ ಮಾಡಿತು. ಆದುದರಿಂದ ಇದಕ್ಕೆ ಆಣವಮಲವೆನ್ನುವರು. ಇದರಲ್ಲಿ ಅವಿದ್ಯಾತತ್ವವೊಂದೇ ಇರುವದು.

ಮಾಯಾಮಲ — ಜ್ಞಾನಶಕ್ತಿಯು ಸಂಕುಚಿತವಾಗಿ ಸರ್ವಜ್ಞತೆಗೆ ಬದಲಾಗಿ ಕಿಂಚಿಜ್ಞತೆಯನ್ನು ಆತ್ಮನಲ್ಲಿ ಉಂಟುಮಾಡಿ ಮಾಯಾಮಲವೆನಿಸಿಕೊಂಡಿತು. ಇದೇ ಸೂಕ್ಷ್ಮ ಶರೀರರೂಪದಿಂದ ಜೀವನಿಗೆ ಎರಡನೆಯ ಆವರಣವಾಗಿರುವದು. ಇದರಲ್ಲಿ ೬ ಮಿಶ್ರ ತತ್ವಗಳಿರುವವು.

ಕಾರ್ಮಿಕಮಲ — ಕ್ರಿಯಾ ಶಕ್ತಿಯು ಸಂಕುಚಿತವಾಗಿ ಸರ್ವಕರ್ತೃತ್ವಕ್ಕೆ ಬದಲಾಗಿ ಕಿಂಚಿತ್ ಕರ್ತೃತ್ವವನ್ನು ಹೊಂದಿ, ಜೀವನಿಂದ ಶುಭಾಶುಭಕರ್ಮಗಳನ್ನು ಮಾಡಿಸುವ ಕಾರ್ಮಿಕಮಲ ಸ್ವರೂಪವಾಯಿತು. ಇದು ಸ್ಥೂಲಶರೀರರೂಪದಿಂದ ಮೂರನೆಯ ಆವರಣವಾಗಿರುವದು. ಇದರಿಂದ ಜೀವನು ಪುಣ್ಯಪಾಪಗಳನ್ನು ಮಾಡುತ್ತಾ ನಾನು ಸುಖಿ ದುಃಖಿಯೆಂಬ ವ್ಯವಹಾರವುಳ್ಳವನಾದನು. ಇದರಲ್ಲಿ ೨೪ ಅಶುದ್ಧ ತತ್ವಗಳಿರುವವು.

ಈ ಮೂರು ಮಲಗಳ ಬಿಡುಗಡೆಯು ದೀಕ್ಷೆಯಿಂದುಂಟಾಗುವುದು. ಅಂದರೆ ಸೂತ್ರಗಳಲ್ಲಿ ವಿವರಿಸಿದಂತೆ ಗುರುವು ವೇಧಾದಿ ದೀಕ್ಷಾತ್ರಯದಿಂದ ಆಣವಾದಿ ಮಲತ್ರಯಗಳನ್ನು ದೂರಮಾಡಿ ಶರೀರತ್ರಯಗಳಲ್ಲಿ ಲಿಂಗತ್ರಯಗಳನ್ನು ಸಂಯೋಜನ ಮಾಡುವನು. ಆಗ ಮಲತ್ರಯರೂಪವಾದ ಶರೀರಗಳು ನಷ್ಟವಾಗಿ ಲಿಂಗಮಯ ಶರೀರಗಳುಂಟಾಗುವವು. ಈ ಲಿಂಗಮಯ ಶರೀರಿಯಾದ ಜೀವನು ಅಂಗಪದ ವಾಚ್ಯನಾಗುವನು. ಆಗ ಅಂಗನು ಲಿಂಗದಲ್ಲಿ ಉರಿಯುಂಡ ಕರ್ಪೂರದಂತೆ ಬಯಲಾಗುವನು. ಇದೇ ಮೋಕ್ಷವು.

ಆಕ್ಷೇಪ—ಉರಿಯಲ್ಲಿ ಕರ್ಪೂರವು ಸುಟ್ಟು ಅದರ ಸ್ವರೂಪ ನಾಶವಾಗುವದು. ಇದರಂತೆ ಉರಿಯಂತಿರುವ ಲಿಂಗದಲ್ಲಿ ಕರ್ಪೂರದಂತೆ ಆತ್ಮನು ಬಯಲಾಗುವನೆಂದು ಹೇಳಿದರೆ ಆತ್ಮನ ಸ್ವರೂಪನಾಶವೇ ಮೋಕ್ಷವೆಂದು ಹೇಳಿದಂತಾಯಿತು. ಆತ್ಮನಾಶಕರವಾದ ಮೋಕ್ಷದಲ್ಲಿ ಯಾವನಿಗೂ ಪ್ರವೃತ್ತಿಯುಂಟಾಗಲಾರದು.

ಸಮಾಧಾನಃ— ಪೃಥ್ವೀ ತತ್ವವು ಅಗ್ನಿತತ್ವದಿಂದ ಹುಟ್ಟಿದುದಾಗಿದೆ. ಪಾರ್ಥಿವವಸ್ತುಗಳು ನಾಶವಾಗುವವೆಂದರೆ ತಮ್ಮ ಪೃಥ್ವೀಸಂಬಂಧವಾದ ಕಾರ್ಯಾವಸ್ಥೆಯನ್ನು ಬಿಟ್ಟು ತಮಗೆ ಕಾರಣವಾದ ಅಗ್ನಿಸ್ವರೂಪವನ್ನು ಹೊಂದುವುದಲ್ಲದೆ ಅವುಗಳ ಸ್ವರೂಪ ನಾಶವಾಗಲಿಲ್ಲವು. ಕರ್ಪೂರವು ಪಾರ್ಥಿವ ಪದಾರ್ಥವಿರುವುದು. ಅದು ಸುಟ್ಟುಹೋಯಿತೆಂದರೆ ತನಗೆ ಕಾರಣವಸ್ತುವಾದ ಉರಿಯ ಸ್ವರೂಪವನ್ನು ಹೊಂದಿತೆಂದು ತಾತ್ಪರ್ಯವು. ಅಂತೆಯೇ "ಕಾರ್ಯೋಪಾಧಿರಯಂ ಜೀವಃ ಕಾರಣೋಪಾಧಿರೀಶ್ವರಃ" ಎಂಬ ಪ್ರಮಾಣದಿಂದ ಶಿವನ ಕಾರ್ಯರೂಪನಾದ ಆತ್ಮನು ತನಗೆ ಕಾರಣನಾದ ಶಿವನ ಸ್ವರೂಪವನ್ನು ಹೊಂದುವನಲ್ಲದೆ ಅವನ ಸ್ವರೂಪ ನಾಶವಾಗುವದಿಲ್ಲವು. ವೀರಶೈವರು ಕಾರ್ಯಕಾರಣಗಳ ನಿತ್ಯತ್ವವನ್ನೂ, ಅವುಗಳ ಅಭೇದವನ್ನೂ ಮಾನಿಸುವುದರಿಂದ ಮೇಲಿನ ಆಕ್ಷೇಪಕ್ಕೆ ಅವಕಾಶವಿಲ್ಲವು.

ಆಕ್ಷೇಪಃ— "ಜ್ಞಾನಾದೇವಹಿ ಕೈವಲ್ಯಂ" ಇತ್ಯಾದಿ ಪ್ರಮಾಣಗಳಿಂದ ಮುಕ್ತಿಗೆ ಮುಖ್ಯ ಸಾಧನವು ಜ್ಞಾನವೆಂದು ತಿಳಿದುಬರುವುದು. ಆ ಜ್ಞಾನವು ತತ್ವಮಸ್ಯಾದಿ ಶ್ರುತಿವಾಕ್ಯಗಳಿಂದ ಸಿದ್ಧಿಸುವದು. ದೀಕ್ಷೆಯಿಂದ ಶಿವಜ್ಞಾನವಾಗಲೀ, ಶಿವಸ್ವರೂಪ ಮುಕ್ತಿಯಾಗಲೀ ಸಂಭವಿಸದು.

ಮತ್ತು ದೀಕ್ಷೆಯೆಂಬುದೊಂದು ಸಂಸ್ಕಾರವಿರುವುದು. ಇದು ಪ್ರಾಕೃತ ಬ್ರಾಹ್ಮಣರಲ್ಲಿ ಆಗುವ ಉಪನಯನ ಸಂಸ್ಕಾರಕ್ಕೆ ಸಮಾನವಾದುದೆಂದು ಹೇಳಬಹುದು. ಉಪನಯನದಿಂದ ಸಂಸ್ಕೃತನಾದ ಬ್ರಾಹ್ಮಣನು ಮುಂದೆ ಬ್ರಹ್ಮವಿದ್ಯಾಧಿಕಾರಿಯಾಗಿ ಬ್ರಹ್ಮಜ್ಞಾನದಿಂದ ಮುಕ್ತನಾಗುವಂತೆ ವೀರಶೈವನು ದೀಕ್ಷಿತನಾಗಿ ಬ್ರಹ್ಮವಿದ್ಯಾಧಿಕಾರವನ್ನು ಪಡೆದು, ಮುಂದೆ ಬ್ರಹ್ಮವಿದ್ಯಾಜನ್ಯಜ್ಞಾನದಿಂದ ಮುಕ್ತನಾಗುವನೆಂದು ಹೇಳುವುದು ಯುಕ್ತವಲ್ಲವೆ?

ಸಮಾಧಾನ—"ಗರ್ಭಾಷ್ಟಮೇಽಬ್ದೇ ಕುರ್ವೀತ ಬ್ರಾಹ್ಮಣಸ್ಯೋಪನಾಯನಂ" ॥ಮನುಸ್ಮೃತಿ॥ ಎಂದು ಬ್ರಾಹ್ಮಣನಿಗೆ ಅಷ್ಟಮವರ್ಷದಲ್ಲಿ ಉಪನಯನ ಸಂಸ್ಕಾರವು ಹೇಳಲ್ಪಡುವದು. ಈ ಸಂಸ್ಕಾರದಿಂದ ಶರೀರವು ಕರ್ಮಾಧಿಕೃತವಾಗುವುದು. ಆದರೆ ಶರೀರದ ಜಡಭಾವವು ಹಿಂಗುವದಿಲ್ಲ. ಆದುದರಿಂದಲೇ ಬ್ರಹ್ಮೋಪನಿಷತ್ತಿನಲ್ಲಿ "ಕರ್ಮಣ್ಯಧಿಕೃತಾ ಯೇತು ವೈದಿಕೇ ಬ್ರಾಹ್ಮಣಾದಯಃ। ತೈಃ ಸಂಧಾರ್ಯಮಿದಂ ಸೂತ್ರಂ ಕ್ರಿಯಾಂಗಂ ತದ್ಧಿ ವೈ ಸ್ಮೃತಂ" ಉಪನಯನ ಸಂಸ್ಕಾರದಿಂದಾದ ಯಜ್ಞೋಪವೀತ ಧಾರಣವು ಯಾಗಾದಿ ವೈದಿಕ ಕರ್ಮಾಧಿಕಾರ ಪ್ರದವೆಂದು ಹೇಳಲ್ಪಟ್ಟಿದೆ. ಈ ಕರ್ಮಕಲಾಪಕ್ಕೆ ಸ್ವರ್ಗಾದಿಲೋಕಪ್ರಾಪ್ತಿರೂಪವಾದ ಫಲವಲ್ಲದೆ ಅನ್ಯವಿಲ್ಲವು. ಇದನ್ನು ತಿಳಿದ ಪ್ರಾಕೃತ ಬ್ರಾಹ್ಮಣನು ಪುಣ್ಯಕ್ಷಯಾನಂತರದಲ್ಲಿ ದುಃಖಪ್ರದವಾದ ಸ್ವರ್ಗಾದಿಲೋಕವನ್ನುಂಟುಮಾಡುವ ಶಿಖಾಯಜ್ಞೋಪವೀತವನ್ನೂ ಯಜ್ಞಸಹಧರ್ಮಚಾರಿಣಿಯಾದ ಪತ್ನಿಯನ್ನೂ ತ್ಯಜಿಸಿ, ಜ್ಞಾನನಿಷ್ಠನಾಗಿ ಮುಕ್ತನಾಗಲು ಹವಣಿಸುವನು "ತತ್ವೈರೇಭಿರ್ನಿಬದ್ಧಾತ್ಮಾ ಸರ್ವಧರ್ಮೈಶ್ಚಸಂಯುತಃ। ನಾನ್ಯೇನ ಶಕ್ಯತೇ ಮೋಕ್ತುಂ ಮುಕ್ತ್ವಾ ದೀಕ್ಷಾಂ ಶಿವಾತ್ಮಿಕಾಂ" ॥ಸರ್ವಜ್ಞಾನೋತ್ತರಸೂತ್ರ॥ ಇತ್ಯಾದಿ ಪ್ರಮಾಣದಿಂದ ಶಿವನ ಶಕ್ತಿ ರೂಪವಾದ ಶಿವದೀಕ್ಷೆಯನ್ನು ಬಿಟ್ಟು ಆತ್ಮೈಕತ್ವ ಜ್ಞಾನಾದಿಯಾದ ಮತ್ತೊಂದುಪಾಯದಿಂದ ಮಲಪಾಶಾದಿ ಸರ್ವಧರ್ಮಗಳಿಂದಲೂ ತತ್ವಗಳಿಂದಲೂ ಬಂಧಿಸಲ್ಪಟ್ಟ ಆತ್ಮನು ಬಂಧಮುಕ್ತತೆಗೋಸುಗ ಸಮರ್ಥನಾಗಿ ಮಾಡಲ್ಪಡಲಾರನು ಎಂಬುದಾಗಿ ತಿಳಿದು ಬರುವುದು. ತತ್ವಮಸ್ಯಾದಿ ವಾಕ್ಯದಿಂದ ಪಡೆಯುವ ಜ್ಞಾನೋಪದೇಶವು ಈ ದೀಕ್ಷಾಂಗವಾಗಿರುವುದಲ್ಲದೆ ಬೇರಿಲ್ಲವೆಂಬುದು ಸೂತ್ರಪ್ರತಿಪಾದಿತ ವಿಷಯದಿಂದಲೇ ತಿಳಿದು ಬರುವುದು. ದೀಕ್ಷಿತನೆಂದರೆ

ಮುಕ್ತಾತ್ಮನೆಂಬುದೇ ವೀರಶೈವ ಸಂಪ್ರದಾಯವು. ದೀಕ್ಷಾನಂತರದಲ್ಲಿ ಆಚರಿಸುವ ಜ್ಞಾನಕ್ರಿಯೆಗಳು ಲೋಕಹಿತಾರ್ಥವಾದವುಗಳೆಂದು ಹೇಳಲ್ಪಡುವವು. ಆದುದರಿಂದ ದೀಕ್ಷಾಸಂಸ್ಕಾರವು ಉಪನಯನ ಸಂಸ್ಕಾರಕ್ಕೆ ಸಮಾನವಾದುದಲ್ಲವು. ಪ್ರಾಕೃತನು ಉಪನಯನದಲ್ಲಿ ಹೊಂದಿದ ಶಿಖಾಯಜ್ಞೋಪವೀತವನ್ನು ಸನ್ಯಾಸ ಸ್ವೀಕಾರ ಕಾಲಕ್ಕೆ ತ್ಯಜಿಸುವಂತೆ ವೀರಶೈವನು ದೀಕ್ಷಿತನಾಗಿ ತ್ಯಜಿಸತಕ್ಕುದಾವುದಿಲ್ಲವು. ಆತನು ತ್ಯಜಿಸತಕ್ಕ ಪ್ರಾಕೃತಾಚಾರಂಗಳನ್ನು ದೀಕ್ಷಾಪೂರ್ವದಲ್ಲಿಯೇ ತ್ಯಜಿಸಿರುವನು. ಈ ಕಾರಣದಿಂದಲೇ "ಯಥಾ ಮತೇಷು ಸರ್ವೇಷು ತುರಿಯತ್ವೇನ ಶಸ್ಯತೇ। ಸನ್ಯಾಸ ಇತ್ಯಯಂದೇವಿ ವೀರಶೈವಸ್ತಥಾಶ್ರಮಃ" ಅಂದರೆ ಪ್ರಾಕೃತ ಮತಗಳಲ್ಲಿ ಚತುರ್ಥಾಶ್ರಮವೆಂದು ಪ್ರಶಸ್ತಿಯನ್ನು ಪಡೆದ (ಮುಕ್ತಿಹೇತುವಾದ ಜ್ಞಾನದ ಆರ್ಜನೆಗೆ ಮುಖ್ಯವಾದುದೆಂದು ನೆಗಳ್ತೆವಡೆದ) ಯಾವ ಸನ್ಯಾಸವಿದೆಯೋ ಅದರಂತೆಯೇ ಈ ವೀರಶೈವಾಶ್ರಮವಿರುವುದು ಅಂದರೆ ಸನ್ಯಾಸವನ್ನು ಗ್ರಹಿಸಿದ ಪ್ರಾಕೃತನಿಗೂ ದೀಕ್ಷಿತನಾದ ವೀರಶೈವನಿಗೂ ಸಾಮ್ಯವಿರುವುದೆಂದು ಪಾರಮೇಶ್ವರಾಗಮವು ಹೇಳುತ್ತಿರುವುದು. ಇದರಿಂದ ದೀಕ್ಷೆಯು ಉಪನಯನಕ್ಕೆ ಸಮಾನವು ಅಥವಾ ದೀಕ್ಷೆಯೇ ಉಪನಯನವು ಎಂದು ಹೇಳುವುದು ಅವಿಚಾರ ರಮಣೀಯವಾಗಿರುವುದು.

## ಉಪಾಸನೆ.

ಸೂ. ೬೪ ೬೬ ಮೇಲೆ ಹೇಳಿದಂತೆ ಜೀವನು ಶರೀರತ್ರಯದಲ್ಲಿ ಲಿಂಗತ್ರಯವನ್ನು ಉಪಾಸಿಸುವನು. ಆ ಉಪಾಸನೆಯೇ ಲಿಂಗಾಂಗಗಳ ಸಂಯೋಗವು. ಆ ಸಂಯೋಗವೇ ದ್ವೈತವಿಲಯವು. ಆ ದ್ವೈತವಿಲಯವೇ ನಿವೃತ್ತಿ (ಶಿವತ್ವಪ್ರಾಪ್ತಿಯಿಂದಾದ ಜೀವತ್ವದ ನಿವೃತ್ತಿ) ಯೆಂದು ಹೇಳಲ್ಪಡುವುದು. ಅಂತಹ ನಿವೃತ್ತಿಯೇ ವಿಶ್ರಾಂತಿಯು. ಈ ವಿಶ್ರಾಂತಿಯೇ (ವೀರಶೈವರ) ಮೋಕ್ಷರೂಪವಾದ ಪರಮಪದವು. ಸ್ಫಟಿಕ ಶುಭ್ರತ್ವಗಳಲ್ಲಿಯೂ, ದೀಪ ತತ್ಪ್ರಭೆಗಳಲ್ಲಿಯೂ, ಅಣಿಕಲ್ಲು ನೀರುಗಳಲ್ಲಿಯೂ, ಕರ್ಪೂರತದ್ಗಂಧಗಳಲ್ಲಿಯೂ, ಆಕಾಶವಾಯುಗಳಲ್ಲಿಯೂ ಇರುವ ಭಾಗಯೋಗದಂತೆ, ಅಂದರೆ ಸ್ಫಟಿಕ ಶುಭ್ರತ್ವಾದಿಗಳು ಅಭೇದದಲ್ಲಿ ಮುಗಿಯುವ ಭಾಗವನ್ನೊಳಕೊಂಡಿರುವವು. ಅದರಂತೆಯೇ ವಿಭಾಗ ಪರಾಮರ್ಶರೂಪವಾದ ಶಕ್ತಿಯಿಂದ ದ್ವಿವಿಧವಾದ ಲಿಂಗಾಂಗಗಳ ಸಂಯೋಗವಾದರೂ ಇರುವುದು.

## ವಿಚಾರ

ಇಲ್ಲಿ ಉಪಾಸನವೆಂದರೆ ಉಪಾಸಕನು ತನಗನ್ಯವಾದ ಉಪಾಸ್ಯ ಮೂರ್ತಿಯನ್ನು ಎದುರಿಟ್ಟು ಧ್ಯಾನಿಸುವುದೆಂದರ್ಥವಲ್ಲವು. ಅಂಗಪದವಾಚ್ಯನಾದ ಆತ್ಮನು ತಾನು ಲಿಂಗಸ್ವರೂಪನಾಗಿರುವೆನೆಂದು ಯಾವಾಗಲೂ ಸ್ವಸ್ವರೂಪಾನುಸಂಧಾನದಲ್ಲಿರುವುದೇ ಉಪಾಸನೆಯು. ಈ ಉಪಾಸನೆಯಿಂದ ಅಂಗನಲ್ಲಿ (ಜೀವನಲ್ಲಿ) ಶಿವತತ್ವಾಭಿವ್ಯಕ್ತಿಯು ಸ್ಫುಟಗೊಂಡು ಸರ್ವತೋಮುಖವಾಗಿ ಬೆಳಗುವುದು. ಆದುದರಿಂದಲೇ ಕಾರ್ಯಕಾರಣಗಳ ಅಭೇದದೃಷ್ಟಿಯಿಂದ ಉಪಾಸನೆಯೇ ಪರಮಪದವೆಂದು ಸೂತ್ರದಲ್ಲಿ ಪ್ರತಿಪಾದಿತವಾಗಿರುವುದು. ಲಿಂಗಾಂಗಸಂಯೋಗ ವಿಧಿಯಿಂದುಂಟಾದ ಆತ್ಮವಿಕಾಸವು ಮುಂದೆ ಹೇಳಲ್ಪಡುತ್ತದೆ.

ಸೂ. ೬೬. ೨೦. ಈ ಪ್ರಕಾರದ ಗುರುವಿನ ಕರ್ತವ್ಯರೂಪವಾದ ಉಪದೇಶವೆಂಬ ಲಿಂಗಾಂಗಸಂಯೋಗವಿಧಿಯಿಂದ ಆತ್ಮನಲ್ಲಿರುವ (ಅಂಗನ ಶಕ್ತಿಸ್ವರೂಪವಾದ) ಬೀಜರೂಪವಾದ ಪರಾಭಕ್ತಿಯು ಒಳಹೊರಗೆಲ್ಲಾ ಕಡೆಯಲ್ಲಿಯೂ ಹಬ್ಬಿಕೊಂಡು, ವಿಶಾಲವಾಗಿ ಬೆಳೆಯುವುದು. ಭಕ್ತಿಯು ಬೀಜವಾಗಿಯೂ, ಆತ್ಮನು ತದ್ಬೀಜವನ್ನು ಗರ್ಭೀಕರಿಸಿಗೊಂಡ ಕ್ಷೇತ್ರ (ಹೊಲ) ವಾಗಿಯೂ, ಈಶ್ವರನೇ ಬೀಜಿಯಾಗಿಯೂ (ಬೀಜವನ್ನು ಬೆಳೆಸುವವನು) ಅಥವಾ ಭಕ್ತಿಬೀಜದ ವಿಕಾಸರೂಪವಾದ ವೃಕ್ಷವಾಗಿಯೂ ಇರುವರು. ಬೀಜಕ್ಕೂ ಬೀಜಿಯಾದ ವೃಕ್ಷಕ್ಕೂ, ಮತ್ತು ವೃಕ್ಷತದುತ್ಪತ್ತಿಸ್ಥಾನಭೂತಕ್ಷೇತ್ರಗಳಿಗೂ ಯಾವೆಡೆಯಲ್ಲಿಯೂ ವಿಯೋಗವಿಲ್ಲದೆ ಯಾವಾಗಲೂ ಸಂಯೋಗವೇ ಇರುವುದು. ಮತ್ತು ಆತ್ಮರೂಪವಾದ ಅಂಗದ ಹೃದಯವೇ ಪರಬ್ರಹ್ಮರೂಪಲಿಂಗವು. ಆ ಲಿಂಗದ ಹೃದಯವೇ ಅಂಗವು. ಇಂತಹ ಅಂಗಲಿಂಗಗಳಿಗೆ ಹೇಗೆ ವಿಯೋಗವು ಸಂಭವಿಸುವುದು. ಯಾವಾಗಲೂ ಸಂಯೋಗವೇ ಇರುವುದಲ್ಲವೆ?

## ಭಕ್ತಿಯ ವೈಭವವು.

ಸೂ. ೨೦ ಲಿಂಗಾಂಗ ಸಂಯೋಗವಿಧಿಯಿಂದ ಅಥವಾ ಲಿಂಗಾಂಗ ಸಂಯೋಗಜ್ಞಾನದಿಂದ ಪಡೆದುಕೊಂಡದ್ದೆಂದರೆ, ಆತ್ಮಕ್ಷೇತ್ರದಲ್ಲಿ ಬೆಳೆಯುವ ಶಿವಾಕಾರವಾದ ವೃಕ್ಷದ ಬೀಜಭೂತವಾದ ಪರಾಭಕ್ತಿಯೇ ಇರುವುದು. ಆದುದರಿಂದಲೇ ಈ ಭಕ್ತಿಯ ವೈಭವವು (ಅಂದರೆ, ಷಟ್‌ಸ್ಥಲ ಸಿದ್ಧಾಂತದಲ್ಲಿ ಪಂಚಮಪುರುಷಾರ್ಥವೆಂಬ ಪ್ರಶಸ್ತಿಯು.)

## ವಿಚಾರ

ಮೇಗಣ ವಿಷಯದಿಂದ ಷಟ್‌ಸ್ಥಲಸಿದ್ಧಾಂತದ ಭಕ್ತಿಯು ಗುಟ್ಟನ್ನು ಚನ್ನಾಗಿ ತಿಳಿದು ಕೊಳ್ಳಬಹುದಾಗಿದೆ. ನಿತ್ಯಾನಂದ ಪ್ರಾಪ್ತಿಗೆ ಆತ್ಮಜ್ಞಾನ ಆತ್ಮಕ್ರಿಯೆ ಆತ್ಮತೇಜಸ್ಸು ಇವೇ ಮೊದಲಾದವುಗಳು ಸಾಧನವಾಗಿರುವವೆಂದು ಶಾಸ್ತ್ರಾಂತರಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವವುಗಳೆಲ್ಲವೂ ವೀರಶೈವ ಸಿದ್ಧಾಂತದಲ್ಲಿ ಹೇಳಿದ ಈ ಭಕ್ತಿಯೆಂಬ ಸಮುದ್ರ ತೆರೆಗಳೆಂದು ಊಹಿಸಬಹುದಾಗಿದೆ. ಮೋಕ್ಷವೆಂದು ಕರೆಯಿಸಿಕೊಳ್ಳುವ ನಿತ್ಯಾನಂದವಾದರೂ ಭಕ್ತಿಯೆಂಬ ಸೂರ್ಯಪ್ರಭೆಯ ಅಂಶವಾದೊಂದು ಕಿರಣವೆಂದು ಹೇಳಿದರೆ ತಪ್ಪಾಗದು. ಆದುದರಿಂದಲೇ ವೀರಶೈವ ತತ್ವಜ್ಞರು ಮುಕ್ತಿಯನ್ನು ಬಿಟ್ಟು, ಭಕ್ತಿಯನ್ನೇ ಅಪೇಕ್ಷಿಸುವರು. ಬೀಜದಲ್ಲಿ ಗಿತ್ತ ಅಡಗಿರುವಂತೆ ಈ ಭಕ್ತಿಯಲ್ಲಿ ಶಿವನಡಗಿರುವನು. ಅಂದರೆ ಭಕ್ತಿಯೆಂಬ ಬೀಜದ ವಿಕಾಸ ಸ್ಥಿತಿಯೇ ಶಿವಸ್ವರೂಪವು. ಇಂತಹ ಭಕ್ತಿಯ ವೈಶಿಷ್ಟ್ಯವು ವೀರಶೈವ ಸಿದ್ಧಾಂತದಲ್ಲಿ ದೃಷ್ಟವಾದಂತೆ ಮತ್ತಾವ ಸಿದ್ಧಾಂತದಲ್ಲಿಯೂ ನಮ್ಮಿಂದ ದೃಷ್ಟವಾಗಿಲ್ಲವು.

## ಷಡ್ವಿಧ ಭಕ್ತಿಯು

ಜೀವಾತ್ಮನಲ್ಲಿ ಬೀಜಭೂತವಾಗಿರುವ ಭಕ್ತಿಯು ಭಕ್ತಾದಿ ಷಡಂಗಗಳಲ್ಲಿ ವಿಕಾಸವನ್ನು ಹೊಂದುತ್ತಾ ಷಡ್ವಿಧಭಕ್ತಿಯೆಂದೆನಿಸಿಕೊಂಡು, ಕಡೆಗೆ ಶಿವನನ್ನು ಸಾಧಿಸುವ ಅಂದರೆ ಶಿವಸ್ವರೂಪವನ್ನು ಹೊಂದುವ ಬಗೆಯನ್ನು "ಅಸ್ಯಾ ಸ್ವರೂಪ" ಇತ್ಯಾದಿ ಸೂತ್ರಗಳಿಂದ ಪ್ರತಿಪಾದಿಸುವನು.

ಸೂ. ೨೧ ೨೨. ಸದ್ಭಕ್ತಿ—ಜೀವಾತ್ಮನಲ್ಲಿ ಬೀಜಭೂತವಾದ ಭಕ್ತಿಯೇ ಸ್ವರೂಪ ಸದ್ಭಾವವನ್ನು ಹೊಂದಲು (ಆಚಾರದಲ್ಲಿ ಶ್ರದ್ಧಾಯುಕ್ತವಾಗಿ ಸ್ಥಿರಗೊಳ್ಳಲು) ಸದ್ಭಕ್ತಿಯೆನಿಸಿಕೊಂಡಿತು. ಈ ಸದ್ಭಕ್ತಿಯಿಂದಲೇ ಜೀವಾತ್ಮನಿಗೆ ಆಚಾರಲಿಂಗಯುಕ್ತವಾದ ಭಕ್ತಸ್ಥಲವೆಂದು ಒಂದನೆಯದಾದ ಅಂಗಸ್ಥಲವು ಪ್ರಾಪ್ತವಾಯಿತು.

ಸೂ. ೨೨ - ೨೩ - ೨೪. ನೈಷ್ಠಿಕೀಭಕ್ತಿ— ಭಕ್ತಸ್ಥಲಗತವಾದ ಸದ್ಭಕ್ತಿಯೇ (ಗುರುಶಾಸ್ತ್ರಾದಿಗಳಲ್ಲಿರುವ) ನಿಜನಿಷ್ಠೆಯಿಂದ ಸಂಪೂರ್ಣವಾ

ಗಳಾಗಿ ನೈಷ್ಠಿಕೀ ಭಕ್ತಿಯೆಂದೆನಿಸಿಕೊಂಡಿತು. ಈ ಭಕ್ತಿಯಿಂದ ಆತ್ಮನಿಗೆ ಗುರುಲಿಂಗಯುಕ್ತವಾದ ಮಹೇಶ್ವರಸ್ಥಲವೆಂಬ ಎರಡನೆಯ ಅಂಗಸ್ಥಲವು ಉಂಟಾಯಿತು.

ಸೂ. ೭೪, ೭೬. ಅವಧಾನಭಕ್ತಿ— ಮಹೇಶಸ್ಥಲದಲ್ಲಿರುವ ನೈಷ್ಠಿಕೀ ಭಕ್ತಿಯೇ ಅವಧಾನಸ್ವರೂಪದಿಂದ (ಗುರುದತ್ತವಾದ ಶಿವಲಿಂಗದಲ್ಲಿರುವ ಎಚ್ಚರಿಕೆಯಿಂದ) ಅವಧಾನ ಭಕ್ತಿಯೆಂದೆನಿಸಿಕೊಂಡಿತು. ಈ ಭಕ್ತಿಯಿಂದ ಆತ್ಮನಿಗೆ ಶಿವಲಿಂಗಯುಕ್ತವಾದ ಪ್ರಸಾದಿಸ್ಥಲವೆಂಬ ಮೂರನೆಯ ಅಂಗಸ್ಥಲವು ಪ್ರಾಪ್ತವಾಯಿತು.

ಸೂ ೭೬–೭೮ ಅನುಭವ ಭಕ್ತಿ— ಪ್ರಸಾದಿ ಸ್ಥಲಗತವಾದ ಅವಧಾನ ಭಕ್ತಿಯೇ ಸ್ವಾನುಭವದಿಂದ (ತನ್ಮಾತ್ಮ ರೂಪದಿಂದ ಅನನ್ಯವಾದ ಶಿವಾನುಭವದಿಂದ) ಅನುಭವ ಭಕ್ತಿಯೆಂದೆನಿಸಿಕೊಂಡಿತು. ಈ ಭಕ್ತಿಯಿಂದ ಆತ್ಮನಿಗೆ ಚರಲಿಂಗ ಯುಕ್ತವಾದ ಪ್ರಾಣಲಿಂಗಿಸ್ಥಲವೆಂಬ ನಾಲ್ಕನೆಯ ಅಂಗಸ್ಥಲವು ಪ್ರಾಪ್ತವಾಯಿತು.

ಸೂ. ೭೮. ೮೦. ಆನಂದಭಕ್ತಿ— ಪ್ರಾಣಲಿಂಗಿಸ್ಥಲದಲ್ಲಿರುವ ಅನುಭವ ಭಕ್ತಿಯೇ ಆನಂದಯೋಗದಿಂದ (ಶಿವಾನುಭವದಿಂದುಂಟಾದ ಅಂತರಾನಂದದ ಪ್ರಾಪ್ತಿಯಿಂದ) ಆನಂದ ಭಕ್ತಿಯೆಂದೆನಿಸಿಕೊಂಡಿತು. ಈ ಭಕ್ತಿಯಿಂದ ಆತ್ಮನಿಗೆ ಪ್ರಸಾದಲಿಂಗಯುಕ್ತವಾದ ಶರಣಸ್ಥಲವೆಂಬ ಐದನೆಯ ಅಂಗಸ್ಥಲವು ದೊರೆದುದು.

ಸೂ. ೮೦. ೮೨. ಸಮರಸಭಕ್ತಿ— ಶರಣಸ್ಥಲದಲ್ಲಿರುವ ಆನಂದ ಭಕ್ತಿಯೇ ಸಾಮರಸ್ಯದ ಪ್ರಭಾವದಿಂದ (ಅಂತರಾನಂದಮಗ್ನತೆಯಿಂದುಂಟಾದ ಸಾಮರಸ್ಯದ ಮಹಿಮೆಯಿಂದ) ಸಮರಸಭಕ್ತಿಯೆಂದೆನಿಸಿಕೊಂಡಿತು. ಈ ಭಕ್ತಿಯಿಂದ ಆತ್ಮನಿಗೆ ಮಹಾಲಿಂಗಯುಕ್ತವಾದ ಐಕ್ಯಸ್ಥಲವೆಂಬ ಆರನೆಯ ಅಂಗಸ್ಥಲವು ಸಮನಿಸಿತು.

ಸೂ. ೮೨. ೮೫. ಭಕ್ತಿಯು ತಾನು ಸ್ವಕೀಯಸ್ಥಾನದಲ್ಲಿಯೇ ಇದ್ದು (ಮೇಲೆ ಹೇಳಿದಂತೆ) ಷಡಂಗಯೋಗಮಾರ್ಗದಿಂದ ಈಶ್ವರನನ್ನು ಸಾಧಿಸುತ್ತದೆ (ಈಶ್ವರಸ್ವರೂಪವನ್ನು ಹೊಂದುತ್ತದೆ) ಸಾಧಕನಾದ ಜೀವನಿಗೆ (ಈ ಭಕ್ತಿಯಿಂದ) ಒಂದು ಕಾಲದಲ್ಲಿ ಷಟ್‌ಸ್ಥಲಪ್ರಾಪ್ತಿಯು ಸಿದ್ಧಿಯುಂಟಾಗುವುದು. ಆಚಾರಾದಿಯಾದ ಆರು ಲಿಂಗಸ್ಥಲಗಳು ಸಾಧ್ಯರೂಪದಿಂದಲೂ,

ಭಕ್ತಾದಿಯಾದ ಆರು ಅಂಗಸ್ಥಲಗಳು ಸಾಧಕರೂಪದಿಂದಲೂ ಆತ್ಮನಿಂದ ಹೊಂದಲ್ಪಡುತ್ತವೆ. ಆಚಾರಾದಿಲಿಂಗಸ್ಥಲದಲ್ಲಿ ಶಿವನು ಸಾಧ್ಯನಾಗಿಯೂ, ಭಕ್ತಾದ್ಯಂಗಸ್ಥಲದಲ್ಲಿ ಆತ್ಮನು ಸಾಧಕನಾಗಿಯೂ, ಇರುವನು.

## ನಿವೃತ್ತಿ ಮಾರ್ಗದ ಷಡ್ವಿಧಲಿಂಗಗಳು

ಸೂ. ೮೬. ಆಚಾರಲಿಂಗ, ಗುರುಲಿಂಗ ಶಿವಲಿಂಗ, ಚರಲಿಂಗ, ಪ್ರಸಾದಲಿಂಗ, ಮಹಾಲಿಂಗವೆಂಬೀ ಆಚಾರಾದಿಲಿಂಗಕ್ರಮವನ್ನು ಆಯ್ದರು ನಿವೃತ್ತಿಮಾರ್ಗದಿಂದ ಹೇಳುವರು. (ಆಚಾರಾದಿ ಲಿಂಗಗಳು ಕ್ರಮವಾಗಿ ಒಂದರಲ್ಲೊಂದು ಅಂದರೆ ಆಚಾರವು ಗುರುವಿನಲ್ಲಿ ಗುರುವು ಶಿವಲಿಂಗದಲ್ಲಿ ಈ ರೀತಿಯಾಗಿ ಐಕ್ಯವನ್ನು ಹೊಂದುವುದೇ ನಿವೃತ್ತಿಮಾರ್ಗವು.)

## ನಿವೃತ್ತಿ ಮಾರ್ಗದ ಷಡಂಗಗಳು

ಸೂ. ೮೭. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯವೆಂಬ ಅಂಗಸ್ಥಲಕ್ರಮವೂ ನಿವೃತ್ತಿ ಮಾರ್ಗದಿಂದಿರುವುದು. (ಲಿಂಗಸ್ಥಲದಂತೆ ಇಲ್ಲಿಯೂ ಭಕ್ತಾದಿ ಸ್ಥಲಗಳು ಒಂದರಲ್ಲೊಂದು ಐಕ್ಯವಾಗುವವೆಂದು ಭಾವವು.)

## ಬ್ರಹ್ಮಾದಿಗಳು ಷಟ್‌ಸ್ಥಲಾತ್ಮಕರು.

ಸೂ. ೮೮. ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಪರಶಿವ ಎಂಬಿವರು ಷಟ್‌ಸ್ಥಲಾತ್ಮಕರಾಗಿರುವರು.

## ಉಪಸಂಹಾರ.

ಸೂ. ೮೯ — ೯೦. ಈ ರೀತಿಯಾಗಿ ಶಿವನಿಂದುಕ್ತವಾಗಿರುವಂತೆ ಲಿಂಗಾಂಗ ಸಂಯೋಗ ವಿಧಿಯು ನಮ್ಮಿಂದ (ಮಾಯಿದೇವ ಪ್ರಭುಗಳಿಂದ) ಆದರ ಪೂರ್ವಕವಾಗಿ ಹೇಳಲ್ಪಟ್ಟಿದು. ಈ ಶಿವಸಿದ್ಧಾಂತ ತಂತ್ರನಾಮಕವಾದ ಶಿವಾದ್ವೈತವನ್ನು ಯಾವಾತನು ತಿಳಿದುಕೊಳ್ಳುವನೋ ಆ ಪ್ರಭುವು ತನ್ನ ಅವಿದ್ಯಾ ಗ್ರಂಥಿಯನ್ನು ಭೇದಿಸುವನು.

**ಪಂಚಮಾಧಿಕರಣಂ ಸಂಪೂರ್ಣ.**



# ಷಷ್ಠಾಧಿಕರಣಂ.

## ಸರ್ವಾಂಗಲಿಂಗ ಸಾಹಿತ್ಯನಿರೂಪಣಂ

ದೀಕ್ಷಿತನಾದ ವೀರಶೈವನು ಲಿಂಗಶರೀರಿಯಾಗುವನು. ವೀರಶೈವನ ಸ್ಥೂಲ, ಸೂಕ್ಷ್ಮ, ಕಾರಣಗಳಲ್ಲಿಯೂ ಆ ಶರೀರಗತ ಜ್ಞಾನ ಕರ್ಮೇಂದ್ರಿಯಂಗಳಲ್ಲಿಯೂ ಲಿಂಗರೂಪವೇ ನೆಲೆಗೊಂಡಿರುವದು. ಅಂಗ ಅಥವಾ ಮಂತ್ರರೂಪವಲ್ಲದ ಯಾವ ಶರೀರ ಭಾಗವೂ ವೀರಶೈವನಿಗಿಲ್ಲವು. ಜೀವಾತ್ಮನ ಉಪಭೋಗಸಾಧನವಾದ ಶರೀರದಿಂದಾಗುವ ಸರ್ವವಿಧದ ಉಪಭೋಗಗಳು ವೀರಶೈವನಿಗೆ ಲಿಂಗಪ್ರಸಾದವಲ್ಲದೆ ವಿಷಯಾತ್ಮಕವಲ್ಲವು. ಆದುದರಿಂದಲೇ ವೀರಶೈವನು ಲಿಂಗಭೋಗೋಪಭೋಗಿಯೆಂದು ಕರೆಯಿಸಿಕೊಳ್ಳುವನು. ಇದೇ ವಿಷಯವೇ ಸೂತ್ರಕಾರನಿಂದ ಮುಂದಿನ ಅಧಿಕರಣಗಳಲ್ಲಿ ಪ್ರತಿಪಾದಿಸಲ್ಪಡುವದು. ೬ನೆಯ ಅಧಿಕರಣದಲ್ಲಿ ಸರ್ವಾಂಗಲಿಂಗಸಾಹಿತ್ಯವು ಹೇಳಲ್ಪಡುವುದೆಂದು ಪ್ರಥಮ ಸೂತ್ರದಿಂದ ವಿವರಿಸುವನು.

ಸೂ. ೧. ಪೂರ್ವವಿಷಯ ಪ್ರತಿಪಾದನಾನಂತರದಲ್ಲಿ ಶ್ರೀ ಶಂಕರನಿಂದ ಅನಂತ ತತ್ವಾರ್ಥ ಪ್ರಕಾಶಕವಾದ ಯಾವ ಸರ್ವಾಂಗಲಿಂಗ ಸಾಹಿತ್ಯವು ಹೇಳಲ್ಪಟ್ಟಿರುವದೋ, ಅದನ್ನೇ ಇಲ್ಲಿ ಸಂಕ್ಷಿಪ್ತವಾಗಿ ಹೇಳುವೆನು.

## ಸರ್ವಾಂಗಲಿಂಗ ಸಾಹಿತ್ಯದ ಸ್ವರೂಪ

ಸೂ. ೨. ೩. ಈ (ದೀಕ್ಷಿತನಾದ) ವೀರಶೈವನಿಗೆ ತನ್ನಲ್ಲಿ ಗುರೂಪದೇಶದಿಂದ ಪ್ರತಿಷ್ಠಿತವಾದ ಲಿಂಗವು ತನ್ನ ಸರ್ವಾಂಗಗಳಲ್ಲಿಯೂ ಸರ್ವ ಕಡೆಯಲ್ಲಿ ಸರ್ವದಾ ಸರ್ವತೋ ಮುಖವಾಗಿ ಪ್ರಕಾಶಿಸುತ್ತಿರುವುದು ಅವುದುಂಟೋ, ಅದೇ ಸರ್ವಾಂಗಲಿಂಗ ಸಾಹಿತ್ಯವೆಂದು ಲಿಂಗತತ್ವಜ್ಞರಿಂದ ಹೇಳಲ್ಪಡುವುದು.

## ಸರ್ವಾಂಗಲಿಂಗಗಳ ವಿವರವು

ಸೂ. ೪ ರಿಂದ ೮. ಈ ವೀರಶೈವನ ಅಂಗದಲ್ಲಿ ಸುಪ್ರತಿಷ್ಠಿತವಾದ ಒಂದೇ ಪರಲಿಂಗವೇ ಅನೇಕವಾದ ನಾಮ, ರೂಪ, ಕ್ರಿಯಾತ್ಮಕತೆಯಿಂದ

ಸರ್ವತೋ ಮುಖವಾಗಿ ಪ್ರಕಾಶಿಸುತ್ತಿರುವುದು. ಅಂದರೆ ಆತ್ಮನ ಸ್ಥೂಲ ಸೂಕ್ಷ್ಮ, ಕಾರಣಾಂಗಗಳಲ್ಲಿ ಕ್ರಮವಾಗಿ ಇಷ್ಟ, ಪ್ರಾಣ, ಭಾವಲಿಂಗ ರೂಪದಿಂದಲೂ; ಹೃದಯ, ಶ್ರೋತ್ರ, ತ್ವಕ್, ನೇತ್ರ, ಜಿಹ್ವಾ, ನಾಸಿಕಾಂಗಗಳಲ್ಲಿ ಪರಿವಿಡಿಯಿಂದ ಮಹಾಲಿಂಗ, ಪ್ರಸಾದಲಿಂಗ, ಚರಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗರೂಪದಿಂದಲೂ ಪ್ರತಿಷ್ಠಿತವಾಗಿ ಬೆಳಗುತ್ತಿರುವುದು. ಮತ್ತು ಹೇಗೆ ಜ್ಞಾನೇಂದ್ರಿಯಾಂಗಗಳಲ್ಲಿ ಕ್ರಮವಾಗಿ ಪ್ರಸಾದಾದಿ ಲಿಂಗರೂಪದಿಂದಿರುವುದೋ, ಹಾಗೆಯೇ ಕರ್ಮೇಂದ್ರಿಯಾಂಗಗಳಲ್ಲಿಯೂ ಕ್ರಮವಾಗಿ ಪ್ರಸಾದಾದಿ ಲಿಂಗರೂಪದಿಂದ ಪ್ರತಿಷ್ಠಿತವಾಗಿರುವುದು. ( ಇದರ ವಿವರವನ್ನು ಕೆಳಗೆ ಕೊಟ್ಟದೆ.

## ಜ್ಞಾನ ಕರ್ಮೇಂದ್ರಿಯಾಂಗಳಿಗೂ ಅವುಗಳ ವಿಷಯಗಳಿಗೂ ಅಭೇದ

ಸೂ. ೯. ೧೦. ೧೧. ಶ್ರೋತ್ರ, ತ್ವಕ್, ನೇತ್ರ, ಜಿಹ್ವಾ, ನಾಸಿಕವೆಂಬ ಜ್ಞಾನೇಂದ್ರಿಯಗಳಿಗೂ, ವಾಕ್, ಪಾಣಿ, ಪಾದ, ಗುಹ್ಯ, ಗುದವೆಂಬ ಕರ್ಮೇಂದ್ರಿಯಗಳಿಗೂ ಕ್ರಮವಾಗಿ ಪರಸ್ಪರ ಭೇದವಿಲ್ಲವು. ಇದರಂತೆಯೇ ಜ್ಞಾನ ಕರ್ಮೇಂದ್ರಿಯ ವಿಷಯಗಳಿಗೂ ಅಂದರೆ- ಶಬ್ದವಚನಗಳಿಗೂ, ಸ್ಪರ್ಶ ಆದಾನಗಳಿಗೂ, ರೂಪಗಮನಗಳಿಗೂ, ರಸ ಆನಂದಗಳಿಗೂ, ಗಂಧವಿಸರ್ಜನಗಳಿಗೂ ಪರಸ್ಪರ ಭೇದವಿಲ್ಲವು. ಭೇದವಿಲ್ಲವೆಂಬ ವಿಷಯದಲ್ಲಿ ಸತ್ಯಾರ್ಥವಾದಿನಿಯಾದ ಶ್ರುತಿಯು ಪ್ರಮಾಣವಾಗಿರುವದು. ಭೇದವಿದೆಯೆಂದರೆ ಶ್ರುತಿಯು ಅಪ್ರಮಾಣವಾದೀತು.

## ಅಧಿದೇವತೆಗಳು.

ಸೂ. ೧೨ ರಿಂದ ೧೬. ಶ್ರೋತ್ರ, ವಾಕ್, ಶಬ್ದ, ಆಕಾಶ ಇವುಗಳಿಗೆ ಈಶ್ವರನ ಈಶಾನ ಮೂರ್ತಿಯೂ, ತ್ವಕ್, ಪಾಣಿ, ವಾಯು, ಸ್ಪರ್ಶಗಳಿಗೆ ತತ್ಪುರುಷ ಮೂರ್ತಿಯೂ, ನೇತ್ರ, ಪಾದ, ರೂಪ, ಅಗ್ನಿಗಳಿಗೆ ಅಘೋರ ಮೂರ್ತಿಯೂ ಜಿಹ್ವಾ, ಗುಹ್ಯ, ರಸ, ಜಲಗಳಿಗೆ ವಾಮದೇವ ಮೂರ್ತಿಯೂ, ನಾಸಿಕಾ, ಗುದ, ಗಂಧ, ಭೂಮಿಗಳಿಗೆ ಸದ್ಯೋಜಾತ ಮೂರ್ತಿಯೂ ಅಧಿದೈವಗಳಾಗಿರುವವು.

## ವಿಚಾರ.

ಒಂದು ಜ್ಞಾನೇಂದ್ರಿಯ, ಅದರ ವಿಷಯ; ಮತ್ತು ಒಂದು ಕರ್ಮೇಂದ್ರಿಯ ಅದರ ವಿಷಯ; ಮತ್ತು ಆ ಇಂದ್ರಿಯಕ್ಕೆ ಸಂಬಂಧಿಸಿದ ಭೂತ ಹೀಗೆ ಐದದಕ್ಕೂ ಈಶಾನಾದಿ ಮೂರ್ತಿಗಳಲ್ಲಿ ಕ್ರಮವಾಗಿ ಒಂದೊಂದು ಅಧಿದೈವಗಳಾಗಿರುವವೆಂದು ತಿಳಿಯತಕ್ಕದ್ದು. ಹೇಗೆಂದರೆ—

| ಜ್ಞಾನೇಂದ್ರಿಯ | ತದ್ವಿಷಯ. | ಕರ್ಮೇಂದ್ರಿಯ | ತದ್ವಿಷಯ. | ಭೂತ | ಅಧಿದೈವ. |
|---|---|---|---|---|---|
| ಶ್ರೋತ್ರ | ಶಬ್ದ | ವಾಕ್ಕು | ವಚನ | ಆಕಾಶ | ಈಶಾನ |
| ತ್ವಕ್ಕು | ಸ್ಪರ್ಶ | ಪಾಣಿ | ಆದಾನ | ವಾಯು | ತತ್ಪುರುಷ |
| ನೇತ್ರ | ರೂಪ | ಪಾದ | ಗಮನ | ಅಗ್ನಿ | ಅಘೋರ |
| ಜಿಹ್ವೆ | ರಸ | ಗುದ | ಆನಂದ | ಜಲ | ವಾಮದೇವ |
| ನಾಸಿಕ | ಗಂಧ | ಗುಹ್ಯ | ವಿಸರ್ಜನ | ಪೃಥ್ವಿ | ಸದ್ಯೋಜಾತ |

## ಹೃದಯ

ಸೂ. ೧೭. ೧೮. ಮೇಲೆ ಹೇಳಿದ ಜ್ಞಾನಕರ್ಮೇಂದ್ರಿಗಳೆಲ್ಲಕ್ಕೂ ಹೃದಯವೇ ಆಶ್ರಯವು ಹೀಗೆ ಎಲ್ಲಕ್ಕೂ ಇದೇ ಆಶ್ರಯವಾಗಿರುವುದರಿಂದಲೂ ನಿರ್ಮಲವಾಗಿರುವದರಿಂದಲೂ ಇದು ಜ್ಞಾನಕರ್ಮೋಭಯಾತ್ಮಕವೆನಿಸಿಕೊಳ್ಳುವುದು. ಸಕಲೇಂದ್ರಿಯಂಗಳಿಗೂ ಇದು ಅವಕಾಶವನ್ನು ಕೊಟ್ಟುಕೊಂಡಿರುವುದರಿಂದ ಹೃದಯಾಕಾಶವೆಂದು ಪ್ರಾಜ್ಞರಿಂದ ಹೇಳಿಸಿಕೊಳ್ಳಲ್ಪಡುವದು. (ಇದು ಮಹಾಲಿಂಗಕ್ಕಾಶ್ರಯವು)

## ವಿಚಾರ

ಆತ್ಮನು ಜ್ಞಾನ ಕರ್ಮಾತ್ಮಕವಾದ ಇಂದ್ರಿಯ ವ್ಯಾಪಾರವೆಲ್ಲವನ್ನೂ ಹೃದಯವೆಂಬ ಅಂತರಿಂದ್ರಿಯ ದ್ವಾರದಿಂದಲೇ ಕಂಡುಕೊಳ್ಳುವನಾದ್ದರಿಂದ ಹೃದಯವು ಜ್ಞಾನ ಕರ್ಮಾತ್ಮಕವಾಗಿರುವುದೆಂದು ಹೇಳಲ್ಪಟ್ಟಿದೆ.

## ಶರೀರತ್ರಯದ ಇಂದ್ರಿಯಂಗಳು.

ಸೂ. ೧೯. ೨೦ ಇಂದ್ರಿಯ ವರ್ಗವೆಲ್ಲವೂ ಸ್ಥೂಲಾಂಗದಲ್ಲಿ ಸ್ಥೂಲ ರೂಪದಿಂದಲೂ ಸೂಕ್ಷ್ಮಾಂಗದಲ್ಲಿ ಸೂಕ್ಷ್ಮರೂಪದಿಂದಲೂ ಕಾರಣಾಂಗ ದಲ್ಲಿ ಕಾರಣ ರೂಪದಿಂದಲೂ ಇರುವವು. ಈ ತ್ರಿವಿಧ ರೂಪಗಳಾದ ಇಂದ್ರಿಯಗಳಲ್ಲಿಯೂ ಸತ್ಯಾದಿ ಲಕ್ಷಣ ಲಕ್ಷಿತವಾದ ಗುರೂಪದೇಶ ಸಂಸಿದ್ಧಲಿಂಗವು ಸರ್ವತೋ ಮುಖವಾಗಿ ಶೋಭಿಸುತ್ತಿರುವದು.

## ಲಿಂಗಮುಖ.

ಸೂ. ೨೦. ಸೂಕ್ಷ್ಮದರ್ಶಿಗಳಾದ ವೀರಶೈವರಿಂದ ಎಲ್ಲಿ ಯಾವುದು ಲಿಂಗಮುಖವಾಗಿ ಕಾಣಲ್ಪಡುವುದೋ, ಮತ್ತು ವೇದವು ಯಾವುದನ್ನು ಲಿಂಗ ವ್ರತನಿಯಮಗಳ ಸಾಧನವೆಂದು ಪ್ರತಿಪಾದಿಸುತ್ತಿರುವುದೋ, ಅಂತಹ ಲಿಂಗ ಮುಖವೇ ಇದು. (ಕೆಳಗೆ ಹೇಳಲ್ಪಡುವುದು.)

ಸೂ. ೨೧ ರಿಂದ ೨೭. ಹೃದಯಕ್ಕೆ (ಹೃದಯದಲ್ಲಿದ್ದು ಹೃದಯ ಸ್ವರೂಪವಾದ ಮಹಾಲಿಂಗಕ್ಕೆ) ಹೃದಯವೇ ಮುಖವು. ಇದರಂತೆಯೇ ಶ್ರೋತ್ರಕ್ಕೆ (ಶ್ರೋತ್ರದಲ್ಲಿದ್ದು ಶ್ರೋತ ರೂಪವಾದ ಪ್ರಸಾದ ಲಿಂಗಕ್ಕೆ) ಶ್ರೋತ್ರವೂ, ವಾಕ್ಕಿಗೆ (ವಾಕ್ಕಿನಲ್ಲಿದ್ದು ವಾಗ್ರೂಪವಾದ ಪ್ರಸಾದ ಲಿಂಗಕ್ಕೆ) ವಾಕ್ಕೂ, ತ್ವಕ್ಕಿಗೆ (ಚರಲಿಂಗಕ್ಕೆ) ತ್ವಕ್ಕೂ, ಪಾಣಿಗೆ (ಚರಲಿಂಗಕ್ಕೆ) ಪಾಣಿಯೂ, ನೇತ್ರಕ್ಕೆ (ಶಿವಲಿಂಗಕ್ಕೆ) ನೇತ್ರವೂ, ಪಾದಕ್ಕೆ (ಶಿವಲಿಂಗಕ್ಕೆ) ಪಾದವೂ, ಜಿಹ್ವೆಗೆ (ಗುರುಲಿಂಗಕ್ಕೆ) ಜಿಹ್ವೆಯೂ, ಗುಹ್ಯೆಗೆ (ಗುರುಲಿಂಗಕ್ಕೆ) ಗುಹ್ಯೆಯೂ, ನಾಸಿಕಕ್ಕೆ (ಆಚಾರಲಿಂಗಕ್ಕೆ) ನಾಸಿಕವೂ, ಪಾಯುವಿಗೆ (ಆಚಾರಲಿಂಗಕ್ಕೆ) ಪಾಯುವೂ ಮುಖಗಳಾಗಿರುವವು. ಅಂದರೆ-- ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಚರಲಿಂಗ, ಪ್ರಸಾದಲಿಂಗಗಳಿಗೆ ಕ್ರಮವಾಗಿ ಆಯಾ ಲಿಂಗಸ್ಥಾನಗಳೂ ಲಿಂಗಸ್ವರೂಪಗಳೂ ಆದ ನಾಸಿಕಾ, ಜಿಹ್ವೆ, ನೇತ್ರ, ತ್ವಕ್, ಶ್ರೋತ್ರವೆಂಬ ಜ್ಞಾನೇಂದ್ರಿಯಗಳು, ಮತ್ತು ಗುದ, ಗುಹ್ಯ, ಪಾದ, ಪಾಣಿ, ವಾಕ್ಕುಗಳೆಂಬ ಕರ್ಮೇಂದ್ರಿಯಗಳು ಲಿಂಗಮುಖಗಳಾಗಿರುವವು. ಇನ್ನು ಮಹಾಲಿಂಗಕ್ಕೆ ಜ್ಞಾನ ಕರ್ಮಾಶ್ರಯವಾದ ಹೃದಯವೆಂಬ ಅಂತರಿಂದ್ರಿಯವು ಮುಖವಾಗಿರುವದು.